ವಿನ್ಸೆಂಟ್ ವಾನ್‌ಗೋ ಜೀವನಾಧಾರಿತ ಕಾದಂಬರಿ

# ಸೂರ್ಯಕಾಂತಿಗಳ ಮಡಿಲಲ್ಲಿ

ಡಾ. ವಿಜಯಾ ಸುಬ್ಬರಾಜ್

ಮೂಲ: *'Lust For Life'* by Irving Stone



ಕಣ್ವ ಪ್ರತಿಷ್ಠಾನ
ಬೆಂಗಳೂರು

# ಸೂರ್ಯಕಾಂತಿಗಳ ಮಡಿಲಲ್ಲಿ

(ವಿನ್ಸೆಂಟ್ ವಾನ್‌ಗೋ ಜೀವನಾಧಾರಿತ ಕಾದಂಬರಿ)

ಡಾ. ವಿಜಯಾ ಸುಬ್ಬರಾಜ್

ಮೂಲ : 'Lust For Life' by Irving Stone

ಕಣ್ವ ಪ್ರತಿಷ್ಠಾನ
ಬೆಂಗಳೂರು

**SOORYAKANTHIGALA MADILALLI**

(A Novel bused on Vincent Van Gogh's Life)

Translated by
**Dr. Vijaya Subbaraj**
# 51, Hamsi, 1-A Cross
35th Main, Banagirinagara
Banashankari 3rd Stage
Bangalore - 560085
Phone : 080-26793219

Published by:
**Kanva Pratistana**
No. 23/A, I st Floor,
10th cross, I st, 'N' Block,
Rajajinagar
Bangalore - 560 010
Ph: 080- 23426778



First Impression : 2010
Price : Rs. 350/-
Pages : XXIV+528=552

Paper Used : **70 GSM Maplitho**
Book Size : **1/8 Demy**
Coverpage Design : **Sinchana Graphics**

Printed At
**Akshara Printers**
Bangalore

# ಮುನ್ನುಡಿ

ಹೆಸರಾಂತ ಲೇಖಕಿ ಡಾ.ವಿಜಯಾ ಸುಬ್ಬರಾಜ್ ಅವರು ತಾವು ಅನುವಾದಿಸಿದ 'ಸೂರ್ಯಕಾಂತಿಗಳ ಮಡಿಲಲ್ಲಿ' ಕಾದಂಬರಿಗೆ ನಾನೇ ಮುನ್ನುಡಿ ಬರೆಯಬೇಕೆಂದು ತುಂಬು ವಿಶ್ವಾಸದಿಂದ ಒತ್ತಾಯಿಸಿದರು. ನಾನು ಬೇರೆ ಕೆಲಸದಲ್ಲಿ ನಿರತನಾಗಿದ್ದರಿಂದ ಸ್ವಲ್ಪ ತಡವಾಗಬಹುದೆಂದು ಹೇಳಿದರೂ ಕೇಳಲಿಲ್ಲ. ನೀವೇ ಬರೆಯಬೇಕು ಅಂತ ಹಟ ಮಾಡಿದರು. ಅವರಿಗೆ ಯಾಕೆ ಹಾಗೆನ್ನಿಸಿತೊ ಪೂರ್ಣವಾಗಿ ಗೊತ್ತಿಲ್ಲ. ಅವರೇ ವಿವರಿಸಿದಂತೆ – 'ಇದು ಕಲಾವಿದನೊಬ್ಬನ ತಲ್ಲಣಗಳ ಕತೆ. ಅದನ್ನು ಅರ್ಥಮಾಡಿಕೊಳ್ಳಲು ನಿಮಗೆ ಸಾಧ್ಯ. ನಿಮ್ಮಿಂದಲೇ ಮುನ್ನುಡಿ ಬೇಕು.'

ಹಾಗೆ ನೋಡಿದರೆ ವಿಜಯಾ ಸುಬ್ಬರಾಜ್ ಅವರ ಪುಸ್ತಕಕ್ಕೆ ಮುನ್ನುಡಿಯ ಅಗತ್ಯವಿಲ್ಲ. ಮುನ್ನುಡಿಯನ್ನು 'ಹಾರೈಕೆಯ ಆಚರಣೆ' ಎಂದು ನಾನು ಭಾವಿಸಿಲ್ಲವಾದ್ದರಿಂದ, ನನ್ನ ಬರಹದಿಂದ ಓದುಗರ ಪುಸ್ತಕ ಪ್ರವೇಶಕ್ಕೆ ಒಂದಷ್ಟು ಸಹಕಾರಿಯಾಗುವುದಾದರೆ, ಅದೇ ನನಗೆ ಸಂತೋಷ. ಜೊತೆಗೆ, ನಾನು ಎಂ.ಎ. ಓದುವಾಗಿನಿಂದ ಬಲ್ಲ ವಿಜಯಾ ಸುಬ್ಬರಾಜ್ ಅವರ ಒತ್ತಾಯವೂ ಒಂದು ಹೆಮ್ಮೆ ಎಂದು ಒಳಗೊಳಗೇ ಭಾಸವಾಗಿದ್ದರೆ ತಪ್ಪೇನಿಲ್ಲ. ಇದು ನನಗೆ ನಾನೇ ಹೇಳಿಕೊಳ್ಳುವ ಮಾತು. ಬರಹಗಾರರಾಗಲಿ, ಕಲಾವಿದರಾಗಲಿ, ಮೊದಲು ನಮಗೆ ನಾವು ಹೇಳಿಕೊಳ್ಳಬೇಕು ತಾನೆ? ನಮಗೆ ನಾವೇ ಹೇಳಿಕೊಳ್ಳುತ್ತ, ಹೇಳಬೇಕಾದ ಮಾತುಗಳೊಂದಿಗೆ ಮಾತಾಡುತ್ತ, ಅದಕ್ಕೊಂದು ಆಕೃತಿ ಕೊಡುತ್ತ ಅಕ್ಷರಗಳಲ್ಲಿ ಅನಾವರಣ ಮಾಡುವುದು, ಕೃತಿಯಾಗಿಸುವುದು – ಬರಹಗಾರನ ನಿಜ ಸವಾಲು ಎಂದು ನಾನು ತಿಳಿದಿದ್ದೇನೆ. ಈ ಸೃಜನಶೀಲ ಪ್ರಕ್ರಿಯೆಯ ಸವಾಲನ್ನು ಎದುರಿಸಿ, ಸಂವಾದಿಸಿ, ಸ್ನೇಹ ಬೆಳೆಸಿ, ಹದಕ್ಕೆ ತರುವ ಮುದವನ್ನು ಅನುಭವಿಸಬೇಕು; ಆನಂತರ ಅಭಿವ್ಯಕ್ತಿಸಬೇಕು. ಆಗ ಮಾತ್ರವೇ 'ಮಠ'ವಾಗದ ಮನಸ್ಸು ನಮ್ಮದಾಗುತ್ತದೆ. 'ಜಗದ್ಗುರು'ವಾಗದ ಜೀವ ಚೈತನ್ಯ ಚಿಮ್ಮುತ್ತದೆ; ಮನುಷ್ಯ ಸಹಜವಾಗಿ ಮಾತಾಡುವ ಕೃತಿ ಹುಟ್ಟುತ್ತದೆ. ಇದು ಅಕ್ಷರಸ್ಥ ಕೃತಿಗಷ್ಟೇ ಅಲ್ಲದೆ, ಎಲ್ಲಾ ಕಲಾಕೃತಿಗಳಿಗೂ ಅನ್ವಯಿಸುವ ಪ್ರಸವ ಪ್ರಕ್ರಿಯೆಯೆಂದೂ ತಿಳಿಯಬಹುದಾಗಿದೆ. ಈ ಮಾತು ಪ್ರಸ್ತುತ 'ಸೂರ್ಯಕಾಂತಿಗಳ ಮಡಿಲಲ್ಲಿ' ಕೃತಿಗೂ ಅನ್ವಯಿಸುತ್ತದೆ.

ಡಾ.ವಿಜಯಾ ಸುಬ್ಬರಾಜ್ ಅವರು ಅನುವಾದಿಸಿರುವ 'ಸೂರ್ಯಕಾಂತಿಗಳ ಮಡಿಲಲ್ಲಿ' ಕೃತಿಯ ಮೂಲ–ಇರ್ವಿಂಗ್ ಸ್ಟೋನ್ ಬರೆದ 'ಲಸ್ಟ್ ಫಾರ್ ಲೈಫ್' ಕಾದಂಬರಿ. 'ಜಗದ್ವಿಖ್ಯಾತ ವರ್ಣಚಿತ್ರ ಕಲಾವಿದ' ವಿನ್ಸೆಂಟ್ ವಾನ್‌ಗೋ ಜೀವನವನ್ನು ಆಧರಿಸಿ ಬರೆದ ಕಾದಂಬರಿಯಿದು.

ನಮ್ಮೊಡನೆ ಬದುಕಿಲ್ಲದ ವ್ಯಕ್ತಿಗಳೆಲ್ಲ ಗತ ಚರಿತ್ರೆಗೆ ಸಂದವರೇ ಆಗಿರುತ್ತಾರೆ. ಅಲ್ಲದೆ, ನಮ್ಮ ಜೊತೆಯಲ್ಲೇ ಚರಿತ್ರೆಯೊಂದು ಚಲಿಸುತ್ತಿರುತ್ತದೆ; ರೂಪಧಾರಣೆ ಮಾಡುತ್ತ, ಟಿಸಿಲೊಡೆಯುತ್ತ, ಒಂದಾಗುತ್ತ, ಒಡೆಯುತ್ತ, 'ಭವಿಷ್ಯ'ದ ಹುಡುಕಾಟದ 'ವರ್ತಮಾನ'ವಾಗುತ್ತ ಮುಂದೊಂದು ದಿನ 'ಭೂತ'ವೂ ಆಗುತ್ತದೆ. ಹೀಗಾಗಿ ಚರಿತ್ರೆಯೆನ್ನುವುದು – ವಿಶಾಲಾರ್ಥದಲ್ಲಿ – ಸದಾ ಜೀವಂತವಾದ ಪ್ರಕ್ರಿಯೆ. ಆದರೆ ಆಗಿ ಹೋದ ಚರಿತ್ರೆ, ಆಗುತ್ತಿರುವ ಚರಿತ್ರೆ, ಆಗಬೇಕೆಂದು ಬಯಸುವ ಚರಿತ್ರೆ ಒಂದೇ ರೂಪದ್ದೆಂದು ಹೇಳಲಾಗದು. ಮೂರು ಹಂತಗಳಲ್ಲಿ ಮೊದಲ ಎರಡು ಹಂತಗಳು ಗತಚರಿತ್ರೆ ಹಾಗೂ ಸಮಕಾಲೀನ ಚರಿತ್ರೆಯಾದರೆ, ಮೂರನೆಯದು ಅಂದರೆ ಆಗಬಯಸುವುದು 'ಭವಿಷ್ಯ'ವಾಗಿರುತ್ತದೆ. ಮೊದಲನೆಯದು ನಿರ್ದಿಷ್ಟ ಹಂತ ಪಡೆದಿದ್ದರೆ, ಎರಡನೆಯದು ಹಂತ ಪಡೆಯುವ ಅಥವಾ ತಲುಪುವ ಪ್ರಕ್ರಿಯೆಯಾಗಿರುತ್ತದೆ. ಇದು ಒಟ್ಟು ಚರಿತ್ರೆಯ ಮಾತು. ವಿನ್ಸೆಂಟ್ ವಾನ್‌ಗೋ ಬಗ್ಗೆ ಬರೆದ ಕಾದಂಬರಿಯು ಆತನ ಜೀವನ ಚರಿತ್ರೆಯಾಧಾರಿತ ಕೃತಿಯಾದ್ದರಿಂದ ಒಟ್ಟು ಚರಿತ್ರೆಯ ಬದಲು ವ್ಯಕ್ತಿ ಚರಿತ್ರೆಯನ್ನು ಕೇಂದ್ರವಾಗಿಟ್ಟುಕೊಳ್ಳುವುದು ಸಹಜ. ಆದರೆ ಉತ್ತಮ ಜೀವನ ಚರಿತ್ರೆಯು ವ್ಯಕ್ತಿ ಬದುಕಿನ ಸರಳ ರೇಖಾತ್ಮಕ ನಿರೂಪಣೆ ಮಾತ್ರವೇ ಆಗಿರುವುದಿಲ್ಲ. ನಿರ್ದಿಷ್ಟ ವ್ಯಕ್ತಿಯು ಬದುಕಿದ್ದ ಸಮಾಜದ ಚರಿತ್ರೆಯನ್ನೂ ಗಮನಿಸುತ್ತ ವ್ಯಕ್ತಿ ವಿಕಾಸವನ್ನು ಗುರುತಿಸುತ್ತದೆ. ಯಾಕೆಂದರೆ ವ್ಯಕ್ತಿಯೊಬ್ಬ ಒಂಟಿಯಾಗಿ ರೂಪುಗೊಳ್ಳುವುದಿಲ್ಲ; ಹೆಚ್ಚೆಂದರೆ, ರೂಪುಗೊಳ್ಳುವಾಗ ಒಂಟಿತನ ಅನುಭವಿಸಬಹುದು. ಈ ಒಂಟಿತನಕ್ಕೂ ಸಮಕಾಲೀನ ಸಮಾಜದ ಚಾರಿತ್ರಿಕ ಒತ್ತಡಗಳಿರಬಹುದು; ವ್ಯಕ್ತಿಗೇ ವಿಶಿಷ್ಟವಾದ ವೈಯಕ್ತಿಕ ಸ್ವಭಾವದ ಕಾರಣವೂ ಇರಬಹುದು. ವಿನ್ಸೆಂಟ್ ವಾನ್‌ಗೋವಿನ ಜೀವನ ಚರಿತ್ರೆಯನ್ನು ಗಮನಿಸಿದರೆ ಆತನ ಸ್ವಭಾವವನ್ನು ರೂಪಿಸಿದ ಒತ್ತಡಗಳಲ್ಲಿ ವೈಯಕ್ತಿಕ ಮತ್ತು ಸಾಮಾಜಿಕ ಚರಿತ್ರೆಗಳೆರಡರ ಪಾತ್ರವೂ ಇದ್ದಂತೆ ಕಾಣಿಸುತ್ತದೆ. ವ್ಯಕ್ತಿಯ ಜೀವನ ಚರಿತ್ರೆಯನ್ನಾಧರಿಸಿ ಸೃಜನ ಶೀಲ ಕೃತಿಯನ್ನು ರಚಿಸುವುದು ಸುಲಭದ ಸಂಗತಿಯಲ್ಲ. ವ್ಯಕ್ತಿಯ ಬದುಕಿನ ವಿವರಗಳ ಅಧ್ಯಯನ, ಆಯ್ಕೆ ಮತ್ತು ಕೃತಿಕಾರನ ಸ್ವಾತಂತ್ರ್ಯಗಳ ಸೂಕ್ಷ್ಮ ಬಿಕ್ಕಟ್ಟು ತನಗೆ ತಾನೇ ಅಂತರ್ಗತವಾಗುತ್ತದೆ. ಸೃಜನಶೀಲ ಸ್ವಾತಂತ್ರ್ಯದ ಸತ್ಯ ಮತ್ತು ಸತ್ವಗಳನ್ನು ಬಿಟ್ಟುಕೊಡದೆ, ಬರೆಸಿಕೊಳ್ಳುತ್ತಿರುವ ವ್ಯಕ್ತಿ ಚರಿತ್ರೆಗೂ ಅನ್ಯಾಯವಾಗದೆ ಸೃಜನಶೀಲ ಕೃತಿಯೊಂದು ಸೃಷ್ಟಿಯಾಗಬೇಕಾಗುತ್ತದೆ. ಅದರಲ್ಲೂ ಪ್ರಸಿದ್ಧ ವ್ಯಕ್ತಿಯಾಗಿ ಒಟ್ಟು ಸಮುದಾಯದಲ್ಲಿ ಅಥವಾ ನಿರ್ದಿಷ್ಟ ಸಮುದಾಯದಲ್ಲಿ ಗೌರವಾರ್ಹರಾಗಿದ್ದರೆ, ಅಂಥವರನ್ನು ಕುರಿತು ಬರೆಯುವ ಸೃಜನಶೀಲ ಕೃತಿಗಳ ರಚನೆಯು ತಂತಿಮೇಲಿನ ನಡಿಗೆಯಾಗುವುದೂ ಉಂಟು.

ಊಹಾತ್ಮಕ ಸಾರ್ವತ್ರಿಕ ಸತ್ಯದ ಮಾತು ಒತ್ತಟ್ಟಿಗಿರಲಿ, ತಾನು ಕಂಡ ಸತ್ಯವನ್ನು ಅಂತರ್‌ವಾಹಿನಿಯಾಗಿಸುವುದಕ್ಕೂ ಹತ್ತಾರು ಬಾರಿ ಯೋಚಿಸಬೇಕಾಗಬಹುದು. ನಾವು ಬದುಕುತ್ತಿರುವ ಸಮಾಜದಲ್ಲಂತೂ ಇಂತಹ ಸಂಕಷ್ಟಗಳನ್ನು ದಾಟಿಯೇ ಸೃಷ್ಟಿಕ್ರಿಯೆ ನಡೆಯಬೇಕಾಗುತ್ತದೆ. ನಾಯಕ-ಖಳನಾಯಕ ನೆಲೆಯಲ್ಲಿ ಜೀವನ ಚರಿತ್ರೆಯನ್ನು ಗ್ರಹಿಸುವ ಇತಿಮಿತಿಗಳನ್ನು ಮೀರಿದ ಸಾಮಾಜಿಕ-ಸಾಂಸ್ಕೃತಿಕ ಒಳನೋಟಗಳಿಂದ ವ್ಯಕ್ತಿಚರಿತ್ರೆಯಾಧಾರಿತ ಸೃಜನಶೀಲ ಕೃತಿಯೊಂದು ಮೈದಾಳಬೇಕಾಗುತ್ತದೆ. ಹಾಗೆ ನೋಡಿದರೆ, ಕನ್ನಡ ಸಾಹಿತ್ಯದಲ್ಲಿ ಜೀವನಚರಿತ್ರೆಯಾಧಾರಿತ ಸೃಜನಶೀಲ ಕೃತಿ ರಚನೆಗೂ ಒಂದು ಇತಿಹಾಸವಿದೆ-ಹನ್ನೆರಡನೇ ಶತಮಾನದಲ್ಲಿ ಆಗಿಹೋದ ಬಸವಣ್ಣನವರನ್ನು ಕುರಿತು ಹದಿಮೂರನೇ ಶತಮಾನದಲ್ಲಿ ಹರಿಹರ ಕವಿ ಬರೆದ 'ಬಸವರಾಜ ದೇವರ ರಗಳೆ' ಇಲ್ಲಿ ಉಲ್ಲೇಖನೀಯ. ಯಾಕೆಂದರೆ ಹತ್ತೊಂಬತ್ತನೇ ಶತಮಾನದಲ್ಲಿ ಆಗಿ ಹೋದ ವಿನ್ಸೆಂಟ್ ವಾನ್‌ಗೋ ಕುರಿತಂತೆ ಇಪ್ಪತ್ತನೇ ಶತಮಾನದಲ್ಲಿ ಇರ್ವಿಂಗ್ ಸ್ಟೋನ್ ಬರೆದಂತೆ ಅಂದು ಹರಿಹರ ಕವಿಯು ಅತ್ಯಂತ ಸಮೀಪ ಕಾಲದ ಪ್ರಸಿದ್ಧ ಚೇತನವೊಂದರ ವ್ಯಕ್ತಿಚರಿತ್ರೆಗೆ ಸೃಜನಶೀಲ ಆಕೃತಿ ಕೊಟ್ಟಿದ್ದ. ಈ ಮೂಲಕ ಜೀವನ ಚರಿತ್ರೆಯಾಧಾರಿತ ಸೃಜನಶೀಲ ಕೃತಿಯ ಸಮಸ್ಯೆಗಳಿಗೆ 'ಆಕರ' ಒದಗಿಸಿದ್ದ. ಬಸವಣ್ಣನವರು ನಾಯಕರಾಗಿರುವ 'ಬಸವರಾಜ ದೇವರ ರಗಳೆ'ಯಲ್ಲಿ ಬಿಜ್ಜಳರಾಜನು ಪ್ರತಿನಾಯಕನ ಸ್ಥಾನದಲ್ಲಿದ್ದ. ಪ್ರತಿನಾಯಕ ಸಾಕಷ್ಟು ಸಾರಿ ಅಸಹಾಯಕನಾಗಿ ಕಾಣಿಸಿಕೊಳ್ಳುವ ಚಿತ್ರಣವನ್ನು ಈ ಕಾವ್ಯ ಒಳಗೊಂಡಿದೆ. ಬಿಜ್ಜಳನು ಜೈನನೆಂದೇ ನಂಬಲಾಗಿದ್ದು ಮುಂದೆ ಧರಣಿ ಪಂಡಿತನೆಂಬ ಜೈನಕವಿ 'ಬಿಜ್ಜಳರಾಯ ಚರಿತೆ' ಎಂಬ ಕಾವ್ಯವನ್ನು ಬರೆದ. ಇದರಲ್ಲಿ ಬಿಜ್ಜಳ ನಾಯಕ; ಬಸವಣ್ಣ ಅಸಹಾಯಕ ಪ್ರತಿನಾಯಕ. ಹಾಗಾದರೆ ಯಾವುದು ಸತ್ಯ? ಎಷ್ಟು ಸತ್ಯ? ಧರ್ಮಶ್ರದ್ಧೆ ಮತ್ತು ವ್ಯಕ್ತಿಶ್ರದ್ಧೆಗಳೊಂದಿಗೆ ಜೀವನಚರಿತೆಯಾಧಾರಿತ ಕೃತಿ ರಚನೆಗೆ ಸೂಕ್ತ ನ್ಯಾಯವನ್ನು ಧಾರೆಯೆರೆಯಲು ಬಿಟ್ಟವೆ? ಅಥವಾ ಬಿಕ್ಕಟ್ಟು ಸೃಷ್ಟಿಸಿದವೆ? ನನಗನ್ನಿಸಿದಂತೆ ಈ ಇಬ್ಬರು ಕವಿಗಳಿಗೂ ತಂತಮ್ಮ ಧರ್ಮನಿಷ್ಠೆಯ ಆದ್ಯತೆ ಅಂತರ್ಗತವಾಗಿದ್ದರಿಂದ ಬಿಕ್ಕಟ್ಟಿನ ಪರಿಹಾರ ಸರಳವೂ ಸುಲಭವೂ ಆಗಿರುವಂತಿದೆ. ಅವರಿಗೆ ತಮ್ಮ ನಾಯಕನ ಮತ್ತು ಧರ್ಮದ ಚರಿತ್ರೆ-ಚಾರಿತ್ರ್ಯ ಮುಖ್ಯವಾದ್ದರಿಂದ ಬಹುಶಃ ಬಿಕ್ಕಟ್ಟೇ ಇದ್ದಿಲ್ಲದಿರಬಹುದು. ಆದರೆ ಬಸವಣ್ಣನವರ ಅಂತ್ಯವನ್ನು ಚಿತ್ರಿಸುವಾಗ ಹರಿಹರಕವಿಯು ನಿಜಕ್ಕೂ ಬಿಕ್ಕಟ್ಟನ್ನು ಎದುರಿಸಿರುವಂತಿದೆ. ಕೆಲವು ಅನಿಸಿಕೆಗಳ ಪ್ರಕಾರ ಬಸವಣ್ಣನವರ ಸಾವು ಸ್ವಾಭಾವಿಕವಾದದ್ದಲ್ಲ ಎಂಬ ಅನುಮಾನವಿದೆ. ಅವರದು ಅಸ್ವಾಭಾವಿಕ ಸಾವಾಗಿದ್ದರೆ (ಹತ್ಯೆ ಅಥವಾ ಆತ್ಮಹತ್ಯೆ?) ಅದನ್ನು ಹೇಳುವುದು ಹೇಗೆ? ಹರಿಹರ ಕವಿಗೆ ಧಾರ್ಮಿಕ ಪರಿಭಾಷೆಯು ನೆರವಿಗೆ ಬಂದಿದೆ. ಕೂಡಲ ಸಂಗಮದಲ್ಲಿ 'ಐಕ್ಯರಾದರು' ಎಂದು ಅಭಿವ್ಯಕ್ತಿಸಿದರೆ ಮುಗಿಯಿತಲ್ಲ! ಆದರೆ ಬಸವಣ್ಣನವರ ಕೊನೆಯ ದಿನಗಳ ಕಥಾಭಾಗ ಆತುರಾತುರದಲ್ಲಿ ನಿರೂಪಣೆಗೊಂಡು ಗಕ್ಕನೆ ಮುಕ್ತಾಯವಾಗಿರುವುದು ಸ್ಪಷ್ಟವಾಗುತ್ತದೆ. ಸತ್ಯ ಏನೆಂದು ದಾಖಲಿಸಲಾಗದ ಕಟುವಾಸ್ತವಗಳ ಎದುರು ಸೃಜನಶೀಲ ಕವಿಯು ಎದುರಿಸಿದ

ಬಿಕ್ಕಟ್ಟೇ ಒಂದು 'ಸತ್ಯಸ್ಥಿತಿ'ಯಾಗುವ ಸನ್ನಿವೇಶವನ್ನು ಇಲ್ಲಿ ಕಾಣಬಹುದು. ಸತ್ಯಕ್ಕೆ ಒದಗಿದ 'ಸತ್ಯಸ್ಥಿತಿ'ಯ ಸ್ವರೂಪವನ್ನು ಗಮನಿಸಲು ಇದೊಂದು ಒಳ್ಳೆಯ ಉದಾಹರಣೆ. ಹರಿಹರ ಕವಿಯ 'ಬಸವರಾಜ ದೇವರ ರಗಳೆ'ಗೆ ಸಿಕ್ಕಿದ ಮಾನ್ಯತೆ ಮತ್ತು ವಿಮರ್ಶೆಯ ಭಾಗ್ಯವು ಧರಣಿ ಪಂಡಿತನ 'ಬಿಜ್ಜಳರಾಯ ಚರಿತೆ'ಗೆ ಸಿಗಲಿಲ್ಲವೆಂಬುದು ನಮ್ಮ ಸಂದರ್ಭದ ವಿವಿಧ ಒತ್ತಡಗಳಿಗೆ ಒಂದು ಉದಾಹರಣೆ. 'ಬಿಜ್ಜಳರಾಯ ಚರಿತೆ'ಯು 'ಬಸವರಾಜ ದೇವರ ರಗಳೆ'ಯಷ್ಟು ಸಾಹಿತ್ಯಕ ಮೌಲ್ಯವಿರುವ ಕೃತಿಯೊ ಅಲ್ಲವೊ ಎನ್ನುವುದು ವಿಮರ್ಶೆಯ ವಿಷಯ. ಆದರೆ ಇಲ್ಲಿ ಸಾಹಿತ್ಯಕ ಮೌಲ್ಯವನ್ನು ಮೀರಿದ ಸಾಮಾಜಿಕ ಒತ್ತಡಗಳಿದ್ದುದನ್ನು ಗಮನಿಸಬೇಕು. ಹೀಗಾಗಿ ಕೃತಿಯ ನಾಯಕ-ಪ್ರತಿನಾಯಕರು ಯಾರು ಎಂಬ ಅಂಶವು ಪ್ರಧಾನ ಪಾತ್ರವಹಿಸಿದಂತೆ ಕಾಣುತ್ತದೆ. ಜೊತೆಗೆ ಪೂರ್ವಾಗ್ರಹದ ಪಾತ್ರ ಕುರಿತ ಪ್ರಶ್ನೆಯೂ ಎದುರಾಗುತ್ತದೆ. ಅಂದರೆ ನನ್ನ ಅಭಿಪ್ರಾಯದಲ್ಲಿ ಚಾರಿತ್ರಿಕ ವ್ಯಕ್ತಿಗಳನ್ನು ಕುರಿತ ಸೃಜನಶೀಲ ಕೃತಿಯು ಪೂರ್ವಾಗ್ರಹ ರಹಿತ ಗ್ರಹಿಕೆಗಳಿಂದ ರೂಪಿತವಾಗಬೇಕು. ಓದುವ ಸಾಮಾಜಿಕ ಸಮುದಾಯಗಳೂ ಪೂರ್ವಾಗ್ರಹ ಮುಕ್ತವಾಗಿರಬೇಕು. ಇದು ಅತಿ ಆದರ್ಶದ ನಿರೀಕ್ಷೆಯಿರಬಹುದಾದರೂ ಇಂತಹ ಸನ್ನಿವೇಶಕ್ಕಾಗಿ ಸಾಂಸ್ಕೃತಿಕ ಹಾಗೂ ಸಾಮಾಜಿಕ ವಲಯ ತೀವ್ರವಾಗಿ ತುಡಿಯಬೇಕು. ಆದರ್ಶವು ವಾಸ್ತವದ, ಉಸಿರಾಗಬೇಕು.

ಆಧುನಿಕ ಸಾಹಿತ್ಯದಲ್ಲೂ ವ್ಯಕ್ತಿಜೀವನಾಧಾರಿತ ಕೃತಿಗಳು ಬಂದಿವೆ. ಅ.ನ.ಕೃಷ್ಣರಾಯರ 'ನಟ ಸಾರ್ವಭೌಮ' ಮತ್ತು ಯು.ಆರ್.ಅನಂತಮೂರ್ತಿಯವರ 'ಅವಸ್ಥೆ' ಕಾದಂಬರಿಗಳನ್ನು ಸಾಂಕೇತಿಕವಾಗಿ ನೆನೆಯಬಹುದು. ರಂಗಭೂಮಿಯ ಮಹಾನ್ ಕಲಾವಿದ ವರದಾಚಾರ್ ಅವರ ಜೀವನದಿಂದ ಪ್ರೇರಿತವಾದ ಕೃತಿ 'ನಟಸಾರ್ವಭೌಮ' ಕಾದಂಬರಿಯನ್ನು ಗುರುತಿಸಲಾಗಿದೆ. ಮಹಾನ್ ಸಮಾಜವಾದಿ ನಾಯಕ ಗೋಪಾಲಗೌಡರ ಬದುಕನ್ನು ಆಧರಿಸಿ 'ಅವಸ್ಥೆ' ಕಾದಂಬರಿಯನ್ನು ಬರೆಯಲಾಗಿದೆಯೆಂದು ಹೇಳಲಾಗಿದೆ. 'ನಟಸಾರ್ವಭೌಮ' ಕಾದಂಬರಿಯು ಕಲಾವಿದರೊಬ್ಬರ ಜೀವನ ಗಾಥೆಯ ಜೊತೆಗೆ ರಂಗಭೂಮಿಯ ಒಳಗನ್ನು ಒಳಗೊಂಡು ರಚಿತವಾದ ಒಂದು ಮುಖ್ಯ ಕಾದಂಬರಿಯಾಗಿದೆ. ಭಾವುಕ ಹಾಗೂ ಲೈಂಗಿಕ ಸನ್ನಿವೇಶಗಳಿಗೆ ಸಿಕ್ಕಿದ ಪ್ರಾಮುಖ್ಯದಿಂದ ಕಾದಂಬರಿಯು 'ಜನಪ್ರಿಯ' ಹಂತವನ್ನು ದಾಟಿದ ಉತ್ತಮ ಹಾಗೂ ಗಂಭೀರ ಕಲಾಕೃತಿಯಾಗಲಿಲ್ಲವೆಂಬ ಆಕ್ಷೇಪವೂ ಇದೆ. ಯು.ಆರ್.ಅನಂತಮೂರ್ತಿಯವರ 'ಅವಸ್ಥೆ'ಯು ಕೃಷ್ಣಮಾಸಡಿಯವರ ನಿರ್ದೇಶನದಲ್ಲಿ ಚಲನಚಿತ್ರವಾದಾಗ ಸ್ವತಃ ಗೋಪಾಲಗೌಡರ ಪತ್ನಿ ನ್ಯಾಯಾಲಯದಲ್ಲಿ ಮಾನಹಾನಿ ಮೊಕದ್ದಮೆ ಹೂಡಿದ್ದರು. ಕಾದಂಬರಿಯಲ್ಲಿ ಗೋಪಾಲಗೌಡರ ವ್ಯಕ್ತಿತ್ವವನ್ನು ಅಪಾರ್ಥ ಬರುವಂತೆ ಚಿತ್ರಿಸಲಾಗಿದೆಯೆಂಬುದು ಮುಖ್ಯ ಆಕ್ಷೇಪವಾಗಿತ್ತು. ಇಂತಹ ಉದಾಹರಣೆಗಳನ್ನು ಹೊರತು ಪಡಿಸಿದರೆ, ಹೆಚ್ಚು ವಿವಾದಕ್ಕೆ ಒಳಗಾದ ಕೃತಿಗಳು ಚಾರಿತ್ರಿಕ ವ್ಯಕ್ತಿಗಳಿಗೆ ಸಂಬಂಧಿಸಿದ್ದವು ಮತ್ತು ವೀರಶೈವ ಸಮುದಾಯದ ಒಂದು ವಲಯದ ವಿರೋಧಕ್ಕೆ ಒಳಗಾಗಿದ್ದವು ಎನ್ನುವುದು ವಿಶೇಷವಾಗಿ ಗಮನಿಸಬೇಕಾದ

ಸಂಗತಿ. ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಅವರ ಚನ್ನಬಸವನಾಯಕ, ಚಿಕ್ಕವೀರ ರಾಜೇಂದ್ರ ಕಾದಂಬರಿಗಳು, ಪಿ.ವಿ.ನಾರಾಯಣರ 'ಧರ್ಮಕಾರಣ' ಕಾದಂಬರಿ, ಎಚ್.ಎಸ್.ಶಿವಪ್ರಕಾಶರ 'ಮಹಾಚೈತ್ರ' ನಾಟಕ ಇವು ಒಂದಷ್ಟು ಉದಾಹರಣೆಗಳು (ವಿವಾದಕ್ಕೀಡಾದ ಬಂಜಗೆರೆ ಜಯಪ್ರಕಾಶ್ ಅವರ 'ಆನುದೇವಾ ಹೊರಗಣವನು' ಕೃತಿಯು ಬಸವಣ್ಣನವರ ಹುಟ್ಟಿನ ಜಾತಿ ಕುರಿತ ವೈಚಾರಿಕ ಕೃತಿ.).

ಅ.ನ.ಕೃಷ್ಣರಾಯರ ನಗ್ನಸತ್ಯ, ಶನಿಸಂತಾನ, ಸಂಜೆಗತ್ತಲು ಕಾದಂಬರಿಗಳು ಅವುಗಳಲ್ಲಿರುವ ಲೈಂಗಿಕ ಸಂಬಂಧದ ವಿವರಗಳ ಕಾರಣದಿಂದ ಒಂದು ವೈಚಾರಿಕ ವಿವಾದಕ್ಕೆ ಕಾರಣವಾದಂತೆ, ಅಂಥದೇ ಕೆಲವು ವಿವರಗಳಿದ್ದರೂ 'ನಟಸಾರ್ವಭೌಮ' ಕಾದಂಬರಿ ದೊಡ್ಡ ವಿವಾದವನ್ನು ಹುಟ್ಟು ಹಾಕಲಿಲ್ಲ. ಈ ಮಾತು ಹೇಳಲು ಕಾರಣವಿದೆ. 'ನಟಸಾರ್ವಭೌಮ'ವು ಪ್ರಸಿದ್ಧ ರಂಗಭೂಮಿ ಕಲಾವಿದರ ಜೀವನ ಪ್ರೇರಿತ ಕಾದಂಬರಿಯಾಗಿದ್ದರೆ, 'ಸೂರ್ಯಕಾಂತಿಗಳ ಮಡಿಲಲ್ಲಿ' (ಮೂಲ: ಲಸ್ಟ್ ಫಾರ್ ಲೈಫ್) ಕಾದಂಬರಿ, ಪ್ರಸಿದ್ಧ ಚಿತ್ರಕಲಾವಿದರ ಜೀವನಾಧಾರಿತ ಕಾದಂಬರಿಯಾಗಿದೆ. ಎರಡೂ ಕಾದಂಬರಿಗಳಲ್ಲಿ ಲೈಂಗಿಕ ಸಂಬಂಧದ ವಿವರಗಳಿವೆ. ನನಗೆ ತಿಳಿದಂತೆ 'ಲಸ್ಟ್ ಫಾರ್ ಲೈಫ್' ಕಾದಂಬರಿ ಸಹ ದೊಡ್ಡ ವಿವಾದಗಳಿಗೆ ಕಾರಣವಾಗಿಲ್ಲ ಎನ್ನಿಸುತ್ತದೆ. ಎರಡೂ ಕಾದಂಬರಿಗಳು ಹುಟ್ಟಿದ ಸಾಮಾಜಿಕ, ಸಾಂಸ್ಕೃತಿಕ ವಲಯಗಳೇ ಬೇರೆ. ನಿರೂಪಣಾ ಶೈಲಿಯೂ ಬೇರೆ; ಆದರೆ ಜೀವಂತವಿದ್ದ ಕಲಾವಿದರ ಜೀವಾನಾಧಾರಿತವಾಗಿ ರಚನೆಗೊಂಡದ್ದು, ಲೈಂಗಿಕ ಸಂಬಂಧಗಳ ನಿರೂಪಣೆಯಲ್ಲಿ ದಿಟ್ಟವಾಗಿದ್ದದ್ದು ಎರಡೂ ಕಾದಂಬರಿಗಳ ಸಾಮಾನ್ಯ ಅಂಶ. ದಿಟ್ಟವಾಗಿದ್ದದ್ದು ದಿಟವೂ ಆಗಿತ್ತೆ ಎನ್ನುವುದು ವಿಮರ್ಶೆಯ ವಿಷಯ. ವಾಚ್ಯವಾಗದೆ ರೂಪಕಾತ್ಮಕವಾದಾಗ ಇಂತಹ ಸಂಗತಿಗಳಿಗೆ ಬೇರೆ ಆಯಾಮ ಸಾಧ್ಯ.

ಈ ಎಲ್ಲ ಮಾತುಕತೆಯ ಮೂಲಕ ವಿನ್ಸೆಂಟ್ ವಾನ್‌ಗೋ ಜೀವನಾಧಾರಿತ 'ಸೂರ್ಯಕಾಂತಿಗಳ ಮಡಿಲಲ್ಲಿ' ಕಾದಂಬರಿಯನ್ನು 'ಕಂಡುಕೊಳ್ಳುವ' ಪ್ರಯತ್ನ ಮಾಡೋಣ. ವಿನ್ಸೆಂಟ್ ವಾನ್‌ಗೋ ಕುರಿತು ಲೇಖಕಿ, ಅನುವಾದಕಿ, ಡಾ.ವಿಜಯಾ ಸುಬ್ಬರಾಜ್ ಅವರು ಹೀಗೆ ಬರೆಯುತ್ತಾರೆ: 'ಜಗದ್ವಿಖ್ಯಾತ ವರ್ಣಚಿತ್ರ ಕಲಾವಿದರಲ್ಲಿಯೇ ಅತ್ಯಂತ ಮಹತ್ವದ ಹೆಸರು ವಿನ್ಸೆಂಟ್ ವಾನ್‌ಗೋ..... ಆರ್ಥಿಕ, ಸಾಮಾಜಿಕ, ಮಾನಸಿಕ ಒತ್ತಡಗಳ ಭಯಂಕರ ಪರಿಣಾಮಗಳ ಬೆಂಕಿಯಲ್ಲಿ ಬೇಯುತ್ತ, ಕ್ಷಣಕ್ಷಣವೂ ಅಸ್ತಿತ್ವಕ್ಕಾಗಿ ಪ್ರತಿಕೂಲ ಪರಿಸ್ಥಿತಿಗಳಿಗೆ ಎದುರಾಗಿ ಈಜುತ್ತಾ, ಸಂಘರ್ಷಗಳನ್ನೂ ಬದುಕಿನ ಭಾಗವಾಗಿ ಸ್ವೀಕರಿಸುತ್ತಾ, ತನ್ನ ಸುತ್ತಲಿನ ಸಮಾಜದಿಂದ ಅವಮಾನ, ಅವಹೇಳನ, ತಿರಸ್ಕಾರಗಳ ನಂಜಿನ ನಡುವೆಯೂ ಮಾನವೀಯತೆಯನ್ನು ಉಳಿಸಿಕೊಂಡವನು''..... ಜೊತೆಗೆ ಅನುವಾದಕಿಯೇ ಹೇಳುವಂತೆ 'ಮನೋವಿಕಾರ, ವಿಕ್ಷಿಪ್ತ ವ್ಯಕ್ತಿತ್ವಗಳ ಮಧ್ಯದಿಂದಲೇ ತನ್ನೊಳಗಿನ ಕಲಾವಿದನನ್ನು ಬಡಿದೆಬ್ಬಿಸಿ'ದವನು. ವಿನ್ಸೆಂಟ್ ವಾನ್‌ಗೋನ ವಿಕ್ಷಿಪ್ತ ಮನಸ್ಥಿತಿಯನ್ನೂ, ಸೋಲಿನ ಸುಳಿಗಳಲ್ಲಿ ಸಿಲುಕಿದ

ಸಂಕಟಗಳನ್ನೂ, ನಿರಂತರ ಪ್ರಯತ್ನಶೀಲತೆಯನ್ನೂ ಕಡೆದು ಕೊಡುವ ಈ ಕಾದಂಬರಿಯನ್ನು ಓದಿ ಮುಗಿಸಿದಾಗ ಅನುವಾದಕಿ ವಿಜಯಾ ಸುಬ್ಬರಾಜ್ ಅವರ ಗ್ರಹಿಕೆಗಳು ನಿಜ ಎನ್ನಿಸುತ್ತವೆ. ಕೇವಲ ಮೂವತ್ತೇಳು ವರ್ಷ ಬದುಕಿದ ವಾನ್‌ಗೋ ಪ್ರಸಿದ್ಧ ಕಲಾವಿದನೆಂದು ಗುರುತಿಸಲ್ಪಟ್ಟಿದ್ದು ಸಾವಿನ ನಂತರವೆಂಬ ಸತ್ಯ ಅತ್ಯಂತ ಸಂಕಟಕರವಾದುದು. ಆದರೇನು ಮಾಡುವುದು, ಅದು ಸತ್ಯ!

ಈ ಕಾದಂಬರಿಗೆ ಮೂರು ಪ್ರಮುಖ ಆಯಾಮಗಳಿವೆ. ಒಂದು – ವಿನ್ಸೆಂಟ್ ವಾನ್‌ಗೋನ ಜೀವನ ಚರಿತ್ರೆಯಾಧಾರಿತ ಕೃತಿಯಾಗಿ ರೂಪುಗೊಂಡಿರುವುದು. ಎರಡು– ಕಲಾವಿದನ ಜೀವನವನ್ನು ಕಲೆಯಾಗಿ ರೂಪಿಸುತ್ತಲೇ ಚಿತ್ರಕ್ಕೂ- ಮೀಮಾಂಸೆಯನ್ನು ಸಂದರ್ಭಾನುಸಾರ ಸಾದರಪಡಿಸುವುದು. ಮೂರು – ವಾನ್‌ಗೋ ಬದುಕಿದ್ದ ಕಾಲದ ಜನಜೀವನವನ್ನು ಚಿತ್ರಿಸುತ್ತಲೇ ಅದರ ನಡುವೆ ವಿನ್ಸೆಂಟ್ ವಾನ್‌ಗೋನನ್ನು ಕಾಣಿಸುವುದು. ವೈವಿಧ್ಯಮಯ ಆಯಾಮಗಳನ್ನು ಏಕೀಭವಿಸುವ ಜೀವಸತ್ವ ಮತ್ತು ಶಿಲ್ಪಸತ್ವದ ಕಾರಣಕ್ಕಾಗಿ ಈ ಕಾದಂಬರಿ ಮುಖ್ಯವಾಗುತ್ತದೆ.

ವಾನ್‌ಗೋನಲ್ಲಿ ವಿಕ್ಷಿಪ್ತ ಮನಸ್ಥಿತಿ ವಲಯವೊಂದು ಕೆಲಸ ಮಾಡುತ್ತಿದ್ದರೂ ಆತ ಆರೋಗ್ಯಕರ ಅಭಿಮತಗಳಿಂದ ದೂರವಾಗಿರಲಿಲ್ಲ. ವಿಕ್ಷಿಪ್ತತೆ ಅವನದು ಮಾತ್ರವಲ್ಲ, ಆತ ಬದುಕುತ್ತಿದ್ದ ಸಂದರ್ಭದ್ದೂ ಆಗಿತ್ತು; ತಾನು ಬದುಕುತ್ತಿದ್ದ ಪರಿಸರದ ಜೊತೆ ಸುಮಧುರ ಸಂಬಂಧ ಸಾಧ್ಯವಾಗದೆ ಒದ್ದಾಡುತ್ತ ವಿಕ್ಷಿಪ್ತನಾಗುತ್ತಿದ್ದ ವಾನ್‌ಗೋ ಮನಸ್ಸೇ ಒಂದು ಪ್ರಕ್ಷುಬ್ಧ ಪರಿಸರ. ಸಾಮಾಜಿಕ ವಿಕ್ಷಿಪ್ತ ಪರಿಸರದ ಫಲಿತವಾದ ಈ ಮಾನಸಿಕ ಪ್ರಕ್ಷುಬ್ಧ ಪರಿಸರವು ಕಾದಂಬರಿಯುದ್ದಕ್ಕೂ ಪರಕೀಯ ಪ್ರಜ್ಞೆಗೀಡಾದ ಕಲಾವಿದನ ಬದುಕನ್ನು ಕಾಣಬಹುದು. ಕಲಾವಿದನ ಈ ಪರಕೀಯತೆ ನಿಂತಲ್ಲಿ ನಿಲ್ಲದ ನಿರಂತರ ಪಯಣಕ್ಕೂ ಪ್ರೇರಣೆಯಾಗುತ್ತದೆ. ಲೈಂಗಿಕ ಸಂಬಂಧಗಳ ಕ್ಷಣಿಕ ಕಳವಳಗಳನ್ನೂ ಕಟ್ಟಿಕೊಡುತ್ತದೆ. ವಾನ್‌ಗೋನ ಸಂಬಂಧಕ್ಕೆ ಬಂದ ಹೆಣ್ಣುಗಳೆಲ್ಲ ವಿಭಿನ್ನ ಮನೋಧರ್ಮದಿಂದ ಕೂಡಿದ್ದು ಆತನ ಅಸಂತೃಪ್ತ ಪ್ರಕ್ಷುಬ್ಧ ಮನಸ್ಥಿತಿಗೂ ಒಂದು ಕಾರಣವಾಗುತ್ತದೆ. ಉರ್ಸುಲಾಳನ್ನು ಈತ ಪ್ರೀತಿಸಿದ್ದು ಏಕಮುಖ ಪ್ರೇಮವಾಗುತ್ತದೆ. ಆಕೆಯು ಇನ್ನೊಬ್ಬನನ್ನು ವಿವಾಹವಾಗಲು ತೀರ್ಮಾನಿಸಿರುತ್ತಾಳೆ. ಬಂಧುವಾದ ಕೇ ಳನ್ನು ಮದುವೆಯಾಗಲು ಇಚ್ಛಿಸಿದನಾದರೂ ಮೊದಲ ಗಂಡನಿಂದ ದೂರವಿದ್ದು ಮಗುವಿದ್ದ ಆಕೆಗದು ಇಷ್ಟವಾಗುವುದಿಲ್ಲ. ವೇಶ್ಯಾವೃತ್ತಿಯನ್ನು ಬಿಡಲಿಚ್ಛಿಸದೆ ಈತನೊಂದಿಗೆ ಲೈಂಗಿಕ ಸಂಬಂಧ ಬೆಳೆಸಿದ ಕ್ರಿಸ್ಟೀನ್ ಅಥವಾ ಸಿಯೆನ್‌ಳಿಂದ ಮೈಸಿಕ್ಕಿತು; ಮನಸ್ಸು ಸಿಕ್ಕಲಿಲ್ಲ. ಹದಿನೇಳು ವರ್ಷದ ಹುಡುಗಿ ಸ್ಜೀನ್‌ಳನ್ನು ಇಚ್ಛಿಸಿದನಾದರೂ ಶರೀರ ಸಂಬಂಧ ಬೆಳೆಸುವುದಕ್ಕೆ ಮುಂಚೆಯೇ ಆಕೆ ಗರ್ಭಿಣಿಯಾದ ಸುದ್ದಿ ಬಂತು. ಆಕೆಯ ಶರೀರ ಸಂಬಂಧ ಬೆಳಸದೆಯೇ ಆರೋಪ ಹೊತ್ತು ಆಗ ಇದ್ದ ಸ್ಥಳವನ್ನು ತ್ಯಜಿಸಬೇಕಾಗಿ ಬಂತು. ಹೀಗೆ ಈ ಎಲ್ಲ ಹೆಣ್ಣುಗಳ ಜೊತೆಗಿನ ಸಂಬಂಧದಲ್ಲಿ ವಾನ್‌ಗೋ ಹುಡುಕುತ್ತಿದ್ದುದು ಮೈಯ್ಯನ್ನು ಮಾತ್ರವಲ್ಲ; ಮುಖ್ಯವಾಗಿ ಮನಸ್ಸನ್ನು. ತನ್ನೊಳಗಿನ ಪ್ರಕ್ಷುಬ್ಧತೆಯನ್ನು, ಪರಕೀಯತೆಯನ್ನು, ನಿರಾಶೆಯನ್ನು

ಕಳೆಯುವ ಸಂಬಂಧವನ್ನು. ಆದರೆ ಕಾದಂಬರಿಯ ಕಡೆಯ ಭಾಗದಲ್ಲಿ ಸ್ತ್ರೀಸಂಬಂಧಗಳ ಸಾಕ್ಷಿಪ್ರಜ್ಞೆಯಂತೆ ಬರುವ 'ಮಾಯ' ಎಂಬ ಹೆಣ್ಣು ಮಾತ್ರ ವಿಶಿಷ್ಟಳಾಗಿರುತ್ತಾಳೆ. ತಾನು ಸದಾ ಈತನನ್ನು ಹಿಂಬಾಲಿಸುತ್ತಿರುವುದಾಗಿ ಹೇಳುತ್ತ ಮುರಿದು ಬಿದ್ದ ಸ್ತ್ರೀ ಸಂಬಂಧಗಳ ವಿವರಗಳನ್ನು ಕೊಡುತ್ತಾಳೆ. ನಿಜವಾದ ಪ್ರೇಮದಿಂದ ತನ್ನನ್ನು ಒಪ್ಪಿಸಿಕೊಳ್ಳುತ್ತಾಳೆ. ಈಕೆ ಉದ್ದಕ್ಕೂ ವಾನ್‌ಗೋನನ್ನು ಹಿಂಬಾಲಿಸುತ್ತಿರುವುದಾಗಿ ಹೇಳುವುದು, 'ಮಾಯ' ಎಂಬ ಹೆಸರನ್ನು ಹೊಂದಿರುವುದು, ಮನಃಪೂರ್ವಕವಾಗಿ ಒಂದಾಗುವುದು, ಈಕೆಯೇ ವಿನ್ಸೆಂಟ್ ವಾನ್‌ಗೋ ಜೀವನದ ಕೊನೆಯ ಹೆಣ್ಣಾಗುವುದು.– ಈ ಎಲ್ಲ ಅಂಶಗಳು ಸಾಂಕೇತಿಕವಾಗಿ ಮತ್ತು ಸಾಕ್ಷಿಪ್ರಜ್ಞೆಯಾಗಿ ಅರ್ಥಪೂರ್ಣವಾಗುತ್ತವೆ. ಈ ವೇಳೆಗೆ ವಾನ್‌ಗೋ ತನ್ನ ಕಲಾ ಜೀವನದಲ್ಲಿ ತೀವ್ರವಾಗಿ ತೊಡಗಿಸಿಕೊಂಡದ್ದು, ಮಾಯಾ ಸಂಬಂಧದಲ್ಲಿ ಸಂತೋಷಿಸಿದ್ದು – ಪರಸ್ಪರ ಸಂಬಂಧವುಳ್ಳ ಸಾಂಕೇತಿಕ ಸ್ವರೂಪವನ್ನೂ ಪಡೆಯುತ್ತದೆ. ಒಟ್ಟು ಕಾದಂಬರಿಯನ್ನು ಅವಲೋಕಿಸಿದಾಗ ಸ್ತ್ರೀ ಸಂಬಂಧಗಳು ಮತ್ತು ವಾನ್‌ಗೋ ಕಲಾಜೀವನದ ಏರಿಳಿತಗಳ ನಡುವೆ ನಿಕಟ ಸಂಬಂಧವಿದ್ದು ಇದು ವಾಚ್ಯವನ್ನು ಮೀರುವ ಸಾಧ್ಯತೆಯನ್ನು ಪಡೆದಿದೆ. ಒಬ್ಬೊಬ್ಬ ಹೆಣ್ಣಿನ ಜೊತೆ ಈತನ ಸಂಬಂಧ ಬೆಳೆದಾಗ, ಅದರಲ್ಲಿ ಕಾಮುಕತೆಗಿಂತ ತೀವ್ರ ತುಡಿತವೇ ಮುಖ್ಯವಾದಂತೆ ಕಾಣುತ್ತದೆ. ಜೊತೆಗೆ ಒಳಗಿನ ವಿಕ್ಷಿಪ್ತತೆ ಮತ್ತು ಪ್ರಕ್ಷುಬ್ಧತೆಗಳನ್ನು ತಣಿಸುವ ಸಂದರ್ಭವಾಗಿಯೂ ಲೈಂಗಿಕ ಸಂಬಂಧಗಳು ರೂಪುಗೊಂಡಿವೆ. ಬದುಕಿನಲ್ಲೂ ಪಯಣ; ಸ್ತ್ರೀ ಸಂಬಂಧದಲ್ಲೂ ಪಯಣ; ನಿಂತು ನೆಲೆಯೂರಬೇಕೆಂಬ ಅಭೀಪ್ಸೆ; ನಿಲ್ಲಲಾಗದ, ನಿಲ್ಲಲು ಬಿಡದ ಸಂದರ್ಭಗಳ ಒತ್ತಡ. ಒಟ್ಟಾರೆ ಬದುಕಿನಲ್ಲೂ ಅಲೆಮಾರಿ; ಸ್ತ್ರೀ ಸಂಬಂಧದಲ್ಲೂ ಅಲೆಮಾರಿ; ಒಂದು ಪರಿಸರವನ್ನು ಒಂದು ಕೆಲಸವನ್ನು ತೀವ್ರವಾಗಿ ಹಚ್ಚಿಕೊಂಡು ದುಡಿಯುವಾಗ, ಅಲ್ಲಿಂದ ಬೇಗ ಬಿಟ್ಟುಹೋಗುವಂಥ ಸನ್ನಿವೇಶಗಳ ಸಮಸ್ಯೆ–ಸವಾಲು. ಸ್ತ್ರೀ ಸಂಬಂಧಗಳ ಸ್ವರೂಪವೂ ಇದೇ ಮಾದರಿ. ತೀವ್ರವಾಗಿ ಹಚ್ಚಿಕೊಂಡರೂ ಸ್ಥಾಯಿಯಾಗದ ಸಂಬಂಧಗಳ ವೈರುಧ್ಯ.

ವಾನ್‌ಗೋ ಧರ್ಮಬೋಧಕನಾಗುವ ಉದ್ದೇಶವನ್ನೂ ಹೊಂದಿದ್ದ ಅಥವಾ ಈ ಉದ್ದೇಶಕ್ಕೆ ಸಿದ್ಧನಾಗುವಂತೆ ಮಾಡಲಾಗಿತ್ತು. ಆಗ ಅವನಿಗೆ ಅನ್ನಿಸುತ್ತದೆ: 'ವೈಯಕ್ತಿಕ ಆಸಕ್ತಿಯಾದ ಬಡವರ ಸೇವೆ, ಅಸ್ವಸ್ಥರ – ದೀನದಲಿತರ ಸೇವೆ– ಇತ್ಯಾದಿಗಳು ಏನಾಗುತ್ತವೆ?' – ಎಂದು. ಆತನೇ ಪ್ರಶ್ನಿಸಿಕೊಳ್ಳುತ್ತಾನೆ: 'ಸಾಂಪ್ರದಾಯಿಕ ಶಿಕ್ಷಣವನ್ನು ನನ್ನ ತಲೆಗೆ ಹತ್ತಲಿಲ್ಲವೆಂದ ಮಾತ್ರಕ್ಕೆ ನನ್ನಿಂದ ಯಾವ ಪ್ರಯೋಜನವೂ ಇಲ್ಲವೇನು? ನನ್ನವರನ್ನು ಪ್ರೀತಿಸುವುದಕ್ಕೂ ಗ್ರೀಕ್ ಲ್ಯಾಟಿನ್‌ಗೂ ಏನು ಸಂಬಂಧ?' – ಈ ಪ್ರಶ್ನೆ ಹುಟ್ಟಿದ್ದು ಧರ್ಮಬೋಧಕನಾಗಲು ಗ್ರೀಕ್ ಲ್ಯಾಟಿನ್ ಭಾಷೆಗಳಲ್ಲಿ ಪರಿಣತನಾಗಬೇಕೆಂಬ ಆಗ್ರಹ ಬಂದಾಗ. ವಾನ್‌ಗೋ ವಿಚಾರಧಾರೆ ಸ್ಪಷ್ಟವಾಗಿದೆ: ಮನುಷ್ಯ ಪ್ರೀತಿಗೆ ಭಾಷಾ ಪರಿಣತಿ ಬೇಕಾಗಿಲ್ಲ. ಈ ಕಾರಣದಿಂದಲೇ ಈತ ಮಾಸ್ಟರ್ ಜೋಕ್ಮಾಗೆ ಸ್ಪಷ್ಟವಾಗಿ ಹೇಳುತ್ತಾನೆ: 'ನಾನು ನನ್ನ ಉಪದೇಶಗಳನ್ನು ಪ್ರವಚನಗಳನ್ನು

ನನಗಿಷ್ಟ ಬಂದ ಹಾಗೆ ಹೇಳುತ್ತೇನೆ. ನಾನು ಮಾಡುತ್ತಿರುವ ರೀತಿ ಚೆನ್ನಾಗಿದೆ. ನೀವು ಮಾಡುತ್ತಿರುವ ಅವಮಾನಕ್ಕೆ ನಾನು ಹೆದರೊಲ್ಲ.' ಹೀಗೆ ಸಾಂಸ್ಥಿಕ ಧರ್ಮದ ಕಟ್ಟಳೆಗಳನ್ನು ಮೀರಿದ ಮನೋಧರ್ಮವನ್ನು ಬೆಳೆಸಿಕೊಂಡ ಅವನಲ್ಲಿ ಬಂಡಾಯವೊಂದು ಮೊಳಕೆ ಒಡೆದಿತ್ತು: 'ತಾನು ಬೋಧಿಸುವ ಧರ್ಮದಲ್ಲಿ ಹುರುಳಿಲ್ಲ. ಪ್ರಯೋಜನವಿಲ್ಲ' ಎಂಬ ತೀರ್ಮಾನಕ್ಕೆ ಕೊಂಡೊಯ್ದಿತ್ತು. ಯಾಕೆಂದರೆ ಕಷ್ಟದಲ್ಲಿರುವ ಬಡಬಗ್ಗರಿಗೆ – ಎಲ್ಲ ಸೌಕರ್ಯಗಳಿಂದ ಬದುಕುವ ತಾನು–ಧರ್ಮಬೋಧೆ ಮಾಡುವುದೇ ಒಂದು ದ್ರೋಹ ಎನ್ನಿಸಿತ್ತು. ಈ ಹೀಗಾಗಿ ಧರ್ಮಬೋಧಕನಾಗದೆ ನೆಲೆಯುನ್ನರಸಿ ಅಲೆಯುತೊಡಗಿದ್ದೇ ಆತನ ಬದುಕಾಯಿತು. ಬಂಡಾಯ ಮನೋಧರ್ಮವೆನ್ನುವುದು ವಿಕ್ಷಿಪ್ತತೆಯ ತಾಣವಲ್ಲ; ನೆಲೆಕಾಣದ ನಿರಂತರ ಅಲೆಮಾರಿತನವಲ್ಲ. ಅಸಮಾನತೆಯ ಅಸ್ವಸ್ಥ ಸಮಾಜದ ವಿರುದ್ಧ ಸಿಡಿಯುವ ಸೈದ್ಧಾಂತಿಕ ಸ್ಫೋಟ. ಈ ಸ್ಫೋಟ ಸೈದ್ಧಾಂತಿಕವಾದದ್ದೇ ಹೊರತು ಭೌತಿಕವಾದದ್ದಲ್ಲ. ಆದರೆ ವಾನ್‌ಗೋ ಒಳಗಡೆ ಸೈದ್ಧಾಂತಿಕ ಆಕೃತಿಯೊಂದು ರೂಪುಗೊಳ್ಳುವ ಅಂತಿಮ ಹಂತ ಬರುವ ಬದಲು, ಪ್ರಕ್ಷುಬ್ಧ ಪ್ರಕ್ರಿಯೆಯೇ ಪ್ರತಿಮಾತ್ಮಕವಾಯಿತು. ಧರ್ಮ ಬೋಧಕನಾಗದೆ ನಿರ್ಗಮಿಸಿದ ಆತನಲ್ಲಿ ಮೂಡಿದ ಅಭಿಪ್ರಾಯವೊಂದು ತೀಕ್ಷ್ಣವೂ ಅಸಾಂಪ್ರದಾಯಿಕವೂ ಆಗಿತ್ತು: 'ದೇವರು ಅನ್ನುವುದೆಲ್ಲ ಸುಳ್ಳು. ಯಾರೊ ಯಾವಾಗಲೋ ಮನುಷ್ಯನೆಂಬ ಪ್ರಾಣಿ ಒಂಟಿತನದ ಭೀತಿಯಲ್ಲಿ ಇರುವಾಗ ಇದನ್ನು ಸೃಷ್ಟಿಸಿಕೊಂಡಿರುವುದು..... ಜಗತ್ತಿನಲ್ಲಿ ಎಲ್ಲೆಲ್ಲೂ ತುಂಬಿರುವುದು ದುಃಖ, ಅರಾಜಕತೆ, ನೋವು, ಸಾವು, ಕ್ರೌರ್ಯ, ಅಂಧಕಾರಗಳೇ?.....' – ಎಂದು ಭಾವಿಸುವ ವಿನ್ಸೆಂಟ್ ವಾನ್‌ಗೋ ಸ್ವತಃ ಒಂಟಿತನವನ್ನು ಅನುಭವಿಸಿದ. ಒಂಟಿತನದಿಂದ ಹೊರಬರಲು ಆತನಿಗೆ ಇದ್ದ ದಾರಿಗಳೆಂದರೆ ಸ್ತ್ರೀಸಂಬಂಧ ಮತ್ತು ಚಿತ್ರಕಲೆ. ಹೀಗಾಗಿಯೇ ಆತನ ಬದುಕನ್ನೂ ಚಿತ್ರಿಸಿರುವ ಈ ಕಾದಂಬರಿಯಲ್ಲಿ ಕಾಣುವುದು ಪ್ರತಿಭೆಯ 'ಪ್ರಕ್ಷುಬ್ಧ ಪ್ರತಿಮೆ' ಮತ್ತು ವಿಕ್ಷಿಪ್ತ ವ್ಯಕ್ತಿತ್ವ. (ಹೀಗಂತ ಕಲಾವಿದರೆಲ್ಲ ಹೀಗೆ ಇರಬೇಕಾಗಿಲ್ಲ. ಎಲ್ಲರೂ ಹೀಗೆ ಇರುವುದಿಲ್ಲ.)

ತಾನು ಚಿತ್ರಗಳನ್ನು ಬರೆಯುವುದಕ್ಕೆ ಮುಂಚೆ ವಾನ್‌ಗೋ ಕಲಾಕೃತಿಗಳ ಮಾರಾಟ ಮಳಿಗೆಯಲ್ಲಿ ಕೆಲಸಕ್ಕಿದ್ದ. ಆಗ ಕೊಳ್ಳಲು ಬಂದವರು ಕಲಾತ್ಮಕ ಮಾನದಂಡದಿಂದ ಉತ್ತಮವಲ್ಲದ ಚಿತ್ರಗಳನ್ನೇ ಹೆಚ್ಚಾಗಿ ಖರೀದಿಸುತ್ತಿದ್ದರು. ವಾನ್‌ಗೋಗೆ ಇದು ಸಹ್ಯವಾಗದೆ 'ಅವು ಉತ್ತಮ ಕಲಾಕೃತಿಗಳಲ್ಲ ಕೊಂಡುಕೊಳ್ಳಬೇಡಿ' ಎಂದು ವಾದಿಸುತ್ತಿದ್ದ. ವಾನ್‌ಗೋನ ವರ್ತನೆಯನ್ನು ಕಲಾ ಗ್ಯಾಲರಿಯ ವ್ಯವಸ್ಥಾಪಕ ಒಬಾಕ್ ಖಂಡಿಸಿದ; ಆಗ ಕೆಲಸಗಾರ ವಾನ್‌ಗೋ ಹೇಳಿದ್ದು ಹೀಗೆ: 'ಒಬ್ಬ ಮನುಷ್ಯ ಜೀವಮಾನದಲ್ಲಿ ಇಂಥ ಕೆಟ್ಟ ಚಿತ್ರಗಳನ್ನು ಮೂರ್ಖ ಗಿರಾಕಿಗಳಿಗೆ ಮಾರುವುದನ್ನು ಹೇಗೆ ಸಮರ್ಥಿಸಿಕೊಳ್ಳಲು ಸಾಧ್ಯ?' – ವಿನ್ಸೆಂಟ್ ವಾನ್‌ಗೋನ ಅಭಿರುಚಿ ಸ್ಫಟಿಕವಾಗಿತ್ತು; ಅಭಿಪ್ರಾಯ ಸ್ಪಷ್ಟವಾಗಿತ್ತು. ಆತ ಮನಸ್ಸನ್ನು ಮಾರುಕಟ್ಟೆ ಮಾಡಿಕೊಳ್ಳಲು ಸಿದ್ಧನಿರಲಿಲ್ಲ. ಮಾರುಕಟ್ಟೆಯನ್ನು ಮೀರಿದ ಮನಸ್ಸಿನಲ್ಲಿ ಕಲಾವಿದ ರೂಪುಗೊಳ್ಳುತ್ತಾನೆಂಬ

ಸೂಚನೆಯನ್ನು ಈ ಪ್ರಸಂಗ ಸಮರ್ಥವಾಗಿ ನಿರೂಪಿಸುತ್ತದೆ. ಕತೆಯು ವಿಕಾಸವಾಗುತ್ತ ಹೋದಂತೆ, ವಾನ್‌ಗೋ ಬದುಕು ಬೆಳೆಯುತ್ತಾ ಹೋದಂತೆ, ಕಾದಂಬರಿಯಲ್ಲಿ ಕಲಾಮೀಮಾಂಸೆಯೂ ಬೆಳೆಯುತ್ತದೆ. ವಿವಿಧ ಸನ್ನಿವೇಶಗಳ, ಸಂವಾದಗಳ ಮೂಲಕ ವಿಕಾಸಗೊಳ್ಳುತ್ತದೆ.

ಒಂದು ಚರ್ಚೆಯ ಸಂದರ್ಭದಲ್ಲಿ ಮಿಸ್ಟರ್ ಸ್ಯುರಾತ್ ಎಂಬ ಪ್ರಸಿದ್ಧ ಚಿತ್ರಕಲಾವಿದ ಹೀಗೆ ಹೇಳುತ್ತಾನೆ: 'ಪೈಂಟರ್ಸ್ – ವಸ್ತುಗಳನ್ನು ಇರುವ ಹಾಗೇ ಪೈಂಟ್ ಮಾಡೋದಿಲ್ಲ. ಅವುಗಳ ಸತ್ವವನ್ನು ಪೈಂಟಿಂಗ್‌ನಲ್ಲಿ ಮೂಡಿಸಬೇಕು. ಯಥಾವತ್ತಾದ ವಸ್ತುರೂಪಗಳನ್ನು ಹಿಡಿದಿಡುವುದಕ್ಕೆ ಕ್ಯಾಮರಾದಿಂದ ಫೋಟೋಗ್ರಾಫ್ಸ್ ತೆಗೆದುಕೊಂಡರೆ ಆಯ್ತು. ಆದರೆ ನಾವು ಅದನ್ನು ಮೀರಿಹೋಗಬೇಕು. ಕುದುರೆಯನ್ನು ಪೈಂಟ್ ಮಾಡಿದರೆ ಯಥಾವತ್ತಾದ ಕುದುರೆಯನ್ನು ಕಾಣಿಸಬೇಕಿಲ್ಲ. ಅಲ್ಲಿ ಬೇಕಾಗಿರುವುದು ಪ್ಲೇಟೊ ಹೇಳುವ ಹಾಗೆ ಕುದುರೆತನ. ಮನುಷ್ಯನನ್ನು ಪೈಂಟ್ ಮಾಡಿದರೆ ಅವನ ಮೂಗಿನ ಗಂತಿಯೊಂದಿಗೆ ತೋರಿಸಬೇಕಿಲ್ಲ. ಎಲ್ಲ ಮನುಷ್ಯರನ್ನು ಪ್ರತಿನಿಧಿಸುವ ಮನುಷ್ಯತನವನ್ನು ಸತ್ವಸಾರಗಳೊಂದಿಗೆ ಕಾಣಿಸಬೇಕು.'

ಇಂತಹ ಅನೇಕ ಚರ್ಚೆಗಳ ಮೂಲಕ ವಾನ್‌ಗೋ ಬೆಳೆದ, ಹೊಸತನ ತೋರತೊಡಗಿದ. ಅವನಿಗೆ ಅರ್ಥವಾಯಿತು: 'ನಾನು ಆಕೃತಿಗಳನ್ನು ಬರೆಯಬೇಕಾದರೆ, ದೇಹದ ಒಳಗಿನ ಎಲುಬುಗಳನ್ನು, ನರನಾಡಿಗಳನ್ನು, ಸ್ನಾಯುಗಳನ್ನು ಅರ್ಥ ಮಾಡಿಕೊಂಡಿರಬೇಕು. ಅವುಗಳ ಕೆಲಸವೇನೆಂದು ತಿಳಿದಿರಬೇಕು. ತಲೆ ಒಳಗೆ ಏನು ನಡೆಯುತ್ತೆ, ಅಂತರಂಗದಲ್ಲಿ ಏನು ನಡೆಯುತ್ತೆ ಅನ್ನೋದು ತಿಳೀದೆ ತಲೇನ ಬರೆಯೋಕಾಗೊಲ್ಲ. ವ್ಯಕ್ತಿಗಳನ್ನು ಚಿತ್ರಿಸಬೇಕಾದರೆ ಅವರ ಅನಾಟಮೀನೂ ಗೊತ್ತಿರಬೇಕು ಮತ್ತು ತಾವು ಬದುಕುತ್ತಿರುವ ಪ್ರಪಂಚದ ಬಗ್ಗೆ ಅವರು ಏನು ಯೋಚಿಸುತ್ತಿದ್ದಾರೆ ಅನ್ನೋದು ತಿಳಿದಿರಬೇಕು." – ಹೀಗೆ ತನ್ನೊಳಗೆ ಕಲಾದರ್ಶನವನ್ನು ಕಂಡುಕೊಂಡ ವಿನ್ಸೆಂಟ್ ವಾನ್‌ಗೋ ಅನೇಕ ಕಲಾಕೃತಿಗಳನ್ನು ಸೃಷ್ಟಿಸಿ. ಅವುಗಳನ್ನೆಲ್ಲ ತನ್ನ ಗ್ಯಾಲರಿಗೆ ತೆಗೆದುಕೊಂಡು ಬದುಕಲು ಆರ್ಥಿಕ ಸಹಾಯ ಮಾಡಿದವನು ವಾನ್‌ಗೋನ ತಮ್ಮ ಥಿಯೋ. ಆದರೆ ತನ್ನ ಗ್ಯಾಲರಿಯಿಂದ ಅಣ್ಣನ ಕಲಾಕೃತಿಗಳನ್ನು ಮಾರಾಟ ಮಾಡಲಿಲ್ಲ. ಒಂದು ಸಂದರ್ಭದಲ್ಲಿ ವಾನ್‌ಗೋ ಅತ್ಯಂತ ವಿಷಾದದಿಂದ ವ್ಯಗ್ರವಾಗಿ ಕೇಳುತ್ತಾನೆ: 'ಥಿಯೋ, ಪ್ರಮಾಣವಾಗಿ ಹೇಳು, ನಾನೊಬ್ಬ ಪೈಂಟರ್ ಹೌದಾ ಅಲ್ವಾ? ಇಲ್ಲ ನಾನು ಕಮ್ಯುನಿಸ್ಟ್ ವ್ಯವಸ್ಥಾಪಕ ಮಾತ್ರವೇ ಆಗಿದ್ದೇನೆಯೇ?

ವಾನ್‌ಗೋನ ಪ್ರಶ್ನೆಗೆ ಉತ್ತರ ಸಿಗುವುದು ಆತ ಸತ್ತ ಮೇಲೆ ಎನ್ನುವುದು ಇತಿಹಾಸದ ಜೊತೆಗಿದ್ದ ವಿಷಾದವೂ ಹೌದು; ವಿಪರ್ಯಾಸವೂ ಹೌದು. ಸತ್ತ ನಂತರ ಈತನ ಕಲಾಕೃತಿಗಳಿಗೆ ಬಂದ ಬೇಡಿಕೆ, ಲಭ್ಯವಾದ ಪ್ರಶಂಸೆಗಳು – 'ಸಾಂಸ್ಕೃತಿಕ ಲೋಕದ ನಿರ್ಲಕ್ಷ್ಯ ಚರಿತ್ರೆ'ಗೆ ಉತ್ತಮ ಉದಾಹರಣೆಯಾಗಬಲ್ಲವು, ಸ್ಥಿತ್ಯಂತರಗೊಂಡ ಸಂವೇದನೆಯ ಸಂಕೇತವೂ ಆಗಬಲ್ಲವು.

ಧರ್ಮಬೋಧಕನಾಗ ಹೊರಟು ಅದ್ಭುತ ಕಲಾವಿದನಾಗಿ ರೂಪುಗೊಂಡ ವಿನ್ಸೆಂಟ್ ವಾನ್‌ಗೋ ಜೀವನಾಧಾರಿತವಾದ ಈ ಕಾದಂಬರಿಯು ವ್ಯಕ್ತಿ ಜೀವನ ಮತ್ತು ಸಮುದಾಯ ಜೀವನಗಳನ್ನು ಒಟ್ಟಿಗೇ ಒಳಗೊಳ್ಳುವ ಮೂಲಕ ಮಹತ್ತನ್ನು ಪಡೆದಿದೆ. ಸರಳ ಅಥವಾ ಏಕರೇಖಾತ್ಮಕ ಜೀವನ ಚಿತ್ರಣವಾಗದೆ ವಿವಿಧ ಸ್ಥಳಗಳ ವಿವಿಧ ವ್ಯಕ್ತಿತ್ವಗಳ ಸಮುದಾಯದ ಬದುಕನ್ನು ಭಿತ್ತಿಯಾಗಿಟ್ಟುಕೊಂಡು, ವಿನ್ಸೆಂಟ್ ವಾನ್‌ಗೋ ಬದುಕಿನ ಚಿತ್ರ ಬಿಡಿಸುವ ಕಲಾಕೃತಿಯಾಗಿ ಈ ಕಾದಂಬರಿಯು ಮೂಡಿ ಬಂದಿದೆ. 'ಲಸ್ಟ್ ಫಾರ್ ಲೈಫ್' ಬರೆದ ಇರ್ವಿಂಗ್ ಸ್ಟೋನ್ ವ್ಯಕ್ತಿ ಮತ್ತು ಸಮಾಜಗಳನ್ನು ಒಟ್ಟಾಗಿ ಎರಕ ಹೊಯ್ದು ಕಾದಂಬರಿಯನ್ನು ಕಟ್ಟಿಕೊಟ್ಟಿದ್ದಾರೆ. ಕಾದಂಬರಿಯಲ್ಲಿ ನಿಜ ಪ್ರೀತಿಯ ರೂಪಕವಾಗಿ ಬರುವ 'ಮಾಯ' ಹೇಳಿದ ಮಾತುಗಳನ್ನು ಇಲ್ಲಿ ಉಲ್ಲೇಖಿಸುವುದು ಮುಖ್ಯವೆಂದು ನಾನು ಭಾವಿಸುತ್ತೇನೆ. ಆಕೆ ವಿನ್ಸೆಂಟ್ ವಾನ್‌ಗೋಗೆ ಹೇಳುತ್ತಾಳೆ: 'ನೀನು ಕುರೂಪಿಯಲ್ಲ ವಿನ್ಸೆಂಟ್, ಸುಂದರವಾಗಿದ್ದೀಯ. ನಿನ್ನ ಆತ್ಮವನ್ನು ಸುತ್ತಿ ಹಿಡಿದ ದೇಹವನ್ನು ನೀನಾಗಿ ಹಿಂಸಿಸಿದ್ದೀಯ, ದಣಿಸಿದ್ದೀಯ, ಘಾಸಿಗೊಳಿಸಿದ್ದೀಯ. ಆದರೆ ನಿನ್ನ ಆತ್ಮಕ್ಕೆ ಯಾವ ಚ್ಯುತಿಯೂ ಇಲ್ಲ. ಆದ್ದರಿಂದ ನಾನು ಪ್ರೀತಿಸುವುದು ನಿನ್ನ ಆತ್ಮವನ್ನು. ಎಡೆಬಿಡದೆ ದುಡಿದು ದಣಿಸಿದ ನಿನ್ನ ದೇಹವನ್ನು ಹಾಳು ಮಾಡಿದ್ದೀಯ. ಆದರೆ ಆತ್ಮ ಹಾಗೇ ಮುಂದುವರೆದಿದೆ. ಆತ್ಮವನ್ನೇ ನಾನು ಬಯಸುವುದು, ಪ್ರೀತಿಸುವುದು.'

ಮಾಯಾಳ ಈ ಮಾತು, ಕಾದಂಬರಿಯಲ್ಲಿ ನಿಜಾನುಭವದ ರೂಪ ಪಡೆದಿದೆ. ನಮ್ಮ ಅನುಭವಕ್ಕೂ ದಕ್ಕುತ್ತದೆ; ತೀವ್ರವಾಗಿ ಕಾಡಿಸುತ್ತದೆ. ಕನ್ನಡದ ಮೂಲಕ ಇಷ್ಟೆಲ್ಲ ಆಗಲು ಕಾರಣರಾದವರು ಡಾ. ವಿಜಯಾ ಸುಬ್ಬರಾಜ್ ಅವರು. ಪರಕೀಯವೆನ್ನಿಸದ ಹಾಗೆ ವಿನ್ಸೆಂಟ್ ವಾನ್‌ಗೋನನನ್ನು ಕನ್ನಡಕ್ಕೆ ತಂದು ಒಂದು ಉತ್ತಮ ಕೆಲಸ ಮಾಡಿದ್ದಾರೆ; ಕಷ್ಟಪಡದೆ ಓದಿಸಿಕೊಳ್ಳುವ ಅನುವಾದವನ್ನು ಕೊಟ್ಟಿದ್ದಾರೆ. ಇದೊಂದು ವಿಶಿಷ್ಟ ಕಾದಂಬರಿಯೆಂಬ ಮಾತು ಅನುವಾದಕ್ಕೂ ಸಲ್ಲುತ್ತದೆ. ಮುಖ್ಯವಾದ ಕಾದಂಬರಿಯೊಂದನ್ನು ಕನ್ನಡ ಓದುಗರಿಗೆ ನಿಲುಕುವಂತೆ ಮಾಡಿದ ಡಾ.ವಿಜಯಾ ಸುಬ್ಬರಾಜ್ ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಇನ್ನೊಂದು ಮಾತು: ವಿಜಯಾ ಸುಬ್ಬರಾಜ್ ಅವರು 'ಲಸ್ಟ್ ಫಾರ್ ಲೈಫ್' ಎಂಬ ಶೀರ್ಷಿಕೆಯ ಯಥಾವತ್ತಾದ ಅನುವಾದಕ್ಕೆ ಹೋಗದೆ 'ಸೂರ್ಯಕಾಂತಿಗಳ ಮಡಿಲಲ್ಲಿ' ಎಂಬ ಅರ್ಥಪೂರ್ಣ ಹೆಸರನ್ನು ಕೊಟ್ಟಿದ್ದಾರೆ. ನಿತ್ಯ ಅರಳುವ ಮುದುಡುವ ಸೂರ್ಯಕಾಂತಿಗಳ ಮಡಿಲಲ್ಲಿ, ಮಾಯಾ ಹೇಳಿದ ವಿನ್ಸೆಂಟ್ ವಾನ್‌ಗೋನ 'ಆತ್ಮ' ಅಡಗಿದೆ. ನನ್ನನ್ನು ಕಾಡುತ್ತಿದೆ. ಇನ್ನೇನು ಹೇಳಲಿ? ಹಿಂಸೆಗೊಂಡ ದೇಹದೊಳಗಿನ ಅಗೋಚರ ಆತ್ಮದ ಅನುಭವಕ್ಕೆ ಯಾವ ಮಾತು ಸಾಟಿಯಾದೀತು? ಇಲ್ಲಿಗೇ ನಿಲ್ಲಿಸುತ್ತೇನೆ.

ಬೆಂಗಳೂರು **ಬರಗೂರು ರಾಮಚಂದ್ರಪ್ಪ**

# ನನ್ನ ಮಾತು

೧೯೪೫ರಲ್ಲಿ ಮೊದಲ ಮುದ್ರಣವಾಗಿ ಬಂದಿದ್ದ, 'ಇರ್ವಿಂಗ್ ಸ್ಟೋನ್' ಬರೆದ 'ಲಸ್ಟ್ ಫಾರ್ ಲೈಫ್' ಕಾದಂಬರಿಯನ್ನು ಆಕಸ್ಮಿಕವಾಗಿ, ಅದರ ಶೀರ್ಷಿಕೆಯಿಂದ ಆಕರ್ಷಿತಳಾಗಿ, ಹಳೆ ಪುಸ್ತಕದಂಗಡಿಯಿಂದ ಕೊಂಡುಕೊಂಡು ಓದಲು ಶುರುಮಾಡಿದೆ. ಅದೇಕೋ ಏನೋ ಹಿಡಿದ ಕ್ಷಣದಿಂದ ಪುಸ್ತಕವನ್ನು ಕೆಳಗಿಳಿಸಲಾಗದೆ, ಕಣ್ಣಿಗೆ ಎಣ್ಣೆ ಬಿಟ್ಟುಕೊಂಡು ಓದಿ ಮುಗಿಸಿದೆ. ಆದರೆ ಓದುತ್ತಿದ್ದ ಅಷ್ಟೂ ಕಾಲ, ಮಾನಸಿಕವಾಗಿ ತಲ್ಲಣಕ್ಕೆ, ಒಂದು ಬಗೆಯ ಹಿಂಸೆಗೆ ಒಳಗಾಗಿದ್ದೆ. ಅಲ್ಲದೆ ನನ್ನ ನಿಯಂತ್ರಣವೂ ಮೀರಿ ಹೊರಚೆಲ್ಲುತ್ತಿದ್ದ ಕಣ್ಣ ಹನಿಗಳು ಪುಟಗಳನ್ನು ತೋಯಿಸಿದ್ದವು. ಅಂದಿನಿಂದ ಇಂದಿನವರೆವಿಗೂ ಆ ಕೃತಿ ದಶಕಗಳ ಕಾಲ ನನ್ನನ್ನು ಕಾಡಿತ್ತು. ಮೊದಲ ಓದಿನ ದಿನಗಳಲ್ಲಿ ನಾನು ವಿಜ್ಞಾನದ ವಿದ್ಯಾರ್ಥಿಯಲ್ಲದೆ ಬೇರೇನೂ ಆಗಿರಲಿಲ್ಲ. ಸಾಹಿತ್ಯ ಲೋಕಕ್ಕೆ ಪಾದಾರ್ಪಣ ಮಾಡುತ್ತೇನೆಂಬ ಕಲ್ಪನೆಯೂ ಇರಲಿಲ್ಲ. ಆದರೆ ಈಗ ಅನಿರೀಕ್ಷಿತವಾದರೂ ಅದೃಷ್ಟವೋ ಎಂಬಂತೆ ಇಲ್ಲಿಗೆ ಪ್ರವೇಶಿಸಿದೆ. ಹಳೆಯ ಗುಂಗು ಮತ್ತೊಮ್ಮೆ ಅನುರಣಿಸಿತು. ಮತ್ತೆ ಈ ಕಾದಂಬರಿಯನ್ನು ಕೈಗೆತ್ತಿಕೊಂಡು ಓದಿದ್ದೇ ಅಲ್ಲದೆ, ಹೇಗಾದರೂ ಇದನ್ನು ಕನ್ನಡಕ್ಕೆ ತರಲೇಬೇಕೆಂದು ಭೀಷ್ಮ ಪ್ರತಿಜ್ಞೆಗೆ ಮುಂದಾದೆ. ಬಹುಶಃ ನನ್ನನ್ನು ಅತಿಯಾಗಿ ಕಾಡಿದ್ದ ಆ ಕಾದಂಬರಿಯ ಕಥಾನಾಯಕ ಕಲಾವಿದ ವಿನ್ಸೆಂಟ್ ವಾನ್‌ಗೋನ ಚೇತನವೇ ನನ್ನ ಹಂಬಲಕ್ಕೆ ಗರಿಗಟ್ಟಿಸಿದೆ; ಪ್ರೋತ್ಸಾಹಿಸಿದೆ ಎನ್ನುವಂತೆ ಆಕಸ್ಮಿಕವಾಗಿ ಕಣ್ವ ಪ್ರತಿಷ್ಠಾನದ ಗಿರಿರಾಜು ಅವರ ಪರಿಚಯವಾಯಿತು. ಅವರಲ್ಲಿ ನಾನು ಅನುವಾದಿಸುತ್ತಿರುವ ವಿಷಯ ಪ್ರಸ್ತಾಪಿಸಿದೆ. ಕೂಡಲೇ, ಅವರು ಯಾವುದೇ ಪೂರ್ವಾಪರಗಳನ್ನು ವಿಚಾರಿಸದೆ ಮುಕ್ತ ಮನಸ್ಸಿನಿಂದ, ತುಂಬು ಉತ್ಸಾಹದಿಂದ ಪ್ರಕಟಿಸಲು ಮುಂದಾದರು; ಅಲ್ಲದೆ ವಿಶ್ವದ ಯಾವುದೇ ಮಹತ್ವದ ಕಾದಂಬರಿಗಳಾದರೂ ಸರಿ, ಅವುಗಳ ಅನುವಾದಗಳನ್ನು ಪ್ರಕಟಿಸಲು ತಮಗೇ ನೀಡಬೇಕೆಂಬ ಪ್ರೀತಿಯ ಒತ್ತಾಯವನ್ನೂ ಹೇರಿದರು. ಇಂತಹ ಹೃದಯವಂತ ಪ್ರಕಾಶಕರಾದ ಗಿರಿರಾಜು ಅವರಿಗೆ, ಅಚ್ಚುಕಟ್ಟಾಗಿ ಈ ಕಾದಂಬರಿಯ ಡಿ.ಟಿ.ಪಿ. ಕೆಲಸವನ್ನು ಪ್ರೀತಿಯಿಂದಲೂ, ಅತಿವೇಗದಿಂದಲೂ ಮಾಡಿಕೊಟ್ಟ ಸೌಮ್ಯಳಿಗೆ ನನ್ನ ಹೃದಯಪೂರ್ವಕ ಕೃತಜ್ಞತೆಗಳು.

ಇಂತಹ ಮಹತ್ವದ ಕಾದಂಬರಿಗೆ ಮಹತ್ವದ ವ್ಯಕ್ತಿಗಳೂ ಹೃದಯವಂತರೂ ಕಲಾತ್ಮಕ ಸಂವೇದನೆಗಳುಳ್ಳವರೂ ಆದಂತಹ ವ್ಯಕ್ತಿಗಳಿಂದಲೇ ಮುನ್ನುಡಿ, ಬೆನ್ನುಡಿಗಳನ್ನು ಬರೆಸಬೇಕೆಂಬುದು ನನ್ನ ಅದಮ್ಯ ಹಾರೈಕೆಯಾಗಿತ್ತು. ಆಗ ನನಗೆ ಥಟ್ಟನೆ ಹೊಳೆದದ್ದು ಪ್ರೊ. ಬರಗೂರು ರಾಮಚಂದ್ರಪ್ಪ ಅವರು. ಎಲ್ಲ ಮಾಧ್ಯಮಗಳ ಪರಿಚಯವಿರುವ ಕಲೆ, ಸಂಸ್ಕೃತಿ, ಸಾಹಿತ್ಯಗಳ ಬಗ್ಗೆ ಮತ್ತು ಮಾಧ್ಯಮಗಳ ಬಗ್ಗೆ ಗಂಭೀರವಾಗಿ ಚಿಂತನೆ ಮಾಡಬಲ್ಲ ಮತ್ತು ಅಧಿಕೃತವಾಗಿ ಮಾತನಾಡಬಲ್ಲ ವ್ಯಕ್ತಿಯಾಗಿ ಬೌದ್ಧಿಕ ವಲಯದಲ್ಲಿ ಗುರುತಿಸಿಕೊಂಡಿರುವವರು. ಜೊತೆಗೆ ಸ್ನೇಹದ ಸಲುಗೆಯಿಂದ ಕೇಳಿಕೊಳ್ಳಬಹುದಾದವರು ಎಂಬ ಸ್ವಾರ್ಥದ ಉದ್ದೇಶದೊಂದಿಗೆ ಅವರನ್ನು ಈ ಕೃತಿಗೆ ಮುನ್ನುಡಿ ಬರೆಯಲು ಕೇಳಿಕೊಂಡೆ. ಮೊದಲಿಗೆ, ಅವರಿಗಿದ್ದ ಕಾರ್ಯಭಾರದಿಂದ, ಬರೆಯುವುದು ಸಾಧ್ಯವಾಗದೇನೋ ಎಂಬ ಅನುಮಾನ ವ್ಯಕ್ತಪಡಿಸಿದರೂ, ನನ್ನ ಒತ್ತಾಯಕ್ಕೆ ಬಹುಶಃ ಮಣಿದಿರಬೇಕು! ಸ್ವಲ್ಪ ಕಾಲಾವಕಾಶಬೇಕೆಂದು ಮೊದಲೇ ತಿಳಿಸಿ, ಬರೆಯಲು ಒಪ್ಪಿಗೆ ನೀಡಿದರು; ಬರೆದೂ ಕೊಟ್ಟರು.

ಅವರು ಬರೆದು ಕೊಟ್ಟಿರುವ ಮುನ್ನುಡಿಯೇ, ಚಾರಿತ್ರಿಕ ವ್ಯಕ್ತಿಗಳ, ಪ್ರಸಿದ್ಧ ವ್ಯಕ್ತಿಗಳ ಜೀವನಾಧಾರಿತ ಸೃಜಶೀಲ ಕೃತಿಗಳ ರಚನೆಯ ಸಂದರ್ಭದಲ್ಲಿ ಎದುರಾಗಬಹುದಾದ ಸವಾಲುಗಳ ಕುರಿತ ಚಿಂತನೆಗಳನ್ನು ದಾಖಲಿಸುವ ಒಂದು ಮಹತ್ವದ ಲೇಖನದಂತಿದೆ. ಇಂತಹ ಮಹತ್ವದ ಚಿಂತಕರೂ ಖ್ಯಾತ ಬರಹಗಾರರೂ ಆದ ಪ್ರೊ. ಬರಗೂರು ರಾಮಚಂದ್ರಪ್ಪನವರು ಸುದೀರ್ಘವಾದ, ಚಿಂತನಾತ್ಮಕವೂ ವಿಶ್ಲೇಷಣಾತ್ಮಕವೂ ಆದ ಮುನ್ನುಡಿಯನ್ನು, ಅವರ ಬಿಡುವಿಲ್ಲದ ಕೆಲಸಗಳ ನಡುವೆಯೂ ಸಕಾಲಕ್ಕೆ ಬರೆದುಕೊಟ್ಟು ನನ್ನ ಅನುವಾದ ಕೃತಿಗೊಂದು ಮೌಲಿಕತೆಯನ್ನು ತಂದು ಕೊಟ್ಟಿರುವುದಕ್ಕಾಗಿ ಅವರಿಗೆ ನನ್ನ ಹೃದಯಾಂತರಾಳದಿಂದ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ.

**ಡಾ. ವಿಜಯಾ ಸುಬ್ಬರಾಜ್**

# ವಿನ್ಸೆಂಟ್ ವಾನ್‌ಗೋ–ಒಂದು ನೋಟ

ಜಗದ್ವಿಖ್ಯಾತ ವರ್ಣ ಚಿತ್ರ ಕಲಾವಿದರಲ್ಲಿಯೇ ಅತ್ಯಂತ ಮಹತ್ವದ ಹೆಸರು ವಿನ್ಸೆಂಟ್ ವಾನ್‌ಗೋ. ಆದರೆ ವಿಶ್ವದಲ್ಲಿಯೇ ಅವನಂತಹ ಸಂಕೀರ್ಣವ್ಯಕ್ತಿತ್ವವುಳ್ಳ ಮತ್ತು ಆರ್ಥಿಕ, ಸಾಮಾಜಿಕ ಮಾನಸಿಕ ಒತ್ತಡಗಳ ಭಯಂಕರ ಪರಿಣಾಮಗಳ ಬೆಂಕಿಯಲ್ಲಿ ಬೇಯುತ್ತಾ, ಕ್ಷಣಕ್ಷಣವೂ ಅಸ್ತಿತ್ವಕ್ಕಾಗಿ ಪ್ರತಿಕೂಲ ಪರಿಸ್ಥಿತಿಗಳಿಗೆ ಎದುರಾಗಿ ಈಜುತ್ತಾ, ಸಂಘರ್ಷಗಳನ್ನೂ ಬದುಕಿನ ಭಾಗವಾಗಿ ಸ್ವೀಕರಿಸುತ್ತಾ, ತನ್ನ ಸುತ್ತಲಿನ ಸಮಾಜದಿಂದ ಅವಮಾನ, ಅವಹೇಳನ, ತಿರಸ್ಕಾರಗಳ ನಂಜಿನ ನಡುವೆಯೂ ಮಾನವೀಯತೆಯನ್ನು ಉಳಿಸಿಕೊಂಡವನು; ಮನೋವಿಕಾರ, ವಿಕ್ಷಿಪ್ತ ವ್ಯಕ್ತಿತ್ವಗಳ ಮಧ್ಯದಿಂದಲೇ, ತನ್ನೊಳಗಿನ ಕಲಾವಿದನನ್ನು ಬಡಿದೆಬ್ಬಿಸಿ, ಬದುಕಿರುವವರೆಗೂ ಗುರುತಿಸಿಕೊಳ್ಳಲಾಗದಿದ್ದರೂ, ಸಾವಿನ ಮೂಲಕ ಜಗತ್ತಿನ ಕಣ್ಣನ್ನು, ಆ ಕಲಾವಿದನೆಡೆಗೆ ತೆರೆಸಿ, ಕೊಂಡಾಡುವಂತೆ ಮಾಡಿದ ಮತ್ತೊಬ್ಬ ಕಲಾವಿದ ಬಹುಶಃ ವಿಶ್ವದಲ್ಲಿಯೇ ಇರಲಾರ.

ಬದುಕಿರುವಾಗ ಏನೇನೋ ಆಗಲು ಪ್ರಯತ್ನಿಸಿ, ಸೋತು, ಎಲ್ಲರ ಕಣ್ಣಲ್ಲಿ ನಿಷ್ಪ್ರಯೋಜಕ, ನಾಲಾಯಕ್ಕು ಎಂದೆಲ್ಲ ಭರ್ತ್ಸ್ಯನೆ, ತಿರಸ್ಕಾರಗಳಿಗೆ ಒಳಗಾಗುತ್ತ, ಆದರೆ ಪ್ರೀತಿಯ ತಮ್ಮನಾದ ಥಿಯೋನ ಪ್ರೋತ್ಸಾಹದಿಂದ ಜೀವನದಲ್ಲಿ ಬಹಳ ತಡವಾಗಿ ಪೈಂಟಿಂಗ್‌ಗೆ ಒಲಿದು, ಅದನ್ನೇ ವೃತ್ತಿಯನ್ನಾಗಿ ಮಾಡಿಕೊಂಡರೂ ಅದಕ್ಕೆ ಮೆಚ್ಚುಗೆಯಾಗಲೀ, ಬದುಕಿಗೆ ದಾರಿಯಾಗುವುದಾಗಲೀ ಸಾಧ್ಯವಾಗಲಿಲ್ಲ. ಅವನು ಬಯಸುವ ಪ್ರೀತಿಯಾಗಲಿ, ಸಾಧನೆಗೆ ಶಹಭಾಷ್‌ಗಿರಿಯಾಗಲೀ ಸಿಗಲಿಲ್ಲ. ಆದರೂ ಆವೇಶ ಬಂದವರಂತೆ, ತನ್ನ ಅದಮ್ಯ ಹಂಬಲವಾದ ಸ್ಕೆಚಿಂಗ್, ಪೈಂಟಿಂಗ್‌ಗಳನ್ನು, ಹೊಟ್ಟೆ ಕಟ್ಟಿ, ದಾರುಣ ಸ್ಥಿತಿಯಲ್ಲಿ ಬದುಕುತ್ತಾ, ಮಾನಸಿಕ ಅಸ್ವಸ್ಥತೆಯ ಆಘಾತಗಳನ್ನೂ ಲಂಘಿಸುತ್ತಾ, ತನ್ನ ಗುರಿಯ ಹಿಂದೆ ದೈತ್ಯವೇಗದಲ್ಲಿ ಕ್ರಮಿಸುತ್ತಾನಾದರೂ, ಜಗತ್ತು ಈಗ ಅವನಿಗೆ ಕೊಟ್ಟಿರುವ ಮಾನ್ಯತೆಯಲ್ಲಿ ಅಣುವಿನಷ್ಟಾದರೂ ಅವನು ಬದುಕಿದ್ದಾಗಲೇ ದೊರೆತಿದ್ದ ಪಕ್ಷದಲ್ಲಿ, ಮತ್ತು ಅವನನ್ನು ಬಲಿಪಶುವಾಗಿಸಿಕೊಂಡ ಮಾನಸಿಕ ಅಸ್ವಸ್ಥತೆಗಳು ಅವನನ್ನು ಕಾಡಿರದಿದ್ದ ಪಕ್ಷದಲ್ಲಿ, ವಿನ್ಸೆಂಟ್‌ನ ಸ್ಥಾನ ವಿಶ್ವದ ಕಲಾ ಜಗತ್ತಿನಲ್ಲಿ ಇನ್ನೆಷ್ಟು ಎತ್ತರಕ್ಕೆ ಏರಬಹುದಾಗಿತ್ತೋ ಊಹಿಸುವುದೂ ಸಾಧ್ಯವಿಲ್ಲ.

ಇಂತಹ ವಿನ್ಸೆಂಟ್ ವಾನ್‌ಗೋ ಬಾಳಿಬದುಕಿದ್ದು ಕೇವಲ ಮೂವತ್ತೇಳು ವರ್ಷ ಮಾತ್ರ!

ಬಣ್ಣಗಳನ್ನೇ ಸೂಕ್ಷ್ಮಾತಿಸೂಕ್ಷ್ಮ ಭಾವನೆಗಳ, ಸಂವೇದನೆಗಳ ಅಭಿವ್ಯಕ್ತಿ ಮಾಧ್ಯಮವನ್ನಾಗಿಸಿಕೊಂಡಿದ್ದ ವಾನ್‌ಗೋ ಹುಟ್ಟಿದ್ದು ನೆದರ್‌ಲ್ಯಾಂಡ್ಸ್‌ನ ಹಾಲೆಂಡಿನ, ಗ್ರೂಟ್ ಜುಂಡರ್ಟ್ ಎಂಬ ಹಳ್ಳಿಯಲ್ಲಿ. ಇವನ ತಂದೆ ಥಿಯೋಡೋರಸ್ ವಾನ್‌ಗೋ. ಆ ಹಳ್ಳಿಯಲ್ಲಿ ಕ್ರೈಸ್ತಧರ್ಮಬೋಧಕನಾಗಿದ್ದ. ವಿನ್ಸೆಂಟ್ ಧಾರ್ಮಿಕ, ಸಾಂ[ರದಾಯಿಕ ಪರಿಸರದಲ್ಲಿ ಬೆಳೆದವನಾಗಿದ್ದ. ಸ್ವಭಾವತಃ ಅವನು ಬಹಳ ಭಾವುಕ; ಆತ್ಮವಿಶ್ವಾಸವಂತೂ ಮೊದಲಿಗೆ ಅವನಲ್ಲಿ ಸಾಧ್ಯವಾಗಿರಲಿಲ್ಲ. ಏನೋ ಒಂದು ಬಗೆಯ ಹೆದರಿಕೆ; ಸೋಲುವೆನೆಂಬ ಭೀತಿ ಅವನಲ್ಲಿ ಕಾಡುತ್ತಲೇ ಇತ್ತು. ತಂದೆಯ ದೃಷ್ಟಿಯಲ್ಲಿ, ಅವನನ್ನು ಒಬ್ಬ ಪಾದ್ರಿಯನ್ನಾಗಿ ಮಾಡಿ, ವಾನ್‌ಗೋ ವಂಶದ ಯಶಸ್ವಿ ಧರ್ಮ ಬೋಧಕನನ್ನಾಗಿ ಮಾಡುವುದಾಗಿತ್ತು. ಆದರೆ ತಂದೆಯ ಪ್ರಯತ್ನಗಳೂ, ನಿರೀಕ್ಷೆಗಳೂ ಯಶಸ್ಸನ್ನು ಕಾಣಲೇ ಇಲ್ಲ. ಬದುಕುವುದಕ್ಕಾಗಿ ಯಾವುದಾದರೂ ದಾರಿಯನ್ನು ಹುಡುಕಿಕೊಳ್ಳಲೇ ಬೇಕಾಗಿದ್ದುದರಿಂದ ಕಡೆಗೆ, ವಿನ್ಸೆಂಟ್ ತನ್ನ ಚಿಕ್ಕಪ್ಪ, ದೊಡ್ಡಪ್ಪಂದಿರು ನಡೆಸುತ್ತಿದ್ದ ಆರ್ಟ್ ಗ್ಯಾಲರಿ ಗೂಪಿಲ್ ಕಂಪೆನಿಯಲ್ಲಿ ಗುಮಾಸ್ತನಾಗಿ ಕೆಲಸಕ್ಕೆ ಸೇರಿದ. ಆ ಕಾಲಕ್ಕೆ ಇಡೀ ಪ್ಯಾರಿಸಿನಲ್ಲಿ ವಾನ್‌ಗೋ ಕುಟುಂಬದವರು ಆಟ ಬಿಸಿನೆಸ್ಸಿನಲ್ಲಿಯೇ ಪ್ರಸಿದ್ಧರಾಗಿದ್ದರು. ವಿನ್ಸೆಂಟ್‌ನ ತಮ್ಮ ಥಿಯೋ ಪ್ಯಾರಿಸ್ ಶಾಖೆಯ ಮ್ಯಾನೇಜರ್ ಆಗಿ ಕೆಲಸಮಾಡುತ್ತಾ, ಅತ್ಯಂತ ಬುದ್ಧಿವಂತ, ಸಮರ್ಥ, ಯಶಸ್ವೀ ಆರ್ಟ್ ಡೀಲರ್ ಎಂಬ ಹೆಸರಿಗೆ ಪಾತ್ರನಾಗಿದ್ದ.

ವಿನ್ಸೆಂಟ್ ಮೊದಲು ಲಂಡನ್ ಶಾಖೆಯಲ್ಲಿದ್ದವನು. ಕಾರಣಾಂತರದಿಂದ, ಅದರಲ್ಲೂ ತಾನು ಪ್ರೀತಿಸಿದವಳ ಪ್ರೀತಿ ವಂಚನೆಯಿಂದ ಬೇಸತ್ತು, ಲಂಡನ್ ತೊರೆದು, ಥಿಯೋ ಇದ್ದ ಪ್ಯಾರಿಸಿಗೆ ಹೋದ. ಪ್ಯಾರಿಸಿನಲ್ಲಿನ ಅವನ ದಿನಗಳು ಅನೇಕ ರೀತಿಯಲ್ಲಿ ಮಹತ್ವದ್ದೆನಿಸಿದವು. ಇಲ್ಲಿಂದಲೇ ಅವನ ಪೈಂಟಿಂಗ್ ವೃತ್ತಿ ಪ್ರಾರಂಭವಾದದ್ದು. ಆದರೆ ಇದಕ್ಕೆ ಮೊದಲು ಅವನು ಕೇವಲ ಆರ್ಟ್ ಡೀಲರ್ ಆಗಿ ಕೆಲಸ ಮಾಡುತ್ತಿದ್ದ. ಸ್ವಲ್ಪ ಸಮಯದಲ್ಲಿಯೇ ಅವನಿಗೆ ಅದರಲ್ಲಿನ ಆಸಕ್ತಿ ಕಡಿಮೆಯಾಯಿತು. ಅದರಲ್ಲಿ ಅರ್ಥಹೀನತೆಯನ್ನು ಅನುಭವಿಸಿದ. ತಂದೆಯ ಇಚ್ಛೆಯನ್ನು ನಿರಾಕರಿಸಿದವನಿಗೆ, ಮತ್ತೆ ತಾನು ಧರ್ಮಬೋಧಕನಾಗಬೇಕೆಂಬ ಪ್ರಬಲವಾದ ಹುಚ್ಚಿಗೆ ಬಿದ್ದ. ಧರ್ಮಬೋಧಕನಾಗಿ, ಜನತೆಯ ಸೇವೆ ಮಾಡುವುದರಲ್ಲಿ ಜೀವನದ ಸಾರ್ಥಕತೆಯಿದೆ ಎಂದು ನಂಬಿ, ಅದಕ್ಕೆ ಬೇಕಾದ ಅರ್ಹತೆಯನ್ನು, ತತ್ವಶಾಸ್ತ್ರದ ಅಧ್ಯಯನದ ಮೂಲಕ ಪಡೆದುಕೊಂಡ. ಬೋರಿನೇಜಿನ ಗಣಿಕಾರ್ಮಿಕರ ದಾರುಣ ಬದುಕಿನಲ್ಲಿ, ಶಾಂತಿ, ನೆಮ್ಮದಿಗಳನ್ನು ತರುವ ಪ್ರಯತ್ನಕ್ಕೆ ಮುಂದಾದ. ಅವರ ಕಷ್ಟ ಸುಖಗಳಿಗೆ ಸ್ಪಂದಿಸುತ್ತಾ, ಹಲವು ರೀತಿಯಲ್ಲಿ ಅವರ ಸೇವೆ ಮಾಡುತ್ತಾ, ಅವರಲ್ಲಿ ಒಬ್ಬನಾಗಿ, ಅವರಂತೆಯೇ ಬದುಕಲು ಪ್ರಯತ್ನಿಸಿದ. ಇಂತಹ ಅವಧಿಯಲ್ಲಿಯೇ ಅವನೊಳಗಿನ ಸುಪ್ತ ಕಲಾವಿದ ಮೆಲ್ಲಮೆಲ್ಲನೆ ಹೊರಗೆ ಕಾಣಿಸಿಕೊಳ್ಳಲು ಶುರುವಾದ. ರೈತರ, ಕಾರ್ಮಿಕರ ಬದುಕಿನ ಬವಣೆಗಳನ್ನು, ಭಯಂಕರ ಬಡತನದ ದಾರುಣತೆಯನ್ನು ಪ್ರತ್ಯಕ್ಷವಾಗಿ ಕಂಡು ಅರ್ಥಮಾಡಿಕೊಂಡ. ಸಾಧ್ಯವಾಗಲೆಲ್ಲ ತನ್ನ ಸುಖ, ಹಸಿವುಗಳನ್ನು ಹತ್ತಿಕ್ಕಿ ಅವರ

ನೆರವಿಗೆ ಮುಂದಾಗುತ್ತಿದ್ದ. ಇಂತಹವರ ಬದುಕಿನೊಂದಿಗಿನ ಅನುಭವಗಳಿಗೆ, ರೇಖಾತ್ಮಕ, ವರ್ಣಾತ್ಮಕ ಅಭಿವ್ಯಕ್ತಿಯನ್ನು ಕೊಡುತ್ತಾ ಹೋದ. ಆದರೆ ಇಲ್ಲಿಯೂ ಶಾಶ್ವತವಾಗಿ ನಿಲ್ಲಲಿಲ್ಲ. ಅವನ ಅತ್ಯುತ್ಸಾಹದಲ್ಲಿನ ಅತಿರೇಕದ ನಡವಳಿಕೆ, ಧರ್ಮ ಬೋಧಕನ ಗೌರವ, ಪ್ರತಿಷ್ಠೆಗಳಿಗೆ ಧಕ್ಕೆಯುಂಟುಮಾಡುತ್ತದೆ ಎಂಬ ಆರೋಪದಿಂದ. ಅವನು ಅದರಿಂದಲೂ ಆಚೆ ಬರಬೇಕಾಯಿತು.

ಒಂದು ರೀತಿಯಿಂದ, ಇದರಿಂದ ಅವನಿಗೆ ಒಳ್ಳೆಯದಾಯಿತು. ಏನನ್ನಾದರೂ ಸಾಧಿಸಿ, ಈ ಲೋಕಕ್ಕೆ ಉಳಿಸಿಹೋಗಬೇಕೆಂಬ ಅವನಲ್ಲಿನ ಅದಮ್ಯ ತುಡಿತ, ಜೊತೆಗೆ ತಮ್ಮ ಥಿಯೋನ ನಿರಂತರ ಒತ್ತಡಗಳಿಂದ ಕಲಾವಿದನಾಗುತ್ತ ಹೆಜ್ಜೆ ಹಾಕಿದ. ಅವನ ಸ್ವಂತ ಪ್ರತಿಭೆಯಿಂದ ಮೂಡಿದ ರೇಖಾಚಿತ್ರಗಳು, ವರ್ಣಚಿತ್ರಗಳು, ಲ್ಯಾಂಡ್‌ಸ್ಕೇಪ್‌ಗಳು, ಸ್ಟಡೀಸ್‌ಗಳು – ಅವನಿಗೆ ಪೂರ್ತಿಯಾಗಿ ತೃಪ್ತಿ ಕೊಡಲಿಲ್ಲ. ಎಷ್ಟೇ ಸ್ವಪ್ರತಿಭೆಯಿದ್ದರೂಮ ಕಲೆಯಲ್ಲಿ ಪ್ರಾಥಮಿಕ ಪಾಠಗಳು ತೀರಾ ಅಗತ್ಯವೆನಿಸಿತು. ತಂದೆಯ ಅನುಮಾನ, ತನ್ನಲ್ಲಿನ ಅಧೈರ್ಯಗಳು, ತಮ್ಮನ ಭರವಸೆಯ ಮಾತುಗಳಿಂದ ಅವನ ಆರ್ಥಿಕ ನೆರವಿನಿಂದ ಸ್ವಲ್ಪಮಟ್ಟಿಗೆ ದೂರವಾದವು.

೧೮೮೧ರಲ್ಲಿ ಅವನ ಇಪ್ಪತ್ತೇಳನೇ ವಯಸ್ಸಿನಲ್ಲಿ ತಂದೆ ತಾಯಿಯರ ಜೊತೆಯಲ್ಲಿ ಎಟ್ಟೆನ್‌ನಲ್ಲಿ ಒಂದಷ್ಟು ಕಾಲವಿದ್ದ. ಇದೇ ಅವಧಿಯಲ್ಲಿ, ಸ್ಕೆಚ್‌ಗಳನ್ನು ಮಾಡುವ ವಿಭಿನ್ನ ತಂತ್ರ, ಶೈಲಿಗಳಲ್ಲಿ ಪ್ರಯೋಗಗಳನ್ನು ನಡೆಸಿದ. ವಿಭಿನ್ನ ವಸ್ತುಗಳ ಸಮರ್ಥವಾದ ರೀತಿಯಲ್ಲಿ ಸ್ಕೆಚ್ ಮಾಡಲು ಮತ್ತು ಅವುಗಳ ಮೇಲೆ ಪ್ರಭುತ್ವ ಸಾಧಿಸಲು ಅನಿವಾರ್ಯವಾದ ಷೇಡಿಂಗ್, ಅನಾಟಮಿ (ಶರೀರರಚನಾಶಾಸ್ತ್ರ) ಮೊದಲಾದವುಗಳ ಅಧ್ಯಯನ, ಪ್ರಯೋಗಗಳನ್ನು ಮಾಡಲು ತೊಡಗಿದ. ಬೋರಿನೇಜ್‌ನಲ್ಲಿ ಇದ್ದಾಗ ಗ್ರಾಮೀಣ ಬದುಕನ್ನು ಅವನು ಚಿತ್ರಕೃತಿಗಳ ಆದ್ಯತೆಯಾಗಿಸಿಕೊಂಡಿದ್ದರೆ, ಈಗ ಅವನ ಆಸಕ್ತಿ ಫಿಗರ್ಸ್ (ಮಾನವಾ ಕೃತಿಗಳು) ಕಡೆಗೆ ಹೊರಳಿತು. ರೂಪದರ್ಶಿಗಳನ್ನು ಮುಂದಿರಿಸಿಕೊಂಡು ಹಲವು ಭಂಗಿಗಳಲ್ಲಿ ಚಿತ್ರಗಳನ್ನು ಮೂಡಿಸುತ್ತಾ ಹೊರಟ. ಆ ಕೃತಿಗಳ ರಚನೆಯಲ್ಲಿ ಬಗೆ ಬಗೆಯ ನೈಪುಣ್ಯತೆಗಳನ್ನು ರೂಢಿಸಿಕೊಂಡ. ೧೮೮೧ರ ಕಡೆಯ ದಶಕಗಳ ಸುಮಾರಿನಲ್ಲಿ ಹೇಗ್ ತಲುಪಿ, ಅಲ್ಲಿ ತನ್ನ ತಾಯಿಕಡೆಯ ಸಂಬಂಧದಿಂದ ಕಸಿನ್ ಆಗಿದ್ದ, ಅತ್ಯಂತ ಯಶಸ್ವಿ ಕಲಾವಿದನಾದ ಮಾವ್ ಬಳಿಗೆ ಹೋಗಿ, ಅವನಿಂದ ಕೆಲವು ಪಾಠಗಳನ್ನು ಕಲಿತ. ಆದರೆ ಅದೇ ಸಮಯದಲ್ಲಿ ವೇಶ್ಯೆಯೊಬ್ಬಳ ಸ್ನೇಹ, ಸನಿಹಗಳಿಂದಾಗಿ, ವಿನ್ಸೆಂಟ್ ಮಾವ್‌ನ ಸ್ನೇಹದಿಂದ ದೂರವಾದ. ಈ ಅನೈತಿಕ ಸಂಬಂಧ, ಅವನ ತಂದೆತಾಯಿ, ಬಂಧುಗಳು, ಸ್ನೇಹಿತರೂ ಕೂಡ ಅಸಮಾಧಾನಗೊಳ್ಳುವಂತೆ ಮಾಡಿತು. ಆದರೆ ಇದ್ಯಾವುದಕ್ಕೂ ಹೆದರೆ, ತಾನು ಹಂಬಲಿಸುತ್ತಿದ್ದ ಹೆಣ್ಣಿನ ಪ್ರೀತಿ ಸನಿಹಗಳು ಅವಳಿಂದ ದೊರೆತು, ಅವನು ಪ್ರಚಂಡ ಜೀವನೋತ್ಸಾಹಿಯಾದ. ಮದುವೆಯಾಗುವ ಮನಸ್ಸು ಮಾಡಿದ; ಮಡದಿಯಂತೆಯೇ ನೋಡಿಕೊಂಡು ಅವಳೆಲ್ಲ ಕಷ್ಟಗಳಲ್ಲಿ ಪಾಲುದಾರನಾದ. ಆದರೆ ಅವನ ಕಿತ್ತುತಿನ್ನುವ

ಆರ್ಥಿಕ ಬಡತನ, ಅವಳ ನಿಷ್ಠೆಯನ್ನು ಉಳಿಸಿಕೊಡಲಿಲ್ಲ. ಒಂದಷ್ಟು ದಿನ ಅವಳನ್ನು ಮುಫತ್ತಾಗಿ ಮಾಡೆಲ್ ಮಾಡಿಕೊಂಡದ್ದಷ್ಟೇ ಅವನಿಗೆ ಲಾಭವಾಯಿತು.

ಸಿಯೆನ್‌ಳ ನಡವಳಿಕೆ ಅವನಿಗೆ ಅಸಹನೀಯವೆನಿಸಿ, ಅವಳಿಂದ ದೂರವಾದ. ಅವನಲ್ಲಿ ಉತ್ಸಾಹ ಆಸಕ್ತಿಗಳು ಕಡಿಮೆಯಾದವು. ಜೊತೆಗೆ ಆಕೃತಿಗಳ ರಚನೆಗೆ ಮಾಡೆಲ್‌ಗಳೂ ಸಿಗದಾದರು. ಮತ್ತೆ ಹೆತ್ತವರ ಬಳಿಗೆ ಹೋದ. ಇಲ್ಲಿ ಅವನಿಗೆ ಫ಼ೇನ್ ಫ್ರಾಂಕ್ವಾ ಮತ್ತು ಮಿಲ್ಲೆಟ್‌ರ ಪೈಂಟಿಂಗ್ಸ್ ಪರಿಚಯವಾಯಿತು. ಮಿಲ್ಲೆಟ್ ಅಷ್ಟು ಹೊತ್ತಿಗೆ ಆಗಲೇ, ಕೃಷಿಕರ ಜೀವನವನ್ನು ಬಿಂಬಿಸುವ ಕಲಾಕೃತಿಗಳಿಂದಾಗಿ ಯೂರೋಪಿನಾದ್ಯಂತ ಹೆಸರಾಗಿದ್ದ. ವಾನ್‌ಗೋನ ಆಸಕ್ತಿಯ ವಸ್ತುವೂ ಇದೇ ಆಗಿದ್ದುದರಿಂದ, ಮಿಲ್ಲೆಟ್‌ನ ಕಲಾಕೃತಿಗಳೇ ಅವನಿಗೆ ಮಾದರಿಗಳಾದವು. ೨೯ನೇ ವಯಸ್ಸಿಗೆ, ವಿನ್ಸೆಂಟ್ ಅಲ್ಲಿಯೇ ಹತ್ತಿರದಲ್ಲಿದ್ದ ಕ್ಯಾಥೋಲಿಕ್ ಚರ್ಚಿನ ಒಂದು ಭಾಗವನ್ನು ಬಾಡಿಗೆಗೆ ಪಡೆದು ತಾತ್ಕಾಲಿಕವಾಗಿ ತನ್ನದೇ ಆದ ಸ್ಟುಡಿಯೋ ಒಂದರ ವ್ಯವಸ್ಥೆ ಮಾಡಿಕೊಂಡ. ಪ್ರಯತ್ನಪೂರ್ವಕವಾಗಿ ಆಕೃತಿಗಳನ್ನು ಮೂಡಿಸುವಲ್ಲಿ ಪ್ರಯೋಗಗಳಿಗಾಗಿ ತುಡಿಯುತ್ತಿದ್ದ. ಅದರಲ್ಲಿಯೂ ಮಣ್ಣು ಮನುಷ್ಯನ ಅನನ್ಯ ಸಂಬಂಧಕ್ಕೆ ಪ್ರತೀಕವಾಗುವ ರೈತರ ಕಷ್ಟ ಜೀವನವನ್ನು ಅಲ್ಲದೆ ಕಷ್ಟಪಡುವ ಅವರ ದೇಹಗಳ ಅಂಗಾಂಗಗಳನ್ನು ಚಿತ್ರಿಸುವಲ್ಲಿ ಮಹತ್ವವನ್ನು ಪಡೆಯುವ ಸಾಧನೆಯಲ್ಲಿ ನಿರಂತರ ತೊಡಗಿಸಿಕೊಳ್ಳುತ್ತಿದ್ದ. ಏಕಾಕೃತಿಗಳಲ್ಲದೆ ಸಾಮೂಹಿಕ ಅಥವಾ ಗುಂಡಿನಲ್ಲಿರುವ ಆಕೃತಿಗಳನ್ನೂ ಸೃಷ್ಟಿಸಲು ಮುಂದಾದ. ಲ್ಯಾಂಡ್‌ಸ್ಕೇಪ್‌ಗಳಾಗಲೀ, ಬೇರೆ ಯಾವುದೇ ಆಗಲಿ ಪೈಂಟಿಂಗ್‌ನ ಪರಿಣಾಮಕಾರಿತೆಗಾಗಿ ಆಕೃತಿಗಳಿಗೆ ಎಲ್ಲಿಯಾದರೂ ಇಡೀ ಕ್ಯಾನ್‌ವಾಸ್‌ನಲ್ಲಿ ಅವಕಾಶ ಇರಲೇಬೇಕೆಂಬುದು ಅವನ ಬಲವಾದ ನಂಬಿಕೆಯಾಗಿತ್ತು; ಬೇರೆಯವರಲ್ಲಿಯೂ ಇಂಥದ್ದೇ ಬಗೆಯಲ್ಲಿ ಇರಬೇಕೆಂದೂ ಒತ್ತಾಯಿಸುತ್ತಿದ್ದ. ಈ ನಿಟ್ಟಿನಲ್ಲಿ ಅವನು ನಡೆಸಿದ ಪ್ರಯೋಗದ ಪರಿಣಾಮವಾಗಿ ಮೂಡಿದ, ೧೮೮೫ರ, `Potato eaters' (ಆಲೂಗಡ್ಡೆ ತಿನ್ನುವವರು) ಎಂಬುದು ಅವನ ಬಹುಮುಖ್ಯವೂ, ಜಗದ್ವಿಖ್ಯಾತವೂ ಆದ ಕಲಾಕರತಿ ಎನಿಸಿಕೊಂಡಿತು. ಒಂದು ಬಡರೈತ ಕುಟುಂಬದ ಸದಸ್ಯರೆಲ್ಲರೂ ಬೇಯಿಸಿದ ಬಿಸಿ ಬಿಸಿ ಆಲೂಗಡ್ಡೆ ತಿನ್ನುತ್ತಾ, ಮೇಜಿನ ಸುತ್ತ ಕುಳಿತಿರುವ ಚಿತ್ರ ಇದಾಗಿದೆ. ಈ ಚಿತ್ರದಲ್ಲಿನ ದಟ್ಟ ಸ್ವಭಾವಿಕತೆ, ವರ್ಣ ಸಂಯೋಜನೆಗಳೇ ಅದ್ಭುತವೆನಿಸುವಂತಹ ರೀತಿಯಲ್ಲಿವೆ. ಆದರೆ ಇಷ್ಟು ಸಮರ್ಥವಾಗಿ ಚಿತ್ರಸಿದ, ಜಗತ್ತೇ ಕೊಂಡಾಡುವ ಈ ಕಲಾಕೃತಿ ಅವನು ಬದುಕಿದ್ದಾಗ ಅವನಿಗೆ ಯಾವುದೇ ರೀತಿಯಲ್ಲಿ ಮೆಚ್ಚುಗೆಯನ್ನು ಗಳಿಸಿಕೊಡಲಿಲ್ಲ. ಅವನಿಗೆ ಅದು ತನ್ನ ಸೋಲು ಎಂಬ ಭಾವನೆಯುಂಟಾಗಿ, ತನಗೆ ಇನ್ನೂ ಈ ದಿಕ್ಕಿನಲ್ಲಿ ವೃತ್ತಿಪರವಾದ ತಾಂತ್ರಿಕ ತರಬೇತಿ ಬೇಕಾಗಿದೆಯೆನಿಸಿ, ಅದೇ ವರ್ಷ ಆ್ಯಂಟ್‌ವರ್ಪ್ ಅಕಾಡೆಮಿಗೆ ಸೇರಿಕೊಂಡ. ಅಲ್ಲಿ ಅವನಿಗೆ ಪೀಟರ್‌ಪಾಲ್ ರೂಬೆನ್ಸ್ ಮತ್ತು ಜಪಾನಿ ಕಲಾವಿದರ ಕಲಾತಂತ್ರಜ್ಞತೆಯ ಪರಿಚಯವಾಯಿತು. ಪರಿಚಯ ಅವನ ಕಲಾದೃಷ್ಟಿಯ ಮೇಲೂ ಪ್ರಭಾವ ಬೀರಿತು. ಹಲವಾರು ಜಪಾನಿ ಪ್ರಿಂಟ್‌ಗಳನ್ನು ನಕಲು ಕೂಡ ಮಾಡಿದ. ಅವನ ಶೈಲಿಯಲ್ಲಿಯೂ ಸಾಕಷ್ಟು ಬದಲಾವಣೆಯಾಯಿತು.

ಅಲ್ಲಿಂದ ೧೮೮೬ರ ಪ್ರಾರಂಭಕ್ಕೇ ಪ್ಯಾರಿಸಿಗೆ ಹೋದ. ಥಿಯೋನೊಂದಿಗೆ ಅಲ್ಲಿಯೇ ಉಳಿದುಕೊಂಡ. ಅನೇಕ ಚಾರಿತ್ರಿಕ ಮಹತ್ವದ ಸನ್ನಿವೇಶಗಳು ಇದೇ ಸಮಯದಲ್ಲಿ ನಿರ್ಮಾಣವಾದವು. ಇದು ಅವನ ಪೈಂಟಿಂಗ್ ಚಟುವಟಿಕೆಗಳ ಗೂಡಾಯಿತು. ಇಲ್ಲಿಗೆ ಬಂದ ಮೇಲಂತೂ ವಿನ್ಸೆಂಟ್‌ಗೆ ಆ ಕಾಲದ ಮಹಾನ್ ಯುವಕಲಾವಿದರ ದಂಡೇ ಪರಿಚಯವಾಯಿತು. ಇಂಥವರಲ್ಲಿ ಮೊನೆಟ್, ಮಾನೆಟ್, ಡೆಗಾಸ್, ಪಿಸ್ಸಾರೋ, ಸೆಜ಼ಾನ್ನೆ ಸ್ಯುರಾತ್, ಲಾಟ್ರೆಕ್, ಗಾಗಿನ್ ಮೊದಲಾದ ಇನ್ನೂ ಅನೇಕ ಕಲಾವಿದರ ಪರಿಚಯ ಒಡನಾಟಗಳು ಸಾಧ್ಯವಾದವು. 'ಇಂಪ್ರೆಸನಿಸಂ, ಇಂಪ್ರೆಸನಿಷ್ಟರು – ಆ ಕಲಾಶೈಲಿ, ಕಲಾವಿದರುಗಳನ್ನು ಅರ್ಥಮಾಡಿಕೊಳ್ಳುವ ಅವಕಾಶ ಸಿಕ್ಕಿತು. ಬಣ್ಣಗಳ ವಿನ್ಯಾಸ, ಷೇಡಿಂಗ್ ಮುಂತಾದವುಗಳ ಸ್ಪಷ್ಟ ಕಲ್ಪನೆ ಉಂಟಾಯಿತು `Potato eaters' ಸೃಷ್ಟಿ ಮಾಡುವಾಗ ಬಳಸಿದ್ದ ಗಾಢಬಣ್ಣಗಳು, ಲೇಪದಂತೆ ಬಳಸುತ್ತಿದ್ದ ಕ್ರಮ – ಇವೆಲ್ಲವೂ ಹಳೇಕಾಲದ್ದೆನಿಸಿತು. ಪ್ರಕಾಶಮಾನವಾದ, ಜೀವಂತವಾಗಿ, ಕಾಣುವಂತಹ ರೀತಿಯ ಬಣ್ಣಗಳನ್ನು 'ಇಂಪ್ರೆಷನಿಸಂ' ಶೈಲಿಯಲ್ಲಿ ಪ್ರಯೋಗ ಮಾಡಲು ತೊಡಗಿದ. ಹಾಗೆಯೇ ಜಪಾನಿ ಕಲಾಕೃತಿಗಳಲ್ಲಿನ ಕಲಾಶೈಲಿಯನ್ನು, ತಂತ್ರ ವಿನ್ಯಾಸವನ್ನು ಅಧ್ಯಯನ ಮಾಡತೊಡಗಿದ. ತಮ್ಮ ಥಿಯೋ ಮತ್ತು ಗೆಳೆಯರಾದ ಪಾಲ್ ಗಾಗಿನ್, ಕ್ಯಾಮಿಲ್ ಪಿಸ್ಸಾರೋ, ಕ್ಲಾಡ್‌ಮೊನೆಟ್ ಎಮಿಲಿ ಬರ್ನಾಟ್ ಮೊದಲಾದವರ ಜೊತೆಗೂಡಿ ಒಂದು ಆರ್ಟ್ಸ್ ಸ್ಕೂಲ್ ತೆಗೆಯಬೇಕೆಂದು ಯೋಚಿಸಿದ. ಈ ಯೋಚನೆಯೊಂದಿಗೆ ೧೮೮೮ರಲ್ಲಿ ಆರ್ಲೆ ಎಂಬ ಪ್ರದೇಶಕ್ಕೆ ಹೋದ. ದಿನದಿನಕ್ಕೆ ಅವನಲ್ಲಿ ಆತ್ಮವಿಶ್ವಾಸ ಹೆಚ್ಚಿತು. ಆಧುನಿಕ ಕಲೆಗೆ ತನ್ನದೇ ಆದ ರೀತಿಯ ವಿಶಿಷ್ಟ ಶೈಲಿಯನ್ನು ಕೊಡುಗೆಯಾಗಿ ನೀಡಲು ತಾನು ಸಮರ್ಥ ಎಂದು ಭಾವಿಸಿಕೊಂಡ.

ವಿನ್ಸೆಂಟ್ ಆರ್ಲೆಯಲ್ಲಿ ಸ್ವಲ್ಪ ಸಮಯ ಕಳೆಯುತ್ತಿದ್ದಂತೆ ಪಾಲ್‌ಗಾಗಿನ್ ಕೂಡಾ ಅಲ್ಲಿಗೆ ಬಂದು ಜೊತೆಯಾದ. ಇಬ್ಬರೂ ಒಂದೇ ಸ್ಟುಡಿಯೋದಲ್ಲಿ ತಮ್ಮ ತಮ್ಮದೇ ಆದ ತತ್ವ, ತರ್ಕಗಳಿಗೆ ಅನುಗುಣವಾಗಿ ಕ್ಯಾನ್‌ವಾಸ್‌ಗಳನ್ನು ಮಾಡತೊಡಗಿದರು. ಗಾಗಿನ್ ಶ್ರೀಮಂತ ಬದುಕನ್ನು ಬದುಕಿದವನು ಎಂದು ತಿಳಿದಿದ್ದರಿಂದ, ಅವನು ಆರ್ಲೆಯಲ್ಲಿ ಯಾವುದೇ ರೀತಿಯಲ್ಲಿ ಕಷ್ಟ ಪಡಬಾರದೆಂದು, ಬಹಳ ಆಸಕ್ತಿಯಿಂದ, ಪ್ರೀತಿಯಿಂದ, ಅವನಿಗೆ ಅನುಕೂಲವಾಗುವ ರೀತಿಯಲ್ಲಿ ಕೊಠಡಿಯನ್ನು ಸಜ್ಜುಗೊಳಿಸಿದ. ಬೆಲೆಬಾಳುವ ಪೀಠೋಪಕರಣಗಳನ್ನು ತಂದಿರಿಸಿದ. ಗಾಗಿನ್‌ನ ಕೊಠಡಿಯನ್ನು ಅಲಂಕರಿಸಲೆಂದೇ, ಅವನಿಗಾಗಿಯೇ 'ಸನ್‌ಫ್ಲವರ್ಸ್' ಪೈಂಟಿಂಗ್ ಮಾಡಿದ, ಈ ಸನ್‌ಫ್ಲವರ್ ಕಲಾಕೃತಿಯೇ ಮುಂದೆ ವಿನ್ಸೆಂಟ್‌ನನ್ನು ಗುರುತಿಸಿಕೊಳ್ಳುವ ಅನನ್ಯ ಕಲಾಕೃತಿಗಳಲ್ಲಿ ಒಂದು ಮಹತ್ವದ ಕಲಾಕರತಿಯಾಗಿ ಪರಿಣಮಿಸಿತು.

ಅವನ ತಲೆಯಲ್ಲಿ ಇನ್ನೂ ಇನ್ನೂ ಮಹತ್ವದ್ದಾದ್ದನ್ನು ಮಾಡಬೇಕೆಂಬ ಆಲೋಚನೆ ಸುಳಿಯುತ್ತಿದ್ದರೂ ಅದನ್ನು ಕಂಡುಕೊಳ್ಳಲು ಅವನಿಂದ ಸಾಧ್ಯವಾಗಲಿಲ್ಲ. ಇದೇ ಸಮಯದಲ್ಲಿ ದೈಹಿಕ, ಮಾನಸಿಕ ಅಸ್ವಸ್ಥತೆ ಅವನನ್ನು ಒಬ್ಬ ವಿಚಿತ್ರ ವ್ಯಕ್ತಿಯನ್ನಾಗಿ ಜಗತ್ತಿನ ಕಣ್ಣಿಗೆ ತೋರಿಸಿತು. ಅವನ ಮಾತು, ನಡವಳಿಕೆ, ಆಕ್ರಮಣಕಾರಿ ಪ್ರವೃತ್ತಿ,

ಭಾವಾವೇಶ ಅವನ ಸುತ್ತಲಿದ್ದವರಲ್ಲಿ ಭೀತಿ ಹುಟ್ಟಿಸಿತು. ಆಗಾಗ ಅವನನ್ನು ಕಾಡುತ್ತಿದ್ದ ಮೂರ್ಛೆರೋಗ, ಮನೋವಿಕಾರದಿಂದ ಉಂಟಾಗುತ್ತಿದ್ದ ಭಯಂಕರ ಉದ್ರಿಕ್ತತೆ, ಮುತ್ತಿ ಕಾಡುತ್ತಿದ್ದ ಭ್ರಮೆಗಳು ಮೊದಲಾದವುಗಳಿಂದ, ಸಂಪೂರ್ಣವಾಗಿ ಜರ್ಝರತನಾಗಿ ಹೋಗಿದ್ದ. ಭಾವಾವೇಶದ ಅತಿರೇಕದ ಸ್ಥಿತಿಯಲ್ಲಿ ಯಾರಿಗೆ ಏನು ಆಘಾತಮಾಡಲು ಮುಂದಾಗುತ್ತಿದ್ದುದೇ ಅಲ್ಲದೆ, ತನ್ನ ಮೇಲೂ ಸಿಟ್ಟಾಗಿ ತನ್ನನ್ನೇ ಹಿಂಸಿಸಿಕೊಳ್ಳುತ್ತಲೋ, ಘಾತಮಾಡಿಕೊಳ್ಳುತ್ತಲೋ ಹೊರಡುತ್ತಿದ್ದ. ಇಂತಹ ವರ್ತನೆ, ಮನಃಸ್ಥಿತಿಗಳಿಂದಲೇ ಒಮ್ಮೆ ಪಾಲ್‌ಗಾಗಿನ್‌ನನ್ನು ಚಾಕುವಿನಿಂದ ಚುಚ್ಚಿ ಸಾಯಿಸಲು ಹೊರಟಿದ್ದ. ಮತ್ತೊಮ್ಮೆ ತನ್ನ ಕಿವಿಯನ್ನೇ ಕತ್ತರಿಸಿಕೊಂಡು ಬಿಟ್ಟ. ಅಲ್ಲದೆ ಅದನ್ನೇ ತನ್ನ ಪ್ರೇಯಸಿಗೆ ಉಡುಗೊರೆಯಾಗಿ ನೀಡಿದ. ವೈದ್ಯರುಗಳ ಸಲಹೆ ಮೇರೆಗೆ, ಅವನ ಮನಸ್ಸಿನ ಸ್ವಸ್ಥತೆ, ಶಾಂತಿ, ನೆಮ್ಮದಿಗಳು ಸಾಧ್ಯವಾಗಲು, ಸೈಂಟ್‌ರೆಮಿ ಎಂಬ ಆಶ್ರಮಕ್ಕೆ (ಚಿಕಿತ್ಸಾಲಯ) ಸೇರಿಸಲಾಯಿತು.

ಸೈಂಟ್‌ರೆಮಿಯಲ್ಲಿ ಸ್ವಲ್ಪ ಮಟ್ಟಿನ ಮಾನಸಿಕ ನೆಮ್ಮದಿ ದೊರೆತಿದ್ದರ ಜೊತೆಗೆ, ವರ್ಷಗಟ್ಟಲೆ ಮಾಡಲು ಸಾಧ್ಯವಾಗದಷ್ಟು, ಕ್ರಿಯಾಶೀಲ, ಸೃಜನಶೀಲ ಚಟುವಟಿಕೆಗಳಿಗೆ ದಾರ್ಥಿಯಾಯಿತು. ಅವನ ಸಮಗ್ರ ಕಲಾಕೃತಿಗಳ ಸಂಖ್ಯೆಯಲ್ಲಿನ ಬಹುಪಾಲು ಕಲಾಕೃತಿಗಳು ಸೃಷ್ಟಿಯಾದದ್ದು ಇಲ್ಲಿಯೇ! ಈ ಅವಧಿಯಲ್ಲಿಯೇ!! ದಿನಕ್ಕೊಂದರಂತೆ ಕ್ಯಾನ್‌ವಾಸ್‌ಗಳನ್ನು ಮಾಡುತ್ತಾ ಹೋದ. ಹಲವಾರು ಪೋರ್ಟ್‌ರೈಟ್ಸ್ (ಭಾವಚಿತ್ರಗಳು)ಗಳನ್ನು ಸೃಷ್ಟಿಸಿದ. ಇಲ್ಲಿದ್ದಾಗ ಸೃಷ್ಟಿಸಿದ ಚಿತ್ರಗಳಲ್ಲಿ, ಅವನ ಆಗಿನ ಮನಃಸ್ಥಿತಿಯ ಲಕ್ಷಣಗಳು ಸೂಕ್ಷ್ಮವಾಗಿ ಬಿಂಬಿತವಾಘಿವೆ ಎನ್ನುವುದು ಕಲಾವಿಮರ್ಶಕರ ಅಭಿಪ್ರಾಯ. ಇಷ್ಟೆಲ್ಲವನ್ನೂ ಮಾಡಿದರೂ ಅವನಿಗೆ, ತನ್ನ ಬದುಕೆಲ್ಲ ವ್ಯರ್ಥ. ತಾನು ಭಯಂಕರವಾಗಿ ಸೋತಿದ್ದೇನೆ ಎನ್ನುವ ಭ್ರಮೆ. ಅವನನ್ನು ಒಳಗಿಂದೊಳಗೇ ತಿನ್ನುತ್ತಿತ್ತು. ತನ್ನ ಅಸ್ತಿತ್ವಕ್ಕೆ ಅರ್ಥವಿಲ್ಲ', ಬದುಕಿ ಉಳಿಯಬೇಕಾದ ಅಗತ್ಯವಿಲ್ಲ ಎನ್ನುವ ಪ್ರಜ್ಞೆಯ ಎಚ್ಚರ, ಆತ್ಮಘಾತಕ್ಕೆ ಪ್ರಚೋದಿಸುತ್ತಿದ್ದುದರಿಂದ, ಸೈಂಟ್-ರೆಮಿ-ದ ಪ್ರೊವೆನ್ಸ್‌ನಿಂದ ಹಿಂತಿರುಗಿದ ಮೇಲೆ, ೧೮೯೦ರಲ್ಲಿ ಒಂದು ದಿನ, ಹೊರಗೆ ಹೊಲದಲ್ಲಿ ಅಡ್ಡಾಡುತ್ತಿರುವಾಗ ಗುಂಡಿಕ್ಕಿ ಕೊಂದುಕೊಳ್ಳುತ್ತಾನೆ. ಆದರೆ, ಡಾ॥ ಗಾಷೆಟ್‌ರ ನೆರವಿನಿಂದ ಬದುಕುಳಿದು ಚಿಕಿತ್ಸೆ ಪಡೆಯುತ್ತಾನಾದರೂ, ಎರಡು ದಿನಗಳ ನಂತರ ಸಾವನ್ನಪ್ಪುತ್ತಾನೆ. ವಿನ್ಸೆಂಟ್‌ನ ಸಾವು ಅವನ ಕಲಾವಿದ ಗೆಳೆಯರಿಗೆ ದಿಗ್ಭ್ರಮೆ ಹುಟ್ಟಿಸುತ್ತದೆ. ಅವನಿಗಾಗಿ ಕಣ್ಣೀರಿಟ್ಟು ಬೀಳ್ಕೊಡುತ್ತಾರೆ.

ವಿನ್ಸೆಂಟ್‌ನ ಸಾವಿನಿಂದ ಹೆಚ್ಚು ಆಘಾತಕ್ಕೆ ಒಳಗಾದದ್ದು ಅವನ ತಮ್ಮ ಥಿಯೋ. ಮೊದಲಿನಿಂದಲೂ ಅವನ ಆರೋಗ್ಯ ಸರಿಯಿರಲಿಲ್ಲ. ಅಂತಹುದರಲ್ಲಿ ಅಣ್ಣನ ಸಾವಿನ ಸುದ್ದಿ, ಅವನನ್ನು ಪೂರ್ತಿಯಾಗಿ ಕುಸಿದು ಹೋಗುವಂತೆ ಮಾಡುತ್ತದೆ. ಅಗಲಿಕೆಯ ನೋವು, ಅನಾರೋಗ್ಯಗಳು ಅತಿಶೀಘ್ರದಲ್ಲಿ, ಕೇವಲ ಆರೇ ತಿಂಗಳ ಅವಧಿಯಲ್ಲಿ, ಅಣ್ಣನ ಹಾದಿಗೆ ಸಾಗಿಸುತ್ತದೆ.

ಇಂದು ವಿನ್ಸೆಂಟ್‌ನ ಕಲಾಕೃತಿಗಳು ಉಳಿದಿವೆಯೆಂದರೆ, ಅದು ಥಿಯೋನ ಪ್ರಯತ್ನದಿಂದ. ವಿನ್ಸೆಂಟ್‌ನ ಪ್ರತಿಭೆಯಲ್ಲಿ, ಮುಂದೆ ಎಂದಾದರೂ ಜಗತ್ತಿನಲ್ಲಿ ಖ್ಯಾತಿ ಪಡೆದೇ ಪಡೆಯುತ್ತಾನೆಂಬ ಭರವಸೆಯಿರಿಸಿಕೊಂಡು ಬಹಳ ಜಾಗರೂಕತೆಯಿಂದ, ಅವನ ಎಲ್ಲ ಕಲಾಕೃತಿಗಳನ್ನು ಕಾಯ್ದುಕೊಂಡು ಬಂದು ಮನುಕುಲಕ್ಕೆ ದಕ್ಕುವಂತೆ ಮಾಡಿದ್ದರ ಜೊತೆಗೆ ಅವನ ಮಡದಿ ಜೊಹಾನ್ನಳ ಪ್ರಯತ್ನದಿಂದ, ಅವನು ಬದುಕಿದ್ದ ಕಾಲದಲ್ಲಿ ಅವನಿಗೆ ದೊರೆಯದೆ ಹೋದ ಕೀರ್ತಿ, ಪ್ರತಿಷ್ಠೆಗಳು, ದೊರಕುವಂತಾಗಿದೆ. ಅವನ ಎಲ್ಲ ಕಲಾಕೃತಿಗಳ ಜಗತ್ತಿನಾದ್ಯಂತ ಲಭ್ಯವಾಗುವಂತೆ ಮಾಡಿದ್ದಾಳೆ.

ವಿನ್ಸೆಂಟ್‌ನ ದುರಂತದ ಬದುಕು, ಯಾತನಾಮಯ ಬದುಕು, ಬದುಕಿನ ಸಂಘರ್ಷಗಳು ಕವಿ, ಕಲಾವಿದರನೇಕರಿಗೆ ಸ್ಫೂರ್ತಿ ನೀಡುವಂತಾಗಿದೆ. ವಿನ್ಸೆಂಟ್‌ನ ಪೈಂಟಿಂಗ್‌ಗಳ ಅನನ್ಯತೆ, ಶೈಲಿ ತಂತ್ರಗಳು ಕಲಾಜಗತ್ತಿನ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿದೆ. ಅವನ ಪ್ರಭಾವದ ತೀವ್ರತೆ, ಪರಿಣಾಮಗಳು ಬೆಚ್ಚಿ ಬೀಳುವಂತೆನಿಸುತ್ತದೆ.

ವಿನ್ಸೆಂಟ್‌ನ ಜೀವನಾವಧಿಯಲ್ಲಿ ಕೇವಲ ಒಂದೇ ಒಂದು ಕಲಾಕೃತಿ ಮಾರಾಟವಾಗಲು ಮಾತ್ರ ಸಾಧ್ಯವಾದದ್ದು, ಇಂದು ಅವನ ಕಲಾಕೃತಿಗಳ ಪ್ರಿಂಟ್‌ಗಳ ನೂರಾರು ಮಿಲ್ಲೆಯನ್ ಡಾಲರ್ಸ್‌ಗಳಿಗೆ ಮಾರಾಟವಾಗುತ್ತಿರುವುದನ್ನು ನೋಡಿದರೆ, ಅದೊಂದು ಪವಾಡವೇ ಆಗಿರುವಂತೆನಿಸುತ್ತದೆ. ೧೮೫೩ ರಿಂದ ೧೮೯೦ ರವರೆಗೆ, ಅದೂ ಕೇವಲ ೩೭ ವರ್ಷ ಮಾತ್ರವೇ ಬದುಕಿದ್ದ ಅಲ್ಪಾಯುಷಿ ವಿನ್ಸೆಂಟ್ ವಾನ್‌ಗೋ, ತನ್ನ ಕಲೆಯ ಮೂಲಕ ಎಂದೆಂದಿಗೂ ಚಿರಂಜೀವಿಯಾಗಿ ಬದುಕಿದ್ದಾನೆ.

ವಿನ್ಸೆಂಟ್‌ನ ಅದ್ಭುತ ಕಲಾಕೃತಿಗಳು, ಅವನ ವ್ಯಕ್ತಿತ್ವ, ವಿಚಿತ್ರ ವರ್ತನೆ, ಅವನ ಪತ್ರಗಳು ಎಲ್ಲವೂ ಇಂದು ವಿಶ್ವದಾದ್ಯಂತ, ಕಲಾಪ್ರೇಮಿಗಳ, ಕಲಾವಿದ್ವಾಂಸರ, ಮನೋವಿಜ್ಞಾನಿಗಳ ಕುತೂಹಲವನ್ನು ಕೆರಳಿಸಿರುವುದೇ ಅಲ್ಲದೆ ಸಂಶೋಧನೆ, ಅಧ್ಯಯನಗಳಿಗೆ ಪ್ರಚೋದಿಸಿವೆ.

ವಿನ್ಸೆಂಟ್ ವಾನ್‌ಗೋ ವ್ಯಕ್ತಿಯಾಗಿ, ಕಲಾವಿದನಾಗಿ ಕಲಾಜಗತ್ತಿನ ಮೇಲೆ ಅತ್ಯಂತ ಪರಿಣಾಮಕಾರಿಯಾದ ಪ್ರಭಾವವನ್ನು ಬೀರಿದ್ದಾನೆ. ಅವನು ಬಳಸುವ ಪ್ರಕಾಶಮಾನವಾದ ಬಣ್ಣಗಳು, ಬಣ್ಣಗಳ ಛಾಯೆ, ವಿನ್ಯಾಸಗಳು, 'ಇಂಪ್ರೆಷನಿಸ್ಟ್' ಮತ್ತು ನಂತರದ ಇಂಪ್ರೆಷನಿಸ್ಟರ ಶೈಲಿಗೆ ಹೊಸ ತಿರುವನ್ನು ನೀಡುವುದರೊಂದಿಗೆ ಕಲೆಗೆ ಚಾರಿತ್ರಿಕ ಮಹತ್ವದ ಘಟ್ಟವನ್ನು ಗುರುತಿಸಿಕೊಟ್ಟಿದೆ.

ವಿನ್ಸೆಂಟ್‌ನ ಪ್ರಭಾವದ ತೀವ್ರತೆ ಯಾವ ಮಟ್ಟಕ್ಕಿದೆಯೆಂದರೆ, ಕಲಾವಿದರು ತಮ್ಮನ್ನು ವಿನ್ಸೆಂಟ್ ವಾನ್‌ಗೋ ಎಂದು ಕರೆದುಕೊಳ್ಳುವುದರಲ್ಲಿ ಹೆಮ್ಮೆಯನ್ನು ಅನುಭವಿಸುತ್ತಿದ್ದಾರೆ. ಒಬ್ಬ ಕಲಾವಿದನಂತೂ, ತನ್ನನ್ನು 'ಅಮೆರಿಕಾದ ವಿನ್ಸೆಂಟ್ ವಾನ್‌ಗೋ' ಎಂದು ಗುರುತಿಸಿಕೊಳ್ಳುವ ಪ್ರಯತ್ನದಲ್ಲಿದ್ದಾನೆ; ಸ್ಟೆಫಾನ್ ಡಂಕನ್ ಬಣ್ಣಗಳ ಬಳಕೆಯ ರೀತಿ, ವಿನ್ಯಾಸ ಎಲ್ಲದರಲ್ಲಿಯೂ ವಿನ್ಸೆಂಟ್‌ನ ಛಾಯೆಯನ್ನು ಕಾಣುವಂತಾಗಿದೆ.

ರಾಶಿರಾಶಿ ಸಂಖ್ಯೆಯಲ್ಲಿ ಸೃಷ್ಟಿಯಾದ ಅದ್ಭುತ ರಮ್ಯ, ಮೋಹಕ ಬಣ್ಣಗಳ, ಆದರೆ ನೈಜತೆಯೊಂದಿಗೆ ಸೃಷ್ಟಿಯಾದ ನಿಸರ್ಗ ದೃಶ್ಯಗಳು, ಜಡವಸ್ತುಗಳ ಯಥಾವತ್ತಾದ ಚಿತ್ರಗಳು, ಶರೀರದ ಒಳವ್ಯವಸ್ಥೆಯನ್ನೂ ಕಾಣಿಸುವಂತಹ ಮಾನವಾಕೃತಿಗಳು ಸ್ಕೆಚ್‌ಗಳು, ಭಾವಚಿತ್ರಗಳು ಹೀಗೆ ಸಾಗುವ ಅವನ ಕಲಾ ಸೃಷ್ಟಿ, ಅಂದು ಬೇಡವಾಗಿದ್ದರೂ ಇಂದು ಅವನನ್ನು ಅಜರಾಮರವಾಗಿಸಿದೆ.

# ಪರಿವಿಡಿ

# ಪ್ರೀತಿಯ ಬೆನ್ನ ಹಿಂದೆ

-೧-

"ಮಿಸ್ಟರ್ ವಾನ್ ಗೋ ಹೊತ್ತಾಯ್ತು, ಎದ್ದೇಳಿ" – ಎಂದದ್ದು ಉರ್ಸುಲಾ. ಮಲಗಿದ್ದರೂ ಕೂಡಾ, ಅವಳ ಧ್ವನಿಗಾಗಿಯೇ ಕಾಯುತ್ತಿದ್ದ.

"ಮೇಡಂ. ಉರ್ಸುಲಾ ನಾನು ಎದ್ದೇ ಇದ್ದೆ" – ವಾನ್‌ಗೋ ಉತ್ತರಿಸಿದ.

"ಇಲ್ಲ. ಎದ್ದಿರಲಿಲ್ಲ. ಈಗಲೇ ನೀವು ಎದ್ದದ್ದು" ಎಂದು ಮೆಟ್ಟಿಲಿಳಿದು ಅಡಿಗೆ ಮನೆ ಕಡೆ ಹೋದ ಹೆಜ್ಜೆ ಸಪ್ಪಳ ಕೇಳಿಸಿತು.

ವಿನ್ಸೆಂಟ್ ಚಂಗನೆ ಹಾಸಿಗೆ ಬಿಟ್ಟು ಎದ್ದ. ಬಲಿಷ್ಠವಾದ ಎದೆ, ತೋಳುಗಳು ಅವನದು. ಎದ್ದವನೇ ಬಟ್ಟೆ ಧರಿಸಿಕೊಂಡು, ಮುಖಕ್ಕೆ ಒಂದಿಷ್ಟು ತಣ್ಣೀರು ಎರಚಿಕೊಂಡು ರೇಜರ್ ಮುಖಕ್ಕೆ ಹಚ್ಚಿದ.

ವಿನ್ಸೆಂಟ್ ಪ್ರತಿನಿತ್ಯ ಮಾಡಿಕೊಳ್ಳುತ್ತಿದ್ದ ಷೇವ್‌ನಿಂದ ಒಂದು ರೀತಿ ಸಂತೋಷ ಅನುಭವಿಸುತ್ತಿದ್ದ. ಮೆಲ್ಲಗೆ ರೇಜರ್ ಅನ್ನು ಕೆನ್ನೆ, ಗದ್ದ, ಮೂಗಿನ ಕೆಳಭಾಗ, ಹೊಳ್ಳೆಗಳ ಪಕ್ಕ ಎಲ್ಲಾ ಕಡೆ ಓಡಾಡಿಸಿದ.

ಮತ್ತೆ ಪ್ರವೇಶಿಸಿದ ಉರ್ಸುಲಾ ಅವನ ಕೈಗೆ ಪತ್ರವೊಂದನ್ನು ಕೊಡುತ್ತಾ" ಮಿಸ್ಟರ್ ವಾನ್‌ಗೋ ಪೋಸ್ಟ್‌ಮ್ಯಾನ್ ನಿಮಗಾಗಿ ಈ ಪತ್ರವನ್ನು ಕೊಟ್ಟು ಹೋಗಿದ್ದಾನೆ" ಎಂದಳು.

ಕವರ್ ಒಡೆಯುತ್ತಿದ್ದಂತೆ ಅವನಿಗೆ ಕೈ ಬರಹ ನೋಡಿದ ಕೂಡಲೇ ತಾಯಿಯಿಂದ ಬಂದದ್ದು ಎಂದು ತಿಳಿದುಕೊಂಡ.

"ಪ್ರೀತಿಯ ವಿನ್ಸೆಂಟ್ ನಿನಗಾಗಿ ಒಂದೆರಡು ಮಾತು."

ಅವನಿಗೆ ಯಾಕೋ ತನ್ನ ಮುಖ ತಣ್ಣನೆ, ಒದ್ದೆಯಿದ್ದಂತೆ ಎನಿಸಿದ್ದರಿಂದ, ಪತ್ರವನ್ನು ಮಡಿಚಿ, ಗೂಪಿಲ್ಸ್‌ನಲ್ಲಿ ಸಮಯ ಸಿಕ್ಕಾಗ ಓದಿದರೆ ಆಯಿತೆಂದು ತನ್ನ ಷರಾಯಿ ಜೇಬಿನಲ್ಲಿ ಇರಿಸಿದ. ತಲೆಬಾಚಿಕೊಂಡು, ಸ್ಟಿಫ್ ಆಗಿದ್ದ ಬಿಳಿ ಅಂಗಿತೊಟ್ಟು, ಟೈ ಕಟ್ಟಿಕೊಂಡು, ಬೆಳಗಿನ ಉಪಹಾರ ಮತ್ತು ಉರ್ಸುಲಾಳ ಮುಗುಳು ನಗೆಗಾಗಿ ಕೆಳಗಿಳಿದು, ಉಪಹಾರದ ಮೇಜಿಗೆ ಬಂದು ಕುಳಿತ.

ಶ್ರೀಮತಿ ಲೋಯರ್ ಮತ್ತು ಉರ್ಸುಲಾ ಮಕ್ಕಳಿಗಾಗಿ, ತಮ್ಮ ಮನೆಯ ಹಿಂದಿನ ತೋಟದಲ್ಲಿ ಶಿಶುವಿಹಾರ ನಡೆಸುತ್ತಿದ್ದರು. ಉರ್ಸುಲಾ ಹತ್ತೊಂಬತ್ತು ವರ್ಷದ ಸಪೂರ ದೇಹದ, ಮೊಟ್ಟೆಯಾಕಾರದ ಮೊಗದ ಆಕರ್ಷಕ ಹುಡುಗಿ. ವಿನ್ಸೆಂಟ್‌ಗೆ ಅವಳ ಮೊಗದ ಮೇಲೆ ಅರಳುತ್ತಿದ್ದ ನಗೆಯ ಮಿಂಚನ್ನು ನೋಡುವುದೆಂದರೆ ಬಲುಖುಷಿ. ಉರ್ಸುಲಾ ಮೋಹಕ ನಡಿಗೆಯಿಂದ ಅವನಿಗೆ ಬಡಿಸಿದಳು. ಹಾಗೆಯೇ ಅವನು ತಿನ್ನುತ್ತಿರುವಾಗ ಅವನೊಡನೆ ಮಾತೂ ಆಡುತ್ತಿದ್ದಳು. ವಿನ್ಸೆಂಟ್ ಇಪ್ಪತ್ತೊಂದರ ಹರೆಯದ ಹುಡುಗ. ಮೊದಲ ಬಾರಿಗೆ ಪ್ರೇಮದಲ್ಲಿ ಬಿದ್ದಿದ್ದ. ಅವನ ಮುಂದೆ ಈಗ ತಾನೇ ಬದುಕು ತೆರೆದುಕೊಳ್ಳುತ್ತಿತ್ತು. ಉಪಹಾರ ಸೇವಿಸುತ್ತಲೇ, ಉರ್ಸುಲಾಳ ಮುಂದೆಯೇ ಈ ರೀತಿಯಲ್ಲಿ ಉಪಹಾರ ಸೇವಿಸುವ ಅವಕಾಶ ಜೀವನ ಪರ್ಯಂತ ಲಭ್ಯವಾದರೆ ತಾನು ನಿಜವಾಗಿಯೂ ಭಾಗ್ಯವಂತ – ಎಂದುಕೊಂಡ.

ಉರ್ಸುಲಾ, ಉಪ್ಪಿನಲ್ಲಿ ಉರಿದ ಹಂದಿ ಮಾಂಸ, ಸ್ಟ್ರಾಂಗ್ ಬ್ಲ್ಯಾಕ್ ಟೀ, ಹಿಡಿದುಕೊಂಡು ಬಂದು ಅವನ ಸಮೀಪದ ಕುರ್ಚಿಯಲ್ಲಿ ಕುಳಿತು, ಕೂದಲಿನಲ್ಲಿ ಹೆಣೆದುಕೊಳ್ಳ ತೊಡಗಿದಳು. ಕ್ಷಣದ ನಂತರ ತುಟಿಯಲ್ಲಿ ನಾಲಿಗೆಯಿಂದ ಸವರಿಕೊಳ್ಳುತ್ತಾ, "ವಿನ್ಸೆಂಟ್ ನೀ ಹಾಕಿದ ಮಿನೋನೆಟ್ ಗಿಡಗಳು ಈಗ ತಾನೇ ಚಿಗುರೊಡೆಯುತ್ತಿದೆ. ಬಂದು ನೋಡ್ತೀಯೇನು?" – ಕೇಳಿದಳು.

"ಹೂಂ ಬರ್ತೀನಿ....... ನೀನು..... ನೀನು ಬಂದು ತೋರಿಸ್ತೀ, ತಾನೇ?"

"ಎಂಥಾ ಮನುಷ್ಯ ಇವನು! ಇವನು ಹಾಕಿದ್ದನ್ನು ಇವನಿಗೇ ಕಂಡುಕೊಳ್ಳೋಕೆ ಆಗೋದಿಲ್ವೆ" – ಯಾರೂ ತನ್ನೆದುರು ಇಲ್ಲವೇ ಇಲ್ಲವೆಂಬಂತೆ, ತನ್ನಲ್ಲಿ ತಾನೇ ಹೇಳಿಕೊಂಡಳು.

ವಿನ್ಸೆಂಟ್ ಗಬಗಬ ನುಂಗಿದ. ಉರ್ಸುಲಾ ಮಾತಿಗೆ ಉತ್ತರ ಕೊಡುವುದಕ್ಕೆ ಅವನಲ್ಲಿ ಶಬ್ದಗಳಿರಲಿಲ್ಲ. ಅವರು ಅಂಗಳಕ್ಕೆ ನಡೆದರು. ಏಪ್ರಿಲ್‌ನ ತಂಪಾದ ಬೆಳಗು. ಸೇಬಿನ ಹಣ್ಣಿನ ಗಿಡಗಳು ಆಗಲೇ ಚೆನ್ನಾಗಿ ಬೆಳೆದಿದ್ದವು. ಕೆಲವು ದಿನಗಳ ಹಿಂದಷ್ಟೇ ವಿನ್ಸೆಂಟ್ 'ಪಾಪಿ' ಗಿಡಗಳನ್ನು, ಸ್ವೀಟ್‌ಪೀಸ್ ಗಿಡಗಳನ್ನೂ ಹಾಕಿದ್ದ. ಮಿನೋನೆಟ್ ಗಿಡಗಳು ನೆಲವನ್ನು ಸೀಳಿಕೊಂಡು ಮೇಲಕ್ಕೆ ಬರುತ್ತಿದ್ದವು. ಉರ್ಸುಲಾ, ವಿನ್ಸೆಂಟ್ ಆ ಗಿಡಗಳ ಎರಡೂ ಬದಿಗಳಲ್ಲಿ ಕುಳಿತುಕೊಂಡರು. ಎಷ್ಟು ಹತ್ತಿರವಿದ್ದರೆಂದರೆ ಒಬ್ಬರ ತಲೆ ಮತ್ತೊಬ್ಬರಿಗೆ ತಾಕುತ್ತಿತ್ತು. ವಿನ್ಸೆಂಟ್ ಉರ್ಸುಲಾಳ ಕೂದಲಿನ ಪರಿಮಳವನ್ನು ಆಸ್ವಾದಿಸುತ್ತಿದ್ದ.

"ಮೇಡಂ ಉರ್ಸುಲಾ" ಕರೆದ.

"ಹೂಂ!........ ಅವನತ್ತ ಮುಗುಳುನಗೆಯೊಂದನ್ನು ಚೆಲ್ಲಿ, ಏನು ವಿಷಯ– ಎಂದು ಪ್ರಶ್ನಿಸುತ್ತಿರುವಂತೆ ನೋಡಿದಳು.

"ನಾನು....... ನಾ......ನು...... ಅದು......"

"ಮಹಾನುಭಾವ ಅದೇನು ಹೇಳಬೇಕೂಂತಿದ್ದಿ?"– ಎಂದು ಕೇಳಿ. ಟಣ್ಣನೆ ಜಿಗಿದು ನಿಂತಳು. ಶಿಶುವಿಹಾರದ ಬಾಗಿಲಿನ ವರೆಗೆ ಅವಳನ್ನು ಹಿಂಬಾಲಿಸಿದ.

"ಇನ್ನೇನು ನನ್ನ ವಿದ್ಯಾರ್ಥಿಗಳು ಬಂದು ಬಿಡುತ್ತಾರೆ..... ನಿನಗೆ ಗ್ಯಾಲರಿಗೆ ಹೋಗಲು ಹೊತ್ತಾಗುವುದಿಲ್ಲವೇನೂ?" – ಕೇಳಿದಳು.

"ಇಲ್ಲ. ಇನ್ನೂ ಸಮಯ ಇದೆ. ನಲವತ್ತೈದು ನಿಮಿಷ ಸಾಕು ತಲುಪೋದಕ್ಕೆ"–

ಅವಳಿಗೆ ಏನೂ ಹೇಳಲು ತೋಚಲಿಲ್ಲ.

"ನನ್ನ ಶಿಶುವಿಹಾರಕ್ಕೆ ಬ್ರಬಾಂಟ್‌ನ ಪಿಕ್ಚರ್ ಕೊಡುವುದಾಗಿ ಹೇಳಿದ್ದೆಯಲ್ಲ, ಏನಾಯಿತು?

ಸೀಸರ್‌ದ ಶಾಕ್‌ನ ಚಿತ್ರದ ಪ್ರತಿರೂಪದ ಚಿತ್ರವನ್ನು ಪ್ಯಾರಿಸ್‌ಗೆ ಕಳಿಸಿದ್ದೀನಿ. ಅದನ್ನು ನಿನಗಾಗಿ ಬರೆಯುವಂತೆ ಹೇಳಿದ್ದೀನಿ.

"ಅದ್ಭುತ! ಸಂತಸದಿಂದ ಚಪ್ಪಾಳೆ ಹೊಡೆದು ಅವನತ್ತ ತಿರುಗಿ, ಮಿಸ್ಟರ್ ಒಂದೊಂದು ಸಲ ನೀನು ಎಷ್ಟು ಚಾರ್ಮಿಂಗ್ ಅನ್ನಿಸ್ತೀಯ ಗೊತ್ತೇ?!"

ಅವನನ್ನು ನೋಡಿ ಮತ್ತೊಮ್ಮೆ ಮುಗುಳ್ನಕ್ಕಳು.

ಅವನು ಅವಳ ಕೈಯನ್ನು ಹಿಡಿದುಕೊಂಡ. ನಾನು ಮಲಗಲು ಹೋದಾಗ ನಿನಗಾಗಿ ಒಂದು ಹೆಸರನ್ನು ಯೋಚಿಸಿದೆ. (L'ange aux poupons) 'ವಿದ್ಯಾರ್ಥಿಗಳ ದೇವತೆ' ಎಂದು!

ಉರ್ಸುಲಾ, ತಲೆಯನ್ನು ಹಿಂದಕ್ಕೆ ಮಾಡಿ, ಕಣ್ಣುಗಳಲ್ಲಿ ಅಚ್ಚರಿ ಭಾವ ತುಂಬಿಕೊಂಡು, "ನಾನು...... 'ವಿದ್ಯಾರ್ಥಿಗಳ ದೇವತೆ!' ಅಮ್ಮನಿಗೆ ಹೋಗಿ ಹೇಳುತ್ತೇನೆ." – ಗಟ್ಟಿಯಾಗಿ ಹೇಳಿದಳು.

ಅವನ ಹಿಡಿತದಿಂದ ಬಿಡಿಸಿಕೊಂಡು, ಅವನತ್ತ ಮತ್ತೊಮ್ಮೆ ನಗೆ ಚೆಲ್ಲಿ, ಗಾರ್ಡನ್ ಮೂಲಕ ಮನೆಯೊಳಕ್ಕೆ ಹೋದಳು.

–೨–

ವಿನ್ಸೆಂಟ್ ಹ್ಯಾಟ್ ಧರಿಸಿದ. ಗ್ಲೋವ್ಸ್ ತೆಗೆದುಕೊಂಡು ಏರಿಸಿಕೊಳ್ಳುತ್ತಾ ಕ್ಲ್ಯಾಪ್‌ಹ್ಯಾಮ್ ರಸ್ತೆಗಿಳಿದ. ಮನೆಗಳು ಎಲ್ಲ ಕಡೆ ಹರಡಿಕೊಂಡಿದ್ದವು. ಪ್ರತಿಯೊಂದು ಮನೆಯ ಗಾರ್ಡನ್‌ನಲ್ಲಿ ಲೈಲಾಕ್, ಹಾಥಾರ್ನ್ ಮೊದಲಾದ ಹೂಗಿಡಗಳು ಅರಳಿ ನಿಂತಿದ್ದವು.

ಈಗ ೮–೪೫ ಅಷ್ಟೇ ಆಗಿತ್ತು. ಗೂಪಿಲ್ಸ್‌ನಲ್ಲಿ ೯ ಗಂಟೆಗೆ ಇದ್ದರೆ ಸಾಕು. ತುಂಬಾ ವೇಗದ ನಡಿಗೆ ಅವನದಾಗಿತ್ತು. ಅಲ್ಲೊಂದು ಇಲ್ಲೊಂದು ಇದ್ದ ಮನೆಗಳನ್ನು ದಾಟಿ, ಈಗ ಒತ್ತೊತ್ತಾಗಿ ಇದ್ದ ಮನೆಗಳನ್ನು ಹಾದು ಹೋದ. ದಾರಿಯಲ್ಲಿ ತಮ್ಮ ತಮ್ಮ ಕೆಲಸಗಳ ಮೇಲೆ ಹೋಗುತ್ತಿದ್ದವರ ಸಂಖ್ಯೆ ಹೆಚ್ಚಾಗಿತ್ತು. ಅವರೊಂದಿಗೆ ಅವನ ಸ್ನೇಹವಿತ್ತು. ಅವರಿಗೂ ಪ್ರೀತಿಸುವುದೆಂದರೆ ಏನೆಂಬುದು ಗೊತ್ತು.

ಥೇಮ್ಸ್ ದಡವನ್ನು ದಾಟಿ, ವೆಸ್ಟ್ ಮಿನಿಸ್ಟರ್ ಬ್ರಿಡ್ಜ್, ಪಾರ್ಲಿಮೆಂಟ್ ಹೌಸಸ್' – ಎಲ್ಲವನ್ನೂ ಹಾದು, ಸೌತಮ್‌ಪ್ಟನ್ ಸ್ಟ್ರೀಟ್‌ನ ೧೭ ನಂ. ಗೂಪಿಲ್ ಅಂಡ್

ಕಂಪೆನಿ, ಆಫೀಸ್ ಒಳಗೆ ಪ್ರವೇಶಿಸಿದ. ಎನ್‌ಗ್ರೇವಿಂಗ್ಸ್, ವರ್ಣಚಿತ್ರಗಳ ಡೀಲರ್ಸ್ ಆಗಿ ಕಂಪೆನಿ ವ್ಯವಹರಿಸುತ್ತಿತ್ತು.

ವಿನ್ಸೆಂಟ್ ಪ್ರವೇಶ ಭಾಗದಲ್ಲಿದ್ದ ಮುಖ್ಯ ಸಭಾಂಗಣವನ್ನು ಹೊಕ್ಕು ಒಳಹೋಗುತ್ತಿದ್ದಂತೆ. ೬ ಅಡಿ ಉದ್ದದ ಕ್ಯಾನ್‌ವಾಸ್‌ನಲ್ಲಿ ಡ್ರ್ಯಾಗನ್ ಮತ್ತು ಒಬ್ಬ ತೀರಾ ಪುಟ್ಟ ವ್ಯಕ್ತಿ ಅದನ್ನು ಗಮನಿಸುತ್ತಿದ್ದಂತಹ ಚಿತ್ರವಿತ್ತು. ಅದರಲ್ಲಿ ಶೀರ್ಷಿಕೆ "ಆರ್ಕೇಂಜೆಲ್ ಮೈಕೇಲ್ ಕಿಲ್ಲಿಂಗ್ ಸೆಟಾನ್" (ಸೈತಾನನನ್ನು ಕೊಲ್ಲುತ್ತಿರುವ ದೇವದೂತ) ಎಂದು ಬರೆಯಲಾಗಿತ್ತು. "ಲಿಥೋಗ್ರಾಫ್ ಮೇಜಿನ ಮೇಲೆ ನಿನಗೊಂದು ಪಾರ್ಸಲ್ ಇದೆ" ಅಲ್ಲಿದ್ದ ಕ್ಲರ್ಕ್ ಅವನಿಗೆ ತಿಳಿಸಿದ.

ಆರ್ಟ್‌ಷಾಪ್‌ನ ಎರಡನೆ ಕೋಣೆಯಲ್ಲಿ ಮಿಲ್ಲೈಸ್, ಬೂತೋನ್, ಟರ್ನರ್ ಮೊದಲಾದವರ ಪೈಂಟಿಂಗ್ಸ್‌ಗಳನ್ನು ಪ್ರದರ್ಶನಕ್ಕಾಗಿ ಇರಿಸಲಾಗಿತ್ತು. ಇನ್ನು ಮೂರನೇ ಕೋಣೆ, ಅದರಲ್ಲಿಯೇ ಹೆಚ್ಚಿನ ಮಾರಾಟದ ಚಟುವಟಿಕೆ ನಡೆಯುತ್ತಿದ್ದುದು. ಹಿಂದಿನ ದಿನ ಸಂಜೆ, ಹೆಂಗಸೊಬ್ಬಳು ಕೊಂಡುಕೊಂಡ ಪೈಂಟಿಂಗ್ ನೆನಪಾಗಿ. ನಕ್ಕ.

"ಈ ಪಿಕ್ಚರ್ ಊಹಿಸಿಕೊಳ್ಳೋಕು ಆಗುವುದಿಲ್ಲ ಅಲ್ವ ಹ್ಯಾರಿ........ ಈ ನಾಯಿ ಬ್ರೈಟನ್‌ನಲ್ಲಿ ನನ್ನನ್ನು ಕಚ್ಚಿತ್ತಲ್ಲ, ಹಾಗೇ ಇದೆಯಲ್ಲ" – ಆ ಹೆಂಗಸು ಗಂಡನನ್ನು ಕೇಳಿದ್ದಳು.

"ಏನಪ್ಪಾ, ನಿನಗೇನು ತಲೆ ಇಲ್ವಾ, ನಾವು ನಾಯೀನ ಕೊಂಡುಕೊಳ್ಳಬೇಕೇನು?" ಹ್ಯಾರಿ ಅಸಮಾಧಾನಗೊಂಡು ಪ್ರಶ್ನಿಸಿದ.

ವಿನ್ಸೆಂಟ್‌ಗೆ ಗೊತ್ತು, ತಾನು ಮಾರುತ್ತಿರುವ ಚಿತ್ರಗಳು ಒಳ್ಳೆಯವಲ್ಲ. ಅಲ್ಲಿಗೆ ಬರುವ ಹೆಚ್ಚು ಮಂದಿಗೆ ಪೈಂಟಿಂಗ್ಸ್ ಬಗ್ಗೆ ಏನೇನೂ ಗೊತ್ತಿಲ್ಲ. ಸುಮ್ಮನೆ ಅಗ್ಗದ ಪೈಂಟಿಂಗ್‌ಗಳಿಗೆ ಹೆಚ್ಚು ದುಡ್ಡು ಕೊಟ್ಟು ಕೊಳ್ಳುತ್ತಾರೆ. ಆದರೆ ಅದೆಲ್ಲ ತನಗೆ ಸಂಬಂಧಿಸಿದ್ದಲ್ಲ. ಒಟ್ಟಿನಲ್ಲಿ ಒಳ್ಳೆ ಮಾರಾಟ ಮಾಡಿ ಲಾಭ ಕೊಡಿಸುವುದಷ್ಟೇ ತನ್ನ ಕೆಲಸ.

ಪ್ಯಾರಿಸ್‌ನಿಂದ ಬಂದಿದ್ದ ಪಾರ್ಸಲ್ ಬಿಚ್ಚಿದ. ಸೀಸರ್‌ದ ಕಾಕ್ ಅದನ್ನು ಕಳಿಸಿದ್ದ. ಅದರಲ್ಲಿ 'ವಿನ್ಸೆಂಟ್ ಮತ್ತು ಉರ್ಸುಲಾಗೆ, ಪ್ರೀತಿಯೊಂದಿಗೆ' – ಎಂದು ಬರೆದಿತ್ತು.

"ಇವತ್ತು ರಾತ್ರೀಗೆ ಉರ್ಸುಲಾಳನ್ನು ಕೇಳಿಯೇ ಬಿಡ್ತೇನೆ, ಇದನ್ನು ಕೊಡುವಾಗ" – ತನಗೆ ತಾನೇ ಹೇಳಿಕೊಂಡ. "ಹೇಗಿದ್ದರೂ ಇನ್ನೊಂದೆರಡು ದಿನಗಳಲ್ಲಿ ಇಪ್ಪತ್ತೆರಡು ವರ್ಷ ಆಗುತ್ತೆ. ನನಗೆ, ತಿಂಗಳಿಗೆ ಐದು ಪೌಂಡ್ ಸಂಪಾದನೆ ಕೂಡಾ ಮಾಡ್ತೀದ್ದೀನಿ. ಇನ್ನು ಕಾಯಬೇಕಾದ ಅಗತ್ಯ ಇಲ್ಲ."

ಗೂಪಿಲ್‌ನ ಆ ಹಿಂದಿನ ಕೋಣೆಯಲ್ಲಿ ಗೊತ್ತಿಲ್ಲದಂತೆ ಹೊತ್ತು ಕಳೆದು ಹೋಯಿತು. ಏನಿಲ್ಲವೆಂದರೂ ದಿನಕ್ಕೆ ಒಂದೈವತ್ತು ಫೋಟೋಗ್ರಾಫ್ಸ್ ಮಾರುತ್ತಿದ್ದ. ಅವನಿಗೆ ಆಯಿಲ್ ಪೈಂಟಿಂಗ್ಸ್, ಎಚ್ಚಿಂಗ್ಸ್‌ಗಳ ಮಾರಾಟದಲ್ಲಿ ಆಸಕ್ತಿ ಇತ್ತು, ಅಷ್ಟೊಂದು ಹಣ ಮನೆಗೆ ತೆಗೆದುಕೊಂಡು ಹೋಗುತ್ತಿರುವುದರಿಂದ ಅವನಿಗೆ ತುಂಬ ಸಂತೋಷ

ಆಗಿತ್ತು, ತನ್ನ ಜೊತೆ [ಕೆಲಸಗಾರರನ್ನು] ಗುಮಾಸ್ತರನ್ನು ಅವನು ಪ್ರೀತಿಸುತ್ತಿದ್ದ. ಅವರೂ ಹಾಗೆಯೇ ಅವನನ್ನು ಇಷ್ಟ ಪಡುತ್ತಿದ್ದರು. ಅವರು ಒಟ್ಟೊಟ್ಟಿಗೇ ಅನೇಕ ವೇಳೆ ಸಂತೋಷದಿಂದ ಕಾಲ ಕಳೆಯುತ್ತಿದ್ದರು. ಅದೂ ಇದೂ ಮಾತಾಡುತ್ತಿದ್ದರು.

ಅವನು ಯುವಕನಾಗಿದ್ದಾಗ ಸ್ವಲ್ಪ ವಿಷಣ್ಣತೆಯಿಂದಲೇ ಇರುತ್ತಿದ್ದ. ಅಷ್ಟಾಗಿ ಸ್ನೇಹಿತರ ಜೊತೆ ಸೇರುತ್ತಿರಲಿಲ್ಲ. ನೋಡಿದವರಿಗೆ ಅವನು ಸ್ವಲ್ಪ ವಿಲಕ್ಷಣ ವ್ಯಕ್ತಿಯಾಗಿ ಕಾಣುತ್ತಿದ್ದ. ಆದರೆ ಉರ್ಸುಲಾ ಅವನನ್ನು ಸಾಕಷ್ಟು ಪರಿವರ್ತಿಸಿದಳು. ಉಲ್ಲಾಸದಿಂದ ಇರುವುದನ್ನು, ಸ್ನೇಹಿತರೊಂದಿಗೆ ಬೆರೆಯುವುದನ್ನು ಕಲಿಸಿದ್ದಳು. ಈಗ ಅವನು ಎಲ್ಲರಿಗೂ ಬೇಕಾದವನಂತಾಗಿದ್ದ. ಅವನನ್ನು ಸ್ವಲ್ಪ ಬಹಿರ್ಮುಖನಾಗಲು ಸಹಕರಿಸಿದ್ದೇ ಅಲ್ಲದೆ ಸಾಮಾನ್ಯರ ಬದುಕಿನಲ್ಲಿ ಇರುವ ಒಳ್ಳೆತನವನ್ನೂ ಕಾಣಲು ಕಲಿಸಿದ್ದಳು.

ಆರು ಗಂಟೆಗೆ ಅಂಗಡಿ ಮುಚ್ಚಿತು. ಮಿಸ್ಟರ್ ಒಬಾಕ್ ವಿನ್ಸೆಂಟ್‌ನನ್ನು ಹಾದಿಯಲ್ಲಿ ತಡೆದ. ವಾನ್‌ಗೋ ನಿನ್ನ ಅಂಕಲ್‌ನಿಂದ ನನ್ನನ್ನೂ ವಿಚಾರಿಸುತ್ತ ಒಂದ ಲೆಟರ್ ಬಂದಿತ್ತು. ನಿನ್ನ ಕೆಲಸ ಹೇಗೆ ನಡೀತಿದೆ ಅಂತಲೂ ಕೇಳಿದ. ಈ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿರುವವರಲ್ಲಿಯೇ ನೀನು ಉತ್ತಮವಾದ ಕೆಲಸಗಾರನೆಂದು ತಿಳಿಸಿದೆ.

"ನನ್ನ ಬಗ್ಗೆ ಅಂತಹ ಒಳ್ಳೆಯ ಅಭಿಪ್ರಾಯ ಹೇಳಿದ್ದಕ್ಕೆ ನಾನು ಕೃತಜ್ಞನಾಗಿದ್ದೀನಿ."

"ಪರವಾಗಿಲ್ಲ. ಅದೇನು ಮಹಾ ದೊಡ್ಡ ವಿಷಯ. ನೀನು ಹಿಂದಿನ ಕೋಣೆಯಿಂದ ಮುಂದುಗಡೆ ಕೋಣೆಗೆ ಬಂದು ಬಿಡು. ಅಲ್ಲಿನ etchings ಮತ್ತು Lithograph ವಿಭಾಗವನ್ನು ನೋಡಿ ಕೊಳ್ಳುವಿಯಂತೆ."

"ಓಹ್ ಅದಾದರೆ ನನಗೆ ತುಂಬಾ ಒಳ್ಳೇದು! ನಾನಂತೂ ಮದುವೆ ಆಗಬೇಕೂಂತ ಇದ್ದೀನಿ."

"ನಿಜವಾಗಿಯೂ! ಹೋಗಲಿಬಿಡು. ಇದು ನನಗೆ ಸಂತೋಷದ ಸುದ್ದಿ. ಯಾವಾಗಾಂತ ಗೊತ್ತಾಗಿದೆಯೇನು?"

"ಬಹುಶಃ ಈ ಬೇಸಿಗೆಯಲ್ಲಿ" (ಇದಕ್ಕೆ ಮೊದಲು ಮದುವೆ ದಿನಾಂಕವನ್ನು ಯೋಚಿಸಿರಲಿಲ್ಲ.)

"ಬಹಳ ಖುಷಿಯಾಯ್ತಪ್ಪ ಕೇಳಿ. ಈ ವರ್ಷದ ಮೊದಲಲ್ಲಿ ನಿನ್ನ ಸಂಬಳದಲ್ಲಿ ಬಡ್ತಿ ಸಿಕ್ಕಿತ್ತು. ಈಗ ಮದುವೆ ಮುಗಿಸಿಬಂದ ಮೇಲೆ ಇನ್ನೊಮ್ಮೆ ಸಂಬಳ ಹೆಚ್ಚಿಸುವ ವಿಷಯ ಆಲೋಚನೆ ಮಾಡೋಣ."

–೩–

ರಾತ್ರಿ ಊಟ ಮುಗಿಸಿ ಕುರ್ಚಿಯಿಂದ ಏಳುವಾಗ "ಮೇಡಂ ಉರ್ಸುಲಾ, ನೀನು ಹೇಳಿರುವ ಪಿಕ್ಚರ್ ತಂದು ಕೊಡ್ತೀನಿ."

ಉರ್ಸುಲಾ, ಹಸಿರು ಮತ್ತು ಬೂದಿ ಬಣ್ಣ ಮಿಶ್ರಿತವಾದ ಎಂಬ್ರಾಯಿಡರಿ ಮಾಡಿದ ಡ್ರೆಸ್ ತೊಟ್ಟಿದ್ದಳು.

"ಆರ್ಟಿಸ್ಟು ನನಗಾಗಿ ಅದರಲ್ಲಿ ಏನಾದರೂ ಬರೆದಿದ್ದನೇ?"

"ಹೂಂ! ನೀನು ಹೋಗಿ ದೀಪ ತೆಗೆದುಕೊಂಡು ಬರ್ತೀನೀಂದ್ರೆ ಶಿಶುವಿಹಾರದಲ್ಲಿ ಅದನ್ನು ಗೋಡೆಗೆ ತೂಗುಹಾಕೋಣ."

ತುಟಿ ಬಿಗಿ ಹಿಡಿದು ಮುತ್ತುಕೊಳ್ಳಲು ಅಣಿಯಾದಂತೆ ಕಾಣಿಸಿಕೊಂಡು, ಅವನನ್ನು ಕಡೆಗಣ್ಣಿಂದ ನೋಡಿದಳು.

"ನಾನು ಅಮ್ಮನಿಗೆ ಸಹಾಯ ಮಾಡಬೇಕು. ಅರ್ಧಗಂಟೇಲಿ ಮುಗಿಸಿ ಬಂದ ಮೇಲೆ ಆಗಬಹುದಲ್ಲ?"

ವಿನ್ಸೆಂಟ್ ಸೋಫಾದ ಬದಿಯಲ್ಲಿದ್ದ ಕನ್ನಡಿಯಲ್ಲಿ ನೋಡಿಕೊಂಡ. ತಾನು ಹೇಗೆ ಕಾಣಿಸುತ್ತಾನೆಂದು ಎಂದೂ ನೋಡಿಕೊಂಡಿರಲಿಲ್ಲ. ಹಾಲೆಂಡ್‌ನಲ್ಲಿ ಅಂತಹವೆಲ್ಲ ಅಷ್ಟು ಮುಖ್ಯವಾಗಿರಲಿಲ್ಲ. ಇಂಗ್ಲಿಷ್ ಮಂದಿಗಿಂತ ಸ್ವಲ್ಪ ಭಿನ್ನ. ಕಣ್ಣುಗಳು ಗುಳಿ ಬಿದ್ದಿದ್ದವು. ಮೂಗು ನೇರವಾಗಿತ್ತು. ಹಣೆ ಸ್ವಲ್ಪ ಉಬ್ಬಿತ್ತು. ದಟ್ಟವಾದ ಹುಬ್ಬುಗಳು ದವಡೆಗಳು ಅಗಲವಾಗಿಯೂ ಬಲಿಷ್ಠವಾಗಿಯೂ ಇದ್ದವು. ಅವನ ಗಲ್ಲ 'ಡಚ್' ಜನಾಂಗದ ಪ್ರತೀಕದಂತಿತ್ತು. ಕನ್ನಡಿಯಿಂದ ಕಣ್ಣನ್ನು ಸರಿಸಿ, ಮಂಚದ ಒಂದು ಬದಿಗೆ ಕುಳಿತ. ಅವನು ಇದಕ್ಕೆ ಮೊದಲು ಯಾವ ಹುಡುಗಿಯನ್ನೂ ಪ್ರೀತಿಸಿರಲಿಲ್ಲ. ಹುಡುಗಿಯರ ಜೊತೆ ಚೇಷ್ಟೆ, ಕುಚೇಷ್ಟೆ, ಪರಿಹಾಸ ಇತ್ಯಾದಿಗಳಲ್ಲಿಯೂ ತೊಡಗಿರಲಿಲ್ಲ. ಉರ್ಸುಲಾಳನ್ನು ಪ್ರೀತಿಸಿದ್ದರಲ್ಲಿ ತೀವ್ರವಾದ ಭಾವುಕತೆಯಾಗಲೀ ಅದಮ್ಯ ಬಯಕೆಯಾಗಲಿ ಇರಲಿಲ್ಲ. ಅವನಲ್ಲಿ ಪ್ರಾಯವಿತ್ತು; ಅವನೊಬ್ಬ ಆದರ್ಶವಾದಿ; ಮೊದಲ ಬಾರಿಗೆ ಅವನು ಪ್ರೀತಿಯಲ್ಲಿ ಸಿಲುಕಿದ್ದ.

ಗಡಿಯಾರ ನೋಡಿಕೊಂಡ. ಐದು ನಿಮಿಷವಾಗಿತ್ತು. ಇನ್ನೂ ಉಳಿದಿದ್ದ ಇಪ್ಪತ್ತೈದು ನಿಮಿಷಗಳನ್ನು ಕಳೆಯುವುದು ಕಷ್ಟವೆನಿಸಿತ್ತು. ಅಮ್ಮ ಬರೆದಿದ್ದ ಪತ್ರದ ಜೊತೆಗಿದ್ದ ತಮ್ಮ ಥಿಯೋ ಇರಿಸಿದ್ದ ಕಾಗದದ ತುಂಡನ್ನು ಜೇಬಿನಿಂದ ಹೊರತೆಗೆದು ಮತ್ತೊಮ್ಮೆ ಓದಿದ. ಥಿಯೋ ವಿನ್ಸೆಂಟ್‌ಗಿಂತ ನಾಲ್ಕು ವರ್ಷ ಚಿಕ್ಕವನು. ಹೇಗ್‌ನಲ್ಲಿದ್ದ ಗೂಪಿಲ್ಸ್ ಸಂಸ್ಥೆಯಲ್ಲಿ ವಿನ್ಸೆಂಟ್‌ನ ಜಾಗದಲ್ಲಿ ಕೆಲಸ ಮಾಡುತ್ತಿದ್ದ. ಅಣ್ಣ ತಮ್ಮಂದಿರಲ್ಲಿ, ತಮ್ಮ ತಂದೆ, ಚಿಕ್ಕಪ್ಪರಲ್ಲಿದ್ದಂತಹ ಆತ್ಮೀಯತೆಯಿತ್ತು.

ವಿನ್ಸೆಂಟ್ ಒಂದು ಪುಸ್ತಕ ತೆಗೆದುಕೊಂಡು ಅದರ ಮೇಲೆ ಖಾಲಿ ಹಾಳೆಯೊಂದನ್ನರಿಸಿ ಥಿಯೋಗೆ ಒಂದೆರಡು ಸಾಲುಗಳನ್ನು ಬರೆದ. ಅಲಮಾರಿಯ ಡ್ರಾಯರ್‌ನಿಂದ ಕೆಲವು ಸ್ಕೆಚ್‌ಗಳನ್ನು ತೆಗೆದು ಕವರೊಂದರಲ್ಲಿ ಇರಿಸಿದ. ಅದರ ಜೊತೆ, ಜಾ ಕ್ವೆಟ್ ಬಿಡಿಸಿದ್ದ 'ಖಡ್ಗವನ್ನು ಹಿಡಿದಿರುವ ಹುಡುಗಿ' ಎಂಬ ಫೋಟೋಗ್ರಾಫನ್ನೂ, ಥಿಯೋಗೆಂದು ಇರಿಸಿದ.

"ಅಯ್ಯಯ್ಯೋ! ಉರ್ಸುಲಾ ವಿಷಯ ಮರೆತೇ ಬಿಟ್ಟೆನಲ್ಲ!"

ಗಡಿಯಾರ ನೋಡಿಕೊಂಡ. ಹೇಳಿದ್ದ ಸಮಯಕ್ಕಿಂತ ಕಾಲು ಗಂಟೆ ತಡವಾಗಿತ್ತು. ಬೇಗಬೇಗನೆ ತಲೆ ಬಾಚಿಕೊಂಡ. 'ಸೀಸರ್‌ದ ಕಾಕ್'ನ್ ಚಿತ್ರವನ್ನು ಮೇಜಿನ ಮೇಲಿಂದ ಎತ್ತಿಕೊಂಡು ಬೇಗನೇ ಬಾಗಿಲಿಂದ ಹೊರಗೆ ಬಂದ.

"ನೀನು ಮರೆತೇ ಹೋಗಿದ್ದೀಯ ಎಂದುಕೊಂಡಿದ್ದೆ." ಅವನು ಪ್ರವೇಶಿಸುತ್ತಿದ್ದಂತೆ ಹೇಳಿದಳು. ಶಿಶುವಿಹಾರದ ಮಕ್ಕಳಿಗಾಗಿ ಕಾಗದದ ಆಟಿಗೆಗಳನ್ನು ಅಂಟಿಸುತ್ತಿದ್ದಳು.

"ನನ್ನ ಪಿಕ್ಚರ್ ತಂದಿದ್ದೀ ಏನು? ನೋಡಬಹುದಾ?"

"ನೀನು ನೋಡುವುದಕ್ಕೆ ಮೊದಲು ನಾನು ತೂಗುಹಾಕಬೇಕು. ದೀಪ ತಂದಿರುವಿಯೇನು?"

"ಅಮ್ಮನ ಹತ್ತಿರ ಇದೆ."

ಅಡಿಗೆ ಮನೆಯಿಂದ ಮರಳಿಬಂದಾಗ, ಅವನ ಕೈಗೆ ಸ್ಕಾರ್ಫ್ ಕೊಟ್ಟು, ತನ್ನ ಭುಜಗಳ ಮೇಲೆ ಹೊದಿಸಲು ಹೇಳಿದಳು. ನುಣುಪಾಗಿದ್ದ ಸ್ಕಾರ್ಫ್‌ನ ಸ್ಪರ್ಷ ಅವನಲ್ಲಿ ರೋಮಾಂಚನ ಉಂಟು ಮಾಡಿತು. ಉದ್ಯಾನದಲ್ಲಿ ಹೂಗಳ ಪರಿಮಳ ಆಹ್ಲಾದಕರವಾಗಿತ್ತು. ದಾರಿಯಲ್ಲಿ ಕತ್ತಲಿತ್ತು. ಉರ್ಸುಲಾ ಮೆಲ್ಲನೆ ಮೃದುವಾಗಿ ತನ್ನ ಬೆರಳುಗಳನ್ನು ಅವನ ಒರಟಾದ ಕಪ್ಪು ಕೋಟಿನ ಮೇಲೆ ಇರಿಸಿದಳು. ಒಂದೆರಡು ಬಾರಿ ಎಡವಿದಾಗ ಅವನನ್ನು ಬಿಗಿಯಾಗಿ ಹಿಡಿದುಕೊಂಡಳು. ತನ್ನ ರೀತಿಗೆ ತಾನೇ ತನ್ನಲ್ಲಿ ನಕ್ಕಳು. ಅವಳು ಯಾಕೆ ನಗುತ್ತಾಳೆಂಬುದು ವಿನ್ಸೆಂಟ್‌ಗೆ ಅರ್ಥವಾಗಲಿಲ್ಲ. ಆದರೂ ಆ ರೀತಿ ಆ ಕತ್ತಲ ಹಾದಿಯಲ್ಲಿ ಅವಳು ನಗುತ್ತಿರುವುದು ಇಷ್ಟವಾಯಿತು. ಶಿಶುವಿಹಾರದ ಬಾಗಿಲನ್ನು ತೆರೆದು ಅವಳು ಒಳಗೆ ಹೋಗಲು ಅನುವು ಮಾಡಿಕೊಟ್ಟ. ಅವಳ ಮೃದು ಮೋಹಕ ಮುಖ ಅವನ ಮುಖವನ್ನು ರಾಚುವಂತೆ ಒಳಗೆ ಹೆಜ್ಜೆ ಇಡುವಾಗ ಅವನತ್ತ ಗಂಭೀರವಾಗಿ ನೋಡಿದಳು. ಆ ನೋಟದಲ್ಲಿ ಅವನ್ನು ಹಿಂದೆ ಕೇಳಿದ್ದ ಪ್ರಶ್ನೆಯೊಂದಕ್ಕೆ ಉತ್ತರವಿತ್ತು.

ಅವನು ದೀಪವನ್ನು ಮೇಜಿನ ಮೇಲಿರಿಸಿ, "ಯಾವ ಜಾಗದಲ್ಲಿ ತೂಗು ಹಾಕಲಿ?." ಎಂದು ಕೇಳಿದ.

"ನಾನು ಕುಳಿತುಕೊಳ್ಳುವ ಡೆಸ್ಕ್‌ನ ಮೇಲುಗಡೆ! ಸರಿ ಹೋಗುತ್ತಲ್ಲ!"

ಆ ಜಾಗ (ಕಟ್ಟಡ) ಮೊದಲು 'ಬೇಸಿಗೆ ಮನೆ' ಆಗಿತ್ತು. ಈಗ ಅದು ಶಿಶುವಿಹಾರವಾಗಿ ರೂಪಾಂತರವಾಗಿದೆ. ತಗ್ಗಾದ ಒಂದು ಹದಿನೈದು ಕುರ್ಚಿಗಳಿದ್ದವು. ಅವುಗಳಿಗೆ ಎದುರಾಗಿ ಸ್ವಲ್ಪ ಎತ್ತರದ ಪ್ಲಾಟ್‌ಫಾರಂ. ಅದರ ಮೇಲೆ ಉರ್ಸುಲಾ ಕೂರುತ್ತಿದ್ದ ಡೆಸ್ಕ್ ಇತ್ತು. ಉರ್ಸುಲಾ ಮತ್ತು ವಿನ್ಸೆಂಟ್ ಅಕ್ಕಪಕ್ಕದಲ್ಲಿ, ಚಿತ್ರವನ್ನು ಹಾಕಲು ಸರಿಯಾದ ಜಾಗಕ್ಕಾಗಿ ಯೋಚಿಸುತ್ತಿದ್ದರು. ವಿನ್ಸೆಂಟ್‌ಗೆ ಯಾಕೋ ಹೆದರಿಕೆಯಾಯಿತು. ಮೊಳೆಗಳನ್ನು ಹೊಡೆಯುತ್ತಿದ್ದಂತೆ ಅವುಗಳು ಕೆಳಗೆ ಬಿದ್ದು ಹೋಗುತ್ತಿದ್ದವು. ಅವನ ಸ್ಥಿತಿಯನ್ನು ನೋಡಿ ಉರ್ಸುಲಾ ನಕ್ಕಳು.

"ಅಯ್ಯೋ ಮಹಾನುಭಾವ ಕೆಳಗೆ ಇಳಿ. ನಾನೇ ಆ ಕೆಲಸಮಾಡ್ತೇನೆ."

ತನ್ನೆರಡೂ ತೋಳುಗಳನ್ನು ಮೇಲಕ್ಕಿರಿಸಿ ಪಿಕ್ಚರನ್ನು ತೂಗುಹಾಕುವ ಪ್ರಯತ್ನ ನಡೆಸಿದಳು. ಅವಳ ಆಂಗಿಕ ಹಾವಭಾವಗಳು ಮೋಹಕವಾಗಿದ್ದವು. ವಿನ್ಸೆಂಟ್‌ಗೆ, ಉರ್ಸುಲಾಳನ್ನು ತೋಳುಗಳಿಂದ ಎತ್ತಿಹಿಡಿದು ಒಂದೇ ಒಂದು ಅಪ್ಪುಗೆಯಿಂದ, ಈ

ಕಷ್ಟದ ಕೆಲಸಕ್ಕೆ ಸಾರ್ಥಕವಾದ ಬೆಲೆ ಪಡೆಯಬೇಕೆಂದಿದ್ದ. ಕತ್ತಲಲ್ಲಿ ಉರ್ಸುಲಾ ಪದೇ ಪದೇ ಅವನನ್ನು ಸ್ಪರ್ಶಿಸುತ್ತಿದ್ದರೂ ಸರಿಯಾದ ಜಾಗವನ್ನು ಹುಡುಕಲು ಆಗಲಿಲ್ಲ. ದೀಪವನ್ನು ಅವನು ಮೇಲಕ್ಕೆ ಎತ್ತಿ ಹಿಡಿದ. ದೀಪದ ಬೆಳಕಿನಲ್ಲಿ, ಉರ್ಸುಲಾ ಚಿತ್ರದಲ್ಲಿ ಬರೆದಿದ್ದ ಅಕ್ಷರಗಳನ್ನು ಓದಿದಳು. ಅದನ್ನು ಓದಿ ಅವಳಿಗೆ ಬಹಳ ಖುಷಿಯಾಯಿತು. ಒಂದೇ ಓಟಕಿತ್ತಳು. ಅವನಿಗೆ ಅವಳನ್ನು ಹಿಂಬಾಲಿಸುವುದು ಸಾಧ್ಯವಾಗಲಿಲ್ಲ.

"ಈಗ ಅವನು ನನ್ನ ಗೆಳೆಯನಾದ. ನನಗೆ ಯಾರಾದರೂ ಒಬ್ಬ ಆರ್ಟಿಸ್ಟ್ ಗೆಳೆಯನಾಗಬೇಕೆಂಬ ಆಸೆ ಇತ್ತು."

ವಿನ್ಸೆಂಟ್ ಮೃದುವಾಗಿ ಮಾತನಾಡಿ, ತಾನು ಹೇಳಬೇಕೆಂದಿರುವುದಕ್ಕೆ ಸರಿಯಾದ ಪೀಠಿಕೆ ಹಾಕಬೇಕೆಂದಿದ್ದ ಉರ್ಸುಲಾ ಅವನತ್ತ ತಿರುಗಿದಳು. ದೀಪದ ಬೆಳಕಿನಲ್ಲಿ ಅವಳ ಕಣ್ಣು ಮಿಂಚಿದವು. ಅವಳ ಮೊಟ್ಟೆಯಾಕಾರದ ಮುಖ, ಕೆಂದಾವರೆಯ ಕೆಂಪು ತುಟಿಗಳು ಅವನಲ್ಲಿ ಅವ್ಯಕ್ತ ಭಾವನೆಗಳನ್ನು ಕೆರಳಿಸಿದವು.

ಒಂದು ಮೌನ ಪರಿಸರ. 'ತನ್ನ ಬಳಿಗೆ ಬರುತ್ತಿದ್ದಾಳೆ ತನಗಾಗಿ ಕಾಯುತ್ತಿದ್ದಾಳೆ. ಏನನ್ನೋ ಹೇಳಬೇಕೆಂದಿದ್ದಾಳೆ. ಪ್ರೀತಿಯನ್ನು ಉಣಿಸಲಿದ್ದಾಳೆ' – ಎಂದೆಲ್ಲಾ ಕಲ್ಪಿಸಿಕೊಳ್ಳುತ್ತಿದ್ದ. ಉರ್ಸುಲಾ ಅವನ ಕಡೆ ನೋಡಿ, ಬಾಗಿಲತ್ತ ಹೆಜ್ಜೆ ಹಾಕಿದಳು.

ಅವಕಾಶ ಎಲ್ಲಿ ತಪ್ಪಿ ಹೋಗುವುದೋ ಎಂದು ಹೆದರಿ ಅವಳನ್ನು ಹಿಂಬಾಲಿಸಿದ. ಅವಳು ಸೇಬಿನ ಮರದ ಕೆಳಗೆ ನಿಂತಳು.

"ಉರ್ಸುಲಾ, ಪ್ಲೀಸ್"

ತಿರುಗಿ ಅವನತ್ತ ನೋಡಿದಳು. ಚಳಿಯಿಂದ ನಡುಗಿದಳು. ದಟ್ಟವಾದ ಕತ್ತಲು ಕವಿದಿತ್ತು. ಅವನು ದೀಪವನ್ನು ಅಲ್ಲಿಯೇ ಬಿಟ್ಟಿದ್ದ. ಅಡಿಗೆ ಮನೆಯ ಕಿಟಕಿಯಿಂದ ಒಂದಿಷ್ಟು ಕ್ಷೀಣವಾದ ಬೆಳಕು ಕಾಣಿಸುತ್ತಿತ್ತು. ಉರ್ಸುಲಾಳ ಕೂದಲಿನ ಪರಿಮಳವನ್ನು ಅನುಭವಿಸುತ್ತಿದ್ದ. ಸ್ಕಾರ್ಫ್ ಬಿಚ್ಚಿದಳು. ತನ್ನೆರಡೂ ತೋಳುಗಳನ್ನು ಎದೆಯ ಮೇಲಿರಿಸಿಕೊಂಡಳು.

"ಚಳಿ ಆಗ್ತಿರಬೇಕಲ್ಲ."

"ಒಳಗೆ ಹೋಗೋದು ಒಳ್ಳೆಯದೆನಿಸುತ್ತೆ"

"ಬೇಡ, ಪ್ಲೀಸ್...... ನಾನು....... ನಾನು.....

ಅವಳು ಹೋಗುತ್ತಿದ್ದ ದಾರಿಗೆ ಅಡ್ಡವಾಗಿ ನಿಂತ. ಅವಳು ಬೆರಗಿನ ಕಣ್ಣುಗಳಿಂದ ಅವನನ್ನು ನೋಡಿದಳು.

"ಯಾಕೆ ವಾನ್‌ಗೋ....... ನನಗೊಂದೂ ಅರ್ಥವಾಗ್ತಿಲ್ಲ."

"ನಾನು ನಿನ್ನ ಹತ್ತಿರ ಮಾತಾಡಬೇಕು, ಅಷ್ಟೇ! ನಾನು..... ನಾನು..... ಅದೇನೆಂದ್ರೆ......"

"ಬೇಡ. ದಯವಿಟ್ಟು ಈಗ ಬೇಡ. ನಾನು ಚಳಿಯಿಂದ ಸಾಯ್ತಿದ್ದೀನಿ."

"ನಾನು ನಿನಗೆ ಹೇಳಲೇ ಬೇಕು...... ಇವತ್ತು ನನಗೆ ಪ್ರಮೋಷನ್ ಸಿಕ್ತು. ಈಗ ಲಿಥೋಗ್ರಾಫ್ ವಿಭಾಗಕ್ಕೆ ಹೋಗ್ತಿದ್ದೀನಿ. ಒಂದೇ ವರ್ಷದಲ್ಲಿ ಇದು ಎರಡನೆ ಪ್ರಮೋಷನ್ ಮತ್ತು ಸಂಬಳ ಬಡ್ತಿ."

ಉರ್ಸುಲಾ ಹೆಜ್ಜೆ ಹಿಂದೆ ಹಾಕಿದಳು. ಸುತ್ತಿದ್ದ ಸ್ಕಾರ್ಫ್ ಬಿಚ್ಚಿದಳು. ಬೆಚ್ಚನೆಯ ಉಡುಪು ಇಲ್ಲದಿದ್ದರೂ, ಬೆಚ್ಚನೆಯ ಅನುಭವದೊಂದಿಗೆ ದೃಢವಾಗಿ ನಿಂತಳು.

"ವಾನ್‌ಗೋ ಇಷ್ಟಕ್ಕೂ ನನಗೆ ಏನು ಹೇಳಬೇಕಂತ ಇದ್ದೀ?"

ಅವಳ ನಿಲುವಿನಲ್ಲಿ ಪ್ರಶಾಂತತೆ ಇತ್ತು. ತಾನು ಸ್ವಲ್ಪ ಒರಟಾಗಿ ನಡೆದುಕೊಂಡದ್ದಕ್ಕೆ, ತನ್ನಲ್ಲೇ ಬೈದುಕೊಂಡ.

ಅವನಲ್ಲಿ ಚಿಮ್ಮುತ್ತಿದ್ದ ಭಾವೋದ್ವೇಗಗಳನ್ನು ತಡೆದುಕೊಂಡು ಶಾಂತನಾದ. ಅವಳ ಜೊತೆ ಯಾವ ಧಾಟಿಯಲ್ಲಿ ಮಾತಾಡಿದರೆ ಚೆನ್ನ – ಎಂದು ಯೋಚಿಸಿ, ಮಾತಿಗೆ ಮುಂದಾದ.

"ನಾನು ನಿನಗೆ ಹೇಳಬೇಕೆಂದಿರುವುದು ನಿನಗೆ ಮೊದಲೇ ಗೊತ್ತಿರುವಂಥಾದ್ದು. ನಾನು ನಿನ್ನನ್ನು ಎಷ್ಟು ಪ್ರೀತಿಸುತ್ತಿದ್ದೇನೆ ಅನ್ನೋದು ನಿನಗೇ ಗೊತ್ತಿದೆ. ನನ್ನನ್ನು ಮದುವೆಯಾಗುವೆಯಾ?"

ಅವನ ಅಧಿಕಾರದ ಧ್ವನಿಯನ್ನು ಕೇಳಿದ್ದೇ ಉರ್ಸುಲಾ ಗಾಭರಿ ಬಿದ್ದಳು. ಅವನು ಅವಳನ್ನು ಆಲಂಗಿಸಿಕೊಳ್ಳಬೇಕೇ? ಬೇಡವೇ ಎಂದು ಯೋಚಿಸಿದ.

"ನಿನ್ನನ್ನ ಮದುವೆಯಾಗಬೇಕೇ?..... ಸಾಧ್ಯವೇ ಇಲ್ಲ ವಾನ್‌ಗೋ"

ಅವನು ಅವಳನ್ನೂ ನೋಡಿದ. ಅವಳು ಕತ್ತಲಲ್ಲಿ ಅವನ ಕಣ್ಣುಗಳನ್ನು ಗಮನಿಸಿದಳು..... ನಾನು..... ಬಹುಶಃ...... ನಿನಗೆ ಹೇಳಿಲ್ಲವೇನೋ! ....... ನನ್ನ ಮದುವೆ ಈಗಾಗಲೇ ನಿಶ್ಚಯವಾಗಿದೆ....... ನಿನಗೆ ಗೊತ್ತಿಲ್ಲಾಂದ್ರೆ ಆಶ್ಚರ್ಯವಾಗುತ್ತೆ. ನಿಶ್ಚಯವಾಗಿ ಒಂದು ವರ್ಷವೇ ಕಳೆದಿದೆ.

ಎಷ್ಟು ಹೊತ್ತು ದಿಗ್ಭ್ರಾಂತನಾಗಿ ನಿಂತಿದ್ದನೆಂಬುದು ಅವನಿಗೇ ತಿಳಿಯಲಿಲ್ಲ. ಅವನ ಮನಸ್ಸಿನಲ್ಲಿ ಏನಾಗ್ತಿದೆ ಅನ್ನೋದೂ ಅರ್ಥವಾಗಲಿಲ್ಲ.

"ನನ್ನ ಭಾವೀಪತಿಯನ್ನು ನೀನು ನೋಡಿಲ್ಲ, ಅಲ್ಲ? ನೀನು ಬರುವುದಕ್ಕೆ ಮೊದಲೇ ಅವನೇ ನಿನ್ನ ಕೋಣೆಯಲ್ಲಿ ವಾಸಿಸುತ್ತಿದ್ದ. ಅದು ನಿನಗೆ ಗೊತ್ತಿದೆ ಅಂತ ಭಾವಿಸಿದ್ದೆ."

"ನನಗೆ ಹೇಗೆ ತಾನೇ ಗೊತ್ತಾಗುತ್ತೆ?"

ತುದಿಗಾಲಿನ ಮೇಲೆ ನಿಂತು ಅಡಿಗೆ ಮನೆಯ ಕಡೆ ನೋಡಿದಳು. "ಬಹುಶಃ ನಿನಗೆ ಯಾರಾದರೂ ಹೇಳಿರಬಹುದು ಅಂದ್ಕೊಂಡಿದ್ದೆ."

"ನಾನು ನಿನ್ನನ್ನು ಪ್ರೀತಿಸ್ತಿರೋದು ಗೊತ್ತಿದ್ದೂ ಒಂದು ವರ್ಷದಿಂದ ನನಗೆ ಹೇಳದೆ ಯಾಕೆ ಸುಮ್ಮನಿದ್ದೆ? – ಅವನ ಧ್ವನಿಯಲ್ಲಿ ಹಿಂಜರಿಕೆಯಾಗಲೀ, ತಡವರಿಕೆಯಾಗಲಿ ಇರಲಿಲ್ಲ.

'ನೀನು ನನ್ನನ್ನು ಪ್ರೀತಿಸಿದರೆ, ಅದರಲ್ಲಿ ನನ್ನದೇನಿದೆ ತಪ್ಪು, ನಾನು ನಿನ್ನನ್ನು ಗೆಳೆಯನಾಗಿ ಮಾತ್ರವೇ ಇಷ್ಟಪಟ್ಟೆ."

"ನಾನು ಈ ಮನೆಗೆ ಬಂದಾದ ಮೇಲೂ ಅವನು ನಿನ್ನನ್ನು ಭೇಟಿಯಾಗೋದಕ್ಕೆ ಬರ್ತಾನೇನು?"

"ಇಲ್ಲ. ಅವನು ವೇಲ್ಸ್‌ನಲ್ಲಿದ್ದ. ಈಗ ಬೇಸಿಗೆ ರಜ ಕಳೆಯೋದಕ್ಕೆ ಇಲ್ಲಿಗೆ ಬರ್ತಾನೆ."

"ಅಂದ್ರೆ! ಒಂದು ವರ್ಷದಿಂದ ಅವನನ್ನು ನೋಡಿಯೇ ಇಲ್ಲ. ಹಾಗಾದರೆ ನೀನು ಅವನನ್ನು ಮರೆತಿರಬಹುದು. ಈಗ ನಿನ್ನನ್ನು ಪ್ರೀತಿಸುತ್ತಿರುವವನು ನಾನೇ!"

ಆ ಕ್ಷಣಕ್ಕೆ ತಾನು ಏನು ಮಾಡಲು ಹೊರಟಿದ್ದೇನೆ ಅನ್ನೋ ಪ್ರಜ್ಞೆ ಇಲ್ಲದೆ ಉರ್ಸುಲಾಳನ್ನು ಸೆಳೆದುಕೊಂಡು ಬಿಗಿಯಾಗಿ ತಬ್ಬಿಹಿಡಿದ. ಅವಳ ತುಟಿ, ಕೆನ್ನೆ, ಗಲ್ಲಗಳನ್ನು ಮುತ್ತುಗಳಿಂದ ತುಂಬಿದ. ಅವಳ ಕೂದಲಿನ ಮಾದಕ ಸುವಾಸನೆಯ ಸುಖ ಅನುಭವಿಸಿದ. ಇಲ್ಲಿವರೆಗೆ ಅದುಮಿಟ್ಟುಕೊಂಡಿದ್ದ ಅವನೊಳಗಿನ ಪ್ರೀತಿ ಸ್ಫೋಟಗೊಂಡಿತ್ತು." ಭಾವುಕನಾದ. "ಉರ್ಸುಲಾ.... ಅವನನ್ನು ನೀನು ಪ್ರೀತಿಸುತ್ತಿಲ್ಲ. ಪ್ರೀತಿಸಲು ನಾನು ಬಿಡುವುದೂ ಇಲ್ಲ! ನೀನು ನನಗೆ ಮಾತ್ರವೇ ಹೆಂಡತಿಯಾಗಬೇಕು. ನಿನ್ನನ್ನು ಕಳೆದುಕೊಳ್ಳಲು ನಾನು ಸಿದ್ದನಿಲ್ಲ. ಅವನನ್ನು ಮರೆತು ನನ್ನನ್ನು ಮದುವೆಯಾಗುವವರೆಗೂ ನಾನು ಬಿಡುವುದೇ ಇಲ್ಲ!"

"ಮದುವೆಯಾಗೋದೇ.... ಅದೂ ನಿನ್ನನ್ನು! ನನ್ನನ್ನು ಪ್ರೀತಿಸುವವರನ್ನೆಲ್ಲ ನಾನು ಮದುವೆಯಾಗಲು ಸಾಧ್ಯವೇ?...... ಬಿಡು ನನ್ನನ್ನು. ಬಿಡಲಿಲ್ಲಾಂದ್ರೆ ನೋಡು, ಯಾರನ್ನಾದರೂ ಕರೀತೀನಿ."

ಕೊಸರಾಡಿ ಅವನಿಂದ ಬಿಡಿಸಿಕೊಂಡು, ಆ ಕತ್ತಲ ಹಾದಿಯಲ್ಲಿ ಹೆಜ್ಜೆಯ ವೇಗವನ್ನು ಹೆಚ್ಚಿಸಿ, ಹೋಗುತ್ತಾ ಅವನಿಗೆ ಕೇಳಿಸದಂತೆ, ಹೇಳಿಕೊಂಡರೂ ಅದು ಅವನ ಕಿವಿಗೆ ಅಪ್ಪಳಿಸಿತು.

"ಕೆಂಪು ಕೋತಿ!"

–೪–

ಮರುದಿನ ಬೆಳಿಗ್ಗೆ ಯಾರೂ ಅವನನ್ನು ಕರೆಯಲು ಬರಲಿಲ್ಲ. ಆಲಸ್ಯದಿಂದಲೇ ಹಾಸಿಗೆ ಬಿಟ್ಟು ಎದ್ದ. ಅಲ್ಲಲ್ಲಿ ಸ್ವಲ್ಪ ಕುರುಚಲು ಗಡ್ಡವನ್ನು ಹಾಗೆಯೇ ಬಿಟ್ಟು ಮುಖಕ್ಷೌರ ಮಾಡಿಕೊಂಡ. ಉಪಹಾರದ ವೇಳೆ ಉರ್ಸುಲಾ ಕಾಣಿಸಿಕೊಳ್ಳಲಿಲ್ಲ. ಗೂಪಿಲ್ಸ್ ಕಡೆ ನಡೆದ. ದಾರಿಯಲ್ಲಿ, ಮೊನ್ನೆ ನೋಡಿದ ಮುಖಗಳೇ ಎದುರಾದರೂ, ಸ್ವಲ್ಪ ಬದಲಾದಂತೆ ಕಾಣಿಸಿತು. ಒಂಟಿ ಜೀವಿಗಳು, ಅರ್ಥವಿಲ್ಲದ ಕೆಲಸಕಾರ್ಯಗಳಲ್ಲಿ ತೊಡಗಿಸಿಕೊಳ್ಳಲು ಆತುರದ ಹೆಜ್ಜೆಗಳನ್ನಿರಿಸಿ ನಡೆಯುತ್ತಿದ್ದಂತೆನಿಸಿತು.

ರಸ್ತೆಯಂಚಿನ ಹೂಗಳು, ಉದಯಿಸಿ ಹೊಳೆಯುತ್ತಿರುವ ಸೂರ್ಯ, ಯಾವುದೂ ಅವನ ಗಮನಕ್ಕೆ ಬರಲಿಲ್ಲ.

ದಿನದಲ್ಲಿ ಒಂದಿಪ್ಪತ್ತು ಚಿತ್ರಗಳ ಮಾರಾಟಮಾಡಿದ. ಅವನು ಮಾರಿದ ಚಿತ್ರಗಳಿಂದ ಗೂಪಿಲ್ಸ್‌ಗೆ ಸಾಕಷ್ಟು ಲಾಭ ಬಂದಿತ್ತು. ಆದರೆ ಇದರಿಂದ ವಿನ್ಸೆಂಟ್‌ಗೆ ಏನೂ ಸಂತೋಷವಾಗಲಿಲ್ಲ. ಗಿರಾಕಿಗಳ ಜೊತೆ ಅವನಿಗೆ ಅಷ್ಟಾಗಿ ಸಹನೆ ಇರುತ್ತಿರಲಿಲ್ಲ. ಕಾರಣ ಅವರ ದಡ್ಡತನ. ಅಲ್ಲಿಗೆ ಚಿತ್ರಗಳನ್ನು ಕೊಳ್ಳಲು ಬರುತ್ತಿದ್ದ ಎಷ್ಟೋ ಮಂದಿಗೆ, ಒಳ್ಳೆ ಚಿತ್ರಗಳು, ಕೆಟ್ಟ ಚಿತ್ರಗಳು ಯಾವುದು ಅನ್ನೋ ವ್ಯತ್ಯಾಸವೇ ತಿಳಿಯುತ್ತಿರಲಿಲ್ಲ. ಅಗ್ಗದ್ದು, ಕೃತಕವಾದ್ದು – ಯಾವುದೇ ಕೊಟ್ರು, ಶ್ರೇಷ್ಠ ಕಲಾಕೃತಿಗಳೆಂದು ಹೆಚ್ಚಿನ ದುಡ್ಡಿಗೆ ಮಾರಿದರೂ ಚಕಾರವೆತ್ತದೆ, ಮೂಲಕೃತಿಗಳೆಂದು ನಂಬಿಕೊಂಡು, ಹಿಗ್ಗುತ್ತಿದ್ದವರನ್ನು ಮೂರ್ಖರೆಂದು ಕಸಿವಿಸಿಗೊಳ್ಳುತ್ತಿದ್ದ.

ಅವನ ಜೊತೆಗಾರರು ಅವನಲ್ಲಿ ಸ್ನೇಹವನ್ನೇ ಕಾಣುತ್ತಿರಲಿಲ್ಲ. ಆದರೆ ವಿನ್ಸೆಂಟ್ ಪ್ರಯತ್ನದಿಂದ ಆದಷ್ಟೂ ತನ್ನನ್ನು ಗೆಲುವಾಗಿ, ಸ್ನೇಹಪರನಾಗಿ ತೋರಿಸಿಕೊಳ್ಳಲು ಹೆಣಗುತ್ತಿದ್ದ.

ಅವನ ಜೊತೆ ಕೆಲಸಗಾರರು, "ಪ್ರತಿಷ್ಠಿತ ವಾನ್‌ಗೋ ಕುಟುಂಬದ ಈ ವ್ಯಕ್ತಿ ಯಾಕೆ ಹೀಗೆ ನಡೆದುಕೊಳ್ತಿದ್ದಾನೆ?' ಎಂದು ತಮ್ಮ ತಮ್ಮಲ್ಲಿಯೇ ಪ್ರಶ್ನಿಸಿಕೊಂಡರು.

"ಎಲ್ಲೋ ಇವತ್ತು ಸರಿಯಾದ ಕಡೆ ಎದ್ದಿಲ್ಲಾಂತ ಕಾಣಿಸುತ್ತೆ"

"ವಿಚಾರ ಮಾಡೋಕೆ ಅವನಿಗೆ ಬೇಕಾದಷ್ಟಿದೆ. ಅವನ ಒಬ್ಬ ಅಂಕಲ್ (ಚಿಕ್ಕಪ್ಪ) ಅಂತೂ ಪ್ಯಾರಿಸ್, ಬರ್ಲಿನ್, ಬ್ರಸೆಲ್ಸ್, ಹೇಗ್, ಆ್ಯಮ್‌ಸ್ಟರ್ ಡ್ಯಾಂ ಮುಂತಾದ ಕಡೆ ಇರೋ ಗೂಪಿಲ್ಸ್ ಗ್ಯಾಲರಿಗಳಲ್ಲಿ ಅರ್ಧದಷ್ಟು ಗ್ಯಾಲರಿಗಳ ಮಾಲಿಕತ್ವ ಹೊಂದಿದ್ದಾನೆ. ಆತನಿಗೆ ಸಂತಾನ ಇಲ್ಲ. ಆತನಿಗೆ ಇರೋ ಆಸ್ತೀನಲ್ಲಿ ಇವನಿಗೆ ಅರ್ಧದಷ್ಟು ಬರುತ್ತೆ ಅಂತ ಎಲ್ಲ ಮಾತಾಡಿಕೊಳ್ತಿದ್ದಾರೆ."

"ಅದೆಲ್ಲ ಕೆಲವರ ಅದೃಷ್ಟ."

"ಅಯ್ಯೋ ಅದೆಲ್ಲ ಕತೆಯಲ್ಲಿ ಅರ್ಧ ಮಾತ್ರ, ಇನ್ನೊಬ್ಬ ಅಂಕಲ್ (ಹೆನ್ಡ್ರಿಕ್ ವಾನ್‌ಗೋ) ಬ್ರಸೆಲ್ಸ್ ಮತ್ತು ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿ ಬಹುದೊಡ್ಡ ಆರ್ಟ್ಸ್ ಗ್ಯಾಲರಿಗಳನ್ನು ಹೊಂದಿದ್ದಾನೆ. ಇನ್ನೂ ಒಬ್ಬ ಅಂಕಲ್, ಕಾರ್ನೆಲಿಯಸ್ ವಾನ್‌ಗೋ ಹಾಲೆಂಡ್‌ನಲ್ಲಿಯೇ ಬಹುದೊಡ್ಡ ಸಂಸ್ಥೆಯ ಮಾಲಿಕನಾಗಿದ್ದಾನೆ. ಇಡೀ ಯೂರೋಪ್‌ನಲ್ಲಿಯೇ ವಾನ್‌ಗೋ ಕುಟುಂಬದವರು ಬಹುದೊಡ್ಡ ಕಲಾಕೃತಿಗಳ ಮಾರಾಟಗಾರರಾಗಿದ್ದಾರೆ. ಒಂದಲ್ಲ ಒಂದು ದಿನ ಈ ಕೆಂಪು ಕೂದಲಿನ ಈ ಮನುಷ್ಯ ಕಲಾಕೃತಿಗಳ ಮಾರುಕಟ್ಟೆಯನ್ನೇ ನಿಯಂತ್ರಣದಲ್ಲಿ ಇರಿಸಿಕೊಳ್ಳುತ್ತಾನೆ!"

ವಿನ್ಸೆಂಟ್, ರಾತ್ರಿ ಊಟಕ್ಕೆಂದು, ಡೈನಿಂಗ್ ಹಾಲ್‌ಗೆ ಹೋದಾಗ, ಉರ್ಸುಲಾ ಮತ್ತು ಅವಳ ತಾಯಿ ಮೆಲ್ಲಗೆ, ಯಾರಿಗೂ ಕೇಳಿಸದ ರೀತಿಯಲ್ಲಿ ಏನೇನೋ ಗುಟ್ಟಾಗಿ ಮಾತಾಡಿಕೊಳ್ಳುತ್ತಿದ್ದರು. ಇವನು ಪ್ರವೇಶಿಸುತ್ತಲೇ ಮಾತನ್ನು ನಿಲ್ಲಿಸಿದರು.

ಉರ್ಸುಲಾ ಅಡಿಗೆ ಮನೆಗೆ ಓಡಿದಳು. ಉರ್ಸುಲಾಳ ತಾಯಿ ಲೋಯರ್, ಕುತೂಹಲದ ಹೊಳಪನ್ನು ತುಂಬಿಕೊಂಡಿದ್ದ ಕಣ್ಣುಗಳನ್ನು ಅವನತ್ತ ತಿರುಗಿಸಿ "ನಮಸ್ಕಾರ" –ಎಂದಳು.

ದೊಡ್ಡ ಮೇಜಿನ ಮುಂದೆ ತಾನೊಬ್ಬನೇ ಕುಳಿತು ಊಟ ಮಾಡಿದ. ಉರ್ಸುಲಾಳ ಮಾತುಗಳು, ಅವನಿಗೆ ದೊಡ್ಡ ಹೊಡೆತ ಅನಿಸಿ, ಆಶ್ಚರ್ಯಕ್ಕೆ ಒಳಗಾಗಿದ್ದನೇ ಹೊರತು, ಸೋತೆನೆಂದು ಎನಿಸಲಿಲ್ಲ. ಅವಳಿಂದ ನಕಾರಾತ್ಮಕ ಉತ್ತರವನ್ನು ಸ್ವೀಕರಿಸಲು ಸಿದ್ಧನಾಗಿರಲಿಲ್ಲ. ಹೇಗಾದರೂ ಅವಳ ತಲೆಯೊಳಗಿಂದ 'ಆ ಇನ್ನೊಬ್ಬ ವ್ಯಕ್ತಿ'ಯನ್ನು ಹೊರಗೆ ಹಾಕುವುದರಲ್ಲಿದ್ದ.

ಸುಮಾರು ಒಂದು ವಾರಕ್ಕೆ ಮುಂಚೆ ಒಂದು ದಿನ, ಅವಳನ್ನು ಹೇಗೋ ಹಿಡಿದ. ಅವಳೊಂದಿಗೆ ಮಾತಾಡಬೇಕೆಂದುಕೊಂಡ. ಒಂದು ವಾರದಿಂದ ನಿದ್ದೆಯಾಗಲೀ ಊಟವಾಗಲಿ, ಸರಿಯಾಗಿ ಮಾಡಿದ್ದೇ ಇಲ್ಲ. ಒಂದು ರೀತಿಯ ಅಧೈರ್ಯ ಮನೆ ಮಾಡಿತ್ತು. ಕಣ್ಣಿನ ಕಾಂತಿಯೂ ಮಂದವಾಗಿತ್ತು. ಮೊದಲಿಗಿಂತ, ಈಗ ಮಾತಾಡಬೇಕೆಂದರೆ, ಮಾತಾಡಲು ಶಬ್ದಗಳು ಸಿಗುವುದು ಕಷ್ಟವೆನಿಸಿತ್ತು.

ಭಾನುವಾರದ ರಾತ್ರಿಯೂಟ ಮುಗಿದ ಮೇಲೆ ಅವಳನ್ನು ಹಿಂಬಾಲಿಸಿ, ಗಾರ್ಡನ್ ತಲುಪಿದ.

"ಉರ್ಸುಲಾ, ಆ ರಾತ್ರಿ ನಾನು ಮಾಡಿದ ಕೆಲಸದಿಂದ ಹೆದರಿಸಿದ್ದರೆ, ಕ್ಷಮೆಯಿರಲಿ." ತನ್ನನ್ನು ಹಿಂಬಾಲಿಸಿ ಬಂದದ್ದು ಆಶ್ಚರ್ಯವೆನಿಸಿದರೂ ಶಾಂತವಾಗಿಯೇ ಅವನತ್ತ ನೋಡಿದಳು.

"ಪರವಾಗಿಲ್ಲ ಬಿಡು. ಅದೆಲ್ಲ ನನಗೆ ಅಷ್ಟು ಮುಖ್ಯವಾದ್ದು ಎನಿಸಲಿಲ್ಲ. ಇಬ್ಬರೂ ಮರೆತುಬಿಡೋಣ. ಆಗಬಹುದಲ್ಲ."

"ನಿನ್ನ ಜೊತೆ ನಡೆದುಕೊಂಡ ರೀತಿ ಬಹಳ ಒರಟು ಅಂತ ಅನಿಸಿದ್ದನ್ನು ಮರೆತು ಬಿಡಬೇಕೆಂದೇ ನನಗೂ ಇದೆ. ಆದರೆ ನಾನಾಡಿದ ಮಾತೆಲ್ಲ ಸತ್ಯವಾದ್ದು."

ಒಂದು ಹೆಜ್ಜೆ ಅವಳ ಮುಂದಕ್ಕೆ ಬಂದ. ಅವಳು ದೂರ ಸರಿದಳು.

"ಮತ್ತೆ ಯಾಕೆ ಅದನ್ನೇ ಮಾತಾಡ್ತೀ? ನಡೆದದ್ದೆಲ್ಲವನ್ನೂ ತಲೆಯಿಂದ ತೆಗೆದುಹಾಕಿದ್ದೀನಿ" ಎಂದು ಹೇಳಿದ್ದೇ ಅವನ ಕಡೆ ಬೆನ್ನು ಹಾಕಿ ಸರಸರನೆ ರಸ್ತೆಗೆ ಬಂದಳು. ಅವನು, ಅವಳನ್ನು ಹಿಂಬಾಲಿಸಿದ.

"ಇಲ್ಲ ಉರ್ಸುಲಾ ನಾನು ಮತ್ತೊಮ್ಮೆ ನಿನ್ನ ಹತ್ತಿರ ಮಾತಾಡಲೇ ಬೇಕು. ನಿನಗೆ ಗೊತ್ತಿಲ್ಲ. ನಾನು ನಿನ್ನನ್ನು ತುಂಬಾ ಪ್ರೀತಿಸ್ತೀನಿ! ಒಂದು ವಾರದಿಂದ ನನ್ನ ಸ್ಥಿತಿ ಹೇಗಿದೇಂತ ನಿನಗೆ ಅರ್ಥವಾಗಿಲ್ಲ. ಯಾಕೆ ನನ್ನಿಂದ ತಪ್ಪಿಸಿಕೊಂಡು ಓಡಿಹೋಗ್ತಿ?"

"ಒಳಗೆ ಹೋಗೋಣವೇ? ಅಮ್ಮ ಯಾರಿಗೋ ಕಾಯ್ತಿದ್ದಾಳೆ."

"ನೀನು ಆ ಮನುಷ್ಯನನ್ನು ಪ್ರೀತಿಸುತ್ತಿರೋದು ನಿಜ ಅಲ್ಲ. ನಿನ್ನ ಕಣ್ಣುಗಳೇ ಹೇಳುತ್ತಿವೆ."

"ನಿಂ ಜೊತೆ ಮಾತಾಡೋಕೆ ನನಗೆ ಸಮಯ ಇಲ್ಲ. ಅಂದ ಹಾಗೆ, ರಜಕ್ಕೆ ಊರಿಗೆ ಹೋಗೋದು ಯಾವಾಗ?"

ಉಗುಳು ನುಂಗಿ ಹೇಳಿದ – "ಜುಲೈ ತಿಂಗಳಲ್ಲಿ"

"ಸದ್ಯ ಅದೃಷ್ಟ! ನನ್ನ ಫಿಯಾನ್ಸಿ ಜುಲೈನಲ್ಲಿಯೇ ಬರುವವನಿದ್ದಾನೆ. ಅವನು ಮೊದಲಿದ್ದ ಕೊಠಡಿ ಹೇಗಿದ್ದರೂ ಬೇಕಾಗಿದೆ."

"ಉರ್ಸುಲಾ, ನಿನ್ನನ್ನು ನಾನು ಅವನಿಗೆ ಎಂದಿಗೂ ಬಿಟ್ಟು ಕೊಡೋದಿಲ್ಲ.

"ನೋಡು ಈ ರೀತಿ ಮಾತಾಡುವುದನ್ನು ಇನ್ನು ಮುಂದೆ ನಿಲ್ಲಿಸಬೇಕಾಗಿದೆ. ಇಲ್ಲಾಂದ್ರೆ, ಅಮ್ಮ ನಿನಗೆ ಬೇರೆ ಕಡೆ ಲಾಡ್ಜ್ ನೋಡಿಕೊಳ್ಳೋಕೆ ಹೇಳ್ತಾಳೆ."

ಮುಂದೆ ಎರಡು ತಿಂಗಳೂ ತನ್ನನ್ನು ಪ್ರೀತಿಸುವಂತೆ ಒತ್ತಾಯಿಸುತ್ತಲೇ ಇದ್ದ. ಅವನ ಹಳೆಯ ಸ್ವಭಾವವೇ ಮರುಕಳಿಸಿತು. ಅವಳ ಬಗ್ಗೆ ಯೋಚನೆ ಮಾಡೋದಕ್ಕೆ ಅಡ್ಡಿಯಾಗುತ್ತೇಂತ, ಯಾರನ್ನೂ ಮಾತಾಡಿಸುತ್ತಿರಲಿಲ್ಲ. ಗ್ಯಾಲರಿಯಲ್ಲಿನ ಜೊತೆಗಾರರೊಂದಿಗೆ ಸಿಡುಕುತ್ತಲೇ ಇರುತ್ತಿದ್ದ. ಉರ್ಸುಲಾ ಬಗ್ಗೆ ಒಡೆದೆದ್ದ ಪ್ರೀತಿಯ ಬುಗ್ಗೆ, ಬತ್ತಿತ್ತು. ಜುಂಡರ್ಟ್ ನಲ್ಲಿ ತಂದೆತಾಯಿಗಳ ಜೊತೆಗಿದ್ದಾಗಿನ ಸ್ವಭಾವವೇ ಮತ್ತೆ ಅವನನ್ನು ಆವರಿಸಿತು. ಮುಖದಲ್ಲಿ ವಿಷಾದ ಛಾಯೆ. ಗೆಲುವೆಂಬುದೇ ಅವನಿಗೆ ಅಪರಿಚಿತವಾಯಿತು.

ಜುಲೈ ತಿಂಗಳು ಬಂತು. ಅದರೊಂದಿಗೆ ರಜೆಯೂ ಸಿಕ್ಕಿತು. ಆದರೂ ಲಂಡನ್ ಬಿಡಲು ಮನಸ್ಸಾಗಲಿಲ್ಲ. ತಾನು ಅಲ್ಲಿ ಇರುವವರೆಗೆ ಉರ್ಸುಲಾ ಬೇರೆ ಯಾರನ್ನೊ ಪ್ರೀತಿಸಲು ಆಗುವುದಿಲ್ಲವೆಂಬುದು ಅವನ ನಂಬಿಕೆಯಾಗಿತ್ತು. ಅವನು ದಿವಾನ್‌ಖಾನೆಗೆ ಬಂದ. ಅಲ್ಲಿ ತಾಯಿ-ಮಗಳು ಕುಳಿತಿದ್ದರು. ವಾನ್‌ಗೋನನ್ನು ನೋಡುತ್ತಿದ್ದಂತೆ ಅವರಿಬ್ಬರಲ್ಲಿ ಕಣ್ಸನ್ನೆಯ ಸಂಭಾಷಣೆ ನಡೆಯಿತು.

"ಮೇಡಂ ಲೋಯರ್, ನಾನು ಕೇವಲ ಇದೊಂದು ಬ್ಯಾಗ್ ತೆಗೆದುಕೊಂಡು ಹೋಗ್ತಿದ್ದೀನಿ. ಉಳಿದೆಲ್ಲ ಸಾಮಾನು ಇಲ್ಲಿಯೇ ಇರುತ್ತೆ. ಹದಿನೈದು ದಿನದ ಮಟ್ಟಿಗೆ ಊರಿಗೆ ಹೋಗುತ್ತಿದ್ದೀನಿ. ಆ ಹದಿನೈದು ದಿನದ ನನ್ನ ಬಾಡಿಗೆ ಹಣ ತೆಗೆದುಕೊಳ್ಳಿ."

"ಮಿಸ್ಟರ್ ವಾನ್‌ಗೋ, ನೀವು ನಿಮ್ಮೆಲ್ಲಾ ವಸ್ತುಗಳನ್ನು ತೆಗೆದುಕೊಂಡು ಹೋಗೋದು ಒಳ್ಳೇದು."

"ಆದರೆ ಯಾಕೇ?"

"ನೀವಿದ್ದ ಕೊಠಡಿಯನ್ನು ನಾವು ಬೇರೆಯವರಿಗೆ ಬಾಡಿಗೆಗೆ ನೀಡಿದ್ದೀವಿ. ಸೋಮವಾರವೇ ಅವರು ಬರುತ್ತಾರೆ. ನೀವು ಬೇರೆ ಎಲ್ಲಿಯಾದರೂ ವ್ಯವಸ್ಥೆ ಮಾಡಿಕೊಳ್ಳಿ."

"ನಾವು?" ವಾನ್‌ಗೋ ಉರ್ಸುಲಾ ಕಡೆ ನೋಡಿದ. ಅವನ ನೋಟದಲ್ಲಿ ಇದ್ದ ಮಾತುಗಳೆಲ್ಲ ಪ್ರಶ್ನೆಗಳಾಗಿದ್ದವು.

"ಹೌದು! ನಾವು"........ ನನ್ನ ಮಗಳಿಗೆ ಗಂಡನಾಗುವವನು ನೀವು ಇಲ್ಲಿರುವುದನ್ನು ಇಷ್ಟಪಡುತ್ತಿಲ್ಲ. ನನಗೆ ಅನಿಸ್ತಿದೆ. ನೀವು ಇಲ್ಲಿಗೆ ಬರದೆ ಇದ್ದರೇನೆ ಒಳ್ಳೆದಾಗುತ್ತಿತ್ತು, ಅಂತ."

–೫–

ಥಿಯೋಡೋರಸ್ ವಾನ್‌ಗೋ, ಗಾಡಿ ತೆಗೆದುಕೊಂಡು ಮಗನನ್ನು ಕರೆದು ತರಲು ಬ್ರೆಡಾ ಸ್ಟೇಷನ್‌ಗೆ ಹೊರಟ. ಪಾದ್ರಿಗಳು ಧರಿಸುತ್ತಿದ್ದ ದಪ್ಪನೆಯ ಕಪ್ಪುಕೋಟನ್ನು ಧರಿಸಿದ್ದ ಗಂಜಿಹಾಕಿ ಇಸ್ತ್ರಿಮಾಡಿದ್ದ ಬಿಳಿಯ ಷರ್ಟು, ಕಪ್ಪು ಕಾಲರ್‌ನಲ್ಲಿದ್ದ ತಂದೆಯನ್ನು ಕೂಡಲೇ ವಾನ್‌ಗೋ ಗುರುತಿಸಿದ. ಪ್ರಶಾಂತ ಕಣ್ಣುಗಳು – 'ಇದು ನಾನು' ಎಂದು ಹೇಳುತ್ತಿದ್ದಂತೆ ಇದ್ದವು.

ಧರ್ಮಗುರು ಥಿಯೋಡೋರಸ್. ಜುಂಡರ್ಟ್‌ನಲ್ಲಿ ಒಳ್ಳೆ ಕೆಲಸಗಳನ್ನು ಮಾಡುತ್ತಿದ್ದಾನೆಂದು ಗುರುತಿಸಿಕೊಂಡಿದ್ದ. ಆದರೂ ಜೀವನದಲ್ಲಿ ಯಾಕೋ ಏನೋ ಮಹತ್ವದ್ದನ್ನು ಸಾಧಿಸಲು ಆಗಲೇ ಇಲ್ಲ. ಆ್ಯಮಸ್ಟರ್ ಡ್ಯಾಮ್, ಹೇಗ್ – ಎಲ್ಲಿಯಾದರೂ ಸರಿ, ಒಳ್ಳೆಯ ಸ್ಥಾನ ತನಗೆ ಕೊಡಬೇಕಾಗಿತ್ತು ಎಂದು ಅಂದುಕೊಂಡದ್ದುಂಟು. ಕ್ರೈಸ್ತ ಮಂದಿರಗಳಿದ್ದ ಪ್ರಾಂತದಲ್ಲಿಯೇ ಅವನನ್ನು ಅತ್ಯಂತ ಸುಂದರ, ಒಳ್ಳೆಯ ಧರ್ಮಬೋಧಕ, ವಿದ್ಯಾವಂತ, ಧಾರ್ಮಿಕ ನಿಷ್ಠೆಯುಳ್ಳವ, ದಣಿವರಿಯದ ದೈವ ಸೇವಾಧುರೀಣ, ಹಸನ್ಮುಖಿ, ಸ್ನೇಹಪರ, – ಎಂದೆಲ್ಲಾ ಪ್ರಸಿದ್ಧನಾಗಿದ್ದ. ಆದರೂ ಇಪ್ಪತ್ತೈದು ವರ್ಷಗಳಿಂದ ಜುಂಡರ್ಟ್‌ನಂತ ಸಣ್ಣ ಹಳ್ಳಿಯಲ್ಲಿ ಅನಾಮಧೇಯನಾಗಿ ಉಳಿದು, ನೆನಪಿನಿಂದಲೇ ಮರೆಯಾಗಿದ್ದ. ವಾನ್‌ಗೋ ಕುಟುಂಬದಲ್ಲಿನ ಆರು ಮಂದಿ ಸೋದರರಲ್ಲಿ ಏನನ್ನೂ ಸಾಧಿಸದೆ ಉಳಿದವನೆಂದರೆ ಇವನೇ. ವಿನ್ಸೆಂಟ್ ಹುಟ್ಟಿದ ಮನೆ, ಜುಂಡರ್ಟ್‌ನಲ್ಲಿ, ಮಾರುಕಟ್ಟೆಯಿಂದ ಸ್ವಲ್ಪ ದೂರದ ರಸ್ತೆಯ ಒಂದು ಪಕ್ಕದಲ್ಲಿತ್ತು. ಆ ಮನೆಯ ಅಡಿಗೆ ಕೋಣೆಯ ಹಿಂಭಾಗದಲ್ಲಿ ಅಕೇಸಿಯಾ ಮತ್ತು ಇತರೆ ಹಲವು ಬಗೆಯ ಹೂಗಳಿಂದ ತುಂಬಿದ್ದ ತೋಟವೊಂದಿತ್ತು. ಮನೆಗೆ ಹೊಂದಿಕೊಂಡಂತಿದ್ದ ಚರ್ಚ್‌ನಲ್ಲಿ, ಎರಡೂ ಕಡೆಯ ಗೋಡೆಗಳಲ್ಲಿ ಗಾಜಿನ ಕಿಟಿಕಿಗಳಿದ್ದವು. ನೆಲದ ಮೇಲೆ ಹದಿನೈದು ಮರದ ಬೆಂಚುಗಳಿದ್ದವು. ಅದೊಂದು ಸಾಧಾರಣ ಪೂಜಾಗೃಹವಾಗಿತ್ತು.

ವಿನ್ಸೆಂಟ್‌ನ ತಾಯಿ ಮನೆಯ ಕಿಟಿಕಿಯೊಳಗಿಂದಲೇ ಇವರು ಬರುವುದನ್ನು ನಿರೀಕ್ಷಿಸುತ್ತಾ ಕಾಯುತ್ತಿದ್ದಳು. ಗಾಡಿ ಬರುವ ಮೊದಲೇ ಬಾಗಿಲುಗಳನ್ನು ತೆರೆದಿರಿಸಿದ್ದಳು. ಅವರು ಬರುತ್ತಿದ್ದಂತೆ ಮಗನನ್ನು ಪ್ರೀತಿಯಿಂದ ಬರಸೆಳೆದು ಅಪ್ಪಿಕೊಂಡಳು. ಆ ಕ್ಷಣದಲ್ಲಿಯೇ, ಮಗ ಯಾಕೋ ಬೇಸರದಿಂದ ಇದ್ದಾನೆ ಅನ್ನುವುದನ್ನು ಗ್ರಹಿಸಿದಳು.

"ಮಗು ವಿನ್ಸೆಂಟ್"

ಹಸಿರು, ನೀಲಿ ಬಣ್ಣದ ಅವಳ ಕಣ್ಣುಗಳಿಂದ, ನೇರವಾಗಿ ಪ್ರಶ್ನಿಸದೆಯೇ, ವ್ಯಕ್ತಿಗಳನ್ನು ಗ್ರಹಿಸುತ್ತಿದ್ದಳು. ವಯಸ್ಸಿನೊಂದಿಗೆ ಮುಖ ಮತ್ತು ಕಣ್ಣುಗಳಡಿಯಲ್ಲಿ ಆಳವಾಗಿ ಗೆರೆಗಳು ಮೂಡುತ್ತಿದ್ದಂತೆ, ಭಾವಾಭಿವ್ಯಕ್ತಿ ಇನ್ನಷ್ಟು ಸ್ಪಷ್ಟವಾಗಿ ಕಾಣುತ್ತಿತ್ತು. ಸಣ್ಣನಗೆಯೊಂದನ್ನು ಚೆಲ್ಲಿದಳು.

ಅನ್ನಾಕಾರ್ನೇಲಿಯಾ ಕಾರ್ಬೆನ್‌ಟಸ್ ಹೇಗ್ ಪ್ರದೇಶದವಳು. ಅವಳ ತಂದೆ ವಿಲ್ಲಿಯಮ್ ಕಾರ್ಬೆನ್‌ಟಸ್, "ದೊರೆಯ ಬುಕ್ ಬೈಂಡರ್" ಎಂದು ಗುರುತಿಸಿಕೊಂಡಿದ್ದ.

ಹಾಲೆಂಡ್‌ನ 'ಸಂವಿಧಾನ' ಕೃತಿಯನ್ನು ಬೈಂಡ್‌ಮಾಡಲು ಇವನನ್ನೇ ಪ್ರಪ್ರಥಮವಾಗಿ ಆಯ್ಕೆಮಾಡಿದ್ದುದರಿಂದ, ಆ ಹೆಸರು ಅವನಿಗೆ ಪ್ರಚಲಿತವಾಗಿತ್ತು. ಈ 'ಬುಕ್ ಬೈಂಡಿಂಗ್' ದಂಧೆ ಚೆನ್ನಾಗಿ ನಡೆಯುತ್ತಿತ್ತು. ಅವನ ೩ ಹೆಣ್ಣು ಮಕ್ಕಳಲ್ಲಿ, ಒಬ್ಬಳನ್ನು ಅಂಕಲ್ ವಿನ್ಸೆಂಟ್ ವಾನ್‌ಗೋ ಮದುವೆಯಾಗಿದ್ದ. ಮತ್ತೊಬ್ಬಳನ್ನು ಆ್ಯಮಸ್ಟರ್ ಡ್ಯಾಮ್‌ನ ರೆವರೆಂಡ್ ಸ್ಟ್ರಿಕರ್ ಮದುವೆಯಾಗಿದ್ದ. ಅನ್ನಾ ಬಹಳ ಒಳ್ಳೆಯ ಹೆಂಗಸು. ಪ್ರಪಂಚದಲ್ಲಿ, ಅವಳ ದೃಷ್ಟಿಯಲ್ಲಿ ಯಾವುದೂ ಕೆಟ್ಟದ್ದಿಲ್ಲ. ಕೆಟ್ಟದ್ದು ಏನೆಂದೇ ಅವಳಿಗೆ ತಿಳಿದಿರಲಿಲ್ಲ. ಅವಳ ಅನುಭವಕ್ಕೆ ಬಂದದ್ದು ಕೇವಲ ಕಷ್ಟ, ದೌರ್ಬಲ್ಯ, ಆಮಿಷಗಳು, ನೋವು - ಇತ್ಯಾದಿಗಳು ಮಾತ್ರ. ಥಿಯೋಡೋರಸ್ ವಾನ್‌ಗೋ ಕೂಡ ಬಹಳ ಒಳ್ಳೆಯ ಮನುಷ್ಯ. ಕೆಡುಕೆಂದರೇನೆಂಬುದನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದ. ಎಳ್ಳಷ್ಟು ಕೆಡುಕನ್ನೂ ಸಹಿಸುತ್ತಿರಲಿಲ್ಲ.

ವಾನ್‌ಗೋ ಮನೆಯಲ್ಲಿ, ಮಧ್ಯಭಾಗದಲ್ಲಿ ಡೈನಿಂಗ್ ಹಾಲಿತ್ತು. ಊಟದ ಸಮಯದಲ್ಲಿ ಎಲ್ಲ ಪಾತ್ರೆ, ಪದಾರ್ಥಗಳನ್ನು ಇರಿಸಿಕೊಂಡು, ಊಟವಾದ ಮೇಲೆ ಅದನ್ನೆಲ್ಲ ಎತ್ತಿ ಇಟ್ಟುಬಿಡುತ್ತಿದ್ದರು. ಸಂಜೆವೇಳೆ ದೀಪದ ಬೆಳಕಿನಲ್ಲಿ ಈ ಮೇಜಿನ ಸುತ್ತ ಕುಳಿತೇ ಮಾತುಕತೆಯಲ್ಲಿ ಸಮಯ ಕಳೆಯುತ್ತಿದ್ದರು. ಅನ್ನಾಗೆ ವಿನ್ಸೆಂಟ್‌ದೇ ಯೋಚನೆ. ಅವನ ನಡವಳಿಕೆಯಲ್ಲಿ, ಏನೋ ಭೀತಿಗೊಂಡಂತೆಯೂ ಒಮ್ಮೊಮ್ಮೆ ಸಿಡಿಮಿಡಿಗೊಳ್ಳುವ ಸ್ವಭಾವದವನಂತೆಯೂ ಕಾಣುತ್ತಿದ್ದ.

"ವಿನ್ಸೆಂಟ್, ಏನಾದರೂ ಸಮಸ್ಯೆ ಇದೆಯೇನು?" ಯಾಕೋ ನೋಡಿದರೆ, ಹುಷಾರಿಲ್ಲದವನಂತೆ ಕಾಣುತ್ತಿದ್ದೀಯ." - ರಾತ್ರಿ ಊಟ ಮಾಡುವಾಗ ಅನ್ನಾ, ಮಗನನ್ನು ವಿಚಾರಿಸಿದಳು.

ವಿನ್ಸೆಂಟ್ ಮೇಜಿನತ್ತ ದೃಷ್ಟಿ ಹಾಯಿಸಿದ. ಅನ್ನಾಳ ಸೋದರಿಯರಾದ ಎಲಿಜಬೆತ್, ವಿಲ್ಲೆಮಿಯೆನ್ ಮತ್ತು ಅವರ ಜೊತೆಗೆ ಅಪರಿಚಿತರಾಗಿದ್ದ ಇನ್ನೂ ಮೂವರು ಹುಡುಗಿಯರು ಕುಳಿತಿದ್ದರು.

"ಇಲ್ಲ....... ಏನೂ ಸಮಸ್ಯೆಯಿಲ್ಲ" ವಿನ್ಸೆಂಟ್ ಉತ್ತರಿಸಿದ.

"ಲಂಡನ್, ನಿನಗೆ ಹಿಡಿಸಿದ ತಾನೇ?..... ನಿನಗೆ ಹಿಡಿಸಿಲ್ಲಾಂದ್ರೆ ಹೇಳು, ನಿನ್ನ ಅಂಕಲ್ ಜೊತೆ ಮಾತಾಡಿ, ಪ್ಯಾರಿಸ್‌ನಲ್ಲಿ ಅಂಗಡಿಗೆ ಟ್ರಾನ್ಸ್‌ಫರ್ ಮಾಡೋಕೆ ಹೇಳ್ತೀನಿ" - ಥಿಯೋಡೋರಸ್ ಹೇಳಿದ.

ವಿನ್ಸೆಂಟ್ ಸ್ವಲ್ಪ ಸಿಡಿಮಿಡಿಗೊಂಡ. "ಬೇಡ, ಬೇಡ..... ಆ ಕೆಲಸ ಮಾಡೋದು ಬೇಡ...... ಲಂಡನ್ ಬಿಡೋಕೆ ನನಗೆ ಇಷ್ಟ ಇಲ್ಲ" ಭಾವುಕನಾಗಿ ಹೇಳಿದ. ಸ್ವಲ್ಪ ಶಾಂತವಾದ ಮೇಲೆ ಸಮಾಧಾನವಾಗಿ - "ಅಂಕಲ್‌ಗೆ ಟ್ರಾನ್ಸ್‌ಫರ್ ಮಾಡಬೇಕಂತ ಮನಸ್ಸು ಬಂದಾಗ, ತಾನೇ ಮಾಡ್ತಾನೆ" ಉತ್ತರಿಸಿದ.

"ಸರಿ ನಿನ್ನಿಷ್ಟ" ಥಿಯೋಡೋರಸ್ ಹೇಳಿ ಸುಮ್ಮನಾದ.

"ನನಗೆ ಗೊತ್ತು. ಅವನು ಈ ಥರ ಆಗಿರೋದಕ್ಕೆ ಆ ಹುಡುಗೀನೇ ಕಾರಣ" - ತನ್ನಲ್ಲೇ ಹೇಳಿಕೊಂಡಳು.

ಅವನ ಮನೆ ಪರಿಸರದಲ್ಲಿ ಪೈನ್ ಮತ್ತು ಓಕ್ ಮರಗಳ ಕಾಡಿತ್ತು. ವಿನ್ಸೆಂಟ್ ಅಲ್ಲೆಲ್ಲಾ ಸುತ್ತಾಡಿ ಸಮಯ ಕಳೆಯುತ್ತಿದ್ದ. ಅಲ್ಲಿನ ಮರಗಿಡಗಳು, ಕೆರೆಗಳು ಅವನಿಗೆ ಖುಷಿ ಕೊಡುತ್ತಿದ್ದವು. ಅದು ಬಿಟ್ಟರೆ ಅವನಿಗೆ ಪ್ರಿಯವಾದ್ದು 'ಡ್ರಾಯಿಂಗ್' ಮಾಡೋದು. ತೋಟಗಳ ಚಿತ್ರ, ತನ್ನ ಮನೆಯಿಂದ ನೋಡಿದಾಗ ಕಾಣುತ್ತಿದ್ದ ಶನಿವಾರದ ಸಂತೆ, ಮನೆಯ ಮುಂಬಾಗಿಲು – ಹೀಗೆ ಹಲವಾರು ಚಿತ್ರಗಳನ್ನು ಬಿಡಿಸಿದ. ಇದರಿಂದಾಗಿ ಅವನಿಗೆ ಸ್ವಲ್ಪ ಕಾಲ ಉರ್ಸುಲಾಳ ನೆನಪಿನಿಂದ ದೂರವಿರಲು ಸಾಧ್ಯವಾಯಿತು.

ಥಿಯೋಡೋರಸ್‌ಗೆ, ತನ್ನ ಹಿರಿಯ ಮಗ ತನ್ನ ದಾರಿ ಹಿಡಿಯಲಿಲ್ಲ ಎನ್ನುವ ಚಿಂತೆಯೇ ಹೆಚ್ಚಾಗಿ ಕಾಡುತ್ತಿತ್ತು. ತಂದೆ ಮಗ ಇಬ್ಬರೂ ಖಾಯಿಲೆ ಬಿದ್ದಿದ್ದ ರೈತನೊಬ್ಬನನ್ನು ವಿಚಾರಿಸಿಕೊಂಡು ಬರಲು ಹೋಗಿದ್ದರು. ಹಿಂತಿರುಗಿ ಬರುವಾಗ, ಒಂದಷ್ಟು ದೂರ ಬಂದಾದ ಮೇಲೆ ಇಬ್ಬರೂ ಗಾಡಿಯಿಂದ ಇಳಿದು, ಸ್ವಲ್ಪ ಹೊತ್ತು ನಡೆದರು. ಮುಳುಗುತ್ತಿದ್ದ ಸೂರ್ಯನ ಬಿಂಬ ಕೊಳಗಳ ನೀರಿನಲ್ಲಿ ಕಾಣಿಸಿತು. ಸುತ್ತಲಿನ ಪರಿಸರ ಪ್ರಶಾಂತವಾಗಿ, ಹಿತವಾಗಿತ್ತು. ನಿಸರ್ಗದ ವ್ಯವಸ್ಥೆಯಲ್ಲಿ ಒಂದು ಬಗೆಯ ಸಾಮರಸ್ಯ ಗೋಚರಿಸುತ್ತಿತ್ತು.

"ನನ್ನ ತಂದೆ ಪಾದ್ರಿಯಾಗಿದ್ದ. ನೀನೂ ಪಾದ್ರಿಯಾಗಿ ಪರಂಪರೆಯನ್ನು ಮುಂದುವರೆಸುತ್ತೀ ಎಂದು ನಂಬಿದ್ದೆ."

"ನಾನು ನನ್ನ ವೃತ್ತಿಯನ್ನು ಬದಲಾಯಿಸುತ್ತೇನೆ – ಅಂತ ನಿಮಗೆ ಯಾಕೆ ಅನ್ನಿಸಿದೆ?"

"ಹಾಗೇನಲ್ಲ. ಒಂದು ವೇಳೆ ಬದಲಾಯಿಸಲು ಬಯಸುವುದಾದರೆ? ಅಂತ ಮಾತ್ರ, ಹೇಳಿದೆ..... ನೀನು ಬೇಕಾದರೆ, ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿ ನಿನ್ನ ಅಂಕಲ್ ಜ್ಯಾನ್ ಜೊತೆ ಇದ್ದು ಯೂನಿವರ್ಸಿಟೀಲಿ ಓದಬಹುದು. ರೆವರೆಂಡ್ ಸ್ಟ್ರಿಕರ್ ಕೂಡಾ ನಿನ್ನ ವಿದ್ಯಾಭ್ಯಾಸಾನ ನೋಡಿಕೊಳ್ತೀನಿ ಅಂತ ಹೇಳಿದ್ದಾರೆ.

"ಹಾಗಾದರೆ, ಗೂಪಿಲ್ ಬಿಡಬೇಕೂಂತ ಸಲಹೆ ಕೊಡ್ತಿದ್ದೀರಾ?"

"ಛೆ! ಛೆ! ಹಾಗೇನಿಲ್ಲ...... ಅಕಸ್ಮಾತ್ ಅಲ್ಲಿ ನಿನಗೆ ನೆಮ್ಮದಿ ಇಲ್ಲಾಂದ್ರೆ...... ಕೆಲವು ಸಲ ಇಂಥ ಬದಲಾವಣೆ ಬೇಕಾಗುತ್ತೆ......"

"ನನಗೂ ಗೊತ್ತಿದೆ. ಆದರೆ ಸದ್ಯಕ್ಕೆ, ನನಗೆ ಗೂಪಿಲ್ಸ್ ಬಿಡೋ ಯೋಚನೆ ಇಲ್ಲ."

ಲಂಡನ್‌ಗೆ ಹೊರಡುವ ದಿನ ಬಂತು. ತಾಯಿ ತಂದೆ ಇಬ್ಬರೂ ಬ್ರೆಡಾ ಸ್ಟೇಷನ್‌ವರೆಗೂ ಬಂದಿದ್ದರು.

"ನಿನ್ನ ಹಳೇ ವಿಳಾಸಕ್ಕೇ ಕಾಗದ ಬರೆಯೋದಾ ಹೇಗೆ ವಿನ್ಸೆಂಟ್?" ಕಾರ್ನೆಲಿಯಾ ವಿಚಾರಿಸಿದಳು.

"ಇಲ್ಲ. ನಾನು ಮನೆ ಬದಲಾಯಿಸ್ತಾ ಇದ್ದೀನಿ."

"ಲೋಯರ್ ಮನೆ ಖಾಲಿ ಮಾಡ್ತಿರೋದು ನನಗೆ ಸಂತೋಷ ತಂದಿದೆ. ಯಾಕೋ ನನಗೆ ಆ ಕುಟುಂಬ ಅಷ್ಟಾಗಿ ಹಿಡಿಸಿಲ್ಲ. ನಂಬಿಕೆಗೆ ಅರ್ಹರಲ್ಲ ಅಂತ ಅನಿಸಿತ್ತು."

ವಿನ್ಸೆಂಟ್ ಸೆಟೆದ. ತಾಯಿ ತನ್ನ ಪ್ರೀತಿಯ ಕರಸ್ಪರ್ಶವನ್ನು ನೀಡಿದಳು. ಥಿಯೋಗೆ ಕೇಳಿಸದ ರೀತಿಯಲ್ಲಿ ಗುಟ್ಟಾಗಿ ಹೇಳಿದಳು – "ಬೇಸರ ಮಾಡಿಕೊಳ್ಳಬೇಡ ಮಗು. ಆ ಡಚ್ ಹುಡುಗಿಯ ಜೊತೆ ನೀನು ಸಂತೋಷವಾಗಿರುತ್ತೀ. ಚೆನ್ನಾಗಿ ಜೀವನದಲ್ಲಿ ನೆಲೆನಿಂತ ಮೇಲೆ ಅವಳ ಬಗ್ಗೆ ಯೋಚನೆ ಮಾಡೋಣ. ಆ ಹುಡುಗಿ ಉರ್ಸುಲಾಳನ್ನು ಮರೆತುಬಿಡು. ಅವಳ ಸಹವಾಸ ಬೇಡ. ಅವಳು ನಮ್ಮಂಥದವರಿಗೆ ಸರಿಹೋಗೋದಿಲ್ಲ."

ತಾಯಿಗೆ ಇಷ್ಟೆಲ್ಲ ವಿಷಯ ಗೊತ್ತಾದದ್ದು ಹೇಗೆ ಅನ್ನೋದೆ ಅವನಿಗೆ ಆಶ್ಚರ್ಯವೆನಿಸಿತು.

–೬–

ಲಂಡನ್‌ಗೆ ಮರಳಿ ಬಂದ ಮೇಲೆ, 'ಕೆನ್ನಿಂಗ್‌ಟನ್ ನ್ಯೂರೋಡ್'ನಲ್ಲಿ ಪೀಠೋಪಕರಣಗಳಿಂದ ಸುಸಜ್ಜಿತ ಕೊಠಡಿಯೊಂದನ್ನು ಬಾಡಿಗೆಗೆ ಪಡೆದ. ಮನೆ ಮಾಲಿಕಳಿಗೆ ಸ್ವಲ್ಪ ವಯಸ್ಸಾಗಿತ್ತು. ಸಂಜೆ ಎಂಟು ಗಂಟೆಗೆ ಮನೆಗೆ ಹಿಂತಿರುಗಿ ಬರುತ್ತಿದ್ದಳು. ಮನೆಯಲ್ಲಿ ಸೂಜಿ ಮೊನೆಯ ಸದ್ದು ಇರಲಿಲ್ಲ. ಎಷ್ಟೇ ಪ್ರಯತ್ನ ಪಟ್ಟರೂ ಉರ್ಸುಲಾಳನ್ನು ಮರೆಯುವುದು ಸಾಧ್ಯವಾಗದೆ, ರಾತ್ರಿಯೆಲ್ಲ ಹೊರಳಾಡುತ್ತಿದ್ದ. ಓಡಿಹೋಗಿ ಅವಳನ್ನು ನೋಡಿ ಬರೋಣವೆಂದು ಮನಸ್ಸು ಹಾತೊರೆಯುತ್ತಿತ್ತು. ಏನಾದರಾಗಲೀ ಅವಳನ್ನು ಮರೆತು ನಿದ್ದೆ ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡುತ್ತಿದ್ದ ಕೆಲವು ನಿಮಿಷಗಳಲ್ಲಿಯೇ, ತನಗೇ ಅರಿವಿಲ್ಲದಂತೆ ರಸ್ತೆಗೆ ಬಂದು ಉರ್ಸುಲಾಳ ಮನೆಯ ಕಡೆ ವೇಗವಾಗಿ ಹೆಜ್ಜೆ ಹಾಕುತ್ತಿದ್ದ.

ಅವಳ ಮನೆ ಹತ್ತಿರ ಬರುತ್ತಿದ್ದಂತೆ, ಅವಳ ಸೆಳೆತದ ಪ್ರಭಾವಕ್ಕೆ ಒಳಗಾದಂತೆ ಅನಿಸುತ್ತಿತ್ತು. ಆದರೆ ಅವಳನ್ನು ಸಮೀಪಿಸುವುದು ಸಾಧ್ಯವಿಲ್ಲ ಎಂಬ ಅರಿವಿನೊಂದಿಗೆ ಮನಸ್ಸಿಗೆ ತೀವ್ರ ವೇದನೆಯುಂಟಾಗುತ್ತಿತ್ತು. ಅವಳಿಗೆ ತೀರಾ ಹತ್ತಿರದಲ್ಲಿದ್ದೂ ಅವಳ ಛವಿಯ ದರ್ಶನವೂ ಆಗದಿರುವ ಅನುಭವ ಅವನಿಗೆ ತೀವ್ರ ಯಾತನೆಯುಂಟು ಮಾಡುತ್ತಿತ್ತು.

ಈ ಪ್ರೀತಿಯ ನೋವಿನ ಅನುಭವದಿಂದ, ಎಲ್ಲರ ನೋವನ್ನು ಅರ್ಥಮಾಡಿಕೊಳ್ಳಲು ಸಹಾಯವಾಯಿತು. ತನ್ನ ಮೇಲೆ ತನಗೇ ಅಸಹನೆಯುಂಟಾಯಿತು. ಗ್ಯಾಲರಿಯಲ್ಲಿ ಅವನಿಗೆ ಏನೂ ಬೆಲೆ ಇಲ್ಲದಂತಾಯಿತು. ಯಾರಾದರೂ ಗಿರಾಕಿಗಳು ಬಂದು, ಇಷ್ಟಪಟ್ಟ ಕಲಾಕೃತಿಯನ್ನು ಅವನಿಗೆ ತೋರಿಸಿ, ಇದು ಹೇಗಿದೆ?' ಎಂದು ಕೇಳಿದರೆ, ಆ ಕೃತಿಯ ಬಗ್ಗೆ ಭಯಂಕರ ಟೀಕೆಮಾಡಿ, ಕೆಟ್ಟ ಅಭಿಪ್ರಾಯವನ್ನು ನೀಡುತ್ತಿದ್ದ. ಇದರಿಂದ ಗಿರಾಕಿಗಳು ಆ ಚಿತ್ರಗಳನ್ನು ಕೊಳ್ಳುತ್ತಲೇ ಇರಲಿಲ್ಲ. ಅವನಿಗೆ ಇಷ್ಟವಾಗುತ್ತಿದ್ದ ಚಿತ್ರಗಳೆಂದರೆ, ಕಲಾವಿದನ ನೋವು ಯಾವುದರಲ್ಲಿ ಕಾಣಿಸುತ್ತದೆಯೋ, ಅವುಗಳು ಮಾತ್ರವೇ!

ಒಮ್ಮೆ ಡುಮ್ಮುಡುಮ್ಮಾಗಿದ್ದ ಗೃಹಿಣಿಯೊಬ್ಬಳು ತನ್ನ ಹೊಸಮನೆಗೆಂದು ಒಂದು ಚಿತ್ರವನ್ನು ಕೊಳ್ಳಲು ಬಂದಳು. ಅಲ್ಲಿದ್ದ ವಿನ್ಸೆಂಟ್‌ನನ್ನು ಚಿತ್ರಗಳ ಬಗ್ಗೆ ವಿಚಾರಿಸಿದಳು.

"ನನಗೆ ತುಂಬ ಅದ್ಭುತವಾದ ಚಿತ್ರವೊಂದು ಬೇಕಾಗಿದೆ. ಬೆಲೆಯ ಬಗ್ಗೆ ಯೋಚನೆಯಿಲ್ಲ. ನಿಮ್ಮಲ್ಲಿರುವ ಎಲ್ಲ ಚಿತ್ರಗಳಲ್ಲಿಯೇ ತುಂಬ ಚೆನ್ನಾಗಿರುವಂಥಾದ್ದನ್ನು ತೋರಿಸಿ. ಚಿತ್ರವನ್ನು ಹಾಕಬೇಕಾದ ಡ್ರಾಯಿಂಗ್ ರೂಂನ ವಿವರಗಳು ಇಲ್ಲಿವೆ."

ಮಧ್ಯಾಹ್ನದ ಸಾಕಷ್ಟು ಸಮಯವನ್ನು ಆಕೆಗೆ ಕಲಾಕೃತಿಗಳನ್ನು ಆಯ್ಕೆ ಮಾಡುವ ಕೆಲಸದಲ್ಲಿ ಕಳೆದ. ರ್‍ಯಾಮ್‌ಬ್ರಾಂಟ್, ಟರ್ನರ್, ಥಿಸ್‌ಮಾರಿಸ್ ಮೊದಲಾದವರ ಕೃತಿಗಳನ್ನು ಮತ್ತು ಕೊರೋಟ್, ಡಾಬಿನಿ ಮುಂತಾದವರ ಮ್ಯೂಸಿಯಂ ಫೋಟೋಗ್ರಾಫ್‌ಗಳನ್ನೂ ತೋರಿಸಿದ. ಆದರೆ ಅವನು ತೋರಿಸಿದ ಎಲ್ಲಾ ಶೈಲಿಗಳಲ್ಲಿನ ಚಿತ್ರಗಳಲ್ಲಿ, ಆಕೆಯ ದೃಷ್ಟಿ ಬೀಳುತ್ತಿದ್ದುದು, ಕೆಟ್ಟ ಚಿತ್ರಗಳ ಮೇಲೆಯೇ. ಅವನು ಅತ್ಯುತ್ತಮವೆಂದು ತೋರಿಸುತ್ತಿದ್ದವುಗಳನ್ನು ಮೊದಲ ನೋಟಕ್ಕೇ ತಿರಸ್ಕರಿಸಿ ಬಿಡುತ್ತಿದ್ದಳು. ಆಕೆಯ ಅಭಿರುಚಿ ನೋಡಿ ಅವನಿಗೆ ಅಸಹನೆಯಾಗುತ್ತಿತ್ತು. ಕೆಲವಷ್ಟು ಗಂಟೆಗಳು ಕಳೆದ ಮೇಲೆ ಕಡೆಗೆ – "ಆಹಾ! ಈಗ ನೋಡು ಎಷ್ಟು ಸುಂದರವಾದ ಚಿತ್ರ ಸಿಕ್ಕಿತು" – ಹರ್ಷೋದ್ಗಾರದೊಂದಿಗೆ ಹೇಳಿದಳು.

"ಕಣ್ಣುಮುಚ್ಚಿಕೊಂಡು ಆಯ್ಕೆ ಮಾಡಿದ್ದರೂ ಇದಕ್ಕಿಂತ ಕೆಟ್ಟದ್ದೊಂದನ್ನು ನೀವು ಆರಿಸುತ್ತಿರಲಿಲ್ಲ."

ಈ ಮಾತು ಕೇಳಿದ್ದೇ ಆಕೆಗೆ ಕೋಪ ಬಂದಿರುವುದು, ಆಕೆಯ ಮುಖಚರ್ಯೆಯಿಂದ ವ್ಯಕ್ತವಾಯಿತು.

"ಯಾಕೇ?...... ಯಾಕೆ?...... ನೀನೊಬ್ಬ ಹಳ್ಳಿ ಗುಗ್ಗು"– ರೋಷದಿಂದ ಹೇಳಿದಳು.

ಹೇಳುತ್ತಲೇ ರಭಸದಿಂದ ಹೊರಗೆ ಹೊರಟಳು. ಮಿಸ್ಟರ್ ಒಬಾಕ್, ಇದನ್ನೆಲ್ಲ ಗಮನಿಸುತ್ತಿದ್ದವನು ಕೋಪದಿಂದ ಹೇಳಿದ – ಏನ್ಮಾಡ್ತಿದ್ದಿ ವಿನ್ಸೆಂಟ್! ಏನಾಗಿದೆ ನಿನಗೆ? ಒಂದು ಒಳ್ಳೆ ಗಿರಾಕೀನಾ ಕಳ್ಕೊಂಡೆವು. ಇಡೀ ವಾರದಲ್ಲಿ ಗಳಿಸಬಹುದಾಗಿದ್ದ ಲಾಭವನ್ನು ಈ ಒಂದು ಮಾರಾಟದಲ್ಲಿ ಗಳಿಸಬಹುದಾಗಿತ್ತು.

"ಮಿಸ್ಟರ್ ಒಬಾಕ್, ನನ್ನೊಂದು ಪ್ರಶ್ನೆಗೆ ಉತ್ತರ ಹೇಳ್ತೀರಾ?"

"ಸರಿ, ಏನು ಕೇಳು..... ನನಗೂ ನಿನ್ನಲ್ಲಿ ಹಲವು ಪ್ರಶ್ನೆಗಳನ್ನು ಕೇಳಬೇಕಾಗಿದೆ."

ಆ ಮಹಿಳೆ ಆರಿಸಿಟ್ಟಿದ್ದ ಪ್ರತಿಗಳನ್ನು ಪಕ್ಕಕ್ಕೆ ಸರಿಸಿ, ತನ್ನೆರಡೂ ಕೈಗಳನ್ನು ಮೇಜಿನ ತುದಿಗಳಲ್ಲಿರಿಸಿ, ಹೇಳಿದ – ಒಬ್ಬ ಮನುಷ್ಯ ಜೀವಮಾನದಲ್ಲಿ, ಇಂಥಾ ಕೆಟ್ಟ ಚಿತ್ರಗಳನ್ನು, ಮೂರ್ಖ ಗಿರಾಕಿಗಳಿಗೆ ಮಾರುವುದನ್ನು ಹೇಗೆ ಸಮರ್ಥಿಸಿಕೊಳ್ಳಲು ಸಾಧ್ಯ?"

ಒಬಾಕ್ ಅವನ ಪ್ರಶ್ನೆಗೆ ಉತ್ತರಕೊಡಲು ಹೋಗಲಿಲ್ಲ.

"ಇದೇ ರೀತಿ ವ್ಯಾಪಾರ ಮುಂದುವರೆದರೆ, ನನ್ನ ಕತೆ ಮುಗಿದಂತೆ. ನೀನು ಹೀಗೇ ಇದ್ದರೆ, ನಿಮ್ಮ ಅಂಕಲ್‌ಗೆ ಬರೆದು ಬೇರೆ ಯಾವುದಾದರೂ ಶಾಖೆಗೆ ಕಳಿಸೋದಕ್ಕೆ ಹೇಳ್ತೀನಿ."

ವಿನ್ಸೆಂಟ್ ಅವನ ಮಾತಿಗೆ ಗಮನ ಕೊಡಲಿಲ್ಲ. ಇಂತಹ ಕೆಟ್ಟ ಚಿತ್ರಗಳನ್ನು ಅತಿ ಹೆಚ್ಚಿನ ಬೆಲೆಗೆ ಮಾರುವುದು, ಲಾಭ ತೆಗೆದುಕೊಳ್ಳೋದು ಯಾವ ನ್ಯಾಯ, ಮಿಸ್ಟರ್ ಒಬಾಕ್? ಇಲ್ಲಿಗೆ ಬರುವವರು ಯಾಕೆ ಒಳ್ಳೆ ಚಿತ್ರಗಳ ಕಡೆ ಗಮನ ಕೊಡೋಕೆ ಹೋಗೋದಿಲ್ಲ. ನಿಜವಾದ್ದನ್ನು ಯಾಕೆ ಆರಿಸುವುದಿಲ್ಲ? ಎಂಥಾ ಕೆಟ್ಟದ್ದನ್ನು ಆರಿಸಿ ಹೆಚ್ಚಿನ ಬೆಲೆ ಕೊಡುವುದಕ್ಕೆ ಹಿಂದುಮುಂದು ಆಲೋಚಿಸುವುದಿಲ್ಲ. ಯಾಕೆಂದರೆ ಅವರು ಶ್ರೀಮಂತರು. ಬೇಕಾದಷ್ಟು ಹಣ ಇದೆ. ಆದರೆ ಕಲಾಕೃತಿಗಳನ್ನು, ಸರಿಯಾಗಿ ಗುರುತಿಸಿ, ಒಳ್ಳೇದು ಕೆಟ್ಟದ್ದು ಯಾವುದು ಎಂದು ನಿರ್ಧರಿಸಬಲ್ಲ ಮತ್ತು ನಿಜವಾದ ಕಲಾಭಿರುಚಿ ಇರುವ ಬಡವರಿಗೆ, ತಮ್ಮ ಮನೆ ಗೋಡೆಗಳನ್ನು ಅಲಂಕರಿಸಲು, ಕೊಳ್ಳುವುದಕ್ಕೆ ಒಂದು ಕಾಸೂ ಇರೋದಿಲ್ಲ. ಯಾಕೆ ಹೀಗೆ?"

ಒಬಾಕ್ ತೀಕ್ಷ್ಣವಾಗಿ ನೋಡಿದ! ಓಹೋ ಇದೆಲ್ಲ ಸೋಷಿಲಿಸಂ!...... ಹೌದಲ್ಲ!"

ಮನೆ ತಲುಪಿದಾಗ, ತನ್ನ ಹಾಸಿಗೆ ಮೇಲೆ ಬಿದ್ದಿದ್ದ ರೆನಾನ್‌ನ ಪುಸ್ತಕವನ್ನು ಕೈಗೆತ್ತಿಕೊಂಡು, ತಾನು ಗುರುತಿಸಿರಿಸಿದ ಪುಟವನ್ನು ತಿರುವಿದ. "ಈ ಪ್ರಪಂಚದಲ್ಲಿ ಒಳ್ಳೆಯವನಾಗಿರಬೇಕಾದರೆ ತನ್ನಲ್ಲಿ ತಾನು ಸಾಯಬೇಕು. ಈ ಭೂಮಿ ಮೇಲೆ ಇರುವುದು, ಕೇವಲ ಸುಖ, ಸಂತೋಷ ಪಡುವುದಕ್ಕಲ್ಲ; ಪ್ರಾಮಾಣಿಕನಾಗಿ ಬದುಕುವುದಕ್ಕಷ್ಟೇ ಅಲ್ಲ, ಮನುಕುಲಕ್ಕೆ ಮಹತ್ವದ್ದನ್ನು ಎಸಗುವುದಕ್ಕಾಗಿ, ಮಹಾನತೆಯನ್ನು ಗಳಿಸುವುದಕ್ಕಾಗಿ, ಎಲ್ಲ ಜೀವಿಗಳೂ ಅನಿವಾರ್ಯವಾಗಿ ಬದುಕುತ್ತಿರುವ ಅತಿ ಸಾಮಾನ್ಯ, ನಿಕೃಷ್ಠ ಬದುಕಿನಿಂದ ಮೇಲೇರುವುದಕ್ಕಾಗಿ" ಎಂಬ ಸಾಲುಗಳನ್ನು ಓದಿದ.

ಕ್ರಿಸ್‌ಮಸ್‌ಗೆ ಒಂದು ವಾರ ಇರುವಾಗಲೇ ಲೋಯರ್ ಕುಟುಂಬ 'ಕ್ರಿಸ್‌ಮಸ್‌ಟ್ರೀ'ಯನ್ನು ಅಲಂಕರಿಸಿ ಇರಿಸಿತು. ಎರಡು ದಿನ ಕಳೆದ ಮೇಲೆ ಒಂದು ರಾತ್ರಿ ಆ ಕಡೆ ಹೋಗಿ ನೋಡಿದಾಗ, ತುಂಬಾ ಆಕರ್ಷಕವಾಗಿ ದೀಪಾಲಂಕಾರ ಮಾಡಲಾಗಿತ್ತು. ನೆರೆಹೊರೆಯವರು ಆ ಮನೆ ಒಳಗೆ ಹೋಗಿ ಬರುತ್ತಿದ್ದರು. ಒಳಗಿನಿಂದ ನಗುವ ಶಬ್ದ ಕೇಳಿಸಿತು. ಕ್ರಿಸ್‌ಮಸ್ ಪಾ - ನಡೆಯುತ್ತಿತ್ತು. ವಿನ್ಸೆಂಟ್ ಬೇಗನೆ ಮನೆ ಕಡೆ ಹೊರಟ. ಕ್ಷೌರ ಮಾಡಿಕೊಂಡ. ಹೊಸದಾದ ಷರ್ಟ್ ಧರಿಸಿದ. ಟೈ ಬಿಗಿದುಕೊಂಡ. ಉರ್ಸುಲಾ ಮನೆ ಕಡೆ ಮತ್ತೆ ಹೊರಟು ಬಂದ. ಕೆಳಗೆ ಸ್ವಲ್ಪ ಹೊತ್ತು ಕಾದಿದ್ದ. ಗಟ್ಟಿಯಾಗಿ ಉಸಿರು ಹಿಡಿದಿದ್ದ.

ಇದು ಕ್ರಿಸ್‌ಮಸ್. ಕ್ರಿಸ್‌ಮಸ್ ದಿನಗಳಲ್ಲಿ ಎಲ್ಲರಿಗೂ ದಯೆ, ಕರುಣೆ, ಕ್ಷಮೆ ತೋರುವ ಮನಸ್ಥಿತಿ ಇರುತ್ತದೆ. ಮೆಟ್ಟಿಲೇರಿ ಹೋದ. ಬಾಗಿಲು ತಟ್ಟಿದ. ಪಡಸಾಲೆಯೊಳಗಿಂದ ಪರಿಚಿತ ಹೆಜ್ಜೆಗಳು ಹತ್ತಿರವಾಗುತ್ತಿದ್ದುದು ಕೇಳಿಸಿತು. ಬಾಗಿಲು ತೆರೆದುಕೊಂಡಿತು. ದೀಪದ ಬೆಳಕು ಅವನ ಮುಖದ ಮೇಲೆ ಬಿತ್ತು. ಉರ್ಸುಲಾಳನ್ನು ನೋಡಿದ. ಲೇಸಿನಿಂದ ಕೂಡಿದ್ದ ಸುಂದರವಾದ ಹಸಿರು ಬಣ್ಣದ, ತೋಳಿಲ್ಲದ ಉಡುಪನ್ನು ಧರಿಸಿದ್ದಳು. ಅವಳು ಇಷ್ಟು ಸುಂದರವಾಗಿದ್ದುದನ್ನು ಹಿಂದೆಂದೂ ನೋಡಿರಲಿಲ್ಲ.

"ಉರ್ಸುಲಾ" ಹೆಸರಿಡಿದು ಕರೆದ.

ಅಂದು ತೋಟದಲ್ಲಿ, ಅವನಿಗೆ ಹೇಳಿದ್ದ ಮಾತುಗಳೇ ಮತ್ತೆ ಹೇಳುತ್ತಿದ್ದಂತೆ, ಅವಳ ಮುಖಚರ್ಯೆಯಲ್ಲಿ ಕಾಣಿಸಿತು. ಆ ಮಾತುಗಳನ್ನು ನೆನಪಿಸಿಕೊಂಡ.

"ಹೊರಟು ಹೋಗು" – ಅವಳು ಹೇಳಿದಳು.

ಅವನ ಮುಖಕ್ಕೆ ಅಪ್ಪಳಿಸುವಂತೆ ದಢಾರೆಂದು ಬಾಗಿಲು ಮುಚ್ಚಿದಳು.

ಮರುದಿನ ಹಾಲೆಂಡ್‌ಗೆ ಪ್ರಯಾಣ ಬೆಳೆಸಿದ.

ಗೂಪಿಲ್ಸ್ ಗ್ಯಾಲರಿಯಲ್ಲಿ ಕ್ರಿಸ್‌ಮಸ್ ದಿನಗಳಲ್ಲಿಯೇ ಹೆಚ್ಚಿನ ವ್ಯಾಪಾರವಾಗುತ್ತಿದ್ದುದು. ಒಬಾಕ್ ವಿನ್ಸೆಂಟ್‌ನ ಚಿಕ್ಕಪ್ಪನಿಗೆ, ವಿನ್ಸೆಂಟ್ ಯಾರ ಅಪ್ಪಣೆಯನ್ನೂ ತೆಗೆದುಕೊಳ್ಳದೆ, ಅದರಲ್ಲೂ ಅಂಕಲ್‌ಗೂ ತಿಳಿಸದೆ, ರಜೆ ಮೇಲೆ ಹೋದ ವಿಷಯವನ್ನು ಬರೆದು ತಿಳಿಸಿದ. ಕೂಡಲೇ, ಅಂಕಲ್ ವಿನ್ಸೆಂಟ್, ವಿನ್ಸೆಂಟ್‌ನನ್ನು ಪ್ಯಾರಿಸ್‌ನ ಗ್ಯಾಲರಿಗೆ ಸ್ಥಳಾಂತರಿಸಿದ.

ವಿನ್ಸೆಂಟ್ ಮಾತ್ರ, ಇನ್ನು ಮುಂದೆ ಕಲಾಕೃತಿಗಳ ವ್ಯಾಪಾರದ ಜೊತೆ ತನ್ನ ಸಂಬಂಧ ಇಲ್ಲವೆಂದು ಘೋಷಿಸಿದ. ಅಂಕಲ್ ವಿನ್ಸೆಂಟ್‌ಗೆ ಇದರಿಂದ ಒಂದು ಕಡೆ ಆಶ್ಚರ್ಯವಾದರೆ, ಮತ್ತೊಂದು ಕಡೆ ನೋವಾಯಿತು. ಇನ್ನು ಮೇಲೆ ವಿನ್ಸೆಂಟ್‌ನ ವಿಚಾರದಲ್ಲಿ ತನಗೇನೂ ಆಸಕ್ತಿ ಇಲ್ಲ ಎಂದು ಹೇಳಿ ಕೈ ತೊಳೆದುಕೊಂಡ. ಆದರೂ ಏನೋ ಒಂದು ದಾಕ್ಷಿಣ್ಯಕ್ಕೆ ಬಿದ್ದು, ಪುಸ್ತಕದ ಅಂಗಡಿಯೊಂದರಲ್ಲಿ ಗುಮಾಸ್ತನ ಕೆಲಸ ಕೊಡಿಸಿದ. ಇದಾದ ನಂತರ ಈ ಇಬ್ಬರಲ್ಲಿಯೂ ಪರಸ್ಪರ ಯಾವುದೇ ವ್ಯವಹಾರ ಇರಲಿಲ್ಲ.

ಡೋರ್ ಡ್ರೆಕ್ಟ್‌ನ ಪುಸ್ತಕದಂಗಡಿಯಲ್ಲಿ ನಾಲ್ಕು ತಿಂಗಳು ಹೇಗೋ ಕಳೆದ. ಸುಖ ದುಃಖ, ಸೋಲು-ಗೆಲುವು ಯಾವ ಭಾವನೆಗಳೂ ಅವನಲ್ಲಿ ಇರಲಿಲ್ಲ. ಒಂದು ಶನಿವಾರ, ಡೋರ್ ಡ್ರೆಕ್ಟ್‌ನಿಂದ ಔಡನ್‌ಬಾಷ್‌ಗೆ ರೈಲು ಹಿಡಿದು, ಜುಂಡರ್ಟ್ ತಲುಪಿದ. ಪರಿಸರ ತುಂಬ ಆಹ್ಲಾದಕರವಾಗಿತ್ತು. ಪೈನ್ ಕಾಡುಗಳು ವಿಸ್ತಾರವಾಗಿ ಚಾಚಿದ್ದವು. ತನ್ನ ತಂದೆಯ ಓದುವ ಕೊಠಡಿಯಲ್ಲಿನ ಗೋಡೆಯೊಂದಕ್ಕೆ ತೂಗುಹಾಕಿದ್ದ ಬೋಡ್‌ಮೇರ್‌ನ ಚಿತ್ರವನ್ನು ನೆನಪಿಸಿತು. ಮೋಡಗಳ ಮರೆಯಿಂದಲೂ ನಕ್ಷತ್ರಗಳು ಹೊಳೆಯುತ್ತಿದ್ದವು. ಚರ್ಚ್‌ನ ಅಂಗಳಕ್ಕೆ ಬೆಳಗಿನ ಜಾವವೇ ಬಂದು ಬಿಟ್ಟಿದ್ದ. ದೂರದಿಂದ, ಎಳೆಯ ತೆನೆಗಳ ಹೊಲಗಳ ನಡುವಿನಿಂದ ಲಾರ್ಕ್ ಹಕ್ಕಿಗಳ ಹಾಡು ಕೇಳಿ ಬರುತ್ತಿತ್ತು.

ಅವನು ತುಂಬ ಸಂಕಟದಲ್ಲಿ ಇದ್ದಾನೆಂದು ಅವನ ತಂದೆ ತಾಯಿಗಳು ಗ್ರಹಿಸಿದರು. ಬೇಸಿಗೆಯಲ್ಲಿ, ತಾವು ಮೊದಲಿದ್ದ ಜಾಗದಿಂದ ಕೇವಲ ಕೆಲವು ಕಿಲೋಮೀಟರ್‌ಗಳ ದೂರದಲ್ಲಿದ್ದ ಎಟ್ಟೆನ್ ಪಟ್ಟಣಕ್ಕೆ ಮನೆ ಬದಲಾಯಿಸಿದರು. ಅಲ್ಲಿ ಥಿಯೋಡೋರಸ್‌ಗೆ ಉಪಾಧ್ಯಾಯನ ಕೆಲಸ ಸಿಕ್ಕಿತು. ಒಂದು ರೀತಿಯಲ್ಲಿ ಇದು ಅವನಿಗೆ ಕೆಲಸದಲ್ಲಿನ ಪ್ರಮೋಷನ್ ಆಗಿತ್ತು.

ಶರತ್ಕಾಲ ಬಂತು. ಮತ್ತೆ ಉರ್ಸುಲಾ ವಿಚಾರದಲ್ಲಿ ನಿರ್ಧಾರ ಕೈಗೊಳ್ಳಬೇಕಾಯಿತು. ಅವಳಿಗಿನ್ನೂ ಮದುವೆ ಆಗಿರಲಿಲ್ಲ.

"ವಿನ್ಸೆಂಟ್, ನಿನಗೆ ಈ ಅಂಗಡಿ ಪಂಗಡಿ – ಯಾವುದೂ ಸರಿಹೋಗೊಲ್ಲ. ದೇವರ ಸೇವೆಯತ್ತಲೇ ನಿನ್ನ ಮನಸ್ಸು ಪ್ರಚೋದಿಸುತ್ತಿದೆ." ಥಿಯೋ ಹೇಳಿದ.

"ನನಗೂ ಗೊತ್ತಿದೆ."

"ಹಾಗಾದರೆ ಆ್ಯಮ್‌ಸ್ಟರ್ ಡ್ಯಾಮ್‌ಗೆ ಹೋಗಿ, ಯಾಕೆ ಓದನ್ನು ಮುಂದುವರೆಸಬಾರದು?"

"ನನಗೆ ಹೋಗಬೇಕೆಂದೇನೋ ಇದೆ, ಆದರೆ......"

"ಇನ್ನೂ ನಿನ್ನ ಮನಸ್ಸು ಹಿಂಜರಿಯುತ್ತಿದೆಯೇನು?"

"ಹೌದು. ಯಾಕೇಂತ ನನಗೆ ವಿವರಣೆ ನೀಡೋಕೆ ಆಗ್ತಿಲ್ಲ. ನನಗೆ ಸ್ವಲ್ಪ ಸಮಯಬೇಕಾಗಿದೆ."

ಅಂಕಲ್ ಜ್ಯಾನ್, ಎಟ್ಟೆನ್‌ಗೆ ಬಂದಿದ್ದ. "ವಿನ್ಸೆಂಟ್ ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿ ನಿನಗೋಸ್ಕರ ಒಂದು ಕೊಠಡಿಯನ್ನು ತೆರವಾಗಿರಿಸಿದ್ದೀನಿ, ಯೋಚನೆ ಮಾಡು."– ಎಂದು ಹೇಳಿದ.

ತಾಯಿಯೂ ಈ ಮಾತಿಗೆ, ಮಾತನ್ನು ಸೇರಿಸಿದಳು.

"ರೆವರೆಂಡ್ ಸ್ಟ್ರಿಕ್ಕರ್ ಕೂಡಾ ನಿನಗೆ ಒಳ್ಳೆ ಪಾಠ ಹೇಳಿಕೊಡುವವರನ್ನು ನೋಡಿ ಇರಿಸಿದ್ದಾರೇಂತ ಕಾಗದ ಬರೆದು ತಿಳಿಸಿದ್ದಾರೆ."

ಉರ್ಸುಲಾಳಿಂದ ಅವನಿಗೆ ನೋವಿನ ಉಡುಗೊರೆ ಸಿಕ್ಕಿತ್ತು. ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿ ತನಗೆ ಒಳ್ಳೆಯ ಶಿಕ್ಷಣ ಸಿಗುತ್ತೆ ಅನ್ನೋದು ಗೊತ್ತಿತ್ತು.

ವಾನ್‌ಗೋ ಮತ್ತು ಸ್ಟ್ರಿಕ್ಕರ್ ಕುಟುಂಬಗಳು ಅವನನ್ನು ಬರಮಾಡಿಕೊಂಡು, ಪ್ರೋತ್ಸಾಹಿಸಲು ಮುಂದಾಗಿದ್ದವು. ಅವರಿಂದ ಹಣದ ಸಹಾಯ, ಪುಸ್ತಕಗಳು ಎಲ್ಲವೂ ದೊರೆಯುತ್ತಿತ್ತು. ಆದರೂ ಅವನಿಗೆ ಸ್ಪಷ್ಟವಾದ ನಿಲುವನ್ನು ತಲುಪಲು ಸಾಧ್ಯವಾಗಲಿಲ್ಲ. ಇಂಗ್ಲೆಂಡಿನಲ್ಲಿ, ಇನ್ನೂ ಮದುವೆಯಾಗದೆ ಇದ್ದ ಉರ್ಸುಲಾ ನೆನಪಾಗುತ್ತಿದ್ದಳು. ಹಾಲೆಂಡ್‌ನಲ್ಲಿ ಅವಳು ಭೇಟಿಯಾಗುವುದು ಸಾಧ್ಯವಿರಲಿಲ್ಲ. ಇಂಗ್ಲೆಂಡಿನಲ್ಲಿ ಇನ್ನೂ ಮದುವೆಯಾಗದೆ ಇದ್ದ ಉರ್ಸುಲಾ ನೆನಪಾಗುತ್ತಿದ್ದಳು. ಇಂಗ್ಲಿಷ್ ಸುದ್ದಿಪತ್ರಿಕೆಗಳನ್ನು ತರಿಸಿಕೊಂಡ. ಉದ್ಯೋಗದ ಜಾಹಿರಾತುಗಳನ್ನು ನೋಡಿ, ಅಪ್ಲಿಕೇಷನ್‌ಗಳನ್ನು ಕಳಿಸಿಕೊಟ್ಟ. ಅಂತೂ ಕೊನೆಗೆ ಒಂದು ಕೆಲಸ ಸಿಕ್ಕಿತು. ಲಂಡನ್‌ನಿಂದ ನಾಲ್ಕು ಅಥವಾ ನಾಲ್ಕೂವರೆ ಗಂಟೆ ಪ್ರಯಾಣ ಬೇಕಾಗಿದ್ದ ಕೋಸ್ಟಲ್ ಟೌನ್, ರ್‍ಯಾಮ್ಸ್ ಗೇಟ್‌ನಲ್ಲಿ [ಉಪಾಧ್ಯಾಯ] ಟೀಚರ್ ಕೆಲಸ.

–೭–

ರ್‍ಯಾಮ್ಸ್‌ಗೇಟ್‌ನಲ್ಲಿ ಅಂತಹ ಚಟುವಟಿಕೆಗಳು ಕಾಣುತ್ತಿರಲಿಲ್ಲ. ಇಡೀ ಪ್ರದೇಶವೇ ಒಂಥರಾ ಕಳಾಹೀನವಾಗಿತ್ತು. ಆದರೆ ವಿನ್ಸೆಂಟ್‌ನ ಇತ್ತೀಚಿನ ಮನಃಸ್ಥಿತಿಗೆ ಸರಿಯಾಗಿ ಹೊಂದಿಕೆ ಆಗಿತ್ತು. ನೋವು ಅವನ ಅರಿವಿಲ್ಲದಂತೆ ಅವನ ಆತ್ಮಸಂಗಾತಿಯಾಗಿತ್ತು. ಅದರ ಮೂಲಕವೇ ಉರ್ಸುಲಾ ತನ್ನ ಪಕ್ಕದಲ್ಲಿ ಇರುವಂತೆ ಭಾವಿಸುತ್ತಿದ್ದ. ತಾನು ಬಯಸಿದ ಹುಡುಗಿಯ ಜೊತೆ ಇರುವುದಕ್ಕೆ ಆಗಲಿಲ್ಲವೆಂದಾದ ಮೇಲೆ, ಅವನಿಗೆ ಎಲ್ಲಿದ್ದರೂ ಒಂದೇ. ಆದರೆ ಉರ್ಸುಲಾಳ ಯೋಚನೆಗಳನ್ನೇ ತುಂಬಿಕೊಂಡಿದ್ದ ಅವನಿಗೆ, ತನ್ನ ಮತ್ತು ತನ್ನ ಹುಡುಗಿಯ ಆಲೋಚನೆಗಳ ಮಧ್ಯೆ ಯಾರೂ ಅಡ್ಡಿಯಾಗಿಬಾರದಿದ್ದರೆ ಒಳ್ಳೆಯದೆಂದು ಬಯಸುತ್ತಿದ್ದ.

ಮಿಸ್ಟರ್ ಸ್ಟೋಕ್ಸ್‌ನ ಶಾಲೆಮನೆ ಒಂದು ಚೌಕಾಕಾರದ ಪ್ರದೇಶದಲ್ಲಿತ್ತು. ಮಧ್ಯೆ ಒಂದು ಹುಲ್ಲಿನ ಹಾಸಿತ್ತು. ಅದರ ಸುತ್ತಲೂ ಕಬ್ಬಿಣದ ರೈಲಿಂಗ್ಸ್ ಇದ್ದವು. ಹತ್ತು ವರ್ಷದಿಂದ ಹದಿನಾಲ್ಕು ವಯಸ್ಸಿನ ಇಪ್ಪತ್ನಾಲ್ಕು ಹುಡುಗರು ಆ ಶಾಲೆಯಲ್ಲಿದ್ದರು. ವಿನ್ಸೆಂಟ್ ಹುಡುಗರಿಗೆ ಫ್ರೆಂಚ್, ಜರ್ಮನ್, ಡಚ್ ಭಾಷೆಗಳನ್ನು ಕಲಿಸಬೇಕಾಗಿತ್ತು. ಅಲ್ಲದೆ ಶನಿವಾರಗಳಂದು, ವಾರದ ಕಾರ್ಯಕ್ರಮಗಳಾದ ಸ್ನಾನ ಇತ್ಯಾದಿಗಳಲ್ಲಿ ಸಹಾಯ ಮಾಡಬೇಕಿತ್ತು. ಅವನಿಗೆ ಇರಲು ಜಾಗ, ಊಟ ಮಾತ್ರವೇ ನೀಡಲಾಗುತ್ತಿತ್ತು. ಸಂಬಳ, ಭತ್ಯೆ ಇತ್ಯಾದಿಗಳು ಇರಲಿಲ್ಲ.

"ಮಿಸ್ಟರ್ ಸ್ಟೋಕ್, ಸ್ವಲ್ಪಾನಾದರೂ ದುಡ್ಡು ಕೊಡೋಕೆ ಆಗೋದಿಲ್ಲವೇ? ಏನಾದರೂ ಬಟ್ಟೆ ಬರೆ, ಟೊಬ್ಯಾಕೋ ಕೊಂಡುಕೊಳ್ಳೋಕೆ ಅನುಕೂಲ ಆಗುತ್ತೆ" ವಿನ್ಸೆಂಟ್ ಧೈರ್ಯ ಮಾಡಿ, ಒಂದು ದಿನ ಕೇಳಿದ.

"ಇಲ್ಲ, ಖಂಡಿತಾ ಸಾಧ್ಯ ಇಲ್ಲ. ಬರಿ ಬೋರ್ಡಿಂಗ್, ಲಾಡ್ಜಿಂಗ್ ಕೊಟ್ಟರೆ ಸಾಕು, ಬೇಕಾದಷ್ಟು ಟೀಚರ್ಸ್ ಸಿಕ್ತಾರೆ" ಸ್ಟೋಕ್ಸ್ ಹೇಳಿದ.

ಒಂದು ಶನಿವಾರ ಬೆಳಿಗ್ಗೆ, ವಿನ್ಸೆಂಟ್ ರ್‍ಯಾಮ್ಸ್ ಗೇಟಿಂದ ಲಂಡನ್‌ಗೆ ಹೋದ. ಸ್ವಲ್ಪ ದೂರದ ನಡಿಗೆಯಾಗಿತ್ತು. ಸಂಜೆವರೆಗೂ ಸಾಕಷ್ಟು ಬಿಸಿಲಿತ್ತು. ಕೊನೆಗೆ ಕ್ಯಾಂಟರ್ ಬರಿ ತಲುಪಿದ. ನಡೆದು ದಣಿದಿದ್ದರಿಂದ ಮಧ್ಯಕಾಲೀನ ಕ್ಯಾಥಡ್ರೆಲ್ ಸುತ್ತಲೂ ಬೆಳೆದಿದ್ದ ಮರಗಳ ನೆರಳಿನಲ್ಲಿ ದಣಿವಾರಿಸಿಕೊಂಡ. ಸ್ವಲ್ಪ ಹೊತ್ತಾದ ಮೇಲೆ, ನಡಿಗೆ ಪ್ರಾರಂಭಿಸಿದ. ಸಾಕಷ್ಟು ದೂರ ನಡೆದು, ಸಣ್ಣ ಕೊಳದ ಬಳಿಯಿದ್ದ ಬೀಚ್ ಮತ್ತು ಎಲ್ಮ್ ಮರಗಳನ್ನು ಸಮೀಪಿಸಿದ. ಬೆಳಗಿನ ಜಾವ ನಾಲ್ಕು ಗಂಟೆವರೆಗೆ ಅಲ್ಲಿಯೇ ನಿದ್ದೆ ಮಾಡಿದ. ಹಕ್ಕಿಗಳ ಕಲರವ ಅವನನ್ನು ಎಚ್ಚರಿಸಿತ್ತು. ಮಧ್ಯಾಹ್ನದ ಹೊತ್ತಿಗೆ ಚಾತಮ್ ತಲುಪಿದ. ಅಲ್ಲಿಂದ ನೋಡಿದರೆ ಸ್ವಲ್ಪ ದೂರದಲ್ಲಿ ಕಿಕ್ಕಿರಿದಿದ್ದ 'ಥೇಮ್ಸ್'ನ್ನು ನೋಡಿದ. ಸಂಜೆ ವೇಳೆಗೆ ಅವನು ತನಗೆ ಪರಿಚಿತವಿದ್ದ ಲಂಡನ್‌ನ ಹೊರವಲಯವನ್ನು ತಲುಪಿದ. ದಣಿವು, ಆಯಾಸಗಳನ್ನೂ ಲೆಕ್ಕಿಸದೆ ಲೋಯರ್ಸ್ ಮನೆ ಕಡೆ ನಡೆದ.

ಮನೆಗೆ ಹತ್ತಿರವಾಗುತ್ತಿದ್ದಂತೆ, ತಾನು ಇಂಗ್ಲೆಂಡ್‌ಗೆ ಬಂದ ಕಾರಣ, ಉರ್ಸುಲಾ ಜೊತೆ ಸಂಬಂಧ ಇತ್ಯಾದಿಗಳೆಲ್ಲ ಧುತ್ತನೆ ನೆನಪಾಗಿ, ಆಲೋಚನೆಗಳ ಕಪಿಮುಷ್ಟಿಯಲ್ಲಿ

ಸಿಲುಕಿದ, ಅವಳು ತನ್ನ ನೆನಪಲ್ಲಿ ಇನ್ನೂ ಜೀವಂತವಿದ್ದಾಳೆ. ಆದ್ದರಿಂದ ಇಂಗ್ಲೆಂಡಿನಲ್ಲಿ ಅವಳು ತನ್ನವಳೇ.

ಹೃದಯದ ಬಡಿತವನ್ನು ತಗ್ಗಿಸಲು ಆಗಲಿಲ್ಲ. ಒಂದು ಮರಕ್ಕೆ ಒರಗಿ ನಿಂತುಕೊಂಡ. ಮಾತಿಗೆ ಸಿಗದ ನೋವಿನ ಅನುಭವ. ಸ್ವಲ್ಪ ಹೊತ್ತಿಗೆ, ಉರ್ಸುಲಾ ಮನೆಯ ದೀಪದ ಬೆಳಕು ಮರೆಯಾಯಿತು. ನಂತರ ಉರ್ಸುಲಾ ಕೊಠಡಿಯ ದೀಪವೂ ಆರಿ ಹೋಯಿತು. ಇಡೀ ಮನೆಯನ್ನು ಕತ್ತಲು ಆವರಿಸಿತು. ಪ್ರಯತ್ನದಿಂದ, ಅಲ್ಲಿಂದ ಹೆಜ್ಜೆ ಕಿತ್ತು, ರಸ್ತೆಗೆ ಬಂದ. ಕಣ್ಣಿಂದ, ಆ ಮನೆ ಮರೆಯಾದಂತೆ, ಮತ್ತೆ ಉರ್ಸುಲಾ ತನ್ನ ಕೈಯಿಂದ ಜಾರಿದಳು ಎನಿಸಿತು.

ಒಂದು ವೇಳೆ ಉರ್ಸುಲಾ ಜೊತೆ ತನ್ನ ಮದುವೆಯಾಗಿದ್ದರೆ, ಅವಳನ್ನು ಒಬ್ಬ ಯಶಸ್ವಿ ಕಲಾಕೃತಿಗಳ ಮಾರಾಟಗಾರನ ಹೆಂಡತಿಯೆಂದು ಯೋಚಿಸುತ್ತಿರಲಿಲ್ಲ. ಅವಳನ್ನು ತಾನು ಒಬ್ಬ ಧರ್ಮಪ್ರಚಾರಕನ ನಿಷ್ಠಾವಂತ ಹೆಂಡತಿ, ಬಡವರ ಮತ್ತು ದೇವರ ಸೇವೆಯಲ್ಲಿ ಜೊತೆ ಜೊತೆಯಾಗಿ ದುಡಿಯುತ್ತಿರುವ ಸಹಚರಿಯಂತೆ ಕಲ್ಪಿಸಿಕೊಂಡ.

ಪ್ರತಿವಾರದ ಕೊನೆಯ ದಿನ ಇದೇ ರೀತಿ ಹೊರಟು ಲಂಡನ್‌ಗೆ ಬರುತ್ತಿದ್ದ. ಆದರೆ ಸೋಮವಾರ ಶಾಲೆಗೆ, ಇದರಿಂದಾಗಿ ಬರುವುದು ತಡವಾಗುತ್ತಿತ್ತು. ಎಷ್ಟೋ ಸಲ ಶುಕ್ರವಾರ, ಶನಿವಾರದ ರಾತ್ರಿಗಳಲ್ಲಿ ಉರ್ಸುಲಾಳ ದರ್ಶನ ಪಡೆಯಲೆಂದೇ ನಡೆದು ಬರುತ್ತಿದ್ದ. ಅವಳು ಮನೆಯಿಂದ ಹೊರಟು ಚರ್ಚಿಗೆ ಹೋಗುವಾಗ ಹಾದಿಯಲ್ಲಾದರೂ ಅವಳು ನೋಡಲು ಸಿಗಬಹುದೆಂಬ ಆಸೆಯಿಂದ ತಪ್ಪದೆ ಲಂಡನ್‌ಗೆ ನಡೆದೇ ಬರುತ್ತಿದ್ದ. ಊಟಕ್ಕಾಗಲೀ, ಎಲ್ಲಿಯಾದರೂ ಉಳಿದುಕೊಳ್ಳುವುದಕ್ಕಾಗಲೀ ಅವನ ಬಳಿ ಹಣ ಇರಲಿಲ್ಲ. ಚಳಿಗಾಲದ ದಿನಗಳು. ಶೀತದಿಂದ ನರಳಿದ. ಸೋಮವಾರ ಬೆಳಿಗ್ಗೆ ರ್‍ಯಾಮ್ಸ್‌ಗೇಟ್‌ಗೆ ಮರಳುವಷ್ಟು ಹೊತ್ತಿಗೆ, ಚಳಿಯಿಂದ ನಡುಗುತ್ತಿದ್ದ. ಜೊತೆಗೆ ಹಸಿವು, ಆಯಾಸ ಬೇರೆ! ಸುಧಾರಿಸಿಕೊಳ್ಳಬೇಕಾದರೆ ಒಂದು ವಾರ ಹಿಡಿಯಿತು.

ಕೆಲವು ತಿಂಗಳು ಕಳೆದ ಮೇಲೆ ಮಿಸ್ಟರ್ ಜೋನ್ಸ್‌ನ ಮೆಥಾಡಿಸ್ಟ್ ಶಾಲೆಯಲ್ಲಿ ಅದಕ್ಕಿಂತ ಒಳ್ಳೆ ಕೆಲಸ ಸಿಕ್ಕಿತು. ಮಿಸ್ಟರ್ ಜೋನ್ಸ್ ಕ್ರೈಸ್ತ ದೇವಾಲಯ ಪ್ರಾಂತದ ಪಾದ್ರಿಯಾಗಿದ್ದ, ಟೀಚರ್ ಆಗಿ ನೇಮಕ ಮಾಡಿದನಾದರೂ ಕೆಲವೇ ದಿನಗಳಲ್ಲಿ ಪಾದ್ರಿಯ ಸಹಾಯಕನನ್ನಾಗಿ ಮಾಡಿದ.

ಮತ್ತೆ ತನ್ನ ತಲೆಯಲ್ಲಿ ತುಂಬಿಕೊಂಡಿದ್ದ ವಿಚಾರಗಳನ್ನೆಲ್ಲಾ ಬದಲಾಯಿಸಿದ. ಈಗ ಅವನ ಕಲ್ಪನೆಯಲ್ಲಿ ಉರ್ಸುಲಾ ಧರ್ಮ ಪ್ರಚಾರಕನ ಹೆಂಡತಿಯಾಗಿ, ಕೊಳಚೆ ಪ್ರದೇಶಗಳಲ್ಲಿ ಕೆಲಸ ಮಾಡುತ್ತಿಲ್ಲ. ಬದಲಾಗಿ, ತನ್ನ ತಾಯಿಯಂತೆ, ಗ್ರಾಮೀಣ ಪಾದ್ರಿಯ ಹೆಂಡತಿಯಾಗಿ, ಆ ಪ್ರಾಂತದಲ್ಲಿ ಪಾದ್ರಿಯಾದ ಗಂಡನಿಗೆ ಸಹಾಯ ಮಾಡುತ್ತಿದ್ದಾಳೆ. ಅವಳು, ತಾನು ಗೂಪಿಲ್ಸ್‌ನ ಸಂಸ್ಥೆಯಲ್ಲಿನ ವ್ಯಾಪಾರ ವಹಿವಾಟು ಬಿಟ್ಟದ್ದಕ್ಕೆ ಸಂತೋಷದಿಂದಿದ್ದಾಳೆ. ಗಂಡ ಮಾನವ ಸೇವೆಯಲ್ಲಿ ತೊಡಗಿರುವುದು ಅವಳಿಗೆ ಹೆಚ್ಚಿನ ತೃಪ್ತಿ ತಂದಿದೆ.

ಉರ್ಸುಲಾಳ ಮದುವೆ ಹತ್ತಿರ ಬರುತ್ತಿದೆ ಎನ್ನುವ ಸತ್ಯವನ್ನು ಅವನ ಮನಸ್ಸು ಒಪ್ಪಿಕೊಳ್ಳಲು ಸಿದ್ಧವಾಗಿರಲಿಲ್ಲ. ಅವಳನ್ನು ಮದುವೆಯಾಗುವ ಹುಡುಗ ವಾಸ್ತವವಾಗಿ, ಅವನ ದೃಷ್ಟಿಯಲ್ಲಿ ಇದ್ದೇ ಇರಲಿಲ್ಲ. ಉರ್ಸುಲಾ ತನ್ನನ್ನು ನಿರಾಕರಿಸಲು, ತನ್ನಲ್ಲಿ ಯಾವುದೋ ಕೊರತೆಯನ್ನು ಕಂಡಿರಬೇಕಷ್ಟೆ. ಅದನ್ನು ಹೇಗಾದರೂ ಸರಿಪಡಿಸಿಕೊಳ್ಳಬೇಕು. ಅದಕ್ಕಾಗಿ ದೇವರ ಸೇವೆಯಲ್ಲಿ ತೊಡಗಿಸಿಕೊಳ್ಳುವುದೊಂದೇ ದಾರಿ.

ಮಿಸ್ಟರ್ ಜೋನ್ಸ್‌ನ ಬಡ ವಿದ್ಯಾರ್ಥಿಗಳು ಲಂಡನ್‌ನಿಂದ ಬರುತ್ತಿದ್ದರು. ಜೋನ್ಸ್, ವಿನ್ಸೆಂಟ್‌ಗೆ ಹುಡುಗರ ಮನೆಗಳ ವಿಳಾಸ ಕೊಟ್ಟು ಟ್ಯೂಷನ್ ಫೀಯನ್ನು ಸಂಗ್ರಹಿಸಿ ತರಲು ನೇಮಿಸಿದ. ಆ ಮನೆಗಳು ವೈಟ್‌ಚಾಪೆಲ್‌ನ ಕೇಂದ್ರದಲ್ಲಿದ್ದವು. ದಾರಿದ್ರ್ಯವೇ ಮೈವೆತ್ತಂತ ಪರಿಸರ. ನಾರುವ ಬೀದಿಗಳು, ಚಳಿ, ಬಡತನ, ಹಸಿವು, ರೋಗರುಜಿನಗಳಿಂದ ತುಂಬಿದ, ದಯನೀಯ ಸ್ಥಿತಿಯಲ್ಲಿದ್ದ ದೊಡ್ಡ ದೊಡ್ಡ ಕುಟುಂಬಗಳು. ಅವರ ಕಣ್ಣುಗಳಲ್ಲಿ ನೋವು ಮಡುಗಟ್ಟಿತ್ತು. ಕೆಲವು ಮಕ್ಕಳ ತಂದೆಯರು ಪ್ರಧಾನವಾದ ಮಾರುಕಟ್ಟೆಗಳಲ್ಲಿ ತಿರಸ್ಕೃತವಾಗಿ ಬಿಸಾಡಿದ್ದ ಮಾಂಸದ ಮಾರಾಟ ಮಾಡುತ್ತಿದ್ದರು. ಹಳಸಿದ, ಕೊಳೆತ, ಮಾಂಸ, ಬ್ರೆಡ್ಡಿನ ಚೂರುಗಳನ್ನೇ ತಿನ್ನುತ್ತಿದ್ದ, ಚಳಿಯಿಂದ ನಡುಗುತ್ತಿದ್ದ, ಚಿಂದಿಗಳನ್ನೇ ತೊಟ್ಟಿದ್ದ ಮಂದಿಯನ್ನು ವಿನ್ಸೆಂಟ್ ನೋಡಿದ. ಅವರೊಂದಿಗೆ ಮಾತಾಡಿದ. ಅವರೆಲ್ಲ ತಮ್ಮ ಅಳಲನ್ನು, ನೋವನ್ನು ಹೇಳಿಕೊಂಡರು. ರಾತ್ರಿಯಾಗುವವರೆಗೂ ಅವರ ಹಸಿವು, ಬಡತನ, ನೋವಿನ ಕತೆಗಳನ್ನು ಕೇಳುತ್ತಿದ್ದ.

ಲಂಡನ್‌ಗೆ ಬರಲು ಒಪ್ಪಿಕೊಂಡದ್ದು, ಉರ್ಸುಲಾಳನ್ನು ನೋಡುವ ಅವಕಾಶ ಸಿಗಬಹುದೆಂಬ ಕಾರಣದಿಂದಲೇ ಆದರೂ ಇಲ್ಲಿಗೆ ಬಂದು 'ವೈಟ್‌ಚಾಪೆಲ್'ನ ನಿವಾಸಿಗಳ ಕತೆಗಳನ್ನು ಕೇಳುತ್ತಿದ್ದಂತೆ, ಉರ್ಸುಲಾ ಅವನ ನೆನಪಿನಿಂದ ದೂರವೇ ಉಳಿದಿದ್ದಳು. ಅವಳ ಮನೆಯ ಕಡೆ ಹೋಗುವುದನ್ನೂ ಮರೆತ. ಐಸಲ್‌ವರ್ತ್‌ಗೆ ಹಿಂತಿರುಗಿ ಬಂದನಾದರೂ ಕಂಚಿನ ಒಂದು ನಾಣ್ಯದ ಹೊರತಾಗಿ ಹೆಚ್ಚಿಗೆ ಏನನ್ನೂ ಕೊಡಲಾಗಲಿಲ್ಲ.

ಒಂದು ಗುರುವಾರ. ಸರ್ವಿಸ್ ನೀಡುವಾಗ, ಜೋನ್ಸ್ ತನ್ನ ಸಹಾಯಕ ಧರ್ಮಬೋಧಕನ ಮೇಲೆ ಆಯಾಸದಿಂದ ವಾಲಿದ. "ವಿನ್ಸೆಂಟ್ ನನಗೆ ಯಾಕೋ ತೀರಾ ದಣಿವಾಗಿದೆ. ಹೆದರಿಕೆಯಾಗುತ್ತಿದೆ. ಧರ್ಮೋಪದೇಶಗಳನ್ನು ನೀನೇ ಹೆಚ್ಚಾಗಿ ಬರೆಯುತ್ತಿರುವೆಯಲ್ಲ? ಹೇಳು, ಒಂದು ಉಪದೇಶ (Sermon)ವನ್ನು! ನೀನು ಯಾವ ರೀತಿಯ ಪಾದ್ರಿಯಾಗಬಲ್ಲೆ ಎಂಬುದನ್ನು ನನಗೆ ನೋಡಬೇಕಿದೆ."

ವಿನ್ಸೆಂಟ್ ಪೀಠವನ್ನು, ಸ್ವಲ್ಪ ಹೆದರಿಕೆಯಿಂದಲೇ ಹತ್ತಿದ. ಅವನ ಮುಖ ಕೆಂಪಾಯಿತು. ತನ್ನ ಕೈಗಳಿಂದ ಏನು ಮಾಡಬೇಕೆಂದು ತಿಳಿಯಲಿಲ್ಲ. ಅವನು ತಡವರಿಸುತ್ತಿದ್ದ. ಹೇಳಬೇಕಾದ ಸಾಲುಗಳಿಗಾಗಿ ತಲೆ ಕೆಡಿಸಿಕೊಳ್ಳುತ್ತಿದ್ದ. ಕಾಗದದ ಮೇಲೆ ಅಚ್ಚುಕಟ್ಟಾಗಿಯೇ ಬರೆದುಕೊಂಡಿದ್ದ. ಆದರೆ ಹೇಳುವಾಗ ಯಾಕೋ ಹೆದರಿಕೆಯಿಂದ ಅಲ್ಲಲ್ಲಿ ತಪ್ಪುತ್ತಿದ್ದ.

"ಚೆನ್ನಾಗಿ ಹೇಳಿದೆ ವಿನ್ಸೆಂಟ್. ಮುಂದಿನ ವಾರ ನಿನ್ನನ್ನು ರಿಚ್‌ಮಂಡ್‌ಗೆ ಕಳಿಸಿಕೊಡುತ್ತೇನೆ."

ಶರದೃತುವಿನ ಸುಂದರವಾತಾವರಣ. ಥೇಮ್ಸ್ ನದೀ ಗುಂಟ ಐಸಲ್‌ವರ್ತ್‌ನಿಂದ ರಿಚ್‌ಮಂಡ್‌ವರೆಗಿನ ನಡಿಗೆ ಆಹ್ಲಾದಕರವೆನಿಸಿತು. ನೀಲಿಯಾಕಾಶ, ಎತ್ತರದ ಚೆಸ್ಟ್‌ನಟ್ ಮರಗಳು. ಅವುಗಳ ಹಳದಿ ಎಲೆಗಳು – ಎಲ್ಲವೂ ನದಿ ನೀರಿನಲ್ಲಿ ಪ್ರತಿಫಲಿಸುತ್ತಿದ್ದವು. ರಿಚ್‌ಮಂಡ್‌ನಲ್ಲಿನ ಜನ, ಡಚ್ ಯುವ ಪಾದ್ರಿಯನ್ನು ತುಂಬ ಮೆಚ್ಚಿಕೊಂಡು, ಜೋನ್ಸ್‌ಗೆ ಅವನ ಬಗ್ಗೆ ಬರೆದರು. ಇದರಿಂದ ಜೋನ್ಸ್ ಇನ್ನು ಮುಂದೆ ವಿನ್ಸೆಂಟಗೇ ಬೋಧನೆಯ ಅವಕಾಶವನ್ನು ನೀಡಲು ಯೋಚಿಸಿದ. ಟರ್ನ್‌ಹ್ಯಾಮ್ ಗ್ರೀಸ್‌ನಲ್ಲಿದ್ದ, ಜೋನ್ಸ್‌ನ ಚರ್ಚು ಬಹಳ ಪ್ರಮುಖವಾದುದು. ಬಹುದೊಡ್ಡ ಸಂಖ್ಯೆಯಲ್ಲಿ ಧಾರ್ಮಿಕ ಸಭೆ ಸೇರುತ್ತಿತ್ತು. ಜೊತೆಗೆ ಅಲ್ಲಿಗೆ ಬರುವ ಭಕ್ತರು ಬಹಳ ಸೂಕ್ಷ್ಮಮತಿಗಳು. ಸರಿಯಿಲ್ಲದಿದ್ದಲ್ಲಿ ಟೀಕೆ ಟಿಪ್ಪಣಿಗಳೂ ಎದುರಾಗುತ್ತಿದ್ದವು. ಅಂತಹ ಕಡೆ ಒಮ್ಮೆ ವಿನ್ಸೆಂಟ್ ಒಳ್ಳೆಯ ಸೆರ್‌ಮನ್ ನೀಡಿ ಯಶಸ್ವಿಯಾದರೆ, ಯಾವುದೇ ಧಾರ್ಮಿಕ ವೇದಿಕೆಯಿಂದಲೂ, ಧರ್ಮೋಪದೇಶಗಳನ್ನು ಮಾಡಬಲ್ಲ ಎನಿಸಿತು.

ವಿನ್ಸೆಂಟ್ ಆರಿಸಿಕೊಂಡ 'ಸಾಮ್' (ಸ್ತೋತ್ರಗೀತ) ಹೀಗಿತ್ತು – "ಈ ಭೂಮಿಯ ಮೇಲೆ ನಾನೊಬ್ಬ ಅಪರಿಚಿತ. ನಿನ್ನ ಆದೇಶವನ್ನು ನನ್ನಿಂದ ಮರೆಮಾಚದಿರು"– ವಿನ್ಸೆಂಟ್ ಅತ್ಯಂತ ಸರಳವಾಗಿ, ಅರ್ಥವಾಗುವ ಹಾಗೆ ಮಾತನಾಡಿದ. ಅವನ ವಯಸ್ಸು, ಮೈಮಾಟ, ಅವನಲ್ಲಿದ್ದ ಸ್ಫೂರ್ತಿ, ತೀಕ್ಷ್ಣವಾದ ಕಣ್ಣುಗಳು – ಭಕ್ತ ಸಮುದಾಯದ ಮೇಲೆ ಅದ್ಭುತವಾದ ಪರಿಣಾಮ ಬೀರಿತು.

ಅವನು ನೀಡಿದ ಸಂದೇಶಕ್ಕಾಗಿ, ಅವನಿಗೆ ಧನ್ಯವಾದಗಳನ್ನು ಹೇಳಲು ಹಲವರು ಅವನ ಬಳಿಗೆ ಬಂದರು. ಅವರೊಂದಿಗೆ ಕೈಕುಲುಕಿ ಸ್ನೇಹದ ನಗೆ ನಕ್ಕ. ಎಲ್ಲರೂ ಹೊರಟುಹೋದ ಮೇಲೆ, ಹಿಂದಿನ ಬಾಗಿಲಿನಿಂದ ಲಂಡನ್ ಕಡೆಗೆ ಹೆಜ್ಜೆಹಾಕಿದ.

ಬಿರುಗಾಳಿ ಬೀಸಿತು. ತನ್ನ ಹ್ಯಾಟ್ ಮತ್ತು ಓವರ್‌ಕೋಟನ್ನು ಮರೆತಿದ್ದ. ಥೇಮ್ಸ್‌ನ ನೀರು ದಂಡೆಯ ಭಾಗದಲ್ಲಿ ಹಳದಿಯಾಗಿತ್ತು. ದೂರದ ಕ್ಷಿತಿಜದಲ್ಲಿ ಒಂದಿಷ್ಟು ಬೆಳಕು ಕಾಣಿಸಿತಾದರೂ ದಟ್ಟಮೋಡಗಳಿಂದ ಧಾರಾಕಾರ ಮಳೆ ಸುರಿಯಿತು. ಮಳೆಯಿಂದ ಪೂರ್ತಿಯಾಗಿ ನೆಂದು ಹೋದ. ಮಳೆಯನ್ನೂ ಲೆಕ್ಕಿಸದೆ ಬೇಗ ಬೇಗನೆ ಹೆಜ್ಜೆ ಹಾಕಿದ.

ಕಡೆಗೂ ಅಂದುಕೊಂಡದ್ದನ್ನು ಸಾಧಿಸಿದ. ಅವಳ ಕಾಲಿಗೆ ಬಿದ್ದು, ಅವಳ ಜೊತೆ ಭಾವನೆಗಳನ್ನು ಹಂಚಿಕೊಳ್ಳುವ ವಿಚಾರದಲ್ಲಿ ಗೆಲುವಿನ ಭಾವ ತುಂಬಿಕೊಂಡ.

ಬೆಳ್ಳನೆಯ ರಸ್ತೆಗಳು ಮಳೆಯಿಂದಾಗಿ ಮಣ್ಣಿನ ಕರೆಗಳಿಂದ ತುಂಬಿದ್ದವು. ಸ್ವಲ್ಪ ದೂರದಲ್ಲಿ ಕಾಣಿಸುತ್ತಿದ್ದ ಪಟ್ಟಣ ಗಾಥಿಕ್ ಶೈಲಿಯ ಮನೆಗಳಿಂದ ತುಂಬಿತ್ತು.

ಮಳೆಯ ಜೊತೆ ಸೆಣಸುತ್ತಲೇ ಲಂಡನ್‌ನತ್ತ ನಡೆಯುತ್ತಿದ್ದ. ಮುಖದ ಮೇಲಿಂದ ಮಳೆಯ ನೀರು ಇಳಿಯುತ್ತಿತ್ತು. ಬೂಟುಗಳ ಒಳಗೂ ಮಳೆ ನೀರು ಹೊಕ್ಕಿತ್ತು.

ಲೋಯರ್ ಮನೆ ತಲುಪುವಷ್ಟರಲ್ಲಿ ಮಧ್ಯಾಹ್ನ ದಾಟಿತ್ತು. ಸಂಜೆ ಆಗುವುದರಲ್ಲಿತ್ತು. ದೂರದಲ್ಲಿ ವಯೊಲಿನ್ ಸಂಗೀತ ಕೇಳಿ ಬರುತ್ತಿತ್ತು. ಅವನಿಗೆ ಆಶ್ಚರ್ಯವಾಯಿತು. ಏನು ನಡೆಯುತ್ತಿರಬಹುದು? ಎಂದು ಯೋಚಿಸಿದ. ಪ್ರತಿಯೊಂದು ಕೊಠಡಿಯೂ ದೀಪಗಳಿಂದ ಬೆಳಗುತ್ತಿತ್ತು. ಮಳೆ ಬರುತ್ತಿದ್ದರೂ ಮನೆ ಮುಂದೆ ಸಾಲು ಸಾಲು ಗಾಡಿಗಳು ನಿಂತಿದ್ದವು. ಅಲ್ಲಿ ನೆರೆದಿದ್ದ ಜನ ನರ್ತಿಸುತ್ತಿದ್ದರು. ವಯಸ್ಸಾದ ಗಾಡಿ ಚಾಲಕ, ಗಾಡಿಯ ಪೆಟ್ಟಿಗೆ ಮೇಲೆ, ಮಳೆಗೆ ಕೊಡೆಯನ್ನು ಅಡ್ಡ ಹಿಡಿದು ಕುಳಿತಿದ್ದ.

"ಇಲ್ಲಿ ಏನು ನಡೀತಿದೆಯಪ್ಪ?"

"ಮದುವೇಂತ ಕಾಣತ್ತೆ."

ವಿನ್ಸೆಂಟ್ ಗಾಡಿಗೆ ಒರಗಿ ನಿಂತ. ಮಳೆ ಧಾರೆಗಳು ಅವನ ಮುಖದ ಮೇಲಿಂದ ಹರಿಯುತ್ತಿದ್ದವು. ಸ್ವಲ್ಪ ಸಮಯದ ನಂತರ ಮುಂದಿನ ಬಾಗಿಲು ತೆರೆದುಕೊಂಡಿತು. ಉರ್ಸುಲಾ ಮತ್ತು ಉದ್ದನೆಯ, ತೆಳ್ಳನೆಯ ವ್ಯಕ್ತಿ, ಬಾಗಿಲ ಚೌಕಟ್ಟಿನಲ್ಲಿ ಕಾಣಿಸಿಕೊಂಡರು. ಪಡಸಾಲೆಯಿಂದ ಒಂದು ಗುಂಪು ನಗುತ್ತ, ಕೇಕೆ ಹಾಕುತ್ತಾ ಕಮಾನು ಬಾಗಿಲಿಂದ ಹೊರಬಂತು. ಇವರಿಬ್ಬರ ಮೇಲೆ ಅಕ್ಕಿ ಎರಚಿತು.

ವಿನ್ಸೆಂಟ್ ಗಾಡಿಯ ಹಿಂಬದಿಯಲ್ಲಿ ತಲೆಮರೆಸಿಕೊಂಡ. ಉರ್ಸುಲಾ ಮತ್ತು ಆ ವ್ಯಕ್ತಿ ಗಾಡಿ ಹತ್ತಿದರು. ಗಾಡಿ ಚಾಲಕ ಕುದುರೆಗಳ ಬೆನ್ನಿಗೆ ಚಾಟಿ ಮುಟ್ಟಿಸಿದ್ದೇ ಅವು ನಿಧಾನವಾಗಿ ಓಡತೊಡಗಿದವು. ವಿನ್ಸೆಂಟ್ ಗಾಡಿಯ ಕಿಟಿಕಿಗೆ ಮುಖ ಒತ್ತಿ ಹಿಡಿದು ಮೆಲ್ಲಗೆ ನೋಡಿದ. ಉರ್ಸುಲಾ ಅವನ ತೋಳತೆಕ್ಕೆಯಲ್ಲಿದ್ದಳು. ಒಬ್ಬರು ಮತ್ತೊಬ್ಬರ ತುಟಿಗಳನ್ನು ಒತ್ತುತ್ತಿದ್ದರು. ಗಾಡಿ ಮುಂದೆ ಸಾಗಿತು.

ಇದ್ದಕ್ಕಿದ್ದಂತೆ ವಿನ್ಸೆಂಟ್‌ನಲ್ಲಿ ಏನೋ ಬದಲಾವಣೆ ಕಾಣಿಸಿತು. ಎಲ್ಲವೂ ಕಳಚಿಕೊಂಡ ಭಾವ, ಅವನಿಗೇ ಆಶ್ಚರ್ಯ. ಇಷ್ಟು ಸುಲಭವಾಗಿ ಆಗಲು ಸಾಧ್ಯವೇ?– ಎಂದುಕೊಂಡ.

ಸುರಿಯುತ್ತಿರುವ ಮಳೆಯಲ್ಲಿಯೇ ಐಸಲ್‌ವರ್ತ್ ತಲುಪಿದ. ತನ್ನ ಸಾಮಾನುಗಳನ್ನೆಲ್ಲ ಶೇಖರಿಸಿ, ಶಾಶ್ವತವಾಗಿ ಇಂಗ್ಲೆಂಡ್ ತೊರೆದ.



## ಭಾಗ –ಒಂದು

# ಗಣಿಗಳ ಎದೆ ಬಗಿಯುತ್ತಾ

–೧–

ಡಚ್ ನೌಕಾ ಪಡೆಯಲ್ಲಿ ಅತ್ಯುನ್ನತ ಅಧಿಕಾರದಲ್ಲಿದ್ದ ಅಡ್ಮಿರಲ್ ಜೊಹಾನ್ನೆಸ್ ವಾನ್‌ಗೋ, ನೌಕಾ ಪ್ರದೇಶದಲ್ಲಿ, ತನ್ನ ಸೋದರನ ಮಗನ ಬರವಿಗಾಗಿ ಕಾದಿದ್ದ, ಯೂನಿಫಾರಂ ಬದಲಾಗಿ, ಸಿವಿಲ್ ಉಡುಪಿನಲ್ಲಿದ್ದ. ವಿನ್ಸೆಂಟ್‌ನನ್ನು ಕಾಣುತ್ತಿದ್ದಂತೆ, ಅರಳಿದ ಮುಖದಿಂದ "ವಿನ್ಸೆಂಟ್ ನೀನು ಇಲ್ಲಿಗೆ ಬಂದದ್ದು ನನಗೆ ತುಂಬಾ ಸಂತೋಷವಾಗಿದೆ. ನನ್ನ ಮಕ್ಕಳು ಮದುವೆಯಾಗಿ ಹೋಗಿದ್ದಾರೆ. ಮನೆ ಪ್ರಶಾಂತವಾಗಿದೆ. ಯಾರಿಂದಲೂ ತೊಂದರೆಯಿಲ್ಲ."

ಇಬ್ಬರೂ ಮೆಟ್ಟಿಲು ಹತ್ತಿ ಮೇಲೇರಿ ಹೋದರು. ಜ್ಯಾನ್ ವಿನ್ಸೆಂಟ್ ಇರಬೇಕಾಗಿದ್ದ ಕೋಣೆಯ ಬಾಗಿಲನ್ನು ತೆರೆದ. ಒಳಗೆ ಪ್ರವೇಶಿಸಿ, ತನ್ನ ಸಾಮಾನುಗಳನ್ನೆಲ್ಲ ಕೆಳಗಿರಿಸಿದ. ಕೋಣೆಯ ಕಿಟಕಿಯಿಂದ ನೌಕಾ ಪ್ರದೇಶ ಕಾಣುತ್ತಿತ್ತು. ಅಂಕಲ್‌ಜ್ಯಾನ್ ಮಂಚದ ಮತ್ತೊಂದು ತುದಿಯಲ್ಲಿ ಕುಳಿತ. ಅನೌಪಚಾರಿಕವಾದ ರೀತಿಯಲ್ಲಿ ಮಾತಿಗೆ ಶುರು ಮಾಡಿದ.

"ಪಾದ್ರಿಯಾಗುವುದಕ್ಕೆ ಮನಸ್ಸು ಮಾಡಿ ಅಧ್ಯಯನಕ್ಕೆ ಒಪ್ಪಿದ್ದು ನನಗೆ ಬಹಳ ಸಂತೋಷವಾಯಿತು. ವಾನ್‌ಗೋ ಕುಟುಂಬದಲ್ಲಿ ಒಬ್ಬರಾದರೂ ದೇವರ ಸೇವೆಯಲ್ಲಿ ತೊಡಗಿದ್ದಾರೆ.

ವಿನ್ಸೆಂಟ್ ಪೈಪ್ ತೆಗೆದುಕೊಂಡು ತಂಬಾಕು ತುಂಬಿದ. ಏನಾದರೂ ಯೋಚನೆ ಮಾಡಬೇಕಾಗಿ ಬಂದಲ್ಲಿ ಸಾಮಾನ್ಯವಾಗಿ ಹೀಗೆಯೇ ಮಾಡುತ್ತಿದ್ದ. ನಾನು ಧರ್ಮ ಪ್ರಚಾರಕನಾಗಲು ಬಯಸಿ, ತಕ್ಷಣವೇ ಕೆಲಸ ಆರಂಭಿಸಬೇಕೆಂದಿದ್ದೇನೆ.

"ಬರೀ ಧರ್ಮ ಪ್ರಚಾರಕನಾಗುವುದು ಬೇಡ ವಿನ್ಸೆಂಟ್, ಅವರುಗಳು ಅಷ್ಟಾಗಿ ಓದಿದವರಲ್ಲ. ಅವರು ಬೋಧಿಸುವ ತತ್ವಗಳೋ ದೇವರಿಗೇ ಗೊತ್ತು! ಬೇಡ ಮಗನೆ, ವಾನ್‌ಗೋ ಕುಟುಂಬದ ಧರ್ಮೋಪದೇಶಕ ಅಥವಾ ಗುರುಗಳು ಯಾವಾಗಲೂ ಯೂನಿವರ್ಸಿಟಿ ಪದವೀಧರರು. ಈಗ ನೀನು ಮಾಡಬೇಕಾದ ಕೆಲಸಗಳನ್ನೆಲ್ಲ ಮುಗಿಸಿಕೋ, ಎಂಟುಗಂಟೆಗೆ ಊಟ ರೆಡಿಯಾಗುತ್ತೆ."

ಅಡ್ಮಿರಲ್ ಎದ್ದು ಹೋದ ಮರುಕ್ಷಣವೇ ವಿನ್ಸೆಂಟ್‌ನ ಮುಖದಲ್ಲಿ ಖಿನ್ನತೆ ಕಾಣಿಸಿಕೊಂಡಿತು. ಸುತ್ತಲೂ ನೋಡಿದ, ಎಲ್ಲ ಅನುಕೂಲಗಳೂ ಇದ್ದವು. ವಿಶಾಲವಾದ,

ಮೆದುವಾದ ಹಾಸಿಗೆ, ವಿಶಾಲವಾದ ಕೋಣೆ, ನುಣುಪಾದ, ಹೊಳುಪಾದ ನೆಲ. ಆದರೂ ಅವನಿಗೆ ಯಾವುದೂ ಹಿತವೆನಿಸಲಿಲ್ಲ. ಮುಜುಗರವೆನಿಸುತ್ತಿತ್ತು. ಯಾರದೋ ಅಪರಿಚಿತರ ಮನೆಗೆ ಬಂದಿರುವಂತಹ ಅನುಭವ ಅವನಿಗಾಯಿತು. ಕ್ಯಾಪ್ ಕೈಲಿ ಹಿಡಿದು ಅಣೆಕಟ್ಟಿನ ಗುಂಟ ನಡೆದ. ಒಬ್ಬ ಯಹೂದಿ ಬುಕ್‌ಸೆಲ್ಲರ್ ಒಂದಷ್ಟು ಸುಂದರವಾದ ಚಿತ್ರದ ಪ್ರತಿಗಳನ್ನು, ತೆರೆದ ಡಬ್ಬದಲ್ಲಿರಿಸಿ ಮಾರುತ್ತಿದ್ದ. ವಿನ್ಸೆಂಟ್ ಅವುಗಳಲ್ಲಿ ಸುಂದರವಾದ ಕೆಲವು ಚಿತ್ರ ಪ್ರತಿಗಳನ್ನು ಆಯ್ಕೆ ಮಾಡಿಕೊಂಡು ಕಂಕುಳಲ್ಲಿ ಇರಿಸಿಕೊಂಡು ಮನೆಯ ಕಡೆ ಹೆಜ್ಜೆ ಹಾಕಿದ.

ಆ ಚಿತ್ರ ಪ್ರತಿಗಳನ್ನೆಲ್ಲಾ ಗೋಡೆಯ ಸುಣ್ಣ ಹಾಳಾಗದಂತೆ ಎಚ್ಚರವಹಿಸಿ ಅಂಟಿಸಿದ. ಬಾಗಿಲು ಬಡಿದ ಸದ್ದಾಯಿತು. ರೆವರೆಂಡ್ ಸ್ಟ್ರಿಕ್ಕರ್ ಒಳಗೆ ಬಂದ. ಈತನೂ ವಿನ್ಸೆಂಟ್‌ಗೆ ಇನ್ನೊಬ್ಬ ಅಂಕಲ್ ಆಗಿದ್ದ. ಆದರೆ ವಾನ್‌ಗೋ ಕುಟುಂಬಕ್ಕೆ ಸೇರಿದವನಾಗಿರಲಿಲ್ಲ. ಆತ ತಾಯಿ ಕಡೆಯಿಂದ ಅಂಕಲ್ ಆಗಿದ್ದ. ಆತನ ಹೆಂಡತಿ, ವಿನ್ಸೆಂಟ್‌ನ ತಾಯಿ ಅಕ್ಕತಂಗಿಯರು. ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿ ಪಾದ್ರಿಯಾಗಿ ಖ್ಯಾತಿ ಗಳಿಸಿದ್ದ. ಆತ ಬಹಳ ಬುದ್ಧಿವಂತನಾಗಿದ್ದ. ಕಪ್ಪುಸೂಟು ಧರಿಸಿದ್ದ. ಮೈಯಳತೆಗೆ ತಕ್ಕಂತೆ ಹೊಲಿಯಲಾಗಿತ್ತು.

ಪರಸ್ಪರ ಯೋಗಕ್ಷೇಮ ವಿಚಾರಿಸಿಕೊಂಡಾದ ಮೇಲೆ ಪಾದ್ರಿ – ನಾನು ನಿನಗಾಗಿ ಮೆಂಡೆ ದ ಕೋಸ್ಟಾನನ್ನು ನೇಮಕ ಮಾಡಿದ್ದೇನೆ. ಕ್ಲಾಸಿಕ್ ಭಾಷೆಗಳಲ್ಲಿ ಆತ ಬಹುದೊಡ್ಡ ವಿದ್ವಾಂಸ. ನಿನಗೆ ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳನ್ನು ಹೇಳಿಕೊಡಲಿದ್ದಾನೆ. ಆತನ ಮನೆ ಯಹೂದಿಗಳ ವಸತಿಗೃಹ ಸಂಕೀರ್ಣದಲ್ಲಿದೆ. ನೀನು ಸೋಮವಾರ ಮಧ್ಯಾಹ್ನ ಮೂರು ಗಂಟೆಗೆ ಹೋಗಿ ಪಾಠ ಶುರು ಮಾಡಿಸಿಕೋ. ವಾಸ್ತವವಾಗಿ ನಾನು ಬಂದದ್ದು, ನಾಳೆ ಭಾನುವಾರ ನಮ್ಮ ಮನೆಗೆ ಡಿನ್ನರ್‌ಗೆ ಆಹ್ವಾನಿಸಲು! ನಿನ್ನ ಚಿಕ್ಕಮ್ಮ ವಿಲ್‌ಹೆಲ್‌ಮಿನಾ, ನಿನ್ನ ಸೋದರಿ ಕೇ ನಿನಗಾಗಿ ಉತ್ಸುಕರಾಗಿದ್ದಾರೆ."

"ನಿಮ್ಮಲ್ಲಿಗೆ ಬರೋಕೆ ನನಗೆ ತುಂಬಾ ಸಂತೋಷ ಆಗ್ತಿದೆ. ಎಷ್ಟು ಹೊತ್ತಿಗೆ ಬರಲಿ?"

"ಸಾಮಾನ್ಯವಾಗಿ ನಾವು ಮಧ್ಯಾಹ್ನ ಊಟ ಮಾಡ್ತೀವಿ. ಅದೂ ನನ್ನ ಕೆಲಸ ಬೆಳಿಗ್ಗೆ ಮುಗಿದಾದ ಮೇಲೆ."

"ನಿಮ್ಮ ಮನೆಯವರಿಗೆ ನನ್ನ ಶುಭಾಶಯಗಳನ್ನು ತಿಳಿಸಿ" ಎಂದು ಸ್ಟ್ರಿಕರ್ ತನ್ನ ಹ್ಯಾಟ್ ಮತ್ತು ಹಾಳೆಗಳನ್ನು (ಪುಸ್ತಕದ) ತೆಗೆದುಕೊಳ್ಳುತ್ತಿರುವಾಗ, ವಿನ್ಸೆಂಟ್ ಹೇಳಿದ.

"ನಾಳೆ ನೋಡೋಣ, ಬರಲಾ?" ಹೇಳುತ್ತಾ ಅಂಕಲ್ ಹೊರ ನಡೆದ.

–೨–

ಸ್ಟ್ರಿಕರ್ ಕುಟುಂಬ ವಾಸಿಸುತ್ತಿದ್ದದ್ದು ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿಯೇ. ಅತ್ಯಂತ ಶ್ರೀಮಂತ ಕುಟುಂಬಗಳು ವಾಸಿಸುತ್ತಿದ್ದ ಪ್ರದೇಶದಲ್ಲಿ. ಬಂದರು ಪ್ರದೇಶಕ್ಕೆ ತೀರಾ

ಹತ್ತಿರವಾಗಿತ್ತು. ಸಾಲು ಸಾಲಾಗಿದ್ದ ಮನೆಗಳು ಸುಂದರವಾಗಿಯೂ ಅಚ್ಚುಕಟ್ಟಾಗಿಯೂ ನಿರ್ಮಿಸಲಾಗಿದ್ದವು.

ಅಂಕಲ್ ಸ್ಟ್ರಿಕ್ಕರ್‌ನ ಉಪದೇಶವನ್ನು ಆಲಿಸಿದ ಬಳಿಕ, ಆತನ ಮನೆಗೆ ನಡೆದ. ಡಚ್ ಆಕಾಶದಿಂದ ಬೂದು ಬಣ್ಣದ ಮೋಡಗಳೆಲ್ಲ ಸರಿದು ಈಗ ಸ್ವಲ್ಪ ಉಜ್ವಲವಾಗಿತ್ತು. ವಿನ್ಸೆಂಟ್ ಸ್ವಲ್ಪ ಬೇಗನೇ ಬಂದಿದ್ದ. ಯೋಚನಾಪರನಾಗಿ ಸ್ವಲ್ಪ ಹೊತ್ತು ಅಡ್ಡಾಡಿದ. ಕಾಲುವೆಯಲ್ಲಿ ಸಂಚರಿಸುತ್ತಿದ್ದ ದೋಣಿಗಳನ್ನು ಗಮನಿಸುತ್ತಿದ್ದ. ಹರಿವಿಗೆ ವಿರುದ್ಧವಾಗಿ ಅವು ಸಾಗುತ್ತಿದ್ದವು.

ಸ್ಟ್ರಿಕ್ಕರ್ ವಾಸಿಸುತ್ತಿದ್ದ ಮನೆ ಫ್ಲೆಮಿಂಗರ ವಾಸ್ತು ಶೈಲಿಗೆ ಅನುಗುಣವಾಗಿತ್ತು. ಮೂರಂತಸ್ತಿನ ಇಕ್ಕಟ್ಟಾದ ಮನೆ. ಮೇಲೆ ಚತುರಸ್ರಾಕಾರದ ಒಂದು ಗೋಪುರವಿತ್ತು. ಅದರಲ್ಲಿ ಒಂದು ಪುರಾತನ ಶೈಲಿಯ ಕಿಟಕಿಯಿತ್ತು. ಅದರ ಮೇಲೆ ಹೂಬಳ್ಳಿಗಳ ಮೋಹಕ ಚಿತ್ತಾರಗಳಿದ್ದವು. ಆ ಕಿಟಕಿಯಿಂದ ತೊಲೆಯೊಂದು ಹೊರಭಾಗಕ್ಕೆ ಚಾಚಿಕೊಂಡಿತ್ತು. ಅದರ ತುದಿಯಲ್ಲಿ ಒಂದು ಕಬ್ಬಿಣದ ಕೊಕ್ಕೆಯಿತ್ತು.

ಚಿಕ್ಕಮ್ಮ ವಿನ್ಸೆಂಟ್‌ನನ್ನು ಪ್ರೀತಿಯಿಂದ ಬರಮಾಡಿಕೊಂಡು ಊಟದ ಮನೆಗೆ ಕರೆದೊಯ್ದಳು. ಗೋಡೆಯೊಂದರ ಮೇಲೆ ಷೆಫೆರ್ ಬಿಡಿಸಿದ ಕ್ಯಾಲ್ವಿನ್‌ನ ಭಾವಚಿತ್ರವೊಂದನ್ನು ನೇತು ಹಾಕಲಾಗಿತ್ತು. ಮತ್ತೊಂದು ಪಕ್ಕದಲ್ಲಿ ಬೆಳ್ಳಿಯ ಶಿಲುಬೆ ಹೊಳೆಯುತ್ತಿತ್ತು. ಮರದಿಂದ ಮಾಡಿದ ಗೋಡೆಗಳು ಕಪ್ಪು ಬಣ್ಣದ್ದಾಗಿದ್ದವು. ಕೋಣೆಯ ಕತ್ತಲಿಗೆ ಹೊಂದಿಕೊಳ್ಳುವಷ್ಟರಲ್ಲಿ ಒಬ್ಬ ಹುಡುಗಿ ಆಚೆ ಬಂದು ವಿನ್ಸೆಂಟ್‌ನನ್ನು ಮಾತಾಡಿಸಿದಳು; ಸ್ವಾಗತಿಸಿದಳು.

"ಖಂಡಿತವಾಗಿಯೂ ನಾನು ಯಾರೂಂತ ನಿನಗೆ ಗೊತ್ತಾಗಿಲ್ಲ. ನಾನು ನಿನ್ನ ಚಿಕ್ಕಪ್ಪನ ಮಗಳು. ವಾವೆಯಲ್ಲಿ ಸೋದರಿ. ನನ್ನ ಹೆಸರು ಕೇ."

ವಿನ್ಸೆಂಟ್ ಅವಳತ್ತ ಕೈಚಾಚಿದ. ಕೇಳ ಮೃದುವಾದ ಕೈನ ಸ್ಪರ್ಷವನ್ನು ಅನುಭವಿಸಿದ. ಎಷ್ಟೋ ತಿಂಗಳ ನಂತರ ಮೊಟ್ಟ ಮೊದಲ ಬಾರಿಗೆ, ವಿನ್ಸೆಂಟ್ ಯುವತಿಯ ಕರಸ್ಪರ್ಷದ ಸುಖವನ್ನು ಅನುಭವಿಸಿದ.

"ಇದಕ್ಕೆ ಮುಂಚೆ ನಾವು ಎಂದೂ ಭೇಟಿಯಾಗಿರಲಿಲ್ಲ. ಆದರೆ ಈಗ ಮೊದಲಬಾರಿಗೆ ವಯಸ್ಸಿಗೆ ಬಂದಿರುವ ನಾವು ಭೇಟಿಯಾಗುತ್ತಿರುವುದು ಒಂದು ಥರಾ ಕುತೂಹಲ ಅನಿಸುತ್ತೆ! ನನಗೆ ಈಗ ಇಪ್ಪತ್ತಾರು ವರ್ಷ. ನಿನಗೂ ಬಹುಶಃ?....."

ವಿನ್ಸೆಂಟ್ ಮಾತಿಲ್ಲದೆ, ಅವಳತ್ತ ನೋಡಿದ. ಇಂಥ ಪ್ರಶ್ನೆಗೆ ಉತ್ತರ ಕೊಡಬೇಕಾಗಿ ಬರುತ್ತೆ ಅನ್ನೋದು ಎಷ್ಟೋ ತಿಂಗಳ ನಂತರ, ಅನುಭವಕ್ಕೆ ಬಂದಿದೆ. ತನ್ನ ಪೆದ್ದುತನ ಮುಚ್ಚಿಡುವ ಪ್ರಯತ್ನದಲ್ಲಿ, ಏನೋ ಬಾಯಿಗೆ ಬಂದದ್ದನ್ನು ಹೇಳಿದ – "ನನಗೆ ಈಗ ಇಪ್ಪತ್ನಾಲ್ಕು. ನಿನಗಿಂತ ಎರಡು ವರ್ಷ ಚಿಕ್ಕವನು."

"ಆಹಾ! ಇರಲಿ. ಅದೆಲ್ಲ ಅಷ್ಟೊಂದು ಕುತೂಹಲದ ವಿಚಾರವೇನೂ ಅಲ್ಲ. ನೀನು ನಮ್ಮ ಊರಿಗೆ ಎಂದೂ ಬಂದದ್ದಿಲ್ಲ, ಹಾಗೆಯೇ ನಾನೂ ನಿಮ್ಮ ಕಡೆ

ಬಂದೇ ಇಲ್ಲ. ನೋಡು, ನನ್ನ ಆತಿಥ್ಯ ಅಷ್ಟೊಂದು ಚೆನ್ನಾಗಿ ಇರಲಿಕ್ಕಿಲ್ಲ...... ಬಾ ಬಂದು ಕೂತ್ಕೊಬಾರದೇನು?"

ಬಂದು ಕುರ್ಚಿಯೊಂದರಲ್ಲಿ ಕುಳಿತ. ಆದರೆ ವಿಚಿತ್ರ ಅಂದರೆ, ಅವನಲ್ಲಿ ಮಹತ್ವದ ಬದಲಾವಣೆ ಕಾಣಿಸಿಕೊಂಡಿತು. ಒಬ್ಬ ಹಳ್ಳಿ ಗುಗ್ಗು ಥರಾ ಇದ್ದವನು, ಇದ್ದಕ್ಕಿದಂತೆ ಬಹಳ ನಾಜೂಕಿನ, ಸಭ್ಯ ವ್ಯಕ್ತಿಯಾಗಿ ರೂಪಾಂತರಗೊಂಡಿದ್ದ. "ಅಮ್ಮ ಯಾವಾಗಲೂ ನಿನ್ನನ್ನು ನೆನಪಿಸಿಕೊಳ್ಳುತ್ತಿದ್ದಳು. ನೀನು ಬಂದಿದ್ದರೆ ಚೆನ್ನಾಗಿತ್ತು ಅಂತ, ಹೇಳ್ತಾನೇ ಇದ್ದಳು. ಬ್ರಾಬಾಂಟ್ ನಿನಗೆ ನಿಜವಾಗಿಯೂ ಇಷ್ಟವಾಗುತ್ತೆ. ನಮ್ಮ ಹಳ್ಳಿಗಾಡಿನ ಸುತ್ತಲಿನ ಪ್ರದೇಶ ತುಂಬಾ ಮೋಹಕವಾಗಿದೆ" ಎಂದು ಹೇಳಿದ.

"ಹೌದು, ಅನ್ನಾ ಆಂಟಿ ಯಾವಾಗಲೂ ಅದರ ಬಗ್ಗೆ ಬರೀತಿದ್ರು. ಒಂದು ಸಲ, ಆದಷ್ಟು ಬೇಗ ಅಲ್ಲಿಗೆ ಬಂದು ಎಂಜಾಯ್ ಮಾಡಬೇಕು."

"ಖಂಡಿತಾ ಬರಲೇಬೇಕು. ನಿನಗೆ ತುಂಬಾ ಹಿಡಿಸುತ್ತೆ." ಮಾತಿಗಿಂತ ಅವನ ಗಮನವೆಲ್ಲಾ ಅವಳ ಚೆಲುವಿನ ಕಡೆಗಿತ್ತು. ವಯಸ್ಸಿಗೆ ತಕ್ಕಂತೆ ದೇಹಸೌಂದರ್ಯದ ಆಕರ್ಷಣೆಯೇ ಹೆಚ್ಚಾಗಿತ್ತು. ಅವನ ಮನಸ್ಸೆಲ್ಲವೂ ಅವಳ ಸೌಂದರ್ಯದ ಕಡಲಲ್ಲಿ ಮುಳುಗಿ ಹೋಗಿತ್ತು. ಅವಳ ಮೈಮಾಟಗಳು ಡಚ್ ಹೆಣ್ಣಿನ ಲಕ್ಷಣಗಳನ್ನೇ ಹೋಲುತ್ತಿದ್ದವು. ಅವಳ ದೇಹದ ರೇಖೆಗಳು ಅತ್ಯಂತ ಸ್ಪಷ್ಟವಾಗಿಯೂ ನಾಜೂಕಾಗಿಯೂ ಕಾಣುತ್ತಿದ್ದವು. ಕೂದಲಿನ ಬಣ್ಣ ಹಳ್ಳಿಗಾಡಿನ ಹೆಣ್ಣುಮಕ್ಕಳಲ್ಲಿ ಸಾಮಾನ್ಯವಾಗಿರುತ್ತಿದ್ದಂತೆ ನಸು ಹೊಂಬಣ್ಣವೂ ಆಗಿರಲಿಲ್ಲ, ಕೆಂಚೂ ಆಗಿರಲಿಲ್ಲ. ಆದರೆ ಎರಡೂ ಬಣ್ಣಗಳ ಒಂದು ರೀತಿಯ ಮಿಶ್ರಿತ ಬಣ್ಣವಾಗಿತ್ತು. ತನ್ನ ದೇಹದ ಚರ್ಮವನ್ನು ಕೇ ಬಿಸಿಲಿನಿಂದ ಗಾಳಿಯಿಂದ ಚೆನ್ನಾಗಿ ರಕ್ಷಿಸಿಕೊಂಡಿದ್ದಳು. ಅವಳ ಗಲ್ಲವೂ ಡಚ್ ಕಲಾವಿದನ ಕೌಶಲಕ್ಕೆ ನಿದರ್ಶನದಂತಿತ್ತು. ಗಾಢ ನೀಲಿಬಣ್ಣದ ಕಣ್ಣುಗಳು ಜೀವಕಳೆಯಿಂದ ತುಂಬಿದ್ದವು. ಅವಳ ಬಾಯಿ ಪುಟ್ಟದಾಗಿ ತೆರೆದುಕೊಂಡಿತ್ತು.

ವಿನ್ಸೆಂಟ್‌ನ ಮೌನವನ್ನು ಗಮನಿಸುತ್ತಿದ್ದ ಕೇ ಕೇಳಿದಳು. –"ವಿನ್ಸೆಂಟ್ ಏನನ್ನು ಯೋಚಿಸುತ್ತಿದ್ದೀಯ?"

"ರ್‍ಯಾಂ ಬ್ರ್ಯಾಂಟ್ ನಿನ್ನನ್ನು ನೋಡಿದ್ದರೆ, ನಿನ್ನ ಚಿತ್ರ ಬಿಡಿಸಲು ಮುಂದಾಗುತ್ತಿದ್ದನೇನೋ ಅಂತ ಯೋಚ್ನೆ ಮಾಡ್ತಿದ್ದೆ."

ಕೇ ಮನಃಪೂರ್ತಿ ನಕ್ಕಳು. "ರ್‍ಯಾಂ ಬ್ರ್ಯಾಂಟ್ ಮುದಿವಿಕಾರ ಹೆಣ್ಣುಗಳನ್ನೇ ಚಿತ್ರಬಿಡಿಸಲು ಇಷ್ಟ ಪಡ್ತಿದ್ದ. ಹೌದಲ್ಲ?"

"ಇಲ್ಲ. ಅವನು ನೋಡಲು ಸುಂದರವಾಗಿದ್ದ ವಯಸ್ಸಾದ ಹೆಂಗಸರ ವರ್ಣ ಚಿತ್ರಗಳನ್ನೂ ಬಿಡಿಸುತ್ತಿದ್ದ. ಆದರೆ ಅವರು ಬಡಹೆಂಗಸರಾಗಿರುತ್ತಿದ್ದರು; ನೊಂದವರಾಗಿರುತ್ತಿದ್ದರು. ಅವನಿಗೆ ಇಂಥವರಲ್ಲಿ ಆತ್ಮವಿರುತ್ತದೆ ಎಂಬ ನಂಬಿಕೆ ಇತ್ತು.

ಕೇ ಮೊದಲ ಬಾರಿಗೆ ವಿನ್ಸೆಂಟ್‌ನನ್ನು ಗಂಭೀರವಾಗಿ ನೋಡಿದಳು. ಅವನು ಒಳಗೆ ಬಂದಾಗ, ಅವನ ತಲೆಯ ಇಟ್ಟಿಗೆ ಕೆಂಪಿನ ಬಣ್ಣವನ್ನು ಮತ್ತು ಗಂಭೀರ

ಮುಖವನ್ನಷ್ಟೇ ಸುಮ್ಮನೆ ನೋಡಿದ್ದಳು. ಈಗ ಅವನ ಮುಖ, ಬಾಯಿ, ಕಣ್ಣು, ಹಣೆ, ಗಲ್ಲ – ಎಲ್ಲವನ್ನೂ ಅತ್ಯಂತ ಸೂಕ್ಷ್ಮವಾಗಿ ಗಮನಿಸಿದಳು.

"ರ್‍ಯಾಂಬ್ರಾಂಟ್‌ನನ್ನು ಅರ್ಥಮಾಡಿಕೊಳ್ಳದೆ ಮೂರ್ಖಳಂತೆ ಮಾತಾಡಿದ್ದಕ್ಕೆ ಕ್ಷಮೆಯಿರಲಿ ವಿನ್ಸೆಂಟ್. ಅವನು ಸೌಂದರ್ಯವನ್ನು ಆಳದಲ್ಲಿ ಗಮನಿಸುತ್ತಾನೆ, ಅಲ್ಲವೇ? ಅವನು ವರ್ಣ ಚಿತ್ರಗಳನ್ನು ಬಿಡಿಸುವಾಗ, ಮುದಿ ಮುಖಗಳಲ್ಲಿ ನೋವು, ಹತಾಶೆ, ದುಃಖ ಮುಂತಾದ ಭಾವನೆಗಳನ್ನು [ಅವರ ಮುಖದಲ್ಲಿ] ಪ್ರತಿಫಲಿಸುವುದನ್ನು ಕಾಣುತ್ತಾನೆ."

ಅಷ್ಟರಲ್ಲಿ ಅಲ್ಲಿಗೆ ಬಂದ ರೆವರೆಂಡ್ ಸ್ಟ್ರಿಕ್ಕರ್ "ಏನು ಮಾಡ್ತಿದ್ದೀರಿ ಇಬ್ಬರೂ ಸೇರಿಕೊಂಡು, ಇಷ್ಟೊಂದು ಗಂಭೀರವಾಗಿ?"

"ಪರಸ್ಪರ ಇಬ್ಬರೂ ಒಬ್ಬರನ್ನೊಬ್ಬರು ಸರಿಯಾಗಿ ಅರ್ಥಮಾಡಿಕೊಳ್ತಿದ್ದೀವಿ? ನನಗೆ ಇಷ್ಟು ಒಳ್ಳೆ ಕಸಿನ್ ಇದಾನೆ ಅನ್ನೋದು, ಮೊದಲೇ ಯಾಕೆ ತಿಳಿಸಲಿಲ್ಲ?"

ಇನ್ನೊಬ್ಬ ವ್ಯಕ್ತಿ ಕೋಣೆಯೊಳಗೆ ಪ್ರವೇಶಿಸಿದ. ಆತ ನೋಡಲು ಆಕರ್ಷಕವಾಗಿದ್ದ. ಮುಗುಳ್ನಗುತ್ತಲೇ ಒಳಗೆ ಬಂದ. ಕೇ ಎದ್ದು ಅವನಿಗೊಂದು ಮುತ್ತುಕೊಟ್ಟಳು. "ಈತ ನನ್ನ ಕಸಿನ್ ವಿನ್ಸೆಂಟ್. ವಿನ್ಸೆಂಟ್ ಈತ ನನ್ನ ಗಂಡ ಮಿಜ್ನಿಹೀರ್ ವೋಸ್"– ಎಂದು ಕೇ ಅವರನ್ನು ಪರಸ್ಪರ ಪರಿಚಯಿಸಿದಳು.

ಒಂದೆರಡು ನಿಮಿಷದಲ್ಲಿ ಕೇ ಎರಡು ವರ್ಷದ ಮಗುವನ್ನು ಹಿಡಿದುಕೊಂಡು ಬಂದಳು. ತುಂಬ ಚುರುಕಾಗಿದ್ದ. ಅವನ ಕಣ್ಣುಗಳು ತಾಯಿಕಣ್ಣುಗಳನ್ನು ಹೋಲುವ ನೀಲಿ ಬಣ್ಣದಾಗಿದ್ದವು. ವೋಸ್ ಇಬ್ಬರನ್ನೂ ಆಲಂಗಿಸಿಕೊಂಡ.

"ವಿನ್ಸೆಂಟ್, ನೀನು ನನ್ನ ಪಕ್ಕದಲ್ಲಿ ಬಂದು ಕುಳಿತುಕೊಳ್ಳುವೆಯಾ" ಚಿಕ್ಕಮ್ಮ ವಿಲ್‌ಹೆಲ್ಮಿನಾ ಕೇಳಿದಳು.

ವಿನ್ಸೆಂಟ್‌ಗೆ ಎದುರಾಗಿ, ಕೇ ಕುಳಿತಿದ್ದಳು. ಅವಳು ಒಂದು ಪಕ್ಕಕ್ಕೆ ಇದ್ದರೆ, ಮತ್ತೊಂದು ಪಕ್ಕ ಜ್ಯಾನ್ ಇದ್ದ. ಗಂಡ ಈಗ ಮನೆಗೆ ಬಂದಿದ್ದ ಕಾರಣ, ವಿನ್ಸೆಂಟ್‌ನನ್ನು ಮರೆತೇ ಹೋದಳು. ಅವನ ಕಡೆ ಗಮನ ಕೊಡಲೇ ಇಲ್ಲ. ವೋಸ್ ಹೆಂಡತಿಯ ಕಿವಿಯಲ್ಲಿ ಗುಟ್ಟಾಗಿ ಏನೋ ಹೇಳುತ್ತಿದ್ದಂತೆ, ದಿಢೀರನೆ ಕೇ ಅವನಿಗೊಂದು ಮುತ್ತು ಕೊಟ್ಟಳು.

ಅವರಿಬ್ಬರ ನಡುವಿನ ಪ್ರೀತಿಯ ಸ್ನಿಗ್ಧತೆ, ವಿನ್ಸೆಂಟ್‌ನನ್ನು ಗಂಭೀರವಾಗಿಸಿತು. ಮರೆತಿದ್ದ ಪ್ರೀತಿಯ ನೆನಪುಗಳು ಧುತ್ತನೆ ಮೇಲೆದ್ದವು. ಪ್ರೀತಿಯ ನೋವು ಪುಟಿದೆದ್ದು ಅವನ ಮೈಮನಗಳು ಅಸ್ವಸ್ಥಗೊಂಡವು. ಆ ಪುಟ್ಟ ಸಂಸಾರ, ಅವರ ಅನ್ಯೋನ್ಯತೆಗಳು ಅವನಲ್ಲಿ ಪ್ರೀತಿಯ ಹಸಿವನ್ನು ಹುಟ್ಟುಹಾಕಿತು. ಇಷ್ಟೂ ತಿಂಗಳು ಮರೆತಿದ್ದ ಹಸಿವು, ಪ್ರೀತಿಯ ಹಸಿವು ಅವನನ್ನು ಹಿಂಸಿಸಿತು. ಈ ಹಸಿವನ್ನು ಮರೆಯುವುದಾಗಲೀ ಕೊಲ್ಲುವುದಾಗಲೀ ಸಾಧ್ಯವೇ ಇರಲಿಲ್ಲ.

-೩-

ವಿನ್ಸೆಂಟ್ ಸೂರ್ಯೋದಯಕ್ಕೆ ಮೊದಲೇ ಎದ್ದು ಬೈಬಲ್ ಓದುತ್ತಿದ್ದ. ನಂತರ ಐದುಗಂಟೆಗೆ, ನೌಕಾ ಪ್ರದೇಶದ ಕಡೆಗಿದ್ದ ಕಿಟಿಕಿಯ ಮೂಲಕ, ಕೆಲಸಗಾರರು ಗೇಟಿನ ಮೂಲಕ ಪ್ರವೇಶಿಸುವುದನ್ನೂ ಸಾಲುಗಟ್ಟಿ ಒಬ್ಬೊಬ್ಬರೇ ಒಳಬರುತ್ತಿದ್ದುದನ್ನೂ ಗಮನಿಸುತ್ತಿದ್ದ, ಪುಟ್ಟ ಪುಟ್ಟ ಉಗಿಹಡಗುಗಳು ಓಡಾಡುವುದನ್ನು ನೋಡುತ್ತಿದ್ದ. ಹಾಗೆಯೇ ಸ್ವಲ್ಪ ದೂರದಲ್ಲಿ ಗ್ರಾಮಗಳ ಕಡೆಯಿಂದ ವೇಗವಾಗಿ ಸಾಗುತ್ತಿದ್ದ ಹಾಯಿ ಹಡಗುಗಳನ್ನೂ ಗಮನಿಸಿದ. ಸೂರ್ಯ ಪೂರ್ತಿ ಮೇಲೇರಿ ಬಂದ ಮೇಲೆ, ಅಲ್ಲಲ್ಲಿ ಬಿದ್ದಿದ್ದ ಬೇಡದ ವಸ್ತುಗಳ ಮೇಲೆ ಬಿದ್ದಿದ್ದ ಮಂಜೆಲ್ಲವೂ ಕರಗಿ ಮಾಯವಾಗಿತ್ತು. ವಿನ್ಸೆಂಟ್ ಕಿಟಿಕಿ ಬಿಟ್ಟುಬಂದ. ಒಂದೆರಡು ಬ್ರೆಡ್ ಚೂರುಗಳನ್ನು ತಿಂದು, ಒಂದಿಷ್ಟು ಬೀರು ಸೇವಿಸಿದ. ನಂತರ ಗ್ರೀಕ್, ಲ್ಯಾಟಿನ್‌ಗಳ ಅಭ್ಯಾಸಕ್ಕೆ ಕುಳಿತ.

ನಾಲ್ಕೈದು ಗಂಟೆಗಳ ಕಾಲ ಏಕಾಗ್ರತೆಯಿಂದ ಓದಿದ. ನಂತರ ತಲೆ ಭಾರವೆನಿಸಿತು. ಒಂದೊಂದು ಸಲ ತಲೆ ಸಿಡಿತ. ಎಲ್ಲವೂ ಗೊಂದಲವಾದಂತೆ ಭಾಸವಾಯಿತು. ಇಷ್ಟೆಲ್ಲ ಭಾವ ತುಮುಲಗಳ ನಡುವೆ, ತಾನು ಹೇಗೆ ತಾನೇ ಓದಿನಲ್ಲಿ ಮಗ್ನನಾಗಿರಲು ಸಾಧ್ಯ – ಎಂದು ಯೋಚಿಸುತ್ತಿದ್ದ. ಭಾಷಾ ನಿಯಮಗಳನ್ನೆಲ್ಲ ತಲೆ ತುರುಕಿಕೊಂಡ. ಸೂರ್ಯ ಮುಳುಗುವವರೆಗೆ ಇವನ ಅಭ್ಯಾಸ ಮುಂದುವರಿಯಿತು. ಈಗ ಮೆಂಡೆಸಾ ದ ಕೋಸ್ಟಾ ಅವರ ಬಳಿಗೆ ಪಾಠ ಹೇಳಿಸಿಕೊಳ್ಳಲು ಹೋಗಬೇಕಿತ್ತು. ಸಾಧ್ಯ ಆದರೆ ದಾರಿಯಲ್ಲಿ ಓಲ್ಡ್‌ಸೌತ್ ಚರ್ಚ್, ಬ್ಯೂಟನ್‌ಕಾಂಟ್‌ಗಳ ಅಡ್ಡಾದಿಡ್ಡಿ ರಸ್ತೆಗಳಲ್ಲಿ, ಕಮ್ಮಾರ ಸಾಲೆ, ಸಿಪಾಯಿ ಅಂಗಡಿ, ಲಿಥೋಗ್ರಾಫ್ ಅಂಗಡಿಗಳನ್ನೂ ಹಾದು ಹೋಗಬೇಕೆಂದುಕೊಂಡ.

ಮೆಂಡೆಸ್ ಅವರನ್ನು ನೋಡಿದಾಗ, ರೂಫೆರೇಜ್ ರಚಿಸಿದ 'ಇಮಿಟೇಷನ್ ಆಫ್ ಜೀಸಸ್ ಕ್ರೈಸ್ಟ್' ಕಲಾಕೃತಿ ನೆನಪಿಗೆ ಬರುತ್ತಿತ್ತು. ಆತ ಕ್ಲಾಸಿಕಲ್ ಮಾದರಿಯ ಯಹೂದಿಯಾಗಿದ್ದ. ಎದ್ದು ಕಾಣುವ ಕಣ್ಣುಗಳು, ಮುಖದಲ್ಲಿ ಅನುಭಾವಿ ಕಳೆ. ಮೆದುವಾದ, ಮೊನಚಾದ ಗಡ್ಡ, ನೋಡುತ್ತಿದ್ದಂತೆ ಒಂದು ಬಗೆಯ ಗೌರವ ಮೂಡುತ್ತಿತ್ತು. ಯಹೂದಿಗಳ ಆ ವಾಸದ ಮನೆಗಳಲ್ಲಿ, ಮಧ್ಯಾಹ್ನದ ಹೊತ್ತು, ಬಿಸಿಲಿನ ಝಳದಿಂದ, ವಿಪರೀತ ಸೆಕೆಯ ಅನುಭವ. ಬಹಳ ಗಂಟೆಗಳ ಕಾಲ ವಿನ್ಸೆಂಟ್ ಗ್ರೀಕ್, ಲ್ಯಾಟಿನ್, ಡಚ್ ಹಿಸ್ಟರಿ, ಗ್ರಾಮರ್ ಜೊತೆ ಗುದ್ದಾಡಿದ. ನಂತರ ಮೆಂಡೆಸ್‌ರೊಂದಿಗೆ ಲಿಥೋಗ್ರಾಫ್‌ಗಳ ಕುರಿತ ಚರ್ಚೆ. ಒಂದು ದಿನ ತನ್ನ ಗುರುವಿಗೆ ಮೋರಿಸ್ ಬರೆದಿದ್ದ 'ಸ್ಟಡಿ ಆಫ್ ಬ್ಯಾಪ್ಟಿಸಮ್' ಕೃತಿ ತಂದುಕೊಟ್ಟ.

ಮೆಂಡೆಸ್ ಬ್ಯಾಪ್ಟಿಸಮ್ ಪುಸ್ತಕವನ್ನು ಎರಡೂ ಕೈಗಳಿಂದ ತೆರೆದು ಇರಿಸಿಕೊಂಡ. ಧೂಳಿನೊಂದಿಗಿನ ಸೂರ್ಯಕಿರಣ, ನೇರವಾಗಿ ಕಿಟಕಿಯಿಂದ ಹಾದು ಪುಸ್ತಕದ ಮೇಲೆ ಬಿದ್ದಿತ್ತು.

"ಚೆನ್ನಾಗಿದೆ ಪುಸ್ತಕ. ವಿಶ್ವಧರ್ಮದ ಸಾರವನ್ನು ಒಳಗೊಂಡಿದೆ" ಎಂದು ಮೆಂಡೆಸ್ ಹೇಳಿದ.

ವಿನ್ಸೆಂಟ್‌ನ ಆಯಾಸ ತಕ್ಷಣವೇ ಮರೆಯಾಯಿತು. ಮಾರಿಸ್‌ನ ವಿಚಾರ ಮಾತಾಡುವುದರಲ್ಲಿ ಉತ್ಸಾಹ ತುಂಬಿ ಬಂತು. ಮೆಂಡೆಸ್ ಅವನ ಮಾತನ್ನು, ಅರ್ಥವಾಗಲಿಲ್ಲ ಎಂಬಂತೆ, ತಲೆಯಾಡಿಸಿದ. ವಿನ್ಸೆಂಟ್‌ಗೆ ಪಾಠ ಹೇಳಿಕೊಡಲು, ಅದರಲ್ಲೂ ಗ್ರೀಕ್ ಲ್ಯಾಟಿನ್ ಮಾಧ್ಯಮದಲ್ಲಿ, ಬೋಧಿಸಲು ರೆವರೆಂಡ್ ಸ್ಟ್ರಿಕ್ಕರ್ ಹೆಚ್ಚಿಗೆ ಸಂಭಾವನೆ ನೀಡುತ್ತಿದ್ದ.

"ವಿನ್ಸೆಂಟ್, ಮಾರಿಸ್ ಹೇಳೋದೆಲ್ಲ ಸರಿ. ಆದರೆ ನಮ್ಮ ಸಮಯ ಮುಗೀತಿದೆ. ನಾವು ಪಾಠ ಮುಂದುವರೆಸೋಣ. ಹೌದಲ್ಲ?"

ವಿನ್ಸೆಂಟ್‌ಗೆ ಅರ್ಥವಾಯಿತು. ಎರಡು ಗಂಟೆ ಪಾಠ ಮುಗಿದ ಮೇಲೆ ಮನೆ ಕಡೆ ಹೊರಟ. ದಾರಿಯಲ್ಲಿ ಮನೆಗಳಿದ್ದ ಒಳ ಪ್ರದೇಶದಲ್ಲಿ ಕೆಲಸ ಮಾಡುತ್ತಿದ್ದವರನ್ನು, ಮರಕಡಿಯುತ್ತಿದ್ದವರನ್ನು ಬಡಗಿಗಳನ್ನು, ಹಡಗಿಗೆ ಬೇಕಾದ ಹಲಗೆಗಳು ಮತ್ತು ಇತರೆ ವಸ್ತುಗಳನ್ನು ಮಾಡುತ್ತಿದ್ದವರನ್ನು ಗಮನಿಸುತ್ತ ನಿಲ್ಲುತ್ತಿದ್ದ. ಹೆಂಡದ ಉಗ್ರಾಣದ ಬಾಗಿಲುಗಳು ತೆರೆದುಕೊಂಡಿದ್ದವು. ಜನ ಒಳ ಹೊರಗೆ ಓಡಾಡುತ್ತಿದ್ದರು.

ಅಂಕಲ್ ಜ್ಯಾನ್ ಹೆಲ್‌ವೂರ್ಟ್‌ಗೆ ಒಂದು ವಾರದ ಮಟ್ಟಿಗೆ ಇದ್ದು ಬರಲು ಹೊರಟ. ವಿನ್ಸೆಂಟ್ ಒಬ್ಬನೇ ಇರುತ್ತಾನೆ ಎಂದು ತಿಳಿದು ಕೇ ಮತ್ತು ವೋಸ್ ಇಬ್ಬರೂ ಬಂದು, ಮಧ್ಯಾಹ್ನದ ಭೋಜನಕ್ಕೆ ಕರೆದೊಯ್ದರು.

'ಅಂಕಲ್ ಜ್ಯಾನ್ ಬರುವವರೆಗೆ ನೀನೇ ನಮ್ಮ ಜೊತೆ ಊಟಕ್ಕೆ ಬಂದು ಬಿಡು. ನಿನ್ನ ಸರ್ವಿಸ್ (ಧರ್ಮೋಪದೇಶ) ಕೆಲಸ ಮುಗಿದ ಮೇಲೆ, ಭಾನುವಾರಗಳಲ್ಲಿ, ಊಟಕ್ಕೆ ಬರದೆ ಇದ್ದರೆ ಅಮ್ಮ ನಿನ್ನ ಬಗ್ಗೆ ವಿಚಾರಿಸುತ್ತಾಳೆ."

ಊಟ ಮುಗಿದ ಮೇಲೆ ಎಲ್ಲ ಇಸ್ಪೀಟು ಆಡಲು ಸೇರಿದರು. ವಿನ್ಸೆಂಟ್‌ಗೆ ಆಟ ಗೊತ್ತಿರಲಿಲ್ಲ. ಒಂದು ಮೂಲೆಯಲ್ಲಿ ಹೋಗಿ ಕುಳಿತು ಆಗಸ್ಟ್ ಗ್ರೂಸನ್‌ನ 'ಹಿಸ್ಟರಿ ಆಫ್ ಕ್ರುಸಾಡ್" ಪುಸ್ತಕವನ್ನು ಓದಲು ತೊಡಗಿದ.

"ಏನು ಓದುತ್ತಿರುವಿ ವಿನ್ಸೆಂಟ್?" ಅವಳು ಕೇಳಿದಳು.

"ಇದೊಂದು ಪುಟ್ಟ ಪುಸ್ತಕ. ಆದರೆ ಬಹಳ ಚೆನ್ನಾಗಿದೆ. ಥಿಸ್‌ಮಾರಿಸ್‌ನ ಭಾವನೆಗಳೆಲ್ಲ ಇದರಲ್ಲಿ ಬಂದಿದೆ."

ಕೇ ಮುಗುಳ್ನಕ್ಕಳು "ಯಾಕೆ ಥಿಸ್‌ಮಾರಿಸ್ ನೆನಪಿಗೆ ಬರ್ತಾನೆ?"

ನೀನೇ ಓದಿ ನೋಡು. ನಾನು ಹೇಳಿದ್ದು ನಿಜವೋ ಅಲ್ಲವೋ ನಿನಗೇ ಅರ್ಥ ಆಗುತ್ತೆ. ಎಷ್ಟು ಚೆನ್ನಾಗಿ ಇಲ್ಲಿ ವರ್ಣನೆ ಬಂದಿದೆ. 'ಬಂಡೆ ಮೇಲೊಂದು ಕೋಟೆ. ಸಂಜೆ ಬೆಳಕಲ್ಲಿ ಕಾಡುಗಳು, ಹಿಂಭಾಗದಲ್ಲಿ ಕಪ್ಪು ಹೊಲಗಳು, ಒಬ್ಬ ರೈತ ಬಿಳಿ ಕುದುರೆ ಹೂಡಿ, ಉಳುತ್ತಿದ್ದಾನೆ?....... ಹೇಗಿದೆ!"

ಕೇ ಓದುತ್ತಿದ್ದಳು. ಅವಳಿಗಾಗಿ ಒಂದು ಕುರ್ಚಿ ತಂದ. ಅವನತ್ತ, ಅವಳು ಗಂಭೀರವಾಗಿ ದೃಷ್ಟಿಸಿದಳು.

"ಹೌದು, ಮಾರಿಸ್‌ನ ವರ್ಣನೆಯಂತೆಯೇ ಇದೆ. ಬರಹಗಾರ, ವರ್ಣಚಿತ್ರಗಾರ ಇಬ್ಬರೂ ಒಂದೇ ವಿಚಾರವನ್ನು ಬೇರೆ ಬೇರೆ ಮಾಧ್ಯಮಗಳಲ್ಲಿ ಅಭಿವ್ಯಕ್ತಿಸುತ್ತಾರೆ."

ವಿನ್ಸೆಂಟ್ ಪುಸ್ತಕವನ್ನು ಹಿಂದಕ್ಕೆ ಪಡೆದು, ಒಂದು ಪುಟದ ಮೇಲೆ ಬೆರಳುಗಳನ್ನು ಚಲಿಸುತ್ತ ಒಂದು ಸಾಲಿನ ಬಳಿ ನಿಲ್ಲಿಸಿ "ಈ ಸಾಲು ನೋಡು, ಇದನ್ನು ನೇರವಾಗಿ ಮಿಷೆಲೆಟ್ ಅಥವಾ ಕಾರ್ಲೈಲ್‌ನಿಂದ ತೆಗೆದುಕೊಂಡಿರಬೇಕು."

"ವಿನ್ಸೆಂಟ್ ನೀನು ತುಂಬ ಚೆನ್ನಾಗಿ ಓದಿಕೊಂಡಿದ್ದೀ. ಆಶ್ಚರ್ಯ ಆಗುತ್ತೆ. ತುಂಬಾ ಪುಸ್ತಕ ಓದುತ್ತಿರುತ್ತೀಯಾ?"

"ಇಲ್ಲ. ಓದುವುದಕ್ಕೇನೋ ಇಷ್ಟ. ಆದರೆ ಓದಲು ಆಗಲಿಲ್ಲ. ಓದಲೇ ಬೇಕು ಅನ್ನೋ ಹಟ ಕೂಡ ನನಗಿಲ್ಲ. ಯಾಕೆಂದರೆ ಕ್ರಿಸ್ತನ ಪ್ರಪಂಚದಲ್ಲಿ ಎಲ್ಲವೂ ಲಭ್ಯ – ವಾಸ್ತವಕ್ಕಿಂತ ತುಂಬ ಚೆಲುವಾದ್ದು, ಪರಿಪೂರ್ಣವಾದ್ದು!" ಅಂಥವು ಯಾವ ಪುಸ್ತಕದಲ್ಲೂ ದೊರೆಯುವುದಿಲ್ಲ.

'ಓ ವಿನ್ಸೆಂಟ್. ನಂಬೋಕೇ ಆಗೊಲ್ಲ" – ಎಂದು ಹರ್ಷೋದ್ಗಾರದೊಂದಿಗೆ ಎದ್ದು ನಿಂತಳು.

ವಿನ್ಸೆಂಟ್ ಓದುತ್ತಿರುವ ಈ ಚರಿತ್ರೆಯ ಪುಸ್ತಕದಲ್ಲಿ ಥಿಸ್‌ಮಾರಿಸ್‌ನನ್ನು ಗುರುತಿಸುತ್ತಿರುವುದು ನಿಜವಾಗಿಯೂ ಅದ್ಭುತ! ನನ್ನ ತಂದೆ, ಧಾರ್ಮಿಕ ವಿಷಯಗಳನ್ನು ಬಿಟ್ಟು ಇಂಥಾದ್ದೆಲ್ಲದರ ಕಡೆ ಗಮನಕೊಡಬೇಡವೆಂದು ಹೇಳಿದ್ದು ನಿಜವೇ ಆದರೂ, ನಿನ್ನ ಓದಿನ ಗ್ರಹಿಕೆ ಮಾತ್ರ ಮೆಚ್ಚತಕ್ಕದ್ದೇ.

ಕೇ ಅವನನ್ನು ನೋಡಿದಳು. ಅವನ ಕಣ್ಣುಗಳಲ್ಲಿ ಎಂಥಾದ್ದೋ ಹಸಿವಿನ ಬೆಂಕಿಯನ್ನು ಗುರುತಿಸಿದಳು. ನಂತರ ಬೇರೆಯವರೊಂದಿಗೆ ಆಟಕ್ಕೆ ಜೊತೆಗೂಡಿದಳು.

–೪–

ವಿನ್ಸೆಂಟ್‌ಗೆ, ತನ್ನ ಜೊತೆ ಅದೂ ಇದೂ ಮಾತಾಡೋಕೆ ತುಂಬ ಇಷ್ಟ ಅನ್ನೋದು ಮೆಂಡೆಸ್‌ದ ಕೋಸ್ಟಾಗೆ ಅರ್ಥವಾಗಿತ್ತು. ಅದಕ್ಕಾಗಿಯೇ ವಾರದ ಕಡೆ ದಿನಗಳಲ್ಲಿ ಏನಾದರೂ ನೆಪ ಹುಡುಕಿಕೊಂಡು ಪಾಠ ಮುಗಿದ ಮೇಲೆ, ಟೌನ್‌ಕಡೆಗೆ ತಾನೂ ಅವನ ಜೊತೆ ಹೊರಡುತ್ತಿದ್ದ.

ಒಂದು ದಿನ ವಿನ್ಸೆಂಟ್‌ನನ್ನು ಕೆಲವು ವಿಶೇಷ ಪ್ರದೇಶಗಳ ಮೂಲಕ ಕರೆದೊಯ್ದ. ಲೀಷೆ ಬಂದರಿನಿಂದ ವೋಂಡೆಲ್ ಪಾರ್ಕ್ ಮತ್ತು ಡಚ್ ರೈಲ್ವೆ ಸ್ಟೇಷನ್‌ಗಳ ಮೂಲಕ ಓಡಾಡಿದ ಅಲ್ಲಿನ ಜನಜೀವನ ಪರಿಚಯ ಆಗುವ ಹಾಗೆ ಮಾಡಿದ. ಅಲ್ಲೆಲ್ಲಾ ಸಾಮಿಲ್ಲುಗಳು, ಕೆಲಸಗಾರರ ವಸತಿ ಗೃಹಗಳು, ಅವುಗಳಲ್ಲಿ ಪುಟ್ಟ ಪುಟ್ಟ ತೋಟಗಳು ಕಾಣಿಸುತ್ತಿದ್ದವು. ಇಡೀ ಪ್ರದೇಶ ಜನನಿಬಿಡವಾಗಿತ್ತು. ಆ ಪ್ರದೇಶ ಹಲವು ಕಾಲುವೆಗಳಿಂದ ಪ್ರತ್ಯೇಕಿಸಲ್ಪಟ್ಟಿತ್ತು.

"ಇಂಥ ಪ್ರದೇಶದಲ್ಲಿ ಪಾದ್ರಿಯಾಗಿ ಕೆಲಸ ಮಾಡುವುದು ಒಂಥರಾ ರೋಮಾಂಚನಕಾರಿಯಾಗಿರುತ್ತದೆ." ವಿನ್ಸೆಂಟ್ ಹೇಳಿದ. "ಹೌದು"..... ಎಂದು ಹೇಳುತ್ತ ತನ್ನ ಪೈಪ್‌ಗೆ ತಂಬಾಕನ್ನು ತುಂಬಿಸಿದ. ತಂಬಾಕಿನ ಚೀಲವನ್ನು ವಿನ್ಸೆಂಟ್ ಮುಂದಿಟ್ಟ.

"ಈ ಜನಕ್ಕೆ ನಮ್ಮ ಸ್ನೇಹಕ್ಕಿಂತ ಹೆಚ್ಚಾಗಿ ದೇವರು, ಧರ್ಮಗಳ ಅಗತ್ಯ ಇದೆ."

ಬಹುಶಃ ಜಪಾನಿಯರದಾಗಿದ್ದಿರಬಹುದಾದ ಒಂದು ಚಿಕ್ಕ ಮರದ ಸೇತುವೆಯನ್ನು ದಾಟುತ್ತಿದ್ದರು.

"ಮಿಜ್ನಹೀರ್,...... ನೀವು ಹೇಳುವುದರ ಅರ್ಥ?" – ವಿನ್ಸೆಂಟ್ ಪ್ರಶ್ನಿಸಿದ.

"ಈ ಕಾರ್ಮಿಕರದು ಬಹಳ ಕಷ್ಟದ ಬದುಕು. ಕಾಯಿಲೆ ಬಿದ್ದರೆ ಔಷಧಿಗೆ ದುಡ್ಡಿಲ್ಲ. ನಾಳಿನ ಊಟಕ್ಕೆ ಇವತ್ತು ದುಡಿದು ಸಂಪಾದಿಸಬೇಕು. ಅದೂ ತುಂಬ ಕಷ್ಟಪಟ್ಟು ಕೆಲಸ ಮಾಡಬೇಕು, ನೋಡ್ತಿದ್ದಿಯಲ್ಲ, ಅವರ ಮನೆಗಳು ಹೇಗಿವೇಂತ? ಎಷ್ಟು ಕೆಟ್ಟದಾಗಿವೆ. ಒಂದಕ್ಕೊಂದು ಒತ್ತಿಕೊಂಡು, ಖಾಸಗಿತನಕ್ಕೆ ಅವಕಾಶವೇ ಇಲ್ಲ. ಮರೆಯಾಗಿ ಉಳಿದುಕೊಳ್ಳಲು ಬಯಸಿದಲೆ, ಎಲ್ಲಿದೆ ಜಾಗ? ಬದುಕಿನೊಂದಿಗೆ ಮಾಡಿಕೊಂಡಿರುವ ಒಪ್ಪಂದ ಬಹಳ ಭಯಂಕರವಾಗಿದೆ. ಇಂಥ ಸ್ಥಿತಿಯಲ್ಲಿ ನೆಮ್ಮದಿ ತಂದುಕೊಳ್ಳಬೇಕಾದರೆ, ಅವರಿಗೆ ದೇವರು ಬೇಕೇಬೇಕು."

ವಿನ್ಸೆಂಟ್ ತಂಬಾಕು ಹಚ್ಚಿಕೊಂಡು ಬೆಂಕಿ ಪೆಟ್ಟಿಗೆಯನ್ನು ತನ್ನ ಕಾಲ ಬಳಿಯಿದ್ದ ಕಾಲುವೆಗೆ ಎಸೆದ. "ಟೌನ್‌ನಲ್ಲಿ ಇರುವವರು ಹೇಗೆ?" ಪ್ರಶ್ನಿಸಿದ.

"ಅವರಿಗೆ ಉಡಲು ಒಳ್ಳೆ ಬಟ್ಟೆಯಿದೆ. ಒಳ್ಳೊಳ್ಳೆ ಕೆಲಸಗಳಲ್ಲಿದ್ದಾರೆ. ಕಷ್ಟಕ್ಕೆ ಅಂತ ಒಂದಿಷ್ಟು ಹಣ ಇರುತ್ತೆ. ದೇವರನ್ನು ನೆನಪಿಸಿಕೊಳ್ಳುವವರು. ಸಾಕಷ್ಟು ಶ್ರೀಮಂತ ಹಿರಿಯ ಸಭ್ಯ ವ್ಯಕ್ತಿಯಾಗಿರುತ್ತಾನೆ. ಜಗತ್ತಿನಲ್ಲಿ ಎಲ್ಲವೂ ಸುಖವಾಗಿದೆ. ಅವನಲ್ಲಿ ಅವನಿಗೆ ತೃಪ್ತಿ ಇದೆ."

"ಅಂದರೆ?..... ಒಟ್ಟಲ್ಲಿ ಸ್ವಲ್ಪ ಮಟ್ಟಿಗೆ ಚೆನ್ನಾಗಿ ಇರುವವರು ಅಂತ ಕಾಣುತ್ತೆ?"– ವಿನ್ಸೆಂಟ್ ಹೇಳಿದ.

"ಅಯ್ಯೋ ನಾನು ಹಾಗೆ ಹೇಳಲಿಲ್ಲಪ್ಪ!"

"ಇಲ್ಲ. ನಾನು ಹೇಳ್ತಾ ಇದ್ದೀನಿ."

ಆ ರಾತ್ರಿ ಅವನು ಗ್ರೀಕ್ ಪುಸ್ತಕಗಳನ್ನೆಲ್ಲ ಹರವಿಕೊಂಡು ಕುಳಿತ. ಎದುರುಗಡೆಯಿದ್ದ ಗೋಡೆಯನ್ನು ಒಂದೇ ಸಮನೆ ನೋಡುತ್ತಿದ್ದ. ಅವನಿಗೆ ಲಂಡನ್‌ನ ಕೊಳೆಗೇರಿಗಳು, ಅಲ್ಲಿನ ದುರಂತ ಬದುಕು ನೆನಪಾಯಿತು. ಹಾಗೆಯೇ ತಾನು ಧರ್ಮ ಪ್ರಚಾರಕನಾಗಲು ಬಯಸಿದ್ದೂ ನೆನಪಿಗೆ ಬಂತು. ಒಂದು ಕ್ಷಣ ಅಂಕಲ್ ಸ್ಟ್ರಿಕರ್‌ನ ಚರ್ಚ್ ದೃಶ್ಯ ಅವನ ಮನಸ್ಸಿನಲ್ಲಿ ಮಿಂಚಿ ಮರೆಯಾಯಿತು. ಧರ್ಮಸಭೆ ತುಂಬ ಭರ್ಜರಿಯಾಗಿತ್ತು. ಅಲ್ಲಿಗೆ ಬಂದಿದ್ದವರೆಲ್ಲ ಚೆನ್ನಾಗಿ ಓದಿದವರು. ಸಂವೇದನಾಶೀಲರು, ಬಯಸಿದ್ದನ್ನು ಪಡೆಯುವ ಸಾಮರ್ಥ್ಯವುಳ್ಳವರಾಗಿದ್ದರು. ಅಂಕಲ್ ನೀಡುತ್ತಿದ್ದ ಸೆರ್‌ಮನ್‌ಗಳು ಬಹಳ ಚೆನ್ನಾಗಿದ್ದವು. ಮನಸ್ಸಿಗೆ ಸಮಾಧಾನ ನೀಡುತ್ತಿದ್ದವು. ಆದರೆ ಅಲ್ಲಿಗೆ ಬಂದವರಿಗೆ ಸಮಾಧಾನದ ಅಗತ್ಯವಾದರೂ ಇತ್ತೇನು?

ಆ್ಯಮ್‌ಸ್ಟರ್ ಡ್ಯಾಮ್‌ಗೆ ಬಂದು ಆರು ತಿಂಗಳು ಕಳೆದಿತ್ತು. ಸಹಜ ಪ್ರತಿಭೆ, ಸಾಮರ್ಥ್ಯಗಳ ಎದುರು ಕಷ್ಟಪಟ್ಟು ಕೆಲಸ ಮಾಡುವುದು ಪ್ರಯೋಜನವಿಲ್ಲದ್ದು,

ಎನ್ನುವ ಸತ್ಯವನ್ನು ಅರ್ಥಮಾಡಿಕೊಂಡ. 'ಭಾಷೆ'ಯ ಪುಸ್ತಕಗಳನ್ನು ಪಕ್ಕಕ್ಕೆ ಸರಿಸಿ ಆಲ್‌ಜೀಬ್ರಾ (ಬೀಜಗಣಿತ)ವನ್ನು ತೆಗೆದಿರಿಸಿಕೊಂಡ. ಮಧ್ಯ ರಾತ್ರಿಗೆ ಜ್ಯಾನ್ ಒಳಗೆ ಬಂದ.

"ನಿನ್ನ ಬಾಗಿಲಿಂದ ದೀಪ ಉರೀತಿದ್ದದ್ದು ಕಾಣಿಸಿತು. ವಾಚ್‌ಮನ್ ಕೂಡ, ಈ ದಿನ ಬೆಳಗಿನ ಜಾವ ನಾಲ್ಕು ಗಂಟೇಲಿ, ಇಲ್ಲೆಲ್ಲಾ ಓಡಾಡುತ್ತಿದ್ದೆ ಅಂತ ಬೇರೆ ಹೇಳಿದ. ದಿನಕ್ಕೆ ಎಷ್ಟು ಗಂಟೆಗಳ ಕಾಲ ಓದುತ್ತಿರುವಿ?" ವೈಸ್ ಅಡ್ಮಿರಲ್ ಕೇಳಿದ.

"ಒಂದೊಂದು ದಿನ ಒಂದೊಂದು ಥರ. ಸುಮಾರು ೧೮ ರಿಂದ ೨೦ ಗಂಟೆಗಳ ಕಾಲ ಇರಬಹುದ್ದು."

"ಇಪ್ಪತ್ತು ಗಂಟೆ!" ಅಡ್ಮಿರಲ್‌ಗೆ ಒಂದು ಥರಾ ಭಯ ಆಯ್ತು. ವಾನ್‌ಗೋ ವಂಶದಲ್ಲಿ ಯಾರೊಬ್ಬರೂ ನಿಷ್ಪ್ರಯೋಜಕರಾಗುವ ಕಲ್ಪನೆಯೂ ಅವನಿಗೆ ಸಾಧ್ಯವಿರಲಿಲ್ಲ.

"ಅಷ್ಟು ಸಮಯ ಬೇಕಾಗೊಲ್ಲ ಅನಿಸುತ್ತೆ."

"ನನ್ನ ಕೆಲಸ ಎಲ್ಲ ಮುಗೀಬೇಕಲ್ಲ ಅಂಕಲ್."

ಜ್ಯಾನ್ ಅಂಕಲ್‌ನ ಹುಬ್ಬುಗಳು ಬಿಗಿದುಕೊಂಡವು. "ಇರಬಹುದು...... ನಾನು ನಿನ್ನ ತಂದೆತಾಯಿಗಳಿಗೆ ನಿನ್ನನ್ನು ಚೆನ್ನಾಗಿ ನೋಡಿಕೊಳ್ತೀನಿ ಅಂತ ಭರವಸೆ ನೀಡಿದ್ದೀನಿ. ಈಗ ಸದ್ಯಕ್ಕೆ ನೀನು ಹೋಗಿ ಮಲಗು. ಇನ್ನುಮುಂದೆ ರಾತ್ರಿ ಹೊತ್ತು ಇಷ್ಟು ತಡವಾಗಿ ಮಲಗಬೇಡ." – ಎಂದು ಬುದ್ಧಿವಾದ ಹೇಳಿದ.

ವಿನ್ಸೆಂಟ್ ತನ್ನ ಪಠ್ಯಪುಸ್ತಕಗಳನ್ನು ಪಕ್ಕಕ್ಕೆ ಇರಿಸಿದ. ಅವನಿಗೆ ನಿದ್ದೆ ಬೇಕಿರಲಿಲ್ಲ; ಪ್ರೀತಿ, ಸಹಾನುಭೂತಿ, ಸಂತೋಷ ಯಾವುದೂ ಬೇಕಿರಲಿಲ್ಲ. ಅವನಿಗೆ ಬೇಕಿದ್ದದ್ದು ಗ್ರೀಕ್ ಲ್ಯಾಟಿನ್, ಆಲ್‌ಜೀಬ್ರಾ, ಗ್ರಾಮರ್‌ಗಳನ್ನು ಚೆನ್ನಾಗಿ ಕಲಿತು ಪಾಸ್ ಆಗೋದೊಂದೇ; ಪಾಸಾಗಿ ಯೂನಿವರ್ಸಿಟಿ ಸೇರಿ, ಧರ್ಮಬೋಧಕನಾಗಿ, ಈ ಭೂಮಿ ಮೇಲೆ ದೇವರ ಸೇವೆಯಲ್ಲಿ ತೊಡಗುವುದಷ್ಟೇ ಮುಖ್ಯವಾದ ಕೆಲಸವಾಗಿತ್ತು.

–೫–

ಆ್ಯಮ್‌ಸ್ಟರ್ ಡ್ಯಾಮ್‌ಗೆ ಬಂದ ಒಂದು ವರ್ಷದ ಮೇಲೆ ಈ ಸಾಂಪ್ರದಾಯಿಕ ಶಿಕ್ಷಣಕ್ಕೆ ತಾನು ಯೋಗ್ಯನಲ್ಲ ಅನ್ನುವುದು ಅರ್ಥವಾಗತೊಡಗಿತು. ಇದು ಸೋಲನ್ನು ಒಪ್ಪಿಕೊಂಡಂತೆ! ಎಲ್ಲ ಯೋಚನೆಗಳನ್ನು ಬದಿಗಿರಿಸಿ, ಓದಲು ಬಹಳ ಪ್ರಯತ್ನಿಸುತ್ತಿದ್ದ.

ಕಲಿಯುವುದು ಕಷ್ಟಕರ ಅನ್ನುವುದಷ್ಟೇ ಸತ್ಯವಾಗಿದ್ದರೆ, ಅವನು ಈ ರೀತಿ ಅಸ್ವಸ್ಥನಾಗುತ್ತಿರಲಿಲ್ಲ. ಪ್ರತಿದಿನವೂ ಹಗಲು, ರಾತ್ರಿ ಅವನನ್ನು ಕಾಡುತ್ತಿದ್ದ ಪ್ರಶ್ನೆಯೆಂದರೆ, "ನಿಜವಾಗಿಯೂ ನಾನು ಅಂಕಲ್ ಸ್ಟ್ರಿಕ್ಕರ್‌ನ ರೀತಿಯಲ್ಲಿ ಒಳ್ಳೆಯ ಪಾದ್ರಿಯಾಗಲು ಬಯಸುತಿದ್ದೇನೆಯೇ? ತನ್ನ ವೈಯಕ್ತಿಕ ಆಸಕ್ತಿಯಾದ ಬಡವರ ಸೇವೆ, ಅಸ್ವಸ್ಥರ, ದೀನದಲಿತರ ಸೇವೆ – ಇತ್ಯಾದಿಗಳು ಏನಾಗುತ್ತವೆ? ಇದೇ ರೀತಿ ಯೋಚನೆ ಮಾಡ್ತಾ ಇದ್ದರೆ, ಇನ್ನೂ ಐದು ವರ್ಷ ಕಳೆಯುವುದಾದರೂ ಹೇಗೆ?"

ಒಂದು ದಿನ ಮಧ್ಯಾಹ್ನ, ತನ್ನ ಪಾಠಗಳನ್ನೆಲ್ಲ ಮುಗಿಸಿದ ಮೇಲೆ ಮೆಂಡಸ್‌ನನ್ನು – 'ಮಿಜ್ನಹೀರ್, ಸ್ವಲ್ಪ ನನ್ನ ಜೊತೆ ಬರೋಕೆ ಸಾಧ್ಯವೇ?"

ವಿನ್ಸೆಂಟ್‌ನ ಮನಸ್ಸಿನ ಸಂಘರ್ಷವನ್ನು ಸೂಕ್ಷ್ಮವಾಗಿ ಗ್ರಹಿಸಿದ ಮೆಂಡೆಸ್, ಆತನಿಗೆ, ವಿನ್ಸೆಂಟ್ ಯಾವುದೋ ಒಂದು ನಿರ್ಧಾರವನ್ನು ಶೀಘ್ರದಲ್ಲಿಯೇ ತಲುಪುವ ಸಾಧ್ಯತೆ ಕಾಣಿಸಿತು.

"ಆಯ್ತು, ನಾನೂ ಹಾಗೇ ಸುತ್ತಾಡಿ ಬರೋಣ ಎಂದುಕೊಂಡಿದ್ದೆ. ಮಳೆ ಬಿದ್ದ ಮೇಲೆ ಗಾಳಿ ತಾಜಾ ಆಗಿದೆ. ಖಂಡಿತ ನಿನ್ನ ಜೊತೆ ಬರೋಕೆ ನನಗೂ ಇಷ್ಟವೇ."

ಕತ್ತಿನ ಸುತ್ತ ಸ್ಕಾರ್ಫ್‌ನ್ನು ಬಿಗಿದುಕೊಂಡ. ಉದ್ದನೆಯ ಕಾಲರ್ ಇದ್ದ ಕೋಟನ್ನು ಧರಿಸಿದ. ಇಬ್ಬರೂ ಒಂದು ಬೀದಿಗೆ ಬಂದರು. ಮುನ್ನೂರು ವರ್ಷಗಳ ಹಿಂದೆ ಬಾರೂಕ್ ಸ್ಪಿನೋಜನನ್ನು ಮರಣದಂಡನೆಗೆ ಗುರಿ ಪಡಿಸಿದ್ದ, ಯಹೂದ್ಯರ ದೇವಮಂದಿರವನ್ನು ಹಾದು ಹೋದರು. ಹಾಗೆಯೇ ಜೀ ಸ್ಟ್ರಾಟ್‌ನಲ್ಲಿದ್ದ ರೆಂಬ್ರಾಂಟ್‌ನ ಹಳೆಮನೆಯನ್ನೂ ಹಾದುಹೋದರು. ಆ ಹಳೆಮನೆಯನ್ನು ಸಮೀಪಿಸಿದಾಗ, ಮೆಂಡೆಸ್‌ದ ಕೋಸ್ಟಾ "ಆತ ಬಡತನ ಅವಮಾನಗಳಿಂದ ಸಾವನ್ನಪ್ಪಿದ"– ಎಂದು ವಿನ್ಸೆಂಟ್‌ಗೆ ಸಹಜವಾದ ದನಿಯಲ್ಲಿ ಹೇಳಿದ.

ವಿನ್ಸೆಂಟ್ ಕೂಡಲೆ ಅವನತ್ತ ನೋಡಿದ, ಸಮಸ್ಯೆಯನ್ನು ಬೇರೆಯವರು ಪ್ರಸ್ತಾಪ ಮಾಡುವುದಕ್ಕೆ ಮೊದಲೇ ಸಮಸ್ಯೆಯ ಅಂತರಾಳವನ್ನು ಪ್ರವೇಶಿಸುವ ಅಭ್ಯಾಸವನ್ನು ಇರಿಸಿಕೊಂಡಿದ್ದ. ಆತ ಮನುಷ್ಯನ ಬಗ್ಗೆ ಗಾಢವಾದ, ಚೇತರಿಸಿಕೊಳ್ಳುವ ಶಕ್ತಿಯನ್ನು ಹೊಂದಿದ್ದ. ಒಂದು ಸಲ ಹೇಳುವ ಮಾತುಗಳು ಆಳವಾಗಿ ಇಳಿದು ಅವುಗಳ ಬಗ್ಗೆ ಯೋಚಿಸುವಂತೆ ಆಗುತ್ತಿತ್ತು. ಆದರೆ ಅಂಕಲ್ ಜ್ಯಾನ್ ಮತ್ತು ಸ್ಟ್ರಿಕ್ಕರ್‌ಗೆ ಏನನ್ನಾದರೂ ಹೇಳಿದಾಗ, ಅದು ಚೆಂಡಿನಂತೆ ಗೋಡೆಗೆ ಅಪ್ಪಳಿಸಿ ಹಿಂತಿರುಗಿ ಬಿಡುತ್ತಿದ್ದವು. ಮೆಂಡೆಸ್ ಯಾರಾದರೂ ಹೇಳಿದ್ದನ್ನು ತುಂಬಾ ಗಂಭೀರವಾಗಿ, ತನ್ನ ಬುದ್ಧಿಶಕ್ತಿಯ ಮೂಲಕ ಚರ್ಚೆ ಮಾಡಿ, ಹಿಂತಿರುಗಿಸುತ್ತಿದ್ದರು.

"ಆತ ದುಃಖದಿಂದೇನೂ ಸಾಯಲಿಲ್ಲವಲ್ಲ!" ವಿನ್ಸೆಂಟ್ ಹೇಳಿದ. "ಇಲ್ಲ ತನ್ನನ್ನು ತಾನು ಸಂಪೂರ್ಣವಾಗಿ ಅಭಿವ್ಯಕ್ತಿಸಿಕೊಂಡ. ತಾನು ಮಾಡಿದ್ದ ಕೆಲಸಗಳ ಯೋಗ್ಯತೆಯೇನೆಂಬುದನ್ನು ಅರ್ಥಮಾಡಿಕೊಂಡಿದ್ದ. ತನ್ನ ಕಾಲದಲ್ಲಿ ತಾನೊಬ್ಬನೇ ಹಾಗೆ ಮಾಡಲು ಸಾಧ್ಯವಾಯಿತು."

"ಜಗತ್ತು ತನ್ನ ಬಗ್ಗೆ ಏನು ಯೋಚಿಸುತ್ತೆ ಅನ್ನುವುದರ ಬಗ್ಗೆ ಅವನು ತಲೆಕೆಡಿಸಿಕೊಳ್ಳಲಿಲ್ಲ. ಅವನಿಗೆ ಪೈಂಟ್ ಮಾಡಬೇಕಿತ್ತು, ಅಷ್ಟೆ. ಚೆನ್ನಾಗಿದೆಯೋ ಇಲ್ಲವೋ – ಅವನಿಗೆ ಅದೆಲ್ಲ ಬೇಕಿರಲಿಲ್ಲ. ಪೈಂಟಿಂಗ್ ಒಂದೇ ಅವನನ್ನು ಮನುಷ್ಯನನ್ನಾಗಿ ಉಳಿಸಿದ್ದು. ಕಲಾವಿದನಿಗೆ ಎಷ್ಟರ ಮಟ್ಟಿಗೆ ಅಭಿವ್ಯಕ್ತಿ ಸಾಮರ್ಥ್ಯವನ್ನು ನೀಡಬಲ್ಲುದೋ ಅಷ್ಟರ ಮಟ್ಟಿಗೆ ಕಲೆಗೆ ಬೆಲೆ ಇರುತ್ತದೆ. ರೆಂಬ್ರಾಂಟ್ ತನ್ನ ಜೀವನದ ಗುರಿ ಏನಿತ್ತೋ ಅದನ್ನು ಪೂರೈಸಿದ. ಅದರೊಂದಿಗೆ ಅವನಿಗೆ ನ್ಯಾಯ

ಸಂದಂತಾಯಿತು. ಅವನ ಕಲೆಗೆ ಅಂತಹ ಬೆಲೆ ಇಲ್ಲದಿದ್ದರೂ ಪರವಾಗಿಲ್ಲ. ತನ್ನ ಬಯಕೆಯನ್ನು ಹತ್ತಿಕ್ಕಿ ಪ್ರಯತ್ನಿಸಿದ್ದರೆ ಜೀವನದಲ್ಲಿ, ಆ್ಯಮ್‌ಸ್ಟರ್‌ಡ್ಯಾಮ್‌ನಲ್ಲಿಯೇ ಅತ್ಯಂತ ಶ್ರೀಮಂತ ಬಿಸಿನೆಸ್‌ಮ್ಯಾನ್ ಎನಿಸಿಕೊಂಡು ಬದುಕಬಹುದಾಗಿತ್ತು. ಆದರೆ ಅವನು ಹಾಗೆ ಮಾಡದೆ, ತನ್ನ ಮಹತ್ವಾಕಾಂಕ್ಷೆಯಾದ ಪೈಂಟಿಂಗ್‌ಗೇ ತನ್ನನ್ನೂ ಒಪ್ಪಿಸಿಕೊಂಡು ಅದಕ್ಕೆಂದೇ ಬದುಕಿದ; ಸಾಧಿಸಿದ."

"ಹಾಗೋ!"

"ಒಂದು ಸತ್ಯ ಏನೆಂದರೆ, ರೆಂಬ್ರಾಂಟ್‌ನ ಪೈಂಟಿಂಗ್ಸ್‌ಗಳು ಇವತ್ತಿಗೂ ಪ್ರಪಂಚದಲ್ಲಿ ಸಂತೋಷವನ್ನು ತಂದುಕೊಡುತ್ತವೆ." – ಹಾಗೇ ಮಾತು ಮುಂದುವರೆಸಿದ ಮೆಂಡೆಸ್ – "ಇವು ಯಾರಿಂದಲೂ ಏನನ್ನೂ ಅಪೇಕ್ಷಿಸುವುದಿಲ್ಲ. ಅವನು ಸಾಯುವಾಗ ಒಂದು ರೀತಿಯ ಪೂರ್ಣತೆಯ ತೃಪ್ತಿ ಇತ್ತು. ಒಂದು ರೀತಿಯಲ್ಲಿ ಸಾವಿಗೆ ತಳ್ಳಲ್ಪಟ್ಟ ಎಂದೂ ತಿಳಿಯಬಹುದು. ಅವನ ಬದುಕಿನ ಸಂಪುಟ ಅತ್ಯಂತ ಸುಂದರವಾದ ಬರವಣಿಗೆಯಾಗಿದೆ. ಅವನ ಕೃತಿಗಳ ಗುಣಮಟ್ಟಕ್ಕಿಂತ, ಅವನ ನಿಷ್ಠೆ, ಪ್ರಾಮಾಣಿಕತೆ, ಬದ್ಧತೆಗಳು ವಿಚಾರಗಳು ಬಹಳ ಮುಖ್ಯ ಎನಿಸುತ್ತದೆ."

ಮರಳಿನ ಗಾಡಿಗಳನ್ನು ತುಂಬಿಸುತ್ತ ಕೆಲಸ ಮಾಡುತ್ತಿದ್ದ ಕೆಲಸಗಾರರನ್ನು ಗಮನಿಸುತ್ತ ಸ್ವಲ್ಪ ಹೊತ್ತು ನಿಂತರು. ನಂತರ ಹಲವು ಇಕ್ಕಟ್ಟಾದ ಗಲ್ಲಿಗಳ ಮೂಲಕ ನಡೆದು ಹೋದರು.

"ಮಿಜ್ನಹೀರ್ ಯಾರಾದರೂ ಯುವಕನೊಬ್ಬ ಏನೋ ವಿಶೇಷವಾದ್ದನ್ನು ಮಾಡಬೇಕು ಎಂದುಕೊಂಡಾಗ, ಯಾವುದು ಸರಿಯಾದ್ದು ಎಂದು ಕಂಡುಕೊಳ್ಳುವುದು ಹೇಗೆ? ಒಂದು ವೇಳೆ ಯಾವುದೋ ಒಂದನ್ನು ಇಷ್ಟಪಟ್ಟು ಆರಿಸಿಕೊಂಡು ನಂತರ, ತನ್ನ ಆಯ್ಕೆ ಸರಿಯಾದ್ದಲ್ಲ. ತನಗೆ ಅದು ಹೊಂದುವುದಿಲ್ಲ ಅನಿಸಿದಾಗ ಏನು ಮಾಡಬೇಕು?"

ಮೆಂಡೆಸ್‌ನ ಕಣ್ಣುಗಳಲ್ಲಿ ಮಿಂಚುಕಾಣಿಸಿತು. ತನ್ನ ಕೋಟಿನ ಕಾಲರ್ ಸರಿಪಡಿಸಿಕೊಳ್ಳುತ್ತ "ನೋಡು ವಿನ್ಸೆಂಟ್, ಆ ಬೂದು ಬಣ್ಣದ ಮೋಡಗಳ ಮೇಲೆ ಮುಳುಗುತ್ತಿರುವ ಸೂರ್ಯನ ಕೆಂಪು ಹೇಗೆ ಬೀಳುತ್ತಿದೆ, ಗಮನಿಸು."

ಬಂದರನ್ನು ತಲುಪಿದರು. ಹಡಗುಗಳ ಹಾಯಿಗಳು, ಸಾಲು ಮನೆಗಳು, ಮರಗಳು ಎಲ್ಲವೂ ಸಂಧ್ಯಾಕಾಲದ ಅರುಣರಾಗದ ಹಿನ್ನೆಲೆಯಲ್ಲಿ ಸುಂದರವಾಗಿ ಕಾಣುತ್ತಿದ್ದುದೇ ಅಲ್ಲದೆ 'ಜ಼ೀ'ನಲ್ಲಿ ಅವುಗಳ ಪ್ರತಿಫಲಿಸುತ್ತಿದ್ದ ನೋಟ, ಇನ್ನೂ ಮೋಹಕವಾಗಿತ್ತು."

ಮೆಂಡೆಸ್ ತಂಬಾಕಿನ ಚೀಲವನ್ನು ವಿನ್ಸೆಂಟ್ ಮುಂದಿಟ್ಟ.

"ನನ್ನಲ್ಲಿ ಆಗಲೇ ಇದೆ ಮಿಜ್ನಹೀರ್."

"ಹೌದಲ್ಲ!" ನಾಲೆಯ ಹಾದಿಗುಂಟ ಜ಼ೀಬರ್ಗ್‌ಗೆ ನಡೆದು ಹೋಗೋಣವೇ? ಅಲ್ಲಿ ಯಹೂದಿಗಳ ಚರ್ಚ್ ಇದೆ. ಸ್ವಲ್ಪ ಹೊತ್ತು ಅಲ್ಲಿ ಕೂತು ಹೋಗೋಣ. ನನ್ನ ಪೂರ್ವಿಕರ ಸಮಾಧಿಗಳು ಅಲ್ಲಿಯೇ ಇವೆ."

ಇಬ್ಬರೂ ಮೌನವಾಗಿ ಒಂದಷ್ಟು ದೂರ ನಡೆದರು.

"ಯಾವಾಗಲೂ ನಾವು ಮಾಡಿದ್ದೆಲ್ಲ ಸರಿ ಇರುತ್ತೆ ಅನ್ನೋ ಭರವಸೆ ಇರುವುದಿಲ್ಲ ವಿನ್ಸೆಂಟ್. ನಾವು ಧೈರ್ಯ ತಂದುಕೊಂಡು, ನಮ್ಮ ಮನಸ್ಸಿಗೆ ಯಾವುದು ಸರಿ ಅನ್ನಿಸುತ್ತೋ ಅದನ್ನು ಮಾಡಬೇಕು. ತಪ್ಪೋ ಸರಿಯೋ, ಅದು ಮುಖ್ಯ ಅಲ್ಲ. ನಾವು ಅಂದುಕೊಂಡದ್ದನ್ನು ಮಾಡಿದ್ದೇವೆ ಅನ್ನೋ ತೃಪ್ತಿ. ನಮ್ಮ ಆತ್ಮದ ದನಿಗೆ, ನಮಗೆ ಸರಿ ಅನಿಸಿದ್ದಕ್ಕೆ ನಾವು ಸ್ಪಂದಿಸಿ ಅದರಂತೆ ನಡೆದುಕೊಳ್ಳಬೇಕು. ಅದರ ಅಂತಿಮ ನಿರ್ಣಯ, ಫಲ, ಪರಿಣಾಮಗಳನ್ನು ದೇವರಿಗೆ ಬಿಡಬೇಕು. ಈಗ ನೀನು ಯಾವುದೋ ಒಂದು ರೀತಿಯಲ್ಲಿ ದೇವರ ಸೇವೆಯಲ್ಲಿ ತೊಡಗಿಸಿಕೊಳ್ಳಬೇಕು ಅಂತ ನಿರ್ಧಾರ ಮಾಡಿದ್ದರೆ, ಅದರಲ್ಲಿಯೇ ವಿಶ್ವಾಸ ಇರಿಸಿಕೊಂಡಿದ್ದರೆ, ಅವುಗಳೇ ನಿನಗೆ ದಾರಿ ತೋರಿಸುತ್ತವೆ. ಪೂರ್ಣ ನಂಬಿಕೆ ಇಡುವುದನ್ನು ಬಿಡಬೇಡ."

"ಒಂದು ವೇಳೆ ನನಗೆ ಅರ್ಹತೆ ಇಲ್ಲದೆ ಹೋದರೆ?"

"ದೇವರ ಸೇವೆ ಮಾಡಲು?" – ಮೆಂಡೆಸ್ ಮುಗುಳ್ನಗುತ್ತ ಅವನ ಕಡೆ ನೋಡಿದ.

"ನಾನು ಹೇಳಿದ್ದು, ಯೂನಿವರ್ಸಿಟಿ ಶಿಕ್ಷಣದ ಮೂಲಕ ಅಕಾಡೆಮಿಕ್ ಆಗಿ ಅರ್ಹತೆ ಪಡೆಯದಿದ್ದರೆ ಅಂತ!"

ಮೆಂಡೆಸ್, ವಿನ್ಸೆಂಟ್‌ನ ನಿರ್ದಿಷ್ಟ ಸಮಸ್ಯೆಯ ಬಗೆ ಏನನ್ನೂ ಹೇಳ ಬಯಸಲಿಲ್ಲ. ಆತ ಮಾತಾಡಿದ್ದೆಲ್ಲ ಲೋಕಾಭಿರಾಮವಾಗಿ. ವಿನ್ಸೆಂಟ್ ಈ ವಿಚಾರದಲ್ಲಿ ಸ್ವತಃ ತಾನೇ ನಿರ್ಧಾರ ತೆಗೆದುಕೊಳ್ಳಬೇಕೆನಿಸಿತು. ಅಷ್ಟು ಹೊತ್ತಿಗೆ ಯಹೂದಿಗಳ ಚರ್ಚಿನ ಅಂಗಳ ತಲುಪಿದ್ದರು. ದಕೋಸ್ಟಾ ವಂಶದವರಿಗೆಂದೇ ಮೀಸಲಾಗಿದ್ದ ಒಂದು ಕಲ್ಲಿನ ಬೆಂಚಿತ್ತು. ಇಬ್ಬರೂ ಅದರ ಮೇಲೆ ಕುಳಿತರು. ಅದರ ಹತ್ತಿರದಲ್ಲಿಯೇ ಮೆಂಡೆಸ್ ತಂದೆತಾಯಿಯರ ಸಮಾಧಿಗಳು ಅಕ್ಕಪಕ್ಕದಲ್ಲಿಯೇ ಇದ್ದವು. ಆ ಪ್ರದೇಶ ನಿಶ್ಯಬ್ಧವಾಗಿತ್ತು. ಸಂಜೆ ಆಗಿದ್ದರಿಂದ ಜನರ ಓಡಾಟ ಇರಲಿಲ್ಲ.

"ವಿನ್ಸೆಂಟ್ ಪ್ರತಿಯೊಬ್ಬರಿಗೂ ವ್ಯಕ್ತಿತ್ವದ ಸಮಗ್ರತೆ ಇರುತ್ತದೆ." ಅದನ್ನು ಅರ್ಥಮಾಡಿಕೊಂಡರೆ, ಅವರು ಮಾಡಿದ್ದೆಲ್ಲವೂ ಸಫಲವಾಗುತ್ತದೆ. ನೀನು 'ಆರ್ಟ್‌ಡೀಲರ್ ಆಗಿ ಮುಂದುವರೆದಿದ್ದರೆ, ಅದರಲ್ಲಿಯೇ ನೀನು ಹೆಸರು ಮಾಡುತ್ತಿದ್ದೆ. ಅದೇ ರೀತಿ 'ಟೀಚಿಂಗ್'ನಲ್ಲೂ. ನೀನು ಪ್ರಯತ್ನ ಪಟ್ಟರೆ ತುಂಬಾ ಚೆನ್ನಾಗಿ ಆ ಮಾಧ್ಯಮದಲ್ಲಿಯೇ ಸಾರ್ಥಕತೆ ಪಡೆಯುತ್ತಿದ್ದೆ. ಯಾವುದನ್ನೇ ಆರಿಸಿಕೊಂಡರೂ, ಪೂರ್ತಿಯಾಗಿ ಅದರಲ್ಲಿ ಮುಳುಗಬೇಕು. ಆಗಲೇ ಯಶಸ್ಸು ಸಾದ್ಯ."

''ವೃತ್ತಿಪರ ಪಾದ್ರಿಯಾಗಲು, ನಾನು ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿ ಮುಂದುವರೆಯದಿದ್ದರೆ?"

"ಪರವಾಗಿಲ್ಲ. ಲಂಡನ್‌ಗೆ ಹಿಂತಿರುಗಿ ಹೋಗು. ಅಲ್ಲಿ ಧರ್ಮ ಬೋಧಕನೋ, ಯಾವುದಾದರೂ ಅಂಗಡಿಯಲ್ಲಿ ಕೆಲಸಗಾರನೋ, ಬ್ರಬಾಂಟ್‌ನಲ್ಲಿ ರೈತನಾಗಿಯೋ

ಕೆಲಸ ಮಾಡು. ನೀನು ಯಾವುದನ್ನು ಮಾಡಿದರೂ ಚೆನ್ನಾಗಿಯೇ ಮಾಡುತ್ತೀ. ನಿನ್ನಲ್ಲಿ ಆ ಸಾಮರ್ಥ್ಯ ಇದೆ. ನಿನಗೆ ಎಷ್ಟೋ ಸಲ, ಸೋಲುತ್ತಿದ್ದೇನೆ ಎನಿಸಬಹುದು. ಆದರೆ ನೀನು ಮಾಡಿಯೇ ಮಾಡುತ್ತೀ, ನಿನ್ನ ಜೀವನವನ್ನು ಸಾರ್ಥಕ ಪಡಿಸಿಕೊಳ್ಳುತ್ತೀ."

"ಧನ್ಯವಾದಗಳು, ಮಿಜ್ನಹೀರ್ ದಕೋಸ್ಟಾ. ನೀವು ಹೇಳಿದ್ದು, ನನಗೆಷ್ಟೋ ಉಪಕಾರ ಆಯ್ತು."

ಕುಳಿತಿದ್ದ ಕಲ್ಲು ಬೆಂಚು ಬಹಳ ತಣ್ಣಗಿದ್ದುದರಿಂದ ಮೆಂಡೆಸ್ ಸ್ವಲ್ಪ ನಡುಗಿದ. ಸೂರ್ಯಸ್ತವಾಗಿತ್ತು. ಎದ್ದು ನಿಂತು, "ವಿನ್ಸೆಂಟ್, ಇನ್ನು ಹೋಗೋಣಲ್ಲ!" – ಎಂದು ಕೇಳಿದ.

–೬–

ಮರುದಿನ ವಿನ್ಸೆಂಟ್, ಅಂಗಳದ ಕಡೆಗೆ ಮುಖಮಾಡಿದ್ದ ಕಿಟಕಿಯ ಮೂಲಕ, ಪಾಪ್ಲರ್ ಗಿಡಗಳು ಎಳೆಯ ಕೊಂಬೆಗಳನ್ನು ಪಸರಿಸಿ, ಸಂಜೆಯ ನೀಲಿ ಬಣ್ಣದ ಹಿನ್ನೆಲೆಗೆ ಸಾಲು ಗಟ್ಟಿ ನಿಂತ ನೋಟವನ್ನು ತುಂಬಿಕೊಳ್ಳುತ್ತಿದ್ದ.

"ಸಾಂಪ್ರದಾಯಿಕ ಶಿಕ್ಷಣ ನನ್ನ ತಲೆಗೆ ಹತ್ತಲಿಲ್ಲವೆಂದ ಮಾತ್ರಕ್ಕೆ, ಈ ಜಗತ್ತಿಗೆ ನನ್ನಿಂದ ಯಾವ ಪ್ರಯೋಜನವೂ ಇಲ್ಲವೇನು? ನನ್ನವರನ್ನು ಪ್ರೀತಿಸುವುದಕ್ಕೂ, ಗ್ರೀಕ್ ಲ್ಯಾಟಿನ್‌ಗೂ ಏನು ಸಂಬಂಧ?" ಎಂದು ವಿನ್ಸೆಂಟ್ ತನ್ನಲ್ಲಿ ತಾನೇ ಪ್ರಶ್ನಿಸಿಕೊಂಡ.

ಅಂಗಳದಲ್ಲಿ ಅಂಕಲ್ ಜ್ಯಾನ್ ಅಡ್ಡಾಡುತ್ತಿದ್ದ. ಅವನಿಗೆ ನೌಕಾಪ್ರದೇಶದಲ್ಲಿ ನಡೆಯುತ್ತಿದ್ದ ಕೆಲಸಗಳು, ವಸ್ತುಗಳು ಕಾಣುತ್ತಿದ್ದವು.

"ಜೀವನದುದ್ದಕ್ಕೂ ನಾನು ಮಾಡಬೇಕೆಂದುಕೊಂಡದ್ದು ದೇವರ ಕೆಲಸ. ತ್ರಿಜ್ಯಗಳಾಗಲೀ ವೃತ್ತಗಳಾಗಲೀ ನನಗೆ ಬೇಕಿರಲಿಲ್ಲ. ದೊಡ್ಡ ದೊಡ್ಡ ಚರ್ಚುಗಳಲ್ಲಿ ಪಾಂಡಿತ್ಯ ಪೂರ್ಣವಾದ ಉಪದೇಶಗಳನ್ನೂ ನೀಡಲು ಬಯಸಲಿಲ್ಲ. ನಾನು ನೊಂದವರಿಗೆ, ಕನಿಷ್ಠರಿಗೆ ಈಗಿಂದಲೇ ಸೇವೆ ಮಾಡಬೇಕು. ಐದು ವರ್ಷಗಳ ನಂತರ ಅಲ್ಲವೇ ಅಲ್ಲ!

ಗಂಟೆ ಹೊಡೆಯಿತು. ಕೆಲಸಗಾರರೆಲ್ಲ ಗೇಟಿನ ಕಡೆಗೆ ನಡೆದರು. ಅಷ್ಟರಲ್ಲಿ ಒಬ್ಬ ಬಂದು ಲಾಂದ್ರ ಹಚ್ಚಿಟ್ಟ. ಅಂಗಳದಲ್ಲಿ ವಿನ್ಸೆಂಟ್ ಕಿಟಕಿಯಿಂದ ದೂರಸರಿದ.

ವಿನ್ಸೆಂಟ್‌ಗೆ ಗೊತ್ತು, ತನ್ನ ತಂದೆ, ಚಿಕ್ಕಪ್ಪಂದಿರು ಹೋದವರ್ಷ ತನಗಾಗಿ ಅಷ್ಟೊಂದು ಹಣ ಖರ್ಚು ಮಾಡಿದ್ದಾರೆ! ಈಗ ತಾನೇನಾದರೂ, ಅವರು ಆಸೆ ಪಟ್ಟದ್ದನ್ನು ತಿರಸ್ಕರಿಸಿದರೆ, ಕೈಬಿಟ್ಟರೆ ಎಲ್ಲ ವ್ಯರ್ಥವಾಯಿತು ಎಂದು ಭಾವಿಸುತ್ತಾರೆ. ಹಾಗೆ ನೋಡಿದರೆ ಅವನು ತುಂಬ ಪ್ರಾಮಾಣಿಕತೆಯಿಂದಲೇ ಪ್ರಯತ್ನ ಪಡುತ್ತಿದ್ದಾನೆ. ಇಪ್ಪತ್ತು ಗಂಟೆಗೂ ಮೀರಿ ಓದುವುದಕ್ಕೆ ಸಾಧ್ಯವಿಲ್ಲ. ವಿದ್ಯಾಭ್ಯಾಸಕ್ಕೆ ನಿಜವಾಗಿಯೂ ಅನರ್ಹನಾಗಿದ್ದಾನೆ. ಅವನು ಓದನ್ನು ಪ್ರಾರಂಭ ಮಾಡಿದ್ದೂ ಬಹಳ ತಡವಾಗಿ. ನಾಳೆ ಏನಾದರೂ ಧರ್ಮೋಪದೇಶಕನಾಗಿ ಮಾತ್ರ ಹೋಗಿ ಜನರ ಕೆಲಸ ಮಾಡಿದರೆ,

ಅದು ಸೋಲು ಎನಿಸುವುದೇ? ನೊಂದವರಿಗೆ, ಬೆಂದವರಿಗೆ, ದೀನದಲಿತರಿಗೆ, ರೋಗಿಗಳಿಗೆ ಪಾಪಿಗಳಿಗೆ ತನ್ನ ಹಿತವಚನಗಳಿಂದ ಸಮಾಧಾನ ತಂದರೆ, ನೆಮ್ಮದಿ ನೀಡಿದರೆ, ಆಗಲೂ ಅದು ಸೋಲು ಎನಿಸಿಕೊಳ್ಳುವುದೇ?

ಹೌದು. ಕುಟುಂಬದವರ ದೃಷ್ಟಿಯಲ್ಲಿ ಹಾಗೇ ಎನಿಸುತ್ತದೆ. ಎಂದಿಗೂ ಇವನು ಮೇಲಕ್ಕೆ ಬರುವುದಿಲ್ಲ; ನಿಷ್ಪ್ರಯೋಜಕ; ವಾನ್‌ಗೋ ವಂಶದಲ್ಲಿ ಇವನೊಬ್ಬ ಕಪ್ಪು ಕುರಿ ಎಂದೇ ಭಾವಿಸುತ್ತಾರೆ.

ಆದರೆ ಮೆಂಡೆಸ್ ಹೇಳಿದ್ದೇನು? – ನೀನು ಏನೇ ಮಾಡಿದರೂ ಚೆನ್ನಾಗಿ ಮಾಡುತ್ತೀಯ; ಮೇಲಕ್ಕೆ ಬರುತ್ತೀಯ – ಎಂದಿದ್ದ.

ಕೇ ಅವನನ್ನೂ ಅರ್ಥ ಮಾಡಿಕೊಂಡಿದ್ದಳು. ಸಂಕುಚಿತ ಮನಸ್ಸಿನ ಪಾದ್ರಿ ಆಗುವ ಅವನಲ್ಲಿನ ಬಯಕೆಗೆ ಅವಳು ಆಶ್ಚರ್ಯ ಪಟ್ಟಿದ್ದಳು. ಹೌದು ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿ ಹೀಗೆಯೇ ಮುಂದುವರೆದರೆ, ಅವನ ಆತ್ಮದ ದನಿ ಅವನಿಗೆ ಕೇಳಿಸದೆಯೇ ಹೋಗಬಹುದು. ಪ್ರಪಂಚದಲ್ಲಿ ತಾನು ಏನು ಆಗಬೇಕು ಅನ್ನುವುದು ಅವನಿಗೆ ಗೊತ್ತಿದೆ. ಮೆಂಡೆಸ್ ಅವನಿಗೆ ಧೈರ್ಯ ತುಂಬಿದ್ದಾನೆ. ಅವನ ಮನೆಯವರು ಸಿಟ್ಟಾಗಬಹುದು; ನಾಲ್ಕು ಮಾತಾಡಬಹುದು. ಆದರೆ ಅವೆಲ್ಲ ಅವನಿಗೆ ಲೆಕ್ಕಕ್ಕಿಲ್ಲ. ದೇವರಿಗಾಗಿ, ತನಗಿರುವ ಅಲ್ಪ ಸ್ಥಾನವನ್ನು ಬಿಟ್ಟುಕೊಡುವುದು, ಅಷ್ಟೇನೂ ದೊಡ್ಡ ವಿಷಯವಲ್ಲ.

ಕೂಡಲೇ ತನ್ನ ವಸ್ತುಗಳನ್ನೆಲ್ಲ ಗಂಟು ಮೂಟೆ ಕಟ್ಟಿಕೊಂಡು ಮನೆಯವರಿಗೂ ಹೇಳದೆ ಅಲ್ಲಿಂದ ಹೊರಟುಬಿಟ್ಟ.

–೨–

ಕ್ರೈಸ್ತಮತಕ್ಕೆ ಸೇರಿಸಿಕೊಳ್ಳಲು ಒಂದು ಸಮಿತಿಯನ್ನು ಮಾಡಲಾಗಿತ್ತು. ಇದನ್ನು ಬೆಲ್ಜಿಯನ್ ಕಮಿಟಿ ಎಂದು ಹೆಸರಿಸಲಾಗಿತ್ತು. ಇದರಲ್ಲಿ ರೆವರೆಂಡ್ ವಾನ್ ಡೆನ್ ಬ್ರಿಂಕ್ ದೆಜಾಂಗ್, ಪೀಟರ್‌ಸನ್ ಮೊದಲಾದವರಿದ್ದು, ಬ್ರಸೆಲ್ಸ್‌ನಲ್ಲಿ ಇದಕ್ಕಾಗಿಯೇ ಒಂದು ಪಾಠಶಾಲೆಯನ್ನು ಆರಂಭಿಸಿದ್ದರು. ಕ್ರೈಸ್ತಧರ್ಮ ಪ್ರಚಾರಕರು, ಬೋಧಕರು ಆಗಲು ಬಯಸುವವರಿಗೆ ಅದರಲ್ಲಿ ಪ್ರವೇಶವಿತ್ತು. ಕೇವಲ ಸಣ್ಣ ಪ್ರಮಾಣದ ಮೊತ್ತವನ್ನು ಪ್ರವೇಶ ಶುಲ್ಕವಾಗಿ ನೀಡಿದರೆ ಸಾಕಾಗಿತ್ತು. ಊಟ, ವಸತಿ ವ್ಯವಸ್ಥೆಯೆಲ್ಲವನ್ನೂ ವಿದ್ಯಾರ್ಥಿಗಳಿಗೆ ಉಚಿತವಾಗಿ ನೀಡುತ್ತಿದ್ದರು. ವಿನ್ಸೆಂಟ್ ಆ ಶಾಲೆಯಲ್ಲಿ ಪ್ರವೇಶಕ್ಕೆ ಆಯ್ಕೆಯಾದ.

"ಮೂರು ತಿಂಗಳ ನಂತರ, ನಾವು ನಿಮಗೆ, ಬೆಲ್ಜಿಯಮ್‌ನಲ್ಲಿ ಉದ್ಯೋಗ ನೀಡುತ್ತೇವೆ," ರೆವರೆಂಡ್ ಪೀಟರ್‌ಸನ್ ವಿನ್ಸೆಂಟ್‌ಗೆ ಹೇಳಿದ.

"ಅವನು ಅದಕ್ಕೆ ಅರ್ಹತೆ ಪಡೆದರೆ ಮಾತ್ರ" ಪೀಟರ್‌ಸನ್ ಕಡೆಗೆ ಮುಖಮಾಡಿ ಜಾಂಗ್ ಹೇಳಿದ. ಜಾಂಗ್ ಕೆಲಸ ಮಾಡುತ್ತಿದ್ದಾಗ, ಒಂದು ಬೆರಳನ್ನು ಕತ್ತರಿಸಿಕೊಂಡಿದ್ದ. ಅದಾದ ಮೇಲೆಯೇ ಅವನು ತತ್ವಶಾಸ್ತ್ರದ ಕಡೆಗೆ ಬಂದದ್ದು.

"ವಾನ್‌ಗೋ ಧರ್ಮ ಬೋಧಕನ ವೃತ್ತಿಯಲ್ಲಿ ಬೇಕಾಗಿರುವುದೆಲ್ಲ, ಒಳ್ಳೆಯ ರೀತಿಯಲ್ಲಿ, ಎಲ್ಲರಿಗೂ ಅರ್ಥವಾಗುವಂತೆ ಸರಳವಾಗಿ, ಆಕರ್ಷಕವಾಗಿ ಜನರಿಗೆ ಭಾಷಣ ಮಾಡುವ ಸಾಮರ್ಥ್ಯ." ರೆವರೆಂಡ್ ವಾನ್ ಡೆನ್ ಬ್ರಿಂಕ್ ಹೇಳಿದ.

ರೆವರೆಂಡ್ ಪೀಟರ್‌ಸನ್, ಸಂದರ್ಶನ ನಡೆಸುತ್ತಿದ್ದ ಚರ್ಚ್‌ನಿಂದ, ವಿನ್ಸೆಂಟ್‌ನನ್ನು ಕೈ ಹಿಡಿದು ಹೊರಗೆ ಕರೆತಂದ. ಬ್ರಸೆಲ್‌ನ ಉರಿಯುವ ಬಿಸಿಲಿನ ಅನುಭವವಾಗುತ್ತಿದ್ದಂತೆ "ಮಗು ನೀನು ನಮ್ಮ ಜೊತೆಗೆ ಬಂದದ್ದು, ನಮಗೆ ಬಹಳ ಸಂತೋಷವಾಗಿದೆ.

"ಬೆಲ್ಜಿಯಮ್‌ನಲ್ಲಿ ಮಾಡಬೇಕಾದ ಕೆಲಸ ತುಂಬ ಇದೆ. ನೀನು ತೋರುತ್ತಿರುವ ಉತ್ಸಾಹ ನೋಡಿದರೆ, ನಿನ್ನಲ್ಲಿ ಆ ಎಲ್ಲ ಕೆಲಸಗಳನ್ನೂ ಮಾಡುವ ಸಾಮರ್ಥ್ಯ ಇದೆ ಅನ್ನೋದು ನಮಗೆಲ್ಲ ಗೊತ್ತಾಗ್ತಾ ಇದೆ.

ಮೇಲೆ ಉರಿಯುತ್ತಿರುವ ಸೂರ್ಯನ ಬಿಸುಪೋ ಇಲ್ಲವೆ ಅನಿರೀಕ್ಷಿತವಾದ ಕರುಣೆಯ ಬಿಸುಪೋ, ಯಾವುದು ತನ್ನ ಮನಸ್ಸಿಗೆ ಹಿತವನ್ನಿತ್ತಿದೆ ಎಂಬುದನ್ನು ತಿಳಿಯಲಾಗಲಿಲ್ಲ; ವಿನ್ಸೆಂಟ್‌ಗೆ! ಆರು ಮಹಡಿಗಳ ಕಲ್ಲು ಕಟ್ಟಡಗಳನ್ನು ಹಾದು ರಸ್ತೆ ತಲುಪಿದರು. ವಿನ್ಸೆಂಟ್‌ಗೆ ಏನು ಉತ್ತರ ನೀಡಬೇಕೆಂದು ತೋಚಲಿಲ್ಲ. ರೆವರೆಂಡ್ ಪೀಟರ್‌ಸನ್, ಸ್ವಲ್ಪ ತಡೆದು ನಿಂತರು.

"ವಿನ್ಸೆಂಟ್ ಇಲ್ಲಿಂದ ನಾನು ಬೀಳ್ಕೊಡುತ್ತೇನೆ. ತೆಗೆದುಕೋ ನನ್ನ ವಿಳಾಸದ ಕಾರ್ಡು. ಸಂಜೆ ಹೊತ್ತು ನಿನಗೆ ಬಿಡುವಾದಾಗ ಬಂದು ನನ್ನನ್ನು ಕಾಣು. ನಿನ್ನ ಜೊತೆ ಹರಟೆ ಹೊಡೆಯುವುದು ನನಗೆ ಇಷ್ಟವಾಗುತ್ತೆ."

ಕ್ರೈಸ್ತಮತ ಬೋಧನಾ ಶಾಲೆಯಲ್ಲಿ ಕೇವಲ ಮೂವರು ವಿದ್ಯಾರ್ಥಿಗಳಿದ್ದರು. ಇವರು ಮಾಸ್ಟರ್ ಬೋಕ್ಮಾ ಸುಪರ್ದಿಯಲ್ಲಿ ಕಲಿಯುತ್ತಿದ್ದರು.

ವಿನ್ಸೆಂಟ್‌ನ ಇಬ್ಬರು ಸಹಪಾಠಿಗಳು ಗ್ರಾಮೀಣ ಪ್ರದೇಶದಿಂದ ಬಂದಿದ್ದ, ಹತ್ತೊಂಬತ್ತು ವರ್ಷ ವಯಸ್ಸಿನ ಹುಡುಗರಾಗಿದ್ದರು. ಈ ಇಬ್ಬರು, ತಮ್ಮ ನಡುವಿನ ಸ್ನೇಹ ಗಟ್ಟಿಗೊಳಿಸಿಕೊಳ್ಳಲು ವಿನ್ಸೆಂಟ್‌ನನ್ನು ಗೇಲಿಮಾಡಲು ಒಂದಾದರು.

ಯಾವಾಗಲಾದರೂ ವಿನ್ಸೆಂಟ್ ಫ್ರೆಂಚ್‌ನಲ್ಲಿ ಮಾತಾಡುವುದಕ್ಕೆ ಹೆಣಗಾಡುತ್ತಿದ್ದರೆ, ಅಥವಾ ಇನ್ನಾವುದೇ ಪಾಠಗಳನ್ನು ಅರ್ಥ ಮಾಡಿಕೊಳ್ಳಲು ಕಷ್ಟಪಡುತ್ತಿದ್ದರೆ, "ವಾನ್‌ಗೋ, ಯಾಕೆ ಅಷ್ಟೊಂದು ಕಷ್ಟ ಪಡುತ್ತಿದ್ದೀಯ?" ಎಂದು ಕೇಳುತ್ತಿದ್ದರು. ಅದರಲ್ಲಿ ಗೇಲಿಯ ದನಿ ಇರುತ್ತಿತ್ತು.

ಎಲ್ಲಕ್ಕಿಂತ ವಿನ್ಸೆಂಟ್‌ಗೆ ಕಷ್ಟ ಎನಿಸಿದ್ದು ಬೋಕ್ಮಾ ಜೊತೆ! ಪ್ರತಿದಿನ ಅವರಿಗೆ ಒಳ್ಳೆಯ ಭಾಷಣಕಾರರಾಗಲು ಕಲಿಸಲಾಗಿತ್ತು. ಪ್ರತಿರಾತ್ರಿ ಭಾಷಣ ಮಾಡುವುದನ್ನು ಅಭ್ಯಾಸ ಮಾಡಿಕೊಂಡು, ಮರುದಿನ ಅದನ್ನು ತರಗತಿಯಲ್ಲಿ ಒಪ್ಪಿಸಬೇಕಿತ್ತು. ಆ ಇಬ್ಬರು ಹುಡುಗರು ಬಹಳ ಕುಶಲತೆಯಿಂದ, ಅಚ್ಚುಕಟ್ಟಾಗಿ ಕಲಿತ ಸಂದೇಶಗಳನ್ನು ನಿರರ್ಗಳವಾಗಿ ಒಪ್ಪಿಸಿ ಬಿಡುತ್ತಿದ್ದರು. ವಿನ್ಸೆಂಟ್ ನಿಧಾನವಾಗಿ ಕಲಿತು, ಉಪದೇಶಗಳನ್ನು ತನ್ನ ಹೃದಯದಾಳದ ಭಾವನೆಗಳಿಂದ ಅರ್ಥಪೂರ್ಣವೂ ಆಗುವಂತೆ ಮಾಡುತ್ತಿದ್ದ.

ಅವನು ಹೇಳಬೇಕಾದ್ದನ್ನು ಅನುಭವಿಸಿ ಹೇಳುತ್ತಿದ್ದುದರಿಂದ ಮಾತಿಗೆ ನಿರರ್ಗಳತೆ ಸಾಧ್ಯವಾಗಿರಲಿಲ್ಲ.

"ಈ ರೀತಿಯಲ್ಲಿ ತಡವರಿಸಿ, ತಡವರಿಸಿ, ಗಂಟೆಗೊಂದು ಶಬ್ದವನ್ನು ಹೇಳುವುದಾದರೆ, ನೀನು ಹೇಗೆ ತಾನೇ ಧರ್ಮಬೋಧಕನಾಗಲು ಸಾಧ್ಯ? ಧರ್ಮ ಬೋಧನೆಗಳನ್ನು ಜನಕ್ಕೆ ಹೇಗೆ ತಲುಪಿಸುತ್ತೀ, ಜನ ಹೇಗೆ ತಾನೇ ಕೇಳಿಸಿಕೊಳ್ಳುತ್ತಾರೆ?

ವಿನ್ಸೆಂಟ್‌ನ ಅಸಮಾಧಾನ, ಒಂದು ದಿನ ತರಗತಿಯಲ್ಲಿ ಆಶುಭಾಷಣ ಮಾಡಲು ಬೋಕ್ಮಾ ಹೇಳಿದಾಗ ಒಮ್ಮೆಲೇ ಸ್ಫೋಟಗೊಂಡಿತು. ನಡುರಾತ್ರಿಯವರೆಗೆ ಕಷ್ಟಪಟ್ಟು ಒಂದೊಂದು ಸಾಲನ್ನೂ ಅಭ್ಯಾಸಮಾಡಿ ತಾನು ಹೇಳಬೇಕಾದ 'ಸೆರ್‌ಮನ್' (ಧರ್ಮೋಪದೇಶ)ಗಳನ್ನು ಅತ್ಯಂತ ಅರ್ಥಪೂರ್ಣವಾಗಿಸಲು ಶ್ರಮಪಟ್ಟ. ಸಂಕ್ಷೇಪವಾಗಿ, ಫ್ರೆಂಚ್‌ಭಾಷೆಯಲ್ಲಿ ಒಂದೊಂದು ಪದವನ್ನೂ ಬರೆದಿಟ್ಟುಕೊಂಡ. ಮಾರನೇದಿನ ಆ ಇಬ್ಬರು ಹುಡುಗರು ಬಹಳ ಜಂಬದಿಂದ ಕ್ರಿಸ್ತನ, ಮೋಕ್ಷದ ಬಗ್ಗೆ, ಆಗೊಮ್ಮೆ ಈಗೊಮ್ಮೆ ಬರೆದಿಟ್ಟುಕೊಂಡಿದ್ದ ನೋಟ್ಸ್‌ನ ಮೇಲೆ ಕಣ್ಣಾಡಿಸಿ ಮಾತು ಮುಗಿಸಿದರು. ಬೋಕ್ಮಾ ಮೆಚ್ಚಿಕೊಂಡಂತೆ ತಲೆದೂಗಿದ. ನಂತರ ವಿನ್ಸೆಂಟ್‌ನ ಸರದಿ ಬಂತು. ತಾನು ಸಿದ್ಧಪಡಿಸಿ ಬರೆದಿಟ್ಟುಕೊಂಡಿದ್ದ ಭಾಷಣವನ್ನು ಓದಿದ. ಆದರೆ ಬೋಕ್ಮಾ ಅದನ್ನು ಕೇಳಿಸಿಕೊಳ್ಳಲೇ ಇಲ್ಲ.

"ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿ ಹೀಗೇನಾ ಕಲಿಸಿದ್ದು? ಇಲ್ಲಿಯವರೆಗೆ ನನ್ನ ಯಾವ ವಿದ್ಯಾರ್ಥಿಯೂ ಆಶುಭಾಷಣ ಸಾಮರ್ಥ್ಯವನ್ನು ಗಳಿಸದೆ ಹೋದದ್ದಿಲ್ಲ. ಒಂದು ಕ್ಷಣದ ಸೂಚನೆ ಸಿಕ್ಕರೆ ಸಾಕು, ಸಭಿಕರು ತಲೆದೂಗುವಂತೆ ಮಾತಾಡಬಲ್ಲರು!"

ವಿನ್ಸೆಂಟ್ ಪ್ರತ್ಯುತ್ತರವನ್ನೇನೋ ಮಾಡಿದ. ಆದರೆ ಹಿಂದಿನ ರಾತ್ರಿ ಸಿದ್ಧಪಡಿಸಿಕೊಂಡದ್ದನ್ನು ಕ್ರಮಬದ್ಧವಾಗಿ ಹೇಳುವುದನ್ನು ಮರೆಯುತ್ತಿದ್ದ. ಅವನ ಜೊತೆಗಾರರು ಇದೇ ನೆಪಮಾಡಿಕೊಂಡು ನಗುತ್ತಿದ್ದರು. ತಡವರಿಸಿದಾಗಲೆಲ್ಲ ನಗುತ್ತಿದ್ದ ಅವರೊಂದಿಗೆ ಬೋಕ್ಮಾ ಕೂಡ ಸೇರಿಕೊಂಡ. ವಿನ್ಸೆಂಟ್‌ಗೆ ಇನ್ನು ಸಹಿಸಿಕೊಳ್ಳುವುದು ಸಾಧ್ಯವಾಗಲಿಲ್ಲ.

"ಮಾಸ್ಟರ್ ಬೋಕ್ಮಾ, ನಾನು ನನ್ನ ಉಪದೇಶಗಳನ್ನೂ, ಪ್ರವಚನಗಳನ್ನು ನನಗಿಷ್ಟ ಬಂದ ಹಾಗೆ ಹೇಳುತ್ತೇನೆ. ನಾನು ಮಾಡುತ್ತಿರುವ ರೀತಿ ಚೆನ್ನಾಗಿದೆ. ನೀವು ಮಾಡುತ್ತಿರುವ ಅವಮಾನಕ್ಕೆ ನಾನು ಹೆದರೊಲ್ಲ."

ಬೋಕ್ಮಾಗೂ ಕೋಪ ನೆತ್ತಿ ಏರಿತು. "ನಾನು ಹೇಳಿದ ಹಾಗೇ ನೀನು ಕೇಳಬೇಕು. ಇಲ್ಲವಾದರೆ ನಾನು ನಿನ್ನನ್ನು ತರಗತಿಗೆ ಸೇರಿಸೊಲ್ಲ" ಸಿಟ್ಟಿನಿಂದ ಕೂಗಾಡಿದ.

ಅಂದಿನಿಂದ ಇಬ್ಬರ ನಡುವೆಯೂ ಬಹಿರಂಗವಾಗಿಯೇ ವಾಗ್ಯುದ್ಧಗಳು ನಡೆಯುತ್ತಿದ್ದವು. ಅವನಿಂದ ಕೇಳಿದ್ದಕ್ಕಿಂತ ನಾಲ್ಕು ಪಟ್ಟು ಪ್ರವಚನಗಳನ್ನು ಪ್ರಸ್ತುತ ಪಡಿಸಿದ. ರಾತ್ರಿಯೆಲ್ಲ ನಿದ್ದೆಯೇ ಇಲ್ಲ. ಮಲಗುವುದರಿಂದ ಪ್ರಯೋಜನವಿಲ್ಲ. ಅವನಿಗೆ ಊಟವೂ ರುಚಿಸುತ್ತಿರಲಿಲ್ಲ. ದಿನ ಕಳೆದಂತೆ ಸಣ್ಣಗೆ ಒಣಗಿದ ಕಡ್ಡಿಯಂತಾದ.

ನವೆಂಬರ್‌ನಲ್ಲಿ ಅವನಿಗೆ ಚರ್ಚ್‌ನಲ್ಲಿ ಕೆಲಸವನ್ನೂ ನೀಡಲು ಸಮಿತಿಯ ಮುಂದೆ ಕರೆಯಲಾಯಿತು. ಅಂತೂ ಇಂತೂ ಅವನ ಹಾದಿಯಲ್ಲಿನ ಅಡ್ಡಿ, ಆತಂಕಗಳು ದೂರವಾಗಿದ್ದವು. ಒಂದು ರೀತಿ ನೆಮ್ಮದಿ ಎನಿಸಿತು. ಅವನ ಜೊತೆಗಾರರು ಆಗಲೇ ಬಂದಿದ್ದರು. ರೆವರೆಂಡ್ ಪೀಟರ್‌ಸನ್ ಆ ಇಬ್ಬರನ್ನೂ ಅವರ ಯಶಸ್ಸಿಗಾಗಿ ಅಭಿನಂದಿಸಿದ. ರೆವರೆಂಡ್ ವಿನ್ಸೆಂಟ್‌ನನ್ನು ನೋಡಲಿಲ್ಲವಾದರೂ ಬೋಕ್ಮಾ ಅವನತ್ತ ಒಂದು ಮಿಂಚು ನೋಟ ಬೀರಿದ.

ರೆವರೆಂಡ್ ದ ಜಾಂಗ್ ಕೂಡ ಅವರನ್ನು ಅಭಿನಂದಿಸಿ ಅವರಿಗೆ ನೇಮಕಾತಿ ಪತ್ರಗಳನ್ನು ನೀಡಿದ. ಅವರಿಬ್ಬರೂ ಕೈ ಕೈ ಹಿಡಿದು ಕೊಠಡಿಯಿಂದ ಹೊರಬಂದರು.

"ಮಿಸ್ಟರ್ ವಾನ್‌ಗೋ, ನೀನು ದೇವರ ಕೆಲಸಕ್ಕಾಗಿ ಇನ್ನೂ ಸಿದ್ಧವಾಗಿಲ್ಲವೆಂದು ಸಮಿತಿಯ ಅನುಭವಕ್ಕೆ ಬಂದಿರುವುದರಿಂದ ಸದ್ಯಕ್ಕೆ ನಿನಗೆ ಕೆಲಸ ನೀಡಲು ಸಾಧ್ಯವಾಗಿಲ್ಲವೆಂದು ವಿಷಾದದಿಂದ ಹೇಳಬೇಕಾಗಿ ಬಂದಿದೆ.

ಸ್ವಲ್ಪ ಸಮಯದ ನಂತರ "ನನ್ನಲ್ಲಿ ಏನು ಕೊರತೆಯಿತ್ತು ಅಂತ ಕೇಳಬಹುದಾ?" – ಎಂದು ವಿನ್ಸೆಂಟ್ ಪ್ರಶ್ನಿಸಿದ.

"ನೀನು ದೊಡ್ಡವರಿಗೆ, ಅಧಿಕಾರಿಗೆ ವಿನಯ ತೋರಿಸಲಿಲ್ಲ. ಚರ್ಚ್‌ನ ಮೊದಲ ನಿಯಮವೇ ಪ್ರಶ್ನಾತೀತ ವಿನಯ, ಅಲ್ಲದೆ ಆಶು ಪ್ರವಚನಗಳನ್ನು ನೀಡಲು ನೀನು ಕಲಿಯಲಿಲ್ಲ. ನಿನ್ನ ಮಾಸ್ಟರ್ ದೃಷ್ಟಿಯಲ್ಲಿ ನೀನು ಆ ಕೆಲಸಕ್ಕೆ ಇನ್ನೂ ಅರ್ಹತೆ ಪಡೆದಿಲ್ಲ."

ವಿನ್ಸೆಂಟ್ ರೆವರೆಂಡ್ ಪೀಟರ್‌ಸನ್ ಕಡೆ ನೋಡಿದ. ಆತನ ಜೊತೆಗಾರ ಕಿಟಕಿಯಾಚೆ ನೋಡುತ್ತಿದ್ದ. ವಿನ್ಸೆಂಟ್, ಹಾಗಾದರೆ ನಾನು ಏನು ಮಾಡಬೇಕು?" – ಎಂದು ಪ್ರಶ್ನಿಸಿದರೂ, ಆ ಪ್ರಶ್ನೆ ಯಾರನ್ನೂ ಉದ್ದೇಶಿಸಿ ಕೇಳಿದ್ದಾಗಿರಲಿಲ್ಲ.

"ನೀನು ಇಷ್ಟಪಡುವುದಾದರೆ ಸ್ಕೂಲಿನಲ್ಲಿ ಇನ್ನೂ ಆರು ತಿಂಗಳು ಕಲಿಯಬಹುದು ....... ಅಷ್ಟು ಹೊತ್ತಿಗಾದರೂ......" ಎಂದು ವ್ಯಾನ್ ಡೆನ್ ಬ್ರಿಂಕ್, ಹೇಳಿದ.

ವಿನ್ಸೆಂಟ್, ಹಳೆಯದಾದ, ಒರಟಾದ ತನ್ನ ಬೂಟುಗಳತ್ತ ನೋಡಿದ. ಬೂಟುಗಳ ಚರ್ಮ ಹರಿದಿತ್ತು. ಅವನಿಗೆ ಉತ್ತರ ಹೇಳಲು ಏನೂ ಹೊಳೆಯದಿರಲು, ಅವನು ಅಲ್ಲಿಂದೆದ್ದು, ಮೌನವಾಗಿ ಹೊರಬಂದ.

ನಗರದ ರಸ್ತೆಗಳನ್ನು ದಾಟುತ್ತಾ ಲೇಕನ್ ಬಳಿಗೆ ಬಂದ. ಅವನು ಯಾಕೆ ಓಡಾಡುತ್ತಿದ್ದೇನೆ ಎಂದು ಅರ್ಥವಾಗದೆ ಕಾರ್ಯಾಗಾರಗಳ ಸದ್ದಿನಿಂದ ತುಂಬಿದ್ದ ರಸ್ತೆಗಳಲ್ಲಿ ಅತ್ತಿತ್ತ ನಡೆಯುತ್ತಿದ್ದು, ಕಡೆಗೆ ಮನೆಗಳನ್ನೂ ದಾಟಿ ಒಂದು ಬಯಲು ಪ್ರದೇಶಕ್ಕೆ ಬಂದ. ಅಲ್ಲಿ ಅವನಿಗೆ ದುಡಿದು ದುಡಿದು ಬತ್ತಿ ಹೋದಂತಿದ್ದ ಮುದಿ ಬಿಳಿ ಕುದುರೆಯೊಂದು ಕಣ್ಣಿಗೆ ಬಿತ್ತು. ಆ ಪ್ರದೇಶ ನಿರ್ಜನವಾಗಿತ್ತು. ನೆಲದ ಮೇಲೆ ಬುರುಡೆಯೊಂದು ಬಿದ್ದಿತ್ತು. ಸ್ವಲ್ಪ ದೂರದಲ್ಲಿ, ಕುದುರೆಗಳ ಚರ್ಮವನ್ನು ಸುಲಿಯುವವನ ಗುಡಿಸಲ ಬಳಿ ಕುದುರೆಯ ಅಸ್ಥಿಪಂಜರವೊಂದು ಬಿದ್ದಿತ್ತು.

ಮೂಕವೂ ಶೂನ್ಯವೂ ಆಗಿದ್ದ ಮನಸ್ಸಿನಲ್ಲಿ ಒಂದಷ್ಟು ಭಾವನೆಗಳು ಪುಟಿದೆದ್ದಂತೆನಿಸಿತು. ಪೈಪನ್ನು ಕೈಗೆತ್ತಿಕೊಂಡ. ಹೊಗೆಸೊಪ್ಪಿಗೆ ಬೆಂಕಿ ಹಚ್ಚಿದ. ಆದರೆ ಯಾಕೋ ಅದೂ ಅವನಿಗೆ ಕಹಿ ಎನಿಸಿತು. ಬಯಲಿನಲ್ಲಿ ಬಿದ್ದಿದ್ದ ಮರದ ದಿಮ್ಮಿಯೊಂದರ ಮೇಲೆ ಕುಳಿತ. ಅಲ್ಲಿ ನಿಂತಿದ್ದ ಬಿಳಿ ಕುದುರೆ ಇವನ ಬೆನ್ನಿನ ಕಡೆಗೆ ಬಂದು ನಿಂತು, ಮೂಗನ್ನು ಬೆನ್ನಿಗೆ ಸವರಿತು. ವಿನ್ಸೆಂಟ್ ಪ್ರೀತಿಯಿಂದ ಅದರ ಕತ್ತನ್ನು ನೇವರಿಸಿದ.

ಸ್ವಲ್ಪ ಹೊತ್ತಿನ ನಂತರ ಅವನಿಗೆ ದೇವರ ಯೋಚನೆ ಬಂತು. ಅದರಿಂದ ಸಮಾಧಾನವೆನಿಸಿತು. ಜೀಸಸ್ ಇಂತಹ ಬಿರುಗಾಳಿಯಲ್ಲಿಯೂ ಶಾಂತವಾಗಿದ್ದಾನೆ. ನಾನು ಒಂಟಿಯಲ್ಲ; ದೇವರು ನನ್ನ ಕೈ ಬಿಟ್ಟಿಲ್ಲ. ಒಂದಲ್ಲ ಒಂದು ದಿನ ಅವನ ಸೇವೆಗೆ ದಾರಿಯನ್ನು ಹುಡುಕುತ್ತೇನೆ" ಎಂದು ತನ್ನಲ್ಲೇ ತಾನಂದುಕೊಂಡ.

ಹಿಂತಿರುಗಿ ಬಂದಾಗ, ತನ್ನ ಕೋಣೆಯಲ್ಲಿ ರೆವರೆಂಡ್ ಪೀಟರ್‌ಸನ್ ಕುಳಿತಿದ್ದ. "ವಿನ್ಸೆಂಟ್, ನಾನು ನಿನ್ನನ್ನು ನಮ್ಮ ಮನೆಗೆ ಊಟಕ್ಕೆ ಕರೆಯಲು ಬಂದಿದ್ದೇನೆ" – ಎಂದ.

ಕೆಲಸಗಾರರಿಂದ ತುಂಬಿದ್ದ ರಸ್ತೆಗಳನ್ನು ಹಾದುಹೋದರು. ಪೀಟರ್‌ಸನ್, ನಡೆದದ್ದೆಲ್ಲವನ್ನು ಮರೆತಂತೆ ಲೋಕಾಭಿರಾಮವಾಗಿ ಅದೂ ಇದೂ ಮಾತಾಡುತ್ತಿದ್ದ. ವಿನ್ಸೆಂಟ್ ಆತ ಆಡುತ್ತಿದ್ದ ಒಂದೊಂದು ಮಾತನ್ನೂ ಸ್ಪಷ್ಟವಾಗಿ ಕೇಳಿಸಿಕೊಂಡ. ಪೀಟರ್‌ಸನ್ ವಿನ್ಸೆಂಟ್‌ನನ್ನು ಮುಂಭಾಗದ ಕೋಣೆಗೆ ಕರೆದೊಯ್ದ. ಅದು ಒಂದು ಸ್ಟುಡಿಯೋ ಆಗಿ ಪರಿವರ್ತಿತವಾಗಿತ್ತು. ಗೋಡೆಯ ಮೇಲೆ ಜಲವರ್ಣ ಚಿತ್ರಗಳಿದ್ದವು. ಮತ್ತೊಂದು ಕಡೆ ಮೂಲೆಯಲ್ಲಿ ಈಸಲ್ (ಚಿತ್ರಾಧಾರ, ಚೌಕಟ್ಟು) ಇತ್ತು.

"ಓಹ್, ನೀವು ಚಿತ್ರ ಬರೆಯುತ್ತೀರಾ?" ನನಗೆ ಗೊತ್ತೇ ಇರಲಿಲ್ಲ" – ಆಶ್ಚರ್ಯದ ಉದ್ಗಾರ ತೆಗೆದು ಕೇಳಿದ.

ಪೀಟರ್‌ಸನ್‌ಗೆ ಸಂಕೋಚವಾಯಿತು. "ನಾನು ಕೇವಲ್ ಅಮೆಚೂರ್, ಚಿತ್ರ ಬಿಡಿಸ್ತೀನಿ ನಿಜ, ಆದರೆ ಬಿಡುವಿನ ವೇಳೆಯಲ್ಲಿ ಮಾತ್ರವೇ!" ಎಂದು ಹೇಳಿದ.

ಊಟಕ್ಕೆ ಕುಳಿತರು. ಪೀಟರ್‌ಸನ್‌ಗೆ ಹದಿನೈದು ವರ್ಷದ ಮಗಳಿದ್ದಳು. ಬಹಳ ನಾಚಿಕೆ ಸ್ವಭಾವದವಳು. ಊಟ ಮಾಡುವಷ್ಟು ಹೊತ್ತೂ ತಲೆ ಎತ್ತಿಯೂ ನೋಡಲಿಲ್ಲ. ಪೀಟರ್‌ಸನ್ ಅದೂ ಇದೂ ಏನೇನೋ ಮಾತಾಡುತ್ತಲೇ ಇದ್ದ.

ವಿನ್ಸೆಂಟ್ ಪ್ರಯತ್ನ ಪೂರ್ವಕವಾಗಿ, ಸ್ವಲ್ಪವೇ ಊಟ ಮಾಡಿದ. ಇದ್ದಕ್ಕಿದ್ದಂತೆ ಪೀಟರ್‌ಸನ್ ಹೇಳುತ್ತಿದ್ದ ವಿಷಯಗಳ ಕಡೆಗೆ ಎಚ್ಚೆತ್ತುಕೊಂಡ. ಹೇಗೆ ಈತ ಇಂಥ ವಿಷಯಗಳ ಕಡೆ ಕಾರ್ಯಪ್ರವೃತ್ತನಾದ ಅನ್ನುವುದು ತಿಳಿಯಲಿಲ್ಲ.

"ಬೋರಿನೇಜ್ ಒಂದು ಕಲ್ಲಿದ್ದಲು ಗಣಿ ಪ್ರದೇಶ. ಪ್ರತಿಯೊಬ್ಬ ಕೆಲಸಗಾರನೂ ಗಣಿಯ ಆಳಕ್ಕೆ ಹೋಗಿಯೇ ಹೋಗುತ್ತಾನೆ. ಸಾವಿರಾರು ಅಪಾಯಗಳ ಮಧ್ಯೆ ದುಡಿಯುತ್ತಾನೆ. ಆದರೆ ಅವನಿಗೆ ಸಿಗುವ ಸಂಬಳ! ಹೊತ್ತು ಹೊತ್ತಿಗೂ ಸಾಲುವುದಿಲ್ಲ.

ಅವರ ಮನೆಗಳೋ, ಈಗಲೋ ಆಗಲೋ ಮುರಿದು ಬೀಳುವ ಸ್ಥಿತಿಯಲ್ಲಿರುವ ಗುಡಿಸಲುಗಳು! ಅವರ ಹೆಂಡಂದಿರು, ಮಕ್ಕಳು ಚಳಿಯಲ್ಲಿ ನಡುಗುತ್ತ, ಹಸಿವು, ಜ್ವರಗಳಿಂದ ನರಳುತ್ತಾ ಬದುಕುತ್ತಾರೆ." ಎಂದೆಲ್ಲವನ್ನೂ ಪೀಟರ್‌ಸನ್ ವಿನ್ಸೆಂಟ್‌ಗೆ ವಿವರಿಸಿ ಹೇಳಿದ.

ತನಗೆ ಇದೆಲ್ಲವನ್ನೂ ಯಾಕೆ ವಿವರಿಸಿ ಹೇಳುತ್ತಿದ್ದಾನೆ ಎಂಬುದು ವಿನ್ಸೆಂಟ್‌ಗೆ ಅರ್ಥವಾಗಲಿಲ್ಲ. ಈತ ವಿವರಿಸುತ್ತಿರುವ ಈ ಪ್ರದೇಶ ಎಲ್ಲಿದೆ?" ಎಂದು ಪ್ರಶ್ನಿಸಿದ.

"ಮ್ಯಾನ್ಸ್ ಬಳಿಯಲ್ಲಿ ಬೆಲ್ಜಿಯಮ್‌ನ ದಕ್ಷಿಣಕ್ಕಿದೆ. ನಾನು ಇತ್ತೀಚೆಗೆ ಅಲ್ಲಿಗೆ ಹೋಗಿ ಸ್ವಲ್ಪ ದಿನ ಇದ್ದೆ. ಅಲ್ಲಿನ ಜನರಿಗೆ ಉಪದೇಶ ಮಾಡುವುದಕ್ಕೆ ಬೇಕಾದ ವ್ಯಕ್ತಿ ಎಂದರೆ ಬೊರೈನ್ ಆಗಿರಬೇಕು" – ಎಂದು ಪೀಟರ್‌ಸನ್ ವಿವರಿಸಿದ.

ವಿನ್ಸೆಂಟ್‌ಗೆ ಉಗುಳು ನುಂಗುವಂತಾಯಿತು. ತುತ್ತು ಗಂಟಲಲ್ಲಿ ಇಳಿಯುವುದೇ ಕಷ್ಟವಾಯಿತು. ಪೀಟರ್‌ಸನ್ ಇದನ್ನೆಲ್ಲ ಹೇಳಿ ತನಗೇಕೆ ಹಿಂಸೆ ಕೊಡುತ್ತಿದ್ದಾನೆ?

"ವಿನ್ಸೆಂಟ್, ನಿನಗಿರುವ ಶಕ್ತಿ, ಸಾಮರ್ಥ್ಯ, ಉತ್ಸಾಹಗಳಿಂದಾಗಿ ಅಲ್ಲಿ ಅದ್ಭುತವಾದ ಕೆಲಸ ಮಾಡಲು ಸಾಧ್ಯವಿದೆ. ನೀನೇಕೆ ಬೋರಿನೇಜ್‌ಗೆ ಹೋಗಬಾರದು?"

"ಆದರೆ ಹೇಗೆ? ......... ಕಮಿಟಿ........?"

"ಹೌದು ನನಗೆ ಗೊತ್ತಿದೆ. ನಾನು ನಿಮ್ಮ ತಂದೆಗೆ ವಿಷಯವೆಲ್ಲ ವಿವರಿಸಿ ಬರೆದಿದ್ದೆ. ಅವರಿಂದ ಇವತ್ತು ಮಧ್ಯಾಹ್ನ ನನಗೆ ಉತ್ತರ ಬಂತು. ನಾನು ನಿನಗೆ ಒಂದು ಕೆಲಸವನ್ನು ಹುಡುಕಿ ಕೊಡಿಸುವವರೆಗೆ ತಾನೇ ನೋಡಿಕೊಳ್ಳುವುದಾಗಿ ಬರೆದಿದ್ದಾರೆ."

ವಿನ್ಸೆಂಟ್ ಉತ್ಸಾಹದಿಂದ ಒಮ್ಮೆಲೇ ಎದ್ದು ನಿಂತು "ಹಾಗಾದರೆ ನನಗೆ ಕೆಲಸಕೊಡಿಸುತ್ತೀರಾ?" ಎಂದ.

"ಖಂಡಿತ ಆದರೆ ನೀನು ನನಗೆ ಸ್ವಲ್ಪ ಸಮಯ ಕೊಡಬೇಕು. ನೀನು ಮಾಡುತ್ತಿರುವ ಅದ್ಭುತವಾದ ಸಾಧನೆಯನ್ನು ಕಮಿಟಿ ಗಮನಿಸಿದ್ದದ್ದೇ ಆದರೆ, ಪಶ್ಚಾತ್ತಾಪ ಪಡುವುದರಲ್ಲಿ ಅನುಮಾನವೇ ಇಲ್ಲ. ಒಂದು ವೇಳೆ ಹಾಗಾಗದಿದ್ದರೂ ದ ಜಾಂಗ್, ವಾನ್ ಡೆನ್ ಬ್ರಿಂಕರು ಒಂದಲ್ಲ ಒಂದು ದಿನ ನನ್ನಿಂದ ಸಹಾಯ ಕೇಳಲು ಬಂದೇ ಬರುತ್ತಾರೆ. ಆಗ ನಾನು, ನನ್ನ ಸಹಾಯಕ್ಕೆ ಬದಲಾಗಿ, ..... ಈ ದೇಶದ ಬಡಜನತೆಗೆ ನಿನ್ನಂಥವರು ಬೇಕಿದ್ದಾರೆ, ವಿನ್ಸೆಂಟ್. ಅಲ್ಲದೆ ದೇವರೇ ನನ್ನ ನ್ಯಾಯಾಧೀಶ, ಹೇಗಾದರೂ ನಿನ್ನನ್ನು ಅವರ ಬಳಿಗೆ ಸೇರಿಸುವುದು ನ್ಯಾಯ ಸಂದಂತೆಯೇ?"

–೮–

ರೈಲು ದಕ್ಷಿಣಾಭಿಮುಖವಾಗಿ ಸಾಗುವಾಗ ದೂರದಲ್ಲಿ ಬೆಟ್ಟಗಳು ಕಾಣಿಸಿದವು. ಸಮತಟ್ಟಾದ ಪ್ರದೇಶಗಳನ್ನು ನೋಡಿ ಬೇಸತ್ತಿದ್ದ ಮನಸ್ಸಿಗೆ ಈ ಪರ್ವತ ಪ್ರದೇಶಗಳು ಬಹಳ ಸುಖವನ್ನುಂಟು ಮಾಡಿದವು. ಸ್ವಲ್ಪ ಹೊತ್ತು ಅವುಗಳನ್ನು ಗಮನಿಸುತ್ತಿದ್ದಾಗ,

ಅವು ವಿಚಿತ್ರವೆಂಬಂತೆ ಅನಿಸಿದವು. ಒಂದೊಂದು ಬೆಟ್ಟವೂ ತನಗೆ ತಾನೇ ಸ್ವಯಂಭೂ ಆಗಿ ಉದ್ಭವಿಸಿ ನಿಂತಂತೆ ಕಾಣಿಸಿತು.

"ಬ್ಲ್ಯಾಕ್ ಈಜಿಪ್ಟ್" ಎಂದು ಗೊಣಗಿಕೊಂಡ. ಕಿಟಕಿ ಮೂಲಕ ನೋಡಿದಾಗ ಪಿರಮಿಡ್ಡುಗಳು ಸಾಲುಸಾಲಾಗಿ ಕಾಣಿಸಿದವು. ಅವನು ತನ್ನ ಪಕ್ಕದಲ್ಲಿ ಕುಳಿತಿದ್ದವನನ್ನು ಕೇಳಿದ. "ಸ್ವಾಮಿ ಈ ಬೆಟ್ಟಗಳು ಅಲ್ಲಿ ಹೇಗೆ ಬಂದವು?" – ಎಂದು ಪ್ರಶ್ನಿಸಿದ.

"ಅವು! ಭೂಮಿಯಿಂದ ಹೊರಬಂದ, ಬೇಡದ ವಸ್ತುಗಳು ಕಲ್ಲಿದ್ದಲು ಜೊತೆ ಸೇರಿ ಆದದ್ದರಿಂದ ಕಪ್ಪಾಗಿದೆ. ಅಲ್ಲೊಂದು ಪುಟ್ಟ ಕಾರು ಬೆಟ್ಟದ ತುದಿ ತಲುಪುತ್ತಿರುವುದನ್ನು ಗಮನಿಸಿದೆಯಾ? ಒಂದೆರಡು ಕ್ಷಣ, ಅದನ್ನು ಗಮನಿಸುತ್ತಿರು" – ಎಂದು ಅವನ ಪಕ್ಕದಲ್ಲಿ ಕುಳಿತುದ್ದವನು ವಿವರಿಸಿದ.

ಆತ ಹೇಳಿದಂತೆ ಕಾರು ಮುಂದೆ ಸಾಗುತ್ತಿದ್ದಂತೆ, ಹಿಂದಿನಿಂದ ಇಳಿಜಾರಿನೆಡೆಗೆ ಕಪ್ಪು ಹೊಗೆ ಹೊರಚೆಲ್ಲಿತು. ಇದೇ ರೀತಿಯಲ್ಲಿ ಇವು ಬೆಳೆಯುತ್ತವೆ. "ಒಂದೊಂದೇ ಅಂಗುಲಂಗುಲ ಪ್ರತಿದಿನ ಬೆಳೆಯುವುದನ್ನು, ನಾನು ಐವತ್ತು ವರ್ಷಗಳಿಂದ ನೋಡುತ್ತಲೇ ಇದ್ದೇನೆ!"

ವಾಸ್ಮೆ ಬಳಿ ರೈಲು ನಿಂತಿತು. ವಿನ್ಸೆಂಟ್ ಒಳಗಿನಿಂದ ಹೊರ ಜಿಗಿದ, ಕಣಿವೆಯ ಸ್ವಲ್ಪ ಆಳದಲ್ಲಿ ಈ ಪಟ್ಟಣ ಇದೆ. ಸೂರ್ಯ ನಿಸ್ತೇಜವಾಗಿದ್ದ. ತನ್ನ ಮತ್ತು ಆಕಾಶದ ಮಧ್ಯೆ ದಟ್ಟವಾದ ಇದ್ದಿಲ ಹೊಗೆ ಹಬ್ಬಿತ್ತು. ಬೆಟ್ಟದ ಒಂದು ಬದಿಗೆ ನೆಲೆಸಿದ್ದ ವಾಸ್ಮೆಯ ಬೀದಿಗಳು ಕೊಳಕಿನಿಂದ, ಇಟ್ಟಿಗೆಯ ಕಟ್ಟಡಗಳಿಂದ ತುಂಬಿದ್ದವು.

ಬೆಟ್ಟವನ್ನೇರುತ್ತಿದ್ದಂತೆ, ಈ ಹಳ್ಳಿ ಇಷ್ಟೊಂದು ನಿರ್ಜನವಾಗಿದ್ದುದನ್ನು ನೋಡಿ, ವಿನ್ಸೆಂಟ್ ಆಶ್ಚರ್ಯ ಪಟ್ಟ. ಎಲ್ಲಿಯೂ ಯಾವೊಬ್ಬ ನರಪಿಳ್ಳೆಯೂ ಕಾಣಲಿಲ್ಲ. ಯಾವಾಗಲೋ ಒಮ್ಮೆ ಗುಡಿಸಲಿನ ಬಾಗಿಲಲ್ಲಿ ನಿಸ್ತೇಜ ಮೊಗದ ಹೆಣ್ಣೊಬ್ಬಳು ಕಾಣಿಸಿಕೊಳ್ಳುತ್ತಿದ್ದಳು.

ಪೆತಿತ್ ವಾಸ್ಮೆ, ಗಣಿಗಾರರ ವಾಸದ ಪ್ರದೇಶವಾಗಿತ್ತು. ಹೇಳಿಕೊಳ್ಳುವುದಕ್ಕೆ, ಒಂದೇ ಒಂದು ಮಾತ್ರವೇ ಇಟ್ಟಿಗೆ ಕಟ್ಟಡವಾಗಿತ್ತು. ಅದು ಜೀನ್ ಬ್ಯಾಪ್ಟಿಸ್ಟ್ ಡೆನಿಸ್‌ನವರದಾಗಿತ್ತು. ವಿನ್ಸೆಂಟ್ ಬರಬೇಕಾಗಿದ್ದುದೂ ಇದೇ ಮನೆಗೆ! ಡೆನಿಸ್ ಅಲ್ಲಿಗೆ ಕ್ರೈಸ್ತಮತ ಉಪದೇಶಕನಾಗಿ ಬರುವವರಿಗೆ ತಾನೇ ವ್ಯವಸ್ಥೆಮಾಡಿ ನೋಡಿಕೊಳ್ಳುವುದಾಗಿ ಪೀಟರ್‌ಸನ್‌ಗೆ ಬರೆದಿದ್ದ.

ಮೇಡಂ ಡೆನಿಸ್, ವಿನ್ಸೆಂಟ್‌ನನ್ನು ಪ್ರೀತಿಯಿಂದ ಬರಮಾಡಿಕೊಂಡಳು. ಅಡಿಗೆ ಮನೆಯ ಬೀಕರಿಯ ಮೂಲಕ ಕರೆದೊಯ್ದು ಅವನಿಗೆ ಅವನ ಕೋಣೆಯನ್ನು ತೋರಿಸಿದಳು. ಅದೊಂದು ಪುಟ್ಟ ಕೋಣೆಯಾಗಿತ್ತು. ಮೇಡಂ ಡೆನಿಸ್ ತನ್ನ ಕೈಗಳಿಂದಲೇ ಉಜ್ಜಿ ಸ್ವಚ್ಛಗೊಳಿಸಿರಿಸಿದ್ದಳು ಆ ಪ್ರದೇಶವನ್ನು! ವಿನ್ಸೆಂಟ್‌ಗೆ ಕೂಡಲೇ ಅದು ತುಂಬಾ ಹಿಡಿಸಿತು. ಅವನು ಎಷ್ಟು ಉತ್ಸಾಹಿತನಾಗಿದ್ದನೆಂದರೆ, ತನ್ನ ಸಾಮಾನುಗಳನ್ನು ಸರಿಯಾಗಿ ತೆಗೆದು ಇರಿಸುವುದಕ್ಕೆ ಮೊದಲೇ ಮರದ ಮೆಟ್ಟಿಲುಗಳನ್ನು

ಸರಸರನೆ ಇಳಿದು, ಅಡಿಗೆ ಮನೆಯಲ್ಲಿದ್ದ ಮೇಡಂ ಡೆನಿಸ್‌ಗೆ ತಾನು ಹೊರಗೆ ಹೋಗಿ ಬರುತ್ತೇನೆಂದು ಹೇಳಿ, ಹೊರಟು ಬಿಟ್ಟ.

"ನೀನು ಬೇಗ ಬಂದು ಬಿಡ್ತೀ ತಾನೇ? ನಾವು ಐದುಗಂಟೆಗೇ ಊಟ ಮಾಡಿಬಿಡುತ್ತೇವೆ."

ವಿನ್ಸೆಂಟ್‌ಗೆ ಮೇಡಂ ಡೆನಿಸ್ ತುಂಬಾ ಇಷ್ಟವಾದಳು. ಹೇಳದಯೇ ಎಲ್ಲವನ್ನೂ ಅರ್ಥ ಮಾಡಿಕೊಳ್ಳುವ ಸ್ವಭಾವ ಆಕೆಯದು. "ಬಂದು ಬಿಡ್ತೀನಿ ಮೇಡಂ. ಹೀಗೇ ಸ್ವಲ್ಪ ನೋಡಿಕೊಂಡು ಬರ್ತೀನಿ" – ಎಂದ.

"ಇವತ್ತು, ಇಲ್ಲಿಗೆ ನಮ್ಮ ಸ್ನೇಹಿತರೊಬ್ಬರು ಬರುವವರಿದ್ದಾರೆ. ನಿನ್ನನ್ನು ಅವರಿಗೆ ಪರಿಚಯ ಮಾಡಿಸಬೇಕಿದೆ. ಆತ ಮಾರ್‌ಕಾಸ್‌ನಲ್ಲಿ ಫೋರ್‌ಮನ್ ಆಗಿದ್ದಾನೆ. ನಿನ್ನ ಕೆಲಸಕ್ಕೆ ಬೇಕಾಗುವ ಅನೇಕ ವಿಷಯಗಳನ್ನು ಆತ ನಿನಗೆ ತಿಳಿಸಿ ಹೇಳಲಿದ್ದಾನೆ."

ದಟ್ಟವಾಗಿ ಮಂಜು ಸುರಿಯುತ್ತಿತ್ತು. ರಸ್ತೆಯಲ್ಲಿ ನಡೆದ. ಮುಳ್ಳಿನ ಪೊದೆಗಳು, ತೋಟಗಳು, ಹೊಲಗಳು ಎಲ್ಲವೂ, ಗಣಿಗಳ ಚಿಮ್ನಿಗಳಿಂದ ಹೊಮ್ಮುತ್ತಿದ್ದ ಹೊಗೆಯಿಂದಾಗಿ, ಕಪ್ಪುಬಣ್ಣದಲ್ಲಿ ಕಾಣುತ್ತಿದ್ದವು.

ಡೆನಿಸ್ ಮನೆಯ ಪೂರ್ವಕ್ಕಿದ್ದ ಕೊರಕಲು ಪ್ರದೇಶದಲ್ಲಿ ಗಣಿ ಕಾರ್ಮಿಕರ ಮನೆಗಳಿದ್ದವು. ಮತ್ತೊಂದು ಧಿಕ್ಕಿಗೆ ಒಂದು ದೊಡ್ಡ ಮೈದಾನವಿತ್ತು. ಅದರಲ್ಲಿ ಕಪ್ಪು ಗುಡ್ಡವೊಂದಿತ್ತು. ಕಲ್ಲಿದ್ದಲ ಗಣಿಗಳ ಹೊಗೆ ಕೊಳವೆಗಳಿದ್ದವು. ವಾಸ್ಮೆಯ ಪುಟ್ಟ ದೇಹಾಕೃತಿಯ ಗಣಿ ಕಾರ್ಮಿಕರು, ಇವುಗಳ ಮೂಲಕವೇ ಕೆಳಗಿಳಿಯುತ್ತಿದ್ದರು. ಮೈದಾನದ ಪಕ್ಕದಲ್ಲಿಯೇ ಸಾಗಿದ್ದ ರಸ್ತೆಯ ತುಂಬ ಮುಳ್ಳಿನ ಪೊದೆಗಳು ಮತ್ತು ಮರಗಳ ಬೇರುಗಳಿಂದ ಉಂಟಾದ ಸೀಳುಗಳು ತುಂಬಿದ್ದವು.

ಬೆಲ್ಜಿಕ್‌ನ ಏಳು ಕಲ್ಲಿದ್ದಲು ಗಣಿಗಳಲ್ಲಿ, ಮಾರ್ಕಾಸ್ ಅತ್ಯಂತ ಪುರಾತನ ಮತ್ತು ಅಪಾಯಕಾರಿಯಾದ ಗಣಿಯಾಗಿತ್ತು. ಅಸಂಖ್ಯ ಗಣಿ ಕಾರ್ಮಿಕರ ಸಾವಿನ ಕೂಪವೆಂದು ಕುಖ್ಯಾತಿ ಪಡೆದಿತ್ತು. ಇಳಿಯುವಾಗಲೋ, ಮೇಲೇರಿ ಬರುವಾಗಲೋ ವಿಷಾನಿಲಗಳಿಂದಲೋ, ರಭಸದ ನೀರಿನ ಪ್ರವಾಹದಿಂದಲೋ ಸ್ಫೋಟದಿಂದಲೋ, ಸಾವುಗಳಂತೂ ಸಂಭವಿಸುತ್ತಲೇ ಇದ್ದವು. ಗಣಿಯ ಮೇಲುಭಾಗದ ಪ್ರದೇಶದಲ್ಲಿ ಎರಡು ಕಟ್ಟಡಗಳಿದ್ದವು. ಒಂದು ಯಂತ್ರಗಳ ನಿರ್ವಹಣೆಗೆ ಮತ್ತೊಂದು ಕಲ್ಲಿದ್ದಲ್ಲನ್ನು ಮೇಲೆ ತಂದು ಸಂಗ್ರಹಿಸಿಡಲು ಮೀಸಲಾಗಿತ್ತು. ಶೇಖರಿಸಿದ ಕಲ್ಲಿದ್ದಲನ್ನು ಆರಿಸಿ, ಪ್ರತ್ಯೇಕಿಸಿ (ಗುಣಮಟ್ಟದ ಕಲ್ಲು) ಕಾರುಗಳಲ್ಲಿ ತುಂಬಿ ಕಳಿಸಲಾಗುತ್ತಿತ್ತು. ಎತ್ತರದ ಚಿಮಿನಿಗಳು ಮೊದಲಿಗೆ ಹಳದಿ ಬಣ್ಣದಲ್ಲಿದ್ದಂತಹವು, ನಿರಂತರ ಹೊಗೆಯುಗುಳುತ್ತಿದ್ದುದರಿಂದ ಅವೂ ಕಪ್ಪಾಗಿ, ಕಪ್ಪು ಹೊಗೆಯನ್ನು ಪರಿಸರಕ್ಕೆಲ್ಲ ಚೆಲ್ಲುತ್ತಿತ್ತು. ಮಾರ್ಕಾಸ್‌ನ ಗಣಿ ಕಾರ್ಮಿಕರ ಗುಡಿಸಲುಗಳು, ಹೊಗೆ, ಸತ್ತಮರಗಳ ಮಧ್ಯೆ ಇದ್ದವು. ಅಲ್ಲದೆ ಅವುಗಳ ಬಳಿಯಲ್ಲಿಯೇ ಮುಳ್ಳು ಕಂಟಿಗಳು, ಕಸಕಡ್ಡಿಗಳು, ಕಲ್ಲಿದ್ದಲ ಗಣಿಗಳ ಅನುಪಯುಕ್ತ ವಸ್ತುಗಳು ರಾಶಿ ರಾಶಿಯಾಗಿ, ಬೆಟ್ಟಗಳಂತೆ

ಬಿದ್ದಿದ್ದವು. ಭಯಂಕರ ಕತ್ತಲು, ಅಲ್ಲಿನ ಪರಿಸರವೇ ನಿರ್ಜನ ಮತ್ತು ಭಯಾನಕವಾಗಿ ಕಾಣಿಸುತ್ತಿತ್ತು.

"ಕಪ್ಪು ದೇಶ ಅಂತ ಇದನ್ನು ಕರೆದದ್ದು, ಆಶ್ಚರ್ಯವೇನಲ್ಲ?" – ಎಂದು ತನ್ನಲ್ಲೇ ಹೇಳಿಕೊಂಡ.

ಅಲ್ಪಸ್ವಲ್ಪ ಹೊತ್ತು ನಿಂತಿದ್ದಾಗಲೇ, ಗಣಿ ಕಾರ್ಮಿಕರು ಗೇಟಿನಿಂದ ಹೊರಬರುತ್ತಿದ್ದುದು ಕಾಣಿಸಿತು. ಒರಟು ಒರಟಾದ, ಅಲ್ಲಲ್ಲಿ ಹರಿದಿದ್ದ ಬಟ್ಟೆ ತೊಟ್ಟಿದ್ದರು. ಚರ್ಮದ ಹ್ಯಾಟುಗಳನ್ನು ಧರಿಸಿದ್ದರು. ಗಂಡಸರ ರೀತಿಯಲ್ಲಿಯೇ ಹೆಂಗಸರೂ ಬಟ್ಟೆ ಧರಿಸಿದ್ದರು. ನೋಡಿದಾಗ, ಅವರೆಲ್ಲರೂ ಹೊಗೆ ಕೊಳವೆಗಳನ್ನು ಶುಚಿ ಮಾಡುವವರಂತೆ ಕಾಣಿಸುತ್ತಿದ್ದರು. ಇದ್ದಿಲಿನ ಪುಡಿಯಿಂದ ಕಪ್ಪಾಗಿದ್ದ ಮುಖಗಳಲ್ಲಿ ಕಣ್ಣಿನ ಬಿಳುಪು ವಿಚಿತ್ರವಾಗಿ ಕಾಣಿಸುತ್ತಿತ್ತು. ಇಡೀ ದಿನ ಗಣಿಗಳ ಕತ್ತಲಿನಲ್ಲಿ ಕೆಲಸ ಮಾಡಿದ್ದರಿಂದ ಹೊರಗಿನ ಸೂರ್ಯನ ಬೆಳಕು ಅವರ ಕಣ್ಣು ಚುಚ್ಚುತ್ತಿತ್ತು.

ಗೇಟಿನಿಂದ ಹೊರ ಬರುವಾಗಲೂ ಸರಿಯಾಗಿ ಕಾಣದೆ ಹೆಜ್ಜೆ ತಡವರಿಸುತ್ತಿದ್ದರು. ಮೂಳೆ ಬಿಟ್ಟುಕೊಂಡ ಕೈಕಾಲುಗಳ ಈ ಪುಟ್ಟ ದೇಹಗಳು ತಮ್ಮ ತಮ್ಮೊಳಗೆ ಅಸ್ಪಷ್ಟವಾಗಿ ಮಾತಾಡಿಕೊಳ್ಳುತ್ತಿದ್ದರು.

ಆ ದಿನ ಮಧ್ಯಾಹ್ನ ಇಡೀ ಪ್ರದೇಶವೇ ನಿರ್ಜನವಾಗಿ ಇದ್ದುದರ ಕಾರಣ ಈಗ ಅವನಿಗೆ ಹೊಳೆಯಿತು. ನಿಜವಾದ ಪೆತಿತ್ ವಾಸ್ಮೆ ಕೇವಲ ಗುಡಿಸಲುಗಳ ಸಂಕೀರ್ಣವಾಗಿರಲಿಲ್ಲ, ತೀರಾ ತೀರಾ ತಗ್ಗು ಪ್ರದೇಶದಲ್ಲಿ, ಒಂದಕ್ಕೊಂದು ಹೆಣೆದುಕೊಂಡ ರಸ್ತೆಗಳಿಂದಾಗಿ ದುರ್ಗಮವೆನಿಸುವಂತಹ ನಗರವಾಗಿತ್ತು. ಅಲ್ಲಿನ ಜನಸಂಖ್ಯೆ ಹೆಚ್ಚು ಕಡಿಮೆ ತನ್ನೆಲ್ಲ ವೇಳೆಯನ್ನು ಅಲ್ಲಿಯೇ ಕಳೆಯುತ್ತಿತ್ತು.

–೯–

"ಜಾಕ್ವೆಸ್ ವರ್ನೆ ತನ್ನ ಕಾಲ ಮೇಲೆ ನಿಂತು ಬೆಳೆದವನು. ಆದರೆ ಗಣಿ ಕಾರ್ಮಿಕರಿಗೆ ಸ್ನೇಹಿತನಾಗಿ ಬದುಕಿದವನು" – ಊಟದ ಸಮಯದಲ್ಲಿ ಮೇಡಂ ಡೆನಿಸ್ ವಿನ್ಸೆಂಟ್‌ಗೆ ವಿವರಿಸಿದಳು.

"ಅಲ್ಲಿಗೆ ಪ್ರಮೋಷನ್ ಮೇಲೆ ಬರುವ ಪ್ರತಿಯೊಬ್ಬರೂ ಸ್ನೇಹಿತರಾಗಿ ಇರುವುದಿಲ್ಲವೇನು?"

"ಹಾಗಲ್ಲ ವಿನ್ಸೆಂಟ್, ಒಬ್ಬೊಬ್ಬ ವಾಸ್ಮೆ ಬಳಿ ಹೋದಾಗ ಅವರು ನೋಡುವ ದೃಷ್ಟಿಯೇ ಬೇರೆಯಾಗುತ್ತದೆ. ಹಣಕ್ಕೋಸ್ಕರ ಕೆಲವರು ಗಣಿದಣಿಗಳ ಪರವಾಗಿ ನಿಂತು ತಾವೂ ಕೂಡಾ ಒಂದು ಕಾಲದಲ್ಲಿ ಇದೇ ರೀತಿ ದಣಿಗಳ ಗುಲಾಮರಾಗಿ ಇದ್ದವರೆಂಬುದನ್ನು ಮರೆತು ಬಿಡುತ್ತಾರೆ. ಆದರೆ ಜಾಕ್ವೆಸ್ ಮಾತ್ರ ಬಹಳ ಪ್ರಾಮಾಣಿಕನೂ ನಂಬಿಕಸ್ಥನೂ ಆಗಿದ್ದ. ನಮ್ಮಲ್ಲಿ ಧರಣಿ ಅಥವಾ ಸತ್ಯಾಗ್ರಹ ನಡೆದರೆ ಗಣಿ ಕಾರ್ಮಿಕರು. ಅವನ ಮಾತನ್ನಷ್ಟೇ ಕೇಳುತ್ತಿದ್ದರು. ಅವನ ಪ್ರಭಾವ, ಅವರ ಮೇಲೆ ದಟ್ಟವಾಗಿತ್ತು.

ಯಾರ ಮಾತನ್ನೂ ಲೆಕ್ಕಿಸುತ್ತಿರಲಿಲ್ಲವಾದರೂ ಜಾಕ್ವೆಸ್‌ನ ಮಾತಿಗೆ ಬೆಲೆ ಕೊಡುತ್ತಿದ್ದರು. ಆದರೆ ದುರಾದೃಷ್ಟ. ಅವನು ಬಹಳ ಕಾಲ ಜೀವಿಸುವ ಹಾಗಿಲ್ಲ.

"ಏನಾಗಿತ್ತು ಅವನಿಗೆ?" – ವಿನ್ಸೆಂಟ್ ಕುತೂಹಲದಿಂದ ಕೇಳಿದ.

"ಅದೇ ಮಾಮೂಲಿಯಾದ್ದು! ಶ್ವಾಸಕೋಶದ ಸಮಸ್ಯೆ. ಯಾರು ಯಾರು ಗಣಿಗಳ ಆಳದಲ್ಲಿ ಕೆಲಸ ಮಾಡುತ್ತಾರೋ ಅವರೆಲ್ಲರದೂ ಇದೇ ಹಣೆಬರಹ."

ಸ್ವಲ್ಪ ಸಮಯದ ಬಳಿಕ ಜಾಕ್ವೆಸ್ ಬಂದ. ಸ್ವಲ್ಪ ಕುಳ್ಳಗಿದ್ದ. ಇಳಿ ಜಾರಿನ ಭುಜಗಳು! ಬೊರೈನ್‌ನಲ್ಲಿ ಸಾಮಾನ್ಯವಾಗಿದ್ದ ವಿಷಾದ ತುಂಬಿದ ಕಣ್ಣುಗಳು, ಹೊಳ್ಳೆಗಳಿಂದಾಚೆಗೆ ಒಂದೆರಡು ಕೂದಲು ಹೊರಚಾಚಿದ್ದವು, ತಲೆ ಪೂರ್ತಿಯಾಗಿ ಬೋಳಾಗಿತ್ತು. ಕಾರ್ಮಿಕರ ಬದುಕಿಗೆ ನೆಮ್ಮದಿ ನೀಡಲು, ಸಹಾಯ ಮಾಡಲು ಒಬ್ಬ ಧರ್ಮಪ್ರಚಾರಕ ಧರ್ಮೋಪದೇಶಕ ಬಂದಿದ್ದಾನೆಂದು ತಿಳಿದು ನಿಟ್ಟುಸಿರೆಳೆದ.

"ಮಿಸ್ಟರ್, ಎಷ್ಟೋ ಜನ, ನಮ್ಮ ಬದುಕುಗಳನ್ನು ಉದ್ಧಾರ ಮಾಡಬೇಕೆಂದು ಬಂದು ಹೋದರು. ಆದರೆ ಇವತ್ತಿಗೂ ನಮ್ಮ ಬದುಕುಗಳು ಇದ್ದಹಾಗೇ ಇವೆ. ಯಾವುದೇ ಬದಲಾವಣೆ ಇಲ್ಲ."

"ಬೋರಿನೇಜ್‌ನಲ್ಲಿ ಪರಿಸ್ಥಿತಿ ಚೆನ್ನಾಗಿಲ್ಲವೆನ್ನುತ್ತೀಯಾ" – ವಿನ್ಸೆಂಟ್ ವಿಚಾರಿಸಿದ.

ಜಾಕ್ವೆಸ್ ಒಂದು ಕ್ಷಣ ಸುಮ್ಮನಿದ್ದ. "ನನ್ನ ಮಟ್ಟಿಗೆ ಹೇಳುವುದಾದರೆ, ಎಲ್ಲಾ ಚೆನ್ನಾಗಿಯೇ ಇದೆ. ನನ್ನ ತಾಯಿ ನನಗೆ ಅಕ್ಷರ ಕಲಿಸಿದ್ದರಿಂದ ನಾನು ಫೋರ್‌ಮನ್ ಆಗಿದ್ದೀನಿ. ನನಗೂ ಒಂದು ಇಟ್ಟಿಗೆ ಕಟ್ಟಡದ ಮನೆ ಇದೆ. ತಿನ್ನೋಕೆ ಏನೂ ಕೊರತೆಯಿಲ್ಲ. ಆದ್ದರಿಂದ ಹೇಳಿಕೊಳ್ಳುವಂಥ ಕಷ್ಟ ಏನೂ ನನಗಿಲ್ಲ......." ಎಂದು ಹೇಳಿದ.

ಮಾತಾಡುತ್ತಿದ್ದಂತೆ ಕೆಮ್ಮು ವಿಪರೀತವಾಗಿ ಕಾಣಿಸಿಕೊಂಡು, ಮಾತು ಅರ್ಧಕ್ಕೆ ನಿಂತಿತು. ಕೆಮ್ಮಿನ ರಭಸಕ್ಕೆ ಅವನ ಹೃದಯ ಒಡೆದುಹೋದೀತು ಎನಿಸಿತು, ವಿನ್ಸೆಂಟ್‌ಗೆ, ಜಾಕ್ವೆಸ್ ಎದ್ದು ಹೋಗಿ ಹೊರಗೆ ಕಫ ಉಗುಳಿ ಬಂದ. ಬೆಚ್ಚಗಿರಲು ತನ್ನ ಕುರ್ಚಿಯನ್ನು ಅಡಿಗೆ ಮನೆಯೊಳಕ್ಕೆ ಹಾಕಿಕೊಂಡ.

"ಮಿಸ್ಟರ್, ನನಗೆ ಫೋರ್‌ಮನ್ ಆದಾಗಲೇ ಇಪ್ಪತ್ತೊಂಬತ್ತು ವರ್ಷ ಆಗಿತ್ತು. ಅಷ್ಟು ಹೊತ್ತಿಗೆ ನನ್ನ ಶ್ವಾಸಕೋಶ ಹಾಳಾಗಿತ್ತು. ಈಗೊಂದೆರಡು ವರ್ಷಗಳಿಂದ ಮತ್ತೂ ಹದಗೆಟ್ಟಿದೆ. ಆದರೆ ಗಣಿ ಕಾರ್ಮಿಕರು...." ಅವನು ಮೇಡಂ ಡೆನಿಸ್ ಕಡೆ ನೋಡುತ್ತಾ..... ಹೌದಲ್ಲ?..... ನಾನು ಇವರನ್ನು ಹೆನ್ರಿ ಡೆ ಕ್ರೂಖ್ ಹತ್ತಿರ ಕರೆದುಕೊಂಡು ಹೋಗಲೇ?" – ಎಂದು ಕೇಳಿದ.

"ಆಗಬಹುದು. ಅವನಿಗೆ ನಿಜವಾದ ಸತ್ಯ ಏನೂಂತ ತಿಳಿಯುವುದರಿಂದ ಇನ್ನೂ ಒಳ್ಳೆದೇ ಆಗುತ್ತೆ."

ಜಾಕ್ವೆಸ್ ವಿನ್ಸೆಂಟ್ ಕಡೆ ತಿರುಗಿ – ಏನು ಹೇಳ್ತಿ ಮಿಸ್ಟರ್, ನಾನು ಎಷ್ಟಿದ್ದರೂ ಫೋರ್‌ಮನ್ 'ಅವರಿಗೆ' ನಂಬಿಕಸ್ಥನಾಗಿರಬೇಡವೇ?..... ಆದರೆ ಹೆನ್ರಿ?.... ನಿಮಗೆ ತೋರಿಸುತ್ತಾನೆ!"

ವಿನ್ಸೆಂಟ್ ಜಾಕ್ವೆಸ್‌ನನ್ನು ಹಿಂಬಾಲಿಸಿದ. ಆ ತಣ್ಣನೆಯ ರಾತ್ರಿಯಲ್ಲಿ ಗಣಿ ಕಾರ್ಮಿಕರ ಗುಡಿಸಲು ಪ್ರದೇಶವನ್ನು ಪ್ರವೇಶಿಸಿದರು.

ಗಣಿ ಕಾರ್ಮಿಕರಿದ್ದ ಗುಡಿಸಲು ಕೇವಲ ಒಂದೇ ಒಂದು ಕೋಣೆಯದಾಗಿತ್ತು. ಮರದ ಗುಡಿಸಲು ಅವುಗಳಾಗಿದ್ದವು. ಯಾವುದೇ ಒಂದು ನಿರ್ದಿಷ್ಟ ಆಕಾರದಲ್ಲಿ ಇರಲಿಲ್ಲ. ಎಡ್ಡಾದಿಡ್ಡಿ ಹೇಗೋ ಒಂದು ನಾಲ್ಕು ಗೋಡೆ ಮೇಲೊಂದು ಸೂರು, ಅಷ್ಟು ಮಾತ್ರವೇ ಇತ್ತು. ಗುಡಿಸಲುಗಳಿದ್ದ ಪರಿಸರವೆಲ್ಲ ಕೊಳಚೆಯಿಂದ ತುಂಬಿತ್ತು. ಕಸದ ರಾಶಿ, ವಿಸರ್ಜನೆಗಳ ವಾಸನೆ, ಕಲ್ಲು, ಮಣ್ಣು ತುಂಬಿದ ರಸ್ತೆಗಳನ್ನು ದಾಟುತ್ತಾ ಡೆಕ್ರುಖ್ ಇದ್ದ ಗುಡಿಸಲಿಗೆ ಬಂದರು. ಪುಟ್ಟದೊಂದು ಕಿಟಕಿಯಿಂದ ಬೆಳಕು ಕಾಣಿಸುತ್ತಿತ್ತು. ಬಾಗಿಲಿನ ಸದ್ದು ಕೇಳಿ ಮೇಡಂ ಡೆಕ್ರುಖ್ ಬಂದು ಬಾಗಿಲು ತೆಗೆದಳು.

ಡೆಕ್ರುಬ್ ಮನೆ, ತಗ್ಗಿನಲ್ಲಿದ್ದ ಎಲ್ಲ ಕಾರ್ಮಿಕರ ಮನೆಗಳಂತೆಯೇ ಇತ್ತು. ಮಣ್ಣಿನ ನೆಲ; ಪಾಚಿಗಟ್ಟಿದ ಮೇಲ್ಛಾವಣಿ. ಮರದ ಹಲಗೆಗಳ ಮಧ್ಯದ ಸಂದುಗಳಲ್ಲಿ, ಗಾಳಿಯನ್ನು ತಡೆಯಲು ಬಟ್ಟೆ ತುಂಡುಗಳನ್ನು ತುರುಕಿ ಇರಿಸಲಾಗಿತ್ತು. ಒಂದು ಮೂಲೆಯಲ್ಲಿ ಮಂಚವಿತ್ತು. ಅದರ ಮೇಲೆ ಮೂವರು ಮಕ್ಕಳು ಮಲಗಿದ್ದರು. ಆ ಗುಡಿಸಲಲ್ಲಿ ಇದ್ದುದೆಲ್ಲ, ಒಂದು ಒಲೆ, ಮರದ ಮೇಜು, ಬೆಂಚು, ಒಂದೆರಡು ಕುರ್ಚಿ ಮತ್ತು ಒಂದು ಪೆಟ್ಟಿಗೆಯನ್ನು ಮೊಳೆ ಹೊಡೆದು ಗೋಡೆಗೆ ಬಿಗಿದಿರಿಸಲಾಗಿತ್ತು. ಇದರಲ್ಲಿಯೇ ಕೆಲವು ಪಾತ್ರೆ ಪರಡಿಗಳಿದ್ದವು. ಎಲ್ಲ ಡೋರ್ಯೆನರಂತೆ ಡೆಕ್ರುಖ್ ಕೂಡ, ಮಾಂಸಕ್ಕಾಗಿ ಒಂದೆರಡು ಮೊಲ ಮತ್ತು ಆಡನ್ನು ಸಾಕಿದ್ದ. ಮಕ್ಕಳು ಮಲಗಿದ್ದ ಮಂಚದ ಕೆಳಗಡೆಯೇ ಆಡೂ ಮಲಗಿತ್ತು. ಒಲೆಯ ಹಿಂಭಾಗದಲ್ಲಿದ್ದ ಒಂದಷ್ಟು ಹುಲ್ಲಿನ ಮೇಲೆ ಮೊಲಗಳ ವಾಸ.

ಮೇಡಂ ಡೆಕ್ರುಖ್, ಬಂದವರು ಯಾರೆಂದು ನೋಡಲು ಮೊದಲು ಬಾಗಿಲನ್ನು ಅರ್ಧ ಮಾತ್ರ ತೆರೆದಿದ್ದಳು. ನಂತರ ಅವರನ್ನು ಗುರುತಿಸಿದ ಮೇಲೆ ಬಾಗಿಲು ಪೂರ್ತಿಯಾಗಿ ತೆರೆದು ಒಳಕ್ಕೆ ಆಹ್ವಾನಿಸಿದಳು. ಮದುವೆಗೆ ಮೊದಲು ಅವಳೂ ಸಹ ಡೆಕ್ರುಖ್‌ನ ಜೊತೆಗೇ ಕೆಲಸ ಮಾಡುತ್ತಿದ್ದಳು. ಕಲ್ಲಿದ್ದಲು ತುಂಬಿದ ಗಾಡಿಗಳನ್ನು ಟ್ರ್ಯಾಲಿ ಬೋರ್ಡ್‌ವರೆಗೆ ತಳ್ಳಿಕೊಂಡು ಹೋಗುವ ಕೆಲಸವನ್ನು ಮಾಡುತ್ತಿದ್ದಳು. ಈಗ ಅವಳಲ್ಲಿ ಹುರುಪು, ಚೈತನ್ಯ, ಪ್ರಾಯ ಯಾವುದೂ ಇರಲಿಲ್ಲ. ಇನ್ನೂ ಇಪ್ಪತ್ತಾರು ತುಂಬದ ಅವಳು ಸೋತು ಬಡವಾಗಿ ಬಿಟ್ಟಿದ್ದಳು.

ಜಾಕ್ವೆಸ್ ಮತ್ತು ವಿನ್ಸೆಂಟರು ಒಳಗೆ ಪ್ರವೇಶಿಸಿದ್ದನ್ನು ಕಾಣುತ್ತಲೇ, ತಣ್ಣನೆಯ ಒಲೆಗೆ ಒರಗಿಕೊಂಡು ಕುಳಿತಿದ್ದ ಡೆಕ್ರುಖ್ ಥಟ್ಟನೆ ಎದ್ದು ನಿಂತು, ಸಂಭ್ರಮದ ಉದ್ಗಾರದೊಂದಿಗೆ – "ಓಹ್ ಬಹಳ ದಿನಗಳ ಮೇಲೆ ನಮ್ಮ ಮನೆಗೆ ಬಂದಿದ್ದೀಯ! ಬಂದದ್ದು ನೋಡಿ ನಮಗೆಲ್ಲ ತುಂಬಾ ಸಂತೋಷವಾಗಿದೆ. ನಿನ್ನ ಗೆಳೆಯನಿಗೂ ನಮ್ಮ ಹಾರ್ದಿಕ ಸ್ವಾಗತ!"

ಅದೇನೋ, ಡೆಕ್ರುಖ್ ಒಬ್ಬನನ್ನು ಮಾತ್ರ ಗಣಿಗಳು ಕೊಲ್ಲದೆ ಉಳಿಸಿದ್ದವು. ಯಾವಾಗಲೂ ಅವನು ಹೇಳುತ್ತಿದ್ದ. "ನಾನು ಮುಪ್ಪಿನಿಂದಾಗಿ ಸಾಯುತ್ತೇನೆಯೇ

ಹೊರತಾಗಿ, ಈ ಗಣಿಗಳು, ನನ್ನನ್ನು ಏನೂ ಮಾಡುವುದಕ್ಕಾಗುವುದಿಲ್ಲ. ಮಾಡುವುದಕ್ಕೆ ನಾನು ಬಿಡುವುದೂ ಇಲ್ಲ! - ಎಂದು.

ಅವನ ತಲೆಯಲ್ಲಿ ಬಲಗಡೆ, ಕೆಂಪಾದ ತಲೆ ಚರ್ಮ ಹೊಳೆಯುತ್ತಿತ್ತು. ಇದು ಒಮ್ಮೆ ನಡೆದ ದುರ್ಘಟನೆಯ ಪರಿಣಾಮವಾಗಿ ಅವನಿಗೆ ದೊರೆತ ಉಡುಗೊರೆಯಾಗಿತ್ತು. ಗಣಿಯ ಆಳಕ್ಕೆ ಇಳಿಯುತ್ತಿದ್ದಾಗ, ಒಮ್ಮೆ ಏನೋ ಅನಾಹುತ ಆಗಿ ದೊಡ್ಡ ಬಂಡೆಕಲ್ಲೊಂದು ಬಾವಿಯಲ್ಲಿ ಬೀಳುವ ಹಾಗೆ, ಪಂಜರ ಆಳಕ್ಕೆ ಬಿದ್ದು, ಅದರಲ್ಲಿದ್ದವರಲ್ಲಿ ಇಪ್ಪತ್ತೊಂಬತ್ತು ಮಂದಿ ಸಾವನ್ನಪ್ಪಿದ್ದರು. ಇವನು ಹೇಗೋ ಬಚಾವಾಗಿ ಉಳಿದ. ಆದರೆ ತಲೆಯ ಗಾಯದ ಜೊತೆಗೆ, ನಡೆಯುವಾಗ ಒಂದು ಕಾಲನ್ನು ಎಳೆದೆಳೆದು ನಡೆಯುವಂತಾಗಿತ್ತು. ನಾಲ್ಕು ಕಡೆ ಕಾಲು ಮುರಿದಿತ್ತು. ಐದು ದಿನ ಕದಲದಂತೆ ಹಾಸಿಗೆಗೆ ಕಟ್ಟು ಬಿದ್ದಿರಬೇಕಾಯಿತು. ಪಕ್ಕೆಲುಬುಗಳೂ ಸ್ವಲ್ಪ ಡೊಂಕಾಗಿದ್ದವು. ಅವನು ಧರಿಸಿದ ಅಂಗಿ ಅದಕ್ಕಾಗಿಯೇ ಒಂದು ಕಡೆ ಉಬ್ಬಿದಂತಿತ್ತು. ಒಮ್ಮೆ ಒಂದು ಕಡೆ ಆದ ಗಣಿಸ್ಫೋಟದ ರಭಸಕ್ಕೆ ಅವನು, ಕಲ್ಲಿದ್ದಲ ಗಾಡಿಗೆ ಒಗೆಯಲ್ಪಟ್ಟು ಮೈಮೂಳೆಗಳನ್ನೆಲ್ಲ ಮುರಿದುಕೊಂಡಿದ್ದ. ಆದರೂ ಅವನೊಂದು ರೀತಿಯಲ್ಲಿ 'ಗೇಮ್‌ಕಾಕ್' (ಸ್ಪರ್ಧೆಯ ಹುಂಜ). ಸಾಮಾನ್ಯವಾಗಿ ಸೋಲುವವನಲ್ಲ. ಯಾವುದಕ್ಕೂ ಹೆದರುವವನಾಗಿರಲಿಲ್ಲ. ಕಂಪೆನಿಯವರ ಜೊತೆ ಯಾವಾಗಲೂ ಅವನ ಘರ್ಷಣೆ ಇದ್ದೇ ಇರುತ್ತಿತ್ತು. ಆದ್ದರಿಂದಲೇ ಅವನನ್ನು ಅತ್ಯಂತ ಕಷ್ಟಕರವಾದ ಕೆಲಸಗಳಿದ್ದ ಜಾಗಕ್ಕೆ ಹಾಕಿದ್ದರು. ಅಲ್ಲಿನ ಪರಿಸ್ಥಿತಿಯೂ ಬಹಳ ಭಯಂಕರದ್ದಾಗಿತ್ತು. ಅವರು ಹಿಂಸೆಕೊಟ್ಟಷ್ಟೂ ಇವನು ಮತ್ತಷ್ಟು ಉರಿದು ಬೀಳುತ್ತಿದ್ದ. ಅವನಲ್ಲಿ ಅವ್ಯಕ್ತ ಶತ್ರುವೊಬ್ಬ ಇದ್ದೇ ಇರುತ್ತಿದ್ದ. ಅವನ ಗದ್ದದ ಮೇಲಿದ್ದ ಗುಳಿ ಅವನ ಮುಖವನ್ನು ಮತ್ತಷ್ಟು ವಕ್ರವಾಗಿಸಿತ್ತು.

"ಮಿಸ್ಟರ್ ವಾನ್‌ಗೋ, ನೀನು ಸರಿಯಾದ ಸ್ಥಳಕ್ಕೆ ಬಂದಿರುವಿ. ನಾವು ಇಲ್ಲಿ ಗುಲಾಮರಲ್ಲ; ಪ್ರಾಣಿಗಳು. ಮಾರ್ಕಾಸ್ ಕೆಲಸಕ್ಕೆ ಬೆಳಗಿನ ಜಾವ ಮೂರು ಗಂಟೆಗೇ ಹೊರಡುತ್ತೇವೆ. ಮಧ್ಯೆ ಒಂದು ಹದಿನೈದು ನಿಮಿಷ ಮಾತ್ರ ವಿಶ್ರಾಂತಿ, ಅದೂ ಊಟ ಮಾಡುವಾಗಷ್ಟೇ! ಮತ್ತೆ ಸಂಜೆ ನಾಲ್ಕು ಗಂಟೆವರೆಗೆ ಕೆಲಸ. ಅಲ್ಲಿ ಕೆಳಗೆ ನೋಡುತ್ತಿದ್ದೀ ಅಲ್ಲ, ಕಪ್ಪಗೆ, ಮಸಿ ತುಂಬಿದ ಪ್ರದೇಶ, ಕುಲುಮೆಯಲ್ಲಿ ಬೇಯುತ್ತಿರುವಷ್ಟು ಸೆಕೆ! ವಿಷಾನಿಲಗಳಿಂದ ತುಂಬಿದ ಜಾಗ. ಉಸಿರಾಡಲೂ ಕಷ್ಟವೆನಿಸುತ್ತದೆ. ಕಲ್ಲಿದ್ದಲನ್ನು ಆಳದಿಂದ ಎತ್ತುತ್ತಿರುವಾಗ, ನಿಲ್ಲಲು ಸರಿಯಾದ ಜಾಗವೂ ಇರುವುದಿಲ್ಲ. ನಮ್ಮ ಮೊಣಕಾಲುಗಳ ಮೇಲೆ ನಿಂತು, ಇಬ್ಬಿಬ್ಬರಾಗಿ ಕೆಲಸ ಮಾಡಬೇಕು. ಹುಡುಗರು, ಹುಡುಗಿಯರು, ಗಂಡಸರು ಹೆಂಗಸರೂ ಎಲ್ಲರೂ ಗಣಿಗಳ ಆಳಕ್ಕೆ ಇಳಿಯುತ್ತೇವೆ. ಎಂಟು ಒಂಬತ್ತನೇ ವರ್ಷದಿಂದಲೇ ಈ ರೀತಿಯ ಬದುಕನ್ನು ಆರಂಭಿಸುತ್ತೇವೆ. ಇಪ್ಪತ್ತರ ವಯಸ್ಸಾಗುತ್ತಿದ್ದಂತೆ ನಮಗೆ ಉಸಿರಾಟದ ತೊಂದರೆ ಕಾಣಿಸಿಕೊಳ್ಳುತ್ತದೆ. ಶ್ವಾಸಕೋಶಗಳು ದುರ್ಬಲವಾಗುತ್ತವೆ. ಬೋನಿನ ಮೂಲಕ ಇಳಿಯುವಾಗಲೇ ಮತ್ತಾವುದೋ ಕೆಲಸ ಮಾಡುವಾಗಲೋ, ಆಕಸ್ಮಿಕದ ಅಪಘಾತದಿಂದಲೋ,

ಉಸಿರುಕಟ್ಟಿಯೋ, ಸಾಯದೆ, ಬದುಕಿ ಉಳಿದರೆ, ನಲ್ವತ್ತನೇ ವಯಸ್ಸಿನವರೆಗೂ ತೊಂದರೆಯಿಲ್ಲ. ಆದರೆ ಕ್ಷಯದಿಂದ ಕ್ರಮೇಣ ಸಾಯುವುದಂತು ಖಂಡಿತ. "ನಾನು ಹೇಳುತ್ತಿರುವುದಲ್ಲ, ಇದು ಸತ್ಯ, ಹೌದಲ್ಲ ವರ್ನಿ?"

"ನೀನು ಹೇಳುತ್ತಿರುವುದು ನೂರಕ್ಕೆ ನೂರು ಸತ್ಯ ಡೆಕ್ರುಖ್"– ಜಾಕ್ವೆಸ್ ಸಮ್ಮತಿಸಿದ.

ದೂರಕ್ಕೆ ಮೂಲೆಯಲ್ಲಿದ್ದ, ತನ್ನ ಜಾಗದಲ್ಲಿ ಕುಳಿತುಕೊಳ್ಳಲು ಮೇಡಂ ಡೆಕ್ರುಖ್ ಎದ್ದು ಹೋದಳು. ಸೀಮೆಎಣ್ಣೆಯ ಮಂದ ಬೆಳಕಿನಲ್ಲಿ ಅವಳ ಅರ್ಧ ಮುಖ ಮಾತ್ರ ಕಾಣುತ್ತಿತ್ತು. ತನ್ನ ಗಂಡ ಹೇಳುತ್ತಿದ್ದುದೆಲ್ಲವನ್ನೂ, ಈ ಮೊದಲೂ ಸಾವಿರ ಸಲ ಕೇಳಿಸಿಕೊಂಡಿದ್ದರೂ ಗಮನವಿಟ್ಟು ಕೇಳಿದಳು. ಕಲ್ಲಿದ್ದಲು ತುಂಬಿದ ಗಾಡಿಗಳನ್ನು ತಳ್ಳುತ್ತ, ಮೂರು ಮಕ್ಕಳನ್ನು ಸರದಿಯಂತೆ, ಒಂದಾದ ಮೇಲೊಂದು ಹೆರುತ್ತಾ, ಕೊರೆವ ಚಳಿಗಾಲಗಳನ್ನು ಅನುಭವಿಸುತ್ತ ಕಳೆದ ಬದುಕಿನಿಂದಾಗಿ, ಅವಳಲ್ಲಿ ಹೋರಾಟ ನಡೆಸುವ ಸಾಮರ್ಥ್ಯವನ್ನೇ ಕಳೆದುಕೊಂಡಿದ್ದಳು. ಡೆಕ್ರುಖ್ ತನ್ನ ಘಾಸಿಗೊಂಡ ಕಾಲೆಳೆಯುತ್ತಾ ವಿನ್ಸೆಂಟ್ ಬಳಿಗೆ ಬಂದ.

"ಇಷ್ಟೆಲ್ಲ ಅನುಭವಿಸುವ ನಮಗೆ ಸಿಗುವುದಾದರೂ ಏನು? ಒಂದೇ ಒಂದು ಕೋಣೆಯ, ಅದೂ ಮನುಷ್ಯರು ವಾಸಿಸಲು ಲಾಯಕ್ಕಲ್ಲದ ಈ ಗುಡಿಸಲು, ಉಸಿರಾಟವನ್ನು ಉಳಿಸಿಕೊಳ್ಳಲು ಸಾಕಾಗುವಷ್ಟು ಮಾತ್ರ ಆಹಾರ. ನಾವು ತಿನ್ನುವ ಆ ಆಹಾರವಾದರೂ ಏನು ಗೊತ್ತೇ? ಒಂದೆರಡು ಚೂರು ಬ್ರೆಡ್ಡು, ಹುಳಿತು ಹೋದ ಚೀಸ್, ಬ್ಲ್ಯಾಕ್ ಕಾಫಿ? ವರ್ಷಕ್ಕೆ ಒಂದೋ ಎರಡೋ ಸಲ, ಅಪರೂಪಕ್ಕೆ ಮಾಂಸ! ಯಾವುದಾದರೂ ಕಾರಣಕ್ಕೆ, ದಿನಕ್ಕೊಂದು 'ಸೆಂಟ್' ಮುರಿದುಕೊಂಡರೆ ನಾವು ಉಪವಾಸದಿಂದ ಸಾಯಬೇಕಾಗುತ್ತದೆ.

ನಮಗೆ ಕಲ್ಲಿದ್ದಲ್ಲನ್ನು ತರಲಿಕ್ಕೆ ಆಗುವುದಿಲ್ಲ. ಆ ಕಾರಣದಿಂದಲೇ, ನಮ್ಮ ಸಂಬಳದಲ್ಲಿ ಕಡಿತ ಮಾಡುವುದಿಲ್ಲ. ಮಿಸ್ಟರ್, ನಾವೆಲ್ಲ ಸಾವಿನ ಅಂಚಿನಲ್ಲಿದ್ದೇವೆ. ಪ್ರತಿಯೊಂದು ದಿನವೂ ನಾವು ಸಾವಿಗೆ ಹತ್ತಿರವಾಗುತ್ತಲೇ ಹೋಗುತ್ತೇವೆ, ನಮಗೆ ಖಾಯಿಲೆಯಾದರೆ, ಕೆಲಸಕ್ಕೆ ಹೋಗದಿದ್ದರೆ, ಒಂದು ಕಾಸೂ ಸಿಗುವುದಿಲ್ಲ. ನಾವು ಅನಾಥವಾಗಿ ನಾಯಿಗಳಂತೆ ಸಾಯಬೇಕಾಗುತ್ತದೆ. ನಮ್ಮ ಹೆಂಡತಿ ಮಕ್ಕಳು ನೆರೆಹೊರೆಯವರ ದಯಾ ಭಿಕ್ಷೆಯಿಂದ ಬದುಕಬೇಕಾಗುತ್ತದೆ. ಒಂದಲ್ಲ, ಎರಡಲ್ಲ ಎಂಟನೇ ವರ್ಷದಿಂದ ನಲ್ವತ್ತನೇ ವಯಸ್ಸಿನ ವರೆಗೆ ಮೂವತ್ತೆರಡು ವರ್ಷಗಳ ಕಾಲ, ಆ ಕಪ್ಪು ರಂಧ್ರಗಳಲ್ಲಿ, ಪಾತಾಳದಲ್ಲಿ ಬದುಕುತ್ತೇವೆ."

–೧೦–

ವಿನ್ಸೆಂಟ್‌ಗೆ ಎಲ್ಲವೂ ಅರ್ಥವಾಯಿತು. ಗಣಿಕಾರ್ಮಿಕರು ಅನಕ್ಷರಸ್ಥರು, ಓದು ಬರಹ ತಿಳಿದಿಲ್ಲದವರಾದರೂ ಬುದ್ಧಿವಂತರು. ಕೆಲಸದಲ್ಲಿ ಚುರುಕು! ಧೈರ್ಯವಂತರು. ಮುಕ್ತ ಮನಸ್ಸಿನವರು ಬಹಳ ಸೂಕ್ಷ್ಮ ಮತ್ತು ಸಂವೇದನಾಶೀಲ ಪ್ರವೃತ್ತಿಯವರು. ಆದರೆ ಕಾಡುವ ಜ್ವರ. ಆಹಾರದ ಕೊರತೆಯಿಂದಾಗಿ ಬಿಳಿಚಿಕೊಂಡು ಕೃಶರಾಗಿದ್ದರು.

ಭಾನುವಾರಗಳ ಹೊರತಾಗಿ ಸೂರ್ಯನನ್ನು ಕಂಡವರೇ ಅಲ್ಲ. ಅವರ ಚರ್ಮದ ಮೇಲೆಲ್ಲ ಕಪ್ಪುಚುಕ್ಕಿಗಳು ಎದ್ದು ಕಾಣುತ್ತಿದ್ದವು. ಆದರೆ ಅವರ ಕಣ್ಣುಗಳಲ್ಲಿ ನಿರಾಶೆ, ಹತಾಶೆ, ವಿಷಾದ, ಶೋಷಿತರಾಗಿದ್ದರೂ, ಶೋಷಣೆಯ ವಿರುದ್ಧ ಪ್ರತಿಭಟಿಸಲಾಗದ ಅಸಹಾಯಕತೆ, ದೈನ್ಯತೆಗಳು ನಿಚ್ಚಳವಾಗಿ ಗೋಚರಿಸುತ್ತಿದ್ದವು.

ವಿನ್ಸೆಂಟ್‌ಗೆ ಅವರಲ್ಲಿ ಒಂದು ಬಗೆಯ ಆಕರ್ಷಣೆ ಕಂಡು ಬಂತು. ಅವರಲ್ಲಿ ಸರಳತೆ, ಒಳ್ಳೆತನಗಳನ್ನು ಗುರುತಿಸಿದ. [ಬ್ರಬಾಂಟ್] ಜುಂಡರ್ಟ್ ಮತ್ತು ಎಟ್ಟೆನ್‌ನಲ್ಲಿನ ಬ್ರಬಾಂಟ್ ಜನರಲ್ಲಿ ಕಂಡ ಗುಣಗಳೇ ಇವರಲ್ಲಿಯೂ ಕಂಡ. ಈಗ ಅವನಿಗೆ ಈ ಪ್ರದೇಶದ ನಿರ್ಜನತೆಯ ಪರಿಸರ ಅಷ್ಟಾಗಿ ಕಾಡಲಿಲ್ಲ. ಬೋರಿನೇಜ್‌ಗೆ ತನ್ನದೇ ಆದ ಒಂದು ವಿಶಿಷ್ಟತೆ ಇದ್ದಂತೆನಿಸಿತು. ವಿನ್ಸೆಂಟ್ ಒಂದೆರಡು ದಿನ ಕಳೆದ ಮೇಲೆ, ಮೊಟ್ಟ ಮೊದಲ ಧಾರ್ಮಿಕ ಸಭೆಯನ್ನು ಸೇರಿಸಿದ. ಈ ಸಭೆ ಡೆನಿಸ್‌ನ ಬೇಕರಿಯ ಹಿಂಭಾಗದ ಒಂದು ಷೆಡ್ಡಿನಲ್ಲಿ ನಡೆಯಿತು. ಡೆನಿಸ್ ಇದಕ್ಕಾಗಿಯೇ ಷೆಡ್ಡನ್ನು ಶುಚಿ ಮಾಡಿ ಇರಿಸಿದ್ದ. ನಾಲ್ಕೈದು ಬೆಂಚುಗಳನ್ನೂ ತಂದು ಇರಿಸಲಾಗಿತ್ತು. ವಿನ್ಸೆಂಟ್ ಎರವಲು ತಂದಿದ್ದ ಸೀಮೆಎಣ್ಣೆ ದೀಪದ ಮಂದ ಬೆಳಕಿನಲ್ಲಿ ಸಭೆ ಏರ್ಪಾಟಾಗಿತ್ತು. ಸಂಜೆ ಐದರ ವೇಳೆಗೆ ಗಣಿ ಕಾರ್ಮಿಕರು ತಮ್ಮ ಕುಟುಂಬ ಸದಸ್ಯರೊಂದಿಗೆ ಬಂದರು. ಚಳಿಯನ್ನು ತಡೆಯಲು ಸ್ಕಾರ್ಫ್‌ಗಳನು ಸುತ್ತಿಕೊಂಡು ಕೈಕಟ್ಟಿಕೊಂಡಿದ್ದರು. ವಿನ್ಸೆಂಟ್ ಬೈಬಲ್ ಓದುತ್ತಾ ಹೋಗಲು, ಅವರೆಲ್ಲರೂ ಗಮನವಿಟ್ಟು ಕೇಳಿಸಿಕೊಂಡರು.

ತನ್ನ ಮೊದಲ ಉಪದೇಶಕ್ಕೆ ಸಮರ್ಥವಾದ ಪದಗಳಿಗಾಗಿ, ವಿನ್ಸೆಂಟ್ ತಡಕಾಡಿದ. ಕೊನೆಗೆ ಬೈಬಲ್‌ನ ಒಂದು ಭಾಗವನ್ನು ಆಯ್ಕೆ ಮಾಡಿಕೊಂಡ. ರಾತ್ರಿಯೊಂದರಲ್ಲಿ ಪಾಲ್‌ಗೆ ಕಾಣಿಸಿಕೊಂಡ ದೃಶ್ಯದ ಭಾಗ ಅದಾಗಿತ್ತು (ಅಂಕ. ೧೬, ೯.) ಅಲ್ಲಿ ಮ್ಯಾಸೆ ಡೋನಿಯಾದ ವ್ಯಕ್ತಿಯೊಬ್ಬ ನಿಂತಿದ್ದ, ಪಾಲ್‌ನನ್ನು ಕೇಳುತ್ತಿದ್ದ. "ಬಾ. ಮ್ಯಾಸೆಡೋನಿಯಾಗೆ. ಅಲ್ಲಿಗೆ ಬಂದು ಅಲ್ಲಿನ ಜನರ ಸೇವೆ ಮಾಡು" ಎಂದು ಬೇಡುತ್ತಿದ್ದ.

"ಗೆಳೆಯರೇ, ಮ್ಯಾಸೆಡೋನಿಯಾದ ಆತನನ್ನು ಕಾರ್ಮಿಕನೆಂದು ಭಾವಿಸಬೇಕು. ಆತ ನೋವು ಕಷ್ಟ ಸಂಕಟಗಳಿಂದ ದಣಿದಿರುವುದು ಅವನ ಮುಖದಲ್ಲಿ ಕಾಣುತ್ತಿದೆ. ಆದರೆ ಅವನಲ್ಲಿ ವರ್ಚಸ್ಸು ಇಲ್ಲವೆಂದಲ್ಲ. ಅವನಲ್ಲಿ ಅಮರವಾದ ಆತ್ಮವಿದೆ. ಆತ್ಮಕ್ಕೆ ಆಹಾರ ಬೇಕಾಗಿದೆ. ಎಂಥ ಆಹಾರ? ಎಂದಿಗೂ ಕರಗದ ಮುಗಿಯದ ಆಹಾರ! ಯಾವುದು ಗೊತ್ತೇ, ದೇವರ ಮಾತುಗಳು!"

ಪ್ರತಿಯೊಬ್ಬ ಮನುಷ್ಯನೂ ಏಸುವಿನಂತೆ ಬದುಕಬೇಕೆಂಬುದು ದೇವರ ಇಚ್ಛೆ. ಜೀವನದಲ್ಲಿ ಮಹತ್ವಾಕಾಂಕ್ಷೆಗಳ ಬೆನ್ನೇರಿ ಹೋಗದೆ ಸರಳವಾಗಿ ಬದುಕಬೇಕು. ಕ್ರೈಸ್ತ ವೇದದಲ್ಲಿ ಹೇಳಿರುವುದನ್ನು ಓದಿ ತನ್ನನ್ನು ತಾನು ವಿನಯವಂತನೂ, ಹೃದಯವಂತನೂ ಆಗಿ ರೂಪಿಸಿಕೊಂಡಲ್ಲಿ ಅವನು ದೇವರ ರಾಜ್ಯವನ್ನು ಪ್ರವೇಶಿಸಿ ನೆಮ್ಮದಿ, ಶಾಂತಿಯಿಂದ ಬದುಕಲು ಸಾಧ್ಯವಾಗುತ್ತದೆ."

ಆ ಹಳ್ಳಿಯಲ್ಲಿ ಅನೇಕ ಮಂದಿ ರೋಗಿಗಳಿದ್ದರು. ವಿನ್ಸೆಂಟ್ ಅವರ ಮನೆಗಳಿಗೆಲ್ಲ ಭೇಟಿ ಕೊಟ್ಟು ಅವರಿಗೆ ಬೇಕಾದ ಸಹಾಯ, ಸಾಂತ್ವನಗಳನ್ನು ನೀಡುತ್ತಿದ್ದ ಹಾಗೆಯೇ ಸಾಧ್ಯವಾದಾಗಲೆಲ್ಲ ಅವರಿಗಾಗಿ, ಹಾಲು, ಬ್ರೆಡ್ಡು, ಕಾಲು ಚೀಲ, ಹಾಸಿಗೆಯ ಹೊದಿಕೆಗಳು ಇತ್ಯಾದಿಗಳನ್ನೂ ಕೊಂಡೊಯ್ದು ನೀಡುತ್ತಿದ್ದ. ಟೈಫಾಯ್ಡ್ ಮತ್ತು ಇನ್ನಿತರೆ ಭಯಂಕರ ಜ್ವರಗಳಿಂದ ಅಲ್ಲಿನ ಜನ ಹೆದರಿ ಹೌಹಾರಿದ್ದರು. ಕೆಟ್ಟ ಕೆಟ್ಟ ಕನಸುಗಳಿಂದಾಗಿ ಭಯತ್ರಸ್ತರಾಗಿದ್ದರು. ದಿನದಿಂದ ದಿನಕ್ಕೆ ಜ್ವರ ಪೀಡನೆಯಿಂದ ಸವೆದು ಕೃಶರಾಗುತ್ತಿದ್ದವರ ಸಂಖ್ಯೆ ಏರುತ್ತಲೇ ಇತ್ತು.

ಆ ಪೆತಿತ್ ವಾಸ್ಮೆಯ ಜನ, ಸ್ವಲ್ಪ ಸಂಕೋಚವಿದ್ದರೂ ವಿನ್ಸೆಂಟ್‌ನನ್ನು 'ಮಿಸ್ಟರ್ ವಿನ್ಸೆಂಟ್' ಎಂದು ಪ್ರೀತಿಯಿಂದ ಸಂಬೋಧಿಸಿ ಕರೆಯುತ್ತಿದ್ದರು. ಅವನು ಪ್ರತಿಯೊಂದು ಗುಡಿಸಲಿಗೂ ಹೋಗಿ ಹಾಲೋ, ಬ್ರೆಡ್ಡೋ, ಅಥವಾ ಸಮಾಧಾನವನ್ನೋ ನೀಡುತ್ತಿದ್ದ. ರೋಗಿಗಳನ್ನು ಮಾತಾಡಿಸಿ ಬರುತ್ತಿದ್ದ. ದೇವರ ವಿಚಾರವಾಗಿ ಅವರ ಮನಸ್ಸಿನಲ್ಲಿ ಪ್ರೀತಿ ಮೂಡಿಸಿದ್ದ. ಭರವಸೆ ತರಿಸಿದ್ದ.

ಹೀಗಾಗಿ ಅವನು ಭೇಟಿಮಾಡಿ ಯೋಗಕ್ಷೇಮ ವಿಚಾರಿಸಿ, ತನ್ನ ಕೈಲಾದ ಸಹಾಯವನ್ನು ಮಾಡದ ಒಂದು ಮನೆಯೂ ಇರಲಿಲ್ಲ. ಕ್ರಿಸ್‌ಮಸ್‌ಗೆ ಕೆಲವು ದಿನಗಳ ಮೊದಲು ಮಾರ್ಕಾಸ್ ಬಳಿ, ಯಾರೂ ಬಳಸದ, ತೊರೆದು ಬಿಟ್ಟಿದ್ದ ಕುದುರೆ ಲಾಯವೊಂದು ಕಣ್ಣಿಗೆ ಬಿತ್ತು. ಸುಮಾರು ನೂರುಮಂದಿ ಅದರಲ್ಲಿ ಕುಳಿತುಕೊಳ್ಳುವಷ್ಟು ಸ್ಥಳವಿತ್ತು. ಸ್ವಲ್ಪ ಥಂಡಿ ಎನಿಸುತ್ತಿತ್ತು. ಆದರೆ ವಾಸ್ಮೆಯ ಜನ ಅದರಲ್ಲಿ ತುಂಬಿದರು. ವಿನ್ಸೆಂಟ್‌ನ ಉಪದೇಶಗಳನ್ನು ಆಲಿಸಿದರು. ಬೆಥ್ಲಹೆಮ್‌ನ ಕತೆ ಕೇಳಿದರು. ಶಾಂತಿಯನ್ನು ಪಡೆದರು. ಬೋರಿನೇಜ್‌ನಲ್ಲಿ ಆರುವಾರಗಳ ಮಟ್ಟಿಗೆ ಇದ್ದ. ಆದರೆ ಪರಿಸ್ಥಿತಿ ಹದಗೆಡುತ್ತಲೇ ಇತ್ತು. ದಿನದಿನಕ್ಕೂ ನೋವು, ಸಂಕಟಗಳು ಹೆಚ್ಚಾಗುತ್ತಲೇ ಇದ್ದವು. ಆದರೂ ಆ ಜಾಗದಲ್ಲಿ, ಮಸಕು ಮಸುಕಾದ ಬೆಳಕಿನಲ್ಲಿ, ಚಳಿ, ಜ್ವರ, ಹಸಿವುಗಳಿಂದ ನಡುಗುತ್ತಿದ್ದ ನೋಯುತ್ತಿದ್ದ ಮಂದಿಗೆ, ವಿನ್ಸೆಂಟ್ ಸ್ವಲ್ಪ ಮಟ್ಟಿಗಾದರೂ ನೆಮ್ಮದಿ ತರಲು, ದೇವರ ರಾಜ್ಯದ ಭರವಸೆ ತುಂಬಲು ಪ್ರಯತ್ನಿಸಿದ.

ಅವನಿಗಿದ್ದ ಒಂದೇ ಒಂದು ಕೊರತೆಯೆಂದರೆ, ಸ್ವಂತ ಸಂಪಾದನೆ ಇಲ್ಲದೆ ಹೋದದ್ದು. ಈಗಲೂ ತಂದೆಯನ್ನೇ ಅವಲಂಬಿಸಿ ಬದುಕಬೇಕಿತ್ತು. ತನ್ನ ಸ್ವಂತ ಹಣದಿಂದ ಬಡವರ ಸಹಾಯ ಮಾಡಲು ಸಾಧ್ಯವಾದರೆ! – ಎಂದೆಲ್ಲ ಯೋಚಿಸುತ್ತಿದ್ದ. ಅದಕ್ಕಾಗಿ ದೇವರನ್ನು ಬೇಡಿಕೊಳ್ಳುತ್ತಿದ್ದ.

ವಾತಾವರಣ ಹದಗೆಟ್ಟಿತು. ಒಂದೇ ಸಮನೆ ಸುರಿವ ಮಳೆಯಿಂದಾಗಿ, ರಸ್ತೆಗಳೆಲ್ಲ ರಾಡಿಯಾದವು. ಗಣಿ ಕಾರ್ಮಿಕರ ಮನೆಗಳ ನೆಲವೂ ಕೊಚ್ಚೆಯಂತಾಯಿತು. ಹೊಸ ವರ್ಷದ ದಿನ ಜೀನ್ ಬ್ಯಾಪಿಸ್ಟ್ ವಿನ್ಸೆಂಟ್ ಹೆಸರಿಗೆ ಒಂದು ಪತ್ರ ನೀಡಿದ. ಅದು ರೆವರೆಂಡ್ ಪೀಟರ್‌ಸನ್‌ದೆಂದು ಗುರುತಿಸಿದ. ಅತ್ಯಂತ ಭಾವುಕನಾಗಿ, ತನ್ನ ಕೋಣೆಯ ಕಡೆ ಹೆಜ್ಜೆ ಹಾಕಿದ. ಛಾವಣಿಯ ಮೇಲೆ ಮಳೆ ಅಪ್ಪಳಿಸುತ್ತಿತ್ತು. ಆದರೂ ಅವನು ಲೆಕ್ಕಿಸಲಿಲ್ಲ. ಪತ್ರವನ್ನು ಕವರಿನಿಂದ ಹೊರತೆಗೆದು ಓದಿದ –

ಪ್ರೀತಿಯ ವಿನ್ಸೆಂಟ್,

ಕಮಿಟಿಯು ನೀನು ಅಲ್ಲಿ ಮಾಡುತ್ತಿರುವ ಅದ್ಭುತ ಕೆಲಸಗಳನ್ನು ದೃಷ್ಟಿಯಲ್ಲಿಟ್ಟುಕೊಂಡು, ಹೊಸವರ್ಷದ ಮೊದಲ ದಿನದಿಂದಲೇ, ಆರು ತಿಂಗಳ ಕಾಲ, ತಾತ್ಕಾಲಿಕವಾಗಿ ಅಲ್ಲಿಯೇ ಮುಂದುವರೆಯಲು ಆದೇಶಿಸಿದೆ.

ಜೂನ್ ತಿಂಗಳ ಕಡೆಯಷ್ಟು ಹೊತ್ತಿಗೆ, ಎಲ್ಲವೂ ಸರಿಯಾಗಿದ್ದರೆ, ನಿನ್ನನ್ನು ಅಲ್ಲಿಯೇ ಖಾಯಂ ಆಗಿ ನೇಮಿಸಲಾಗುವುದು ಮತ್ತು ನಿನಗೆ ತಿಂಗಳಿಗೆ ಐವತ್ತು ಫ್ರಾಂಕ್‌ಗಳಷ್ಟು ಸಂಬಳವನ್ನೂ ನೀಡಲಾಗುವುದು.

ಸಾಧ್ಯವಾದಾಗಲೆಲ್ಲ ಬರೆಯುತ್ತಿರು. ಯಾವಾಗಲೂ ಮೇಲೇರಲು ಪ್ರಯತ್ನಿಸು.

ನಿನ್ನ ಪ್ರೀತಿಯ,

ಪೀಟರ್‌ಸನ್

ವಿನ್ಸೆಂಟ್‌ಗೆ, ತನಗಾದ ಸಂತೋಷವನ್ನು ತಡೆದುಕೊಳ್ಳಲು ಆಗಲಿಲ್ಲ. ಮೇಲ್ಮುಖವಾಗಿ ಹಾಸಿಗೆ ಮೇಲೆ ಬಿದ್ದುಕೊಂಡ. ಪತ್ರವನ್ನೂ ಇನ್ನೂ ಕೈಯಲ್ಲಿ ಬಿಗಿ ಹಿಡಿದಿದ್ದ. ಅವನ ಸಂಭ್ರಮಕ್ಕೆ ಎಣೆಯಿಲ್ಲದಾಯಿತು. 'ಕಡೆಗೂ ತಾನು ಸಾಧಿಸಿದೆ'– ಎಂಬ ಹೆಮ್ಮೆ. ಜೀವನದಲ್ಲಿ ಸಾರ್ಥಕತೆಯನ್ನು ಕಂಡ. ತಾನೂ ಸಂಪಾದಿಸಬಲ್ಲವನಾಗಿದ್ದೇನೆ ಎಂಬ ಸಂತೃಪ್ತಿ. ಇದನ್ನೇ ತಾನು ಬಯಸಿದ್ದು! ಆದರೆ ಇಲ್ಲಿಯವರೆಗೆ ಅದನ್ನು ತಲುಪುವುದಕ್ಕೆ ಸಾಧ್ಯವಾಗಿರಲಿಲ್ಲ. ತಿಂಗಳಿಗೆ ಐವತ್ತು ಫ್ರಾಂಕ್! ಬೇಕಾದಷ್ಟೆನಿಸಿತು. ಊಟ, ವಸತಿಗಳಿಗಾಗಿ ಈಗ ಯಾರನ್ನೂ ಆಶ್ರಯಿಸಬೇಕಿಲ್ಲ.

ತನ್ನ ತಂದೆಗೆ ಕೂಡಲೇ ವಿಜಯಗರ್ವದೊಂದಿಗೆ, ಹರ್ಷೋಲ್ಲಾಸದೊಂದಿಗೆ ಪತ್ರ ಬರೆದ. ಇನ್ನು ಮುಂದೆ ತಂದೆಯಿಂದ ತನಗೆ ಯಾವುದೇ ಬಗೆಯ ಸಹಾಯ ಬೇಕಿಲ್ಲವೆಂದು ತಿಳಿಸಿದ. ಇಲ್ಲಿಯವರೆಗೆ ತನಗೆ ನೀಡಿದ ಹಣವನ್ನು ಸಾಲವೆಂದು ಪರಿಗಣಿಸುವುದಾಗಿಯೂ, ಪಡೆದ ಸಹಾಯಕ್ಕಾಗಿ ಕೃತಜ್ಞನಾಗಿರುವೆನೆಂದೂ ತಿಳಿಸಿ ಬರೆದ. ಅವನು ಬರೆದು ಮುಗಿಸುವಷ್ಟು ಹೊತ್ತಿಗೆ ನಸುಬೆಳಕಾಗಿತ್ತು. ಒಂದೇ ಸಮನೆ ಮಳೆಯ ಝಡಿ ಹಿಡಿದಿತ್ತು. ಮಧ್ಯೆ ಮಧ್ಯೆ ಗುಡುಗು ಮಿಂಚಿನ ಹಾವಳಿಯೂ ಸಾಕಷ್ಟಿತ್ತು. ಎದ್ದು ರಭಸದಿಂದ ಕೆಳಗಿಳಿದು ಬಂದು, ಅಡಿಗೆ ಮನೆಯ ಮೂಲಕ ಹಾದು ಸುರಿಯುತ್ತಿರುವ ಮಳೆಗೆ ತನ್ನನ್ನು ಒಡ್ಡಿಕೊಂಡು ನಿಂತ.

ಅವನ ಹಿಂದೆಯೇ ಬಂದ ಮೇಡಂ ಡೆನಿಸ್ – "ಮಿಸ್ಟರ್ ವಿನ್ಸೆಂಟ್, ಎಲ್ಲಿಗೆ ಹೊರಟಿದ್ದೀ ನಿನ್ನ ಕೋಟು ಮತ್ತು ಕ್ಯಾಪ್!!"

ವಿನ್ಸೆಂಟ್ ಮಾತನ್ನು ಕೇಳಿಸಿಕೊಂಡರೂ ಉತ್ತರಿಸಲು ನಿಲ್ಲಲಿಲ್ಲ. ಹತ್ತಿರದಲ್ಲಿಯೇ ಇದ್ದ ಮಣ್ಣಿನ ದಿಣ್ಣೆಯ ಬಳಿಗೆ ಓಡಿದ.

ದೂರದಿಂದ ಬೋರಿನೇಜ್‌ನ ಬಹುಭಾಗ ಕಾಣಿಸುತ್ತಿತ್ತು. ಕಲ್ಲಿದ್ದಲ ರಾಶಿಗಳು, ಗಣಿ ಕಾರ್ಮಿಕರ ಗುಡಿಸಲುಗಳು, ಆತುರಾತುರವಾಗಿ ಹೆಜ್ಜೆಹಾಕುತ್ತ ಸಾಲುಗಟ್ಟಿ ಸಾಗುತ್ತಿರುವ ಕಪ್ಪು ಆಕೃತಿಗಳು ಎಲ್ಲವೂ ಗೋಚರಿಸಿದವು. ಮತ್ತೆ ಸ್ವಲ್ಪ ದೂರದಲ್ಲಿ

ಪೈನ್ ಮರಗಳ ಕಾಡು, ಅದರ ಮಧ್ಯೆ ಅಲ್ಲಲ್ಲಿ ಇಣುಕುತ್ತಿದ್ದ ಬಿಳಿಯ ಗುಡಿಸಲು, ಅಲ್ಲಿದ್ದ ಇನ್ನೂ ಸ್ವಲ್ಪ ದೂರದಲ್ಲಿ ಒಂದು ಚರ್ಚ್ ಗೋಪುರ, ಹಳೆಯ ಮಿಲ್. - ಇವೆಲ್ಲದರ ಮೇಲೆ ಮಸಕು ಮಸುಕಾದ ಬೆಳಕಿನ ಪರದೆ ಚಾಚಿತ್ತು. ಕತ್ತಲು ಬೆಳಕಿನಾಟದ ಅದ್ಭುತ ದೃಶ್ಯ! ನೋಡುತ್ತಿದ್ದಂತೆ ಅವನಿಗೆ ಮೈಕೆಲ್ ಮತ್ತು ರ್‍ಯೂಸ್‌ಡೇಲ್‌ನ ಕಲಾಕೃತಿಗಳು ನೆನಪಾದವು.

-೧೧-

ವಿನ್ಸೆಂಟ್ ಈಗ ಅಧಿಕೃತ ಧರ್ಮೋಪದೇಶಕನಾಗಿದ್ದ. ಅವನಿಗೆ ತನ್ನದೇ ಆದ ಒಂದು ಸ್ಥಳ ಬೇಕಾಗಿತ್ತು. ಧಾರ್ಮಿಕ ಸಭೆಗಳನ್ನು ನಡೆಸಲು, ಸೆರ್‌ಮನ್‌ಗಳನ್ನು ನೀಡಲು ಪ್ರತ್ಯೇಕ ಸ್ಥಳದ ಅಗತ್ಯವಿದ್ದ ಕಾರಣ, ಅದಕ್ಕಾಗಿ ಹುಡುಕಾಡಿ, ಕಡೆಗೆ ತಗ್ಗು ಪ್ರದೇಶವೊಂದರಲ್ಲಿ ಪೈನ್ ಮರಗಳ ಕಾಡಿನ ಮಧ್ಯೆ ಹಾದುಹೋಗುವ ರಸ್ತೆಯಲ್ಲಿ, ದೊಡ್ಡದಾದ ಮನೆಯೊಂದು ಸಿಕ್ಕಿತು. ಮೊದಲು ಅದು ಮಕ್ಕಳ ಶಾಲೆಯಾಗಿತ್ತು. ಅಲ್ಲಿ ಮಕ್ಕಳಿಗೆ ನೃತ್ಯವನ್ನು ಕಲಿಸಲಾಗುತ್ತಿತ್ತು. ವಿನ್ಸೆಂಟ್ ಅದನ್ನೆಲ್ಲ ಅಚ್ಚುಕಟ್ಟು ಮಾಡಿ, ತಾನು ತಂದಿದ್ದ ಫೋಟೋಗಳನ್ನೆಲ್ಲ ಗೋಡೆಗೆ ಹಾಕಿದ ಮೇಲೆ ಅದಕ್ಕೊಂದು ಅಂದ ಬಂದಿತ್ತು. ಮಧ್ಯಾಹ್ನದ ಹೊತ್ತಿನಲ್ಲಿ, ನಾಲ್ಕು ವರುಷದಿಂದ ಎಂಟು ವರ್ಷದ ಮಕ್ಕಳನ್ನು ಸೇರಿಸಿ ಅವರಿಗೆ ಅಕ್ಷರಾಬ್ಯಾಸ ಮಾಡಿಸುತ್ತಿದ್ದ. ಬೈಬಲ್‌ನಿಂದ ನೀತಿಕತೆಗಳನ್ನು ಹೇಳುತ್ತಿದ್ದ. ಅಲ್ಲಿನ ಜನರ ಬದುಕಿನಲ್ಲಿ ವಿದ್ಯಾಭ್ಯಾಸ ಅನ್ನೋದು ಇದೇ ಮೊದಲ ಬಾರಿಯಾಗಿತ್ತು.

ವಿನ್ಸೆಂಟ್ ಜಾಕ್ವೆಸ್‌ನನ್ನು, 'ಜಾಕ್ವೆಸ್', ಚಳಿ ವಿಪರೀತವಾಗಿರುವುದರಿಂದ, ಈ ಕೋಣೆಯನ್ನು ಬೆಚ್ಚಗೆ ಇಡಬೇಕಾಗುತ್ತೆ. ಆದರೆ ಬೆಚ್ಚಗೆ ಇಡುವುದಾದರೂ ಹೇಗೆ? ಇದ್ದಿಲು ನಮಗೆ ಎಲ್ಲಿಂದ ಸಿಗುತ್ತೆ? ಒಲೆಯನ್ನು ಉರಿಸುತ್ತಲೇ ಇರಿಸಬೇಕಾಗುತ್ತದೆ." ಎಂದು ಕೇಳಿದ.

ಜಾಕ್ವೆಸ್ ಸ್ವಲ್ಪ ಹೊತ್ತು ಯೋಚಿಸಿದ, ನಂತರ ಹೇಳಿದ - "ನಾಳೆ ಮಧ್ಯಾಹ್ನ ಇಲ್ಲಿಯೇ ಇರು. ಹೇಗೆ ಇದ್ದಿಲನ್ನು ಪಡೆಯಬಹುದೂಂತ ತೋರಿಸ್ತೇನೆ."

ಮರುದಿನ ವಿನ್ಸೆಂಟ್ ಸಲೋದ್ (ಮನೆ)ನ ಬಳಿ ಬಂದಾಗ, ಒಂದು ಗುಂಪು ಹೆಂಗಸರು ನಿಂತಿದ್ದರು. ಕಪ್ಪು ಬ್ಲೌಸ್, ಸ್ಕರ್ಟ್‌ಗಳನ್ನು ಧರಿಸಿದ್ದರು. ತಲೆಯನ್ನು ಕಪ್ಪು ಸ್ಕಾರ್ಫ್‌ನಿಂದ ಸುತ್ತಿಕೊಂಡಿದ್ದರು. ಬೆನ್ನಿಗೆ ಒಂದು ಚೀಲ ಕಟ್ಟಿಕೊಂಡಿದ್ದರು.

"ಮಿಸ್ಟರ್ ವಿನ್ಸೆಂಟ್ ನಿಮಗೂ ಒಂದು ಚೀಲ ತಂದಿದ್ದೀನಿ" - ಎಂದು ಜಾಕ್ವೆಸ್ ವರ್ನೆಯ ಮಗಳು ಹೇಳಿದಳು.

ವೃತ್ತಾಕಾರದ ರಸ್ತೆಗಳನ್ನು, ಗಣಿ ಕೆಲಸದವರ ಮನೆಗಳನ್ನು ಹಾಯುತ್ತ, ಗುಡ್ಡದ ಮೇಲಿದ್ದ ಡೆನಿಸ್ ಬೇಕರಿಯನ್ನೂ ದಾಟಿ ವಿಸ್ತಾರವಾದ ಬಯಲನ್ನು ತಲುಪಿದರು. ಬಯಲನ್ನು ಬಳಸಿದ್ದ ಗೋಡೆಗಳನ್ನು ಒಂದು ಸುತ್ತು ಹಾಕಿ, ಹಿಂಭಾಗದಲ್ಲಿದ್ದ ಕಪ್ಪು ಪಿರಾಮಿಡ್‌ನಂತಿದ್ದ ಜಾಗವನ್ನು ತಲುಪಿದರು. ಪಿರಾಮಿಡ್ ಆಕಾರದಲ್ಲಿದ್ದ ಈ

ಗುಡ್ಡವನ್ನು ಎಲ್ಲ ದಿಕ್ಕಿನಿಂದಲೂ ಅಗೆಯ ತೊಡಗಿದರು, ಮತ್ತು ಇರುವೆ ಸಾಲಿನಂತೆ ಒಬ್ಬರ ಹಿಂದೆ ಒಬ್ಬರು ಏರಲು ತೊಡಗಿದರು.

"ಇದ್ದಿಲು ಸಿಗಬೇಕೂಂದ್ರೆ, ಬೆಟ್ಟದ ತುದಿವರೆಗೆ ಹೋಗಬೇಕು ಮಿಸ್ಟರ್ ವಿನ್ಸೆಂಟ್" ವರ್ನೆಯ ಮಗಳು ಹೇಳಿದಳು.

"ನಾವು ಬಹಳ ಕಾಲದಿಂದ ಬುಡವನ್ನು ಅಗೆದಗೆದೂ ಇದ್ದಿಲು ಖಾಲಿ ಮಾಡಿದ್ದೀವಿ. ಈಗ ಮೇಲೆ ಹೋಗಲೇ ಬೇಕು. ಬನ್ನಿ ಇಲ್ಲಿ. ಇದ್ದಿಲು ಯಾವುದೂಂತ ತೋರಿಸ್ತೇನೆ."

ಅವಳು ಆಡಿನ ಮರಿಯಂತೆ ನಿರಾಯಾಸವಾಗಿ ಆ ಕಪ್ಪು ಬೆಟ್ಟವನ್ನು ಏರಿದಳು. ವಿನ್ಸೆಂಟ್‌ಗೆ ಅಭ್ಯಾಸ ಇಲ್ಲದ ಕಾರಣ ಕಾಲು, ಕೈಗಳನ್ನೂ ಊರಿ ಬಿಗಿಯಾಗಿ ಹಿಡಿದುಕೊಂಡು ಏರುತ್ತಿದ್ದ. ವರ್ನೆಯ ಮಗಳು ಅವನಿಗಿಂತ ಮುಂದು ಮುಂದು ಇದ್ದಳು. ಅಲ್ಲಲ್ಲಿ ಸ್ವಲ್ಪ ಹೊತ್ತು ತಡೆದು ವಿನ್ಸೆಂಟ್‌ನನ್ನು ಗೇಲಿ ಮಾಡಲು ಮಣ್ಣಿನ ಹೆಂಟೆಗಳನ್ನು ಎಸೆಯುತ್ತಿದ್ದಳು. ಅವಳು ನೋಡಲು ಮುದ್ದಾಗಿದ್ದಳು. ಒಳ್ಳೆ ಬಣ್ಣ, ಜೊತೆಗೆ ಚುರುಕಾಗಿದ್ದಳು. ಜೀವಂತಿಕೆ ಎದ್ದು ಕಾಣುತ್ತಿತ್ತು. ಅವಳಿಗೆ ಏಳು ವರ್ಷವಾಗಿದ್ದಾಗಲೇ ವರ್ನೆಗೆ ಫೋರ್‌ಮನ್ ಆಗಿ ಬಡ್ತಿ ಸಿಕ್ಕಿದ್ದು. ಅವಳೆಂದೂ ಗಣಿಯ ಒಳಭಾಗವನ್ನು ನೋಡಿರಲಿಲ್ಲ.

"ಬನ್ನಿ ಮಿಸ್ಟರ್ ವಿನ್ಸೆಂಟ್, ಬೇಗ ಬರದೆ ಇದ್ದರೆ ನಿಮ್ಮ ಚೀಲ ತುಂಬುವುದೇ ಇಲ್ಲ. ಅಲ್ಲದೆ ಕಡೆಗೆ ಉಳೀತೀರಿ."

ಅವಳಿಗೆ ಇದೊಂದು ಪ್ರವಾಸವಾಗಿತ್ತು ಅಷ್ಟೆ! ವರ್ನೆಗೆ ಕಡಿಮೆದರದಲ್ಲಿ ಇದ್ದಿಲು ಸಿಗುತ್ತಿತ್ತು.

ಪುಟ್ಟ ಪುಟ್ಟ ಗಾಡಿಗಳಲ್ಲಿ ತಂದಿದ್ದ ನಿರುಪಯುಕ್ತ ವಸ್ತುಗಳನ್ನು ಅಲ್ಲಿ ಸುರಿಯುತ್ತಿದ್ದುದರಿಂದ, ಅವರಿಗೆ ಮೇಲೆ ಹೋಗಲು ಸಾಧ್ಯವಾಗಲಿಲ್ಲ. ಪಿರಾಮಿಡ್ ಮೇಲಿಂದ ಇದ್ದಿಲನ್ನು ಹುಡುಕಿ ತರುವುದು ಅಷ್ಟು ಸುಲಭವಾಗಿರಲಿಲ್ಲ. ಆ ಹುಡುಗಿಯೇ ವಿನ್ಸೆಂಟ್‌ಗೆ ಇದ್ದಿಲನ್ನು ಹೇಗೆ ಅಗೆದು ತೆಗೆದುಕೊಳ್ಳಬೇಕೆಂಬುದನ್ನು ತೋರಿಸಿದಳು. ಮಣ್ಣು ಕಲ್ಲು, ಜೇಡಿಮಣ್ಣು ಇನ್ನೂ ಇತರೆ ವಸ್ತುಗಳಲ್ಲಿ ಬೆರೆತು ಇರುತ್ತಿದ್ದುದರಿಂದ, ಚಾಣಾಕ್ಷತನದಿಂದ, ಅವುಗಳಿಂದ ಇದ್ದಿಲನ್ನು ಮಾತ್ರ ಬೇರ್ಪಡಿಸಿ ತೆಗೆದುಕೊಳ್ಳಬೇಕಿತ್ತು. ಮಾರುಕಟ್ಟೆಗೆ ಕಳಿಸಲಾಗದ ಕೀಳುಗುಣ ಮಟ್ಟದ ಇದ್ದಿಲನ್ನು ಇವುಗಳ ಜೊತೆ ಬಿಸಾಡಲಾಗುತ್ತಿತ್ತು. ಇದ್ದಿಲ ರಾಶಿಯೂ ಮಂಜು, ಮಳೆಯಿಂದ ಗಡ್ಡೆ ಕಟ್ಟಿದ ಹಾಗಿತ್ತು. ಅದರಿಂದ ಇದ್ದಿಲನ್ನು ಕೆರೆದುಕೊಳ್ಳುವುದು ತುಂಬಾ ಕಷ್ಟವಾಗಿತ್ತು. ವಿನ್ಸೆಂಟ್ ಈ ಪ್ರಯತ್ನದಲ್ಲಿ ಕೈಗಳನ್ನು ಗಾಯಮಾಡಿಕೊಂಡ ಆದರೂ ಹಾಗೂ ಹೀಗೂ ಮಾಡಿ, ಬೇರೆಯವರೆಲ್ಲ ಒಂದು ಚೀಲದಷ್ಟು ಇದ್ದಿಲನ್ನು ಸಂಗ್ರಹಿಸಿ ತುಂಬಿಕೊಂಡಿದ್ದರೆ, ಇವನು ಅರ್ಧಚೀಲವನ್ನು ತುಂಬಿಕೊಂಡಿದ್ದ.

ಪ್ರತಿಯೊಬ್ಬ ಹೆಂಗಸೂ ತಾನು ತಂದಿದ್ದ ಇದ್ದಿಲ ಚೀಲವನ್ನು ವಿನ್ಸೆಂಟ್ ಮನೆಯ ಬಳಿ ಇರಿಸಿ, ಸಂಜೆಯ ಅಡಿಗೆಯ ಸಿದ್ಧತೆಗೆಂದು ಎಲ್ಲರೂ ಮನೆಯತ್ತ ಓಡಿದರು.

ವಿನ್ಸೆಂಟ್, ಅವರನ್ನು ಸಂಜೆಗೆ ಉಪದೇಶ ಕೇಳಲು ಬರಬೇಕೆಂದು ತಾಕೀತು ಮಾಡಿದ. ಅವರೆಲ್ಲರೂ ಬರುವುದಾಗಿ ಭರವಸೆ ಕೊಟ್ಟು ಓಡಿದರು. ವರ್ನೆಯ ಮಗಳು ವಿನ್ಸೆಂಟ್‌ನನ್ನು ಊಟಕ್ಕೆ ಆಹ್ವಾನಿಸಿದಳು. ಸಂತೋಷದಿಂದಲೇ ಒಪ್ಪಿಕೊಂಡು, ಖಂಡಿತ ಬರುವುದಾಗಿ ಭರವಸೆ ನೀಡಿದ, ವಿನ್ಸೆಂಟ್. ವರ್ನೆಯ ಮನೆಯಲ್ಲಿ ಎರಡು ಕೊಠಡಿಗಳಿದ್ದವು. ಒಂದರಲ್ಲಿ ಒಲೆ, ಅಡಿಗೆ ಸಾಮಾನು, ಊಟದ ವಸ್ತುಗಳು ಇದ್ದವು. ಮತ್ತೊಂದು ಕೊಠಡಿಯಲ್ಲಿ ಮಲಗುವುದಕ್ಕಾಗಿ ಹಾಸಿಗೆಗಳಿದ್ದವು. ವರ್ನೆ, ಇದ್ದುದರಲ್ಲಿ ಸಾಕಷ್ಟು ಅನುಕೂಲವಂತನಾಗಿದ್ದರೂ ಸೋಪನ್ನು ಬಳಸುತ್ತಿರಲಿಲ್ಲ. 'ಸೋಪು' ಶ್ರೀಮಂತಿಕೆ, ಐಷೋರಾಮದ ಸಂಕೇತವಾಗಿತ್ತು, ಬೊರೈನ್‌ರಿಗೆ. ಹುಡುಗರು ಗಣಿಯೊಳಗೆ ಇಳಿಯುವುದನ್ನು, ಹುಡುಗಿಯರು ಇದ್ದಿಲ ಗುಡ್ಡವನ್ನು ಏರುವುದನ್ನು ಮೊದಲು ಮಾಡುವ ದಿನದಿಂದ ಹಿಡಿದು, ಸಾಯುವವರೆಗೆ, ಅವರ ಮುಖಗಳಿಗೆ ಅಂಟಿಕೊಂಡ ಇದ್ದಿಲ ಪುಡಿಯನ್ನು ಶುಚಿಮಾಡಲು ಸಾಧ್ಯವೇ ಆಗುವುದಿಲ್ಲ. ಇದ್ದಿಲ ಪುಡಿಯೂ ಅವರ ಸಮಾಧಿಗಳಲ್ಲಿ ಅವರೊಂದಿಗೇ ಉಳಿಯುತ್ತದೆ.

ವಿನ್ಸೆಂಟ್‌ಗಾಗಿ ವರ್ನೆಯ ಮಗಳು ಹೊರಗಡೆ ಒಂದು ಪಾತ್ರೆಯಲ್ಲಿ ತಣ್ಣೀರನ್ನು ಇರಿಸಿದ್ದಳು. ವಿನ್ಸೆಂಟ್ ಚೆನ್ನಾಗಿ ಉಜ್ಜಿ ಉಜ್ಜಿ ಕೈ ಕಾಲುಗಳನ್ನು ತೊಳೆದು ಕೊಂಡನಾದರೂ, ಎಷ್ಟರಮಟ್ಟಿಗೆ ಶುಭ್ರವಾಯಿತೋ ತಿಳಿಯದಾಯಿತು.

ಆದರೆ ತನಗೆ ಎದುರಾಗಿ ಕುಳಿತಿದ್ದ ವರ್ನೆಯ ಮಗಳ ಮುಖವನ್ನು ನೋಡಿದ. ಇದ್ದಿಲ ಧೂಳು, ಹೊಗೆಯ ಕಪ್ಪು ಕರೆಗಳು ಕಾಣಿಸುತ್ತಿದ್ದವು. ಪೂರ್ತಿಯಾಗಿ ಅವು ತೊಳೆದು ಹೋಗಿರಲಿಲ್ಲ. ಬಹುಶಃ ತನ್ನ ಮುಖದ ಮೇಲೂ ಅದೇ ರೀತಿಯ ಕರೆಗಳು ಇದ್ದಿರಬೇಕೆಂದು ಭಾವಿಸಿದ. ಊಟದಷ್ಟೂ ಹೊತ್ತು ಅವಳು ತಮಾಶೆಯಾಗಿ ಮಾತಾಡುತ್ತಲೇ ಇದ್ದಳು.

"ಮಿಸ್ಟರ್ ವಿನ್ಸೆಂಟ್, ನೀನು ಇಲ್ಲಿಗೆ ಬಂದು ಹೆಚ್ಚು ಕಡಿಮೆ ಎರಡು ತಿಂಗಳಾಗಿರಬೇಕು. ಆದರೂ ನಿನಗೆ ಇನ್ನೂ ಬೋರಿನೇಜ್ ಪೂರ್ತಿಯಾಗಿ ಅರ್ಥ ಆಗಿಲ್ಲ!"

"ನಿಜ ಮಿಸ್ಟರ್ ವರ್ನೆ. ಆದರೆ ಇಲ್ಲಿನ ಜನರನ್ನು ನಿಧಾನವಾಗಿ ಅರ್ಥಮಾಡಿಕೊಳ್ಳುತ್ತಿದ್ದೇನೆ" – ವಿನಯದೊಂದಿಗೆ ಹೇಳಿದ ವಿನ್ಸೆಂಟ್.

"ನಾನು ಹಾಗೆ ಹೇಳಲಿಲ್ಲ." ಮೂಗಿನ ಹೊಳ್ಳೆಯಿಂದ ಹೊರ ಚಾಚಿದ್ದ ಕೂದಲನ್ನು ಕಿತ್ತು ಅದನ್ನೇ ನೋಡುತ್ತಾ "ನೀನು ಇಲ್ಲಿನ ಬದುಕನ್ನು ಮೇಲ್ಪದರದಿಂದ ಮಾತ್ರ ಗಮನಿಸಿದ್ದೀಯ. ಅದು ಮುಖ್ಯವಲ್ಲ. ನಾವು ಭೂಮಿ ಮೇಲೆ ಮಲಗುತ್ತೇವೆ, ಅಷ್ಟೇ! ಆದರೆ ನಮ್ಮ ನಿಜವಾದ ಬದುಕುಗಳು ಕಾಣುವುದು ಗಣಿಗಳ ಆಳಕ್ಕೆ ಇಳಿದಾಗ ಮಾತ್ರ. ನಾವು ಹೇಗೆ ದುಡೀತಿದ್ದೀವಿ, ನೋಡ್ತಿದ್ದೀ ಅಲ್ಲ.' ಬೆಳಗಿನ ಜಾವ ಮೂರುಗಂಟೆಯಿಂದ ಮಧ್ಯಾಹ್ನ ನಾಲ್ಕು ಗಂಟೆವರೆಗೆ ಬಿಡುವಿಲ್ಲದೆ ದುಡಿಯುತ್ತೇವೆ" ಎಂದು ಮಾತು ಮುಂದುವರೆಸಿದ್ದ.

"ನಾನೂ ಕೆಳಗಿಳಿದು ನೋಡಲು ಉತ್ಸುಕನಾಗಿದ್ದೇನೆ. ಕಂಪೆನಿ ನನಗೆ ಅನುಮತಿ ನೀಡುವುದೇನು?"

"ನಿನಗೋಸ್ಕರ ನಾನು ಈ ಮೊದಲೇ ವಿಚಾರಿಸಿ ಇಟ್ಟಿದ್ದೇನೆ. ಹೇಗಿದ್ದರೂ ನಾನು ನಾಳೆ ಇನ್ಸ್ಪೆಕ್ಷನ್‌ಗೋಸ್ಕರ ಮಾರ್ಕಾಸ್ ಗಣಿಯೊಳಗೆ ಇಳಿಯಲಿದ್ದೇನೆ. ಭದ್ರತಾ ವ್ಯವಸ್ಥೆಯನ್ನು ಪರಿಶೀಲಿಸಬೇಕಾಗಿದೆ. ನೀನು ಮೂರುಗಂಟೆಗೆ ಒಂದು ಹದಿನೈದು ನಿಮಿಷ ಮುಂಚೆ ಡೆನಿಸ್ ಮನೆಯ ಮುಂದೆ ಇದ್ದರೆ ನಾನು ಬಂದು ಕರೆದುಕೊಂಡು ಹೋಗುತ್ತೇನೆ" – ಸಕ್ಕರೆಯ ತುಂಡೊಂದನ್ನು ಬಾಯಲ್ಲಿರಿಸಿಕೊಂಡು ಕಾಫಿಯ ಕಹಿಯನ್ನು ಅರಗಿಸಿಕೊಳ್ಳುತ್ತಾ ಹೇಳಿದ.

ಜಾಕ್ವೆಸ್‌ನ ಇಡೀ ಕುಟುಂಬ ಅವನನ್ನು ಬೀಳ್ಕೊಡಲು ಅವನ ಜೊತೆ ಬಂತು. ಆದರೆ ಅಲ್ಲಿಯವರೆಗೂ ಚೆನ್ನಾಗಿಯೇ ಇದ್ದ ಜಾಕ್ವೆಸ್‌ಗೆ ಒಂದೇ ಸಮನೆ ಕೆಮ್ಮು ಆರಂಭವಾಗಿ ತತ್ತರಿಸಿ ಹೋಗುತ್ತಿದ್ದ ಕಾರಣ ಮನೆಗೆ ಹಿಂತಿರುಗಬೇಕಾಯಿತು. ವಿನ್ಸೆಂಟ್ ಸಲೋನ್ ಬಳಿಗೆ ಬಂದಾಗ, ಡೆಕ್ರುಖ್ ಆಗಲೇ ಅಲ್ಲಿ ಹಾಜರಾಗಿದ್ದ. ಊನವಾಗಿದ್ದ ಕಾಲನ್ನು ಎಳೆದುಕೊಳ್ಳುತ್ತಾ ಸ್ಟೋವ್ ರಿಪೇರಿ ಮಾಡುತ್ತಾ ಕುಳಿತಿದ್ದ.

"ಆಹ್ ಗುಡ್ ಈವಿನಿಂಗ್ ಮಿಸ್ಟರ್ ವಿನ್ಸೆಂಟ್" ಮುಗುಳ್ನಕ್ಕು ಹೇಳಿದ. "ನೋಡು ಈ ಸ್ಟೋವ್ ಬಹಳ ಹಳೇದು. ಹಿಂದೆ ಪಾರ್ಟಿ ಗೀರ್ಟಿ ಕೊಡುವಾಗಲೆಲ್ಲ ನಾನೇ ಹಚ್ಚುತ್ತಿದ್ದೆ. ನನ್ನ ಬಿಟ್ಟರೆ ಯಾರಿಗೂ ಈ ಸ್ಟೋವ್ ಹಚ್ಚೋಕೆ ಬರೊಲ್ಲ" –ಎಂದು ಮಾತು ಮುಂದುವರಿಸಿದ.

ಚೀಲದಲ್ಲಿದ್ದ ಇದ್ದಿಲು ಒದ್ದೆಯಾಗಿತ್ತು. ಅದರಲ್ಲಿದ್ದುದು, ಇದ್ದಿಲು ಭಾಗ ಸ್ವಲ್ಪ ಮಾತ್ರವೇ! ಆದರೂ ಡೆಕ್ರುಖ್‌ನ ಕುಶಲತೆಯಿಂದ ಒಲೆ ಹತ್ತಿಕೊಂಡು ಉರಿಯಿತು. ಬಲವಾಗಿ, ತನ್ನ ಶಕ್ತಿಯನ್ನೆಲ್ಲ ಹಾಕಿ ಗಾಳಿ ಊದಿದ. ಒತ್ತಡಕ್ಕೆ, ಒಳಗೆ ರಕ್ತ ತಲೆಗೇರಿ, ಬೋಳಾಗಿ ಕೆಂಪಗಿದ್ದ ತಲೆಯಭಾಗ ಮತ್ತಷ್ಟು ಕೆಂಪಾಯಿತು. ಹೊಗೆ, ಧೂಳು ಸೇರಿ ಆ ಭಾಗ ಮತ್ತಷ್ಟು ಕೊಳೆಯಾಯಿತು.

ಸರಿಸುಮಾರು ಗಣಿ ಕಾರ್ಮಿಕರ ಎಲ್ಲ ಕುಟುಂಬಗಳೂ ಅಲ್ಲಿ ಸೇರಿದ್ದವು. ವಿನ್ಸೆಂಟ್‌ನ ಪ್ರಪ್ರಥಮ ಉಪದೇಶವನ್ನು ಕೇಳಲು ಉತ್ಸುಕರಾಗಿದ್ದರು. ವಿನ್ಸೆಂಟ್ ತನ್ನ ಗುಡಿ ಅಥವಾ ದೇವಾಲಯದಲ್ಲಿ ಮೊದಲ ಬಾರಿಗೆ ಸಭೆಯನ್ನು ಉದ್ದೇಶಿಸಿ ತತ್ವಗಳನ್ನು ವಿವರಿಸಲಿದ್ದ. ಸುಮಾರು ಮುನ್ನೂರಕ್ಕೂ ಹೆಚ್ಚು ಮಂದಿ ಸೇರಿದ್ದರು: ಬೆಂಚುಗಳೆಲ್ಲ ತುಂಬಿದ್ದವು. ಆದ್ದರಿಂದ ತಮ್ಮ ಮನೆಗಳಿಂದಲೇ ಬೆಂಚ್‌ಗಳನ್ನು, ಚೇರ್‌ಗಳನ್ನು ತಂದುಕೊಂಡಿದ್ದರು. ವಿನ್ಸೆಂಟ್ ತುಂಬಾ ಪ್ರಾಮಾಣಿಕತೆಯಿಂದ, ನಂಬಿಕೆಯಿಂದ ಸೆರ್‌ಮನ್‌ಗಳನ್ನು ನೀಡಿದ. ಕೇಳುತ್ತಿದ್ದ ಜನ ಮೊಗದಲ್ಲಿನ ವಿಷಾದಭಾವ ಸ್ವಲ್ಪ ಸ್ವಲ್ಪ ಮರೆಯಾಗಿತ್ತು.

"ಇದೊಂದು ಪುರಾತನವೂ ಮತ್ತು ಒಳ್ಳೆಯದೂ ಆದ ನಂಬಿಕೆ" ಎಂದು ಸಭೆಯನ್ನು ಉದ್ದೇಶಿಸಿ ಹೇಳಿ ಮಾತು ಮುಂದುವರೆಸಿದ. "ನಾವು ಈ ಭೂಮಿಯ

ಮೇಲೆ ಪರಕೀಯರು, ಅಪರಿಚಿತರು, ನಿಜ. ಆದರೂ ನಾವು ಏಕಾಂಗಿಗಳಲ್ಲ, ಒಂಟಿಯಲ್ಲ ನಮ್ಮೊಡನೆ ನಮ್ಮ ಪಿತನಿದ್ದಾನೆ. ನಾವು ಯಾತ್ರಾರ್ಥಿಗಳು. ನಮ್ಮ ಪ್ರಯಾಣ ಭೂಮಿಯಿಂದ ಸ್ವರ್ಗದ ಕಡೆಗೆ ಸಾಗಬೇಕಿದೆ.

"ಸಂತೋಷಕ್ಕಿಂತ ದುಃಖ ಒಳ್ಳೆಯದು. ಸಂಭ್ರಮದಲ್ಲೂ ಹೃದಯ ನೊಂದಿರುತ್ತದೆ. ಹಬ್ಬ, ಸಂತೋಷಕೂಟಗಳಿಂದ ತುಂಬಿದ ಮನೆಗೆ ಹೋಗುವುದಕ್ಕಿಂತ ಶೋಕಾವೃತ ಮನೆಗೆ ಹೋಗುವುದೇ ಒಳ್ಳೆಯದು. ಯಾಕೆಂದರೆ ನೋವು, ದುಃಖಗಳಿಂದ ಹೃದಯ ಮೆದುವಾಗುತ್ತದೆ. ಸ್ಪಂದನ ಶೀಲವಾಗುತ್ತದೆ.

"ಏಸುವನ್ನು ನಂಬಿದವರಿಗೆ ದುಃಖವೆಂಬುದೇ ಇರುವುದಿಲ್ಲ. ಅಕಸ್ಮಾತ್ ದುಃಖವಿದ್ದರೂ ಭರವಸೆಯೂ ಜೊತೆಯಾಗಿಯೇ ಇರುತ್ತದೆ, ಮತ್ತೆ ಮತ್ತೆ ಹುಟ್ಟುವ ಕ್ರಿಯೆ ಮುಂದುವರೆಯುತ್ತದೆ. ಕತ್ತಲಿನಿಂದ ಬೆಳಕಿನೆಡೆಗೆ ಸಾಗುತ್ತಲೇ ಇರುತ್ತೇವೆ.

ತಂದೆಯೇ ನಮ್ಮನ್ನು ಕೆಡುಕಿನಿಂದ ದೂರವಿಡು. ಸಿರಿವಂತಿಕೆಯಾಗಲೀ ಬಡತನವಾಗಲೀ ನೀಡದೆ, ನಮಗೆ ಲಭ್ಯವೆನಿಸುವಷ್ಟು ಮಾತ್ರ ಊಟಕೊಡು.

"ಆಮೆನ್"

ಮೇಡಂ ಡೆಕ್ರುಖ್ ಅವನ ಬಳಿ ಬಂದವರಲ್ಲಿ ಮೊದಲಿಗಳಾದಳು. ಅವಳ ಹೃದಯ ತುಂಬಿ ಬಂತು. ಗಂಟಲು ಗದ್ಗದವಾಯಿತು. "ವಿನ್ಸೆಂಟ್ ನನ್ನ ಕಷ್ಟಗಳು ಎಷ್ಟಿತ್ತೆಂದರೆ, ದೇವರೇ ಬೇಡವೆಂದು ದೂರವಿರಿಸಿದ್ದೆ. ಆದರೆ ನೀನು ಈಗ ಅವನನ್ನು ನನ್ನ ಬಳಿಗೆ ತಂದಿದ್ದೀಯ. ಅದಕ್ಕಾಗಿ ನಿನಗೆ ನಾನು ಕೃತಜ್ಞಳು."

ಅವರೆಲ್ಲ ಹೋದಮೇಲೆ ವಿನ್ಸೆಂಟ್ ಸಲೋನ್‌ನ ಬಾಗಿಲು ಹಾಕಿದ. ಯೋಚಿಸುತ್ತಲೇ ಹೆಜ್ಜೆ ಹಾಕಿ ಡೆನಿಸ್ ಮನೆ ತಲುಪಿದ. ಅಂದಿನ ಅನುಭವದಿಂದ ಅವನಿಗೆ ಬೊರೈನ್ಸ್‌ನ ಮಂದಿ ತನಗೆ ಹತ್ತಿರವಾಗಿದ್ದಾರೆ ಎನಿಸಿತು. ತನ್ನೊಂದಿಗೆ ಸಲುಗೆ ಏರ್ಪಟ್ಟಂತೆ ಭಾಸವಾಯಿತು. ಅವನಲ್ಲಿ ಪೂರ್ತಿಯಾಗಿ ವಿಶ್ವಾಸವಿರಿಸಿದ್ದು ಗೋಚರಿಸಿತು. ಈಗ ಅವನನ್ನು ಅವರೆಲ್ಲ ದೇವರ ಸಂದೇಶವಾಹಕನೆಂದು ಪೂರ್ತಿಯಾಗಿ ಒಪ್ಪಿಕೊಂಡಿದ್ದರು. ಈ ಬದಲಾವಣೆ ಆರಂಭಿಸಿದ್ದಾನೆಂದೇ?.... ಇಲ್ಲ. ಗಣಿಕಾರ್ಮಿಕರಿಗೆ ಇದೆಲ್ಲ ಬೇಕಾಗಿಯೇ ಇರಲಿಲ್ಲ. ಅವನನ್ನು ಈ ರೀತಿ ಉಪದೇಶ ನೀಡಲೆಂದೇ ನೇಮಕಮಾಡಿರುವ ವಿಷಯವೂ ತಿಳಿದಿಲ್ಲ; ವಿನ್ಸೆಂಟ್ ಅದರ ಬಗ್ಗೆ ಪ್ರಸ್ತಾಪಿಸಲೂ ಇಲ್ಲ. ಅವನು ದೇವರ ಕುರಿತು ಎಲ್ಲರಿಗೂ ಆಪ್ತವಾಗುವಂತೆ, ನೊಂದಮನಗಳು ತಣಿಯುವಂತೆ ಸುಂದರವಾದ ಕುತೂಹಲಕರವಾದ, ನೀತಿ ತುಂಬಿದ ಸೆರ್‌ಮನ್‌ಗಳನ್ನು ಪಾಳುಬಿದ್ದ ಗುಡಿಸಲುಗಳಲ್ಲಿ, ಕುದುರೆ ಲಾಯಗಳಲ್ಲಿ, ಎಲ್ಲೆಂದರೆ ಅಲ್ಲಿಯೇ ನೀಡಿ ಎಲ್ಲರ ಮನಗೆದ್ದಿದ್ದ.

ವಿನ್ಸೆಂಟ್ ಮನೆ ತಲುಪುವ ಹೊತ್ತಿಗೆ ಡೆನಿಸ್ ಆಗಲೇ ಅಡಿಗೆ ಮನೆ ಸಮೀಪದ ಒಂದು ಜಾಗದಲ್ಲಿ ಮಲಗಿಬಿಟ್ಟಿದ್ದ. ಆದರೆ ಬೇಕರಿಯಿಂದ ಬಿಸಿರೊಟ್ಟಿಯ ವಾಸನೆ ಮೂಗಿಗೆ ಬಡಿಯುತ್ತಿತ್ತು. ಅಡಿಗೆಮನೆಗೆ ಸೇರಿದಂತೆ ಮುಚ್ಚಿದ ಬಾವಿಯೊಂದಿತ್ತು. ವಿನ್ಸೆಂಟ್ ಬಾವಿಯಿಂದ ನೀರು ಸೇದಿಕೊಂಡು, ಒಂದು ಪಾತ್ರೆಯಲ್ಲಿ ತುಂಬಿಕೊಂಡು ಮೇಲೆ ಹೋಗಿ ತನ್ನ ಕೋಣೆಯಲ್ಲಿದ್ದ ಕನ್ನಡಿಯಲ್ಲಿ ಮುಖ ನೋಡಿಕೊಂಡ.

ವರ್ನೆಯ ಮನೆಯಲ್ಲಿ ತಾನು ಊಹಿಸಿದ್ದು ಸರಿಯಾಗಿತ್ತು. ಮುಖದ ಮೇಲೆ ಇದ್ದಿಲಿನ ಕರೆಗಳು ಇದ್ದವು. ಈ ಕರೆಗಳನ್ನು ಉಳಿಸಿಕೊಂಡೇ ಚರ್ಚ್ ಪ್ರತಿಷ್ಠಾಪನೆ ಮಾಡಿದ್ದನ್ನು ನೆನಪಿಸಿಕೊಂಡು ತನ್ನಲ್ಲೇ ನಕ್ಕ. ತನ್ನ ತಂದೆ ಚಿಕ್ಕಪ್ಪಂದಿರು ತನ್ನನ್ನು ಈ ಸ್ಥಿತಿಯಲ್ಲಿ ನೋಡಿದರೆ ಗಾಭರಿಗೊಳ್ಳುತ್ತಿದ್ದುದರಲ್ಲಿ ಸಂಶಯವಿಲ್ಲ' ಎಂದುಕೊಂಡ.

ಕೈಗಳನ್ನು ತಣ್ಣನೆಯ ನೀರಿನಲ್ಲಿ ಅದ್ದಿ, ಸೋಪು ಹಾಕಿ ಚೆನ್ನಾಗಿ ಉಜ್ಜಿಕೊಂಡ. ಮುಖಕ್ಕೂ ಸೋಪು ಹಚ್ಚಿಕೊಳ್ಳಬೇಕೆಂದುಕೊಳ್ಳುತ್ತಿರುವಾಗಲೇ ಏನೋ ನೆನಪಾಗಿ, ಕನ್ನಡಿ ನೋಡಿಕೊಂಡ. ಹುಬ್ಬುಗಳ ಮೇಲೆ, ಗಲ್ಲದ ಮೇಲೆ ಹಣೆಯ ಮೇಲೆ, ಕಣ್ಣುರೆಪ್ಪೆಯ ಮೇಲೆಲ್ಲ ಇದ್ದಿಲಿನ ಪುಡಿ ಮೆತ್ತಿಕೊಂಡಿತ್ತು.

"ಓಹ್ ಇದಕ್ಕೇ ಜನ ನನ್ನನ್ನು ಒಪ್ಪಿಕೊಂಡಿರಬೇಕು. ಈಗ ನಾನೂ ಅವರಲ್ಲಿ ಒಬ್ಬನಾದೆ" – ಎಂದು ಗಟ್ಟಿಯಾಗಿ ಹೇಳಿಕೊಂಡ.

ಕೈಗಳನ್ನು ಶುದ್ಧ ನೀರಿನಿಂದ ತೊಳೆದುಕೊಂಡನಾದರೂ ಮುಖವನ್ನು ಹಾಗೆಯೇ ಉಳಿಸಿಕೊಂಡ. ಬೋರಿನೇಜ್‌ನಲ್ಲಿ ಇರುವಷ್ಟು ದಿನವೂ ಪ್ರತಿದಿನಾ, ಅವರಂತೆಯೇ ಕಾಣಲು ಇದ್ದಿಲಿನ ಪುಡಿಯನ್ನು ಹಚ್ಚಿಕೊಳ್ಳುತ್ತಿದ್ದ.

-೧೨-

ಮರುದಿನ ಬೆಳಿಗ್ಗೆ ಎರಡೂ ಮೂವತ್ತಕ್ಕೇ ಎದ್ದ. ಡೆನಿಸ್‌ನ ಅಡುಗೆ ಕೋಣೆಯಲ್ಲಿದ್ದ ಒಂದು ಚೂರು ಒಣ ಬ್ರೆಡ್ಡನ್ನು ತಿಂದ. ಜಾಕ್ವೆಸ್ ಹೇಳಿದ್ದ ಸಮಯಕ್ಕೆ ಸರಿಯಾಗಿ ಮನೆಯ ಮುಂದಿದ್ದ. ರಾತ್ರಿಯೆಲ್ಲ ಸಾಕಷ್ಟು ಮಂಜು ಸುರಿದಿತ್ತು. ಮಾರ್ಕಾಸ್‌ಗೆ ಹೋಗುವ ದಾರಿ ಸಾಕಷ್ಟು ಹಾಳಾಗಿತ್ತು, ನಡೆಯುತ್ತಿದ್ದಂತೆ, ಕಾರ್ಮಿಕರೂ ಕೂಡಾ ಬೇರೆ ಬೇರೆ ದಿಕ್ಕುಗಳಿಂದ ಆತುರಾತುರವಾಗಿ ಹೆಜ್ಜೆ ಹಾಕುತ್ತಿದ್ದುದು ಕಾಣಿಸಿತು. ವಿಪರೀತ ಚಳಿಯಿತ್ತು. ಕೆಲಸಗಾರರು ತೆಳುವಾಗಿದ್ದ ಕೋಟುಗಳನ್ನೇ ಧರಿಸಿದ್ದರು. ಚಳಿಯಾಗದಿರಲು ಕೈಗಳನ್ನು ಕಟ್ಟಿಕೊಂಡು ಎದೆಗೆ ಆನಿಸಿಕೊಂಡಿದ್ದರು.

ಜಾಕ್ವೆಸ್ ಮೊದಲಿಗೆ ಒಂದು ಕೊಠಡಿಯೊಳಕ್ಕೆ ಕರೆದೊಯ್ದು ಅಲ್ಲಿ ರ್‍ಯಾಕ್‌ಗಳಲ್ಲಿ ಬೇರೆ ಬೇರೆ ಸಂಖ್ಯೆಗಳೊಂದಿಗೆ ಹಲವು ಸೀಮೆಎಣ್ಣೆ ದೀಪಗಳು ಉರಿಯುತ್ತಿದ್ದವು. "ಅಕಸ್ಮಾತ್ತಾಗಿ, ಗಣಿಯೊಳಗೆ ದುರಂತ ಸಂಭವಿಸಿದರೆ, ಇಲ್ಲಿ ಕಾಣದ ದೀಪದ ಸಂಖ್ಯೆಯಿಂದಲೇ, ಯಾವ ಯಾವ ಕೆಲಸಗಾರರು ಅಪಾಯದಲ್ಲಿ ಸಿಲುಕಿದ್ದಾರೆ ಎಂಬುದನ್ನು ಹೇಳಬಹುದು."

ಕಾರ್ಮಿಕರು ದೀಪಗಳನ್ನು ಕೈಲಿ ಹಿಡಿದು ಆತುರಾತುರವಾಗಿ ಎತ್ತುವ ಯಂತ್ರವಿದ್ದ ಕಟ್ಟಡದ ಬಳಿಗೆ ಓಡಿದರು. ವಿನ್ಸೆಂಟ್ ಮತ್ತು ಜಾಕ್ವೆಸ್ ಇಬ್ಬರೂ ಅಲ್ಲಿಗೆ ಬಂದು ಸೇರಿದರು. ಗಣಿಯೊಳಗೆ ಇಳಿಯುಲು ಪಂಜರದಂತಹ ಯಂತ್ರವಿತ್ತು. ಈ ಪಂಜರದಲ್ಲಿಯೂ ಒಂದರ ಮೇಲೊಂದರಂತೆ ಆರು ಬೋಗಿಗಳಿದ್ದವು. ಒಂದೊಂದು ಬೋಗಿಯಲ್ಲಿಯೂ ಇದ್ದಿಲನ್ನು ತುಂಬಿಕೊಂಡು ತರಲು ಒಂದೊಂದು ಟ್ರಕ್ ಇತ್ತು. ಪ್ರತಿಯೊಂದು ಬೋಗಿಯಲ್ಲೂ ಟ್ರಕ್‌ನ ಜೊತೆ ಒಂದೈದು ಮಂದಿ ಕೆಲಸಗಾರರು

ಕುಕ್ಕರಗಾಲಿನ ಮೇಲೆ ಕೂರುವಷ್ಟು ಮಾತ್ರ ಸ್ಥಳವಿತ್ತು. ಒಬ್ಬರಿಗೊಬ್ಬರು ಒತ್ತಿಕೊಂಡು ಕುಳಿತು ಕೆಳಕ್ಕೆ ಇಳಿಯಬೇಕಿತ್ತು.

ಜಾಕ್ವೆಸ್ ಫೋರ್‌ಮನ್ ಆಗಿದ್ದುದರಿಂದ, ಮೇಲಿನ ಬೋಗಿಯಲ್ಲಿ ತಾನು, ವಿನ್ಸೆಂಟ್ ಮತ್ತೊಬ್ಬರು ಮಾತ್ರವೇ ಇದ್ದರು. ಅವರೂ ಕೂಡಾ ಕಷ್ಟಪಟ್ಟುಕೊಂಡೇ ಕುಳಿತರು. ಬೆರಳುಗಳು ಹಿಡಿದುಕೊಂಡಂತಾಗಿದ್ದವು. ತಲೆಗಳು ಮೇಲಿನ ತಂತಿಗಳಿಗೆ ತಾಕುತ್ತಿದ್ದವು.

"ಕೈಗಳನ್ನು ನೇರವಾಗಿ ಮುಂದಕ್ಕಿಟ್ಟುಕೋ ವಿನ್ಸೆಂಟ್! ಹೋಗುವಾಗ ಅಕಸ್ಮಾತ್ ಗೋಡೆಗೆ ತಗುಲಿದರೆ, ಕತೆ ಮುಗಿದಂತೆಯೇ!" ಜಾಕ್ವೆಸ್ ಎಚ್ಚರಿಸಿದ.

ಸಂಕೇತ ಸಿಕ್ಕಿದ್ದೇ, ಸ್ಟೀಲ್ ಹಳಿಗಳ ಮೇಲೆ ಪಂಜರ ಇಳಿಯತೊಡಗಿತು. ಪಂಜರಕ್ಕೂ, ಅದು ಇಳಿಯುತ್ತಿದ್ದ ಗಣಿಯ ಸುತ್ತಳತೆಗೂ ನಡುವೆ ಇದ್ದ ಅಂತರ ಒಂದು ಅಂಗುಲಕ್ಕೂ ಕಡಿಮೆಯಿತ್ತು. ವಿನ್ಸೆಂಟ್ ಅರಿವಿಲ್ಲದೇ ನಡುಗಿದ. ಅರ್ಧಮೈಲಿಯ ವರೆಗೂ ಬರೀ ಕತ್ತಲು. ಅಕಸ್ಮಾತ್ತಾಗಿ ಏನಾದರೂ ಸಂಭವಿಸಿದರೆ, ಸಾವು ಕಟ್ಟಿಟ್ಟ ಬುತ್ತಿ. ಅದೊಂದು ರೀತಿಯ ಭಯಂಕರ ಅನುಭವವಾಗಿತ್ತು.

ಕಪ್ಪು ರಂಧ್ರದ ಮೂಲಕ ಯಾವುದೋ ಅಜ್ಞಾತವಾದ ಪಾತಾಳ ಪ್ರದೇಶಕ್ಕೆ ಹೋಗುತ್ತಿದ್ದಂತೆನಿಸಿತು. ಸ್ವಲ್ಪ ಹೊತ್ತಿನ ನಂತರ ಧೈರ್ಯ ತಂದುಕೊಂಡ. ಆಕಸ್ಮಿಕ ಅಪಘಾತಗಳ ಸಂಭವ ಇಲ್ಲ, ಯಾಕೆಂದರೆ ಈ ಎರಡೂ ತಿಂಗಳಲ್ಲಿ ಯಾವುದೇ ಅನಾಹುತ ನಡೆದಿಲ್ಲ. ಅಂದಮೇಲೆ, ಸಾಕಷ್ಟು ಸುರಕ್ಷತೆ ಇದೆ ಎಂದಾಯಿತು. ಆದರೂ ಆರುವ ಮೊದಲು ಫಡಫಡಿಸಿ ಉರಿಯುತ್ತಿದ್ದ ದೀಪದ ದೃಶ್ಯ, ಅವನಲ್ಲಿ ಅವ್ಯಕ್ತ ಭೀತಿಯನ್ನು ಉಳಿಸಿತ್ತು.

ತನಗಾಗುತ್ತಿದ್ದ ಭಯದ ಬಗ್ಗೆ ಜಾಕ್ವೆಸ್‌ಗೆ ಹೇಳಿದ. "ಇದು ಪ್ರತಿಯೊಬ್ಬ ಗಣಿಕಾರ್ಮಿಕನ ಅನುಭವ" ಎಂದ.

"ಅಂದರೆ ಇದೇ ರೀತಿ ಆಗ್ತಾ ಆಗ್ತಾ ಅವರಿಗೆ ಅಭ್ಯಾಸ ಆಗಿಬಿಡುತ್ತಲ್ಲ!"

"ಇಲ್ಲ. ಖಂಡಿತ ಇಲ್ಲ. ಇಂಥ ಭಯವನ್ನು ಎಂದಿಗೂ ಗೆಲ್ಲಲಾಗುವುದಿಲ್ಲ. ಮೊದಲ ದಿನದಿಂದ ಹಿಡಿದು ಸಾಯುವಗಳಿಗೆ ವರೆಗೆ ಭಯದ ಕಪಿಮುಷ್ಟಿಯಲ್ಲಿಯೇ ಬದುಕುತ್ತಾರೆ."

"ನೀವು?"

"ನಾನೂ ನನ್ನೊಳಗೆ, ನಿನ್ನ ಹಾಗೆಯೇ ಆತಂಕಗೊಳ್ಳುತ್ತಿರುತ್ತೇನೆ. ಈಗ ಸುಮಾರು ಮೂವತ್ತು ಮೂರು ವರ್ಷಗಳಿಂದ ಗಣಿಯೊಳಗೆ ಇಳಿಯುತ್ತಲೇ ಇದ್ದೇನೆ.

ಇಳಿಯುವ ಹಾದಿಯಲ್ಲಿ ಮುನ್ನೂರ ಐವತ್ತು ಅಡಿ ಆಳದಲ್ಲಿ, ಪಂಜರ ಒಂದು ಕ್ಷಣ ನಿಂತುಬಿಟ್ಟಿತು. ಮತ್ತೆ ಮರುಕ್ಷಣವೇ ಸರಸರನೆ ಇಳಿಯಲು ತೊಡಗಿತು. ವಿನ್ಸೆಂಟ್, ಪಂಜರ ಇಳಿಯುತ್ತಿದ್ದ ರಂಧ್ರದ ಗೋಡೆಯಿಂದ ಸ್ವಲ್ಪಸ್ವಲ್ಪವಾಗಿ ನೀರು ಜಿನುಗುತ್ತಿದ್ದುದನ್ನು ಗಮನಿಸಿ ನಡುಗಿದ. ತಲೆ ಎತ್ತಿ ನೋಡಿದಾಗ, ಬೆಳಕು ಒಂದು

ನಕ್ಷತ್ರದಷ್ಟು ಮಾತ್ರವೇ ಕಾಣಿಸಿತು. ಆರುನೂರ ಐವತ್ತು ಅಡಿ ಆಳದಲ್ಲಿ, ಅವರು ಆಚೆ ಬಂದರು. ಆದರೆ ಉಳಿದ ಕಾರ್ಮಿಕರು, ಇನ್ನೂ ಆಳಕ್ಕೆ ಹೋದರ. ಬಂಡೆಗಳನ್ನು ಕೊರೆದು ಕತ್ತರಿಸಿ ದಾರಿ ಮಾಡಲಾಗಿತ್ತು. ಕುಲುಮೆಯ ಬಿಸಿಯಲ್ಲಿ ಬೇಯುವಂತಾಗುತ್ತೇನೆಂದು ತಿಳಿದಿದ್ದ ವಿನ್ಸೆಂಟ್‌ಗೆ ತಾವು ಹೆಜ್ಜೆಹಾಕುತ್ತಿರುವ ಹಾದಿ ಸಾಕಷ್ಟು ತಂಪಾಗಿಯೇ ಇತ್ತು.

"ಮಿಸ್ಟರ್ ವರ್ನೆ, ಪರವಾಗಿಲ್ಲ, ಇಷ್ಟರ ಮಟ್ಟಿಗೆ ಚೆನ್ನಾಗಿಯೇ ಇದೆಯಲ್ಲ!" ಉದ್ಗರಿಸಿದ.

"ಈ ಆಳದಲ್ಲಿ ಯಾರೂ ಕೆಲಸ ಮಾಡುವುದಿಲ್ಲ. ಇಲ್ಲಿದ್ದ ಸಂಗ್ರಹ ಯಾವಾಗಲೋ ಖಾಲಿಯಾಗಿದೆ. ಮೇಲಿಂದ ಇಲ್ಲಿವರೆಗೆ ಸ್ವಲ್ಪ ಬೆಳಕು ಸಿಗುತ್ತೆ. ಆದರೆ ಇದರಿಂದ ಕಾರ್ಮಿಕರಿಗೆ ಏನೂ ಪ್ರಯೋಜನವಾಗುವುದಿಲ್ಲ."

ಇಬ್ಬರೂ ಟನಲ್‌ನಲ್ಲಿ ಸ್ವಲ್ಪ ದೂರ ನಡೆದರು. ನಂತರ ಜಾಕ್ವೆಸ್ ತಿರುಗಿ – "ನನ್ನನ್ನು ಹಿಂಬಾಲಿಸು ವಿನ್ಸೆಂಟ್" ಹುಷಾರಾಗಿ ಹೆಜ್ಜೆ ಹಾಕು. ನೀನು ಎಡವಿಬಿದ್ದರೆ, ನಾವೂ ಸಾಯುತ್ತೇವೆ."

ವಿನ್ಸೆಂಟ್‌ನ ಎದುರಿನಲ್ಲಿಯೇ, ಜಾಕ್ವೆಸ್ ಕೆಳಗೆ ಮರೆಯಾದ. ವಿನ್ಸೆಂಟ್ ಮುಗ್ಗರಿಸಿ ಮುಂದಕ್ಕೆ ಬಿದ್ದ. ಕೆಳಗಡೆ ರಂಧ್ರ ಇತ್ತು. ಅವನು ಏಣಿಯನ್ನು ಹಿಡಿದುಕೊಂಡ. ಕೆಳಗಿದ್ದ ಆ ರಂಧ್ರದಲ್ಲಿ ತೆಳ್ಳಗಿರುವ ಒಬ್ಬ ಮನುಷ್ಯನಿಗೆ ಮಾತ್ರ ಇಳಿಯಲು ಸಾಧ್ಯವಿತ್ತು. ಮೊದಲ ಐದು ಮೀಟರುಗಳಷ್ಟು ದೂರ ಕಠಿಣವಾಗಿರಲಿಲ್ಲ. ಆದರೆ ನಂತರದ್ದು ಬಹಳ ಪ್ರಯಾಸಕರವಾಗಿತ್ತು. ಜೊತೆಗೆ ಬಂಡೆಕಲ್ಲುಗಳಿಂದ ನೀರು ಜಿನುಗಿ ಹರಿಯತೊಡಗಿತು. ಕೆಸರು, ಮಣ್ಣು ಏಣಿಯ ಮೆಟ್ಟಿಲುಗಳ ಮೇಲೆಲ್ಲ ಸೋರತೊಡಗಿತು. ತನ್ನ ಮೇಲೂ ನೀರು ಬೀಳುತ್ತಿದ್ದುದನ್ನು ಗಮನಿಸಿದ.

ಕಡೆಗೆ, ತಳಭಾಗವನ್ನು ತಲುಪಿದರು. ಕೈಕಾಲುಗಳ ಮೇಲೆ ತೆವಳಿದರು. ತೆವಳುತ್ತಲೇ ಗುಹೆಯಂತಹ ಸ್ಥಳವನ್ನು (Les caches) ತಲುಪಿದರು. ಕಮಾನಿನಲ್ಲಿರುವ ಪಾರ್ಟಿಷನ್‌ಗಳಂತೆ ಸಣ್ಣ ಸಣ್ಣ ಕೋಣೆಗಳ ಸಾಲೊಂದಿತ್ತು. ಪ್ರತಿಯೊಂದು ಕೋಣೆಯಲ್ಲೂ ಐದು ಜನ ಗಣಿ ಕೂಲಿಕಾರರು ಸನಿಕೆ, ಪಿಕಾಸಿಗಳಿಂದ ಇದ್ದಿಲನ್ನು ಅಗೆದಗೆದು, ಬಾಚಿ ತೆಗೆಯುತ್ತಿದ್ದರು. ಮತ್ತೊಬ್ಬರು ಸಣ್ಣ ಸಣ್ಣ ಗಾಡಿಗಳಲ್ಲಿ ತುಂಬಿ ಅವುಗಳನ್ನು ಟ್ರ್ಯಾಕ್ ಮೇಲೆ ತಳ್ಳುತ್ತಿದ್ದರು.

ಇದ್ದಿಲು ಸಂಗ್ರಹಿಸುತ್ತಿದ್ದವರು ಒರಟಾದ ಕಪ್ಪು ಷರಾಯಿಗಳನ್ನು ಧರಿಸಿದ್ದರು. ಅಗೆದು ಹಾಕಿದ ಇದ್ದಿಲ ರಾಶಿಯಿಂದ ಇದ್ದಿಲನ್ನು ಮೊರದಾಕಾರಾದ ಗುದ್ದಲಿಯಿಂದ ಎತ್ತಿ ಎತ್ತಿ ಗಾಡಿಗೆ ತುಂಬುತ್ತಿದ್ದವರು ಸಾಮಾನ್ಯವಾಗಿ ಹುಡುಗರಾಗಿರುತ್ತಿದ್ದರು. ಮೂರು ಅಡಿ ಅಗಲದ ಮಾರ್ಗದ ಮೂಲಕ ಗಾಡಿಯನ್ನು ತಳ್ಳಿಕೊಂಡು ಹೋಗುವವರು ಹುಡುಗಿಯರಾಗಿರುತ್ತಿದ್ದರು. ಒರಟು ಕಪ್ಪು ಬಟ್ಟೆಯನ್ನು ಧರಿಸಿರುತ್ತಿದ್ದರು. ಅವರ ಈ ಉಡುಪು ಗಂಡಸರ ಉಡುಪಿನಂತೆಯೇ ಇರುತ್ತಿತ್ತು; ಜೊತೆಗೆ ದೇಹದ

ಮೇಲುಭಾಗವನ್ನು ಮುಚ್ಚಿರುತ್ತಿತ್ತು. ಕೋಣೆಗಳ ಛಾವಣಿಯಿಂದ ನೀರು ಒಸರುತ್ತಲೇ ಇರುತ್ತಿತ್ತು. ಅಲ್ಲಿದ್ದ ಬೆಳಕೆಂದರೆ ಕೈಲಿ ಹಿಡಿದಿದ್ದ ದೀಪದ ಮಂದ ಬೆಳಕು. ಸೀಮೆಎಣ್ಣೆ ಉಳಿಸುವುದಕ್ಕಾಗಿ ಬತ್ತಿಯನ್ನೂ ಏರಿಸುತ್ತಿರಲಿಲ್ಲ. ಒಳಗೆ ಹೆಚ್ಚುತ್ತಿದ್ದ ಧಗೆಯಿಂದಾಗಿ ಕಪ್ಪು ಬೆವರಿನ ಧಾರೆಗಳು ಕಾರ್ಮಿಕರ ಕೆನ್ನೆಯ ಮೇಲಿಂದ ಇಳಿಯುತ್ತಿದ್ದವು. ಮೊದಲ ಕೋಣೆಯಲ್ಲಿ ಕಾರ್ಮಿಕರು ನಿಂತು ಸನಿಕೆ, ಪಿಕಾಸಿಗಳಿಂದ ಕೆಲಸ ಮಾಡಲು ಸಾಧ್ಯವಾದದ್ದನ್ನು ಗಮನಿಸಿದ. ಆದರೆ ಮುಂದೆ ಮುಂದೆ ಹೋದಂತೆ, ಕೋಣೆಗಳಲ್ಲಿ ನಿಂತು ಕೆಲಸ ಮಾಡಲು ಸಾಧ್ಯವೇ ಇರಲಿಲ್ಲ. ಬೆನ್ನು ಕೆಳಗೆ ಹಾಕಿ, ಮಲಗಿ, ಮೊಣಕೈಗಳನ್ನೂರಿ ಪಿಕಾಸಿಗಳನ್ನು ಬೀಸಿ ಅಪ್ಪಳಿಸುತ್ತಿದ್ದರು. ಸಮಯ ಕಳೆದಂತೆ ಕೆಲಸಗಾರರ ದೇಹದ ಉಷ್ಣತೆ ಏರಿ, ಬಿಸಿಯುಸಿರು ಬಿಡುತ್ತಿದ್ದರು. ಉಸಿರಿನೊಂದಿಗೆ ಕಪ್ಪು ಧೂಳೂ ಅವರ ಬಾಯಿಗಳಿಂದ ಹೊರಹೊಮ್ಮುತ್ತಿತ್ತು. ಗಾಳಿಯಾಡದೆ, ಏದುಸಿರು ಬಿಡುತ್ತಿದ್ದರು.

"ಇವರು ಇಷ್ಟು ಹೊತ್ತು ಕೆಲಸ ಮಾಡಿ ಸಂಪಾದಿಸುವುದು ಎಷ್ಟು ಗೊತ್ತೇ? ಕೇವಲ ಎರಡೂವರೆ ಫ್ರಾಂಕ್! ಅದೂ ಇನ್ಸ್‌ಪೆಕ್ಟರ್, ಅವರು ಅಗೆದ ಇದ್ದಿಲು ನಿರೀಕ್ಷಿತ ಗುಣಮಟ್ಟದ್ದಾಗಿದೆ ಎಂದು ಪ್ರಮಾಣಿಸಿದರೆ! ಐದು ವರ್ಷದ ಹಿಂದೆ ಮೂರು ಫ್ರಾಂಕ್ ನೀಡುತ್ತಿದ್ದರು. ಆದರೆ ಈಗ ಅದರಲ್ಲೂ ಖೋತ ಮಾಡಲಾಗಿದೆ. ಅಂದಿನಿಂದ ಇಂದಿನವರೆಗೆ ಸಂಬಳದಲ್ಲಿ ಕಡಿತ ಮಾಡುತ್ತಲೇ ಇದ್ದಾರೆ."

ಜಾಕ್ವೆಸ್ ಒಮ್ಮೆ ಸುತ್ತಲೂ ಪರೀಕ್ಷಿಸಿದ. ಮರದ ಊರೆಗಂಬಗಳು ಸಡಿಲವಾಗಿದ್ದುದನ್ನು ಗಮನಿಸಿದ. ಕೆಲಸಗಾರರಿಗೆ ಎಚ್ಚರಿಸಿ ಹೇಳಿದ – ನೀವಿಟ್ಟಿರುವ ಈ ಊರೆಗಂಬಗಳು ಸರಿಯಾಗಿಲ್ಲ. ತುಂಬ ಸಡಿಲವಾಗಿವೆ. ಏನಾದರೂ ಹೆಚ್ಚು ಕಡಿಮೆಯಾದರೆ ಛಾವಣಿ ಪಾತಾಳ ಸೇರಿ ಬಿಡುತ್ತೆ."

ಕಾರ್ಮಿಕರ ನಾಯಕನೊಬ್ಬ ಹೇಳಿದ. "ಇಂಥ ಕೆಲಸ ಮಾಡೋಕೆ ಕಾಸುಕೊಟ್ಟರೆ ಸರಿಯಾಗಿ ಮಾಡ್ತೀವಿ. ಬರೀ ಈ ಆಧಾರ ಕಂಬಗಳ ಬಗ್ಗೇನೇ ಕೆಲಸ ಮಾಡ್ತಿದ್ದರೆ, ಇದ್ದಲು ಆಚೆ ತೆಗೆಯೋದು ಹೇಗೆ! ಮನೆಯಲ್ಲಿ ಉಪವಾಸ ಸಾಯೋಕಿಂತ ಈ ಬಂಡೆಗಳ ಅಡಿಗೆ ಬಿದ್ದು ಸಾಯೋದೇ ಮೇಲು."

ಕೊನೆಯಲ್ಲಿದ್ದ ಪುಟ್ಟ ಕೋಣೆಗೂ ಮುಂದೆ ಒಂದು ರಂಧ್ರವಿತ್ತು, ಕೆಳಗೆ, ಗಣಿಯ ಸಮತಲದ ನೆಲಭಾಗದಲ್ಲಿ! ಅದರಲ್ಲಿ ಇಳಿಯಲು ಏಣಿಯೂ ಇರಲಿಲ್ಲ. ಅಲ್ಲಲ್ಲಿ ಮರದ ದಿಮ್ಮಿಗಳನ್ನು, ಸುರಿಯುವ ಕೊಳೆ ಕೆಸರು ಕಾರ್ಮಿಕರ ಮೇಲೆ ಬಿದ್ದು ಸಾಯುವುದನ್ನು ತಡೆಯಲು, ಅಡ್ಡಡ್ಡಕ್ಕೆ ಅಲ್ಲಲ್ಲಿ ಇರಿಸಿದ್ದರು. ಜಾಕ್ವೆಸ್, ವಿನ್ಸೆಂಟ್ ಕೈಲಿದ್ದ ದೀಪವನ್ನು ತೆಗೆದುಕೊಂಡು ತನ್ನ ಬೆಲ್ಟ್‌ಗೆ ಸಿಕ್ಕಿಸಿಕೊಂಡ. "ನಿಧಾನ, ನಿಧಾನ ವಿನ್ಸೆಂಟ್. ಇಲ್ಲಾಂದ್ರೆ ನನ್ನ ತಲೆ ಮೇಲೆ ಕಾಲಿರಿಸಿ, ನನ್ನನ್ನು ಪಾತಾಳಕ್ಕೆ ನೂಕಿ ಬಿಡುತ್ತಿ. ನಿಧಾನವಾಗಿ, ಹೆಜ್ಜೆ ಇಡುತ್ತಾ, ಒಂದೈದು ಮೀಟರ್ ಕೆಳಗೆ ಇಳಿದರು. ಕೊಳಕಾದ ಗೋಡೆಗಳ ಮೇಲೆ ಕೈಯೂರಿ, ಎಚ್ಚರಿಕೆಯಿಂದ ಒಂದೊಂದೇ ಹೆಜ್ಜೆ ಹಾಕುತ್ತಾ, ಕಾಲೂರಲು ಮರದ ದಿಮ್ಮಿಗಳಿಗಾಗಿ ತಡಕುತ್ತಿದ್ದರು.

ಕೆಳಗೆ ಇನ್ನೊಂದು ಹಂತದಲ್ಲಿ, ಮತ್ತೊಂದು ಗಣಿ ಇತ್ತು. ಈ ದಾರಿ ಕಾರ್ಮಿಕರು ಕೆಲಸ ಮಾಡಲು ಕೋಣೆಗಳೂ ಇರಲಿಲ್ಲ. ಸಂಕೀರ್ಣವಾದ ಮೂಲೆಗಳಿಂದ, ಗಣಿಗಳ ಗೋಡೆಗಳನ್ನು ಕೆರೆದು ಇದ್ದಿಲನ್ನು ಉದುರಿಸಿಕೊಳ್ಳಬೇಕಾಗಿತ್ತು. ಬೆನ್ನುಗಳನ್ನು ಕಲ್ಲುಛಾವಣಿಗೆ ಆನಿಸಿ, ಮೊಣಕಾಲು ಮಡಿಚಿ, ತಮ್ಮ ಸನಿಕೆಗಳಿಂದ ಇದ್ದಿಲನ್ನು ಉದುರಿಸುತ್ತಿದ್ದರು. ಭಯಂಕರವಾದ ಪರಿಸರ. ಮೇಲಿನ ಕೋಣೆಗಳು ಸಾಕಷ್ಟು ಅನುಕೂಲಕರವಾಗಿಯೂ ತಂಪಾಗಿಯೂ ಇತ್ತು. ಆದರೆ ಇಲ್ಲಿ ಕುಲುಮೆಯಲ್ಲಿ ಬೇಯುತ್ತಿರುವಂತಿದೆ. ಕಾರ್ಮಿಕರು ಆ ಸುಡು ಬಿಸಿಯಲ್ಲಿ, ಉಸಿರಾಡಲೂ ಅವಕಾಶವಿಲ್ಲದೆ, ಬೆತ್ತಲೆ ದೇಹಗಳನ್ನು ಬೆವರು, ಕೆಸರು, ಕೊಳೆಯಿಂದ ತುಂಬಿಕೊಂಡು ಕೆಲಸ ಮಾಡುತ್ತಿದ್ದಾರೆ. ವಿನ್ಸೆಂಟ್‌ಗೆ ಒಂದು ಕ್ಷಣವೂ ಅಲ್ಲಿರಲು ಸಾಧ್ಯವಿಲ್ಲವೆನಿಸುತ್ತಿರುವ ವಾತಾವರಣದಲ್ಲಿ, ಯಾವುದನ್ನೂ ಲೆಕ್ಕಿಸದೆ ಪ್ರಾಣಿಗಳಂತೆ, ಮೂಕ ವೇದನೆಯೊಂದಿಗೆ ತಮ್ಮೆಲ್ಲ ಶಕ್ತಿ ಸಾಮರ್ಥ್ಯಗಳನ್ನು ನಿಶ್ಚಿತ ಪ್ರಮಾಣದ ಇದ್ದಿಲ ಸಂಗ್ರಹವಾಗಲೇ ಬೇಕೆಂದು ಹೆಣಗುತ್ತಿದ್ದಾರೆ. ಮಾಮೂಲಿಯಂತೆ ನಿಶ್ಚಿತ ಪ್ರಮಾಣದ ಕಲ್ಲಿದ್ದಲ್ಲನ್ನು ಗಾಡಿಗಳಲ್ಲಿ ತುಂಬಿಸಿ ಕಳಿಸದಿದ್ದಲ್ಲಿ ಅವರಿಗೆ ಬರಬೇಕಾದ ಎರಡೂವರೆ ಫ್ರಾಂಕ್ ಹಣ ಸಂದಾಯವಾಗುವುದಿಲ್ಲ. ಅದಕ್ಕೆಂದೇ ಒಂದು ಕ್ಷಣವೂ ವಿಶ್ರಾಂತಿಗೆ ನಿಲ್ಲದೆ ದುಡಿಯುತ್ತಿದ್ದಾರೆ.

ವಿನ್ಸೆಂಟ್ ಮತ್ತು ಜಾಕ್ವೆಸ್ ತೆವಳಿಕೊಂಡು ದಾರಿಗುಂಟ ಸಾಗುತ್ತಿದ್ದರು. ಮಧ್ಯ ಮಧ್ಯೆ ಒಂದೆರಡು ನಿಮಿಷ ಇದ್ದಿಲ ಗಾಡಿಗಳು ಸಾಗುವುದಕ್ಕೆ, ಪಕ್ಕಕ್ಕೆ ಸರಿದು ದಾರಿ ಮಾಡಿಕೊಡುತ್ತಿದ್ದಾರೆ. ದಾರಿ ಬಹಳ ಕಡಿದಾಗಿತ್ತು. ಗಾಡಿಗಳನ್ನು ತಳ್ಳುತ್ತಿದ್ದ ಹೆಣ್ಣು ಮಕ್ಕಳ ವಯಸ್ಸು ಹತ್ತು ವರುಷ ಮೀರಿರಲಿಲ್ಲ. ಟ್ರಾಕ್‌ಮೇಲೆ ಗಾಡಿಗಳನ್ನು ತಳ್ಳುವುದಕ್ಕಾಗಿ ಹುಡುಗಿಯರು ತುಂಬಾ ಪ್ರಯಾಸಪಡುತ್ತಿದ್ದರು. ಟ್ರ್ಯಾಕ್‌ನ ಕೊನೆಗೆ ಒಂದು ಲೋಹದ ಜಾರುಬಂಡೆಯಂತಹ ಹಾಸಿತ್ತು. ಅದರ ಮೇಲಿಂದ ಗಾಡಿಗಳು ಸರಾಗವಾಗಿ ಜಾರಿ ಕೆಳಭಾಗವನ್ನು ತಲುಪುತ್ತಿದ್ದವು. "ಮಿಸ್ಟರ್ ವಿನ್ಸೆಂಟ್, ಬನ್ನಿ ಕಡೆಯ ಹಂತವನ್ನು ನೋಡೋಣ. ಏಳುನೂರು ಮೀಟರ್ ಆಳ. ಪ್ರಪಂಚದಲ್ಲಿ ಎಲ್ಲಿಯೂ ನೋಡಲು ಸಿಗದ ಒಂದು ವಿಶೇಷವನ್ನು ನಿಮಗೆ ತೋರಿಸುತ್ತೇನೆ!" – ಎಂದು ಜಾಕ್ವೆಸ್ ಹೇಳಿದ.

ಇಬ್ಬರೂ ಲೋಹದ ಜಾರು ಹಾಲಗೆಯ ಮೂಲಕ ಜಾರಿ ಮೂವತ್ತು ಮೀಟರ್ ಆಳಕ್ಕೆ ಬಂದಾಗ, ಇಬ್ಬರೂ, ಎರಡು ಟ್ರ್ಯಾಕ್‌ಗಳಿದ್ದ ಸುರಂಗದಲ್ಲಿದ್ದರು. ಒಂದರ್ಧ ಮೈಲಿಯಷ್ಟು ದೂರ ನಡೆದರು. ಸುರಂಗ ಕೊನೆಯಾದಾಗ ಅವರಿಬ್ಬರೂ ಒಂದು ಸಮತಲದ ಚಾಚು ಬಂಡೆಯ ಮೇಲಿದ್ದರು. ಅಲ್ಲಿಂದ ತೆವಳುತ್ತ ಸಾಗಿದಾಗ, ಮತ್ತೊಂದು ಕಡೆಗೆ ಹೊಸದಾಗಿ ಕೊರೆದ ರಂಧ್ರದಲ್ಲಿದ್ದರು.

"ಇದು ಹೊಸದಾಗಿ ಅಗೆದ ಗಣಿಭಾಗ. ಪ್ರಪಂಚದಲ್ಲಿ ಇದ್ದಿಲಿಗಾಗಿ ಇರುವ ಅತ್ಯಂತ ಕಠಿಣವಾದ ಪ್ರದೇಶ."

ಕಲ್ಲಿದ್ದಲ ಶೋಧ ರಂಧ್ರಗಳು ಹಾಗೇ ಮುಂದುವರೆದು ಕಡೆಯ ಪಕ್ಷ ಹನ್ನೆರಡು ರಂಧ್ರಗಳಿದ್ದವು. ಜಾಕ್ವೆಸ್ ಒಂದು ರಂಧ್ರದೊಳಗೆ ಪ್ರವೇಶಿಸಿ, ವಿನ್ಸೆಂಟ್‌ನನ್ನು ಅನುಸರಿಸಲು

ಹೇಳಿದ. ಭುಜಗಳು ತೂರುವಷ್ಟು ಮಾತ್ರವೇ, ರಂಧ್ರದ ಅಗಲವಿತ್ತು. ತನ್ನ ದೇಹವನ್ನೆಲ್ಲ ಸಂಕುಚಿಸಿ, ಹಾವಿನಂತೆ ಒಳಕ್ಕೆ ತೂರಿಸಿಕೊಂಡ. ಮುಂದೆ ಮುಂದೆ, ತನ್ನ ಕೈಯುಗುರುಗಳಿಂದ, ಕಾಲುಬೆರಳುಗಳಿಂದ ಸ್ವಲ್ಪಸ್ವಲ್ಪ ಅಗೆದಗೆದು ಜಾಗ ಮಾಡಿಕೊಳ್ಳುತ್ತ ಹೋದ. ಜಾಕ್ವೆಸ್‌ನ ಬೂಟುಗಳೂ ಸರಿಯಾಗಿ ಕಾಣಿಸುತ್ತಿರಲಿಲ್ಲ. ಬಂಡೆಯೊಳಗಿನ ಸುರಂಗ ಒಂದೂವರೆ ಅಡಿ ಎತ್ತರ, ಎರಡೂವರೆ ಅಡಿ ಅಗಲಕ್ಕಿಂತ ಹೆಚ್ಚಿರಲಿಲ್ಲ. ಯಾವ ರಂಧ್ರದಿಂದ ಮಾರ್ಗ ನಿರ್ಮಾಣವಾಗಿ ಸಾಗಿತ್ತೋ, ಅಲ್ಲಿ ತಾಜಾಗಾಳಿಗೆ ಅವಕಾಶವೇ ಇರಲಿಲ್ಲವಾದರೂ, ಸ್ವಲ್ಪ ಮಟ್ಟಿಗೆ ತಣ್ಣಗಿತ್ತು.

ತೆವಳುತ್ತ ತೆವಳುತ್ತ, ವಿನ್ಸೆಂಟ್ ಕಡೆಗೆ ಗೋಲಾಕಾರದ ತಗ್ಗುಪ್ರದೇಶಕ್ಕೆ ಬಂದ. ಒಬ್ಬ ಮನುಷ್ಯ ಎದ್ದು ನಿಂತುಕೊಳ್ಳುಷ್ಟು ಅವಕಾಶವಿತ್ತು. ಆ ಜಾಗ ಪೂರ್ತಿ ಕತ್ತಲಿನಿಂದ ತುಂಬಿತ್ತು. ವಿನ್ಸೆಂಟ್‌ಗೆ ಏನೇನೂ ಕಾಣಿಸುತ್ತಿರಲಿಲ್ಲ. ಆದರೆ ನಾಲ್ಕು ಕಡೆಯಿಂದ ನೀಲಿ ಬೆಳಕು ಕಾಣಿಸಿತು. ಮೈಯೆಲ್ಲ ಬೆವರಿನ ಧಾರೆಗಳಿಂದ ತುಂಬಿತ್ತು. ಹಣೆಯ ಮೇಲಿಂದ ಸುರಿಯುತ್ತಿದ್ದ ಬೆವರಿನ ಧಾರೆ ತನ್ನ ಜೊತೆ ಇದ್ದಿಲ ಮಸಿಯನ್ನೂ ಸೇರಿಸಿಕೊಂಡು ಹುಬ್ಬು ಕಣ್ಣುಗಳ ಮೇಲಿಂದ ಹರಿದು ಅವನನ್ನು ಕುರುಡನನ್ನಾಗಿಯೂ ವಿಕಾರವಾಗಿಯೂ ಮಾಡಿತ್ತು. ಎಷ್ಟೋ ಹೊತ್ತು ಹೊಟ್ಟೆ ಮೇಲೆ ಮಲಗಿ ತೆವಳುತ್ತ ಇದ್ದುದರಿಂದ ಉಸಿರಾಟವೂ ಕಷ್ಟವೆನಿಸಿತು. ತಾಜಾಗಾಳಿ ಬೇಕೆನಿಸಿತು. ಕಡೆಗೆ ಒಂದು ಕ್ಷಣ, ಉಸಿರಾಡಲು ಹೇಗೋ ಸಾಧ್ಯವಾಯಿತು. ಬೆಂಕಿಯ ದ್ರವ ಒಳಗೆಲ್ಲ, ಶ್ವಾಸಕೋಶಗಳನ್ನೆಲ್ಲ ತುಂಬಿ ಉಸಿರು ಕಟ್ಟಿ ಸಾಯುವಂತೆನಿಸಿತು. ಮಾರ್ಕಾಸ್‌ನ ಗಣಿಗಳಲ್ಲೆಲ್ಲ ಅತ್ಯಂತ ಭಯಂಕರವೂ ಅಪಾಯಕಾರಿಯೂ, ಸಾವಿನ ಬಿಲವೂ ಆಗಿತ್ತು, ಈ ಗಣಿ!

"ಓಹ್ ಇವರು ಮಿಸ್ಟರ್ ವಿನ್ಸೆಂಟ್." ಪರಿಚಿತವಾದ ಧ್ವನಿ ಕೇಳಿಸಿತು. "ನಾವು ಹೇಗೆ ಸಂಪಾದನೆ ಮಾಡ್ತೀವೀಂತ ನೋಡೋಕೆ ಬಂದಿದ್ದೀರಾ?"

ಜಾಕ್ವೆಸ್, ದೀಪಗಳು ಉರಿಯುತ್ತಿವೆಯೇ ಎಂಬುದನ್ನು ಪರೀಕ್ಷಿಸಲು ವೇಗದಿಂದ ಹೆಜ್ಜೆ ಹಾಕಿದ.

"ಅವನು ಇಲ್ಲಿಗೆ ಬರಬಾರದಾಗಿತ್ತು." ಡೆಕ್ರುಖ್ ವಿನ್ಸೆಂಟ್‌ನ ಕಿವಿಯಲ್ಲಿ ಮೆಲ್ಲಗೆ ಉಸುರಿದ. ಅವನಿಗೆ ಖಂಡಿತ ಇಲ್ಲಿ ರಕ್ತಸ್ರಾವ ಆಗುತ್ತೆ. ಮತ್ತೆ ನಾವೆಲ್ಲ ಸೇರಿ ಅವನನ್ನು ಇಲ್ಲಿಂದ ಆಚೆಗೆ ಕಳಿಸಬೇಕಾದರೆ, ನಮಗೆ ಪ್ರಾಣ ಹೋಗುತ್ತೆ."

"ಡೆಕ್ರುಖ್, ಈ ದೀಪಗಳು ಬೆಳಗಿನಿಂದ ಹೀಗೆಯೇ ಉರಿಯುತ್ತಿವೆಯೇನು?"

ಡೆಕ್ರುಖ್ ಈ ಪ್ರಶ್ನೆಯ ಕಡೆ ಅಷ್ಟೊಂದು ಲಕ್ಷ್ಯಕೊಡದೆ, ಹೇಳಿದ. "ಹೌದು" "ಈ ನೀಲಿ ಬಣ್ಣ ಹೀಗೆ ಬೆಳೀತಾ ಇದ್ದರೆ, ಸ್ಫೋಟ ಆಗೋದಂತೂ ಖಂಡಿತ. ಸ್ಫೋಟ ಆಗೋದು ಒಂದು ಥರಾ ಒಳ್ಳೇದೇ ಯಾಕೇಂದ್ರೆ ನಮ್ಮ ಕಷ್ಟಗಳಿಗೆಲ್ಲ ಪರಿಹಾರ ಸಿಕ್ಕಂತಾಗುತ್ತದೆ."

"ಈ ಕೋಣೆಯಲ್ಲಿನ ವಿಷಾನಿಲಗಳನ್ನೆಲ್ಲ ಹೊರತೆಗೆಯಲಾಗಿತ್ತಲ್ಲ, ಹೋದ ಭಾನುವಾರ!"

"ತೆಗೆದರೇನು? ಮತ್ತೆ ತುಂಬಿಕೊಳ್ಳುತ್ತೆ" ತನ್ನ ತಲೆಯ ಮೇಲಿನ ಕಪ್ಪು ಕಲೆಯನ್ನು ಕೆರೆದುಕೊಳ್ಳುತ್ತ ಡೆಕ್ರುಖ್ ಹೇಳಿದ.

"ಹಾಗಾದರೆ, ಈ ವಾರದಲ್ಲಿ ಮತ್ತೊಂದು ದಿನ, ಕೆಲಸ ನಿಲ್ಲಿಸಬೇಕಾಗುತ್ತದೆ. ಅದನ್ನೆಲ್ಲ ಶುದ್ಧಮಾಡಬೇಕು, ಮತ್ತೆ.

ಗಣಿ ಕೆಲಸಗಾರರು ಪ್ರತಿಭಟನೆ ತೋರಲು ಮುಂದಾದರು. "ಈಗಲೇ ನಮ್ಮ ಮಕ್ಕಳಿಗೆ ತಿನ್ನೋಕೆ ಬ್ರೆಡ್ಡಿಲ್ಲ, ಒಂದು ದಿನ ಕೆಲಸ ಇಲ್ಲಾಂದ್ರೆ, ಕತೆ ಮುಗಿದೇ ಹೋಯಿತು. ನಾವೆಲ್ಲ ಕೆಲಸ ಮುಗಿಸಿ ಹೋದ ಮೇಲೆ ಬೇಕಾದರೆ ಕ್ಲೀನ್ ಮಾಡೋದರ ಬಗ್ಗೆ ಚಿಂತೆ ಮಾಡಲಿ."

"ಹೋಗಲಿ ಬಿಡಿ. ಈ ಗಣಿಗಳು ನನ್ನನ್ನು ಸಾಯಿಸಲಾರವು. ಇದಕ್ಕೂ ಮೊದಲು ಪ್ರಯತ್ನ ಪಟ್ಟರೂ, ಅವುಗಳಿಂದ ನನ್ನನ್ನು ಕೊಲ್ಲೋದಕ್ಕೆ ಆಗಲಿಲ್ಲ. ನಾನು ಮುಪ್ಪಿನಿಂದಲೇ ಸಾಯುತ್ತೇನೆ. ಹಾಂ..... ಊಟದ ಬಗ್ಗೆ ಹೇಳೋದಾದರೆ, ವರ್ನೆ, ಸಮಯ ಏನಾಗಿರಬಹುದು ಈಗ?"

ಜಾಕ್ವೆಸ್, ನೀಲಿ ಬೆಳಕಿನಲ್ಲಿ ಗಡಿಯಾರ ನೋಡಿಕೊಂಡ.

"ಒಂಬತ್ತು ಗಂಟೆ."

"ಊಹ್! ಹಾಗಾದರೆ ನಾವು ಊಟ ಮಾಡಬಹುದು." ಬೆವರು ಸುರಿಸುತ್ತ, ಕಪ್ಪುದೇಹಗಳ, ಬಿಳಿಯ ಕಣ್ಣಾಲಿಗಳ ಆ ಕಾರ್ಮಿಕರು ಕೆಲಸವನ್ನು ನಿಲ್ಲಿಸಿದರು. ಗೋಡೆಗೆ ಒರಗಿ ಕುಕ್ಕರಗಾಲಲ್ಲಿ ಕುಳಿತು, ತಾವು ತಂದಿದ್ದ ಊಟದ ಡಬ್ಬಿಗಳನ್ನು ತೆರೆದರು. ಅದರಲ್ಲಿ ಒಂದೆರಡು ಬ್ರೆಡ್ಡಿನ ಚೂರುಗಳು, ಮತ್ತು ಹುಳಿತ ಚೀಸ್ ಇತ್ತು. ಹಸಿದ ಬಾಯಿಗಳು ಗಬಗಬನೆ ನುಂಗಿದವು. ಕೈಗಳ ಮಸಿಯೆಲ್ಲ ಬ್ರೆಡ್ಡಿಗೆ ಮೆತ್ತಿಕೊಂಡಿತು. ಇದ್ದ ಹದಿನೈದು ನಿಮಿಷದ ವಿರಾಮದಲ್ಲಿ ಊಟ ಮುಗಿಸಬೇಕಿತ್ತು. ಬೇರೆಡೆ ಹೋಗಿ ತಿನ್ನಲು ಸಮಯವೇ ಇರುತ್ತಿರಲಿಲ್ಲ. ಬ್ರೆಡ್ಡನ್ನು ಗಂಟಲಲ್ಲಿ ಸರಾಗವಾಗಿ ಇಳಿಸಲು, ತಂದಿದ್ದ ಉಗುರು ಬೆಚ್ಚನೆಯ ಕಾಫಿಯನ್ನು ಹೀರಿದರು. ಹದಿಮೂರು ಗಂಟೆಗಳು ಬಿಡುವಿಲ್ಲದೆ ಮಾಡುತ್ತಿದ್ದ ಕೆಲಸಕ್ಕೆ ಅವರಿಗೆ ದೊರೆತ ಉಡುಗೊರೆ ಇಷ್ಟೆ! ಒಂದೆರಡು ಬ್ರೆಡ್ಡಿನ ಚೂರು, ಹುಳಿತ ಚೀಸ್, ಒಂದಿಷ್ಟು ಕಾಫಿ!

ವಿನ್ಸೆಂಟ್ ಸುಮಾರು ಆರುಗಂಟೆಗಳ ಕಾಲ ಪಾತಾಳ ಲೋಕದ ಗಣಿಗಳಲ್ಲಿದ್ದ. ಗಾಳಿಯಿಲ್ಲ; ಬರೀ ಧೂಳು, ಬೆಂಕಿ ಬಿಸಿಯಿಂದಾಗಿ ಪ್ರಜ್ಞೆ ತಪ್ಪುವಂತಾಗುತ್ತಿತ್ತು. ಒಂದು ಕ್ಷಣವೂ ಅಲ್ಲಿ ಇರುವುದು ಸಾಧ್ಯವಿಲ್ಲವೆನಿಸುತ್ತಿತ್ತು. ಅದೃಷ್ಟಕ್ಕೆ ವರ್ನೆ ವಿನ್ಸೆಂಟ್‌ಗೆ ಹೋಗೋಣವೆಂದು ತಿಳಿಸಿದ. ಇದರಿಂದ ಅವನಿಗೆ ಸ್ವಲ್ಪ ಹಾಯೆನಿಸಿತು.

"ಇಲ್ಲಿನ ಪರಿಸ್ಥಿತೀನ ಗಮನಿಸುತ್ತಿರುವ ಡೆಕ್ರುಖ್. ಏನಾದರೂ ಅಪಾಯದ ಸೂಚನೆ ಕಂಡು ಬಂದರೆ, ನಿನ್ನ ಗ್ಯಾಂಗ್‌ನ ಹೊರಗೆ ಕರೆದುಕೊಂಡು ಬಂದು ಬಿಡು."

ಡೆಕ್ರುಖ್ ನಕ್ಕ. "ನಾವು ತರಬೇಕಾಗಿದ್ದಷ್ಟು ಇದ್ದಿಲು ತರಲು ಸಾಧ್ಯವಾಗದಿದ್ದರೆ, ನಮ್ಮ ದಿನಗೂಲಿಯಾದ ಎರಡೂವರೆ ಫ್ರಾಂಕ್‌ಗಳನ್ನು ಕೊಡುತ್ತಾರೇನು?"

ಅವನ ಈ ಪ್ರಶ್ನೆಗೆ ಉತ್ತರ ಇರಲಿಲ್ಲ. ವರ್ನೆಗೂ ಗೊತ್ತು. ಡೆಕ್ರುಖ್‌ಗೂ ಗೊತ್ತು ಉತ್ತರ! ಜಾಕ್ವೆಸ್ ಮುಂದೇನೂ ಮಾತಾಡಲಿಲ್ಲ. ಸುರಂಗದ ಮೂಲಕ ತೆವಳುತ್ತ ಸಾಗಿದ ವಿನ್ಸೆಂಟ್ ಅವನನ್ನೇ ಅನುಸರಿಸಿದ. ಕಣ್ಣೊಳಗೆ ಇಳಿಯುತ್ತಿದ್ದ ಕಪ್ಪು ಬೆವರಿನ ಧಾರೆಗಳು ಅವನನ್ನು ಪೂರ್ತಿಯಾಗಿ ಕುರುಡಾಗಿಸಿದ್ದವು.

ಅರ್ಧಗಂಟೆಯ ನಂತರ, 'ಅಕ್ರೋಕೇಜ್' ಬಳಿ ಬಂದರು. ಇಲ್ಲಿಂದಲೇ ಇದ್ದಿಲ ಗಾಡಿಗಳನ್ನು ಮತ್ತು ಕಾರ್ಮಿಕರನ್ನು ಮೇಲು ಭಾಗಕ್ಕೆ ಕೊಂಡೊಯ್ಯಲಾಗುತ್ತಿತ್ತು. ಜಾಕ್ವೆಸ್ ಬಂಡೆಗಳ ನಡುವಿನ ಗುಹೆಯೊಳಕ್ಕೆ ಹೋಗಿ ಬಂದ. ಅವನು ಕಪ್ಪನೆಯ ಕಫವನ್ನು ಹೊರಗೆ ಉಗಿಯುತ್ತಿದ್ದ. ಬಾವಿಯಾಳದಿಂದ ಜಿಗಿವ ಬಕೆಟಿನಂತೆ ಪಂಜರ ಮೇಲೆ ಬಂತು. ವಿನ್ಸೆಂಟ್ ತನ್ನ ಗೆಳೆಯನ ಕಡೆ ತಿರುಗಿ ಕೇಳಿದ – "ಮಿಸ್ಟರ್, ಯಾಕೆ ನೀವೆಲ್ಲ ಗಣಿಯೊಳಗೆ ಹೋಗಿ ಹೀಗೆ ಕಷ್ಟಪಡ್ತೀರಿ? ಬೇರೆ ಯಾವುದಾದರೂ ಕೆಲಸ ನೋಡಿಕೊಂಡು ಹೋಗಬಾರದೇ?"

"ವಿನ್ಸೆಂಟ್, ನಾವೆಲ್ಲಾ ಹೋಗೋಕೆ ಆಗೋದಿಲ್ಲ. ನಮ್ಮ ಹತ್ತಿರ ಹಣ ಇಲ್ಲ. ಒಂದು ಹತ್ತು ಫ್ರಾಂಕ್‌ಗಳನ್ನಾದರೂ ಉಳಿಸಿರುವ ಒಂದೇ ಒಂದು ಗಣಿ ಕಾರ್ಮಿಕ ಕುಟುಂಬ ಇಡೀ ಬೋರಿನೇಜ್‌ನಲ್ಲಿ, ಹುಡುಕಿದರೂ ನಿನಗೆ ಸಿಗುವುದಿಲ್ಲ. ಒಂದು ವೇಳೆ ಹೋಗುವುದಕ್ಕೆ ಆದರೂ ನಾವು ಹೋಗೋದಕ್ಕೆ ಸಿದ್ಧ ಇಲ್ಲ. ಹಡಗಿನ ನಾವಿಕರಿಗೆ ಹಡಗಿನಲ್ಲಿರುವಾಗ ಏನೆಲ್ಲ ಅಪಾಯಗಳನ್ನು ಎದುರಸಬೇಕೆನ್ನುವುದು ಗೊತ್ತಿದ್ದೂ, ತೀರದಲ್ಲಿದ್ದಾಗ, ಅವನ ಮನಸ್ಸು ಸಮುದ್ರದ ಕಡೆಗೇ ತುಡಿಯುತ್ತೆ. ಹಾಗೇನೇ ನಮ್ಮದೂ, ಮಿಸ್ಟರ್. ನಮಗೆ ಗಣಿಗಳೆಂದರೆ ಪ್ರಾಣ. ಭೂಮಿ ಮೇಲೆ ಇರುವುದಕ್ಕಿಂತ, ಭೂಮಿ ಒಳಗೆ ಇರುವುದನ್ನು ಇಷ್ಟಪಡ್ತೀವಿ. ನಾವು ಬಯಸುವುದು ಏನಿದ್ದರೂ, ಒಳ್ಳೆ ಸಂಬಳ, ಕೆಲಸ ಮಾಡಲು ಅನುಕೂಲ ಪರಿಸರ, ಅಪಾಯಗಳಿಂದ ರಕ್ಷಣೆ ಇತ್ಯಾದಿಗಳನ್ನು ಮಾತ್ರ!"

ಪಂಜರ ನೆಲ ಮಟ್ಟ ತಲುಪಿತು. ಮಂಜಿನಿಂದ ಹಾಸಿದ್ದ ಅಂಗಳ ದಾಟಿದ. ಮಂದ ಸೂರ್ಯನ ಬೆಳಕೂ ಅವನ ಕಣ್ಣುಕುಕ್ಕಿತು. ಬಚ್ಚಲಿನಲ್ಲಿದ್ದ ಕನ್ನಡಿಯಲ್ಲಿ ಮುಖ ನೋಡಿಕೊಂಡ. ಮುಖ ಪೂರ್ತಿ ಮಸಿಯಿಂದ ಲೇಪಿತವಾಗಿತ್ತು. ಆದರೂ ಮುಖ ತೊಳೆಯಲಿಲ್ಲ. ಬಯಲಿನ ಕಡೆ ಹೊರಟ. ತಾಜಾಗಾಳಿ ಸೇವಿಸಿದ. ಇನ್ನೂ ಅರೆ ಪ್ರಜ್ಞಾವಸ್ಥೆ ಇತ್ತು. ಹಾಗೆಯೇ ತನಗೆ ದರಿದ್ರ ಜ್ವರಗಿರ ಏನಾದರೂ ಬಂದಿರಬಹುದೇ ಎಂಬ ಅನುಮಾನ ಕೂಡಾ ಬಂತು. ಏನೋ ಒಂದು ಬಗೆಯ ಭಯ ಆತಂಕ. ದೇವರು ನಿಜವಾಗಿಯೂ ತನ್ನ ಮಕ್ಕಳು ಇಂತಹ ಅಸಹನೀಯ ಪರಿಸರದಲ್ಲಿ ಕೆಲಸಮಾಡುವುದನ್ನು ಸಹಿಸುವುದಿಲ್ಲ; ಬಿಡುವುದೂ ಇಲ್ಲ. ಬಹುಶಃ ಇದೆಲ್ಲ ತನ್ನ ಕನಸಿರಬಹುದು! ಇದ್ದುದರಲ್ಲಿ ಸಾಕಷ್ಟು ಅನುಕೂಲಸ್ಥನಾಗಿದ್ದ ಡೆನಿಸ್ ಮನೆಯ ಮುಂದಿನಿಂದ ಡೆಕ್ರುಖ್ ಮನೆಯ ಕಡೆ ಹೆಜ್ಜೆ ಹಾಕಿದ. ಯಾವುದೋ ಯೋಚನೆಯಲ್ಲಿದ್ದುದರಿಂದ ಕೆಸರಿನ ಮೇಲೆ ಕಾಲಿರಿಸಿದ. ತಗ್ಗು ಪ್ರದೇಶದ ಆ ರಸ್ತೆಗಳೆಲ್ಲ ಕೆಸರು, ಧೂಳಿನಿಂದ ತುಂಬಿತ್ತು. ಮೊದಲಿಗೆ ಯಾರೂ ಮನೆಯೊಳಗಿಂದ

ಉತ್ತರಿಸಲಿಲ್ಲ. ನಂತರ ಆರು ವರ್ಷದ ಹುಡುಗ ಬಂದು ಬಾಗಿಲು ತೆಗೆದ. ಸಣ್ಣಗಾತ್ರದ ದೇಹ, ಮುಖ ಬಿಳಿಚಿಕೊಂಡಿತ್ತಾದರೂ, ಡೆಕ್ರುಖ್‌ನಲ್ಲಿದ್ದ ಹೋರಾಟದ ಛಲ ಇವನ ಮುಖದಲ್ಲಿಯೂ ಕಾಣಿಸುತ್ತಿತ್ತು. ಇನ್ನೇನು! ಇನ್ನೊಂದೆರಡು ವರ್ಷದಲ್ಲಿ ಇವನೂ ಬೆಳಗಿನ ಜಾವ ಮೂರುಗಂಟೆಗೇ ಗಣಿಗಳಲ್ಲಿ ಇಳಿದು ಇದ್ದಿಲನ್ನು ತುಂಬಿಸುವ ಕೆಲಸಕ್ಕೆ ಸಿದ್ಧನಾಗುತ್ತಾನೆ.

"ಅಮ್ಮ ಇದ್ದಿಲ ಗುಡ್ಡಕ್ಕೆ ಹೋಗಿದ್ದಾಳೆ. ಮಿಸ್ಟರ್ ವಿನ್ಸೆಂಟ್, ನೀವು ಸ್ವಲ್ಪ ಹೊತ್ತು ಕಾಯಬೇಕಾಗುತ್ತದೆ. ನನಗೆ ಮಕ್ಕಳನ್ನು ನೋಡಿಕೊಳ್ಳಬೇಕಾಗಿದೆ" ಕ್ಷೀಣವಾದ ದನಿಯಲ್ಲಿ ವಿವರಿಸಿದ.

ನೆಲದ ಮೇಲೆ ಕಡ್ಡಿಗಳು, ದಾರ ಇಟ್ಟುಕೊಂಡು, ಮೈಮೇಲೆ ಪೂರ್ತಿ ಬಟ್ಟೆ ಇಲ್ಲದ ಇಬ್ಬರು ಮಕ್ಕಳು ಆಡಿಕೊಳ್ಳುತ್ತಿದ್ದರು. ಚಳಿಯಿಂದ ನೀಲಿ ಬಣ್ಣಕ್ಕೆ ತಿರುಗಿದ್ದರು. ಎಲ್ಲರಿಗಿಂತ ದೊಡ್ಡ ಹುಡುಗ ಒಲೆಗೆ ಇದ್ದಿಲು ಒಡ್ಡುತ್ತಿದ್ದ. ಆದರೂ ಶಾಖ ಅಷ್ಟಾಗಿ ಸಾಧ್ಯವಾಗಲಿಲ್ಲ. ಆ ಮಕ್ಕಳು ಚಳಿಯಿಂದ ನಡುಗುತ್ತಿದ್ದವು. ಅವನಿಗೂ ನಡುಕವುಂಟಾಯಿತು. ಮಕ್ಕಳನ್ನು ಎತ್ತಿ ಹಾಸಿಗೆ ಮೇಲೆ ಮಲಗಿಸಿ, ಕತ್ತಿನ ವರೆಗೆ ಹೊದಿಸಿದ. ಈ ದರಿದ್ರ ಗುಡಿಸಲಿಗೆ ತಾನು ಯಾಕೆ ಬಂದೆ ಎನ್ನುವುದೇ ಅವನಿಗೆ ತಿಳಿಯದಾಯಿತು. ಈ ಕುಟುಂಬಕ್ಕೆ ಏನಾದರೂ, ತನ್ನಿಂದ ಸಾಧ್ಯವಾದದ್ದನ್ನು ಮಾಡಲೇಬೇಕು. ಅವರ ಕಷ್ಟದ ತೀವ್ರತೆ ಏನೆಂದು ತಿಳಿದುಕೊಂಡಿದ್ದೇನೆ ಎಂಬುದು ಅವರಿಗೆ ಅರ್ಥವಾಗಬೇಕು.

ಕೈಕಾಲು ಮುಖವೆಲ್ಲ ಮಸಿಯಾಗಿಸಿಕೊಂಡು, ಮೇಡಂ ಡೆಕ್ರುಖ್ ಮನೆಗೆ ಬಂದಳು. ಅವನು ಕೊಳೆ ಮೆತ್ತಿಸಿಕೊಂಡಿದ್ದರಿಂದ ಮೊದಲಿಗೆ ವಿನ್ಸೆಂಟ್‌ನನ್ನು ಗುರುತಿಸಲು ಆಗಿರಲಿಲ್ಲ. ಕೂಡಲೇ ದಿನಸಿಗಳನ್ನು ಭದ್ರವಾಗಿ ಬಚ್ಚಿಟ್ಟಿದ್ದ ಪೆಟ್ಟಿಗೆಯ ಬಳಿಗೆ ಹೋಗಿ, ಕಾಫಿಗೆ ಬೇಕಾದ್ದನ್ನು ತೆಗೆದುಕೊಂಡು, ಒಲೆಯ ಮೇಲೆ ಕಾಫಿ ಕಾಯಿಸಿ ವಿನ್ಸೆಂಟ್‌ಗೆ ನೀಡಿದಳು. ಕಾಫಿ ತಣ್ಣಗೆ, ಒಂದಿಷ್ಟೂ ರುಚಿಯಿಲ್ಲದೆ ಇದ್ದರೂ ಅವರ ಮನಸ್ಸು ನೋಯಿಸಬಾರದೆಂದು ಕುಡಿದ.

ಟೆರ್ರಿಲ್ (ಇದ್ದಿಲ ಗುಡ್ಡ) ಇತ್ತೀಚೆಗೆ ಕರಗಿ ಹೋಗಿದೆ. ಏನೂ ಸಿಗುವುದಿಲ್ಲ. ಕಂಪನಿ ಯಾವುದಕ್ಕೂ ಅವಕಾಶ ಕೊಡುವುದಿಲ್ಲ. ಹೀಗಿರುವಾಗ ನಾವು ಹೇಗೆ ತಾನೇ ಮಕ್ಕಳನ್ನು ಬೆಚ್ಚಗಿಡಲು ಸಾಧ್ಯ? ಅವರಿಗೆ ತೊಡಲು ಬಟ್ಟೆ ಇಲ್ಲ. ಇರುವುದಿಲ್ಲ ಒಂದೆರಡು ಅಂಗಿ, ಒಂದೆರಡು ಕೌದಿಗಳು. ಕೊಟ್ಟಿರುವ ನಾರು ಬಟ್ಟೆ ಒರಟು ಒರಟಾಗಿದ್ದು, ಚರ್ಮ ಎಲ್ಲ ಕಿತ್ತು ಬಂದು ಗಾಯಗಳಾಗುತ್ತವೆ. ಅವರನ್ನು ಯಾವಾಗಲೂ ಹಾಸಿಗೇಲಿ ಮಲಗಿಸಿ ಇರಿಸಿದರೆ, ಅವರು ಬೆಳೆಯುವುದಾದರೂ ಹೇಗೆ?"

ಇದೆಲ್ಲವನ್ನೂ ಕೇಳಿದ ವಿನ್ಸೆಂಟ್‌ಗೆ ಕರುಳು ಚುರಕ್ ಎಂದಿತು. ಕಂಬನಿಯನ್ನು ಒಳಗೇ ನುಂಗಿಕೊಂಡ. ಏನೂ ಹೇಳಲು ಆಗಲಿಲ್ಲ. ಎಂದೂ ಇಂತಹ ಬಡತನದ ದಾರುಣತೆಯನ್ನು ಕಂಡಿರಲಿಲ್ಲ. ಮೊದಲ ಬಾರಿಗೆ ಅವನಿಗೆ ಯೋಚಿಸುವಂತಾಯಿತು. ಮಕ್ಕಳು ಹಸಿವು ಚಳಿಯಿಂದ ಸಾಯುತ್ತಿದ್ದರೆ, ಗಾಸ್ಪೆಲ್, ಪ್ರಾರ್ಥನೆಗಳು ಈ ಹೆಣ್ಣು

ಮಗಳಿಗೆ ಯಾವ ರೀತಿಯಲ್ಲಿ ಸಹಾಯ ಮಾಡಬಹುದು ಇಂಥಲ್ಲೆಲ್ಲ ದೇವರು ಎಲ್ಲಿದ್ದಾನೆ? ತನ್ನ ಜೇಬಿನಲ್ಲಿದ್ದ ಕೆಲವು ಫ್ರಾಂಕ್‌ಗಳನ್ನು ಮೇಡಂ ಡೆಕ್ರುಖ್‌ಗೆ ನೀಡಿದ.

"ಮಕ್ಕಳಿಗೆ ವುಲ್ಲನ್ ಡ್ರಾಯರ್ಸ್ ಕೊಂಡುಕೋ" ವಿನ್ಸೆಂಟ್ ಸೂಚಿಸಿದ.

ಅವನು ಈ ರೀತಿ ಮಾಡಿದ್ದರಿಂದ ಪ್ರಯೋಜನವೇನೂ ಆಗೊಲ್ಲ. ಬೋರಿನೇಜ್‌ನಲ್ಲಿ ಇಂಥ ನೂರಾರು ಮಕ್ಕಳಿದ್ದಾರೆ.

ಅಲ್ಲದೆ ಈ ಡ್ರಾಯರ್‌ಗಳು ಹರಿದು ಹೋದ ಮೇಲೆ, ಮತ್ತೆ ಚಳಿಗೆ ಹೆಪ್ಪುಗಟ್ಟುತ್ತಾರೆ.

ಗುಡ್ಡ ಏರಿ ಡೆನಿಸ್ ದಂಪತಿಯ ಮನೆ ಸೇರಿದ. ಅವರ ಮನೆಯ ಬೇಕರಿಯ ಕೋಣೆ ಬೆಚ್ಚಗೆ ಹಿತವಾಗಿ ಇತ್ತು. ಮೇಡಂ ಡೆನಿಸ್ ವಿನ್ಸೆಂಟ್‌ಗಾಗಿ ನೀರು ಕಾಯಿಸಿ ಮುಖ ತೊಳೆಯಲು, ನೀಡಿದಳು. ಅವನಿಗಾಗಿ ಒಳ್ಳೆ ಊಟವನ್ನು ಸಿದ್ಧ ಪಡಿಸಿದಳು. ಮೊನ್ನೆ ಮಾಡಿ ಉಳಿದಿದ್ದ ಮೊಲದ ಸಾರನ್ನು ಊಟಕ್ಕಿರಿಸಿದಳು. ಅವನು ಬಹಳ ದಣಿದಿದ್ದಂತೆ ಕಾಣುತ್ತಿದ್ದ. ಅದಕ್ಕಾಗಿ ಬ್ರೆಡ್‌ನ ಮೇಲೆ ಒಂದು ಚೂರು ಬೆಣ್ಣೆಯನ್ನೂ ಇರಿಸಿದಳು.

ವಿನ್ಸೆಂಟ್ ಮಹಡಿ ಮೇಲಿನ ತನ್ನ ಕೋಣೆಗೆ ಹೋದ. ಅವನ ಹೊಟ್ಟೆ ತುಂಬಿತ್ತು. ಹಾಸಿಗೆಯೂ ಬೆಚ್ಚಗೆ, ಶುಭ್ರವಾಗಿತ್ತು. ಬಿಳಿಯ ದಿಂಬು. ಅದಕ್ಕೊಂದು ಬೆಳ್ಳನೆಯ ಸುಂದರವಾದ ಗವಸು. ಕೋಣೆಯ ಗೋಡೆಗಳ ಮೇಲೆಲ್ಲ ಜಗತ್ತಿನ ಪ್ರಸಿದ್ಧ ಕಲಾವಿದರ ಕಲಾಕೃತಿಗಳು ರಾರಾಜಿಸುತ್ತಿದ್ದವು. ತನ್ನ ವಾರ್ಡ್‌ರೋಬ್ ಬಾಗಿಲನ್ನು ತೆಗೆದ. ಸಾಲುಸಾಲಾಗಿ ಅಂಗಿ, ಷರಾಯಿಗಳು, ಕಾಲುಚೀಲಗಳು, ಒಳ ಉಡುಪುಗಳು ನೇತಾಡುತ್ತಿದ್ದವು. ಹೆಚ್ಚಿನ ಬೂಟುಗಳೂ ಇದ್ದವು. ನೋಡುತ್ತಿದ್ದಂತೆ ಒಳಗೇ ಕಸಿವಿಸಿ ಎನಿಸಿತು. ತಾನು ಸುಳ್ಳುಗಾರ, ಮೋಸಗಾರ. ಬಡತನದ ಗುಣಗಳ, ಆದರ್ಶಗಳ ಬಗ್ಗೆ ದೊಡ್ಡ ದೊಡ್ಡದಾಗಿ ಮಾತನಾಡಿದ್ದ. ಉಪದೇಶಿಸಿದ್ದ. ಆದರೆ ತಾನು ಮಾತ್ರ ಸುಖವಾಗಿ, ಎಲ್ಲ ಬಗೆಯ ಸವಲತ್ತು, ಸೌಕರ್ಯಗಳೊಂದಿಗೆ ಬದುಕುತ್ತಿದ್ದ. ತಾನೊಬ್ಬ ದ್ರೋಹಿ. ಬರೀ ಬೂಟಾಟಿಕೆ. ಕಣ್ಣೊರಸಲು ಮಾತಾಡುವವ ಮಾತ್ರ. ತಾನು ಬೋಧಿಸುವ ಧರ್ಮದಲ್ಲಿ ಹುರುಳಿಲ್ಲ; ಪ್ರಯೋಜನವಿಲ್ಲ. ಗಣಿಕಾರ್ಮಿಕರು ಹಾಗೆ ನೋಡಿದರೆ ತನ್ನ ಮೋಸಕ್ಕಾಗಿ, ಬೋರಿನೇಜ್‌ನಿಂದಲೇ ಒದ್ದು ಓಡಿಸಬೇಕು. ಅವರ ನೋವೆಲ್ಲವನ್ನು ಹಂಚಿಕೊಳ್ಳುತ್ತಿದ್ದೇನೆಂದು ನಂಬಿಸಿದೆ. ಆದರೆ ಇಲ್ಲಿ ತಾನು ಮಾತ್ರ ಐಷಾರಾಮಿಯಾಗಿ ಬದುಕುತ್ತಿದ್ದೇನೆ. ಬೆಚ್ಚನೆಯ ಉಡುಪುಗಳು, ಮೆದುವಾದ ಹಾಸಿಗೆ, ಸುಖದ ನಿದ್ದೆ. ಒಂದು ವಾರದಲ್ಲಿ ಒಂದು ದಿನವೂ ಈ ಕಾರ್ಮಿಕರಿಗೆ ಲಭ್ಯವಾಗದ ಸುಖಭೋಜನ ತನಗೆ ದಿನವೂ ದೊರೆಯುತ್ತಿದೆ. ಇಂತಹ ಐಷಾರಾಮಿ ಜೀವನಕ್ಕೆ, ಕಷ್ಟವನ್ನೂ ಪಡಲಿಲ್ಲ. ಬರೀ ಸುಳ್ಳುಗಳನ್ನು ಹೇಳುತ್ತಾ ತಿರುಗುತ್ತಿದ್ದ. ಒಳ್ಳೆಯ ಮನುಷ್ಯನೆಂದು ಕರೆಸಿಕೊಳ್ಳುತ್ತಿದ್ದ. ಬೊರೈನರು ಅವನ ಮಾತುಗಳನ್ನು ನಂಬಬಾರದಾಗಿತ್ತು. ಅವನನ್ನು ತಮ್ಮ ನಾಯಕ, ಉದ್ಧಾರಕ ಎಂದು ಭಾವಿಸಬಾರದಿತ್ತು. ಅವನ ಉಪನ್ಯಾಸಗಳಿಗೆ ಬರಬಾರದಿತ್ತು. ಅವನ ಎಲ್ಲ ಸುಖಕರ ಬದುಕು ಅವನ ಮಾತುಗಳನ್ನು ಸುಳ್ಳಾಗಿಸಿತ್ತು. ಹಿಂದೆಂದಿಗಿಂತಲೂ ಅವನು ಭಯಂಕರವಾಗಿ ಸೋತಿದ್ದ!

ಅವನ ಮುಂದೆ ಈಗ ಎರಡು ಆಯ್ಕೆಗಳಿದ್ದವು. ಬೋರಿನೇಜ್ ಜನಕ್ಕೆ ತಾನು ನಿಜವಾಗಿಯೂ ಎಷ್ಟು ಸುಳ್ಳುಗಾರ, ಮೋಸಗಾರ ಎಂದು ತಿಳಿಯುವ ಮೊದಲೇ ರಾತ್ರೋರಾತ್ರಿ, ಅಲ್ಲಿಂದ ಪರಾರಿಯಾಗುವುದು, ಇಲ್ಲವೇ ತಾನು ತನ್ನ ಬಗ್ಗೆ ಕಂಡುಕೊಂಡ ಸತ್ಯದಿಂದ ಎಚ್ಚೆತ್ತು, ನಿಜವಾದ ಅರ್ಥದಲ್ಲಿ ದೇವರ ಮನುಷ್ಯನಾಗಿ ಬಾಳುವುದು.

ತನ್ನೆಲ್ಲ ಬಟ್ಟೆಗಳನ್ನು ಒಂದು ಚೀಲದಲ್ಲಿ ತುರುಕಿದ. ಜೊತೆಗೆ ಗೋಡೆ ಮೇಲಿನ ಕಲಾಕೃತಿಗಳನ್ನೂ, ಬೂಟುಗಳನ್ನೂ, ಪುಸ್ತಕಗಳನ್ನೂ ಬಿಡದೆ ತೆಗೆದುಕೊಂಡು ಚೀಲದೊಳಗೇ ಇರಿಸಿದ. ಅದನ್ನು ಒಂದು ಕುರ್ಚಿಯ ಮೇಲಿರಿಸಿ, ಏನೋ ಹಗುರಾದ ಭಾವದೊಂದಿಗೆ ಹೊರಗೆ ಹೆಜ್ಜೆ ಹಾಕಿದ.

ಕೊರಕಲು ಪ್ರದೇಶದ ಕೆಳಭಾಗದ ಹಿಂಬದಿಯಿಂದ ಪೈನ್‌ಕಾಡುಗಳು ಎತ್ತರೆತ್ತರಕ್ಕೇರಿ ಮತ್ತೂ ಇಳಿಜಾರು ಪ್ರದೇಶಕ್ಕೆ ವ್ಯಾಪಿಸಿತ್ತು. ಈ ಕಾಡುಗಳಲ್ಲಿ ಅಲ್ಲಲ್ಲಿ ಗಣಿಕೆಲಸಗಾರರ ಕ್ಯಾಬಿನ್‌ಗಳಿದ್ದವು. ವಿಚಾರಿಸಿದ ಮೇಲೆ ಯಾವುದೋ ಒಂದು ಕ್ಯಾಬಿನ್‌ನಲ್ಲಿ ಮಾತ್ರ ವಾಸ ಇದ್ದದ್ದು ತಿಳಿಯಿತು. ಒಂದು ಕಿಟಕಿಯೂ ಇಲ್ಲದ ಗುಡಿಸಲು ಮಾದರಿಯದಾಗಿತ್ತು. ಅದು ಇಳಿಜಾರಿನ ಪ್ರದೇಶದಲ್ಲಿತ್ತು. ನೆಲಮಣ್ಣಿನದಾಗಿತ್ತು. ಅದರ ಮೇಲೆ ಬಹಳಷ್ಟು ಕಾಲ ಓಡಾಡಿದ್ದ ಗುರುತುಗಳು ಕಾಣಿಸಿದವು. ಕರಗಿದ ಮಂಜು ಹರಿಯುತ್ತಿತ್ತು. ಮೇಲೆ ದಪ್ಪನಾದ ತೊಲೆಗಳಿದ್ದವು. ಬಹಳ ಕಾಲ ಅಲ್ಲಿ ಯಾರೂ ವಾಸವಾಗಿದ್ದಿರಲಿಲ್ಲವಾದ ಕಾರಣ, ಅಲ್ಲಲ್ಲಿ ಬಿರುಕುಗಳು ಕಾಣಿಸಿದವು. ಇವುಗಳ ಮೂಲಕ ಕೊರೆವ ಗಾಳಿ ಹಾಯುತ್ತಿತ್ತು.

ಅವನ ಜೊತೆಗೆ ಬಂದಿದ್ದಾಕೆಯನ್ನು "ಇದು ಯಾರದಿರಬಹುದು? ಎಂದು ವಿಚಾರಿಸಿದ.

"ವಾಸ್ಮೆಯ ಬಿಸಿನೆಸ್‌ಮ್ಯಾನ್ ಇದನ್ನು ಪಡೆದಿದ್ದ."

"ಇದರ ಬಾಡಿಗೆ ಎಷ್ಟೂಂತ ಗೊತ್ತೇನು?"

"ತಿಂಗಳಿಗೆ ಐದು ಫ್ರಾಂಕ್."

"ಸರಿ ಹಾಗಾದರೆ, ನಾನೇ ಇದನ್ನು ಬಾಡಿಗೆಗೆ ಪಡೀತೇನೆ."

"ಆದರೆ ಸಾರ್, ನೀವು ಇಲ್ಲಿರೋಕೆ ಆಗೋದಿಲ್ಲ."

"ಯಾಕಾಗೊಲ್ಲ"

"ಯಾಕೇಂದ್ರೆ....... ಇದು ಒಳ್ಳೆ ಜಾಗ ಅಲ್ಲ. ನಾನಿರುವ ಜಾಗಕ್ಕಿಂತ ಕೆಟ್ಟದಾಗಿರುತ್ತೆ. ವಾಸ್ಮೆಯಲ್ಲಿಯೇ ಇದು ತೀರಾ ತೀರಾ ಕೆಟ್ಟ ಸ್ಥಳ."

"ಅದಕ್ಕೇ ನಾನು ಬೇಕೂಂತ ಕೇಳಿದ್ದು!"

ಗುಡ್ಡವನ್ನು ಏರಿದ. ಅವನಿಗೆ ಒಂದು ಥರಾ ಸಮಾಧಾನ ಎನಿಸಿತು. ಅವನು ಇಲ್ಲದಿರುವಾಗ ಯಾವುದೋ ಕೆಲಸಕ್ಕೇಂತ ಮೇಡಂ ಡೆನಿಸ್, ವಿನ್ಸೆಂಟ್‌ನ ಕೋಣೆಗೆ ಹೋಗಿದ್ದಳು. ಅವನ ವಸ್ತುಗಳೆಲ್ಲ ಪ್ಯಾಕಾಗಿದ್ದುದನ್ನು ಗಮನಿಸಿದಳು.

ಅವನು ಒಳಗೆ ಬಂದಾಗ "ಏನಿದು ಮಿಸ್ಟರ್ ವಿನ್ಸೆಂಟ್! ಏನಾಗಿದೆ ನಿನಗೆ? ಇದ್ದಕ್ಕಿದ್ದಂತೆ ಹಾಲೆಂಡ್‌ಗೆ ಹೊರಟದ್ದೀ ಏಕೆ?"

"ನಾನು ಹೋಗುತ್ತಿಲ್ಲ ಮೇಡಂ. ಬೋರಿನೇಜ್‌ನಲ್ಲಿಯೇ ಇರುತ್ತೇನೆ."

"ಹಾಗಾದರೆ ಇದೆಲ್ಲ?" ಅನುಮಾನಿಸುತ್ತಾ ಕೇಳಿದಳು.

ವಿನ್ಸೆಂಟ್ ಎಲ್ಲವನ್ನೂ ವಿವರಿಸಿದ. ಮೆದುವಾಗಿ ಆಕೆ ಹೇಳಿದಳು – ವಿನ್ಸೆಂಟ್ ಹಾಗೆ ಬದುಕುವುದಕ್ಕೆ ಆಗುವುದಿಲ್ಲ. ನಿನಗೆ ಅಭ್ಯಾಸ ಇಲ್ಲ. ಜೀಸಸ್ ಕ್ರಿಸ್ತನ ಕಾಲಕ್ಕೂ ಈಗ್ಗೂ ಸಾಕಷ್ಟು ಬದಲಾವಣೆ ಆಗಿದೆ. ಈ ಕಾಲದಲ್ಲಿ, ಎಷ್ಟು ಚೆನ್ನಾಗಿ ಬದುಕಲು ಸಾಧ್ಯವೋ ಅಷ್ಟು ಚೆನ್ನಾಗಿ ಬದುಕಬೇಕು. ನೀನು ಎಷ್ಟು ಒಳ್ಳೆಯ ಮನುಷ್ಯ ಅಂತ ನೀನು ಮಾಡುತ್ತಿರುವ ಕೆಲಸದ ಮೂಲಕವೇ ಜನ ತಿಳಿದಿದ್ದಾರೆ."

ವಿನ್ಸೆಂಟ್‌ನನ್ನು ಒಪ್ಪಿಸಲು ಸಾಧ್ಯವಾಗಲಿಲ್ಲ. ವಾಸ್ಮೆಯಲ್ಲಿದ್ದ ಆ ಮನೆಮಾಲಿಕನನ್ನು ಕಂಡು, ಮಾತಾಡಿ ಬಾಡಿಗೆಗೆ ಹಿಡಿದ. ಆ ಮನೆಯನ್ನು ಪ್ರವೇಶಿಸಿದ. ಅವನ ಮೊದಲ ಸಂಬಳವಾಗಿ ಐವತ್ತು ಫ್ರಾಂಕ್‌ನ ಚೆಕ್ಕು ಬಂದಾಗ, ಅದರಿಂದ ಮರದ ಮಂಚ, ಮತ್ತು ಹಳೆಯ ಸ್ಟೋವ್‌ಗಳನ್ನು ಕೊಂಡುಕೊಂಡ. ಇವುಗಳಿಗೆ ಖರ್ಚಾಗಿ ಮಿಕ್ಕ ಹಣದಿಂದ ಪೂರ್ತಿ ತಿಂಗಳಿಗೆ ಬೇಕಾಗುಷ್ಟು ಬ್ರೆಡ್ಡು, ಚೀಸು, ಕಾಫಿ ಮುಂತಾದವುಗಳನ್ನು ಖರೀದಿಸಿದ. ಚಳಿ, ಗಾಳಿಯನ್ನು ತಡೆಯಲು, ಮನೆಯನ್ನು ರಿಪೇರಿ ಮಾಡಿಕೊಂಡ, ಅಲ್ಲಲ್ಲಿ ಬಿಟ್ಟುಕೊಂಡಿದ್ದ ಬಿರುಕುಗಳನ್ನು, ರಂಧ್ರಗಳನ್ನು, ಮಣ್ಣಿಂದ, ಗೋಣಿಚೀಲಗಳಿಂದ ಮುಚ್ಚಿದ. ಈಗ ಅವನು ಗಣಿ ಕೆಲಸಗಾರರು ವಾಸಿಸುತ್ತಿದ್ದಂತಹ ಮನೆಯಲ್ಲಿಯೇ ವಾಸ ಮಾಡ ತೊಡಗಿದ. ಅವರು ಊಟ ಮಾಡುತ್ತಿದ್ದುದನ್ನೇ ತಾನೂ ಊಟಮಾಡಿದ. ಅವರು ಮಲಗುತ್ತಿದ್ದಂತಹ ಹಾಸಿಗೆಯಲ್ಲಿಯೇ ಮಲಗುತ್ತಿದ್ದ. ಈಗ ಮಾತ್ರ, ಅವನು ನಿಜವಾದ ಅರ್ಥದಲ್ಲಿ ಅವರ ಮನುಷ್ಯನಾಗಿದ್ದ. ದೇವರ ವಿಚಾರವನ್ನು ಹೇಳುವ ಹಕ್ಕು ಅವನಿಗೆ ಸಾಧ್ಯವಾಗಿತ್ತು.

–೧೩–

'ಷಾರ್ ಬೊನಾಜೆ ಬೆಲ್‌ಜಿಕ್ ವಾಸ್ಮೆಯ ವ್ಯಾಪ್ತಿಯಲ್ಲಿನ ನಾಲ್ಕು ಗಣಿಗಳನ್ನು ನಿಯಂತ್ರಿಸುತ್ತಿತ್ತು. ಇದರ ಮ್ಯಾನೇಜರ್ ದುರಾಶೆಯ ಮನುಷ್ಯನಿರಬಹುದೆಂಬುದನ್ನು, ವಿನ್ಸೆಂಟ್ ಪತ್ತೆ ಹಚ್ಚುವ ಪ್ರಯತ್ನದಲ್ಲಿದ್ದ. ಅವನು ಸ್ವಲ್ಪ ದಢೂತಿಯಂತೆ ಕಾಣುತ್ತಿದ್ದುದು ನಿಜವಾದರೂ ಅವನ ಕಣ್ಣುಗಳಲ್ಲಿ ದಯೆ, ಕರುಣೆಗಳನ್ನು ಗುರುತಿಸಬಹುದಾಗಿತ್ತು. ಯಾಕೆಂದರೆ ಅವನೂ ಮೊದಲಿಗೆ ಸ್ವಲ್ಪ ಕಷ್ಟಪಟ್ಟವನಾಗಿದ್ದ.

ಗಣಿ ಕಾರ್ಮಿಕನ ಕಷ್ಟಗಳ ಬಗ್ಗೆ ಅವನಿಗೆ ವಿನ್ಸೆಂಟ್ ವಿವರಿಸಿದಾಗ, ಅದನ್ನು ಕೇಳಿದ ಮೇಲೆ, "ಹೌದು ಮಿಸ್ಟರ್ ವಿನ್ಸೆಂಟ್ ಅದು ನನಗೂ ಗೊತ್ತಿದೆ. ಅದೊಂದು ಹಳೇ ಕತೆ ಅವರಿಗೆ ಅನಿಸುತ್ತೆ, ನಾವು ಅವರನ್ನು ಉಪವಾಸಕ್ಕೆ ದೂಡಿ ತುಂಬ ತುಂಬ ಲಾಭ ಗಳಿಸುತ್ತಿದ್ದೇವೆಂತ. ಆದರೆ ಅದು ಸತ್ಯಕ್ಕೆ ದೂರವಾದ ಮಾತು.

ನಾನು ನಿಮಗೆ 'ಇಂಟರ್‌ನ್ಯಾಷನಲ್ ಬ್ಯೂರೋ ಆಫ್ ಮೈನ್ಸ್ ಇನ್ ಪ್ಯಾರಿಸ್' ಸಿದ್ಧಪಡಿಸಿರುವ ನಕ್ಷೆಯನ್ನು ತೋರಿಸುತ್ತೇನೆ. ನೀವೇ ನೋಡಿ."

ಅಗಲವಾದ ನಕ್ಷೆಯ ಹಾಳೆಯನ್ನು ಹರವಿದ. ತನ್ನ ಬೆರಳಿಂದ ನೀಲಿಗೆರೆಗಳನ್ನು ತೋರಿದ.

"ಮಿಸ್ಟರ್ ವಿನ್ಸೆಂಟ್ ನಾನು ಹೇಳುವುದನ್ನು ಗಮನವಿಟ್ಟು ಕೇಳಿಸಿಕೊಳ್ಳಿ, ಪ್ರಪಂಚದಲ್ಲಿ ಅತ್ಯಂತ ಕಡಿಮೆ ಇದ್ದಿಲನ್ನು ಹೊಂದಿರುವ ಗಣಿಗಳೆಂದರೆ ಬೆಲ್ಜಿಯಮ್ ಗಣಿಗಳು. ಇದ್ದಿಲನ್ನು ಉತ್ಪಾದಿಸುವುದು ಬಹಳ ತ್ರಾಸದಾಯಕ. ಅಲ್ಲದೆ ಇಲ್ಲಿನ ಗಣಿಗಳಿಂದ ತೆಗೆವ ಇದ್ದಿಲನ್ನು ಹೆಚ್ಚಿನ ಲಾಭಕ್ಕೆ ಮುಕ್ತ ಮಾರುಕಟ್ಟೆಯಲ್ಲಿ ಮಾರುವುದಕ್ಕೂ ಸಾಧ್ಯವಿಲ್ಲ. ಇಲ್ಲಿನ ಗಣಿಗಳ ಕೆಲಸ ನಿರ್ವಹಿಸಲು ಅಪಾರ ಹಣ ವೆಚ್ಚವಾಗುತ್ತದೆ. ನಾವು ಮಾಡುವ ಖರ್ಚನ್ನೂ ಬರ ಮಾಡಿಕೊಳ್ಳಲಾಗದು. ಅಂತಹದರಲ್ಲಿ ಕಾರ್ಮಿಕರು ನಿರೀಕ್ಷಿಸುವ ಸಂಬಳ, ಸವಲತ್ತು ಹೇಗೆ ಸಾಧ್ಯ. ನೋಡ್ತಾ ಹೋದರೆ ದಿವಾಳಿಯಾಗುವ ಸಂಭವವೇ ಹೆಚ್ಚಾಗಿ ಕಾಣಿಸುತ್ತದೆ....... ಇದಕ್ಕೇನು ಹೇಳ್ತೀರಿ ವಿನ್ಸೆಂಟ್?" "ಏನು ಹೇಳಲಿ, ಪರಿಸ್ಥಿತೀನೇ ಹೀಗಿರುವಾಗ?" "ಕಾರ್ಮಿಕರಿಗೆ ಒಂದು ಫ್ರಾಂಕ್ ಹೆಚ್ಚಿಗೆ ಮಾಡಿದರೆ ಮಾರುಕಟ್ಟೆ ಬೆಲೆಗಿಂತ, ನಮ್ಮ ಉತ್ಪಾದನೆಯ ವೆಚ್ಚ ಹೆಚ್ಚಾಗುತ್ತದೆ. ಅದಕ್ಕಾಗಿ ನಾವು ಅಂಥ ಸಂದರ್ಭದಲ್ಲಿ ನಮ್ಮ ಸಂಸ್ಥೆಯನ್ನು ಮುಚ್ಚಬೇಕಾಗುತ್ತದೆ. ಹಾಗಾದಲ್ಲಿ ಗಣಿ ಕಾರ್ಮಿಕರು ಉಪವಾಸದಿಂದ ಸಾಯುತ್ತಾರೆ."

"ಗಣಿ ಮಾಲಿಕರು ತಾವು ತೆಗೆದುಕೊಳ್ಳುವ ಲಾಭದಲ್ಲಿ ಸ್ವಲ್ಪ ಕಡಿತ ಮಾಡಿಕೊಂಡರೆ, ಕಾರ್ಮಿಕರಿಗೆ ಒಂದು ಸ್ವಲ್ಪವಾದರೂ ಹೆಚ್ಚಾಗುವ ಸಾಧ್ಯತೆ ಇರಬಹುದಲ್ಲ!"

ಮ್ಯಾನೇಜರ್ ವಿಷಾದದಿಂದ ಹೇಳಿದ – 'ಇಲ್ಲ ಮಿಸ್ಟರ್ ವಿನ್ಸೆಂಟ್. ಇದ್ದಿಲ ಗಣಿಗಳು ಮುಂದುವರೆಯುವುದು ಯಾವುದರ ಮೇಲೆ ಗೊತ್ತಾ?..... ಬಂಡವಾಳ..... ಬಂಡವಾಳದ ಮೇಲೆ. ಬೇರೆ ಯಾವುದೇ ಉದ್ಯಮದಲ್ಲಿರುವಂತೆ ಹೂಡಿಕೆದಾರರು ಹೆಚ್ಚಿನ ಲಾಭಾಂಶವನ್ನು ನಿರೀಕ್ಷಿಸುತ್ತಾರೆ. 'ಚ಼ಾರ್‌ಬೊನೇಜ್ ಬೆಲ್ಜೀಕ್' ಕಂಪನಿ ಶೇಕಡ ೩ ರಂತೆ ಲಾಭಾಂಶವನ್ನು ಹೂಡಿಕೆದಾರರಿಗೆ ನೀಡುತ್ತಿದೆ. ಅದನ್ನು ತಪ್ಪಿಸಿ, ಕಡಿತ ಮಾಡಿ ಕಡಿಮೆ ಲಾಭಾಂಶ ಘೋಷಿಸಿದರೆ ತಾವು ಹೂಡಿದ ಬಂಡವಾಳವನ್ನು ಬೇರೆಕಡೆಗೆ ತಿರುಗಿಸುತ್ತಾರೆ. ಹಾಗಾದರೆ, ಅನಿವಾರ್ಯವಾಗಿ ಕಂಪೆನಿಗೆ ಬಾಗಿಲು ಮುಚ್ಚಿ ಹೋಗುವುದೊಂದೇ ದಾರಿಯಾಗುತ್ತದೆ. ಬಂಡವಾಳವಿಲ್ಲದೆ ಹೇಗೆ ತಾನೇ ಉತ್ಪಾದನೆ ಮುಂದುವರೆಯಲು ಸಾಧ್ಯ?..... ಬಂಡವಾಳವಿಲ್ಲದೆ ಕೆಲಸ ಖೋತಾ, ಕೆಲಸವಿಲ್ಲದೆ ಕಾರ್ಮಿಕರಿಗೆ ಉಪವಾಸ!.... ಇವಷ್ಟೇ ಉಳಿಯುವುದು!

ಈಗಲಾದರೂ ಅರ್ಥ ಆಗಿರಬೇಕು... ಕಾರ್ಮಿಕರ ಕನಿಷ್ಠ ಸಂಬಳ, ಪ್ರತಿಕೂಲ ಪರಿಸ್ಥಿತಿ, ಅನಾರೋಗ್ಯಕರವಾದ ವಾತಾವರಣ, ಅರೆಹೊಟ್ಟೆ – ಇವೆಲ್ಲಕ್ಕೆ ಕಂಪೆನಿ ಅಥವಾ ಗಣಿ ಮಾಲಿಕರು, ಮ್ಯಾನೇಜರರು ಯಾವ ರೀತಿಯಿಂದಲೂ ಹೊಣೆಯಲ್ಲ. ಅವರು ಇದನ್ನೆಲ್ಲಾ ಸೃಷ್ಟಿಸುವುದಿಲ್ಲ. ಆದ್ದರಿಂದ ದೂರಬೇಕಾದ್ದು ನಮ್ಮನ್ನಲ್ಲ. ದೇವರನ್ನು!!"

ಇದನ್ನೆಲ್ಲ ಕೇಳಿ ದಿಗ್ಭ್ರಮೆಗೊಳ್ಳಲಿಲ್ಲ. ಮ್ಯಾನೇಜರ್ ವಿವರಿಸಿದ್ದರ ಬಗ್ಗೆ ಗಂಭೀರವಾಗಿ ಆಲೋಚನೆಗೆ ತೊಡಗಿದ.

"ನಿಮಗೆ ಕಾರ್ಮಿಕರ ವಿಚಾರದಲ್ಲಿ ಏನೇನೂ ಮಾಡಲು ಸಾಧ್ಯವಿಲ್ಲದಿದ್ದರೂ ಕಡೇ ಪಕ್ಷ ಕೆಲಸದ ಅವಧಿಯಲ್ಲಿ ಕಡಿತ ತರಬಹುದಲ್ಲ? ಗಣಿಗಳಲ್ಲಿನ ಆ ಭಯಂಕರ ಪರಿಸರದಲ್ಲಿ ಹದಿಮೂರು ಗಂಟೆಗಳ ಕಾಲ ಕೆಲಸ ಮಾಡುವುದೆಂದರೆ, ಇಡೀ ಊರನ್ನೇ ನಾಶ ಮಾಡಿದಂತೆ!"

"ಇಲ್ಲ ಮಿಸ್ಟರ್ ವಿನ್ಸೆಂಟ್, ಹಾಗೆ ಮಾಡಲು ಸಾಧ್ಯವೇ ಇಲ್ಲ. ಕೆಲಸದ ವೇಳೆಯನ್ನು ಕಡಿಮೆ ಮಾಡುವುದೆಂದರೆ, ಸಂಬಳ ಹೆಚ್ಚಿಸಿದಂತೆಯೇ. ಕಡಿಮೆ ಅವಧಿ ಕೆಲಸದಿಂದ ಉತ್ಪಾದನೆಯಲ್ಲಿ ಕಡಿತ. ಅವರಿಗೆ ನೀಡುವ ಎರಡೂವರೆ ಫ್ರ್ಯಾಂಕ್‌ಗೆ ಅನುಗುಣವಾಗಿ ಉತ್ಪಾದನೆ ಸಾಧ್ಯವಿಲ್ಲ. ಪರಿಣಾಮವಾಗಿ ಪ್ರತಿ ಟನ್‌ಗೆ ನಮ್ಮ ಉತ್ಪಾದನೆಯ ಖರ್ಚು ಹೆಚ್ಚಾಗುತ್ತದೆ."

"ಹೋಗಲಿ, ತಮ್ಮಿಂದ ಸಾಧ್ಯವಾಗುವ ಒಂದೇ ಒಂದು ಕೆಲಸವಿದೆ."

"ಅದೇ ಕೆಲಸ ಮಾಡುವ ಪರಿಸರದಲ್ಲಿ ಸುಧಾರಣೆ? – ಹೌದು ತಾನೇ?"

"ಹೌದು ಕೆಲಸದ ವೇಳೆಯಲ್ಲಿನ ಅಪಾಯಗಳನ್ನು ತಪ್ಪಿಸುವಂತಹ ರೀತಿಯಲ್ಲಿ ಸುಧಾರಣೆ ತರಬೇಕು."

ಮ್ಯಾನೇಜರ್ ನಕಾರಾತ್ಮಕವಾಗಿ ತಲೆಯಾಡಿಸಿದ. "ಖಂಡಿತ ಸಾಧ್ಯವಿಲ್ಲ. ನಮ್ಮ ಡಿವಿಡೆಂಡ್ (ಲಾಭಾಂಶ) ಕಡಿಮೆ ಇರುವುದರಿಂದ ಮಾರುಕಟ್ಟೆಯಲ್ಲಿ ಹೊಸ ಸರಕನ್ನೂ ಮಾರಲಾಗುತ್ತಿಲ್ಲ. ನಮ್ಮ ಲಾಭಗಳಿಕೆ, ಪರಿಸ್ಥಿತಿಯಲ್ಲಿ ಸುಧಾರಣೆ ತರಲು ತಗಲುವ ವೆಚ್ಚವನ್ನು ಭರಿಸುವಷ್ಟು ಇಲ್ಲವಾಗಿದೆ. ವಿನ್ಸೆಂಟ್ ಇದೊಂದು ವಿಷವರ್ತುಲ. ಇಡೀ ವ್ಯವಸ್ಥೆಯೇ ನಿರಾಶಾದಯಕವಾಗಿದೆ. ಇಂಥ ಪರಿಸ್ಥಿತಿಗಳಿಂದಾಗಿಯೇ ಒಬ್ಬ ಕಟ್ಟಾ ಕ್ಯಾಥೊಲಿಕ್ ಆಗಿದ್ದವನು, ಕಟು ನಾಸ್ತಿಕನಾಗಿ ಪರಿವರ್ತನೆಗೊಂಡೆ. ಸ್ವರ್ಗದಲ್ಲಿನ ಆ ದೇವರು ಕೆಲವರ ವಿಚಾರದಲ್ಲಿ ಯಾಕೆ ಹೀಗೆ ನಿರ್ದಯನಾಗಿ, ಅವರ ಮುಂದೆ ಭಯಂಕರ ಪರಿಸ್ಥಿತಿಯನ್ನು ಸೃಷ್ಟಿಸುತ್ತಾನೋ ನನಗಿನ್ನೂ ಅರ್ಥವಾಗಿಲ್ಲ. ಶತಶತಮಾನಗಳಿಂದಲೂ ಇಂಥದ್ದೇ ನಡೆದುಕೊಂಡು ಬಂದಿದೆ. ಒಂದು ಕ್ಷಣವಾದರೂ ಈ ನೊಂದವರ ಬಗ್ಗೆ ದೇವರ ಕರುಣೆಯ ಮಳೆ ಸುರಿಯಬಾರದೇ?"

ಅವನ ಮಾತುಗಳಿಗೆ ಏನು ಪ್ರತಿ ಹೇಳಬೇಕೋ, – ತೋಚದೆ, ಇನ್ನೂ ದಿಗ್ಭ್ರಮೆಯ ಸ್ಥಿತಿಯಲ್ಲಿಯೇ ಮನೆಯತ್ತ ಹೆಜ್ಜೆ ಹಾಕಿದ.

–೧೪–

ಫೆಬ್ರವರಿ ತಿಂಗಳು. ವರ್ಷದಲ್ಲಿಯೇ ಅತ್ಯಂತ ಶೀತಕಾಲ. ಭಯಂಕರ ಚಳಿಗಾಳಿಯ ಬೀಸಿನ ರಭಸ. ಹೊರಗೆ ಹೆಜ್ಜೆಯಿಡುವ ಯೋಚನೆಯಿಂದಲೇ ನಡುಕ ಶುರುವಾಗುತ್ತದೆ. ರಸ್ತೆಗಳಲ್ಲಿ ನಡೆದಾಡುವುದೇ ಸಾಧ್ಯವಿಲ್ಲವಾಗಿದೆ. ಗಣಿಕಾರ್ಮಿಕರ ಮನೆಗಳಿಗೆ, ಬೆಚ್ಚಗಿಡಲು ಹೆಚ್ಚಿನ ಇದ್ದಿಲು ಬೇಕಾಗುತ್ತದೆ. ಆದರೆ ಇದ್ದಿಲಿಗೇ ಬರ ಬಂದಿದೆ. ಕೊರೆವ

ಚಳಿಗಾಳಿಯಲ್ಲಿ. ಮಂಜು ಬೀಳುತ್ತಿರುವಾಗ ಹೆಂಗಸರು ಕಪ್ಪು ಬೆಟ್ಟಕ್ಕೆ ಹೋಗಿ ಇದ್ದಿಲನ್ನು ಸಂಗ್ರಹಿಸಿ ತರುವುದೂ ಸಾಧ್ಯವಿರಲಿಲ್ಲ. ಸ್ಕರ್ಟ್, ಬ್ಲೌಸ್ ಮತ್ತು ಕಾಲುಚೀಲಗಳು ಬಿಟ್ಟರೆ ಅವರ ಬಳಿ ಬೆಚ್ಚಗೆ ತೊಟ್ಟುಕೊಳ್ಳಲು ಏನೂ ಇರಲಿಲ್ಲ.

ಮಕ್ಕಳು ಈ ಚಳಿಯಿಂದಾಗಿ ಹಾಸಿಗೆ ಬಿಟ್ಟೇ ಏಳುತ್ತಿರಲಿಲ್ಲ. ಊಟ, ತಿಂಡಿ, ಕಾಫಿಗಳು ಬಿಸಿಬಿಸಿಯಾಗಿರಬೇಕೆಂದು ಕಲ್ಪಿಸಿಕೊಳ್ಳುವುದೂ ಸಾಧ್ಯವಿರಲಿಲ್ಲ. ಏಕೆಂದರೆ ಒಲೆ ಉರಿಸಲು ಇದ್ದಿಲು ಇದ್ದರೆ ತಾನೇ?! ಗಣಿಗಳಲ್ಲಿನ ಸುಡುಬೇಗೆಯ ಬಿಸಿಯಲ್ಲಿ ಬೆಂದು ಹೊರಕ್ಕೆ ಬರುತ್ತಿದ್ದ ಕಾರ್ಮಿಕರು, ಒಂದು ಕ್ಷಣವೂ ತಡಮಾಡದೆ, ಹೆಪ್ಪುಗಟ್ಟಿಸುವ ಶೀತಪರಿಸರದಲ್ಲಿ ಮುಳುಗಿ ಹೋಗುತ್ತಿದ್ದರು. ಹಿಮಸುರಿದ ರಸ್ತೆಗಳ ಮೂಲಕ ಮನೆಗಳನ್ನು ತಲುಪಲು ಹೆಣಗಾಡುತ್ತಿದ್ದರು. ಕ್ಷಯದ ಸೋಂಕು, ನ್ಯೂಮೋನಿಯಾಗಳ ಹಾವಳಿಯಿಂದ ದಿನ ನಿತ್ಯ ಸಾವುಗಳು ಸಂಭವಿಸುತ್ತಿದ್ದವು. ಆ ತಿಂಗಳಂತೂ ವಿನ್ಸೆಂಟ್‌ಗೆ ಅಂತಿಮ ಸಂಸ್ಕಾರದ ವಿಧಿಗಳನ್ನು ಪೂರೈಸಿಕೊಡುವುದೇ ದೊಡ್ಡ ಕೆಲಸವಾಗಿತ್ತು.

ಕೊರೆವ ಚಳಿಯಿಂದಾಗಿ ನೀಲಿಗಟ್ಟಿದ ಮುಖದ ಮಕ್ಕಳಿಗೆ ಓದು ಬರಹ ಕಲಿಸುವ, ಉಪದೇಶ ನೀಡುವ ಕೆಲಸವನ್ನು ಬದಿಗಿರಿಸಿ, ಕಾರ್ಮಿಕರ ಕುಟುಂಬಗಳಿಗೆ ಇದ್ದಿಲನ್ನು ಹಂಚಲು ಇದ್ದಿಲ ಸಂಗ್ರಹಕ್ಕಾಗಿ ಸಮಯ ಸವೆಸುತ್ತಿದ್ದ, ವಿನ್ಸೆಂಟ್ ಇದರಿಂದ ಅವರ ಕಷ್ಟಕ್ಕೆ ಸ್ವಲ್ಪವಾದರೂ ಸಹಾಯವಾದೀತೆಂಬುದು ಅವನ ಭಾವನೆ. ಈಗ ಅವನನ್ನು ನೋಡಿದರೆ ಮುಖವೆಲ್ಲ ಮಸಿಮೆತ್ತಿಕೊಂಡಿದ್ದು, ಗಣಿಕಾರ್ಮಿಕರಲ್ಲಿ ಅವನೂ ಒಬ್ಬನೆಂಬ ಭಾವನೆ ಬರುತ್ತಿತ್ತು. ವಿನ್ಸೆಂಟ್‌ನನ್ನು ಗಣಿ ಕೆಲಸಗಾರನೆಂದೇ ಗುರುತಿಸುತ್ತಿದ್ದರು.

ಎಷ್ಟೋ ಗಂಟೆಗಳ ಕಾಲ ಇದ್ದಿಲ ಬೆಟ್ಟವನ್ನೇರಿ ಇಳಿದು ಮಾಡಿದ ಮೇಲೆ, ಒಂದರ್ಧ ಚೀಲದಷ್ಟು ಇದ್ದಿಲ ಸಂಗ್ರಹಣೆ ಆಗಿತ್ತು. ಇದನ್ನು ಕಾರ್ಮಿಕರ ಮನೆಯ ಹೆಂಗಸರಿಗೆ ಹಂಚಿದರೆ, ಕಡೆಯ ಪಕ್ಷ ಚಳಿಯಲ್ಲಿ ಹೆಪ್ಪುಗಟ್ಟಿ ಬರುವ ತಮ್ಮ ಗಂಡಂದಿರಿಗೆ ಬಿಸಿಬಿಸಿಯಾದ ಕಾಫಿಕೊಡುವುದಕ್ಕಾದರೂ ಆದೀತು ಎಂಬುದು ಅವನ ಲೆಕ್ಕಾಚಾರ! ಈ ಆಲೋಚನೆಯೊಂದಿಗೆ ಹೆಜ್ಜೆ ಹಾಕಿದ. ಮಾರ್ಕಾಸ್‌ನ ಹೆಬ್ಬಾಗಿಲ ಬಳಿಗೆ ಬರುವ ಸಮಯಕ್ಕೆ ಸರಿಯಾಗಿ, ಕಾರ್ಮಿಕರೂ ಮಾರ್ಕಾಸ್‌ನಿಂದ ಹೊರಬರುತ್ತಿದ್ದರು. ಕೆಲವರು ವಿನ್ಸೆಂಟ್‌ನನ್ನು ಗುರುತಿಸಿ ಮಾತಾಡಿದರೆ ಮತ್ತೆ ಕೆಲವರು ತಮ್ಮ ಪಾಡಿಗೆ ತಾವು, ಅವನನ್ನು ಗಮನಿಸದೆಯೇ ಮುಂದೆ ಸಾಗಿದರು.

ಕಡೆಯದಾಗಿ ಕಣ್ಣಿಗೆ ಬಿದ್ದವನು ಒಬ್ಬ ಮುದುಕ. ಕೆಮ್ಮಿನ ಹಾವಳಿಯಿಂದ ತತ್ತರಿಸುತ್ತಿದ್ದುದರಿಂದ ಹೆಜ್ಜೆಯಿಡಲೂ ಕಷ್ಟಪಡುತ್ತಿದ್ದ. ಬಯಲ ಕಡೆಯಿಂದ ಶೀತಗಾಳಿ ಬೀಸಿ ಬರಲು ಮತ್ತೂ ತತ್ತರಿಸಿದ. ನಡಿಗೆಯಲ್ಲಿ, ಸಮತೋಲನ ಕಳೆದುಕೊಂಡು ಮುಖ ಕೆಳಗಾಗಿ ಬಿದ್ದ. ಆದರೆ ಸ್ವಲ್ಪ ಸಾವರಿಸಿಕೊಂಡು ಎದ್ದ. ಭುಜಗಳ ಸುತ್ತ ಒಂದು ತುಂಡು ಬಟ್ಟೆಯನ್ನು ಸುತ್ತಿಕೊಂಡಿದ್ದ. ಬೆನ್ನಮೇಲೆ ಚೀಲವನ್ನು ಹೊತ್ತಿದ್ದ. ಅದರ ಮೇಲೆ ಏನನ್ನೋ ಪ್ರಿಂಟ್ ಮಾಡಲಾಗಿತ್ತು. ಕಷ್ಟಪಟ್ಟು ಓದಲು ಪ್ರಯತ್ನಿಸಿದ, ವಿನ್ಸೆಂಟ್!

ವಿನ್ಸೆಂಟ್, ತಾನು ಸಂಗ್ರಹಿಸಿದ್ದ ಇದ್ದಿಲನ್ನು ಕಾರ್ಮಿಕರ ಮನೆಗಳಿಗೆ ವಿತರಿಸಿದ ಮೇಲೆ ತನ್ನ ಮನೆಗೆ ಹೊರಟ. ತನ್ನಲ್ಲಿದ್ದ ಬಟ್ಟೆಗಳನ್ನೆಲ್ಲ ತಡವಿದ. ತನಗೆ ಬೇಕಾದ ಒಂದೆರಡು ಜೊತೆ ಬಟ್ಟೆ, ಕಾಲುಚೀಲ ಇತ್ಯಾದಿಗಳನ್ನು ತೆಗದಿರಿಸಿಕೊಂಡು, ಮಿಕ್ಕೆಲ್ಲವನ್ನೂ ಚೀಲದಲ್ಲಿ ತುಂಬಿಕೊಂಡ.

ಮುದುಕನಿಗೆ ಒಂದೆರಡು ಬಟ್ಟೆಗಳನ್ನು ಕೊಟ್ಟ. ಮತ್ತೆ ಕೆಲವನ್ನು ಮಕ್ಕಳಿಗೆ ಬಟ್ಟೆ ಹೊಲಿಸಲು ತನ್ನ ಉಡುಪುಗಳನ್ನು ಕೊಟ್ಟುಬಿಟ್ಟ. ಕಾಲುಚೀಲ ಮತ್ತಿತರ ವಸ್ತುಗಳನ್ನು, ಉಡುಪುಗಳನ್ನು ಕ್ಷಯ ಪೀಡಿತರಿಗೆ ನೀಡಿದ. ಬೆಚ್ಚನೆಯ ಕೋಟೊಂದನ್ನು, ಗಣಿ ಕೆಲಸದ ಸಮಯದಲ್ಲಿ ದುರ್ಮರಣಕ್ಕೀಡಾದ ಕಾರ್ಮಿಕನ ಬಸುರಿ ಹೆಂಡತಿಗೆ ನೀಡಿದ. ಅವಳಿಗೆ ಇಬ್ಬರು ಮಕ್ಕಳಿದ್ದರು. ಈಗ ಇನ್ನು ಮುಂದೆ, ಗಂಡನ ಕೆಲಸದ ಜಾಗದಲ್ಲಿ ಅವಳಿಗೇ ಹೋಗಬೇಕಿತ್ತು.

ಮಕ್ಕಳಿಗೆ ಅಕ್ಷರ ಕಲಿಸಲೆಂದು ನಡೆಸುತ್ತಿದ್ದ ಪಾಠಶಾಲೆಯನ್ನು, ವಿನ್ಸೆಂಟ್ ಮುಚ್ಚಿಬಿಟ್ಟಿದ್ದ. ಶಾಲೆಯಲ್ಲಿ ಮಕ್ಕಳನ್ನು ಬೆಚ್ಚಗೆ ಇರಿಸಲು ಇದ್ದಿಲು ಬೇಕಾಗುತ್ತಿತ್ತು. ಬೇಕಾದ ಇದ್ದಿಲನ್ನು ಕಾರ್ಮಿಕರ ಮನೆಗಳಿಂದಲೇ ಪಡೆಯಬೇಕಿತ್ತು. ಇದು ಅವನಿಗೆ ಸರಿ ಎನಿಸಲಿಲ್ಲವಾದ್ದರಿಂದ, ಶಾಲೆಯನ್ನೇ ಮುಚ್ಚಿಟ್ಟ. ಈಗ ಕ್ರಿಸ್ತನ ವಿಚಾರಗಳನ್ನು ತಿಳಿಸುವುದಕ್ಕಾಗಲೀ, ಅವನ ಉಪದೇಶಗಳನ್ನು ಜನಕ್ಕೆ ವಿವರಿಸುವುದಕ್ಕಾಗಲೀ ಬಿಡುವಿರಲಿಲ್ಲ. ಅದಕ್ಕಿಂತ ಹೆಚ್ಚಾಗಿ ಬಡವರ, ರೋಗಿಗಳ, ಸಂಕಟದಲ್ಲಿ ಇದ್ದವರ ಸೇವೆ ಮಾಡುತ್ತಿದ್ದ. ದೈಹಿಕ ಕೆಲಸಗಳನ್ನೂ ಮಾಡಿಕೊಡುತ್ತಿದ್ದ. ಚಿಕಿತ್ಸೆ ನೀಡುವುದು, ಮನೆ ಶುಭ್ರಗೊಳಿಸುವುದು, ಬಿಸಿ ಬಿಸಿಯಾದ ಪೇಯಗಳನ್ನು ಮಾಡಿಕೊಡುವುದೂ ಔಷಧಿಗಳನ್ನು ಸಿದ್ಧಪಡಿಸುವುದು– ಮೊದಲಾದ ಕಾರ್ಯಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದ. ಅವನಿಗೆ ಈಗ ಬೈಬಲ್‌ನ ಹಾಳೆಗಳನ್ನು ತಿರುವಿ ಹಾಕಲೂ ಸಾಧ್ಯವಿರಲಿಲ್ಲ. ಸದ್ಯಕ್ಕೆ ಅದು ಬೇಕಾಗಿಯೂ ಇರಲಿಲ್ಲ. ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದವರಿಗೆ ಬೈಬಲ್ ಅನ್ನು ಓದುವುದೂ, ಉಪದೇಶಗಳನ್ನು ಕೇಳಿಸಿಕೊಳ್ಳುವುದೂ ಒಂದು 'ಸುಖಭೋಗ'ವೆನಿಸುತ್ತಿತ್ತು. ಆದ್ದರಿಂದ ಅವರ ಬದುಕುಗಳಲ್ಲಿ 'ದೇವರು' ಎಂಬ ಪದಕ್ಕೆ ಅವಕಾಶವೇ ಇರಲಿಲ್ಲ.

ಮಾರ್ಚ್‌ನಲ್ಲಿ ಚಳಿಗೆ ಸ್ವಲ್ಪ ಬಿಡುವು ದೊರಕಿತಾದರೂ ಜ್ವರದ ಹಾವಳಿ ಹೆಚ್ಚಾಯಿತು. ವಿನ್ಸೆಂಟ್ ತನ್ನ ಸಂಬಳದ ನಲ್ವತ್ತು ಫ್ರಾಂಕ್‌ಗಳನ್ನು ರೋಗಿಗಳ ಊಟೋಪಚಾರ, ಔಷಧಿಗಳಿಗೆ ಖರ್ಚುಮಾಡಿ, ತಾನು ಮಾತ್ರ ಅರೆಹೊಟ್ಟೆಯಿಂದ ಬದುಕಿದ. ಇದರಿಂದಾಗಿ ಅವನ ಸ್ಥಿತಿ ಚಿಂತಾಜನಕವಾಗಿ ಪರಿಣಮಿಸಿತು. ಹೊಟ್ಟೆ ತುಂಬ ಊಟವಿಲ್ಲ; ವಿಶ್ರಾಂತಿಯಿಲ್ಲ; ಸರಿಯಾಗಿ ನಿದ್ದೆ ಇಲ್ಲ; ಜ್ವರದಿಂದ ನರಳುತ್ತಿದ್ದರೂ ರೋಗಿಗಳ ಯೋಗಕ್ಷೇಮ ವಿಚಾರಿಸಲು ಓಡಾಡಿದ. ಮನೆ ಮನೆಗೂ ಭೇಟಿ ಕೊಟ್ಟ. ಅವನನ್ನು ನೋಡಲು ಹೆದರಿಕೆಯೆನಿಸುತ್ತಿತ್ತು. ತುಂಬ ಕೃಶವಾಗಿ ಬಿಟ್ಟಿದ್ದ. ಕಣ್ಣುಗಳು ಗುಳಿಬಿದ್ದಿದ್ದವು. ಕೆನ್ನೆಗಳು ಒಳಕ್ಕೆ ಹೋಗಿದ್ದವು. ದೊಡ್ಡದಾಗಿದ್ದ ಅವನ ತಲೆ ಸ್ವಲ್ಪ

ಸಂಕುಚಿಸಿದಂತೆ ಕಾಣುತ್ತಿತ್ತು. ಕಣ್ಣಿನಡಿ ಕಪ್ಪು ರೇಖೆಗಳು ಕಾಣಿಸುತ್ತಿದ್ದವು. ಗಲ್ಲವೊಂದು ಮಾತ್ರವೇ ಮೊನಚಾಗಿ, ಮೊದಲಿನಂತೆಯೇ ಚಾಚಿಕೊಂಡಿತ್ತು.

ಡೆಕ್ರುಖ್‌ನ ಹಿರಿಯ ಮಗುವಿಗೆ ಟೈ ಫಾಯ್ಡ್ ಬಂದಿತ್ತು. ಮಲಗಲು ಹಾಸಿಗೆಗಳದೇ ಸಮಸ್ಯೆಯಾಗಿತ್ತು. ಎರಡೇ ಎರಡು ಹಾಸಿಗೆಗಳಿದ್ದವು. ಒಂದರಲ್ಲಿ ಡೆಕ್ರುಖ್ ದಂಪತಿಗಳು ಮಲಗುತ್ತಿದ್ದರು. ಮತ್ತೊಂದರಲ್ಲಿ ಮೂವರು ಮಕ್ಕಳೂ ಒಟ್ಟಿಗೇ ಮಲಗುತ್ತಿದ್ದರು. ಆದರೆ ಈಗ ಜ್ವರ ಬಂದ ಹುಡುಗನ ಜೊತೆ ಉಳಿದ ಇಬ್ಬರು ಮಲಗಿದರೆ ಅವರಿಗೂ ಜ್ವರದ ಸಂಭವ ಇರುತ್ತಿತ್ತು.

ಆ ಇಬ್ಬರು ಮಕ್ಕಳನ್ನು ನೆಲದ ಮೇಲೆ ಮಲಗಿಸಿದರೆ ನ್ಯುಮೋನಿಯಾ ಆಗುವ ಭಯವಿತ್ತು. ದಂಪತಿಗಳು ನೆಲದ ಮೇಲೆ ಮಲಗಿದರೆ ಮರುದಿವಸದ ಕೆಲಸಕ್ಕೆ ಶಕ್ತರಾಗುವುದಿಲ್ಲ. ವಿನ್ಸೆಂಟ್‌ಗೆ ತಕ್ಷಣ ಏನು ಮಾಡಬೇಕೆಂದು ಹೊಳೆಯಿತು.

"ಡೆಕ್ರುಖ್, ನೀನು ಊಟಕ್ಕೆ ಕುಳಿತುಕೊಳ್ಳುವ ಮೊದಲು ನನಗೊಂದು ಸಹಾಯ ಮಾಡ್ತೀಯಾ?"

ಡೆಕ್ರುಖ್ ಕೆಲಸದಿಂದ ದಣಿದಿದ್ದ, ಅವನ ನೆತ್ತಿಯಲ್ಲಿ ನೋವಿತ್ತು. ಆದರೂ ವಿನ್ಸೆಂಟ್‌ನ ಮಾತಿಗೆ ಪ್ರತಿ ಹೇಳದೆ ಅವನನ್ನು ಹಿಂಬಾಲಿಸಿದ. ಮನೆ ಒಳಗೆ ಪ್ರವೇಶಿಸುತ್ತಲೇ ವಿನ್ಸೆಂಟ್ ತನ್ನ ಹಾಸಿಗೆ ಮೇಲೆ ಹಾಸಿದ್ದ ಚಾದರಗಳನ್ನು ಎತ್ತಿ, "ಹಿಡಿದುಕೋ. ಇವನ್ನು ನಿಮ್ಮ ಮನೆಗೆ ಕೊಂಡೊಯ್ಯೋಣ. ನಿನ್ನ ಮಗುವಿಗಾಗಿ ಇದು ಇರಲಿ" ಎಂದ.

~~ಡೆಕ್ರುಖ್~~-ಬಿಗಿದುಕೊಂಡು ಹೇಳಿದ – "ನಮಗೆ ಮೂವರು ಮಕ್ಕಳಿದ್ದಾರೆ. ಒಂದು ಮಗುವನ್ನು ಕಳೆದುಕೊಳ್ಳಬೇಕೆಂಬುದೇ ದೇವರ ಇಚ್ಛೆಯಾದರೆ, ಇಬ್ಬರಾದರೂ ನಮ್ಮ ಪಾಲಿಗೆ ಇರುತ್ತಾರೆ. ಆದರೆ ನಮಗೆ ಇಡೀ ಊರಿನ ಶುಶ್ರೂಷೆಗೆ ಇರುವುದು ಒಬ್ಬರೇ ಒಬ್ಬರು. ಅವರೇ ನಮ್ಮ ಮಿಷ್ಟರ್ ವಿನ್ಸೆಂಟ್. ಅವರನ್ನು ಸಾಯಲು ನಾನು ಬಿಡುವುದಿಲ್ಲ!"

ಕುಂಟುತ್ತಲೇ ಡೆಕ್ರುಖ್ ಕ್ಯಾಬಿನ್‌ನಿಂದ ಹೊರಗೆ ಬಂದ. ವಿನ್ಸೆಂಟ್ ತಾನೇ ಹಾಸಿಗೆಯನ್ನು ಮಂಚದಿಂದ ಎತ್ತಿ ಹೆಗಲಮೇಲೆ ಹಾಕಿಕೊಂಡು ಡೆಕ್ರುಖ್ ಮನೆಯ ಕಡೆ ಹೆಜ್ಜೆ ಹಾಕಿದ.

ಒಳಗೆ, ಹೊತ್ತು ತಂದ ಹಾಸಿಗೆಯನ್ನು ಹಾಸಿಟ್ಟ. ಡೆಕ್ರುಬ್ ದಂಪತಿಗಳು, ಒಣ ಬ್ರೆಡ್ಡನ್ನು ತಿನ್ನುತ್ತಲೇ ಅವನತ್ತ ದೃಷ್ಟಿ ಹಾಯಿಸಿದರು. ವಿನ್ಸೆಂಟ್ ಮಗುವನ್ನೆತ್ತಿ ತಾನು ತಂದಿರಿಸಿದ್ದ ಹಾಸಿಗೆಯಲ್ಲಿ ಮಲಗಿಸಿದ.

ನಂತರ ವಿನ್ಸೆಂಟ್, ಡೆನಿಸ್‌ರ ಮನೆಯ ಕಡೆ ಹೋದ. ತನಗೆ ಹಾಸಿಕೊಂಡು ಮಲಗಲು ಒಂದಿಷ್ಟು ಒಣ ಹುಲ್ಲು ಸಿಗುವುದಾದರೆ, ಕೇಳೋಣವೆಂದುಕೊಂಡಿದ್ದ. ವಿನ್ಸೆಂಟ್ ಮಾಡಿದ ಕೆಲಸ ಕೇಳಿ ಮೇಡಂ ಡೆನಿಸ್ ದಿಗ್ಭ್ರಾಂತಳಾದಳು.

"ಮಿಷ್ಟರ್ ವಿನ್ಸೆಂಟ್ ನೀನಿದ್ದ ಕೊಠಡಿ ಇನ್ನೂ ಹಾಗೇ ಇದೆ. ಬಂದು ಅದರಲ್ಲಿರು."

"ಮೇಡಂ ನೀವು ತುಂಬ ಒಳ್ಳೆಯವರು. ನಿಮ್ಮ ಮನಸ್ಸು ದೊಡ್ಡದು. ಆದರೆ ನಾನು ಬರುವ ಹಾಗಿಲ್ಲ."

"ನನಗೆ ಗೊತ್ತು, ನೀನು ಯಾಕೆ ಹೀಗೆ ಹೇಳ್ತಿದ್ದೀ ಅನ್ನೋದು ನನಗೆ ಅರ್ಥ ಆಗಿದೆ. ದುಡ್ಡಿನ ಸಮಸ್ಯೆ. ಅದರ ಬಗ್ಗೆ ಯೋಚನೆ ಬೇಡ. ನಾನು ನನ್ನ ಗಂಡ ಸುಖವಾಗಿದ್ದೀವಿ. ನೀನು ತಮ್ಮನ ರೀತಿಯಲ್ಲಿ, ಯಾವುದೇ ಬಾಡಿಗೆಯಿಲ್ಲದೆ ಇರಬಹುದು, "ಯಾಕೆ ನೀನೇ ಹೇಳುತ್ತಿಲ್ಲವೇನು, ನಾವೆಲ್ಲರೂ ದೇವರ ಮಕ್ಕಳಾದ್ದರಿಂದ ಅಣ್ಣ ತಮ್ಮಂದಿರಾದೆವು, ಅಂತ?"

ವಿನ್ಸೆಂಟ್ ಚಳಿಯಿಂದ ನಡುಗುತ್ತಿದ್ದ, ಹೊಟ್ಟೆ ಚುರುಗುಡುತ್ತಿತ್ತು. ಜ್ವರದಿಂದ ಸನ್ನಿಯಾದಂತಿತ್ತು. ಜ್ವರ ಇಟ್ಟುಕೊಂಡೇ ಊರೆಲ್ಲ ಓಡಾಡಿದ್ದ. ನಿದ್ದೆಯಿಲ್ಲ, ಆಹಾರ ಇಲ್ಲ, ಎಡಬಿಡದೆ ಮಾಡುತ್ತಿದ್ದ ರೋಗಿಗಳ ಸೇವೆಯಿಂದ ಪೂರ್ತಿಯಾಗಿ ಸೊರಗಿ ಹೋಗಿದ್ದ. ಮೇಲೆ ಮಹಡಿಯ ಕೋಣೆಯಲ್ಲಿ ಬೆಚ್ಚನೆಯ ಹಾಸಿಗೆ ಇದೆ. ಮೇಡಂ ಡೆನಿಸ್ ಊಟಕೊಟ್ಟು ಹಸಿವನ್ನು ದೂರಮಾಡುತ್ತಾಳೆ. ಬಿಸಿ ಬಿಸಿಯಾಗಿ ಕುಡಿಯಲು ಕೊಟ್ಟು ಆರೈಕೆ ಮಾಡುತ್ತಾಳೆ. ಚಳಿಯಿಂದ ಮುಕ್ತಿಗೊಳಿಸುತ್ತಾಳೆ. ಅವನಿಗೆ, ನಿಲ್ಲಲು ಆಗುತ್ತಿಲ್ಲ. ದುರ್ಬಲತೆಯಿಂದ, ಪ್ರಾಣವಿಲ್ಲವಾಗಿ, ಬೇಕರಿಯ ನೆಲದ ಮೇಲೆ ಇನ್ನೇನು ಕುಸಿಯುವುದರಲ್ಲಿದ್ದ, ಅಷ್ಟರಲ್ಲಿಯೇ ಸಾವರಿಸಿಕೊಂಡು ನಿಂತ.

ಇದು ದೇವರು ನೀಡುತ್ತಿರುವ ಕಟ್ಟ ಕಡೆಯ ಪರೀಕ್ಷೆ. ಇದರಲ್ಲಿ ಸೋತರೆ ಇಲ್ಲಿವರೆಗೆ ಮಾಡಿದ ಅವನ ಕೆಲಸವೆಲ್ಲ ಮಣ್ಣು ಪಾಲಾಗುತ್ತದೆ. ಇಡೀ ಊರೇ ನೋವು, ನರಳಿಕೆಗಳ ಗೂಡಾಗಿತ್ತು. ಈಗವನು ಹೇಡಿಯಂತೆ ಹಿಂದುಳಿದು, ತನ್ನ ಸುಖ ಸವಲತ್ತುಗಳನ್ನು ಕುರಿತು ಚಿಂತಿಸಬೇಕೇ? ತನ್ನೆದುರೇ, ಕ್ಷಣಾರ್ಧದಲ್ಲಿ ಕೈಗೆಟುಕುವ ರೀತಿಯಲ್ಲಿ ಸುಖದ ಸುಪ್ಪತಿಗೆಯ ಆಮಿಷವಿದೆ.

"ಮೇಡಂ ನಿಮ್ಮ ಔದಾರ್ಯ, ಒಳ್ಳೆಯತನಗಳನ್ನು ದೇವರು ಗಮನಿಸುತ್ತಿದ್ದಾನೆ. ಅವನ ಅನುಗ್ರಹ ನಿಮ್ಮ ಮೇಲಿರುತ್ತದೆ. ಆದರೆ ಮೇಡಂ, ನನ್ನನ್ನು ಪ್ರಲೋಭನೆಗಳಿಂದ ಸೆಳೆಯಬೇಡಿ. ಕರ್ತವ್ಯದ ಹಾದಿಯಿಂದ ವಿಮುಖನಾಗಿಸಬೇಡಿ. ಒಂದಿಷ್ಟು ಒಣ ಹುಲ್ಲನ್ನು ನೀಡಲು ನಿಮಗೆ ಸಾಧ್ಯವಾಗದಿದ್ದರೆ, ನೆಲದ ಮೇಲೆಯೇ ಮಲಗಬೇಕಾಗಬಹುದು. ನನಗಾಗಿ ನೀವು ಏನನ್ನೂ ತರಬೇಡಿ. ನಾನು ತೆಗೆದುಕೊಳ್ಳುವುದಿಲ್ಲ" – ಸ್ಪಷ್ಟವಾಗಿ ಹೇಳಿದ.

ತಂದಿದ್ದ ಒಣಹುಲ್ಲನ್ನು ಗುಡಿಸಲಿನ ಒಂದು ಮೂಲೆಯಲ್ಲಿ, ಥಂಡಿ ನೆಲದ ಮೇಲೆ ಹಾಸಿದ. ಒಂದು ತೆಳ್ಳನೆಯ ಚಾದರವನ್ನು ಹೊದ್ದು ಮಲಗಿದ. ರಾತ್ರಿಯೆಲ್ಲ ನಿದ್ದೆಯೇ ಇಲ್ಲ. ಬೆಳಗ್ಗೆ ಎದ್ದಾಗ ವಿಪರೀತ ಕೆಮ್ಮುತ್ತಿದ್ದ. ಕಣ್ಣುಗಳು ಇನ್ನಷ್ಟು ಆಳಕ್ಕೆ ಇಳಿದಿದ್ದವು. ಜ್ವರದ ತೀವ್ರತೆ ಹೆಚ್ಚಾಗಿ ಅರೆ ಪ್ರಜ್ಞಾವಸ್ಥೆಗೆ ಬಿದ್ದ. ಒಲೆ ಉರಿಸಿ ಬೆಚ್ಚಗಿರಿಸಿಕೊಳ್ಳಲು ಇದ್ದಿಲೇ ಇರಲಿಲ್ಲ. ಗಣಿ ಕಾರ್ಮಿಕರಿಂದ ಮುಚ್ಚಿಟ್ಟುಕೊಳ್ಳುವುದು ಅವನಿಗೆ ಸರಿಯೆನಿಸಲಿಲ್ಲ. ತನಗಾಗಿ ಒಂದಿಷ್ಟನ್ನೂ ಉಳಿಸಿಕೊಳ್ಳದೆ ಎಲ್ಲರಿಗೂ ವಿತರಿಸಿಬಿಟ್ಟಿದ್ದ. ಹೇಗೋ ಕಷ್ಟಪಟ್ಟು ಒಂದೆರಡು ಬ್ರೆಡ್ಡಿನ ತುಂಡುಗಳನ್ನು ನುಂಗಿದ. ನಿತ್ಯದ ಕೆಲಸಕ್ಕೆಂದು ಹೊರಟು ನಿಂತ.

-೧೫-

ಏಪ್ರಿಲ್ ತಿಂಗಳು ಬರುತ್ತಿದ್ದಂತೆ ಹವಾಗುಣ ಸುಧಾರಿಸಿತು. ಗಾಳಿ ಕಡಿಮೆಯಾಯಿತು. ಸೂರ್ಯ ಇಷ್ಟಿಷ್ಟು ಕಾಣಿಸಲು ಶುರುವಾದ. ನೀರ್ಗಲ್ಲುಗಳು ಸೂರ್ಯಶಾಖದಿಂದ ಕರಗುತ್ತಿದ್ದಂತೆ ಹೊಲಗಳು ಕಾಣಿಸತೊಡಗಿದವು. ಹಾಡುವಹಕ್ಕಿಗಳು ಮರಗಳನ್ನಾಶ್ರಯಿಸಿ ಹಾಡಲು ಆರಂಭಿಸಿದವು. ಮರಗಳು ಚಿಗುರೊಡೆಯಲು ತೊಡಗಿದವು. ಹೂ ಗಿಡಗಳು ಅರಳಿ ನಿಂತವು. ಜ್ವರದ ರಭಸ ಪೂರ್ತಿಯಾಗಿ ಸತ್ತು ಹೋಗಿತ್ತು. ಹೆಂಗಸರು ಇದ್ದಿಲಗುಡ್ಡದತ್ತ ನಡೆದರು. ಮನೆಯಲ್ಲಿ ಬೆಂಕಿಯ ಜ್ವಾಲೆಗಳು ಕಾಣಿಸಿದವು. ಮಕ್ಕಳು ಹಾಸಿಗೆ ಬಿಟ್ಟು ಹೊರಗಡೆ ಬರಲು ಆರಂಭಿಸಿದ್ದರು. ವಿನ್ಸೆಂಟ್ ಪಾಠಶಾಲೆಯನ್ನು ಆರಂಭಿಸಿದ. ಮೊದಲ ಬಾರಿಗೆ ಇಡೀ ಊರಿನ ಜನ ದೊಡ್ಡ ಸಂಖ್ಯೆಯಲ್ಲಿ ವಿನ್ಸೆಂಟ್‌ನ ಉಪದೇಶ ಕೇಳಲು ಜಮಾಯಿಸಿದ್ದರು. ಕಾರ್ಮಿಕರ ಕಣ್ಣಲ್ಲಿನ ವಿಷಾದ ಮರೆಯಾಗಿ ನಗೆಯ ಮಿಂಚು ಕಾಣಿಸಿತು. ಸಲೋನ್‌ನ ಬಾಗಿಲು ಕಾಯುವ ಹೊಣೆ ಹೊತ್ತಿದ್ದ ಡೆಕ್ರುಖ್ ಈಗ ಹಾಸ್ಯದ ಚಟಾಕಿಗಳನ್ನು ಹಾರಿಸಿ, ಜನರ ಮೊಗದಲ್ಲಿ ನಗೆ ಅರಳಿಸುತ್ತಿದ್ದ. ಆಗಾಗ ತನ್ನ ನೆತ್ತಿಯನ್ನು, ಬೋಳು ತಲೆಯನ್ನು ಉಜ್ಜಿಕೊಳ್ಳುತ್ತಿದ್ದ.

ವಿನ್ಸೆಂಟ್ ವೇದಿಕೆಯ ಮೇಲಿಂದ ಹೇಳಿದ – ಒಳ್ಳೆ ದಿನಗಳು ಬರಲಿವೆ. ದೇವರ ಪರೀಕ್ಷೆ ಮುಗಿಯಿತು. ನಿಮ್ಮನ್ನು ಅರ್ಥಮಾಡಿಕೊಂಡಿದ್ದಾನೆ. ನಿಮ್ಮಲ್ಲಿನ ಸತ್ಯವನ್ನು ಗುರುತಿಸಿದ್ದಾನೆ. ನರಳುವ ದಿನಗಳು ಮುಗಿದಿವೆ. ಹೊಲಗದ್ದೆಗಳಲ್ಲಿ ಸಮೃದ್ಧ ಫಸಲು ದೊರೆಯಲಿದೆ. ದಿನದ ಕೆಲಸ ಮುಗಿಸಿ ನಿಮ್ಮ ಮನೆ ಮುಂದಿನ ಜಗುಲಿಗಳ ಮೇಲೆ ಇನ್ನು ಮುಂದೆ ಬೆಚ್ಚಗೆ ಕೂರಬಹುದು. ಮಕ್ಕಳು ಹೊಲಗದ್ದೆಗಳಲ್ಲಿ ಸಂತೋಷವಾಗಿ ಹಾಡುಹಕ್ಕಿಗಳ ಹಿಂದೋಡಿ, ಆಟವಾಡಿ ಬರಬಹುದು. ಮರಗಳಲ್ಲಿನ ಹಣ್ಣುಗಳ ಸವಿಯನ್ನು ಸವಿಯಬಹುದು. ಈಗ ನಿಮ್ಮ ದೃಷ್ಟಿ ದೇವರ ಕಡೆಗಿರಲಿ. ಇನ್ನು ಮುಂದೆ ನಿಮಗೆ ಒಳ್ಳೆಯ ದಿನಗಳು ಬರಲಿವೆ. ದೇವರು ಕರುಣಾಮಯಿ. ನಿಮ್ಮ ಶ್ರದ್ಧೆ, ನಂಬಿಕೆಗಳನ್ನು ಪುರಸ್ಕರಿಸುತ್ತಾನೆ. ಆ ಭಗವಂತನಿಗೆ, ನಿಮಗೆ ಬರಲಿರುವ ಒಳ್ಳೆಯ ದಿನಗಳಿಗಾಗಿ ಕೃತಜ್ಞತೆ ಸಲ್ಲಿಸಿ!"

ಗಣಿ ಕಾರ್ಮಿಕರು ಹೃದಯ ಪೂರ್ವಕವಾದ ಕೃತಜ್ಞತೆ ಸಲ್ಲಿಸಿದರು. ಅಲ್ಲಿ ಸೇರಿದ ಮಂದಿ ಸಂತೋಷ, ಸಂಭ್ರಮಗಳಿಂದ, ಪರಸ್ಪರ "ವಿನ್ಸೆಂಟ್ ಹೇಳುತ್ತಿರುವುದು ಸತ್ಯವಾದ ಮಾತು. ವಿನ್ಸೆಂಟ್ ಹೇಳುತ್ತಿರುವುದು ಸತ್ಯವಾದ ಮಾತು, ನಮಗೆ ಒಳ್ಳೆ ದಿನಗಳು ಬರುತ್ತಿವೆ"– ಎಂದು ಮಾತಾಡಿಕೊಂಡರು.

ಕೆಲದಿನಗಳ ನಂತರ ವಿನ್ಸೆಂಟ್ ಮಕ್ಕಳೊಂದಿಗೆ ಇದ್ದಿಲನ್ನು ಸಂಗ್ರಹಿಸುತ್ತಿದ್ದ. ಅಷ್ಟರಲ್ಲಿ ಕಪ್ಪು ಆಕೃತಿಗಳು ಒಂದಷ್ಟು ಸಂಖ್ಯೆಯಲ್ಲಿ ಆತುರಾತುರವಾಗಿ ಹೊರಗೆ ಓಡಿ ಬರುತ್ತಿದ್ದುದನ್ನು ನೋಡಿದರು.

"ಇನ್ನೂ ಮೂರುಗಂಟೆ ಆಗಿಲ್ಲ. ಯಾಕೆ ಹೀಗೆ ಇವರೆಲ್ಲ ಈ ಹೊಲಗಳ ಕಡೆಗೆ ಓಡಿ ಬರುತ್ತಿದ್ದಾರೆ! ಏನಾಗಿದೆ?"

ಇದ್ದಿಲ ಗುಡ್ಡವನ್ನು ಆದಷ್ಟು ಬೇಗ ಇಳಿದರು. ಮಾರ್ಕಾಸ್‌ನ ಸುತ್ತ ಬಳಸಿದ್ದ ಮೈದಾನ ದೂರದಿಂದ, ಕಪ್ಪು ಇರುವೆಗಳು ಆವರಿಸಿದ್ದರಿಂದ ಕಪ್ಪಾಗಿ ಕಾಣಿಸುತ್ತಿತ್ತು. ಅವರೆಲ್ಲ ಇಳಿಯುವಷ್ಟರಲ್ಲಿ ಹೆಂಗಸರು ಚಿಕ್ಕ ಮಕ್ಕಳನ್ನು ಕಂಕುಳಿಗೇರಿಸಿಕೊಂಡು, ಮನೆಗಳಿಂದ ಹೊರಟು, ಎಲ್ಲ ದಿಕ್ಕಿನಿಂದಲೂ ಈ ಬಯಲಿನ ಕಡೆಗೇ ಓಡಿ ಬರುತ್ತಿದ್ದರು.

ಗೇಟಿನ ಬಳಿ ಬಂದಾಗ, ಉದ್ವಿಗ್ನ ಧ್ವನಿಗಳು ಕೇಳಿ ಬಂದವು. ಗಣಿ ಕುಸಿದಿದೆ. ಕೆಲಸಗಾರರು ಒಳಗಡೆ ಸಿಕ್ಕಿಹಾಕಿಕೊಂಡಿದ್ದಾರೆ. ಜಾಕ್ವೆಸ್ ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದ. ಸುದ್ದಿ ತಿಳಿದದ್ದೇ ವೇಗವಾಗಿ ಗಣಿಗಳಿದ್ದ ಕಡೆಗೆ ಓಡಿಬಂದ. ತುಂಬ ಬಡವಾಗಿಬಿಟ್ಟಿದ್ದ. ವಿನ್ಸೆಂಟ್ ಅವನನ್ನು ಹಿಡಿದು ನಿಲ್ಲಿಸಿ "ಏನಾಯಿತು, ಹೇಳು" ಎಂದು ಒತ್ತಾಯಿಸಿದ.

"ಡೆಕ್ರುಖ್ ಕೆಲಸ ಮಾಡುತ್ತಿದ್ದ ಗಣಿ!...... ನೀಲಿ ಬಣ್ಣದ ದೀಪಗಳು! ನೆನಪಿದೆಯಾ?..... ನನಗೆ ಆ ದಿನವೇ ಅಪಾಯದ ವಾಸನೆ ಬಂದಿತ್ತು!"

"ಎಷ್ಟು ಜನ? ಎಷ್ಟು ಜನ ಸಿಕ್ಕಿ ಹಾಕಿಕೊಂಡಿದ್ದಾರೆ? ಅವರನ್ನು ರಕ್ಷಿಸಿ ಹೊರಗೆ ತರಲು ಆಗುವುದಿಲ್ಲವೇ?"

"ಹನ್ನೆರಡು ಸೆಲ್ಲುಗಳು! ಒಂದೊಂದರಲ್ಲಿ ಐದು ಮಂದಿ! ನೀನೇ ನೋಡಿರುವೆಯಲ್ಲ!"

"ರಕ್ಷಿಸೋದಕ್ಕೆ ಆಗುವುದಿಲ್ಲವೇನು?"

"ಗೊತ್ತಿಲ್ಲ. ಒಬ್ಬ ಸ್ವಯಂಸೇವಕನನ್ನು ನನ್ನ ಜತೆ ಕರೆದೊಯ್ಯುತ್ತಿದ್ದೇನೆ."

"ನಾನೂ ನಿನ್ನ ಜೊತೆ ಬರ್ತೀನಿ. ನಿನಗೆ ಸಹಾಯ ಮಾಡ್ತೀನಿ."

"ಸಾಧ್ಯ ಇಲ್ಲ. ನನಗೆ ಸಹಾಯ ಮಾಡೋಕೆ ಅನುಭವ ಇರುವವರು ಬೇಕು."

ಹೇಳುತ್ತ ಎತ್ತುವ ಯಂತ್ರದ ಕೋಣೆಯ ಬಳಿಗೆ ಓಡಿದ.

ಬಿಳಿಕುದುರೆಯ ಪುಟ್ಟ ಗಾಡಿಯೊಂದಿತ್ತು. ಇದೇ ಗಾಡಿಯಲ್ಲಿ ಅನೇಕ ಶವಗಳನ್ನು, ಗಾಯಗೊಂಡವರನ್ನು, ಗುಡ್ಡದ ಇನ್ನೊಂದು ಬದಿಯಲ್ಲಿರುವ ಕ್ಯಾಬಿನ್‌ಗಳಿಗೆ ಸಾಗಿಸಲಾಗಿತ್ತು. ಗಣಿ ಪ್ರದೇಶದಿಂದ ಹಿಂತಿರುಗಿದ ಕಾರ್ಮಿಕರು, ಕುಟುಂಬಗಳೊಂದಿಗೆ ಹಿಂದಿರುಗಿದರು. ಕೆಲವರು ಹೆಂಗಸರಂತೂ ಎದೆಬಡಿದುಕೊಂಡು ಜೋರಾಗಿ ಅಳುತ್ತಿದ್ದರು. ಮತ್ತೆ ಕೆಲವರು ಕಣ್ಣರಳಿಸಿ. ಭಯ ತುಂಬಿಕೊಂಡು ನೋಡುತ್ತಿದ್ದರು. ಮಕ್ಕಳು ಸಣ್ಣದನಿಯಲ್ಲಿ ಅಳುತ್ತಿದ್ದರು. ಫೋರ್‌ಮನ್ ರಕ್ಷಣಾ ಪಡೆಯ ವ್ಯವಸ್ಥೆಮಾಡುವ ಆತುರದಲ್ಲಿ ಓಡಾಡುತ್ತಿದ್ದ.

ಇದ್ದಕ್ಕಿದ್ದಂತೆ ಸದ್ದು ಅಡಗಿತು. ಒಂದು ಸಣ್ಣಗುಂಪು ಎತ್ತುವ ಯಂತ್ರವಿದ್ದ ಕಟ್ಟಡದ ಬಳಿಗೆ ಬಂದರು. ನಿಧಾನವಾಗಿ, ಚಾದರದಲ್ಲಿ ಸುತ್ತಿದ್ದ ವಸ್ತುವನ್ನು ಹಿಡಿದುಕೊಂಡು ಮೆಟ್ಟಿಲಿಳಿದರು. ಒಂದು ಕ್ಷಣದ ನೀರವ ಮೌನ ಕಳೆದು, ಒಮ್ಮೆಲೇ ಅಬ್ಬರದ ಕಿರುಚಾಟ, ಎತ್ತರದ ದನಿಯಲ್ಲಿನ ಅಳು ಕೇಳಿಸಿತು.

"ಯಾರದು? ಅವರೆಲ್ಲ ಸತ್ತಿದ್ದಾರೇನು? ಅಥವಾ ಇನ್ನೂ ಬದುಕಿದ್ದಾರೆಯೋ?...... ದಯವಿಟ್ಟು ಯಾರು ಯಾರು..... ಹೆಸರು ಹೇಳಿ. ಅವರನ್ನು ತೋರಿಸಿ....... ನನ್ನ ಗಂಡ ಗಣಿಯಲ್ಲಿದ್ದ!..... ನನ್ನ ಮಕ್ಕಳು ಒಳಗೆ ಇದ್ದರು..... ಅಯ್ಯೋ!!"

ರಕ್ಷಣಾಪಡೆ ಬಿಳೀ ಕುದುರೆಗಾಡಿ ಬಳಿ ನಿಂತಿತು. ಅದರಲ್ಲಿದ್ದ ಒಬ್ಬ ವ್ಯಕ್ತಿ ಹೇಳಿದ – "ಗಾಡಿಗಳ ಬಳಿ ಇದ್ದ ಮೂವರನ್ನು ಮಾತ್ರ ಉಳಿಸುವುದಕ್ಕೆ ಸಾಧ್ಯವಾಯಿತು. ಆದರೆ ಬಹಳಷ್ಟು ದೇಹ ಸುಟ್ಟು ಹೋಗಿದೆ."

"ನಿಮ್ಮ ದಮ್ಮಯ್ಯ ಅಂತೀನಿ...... ಅವರೆಲ್ಲ ಯಾರು? ಹೆಸರು ಹೇಳಿ..... ನನ್ನ ಮಗು ಅಲ್ಲಿತ್ತು...... ನನ್ನ ಮಗು..... ನನ್ನ ಮಗು."

ಆ ವ್ಯಕ್ತಿ ದೇಹಗಳ ಮೇಲೆ ಹೊದಿಸಿದ್ದ ಚಾದರವನ್ನು ಸರಿಸಿದ. ಇಬ್ಬರು ಹೆಣ್ಣು ಮಕ್ಕಳ ಮುಖಗಳು ಪೂರ್ತಿಯಾಗಿ ಸುಟ್ಟು ಹೋಗಿದ್ದವು. ಒಂಬತ್ತು ಮತ್ತು ಹತ್ತು ವಯಸ್ಸಿನವರಾಗಿದ್ದರು. ಮೂರು ಮಕ್ಕಳೂ ಪ್ರಜ್ಞಾಹೀನ ಸ್ಥಿತಿಯಲ್ಲಿದ್ದರು. ಮಕ್ಕಳ ಕುಟುಂಬದವರು ತಲೆ ತಲೆ ಚಚ್ಚಿಕೊಂಡು ಗಟ್ಟಿಯಾಗಿ ಅಳುತ್ತಿದ್ದರು. ಅವರ ದೇಹಗಳ ಮೇಲೆ ಬಿದ್ದು ಬಿದ್ದು ಎದೆ ಒಡೆದು ಕೊಳ್ಳುತ್ತಿದ್ದರು. ಗಾಡಿಯಲ್ಲಿರಿಸಿಕೊಂಡು ರಸ್ತೆಯತ್ತ ಸಾಗಿದರು. ಜನರೆಲ್ಲರೂ ಅದನ್ನು ಹಿಂಬಾಲಿಸಿದರು. ವಿನ್ಸೆಂಟ್ ಕೂಡಾ ವೇಗವಾಗಿ ಗಾಡಿಯನ್ನು ಹಿಂಬಾಲಿಸಿ ನಡೆದ. ನಡೆಯುತ್ತಲೇ ಹಿಂತಿರುಗಿ ಕಪ್ಪು ಇದ್ದಿಲ ಗುಡ್ಡಗಳನ್ನು ನೋಡಿದ. ತನ್ನ ನೋವಿಗೆ ಅಭಿವ್ಯಕ್ತಿ ಕೊಡುವಂತೆ "ಬ್ಲ್ಯಾಕ್ ಈಜಿಪ್ಟ್! ಬ್ಲ್ಯಾಕ್ ಈಜಿಪ್ಟ್..... ಆಯ್ದ ಕೆಲವರೊಂದಿಗೆ ಮತ್ತೆ ದಾಸ್ಯಕ್ಕೆ ಸಿಲುಕಿದೆ!..... ದೇವರೇ ಇದೆಲ್ಲವನ್ನು ಮಾಡಿದ್ದಾದರೂ ಏಕೆ?...... ಏಕೆ?"

ಸಾಯುವಷ್ಟರ ಮಟ್ಟಿಗೆ ಮಕ್ಕಳು ಸುಟ್ಟು ಹೋಗಿದ್ದರು. ದೇಹದ ಸಾಕಷ್ಟು ಕಡೆಗಳಲ್ಲಿ ಚರ್ಮ, ಕೂದಲು ಸುಟ್ಟು ಹೋಗಿತ್ತು. ವಿನ್ಸೆಂಟ್ ಮೊದಲ ಕ್ಯಾಬಿನ್‌ನ ಒಳಗೆ ಪ್ರವೇಶಿಸಿದ. ಒಳಗಡೆ, ಮಗುವಿನ ತಾಯಿ ಅಸಹಾಯಕತೆಯಿಂದ ಕೈಕೈ ಹಿಸುಕಿಕೊಳ್ಳುತ್ತಿದ್ದಳು. ವಿನ್ಸೆಂಟ್ ಮಗುವಿನ ಬಟ್ಟೆ ಬಿಚ್ಚಿದ. ಎಣ್ಣೆಯನ್ನು ತರಲು ಹೇಳಿದ. ಆ ಹೆಂಗಸು ಮನೆಯಲ್ಲಿಯೇ ಇದ್ದ ಸ್ವಲ್ಪ ಎಣ್ಣೆಯನ್ನು ತಂದುಕೊಟ್ಟಳು. ವಿನ್ಸೆಂಟ್ ಸುಟ್ಟ ಗಾಯಗಳಿಗೆಲ್ಲ ಎಣ್ಣೆ ಹಚ್ಚಿದ. 'ಬ್ಯಾಂಡೇಜ್! ಬ್ಯಾಂಡೇಜ್!" – ಎಂದು ಕೂಗಿದ.

ಆ ಹೆಂಗಸು ದಿಕ್ಕು ತೋಚದೆ, ಕಣ್ಣಲ್ಲಿ ಭಯ ತುಂಬಿಕೊಂಡು ನಿಂತಿದ್ದಳು. ವಿನ್ಸೆಂಟ್‌ನ ಕೋಪ ನೆತ್ತಿಗೇರಿತು. "ಬ್ಯಾಂಡೇಜ್! ನಿನ್ನ ಮಗು ಬದುಕಬೇಕಾ ಇಲ್ವಾ?"–

"ನಮ್ಮ ಹತ್ತಿರ ಏನೂ ಇಲ್ಲ" – ತಡವರಿಸುತ್ತಾ ಉತ್ತರಿಸಿದಳು. "ಮನೆಯಲ್ಲಿ ಒಂದು ತುಂಡು ಬಿಳಿ ಬಟ್ಟೆಯೂ ಇಲ್ಲ."

ಮಗು ಕದಲಿತು. ವೇದನೆಯ ದನಿ ಹೊಮ್ಮಿತು. ವಿನ್ಸೆಂಟ್ ತನ್ನ ಕೋಟನ್ನು ಬಿಚ್ಚಿದ. ಒಳಗಿನ ಅಂಗಿಯನ್ನೂ ಬಿಚ್ಚಿದ. ನಂತರ ಕೋಟನ್ನು ಮತ್ತೆ ಹಾಕಿಕೊಂಡ. ಅವನ ಅಂಗಿ ಮತ್ತು ಮೈಮೇಲಿನ ಇತರೆ ಉಡುಪುಗಳನ್ನು ತೆಗೆದು ಚಿಂದಿ

ಚಿಂದಿಯಾಗಿ ಹರಿದು, ಮಗುವಿಗೆ ತಲೆಯಿಂದ ಕಾಲಿನವರೆಗೆ ಬ್ಯಾಂಡೇಜ್ ಮಾಡಿದ. ನಂತರ ಎರಡನೇ ಮಗುವಿಗೂ ಇದೇ ರೀತಿ ಚಿಕಿತ್ಸೆ ನೀಡಿದ. ಹತ್ತು ವರುಷದ ಹುಡುಗ ಸಾಯುವ ಹಂತದಲ್ಲಿದ್ದ.

ಒಳ ಉಡುಪುಗಳು, ಅಂಗಿ, ಷರಾಯಿಗಳು – ಎಲ್ಲವನ್ನೂ ಬ್ಯಾಂಡೇಜ್‌ಗಾಗಿ ಉಪಯೋಗಿಸಿದ. ಬರೀ ಕೋಟನ್ನು ಧರಿಸಿದ. ತನ್ನ ಬಗ್ಗೆಯ ಚಿಂತೆ ಬಿಟ್ಟು ಮತ್ತೆ ಮಾರ್ಕಾಸ್ ಕಡೆ ಓಡಿದ. ದೂರದಿಂದ ಅಳುತ್ತಿರುವುದು ಕೇಳಿಸುತ್ತಿತ್ತು.

ಗಣಿ ಕಾರ್ಮಿಕರು ಗೇಟಿನ ಬಳಿ ನಿಂತಿದ್ದರು. ಒಂದು ತಂಡ ಮಾತ್ರ ರಕ್ಷಣಾ ಚಟುವಟಿಕೆಯಲ್ಲಿ ತೊಡಗಿತ್ತು. ಹಾದಿ ಕಿರಿದಾಗಿದ್ದುದರಿಂದ ಎಲ್ಲರಿಗೂ ಒಳಗಿಳಿಯಲು ಸಾಧ್ಯವಿರಲಿಲ್ಲ. ಆದ್ದರಿಂದ ಉಳಿದ ತಂಡಗಳು ತಮ್ಮ ಸರದಿಗಾಗಿ ಕಾಯುತ್ತಿದ್ದವು. ವಿನ್ಸೆಂಟ್ ಸಹಾಯಕ ಫೋರ್‌ಮನ್ ಒಬ್ಬನನ್ನು ವಿಚಾರಿಸಿದ.

"ಹೇಗಿದೆ ಪರಿಸ್ಥಿತಿ?"

"ಇಷ್ಟು ಹೊತ್ತಿಗೆ ಅವರೆಲ್ಲ ಸತ್ತಿರುತ್ತಾರೆ."

"ನಾವು ಅಲ್ಲಿಗೆ ಹೋಗಬಹುದೇ?"

"ಅವರೆಲ್ಲ ಬಂಡೆಯಲ್ಲಿ ಸಿಕ್ಕಿಕೊಂಡಿದ್ದಾರೆ."

"ಆಚೆ ತೆಗೆಯೋಕೆ ಎಷ್ಟು ಸಮಯ ಬೇಕು?"

"ವಾರಗಳಾದರೂ ಆಗಬಹುದು, ತಿಂಗಳುಗಳಾದರೂ ಆಗಬಹುದು."

"ಯಾಕೆ ಅಷ್ಟೊಂದು ಸಮಯ?"

"ಯಾಕೇಂದ್ರೆ, ಹಿಂದೆ ಕೂಡಾ ಇಷ್ಟೇ ಸಮಯ ತೆಗೆದುಕೊಂಡಿತ್ತು."

"ಹಾಗಾದರೆ ಅವರ ಕತೆ ಮುಗಿದ ಹಾಗೆ!"

"ಹುಡುಗೀರು, ಗಂಡಸರೂ ಎಲ್ಲಾ ಸೇರಿ ಐವತ್ತೇಳು ಮಂದಿ!"

"ಎಲ್ಲರೂ ಸತ್ತಿರಬಹುದೇ?"

"ಒಬ್ಬರೂ ಬದುಕಿ ಉಳಿದಿರೋದಿಲ್ಲ."

ಒಂದು ತಂಡ ಆದ ಮೇಲೆ ಮತ್ತೆ ಒಂದು ತಂಡ. ಒಟ್ಟು ಮೂವತ್ತಾರು ಗಂಟೆಗಳ ಪರಿಹಾರ ಕಾರ್ಯ ನಡೆದಿತ್ತು. ಯಾರ್‍ಯಾರ ಗಂಡಂದಿರು, ಮಕ್ಕಳು ಇನ್ನೂ ಒಳಗಡೆಯೇ ಇದ್ದರೋ, ಅವರೆಲ್ಲರ ಕಡೆಯವರು ಹೊರಗೆ, ತಮ್ಮವರ ಸ್ಥಿತಿಗತಿ ತಿಳಿಯೋದಕ್ಕೆ ನಿಂತೇ ಇದ್ದರು. ಅವರನ್ನು ಹೊರಗೆ ದೂರ ಕಳಿಸೋದು ಸಾಧ್ಯವಿರಲಿಲ್ಲ. ಜೊತೆಯಲ್ಲಿ ನಿಂತಿದ್ದ ಕೆಲವರು ಗಂಡಸರು, ಹೆಂಗಸರಿಗೆ, ಅವರ ಮಕ್ಕಳು ಮತ್ತು ಗಂಡಂದಿರನ್ನು ಖಂಡಿತ ರಕ್ಷಿಸುತ್ತಾರೆಂಬ ಭರವಸೆ ನೀಡುತ್ತಿದ್ದರು. ಹೆಂಗಸರಿಗೆ ಅಂತಹ ಭರವಸೆಗಳೆಲ್ಲ ಸುಳ್ಳು ಎನ್ನುವುದು ಗೊತ್ತಿತ್ತು, ತಮಗೆ ಏನೂ ತೊಂದರೆಯಾಗದ ಕುಟುಂಬದ ಕೆಲ ಹೆಂಗಸರು, ದುರಂತಕ್ಕೆ ಒಳಗಾದ ಕುಟುಂಬದವರಿಗೆ ಬ್ರೆಡ್ಡು, ಕಾಫಿಗಳನ್ನು ಅವರಿದ್ದಲ್ಲಿಗೇ ತಂದು ಕೊಟ್ಟರೂ, ದುಃಖದಲ್ಲಿ ಮುಳುಗಿದ್ದ ಯಾವೊಬ್ಬ ಹೆಂಗಸೂ, ಮುಟ್ಟಲಿಲ್ಲ. ಮಧ್ಯರಾತ್ರಿ ಸಮಯದಲ್ಲಿ ಜಾಕ್ವೆಸ್

ವರ್ನೆಯನ್ನು ಚಾದರದಲ್ಲಿ ಸುತ್ತಿ ತಂದರು. ಅವನಿಗೆ ಹೆಮರೇಜ್ ಆಗಿತ್ತು. ಮರುದಿನ ಕಣ್ಣು ಮುಚ್ಚಿದ.

ನಲ್ವತ್ತೆಂಟು ಗಂಟೆಗಳ ನಂತರ ವಿನ್ಸೆಂಟ್, ಮಕ್ಕಳು ಮತ್ತು ಮೇಡಂ ಡೆಕ್ರುಬ್‌ಳನ್ನು ಬಲವಂತದಿಂದ ಮನೆಗೆ ಕಳಿಸಿದ.

ಹನ್ನೆರಡು ದಿನಗಳ ಕಾಲ ರಕ್ಷಣಾ ಕಾರ್ಯ ನಿರಂತರವಾಗಿ ಮುಂದುವರೆದಿತ್ತು. ಗಣಿಗಾರಿಕೆಯ ಕೆಲಸ ಸದ್ಯಕ್ಕೆ ನಿಲ್ಲಿಸಲಾಗಿತ್ತು. ಇದ್ದಿಲ ಸಂಗ್ರಹವಿಲ್ಲದ ಕಾರಣ ಕೆಲಸಗಾರರಿಗೆ ಸಂಬಳವೂ ಇಲ್ಲವಾಯಿತು. ಇದ್ದ ಬದ್ಧ ಒಂದಿಷ್ಟು ಫ್ರ್ಯಾಂಕ್‌ಗಳೂ ಮುಗಿದು ಹೋಗಿದ್ದವು. ಮೇಡಂ ಡೆನಿಸ್ ಸಾಲದ ಮೇಲೆ ಬ್ರೆಡ್ಡನ್ನು ಸರಬರಾಜು ಮಾಡುತ್ತಾ ಹೋದಳು. ಕಂಪನಿಯಿಂದ ಏನೇನೂ ಸಿಗಲಿಲ್ಲ. ಹನ್ನೆರಡನೇ ದಿನ ರಕ್ಷಣಾಕಾರ್ಯವನ್ನು ನಿಲ್ಲಿಸಬೇಕೆಂಬ ಆದೇಶ ಹೊರಟಿತು. ಗಂಡಸರು ಕೆಲಸಕ್ಕೆ ಬರಬೇಕೆಂದು ಸೂಚಿಸಲಾಯಿತು. ಪೆತಿತ್ ವಾಸ್ಮೆಯಲ್ಲಿ ಒಂದು ಚಿಕ್ಕಾಸೂ ಉಪವಾಸ ತಪ್ಪಿಸಲು, ಉಳಿದಿರಲಿಲ್ಲ.

ಕಾರ್ಮಿಕರು ಕೆಲಸಕ್ಕೆ ಮುಂದಾಗಲು ಹಿಂಜರಿದರು. ವಿನ್ಸೆಂಟ್‌ಗೆ ಏಪ್ರಿಲ್ ತಿಂಗಳ ಸಂಬಳ ಬಂತು. ಅದನ್ನು ಕಾರ್ಮಿಕರ ಕುಟುಂಬಗಳಿಗೆ ಹಂಚಿದ. ಅದರಿಂದ ಒಂದು ಆರು ದಿನ ಕಳೆಯಲು ಸಾಧ್ಯವಾಯಿತು. ನಂತರ ಕಾಡುಗಳ ಕಡೆ ಹೊರಟು, ಹುಲ್ಲು, ಕಾಯಿಗಳು, ಎಲೆಗಳು ಮುಂತಾದವನ್ನು ಸಂಗ್ರಹಿಸಿದರು. ಗಂಡಸರು ಮೊಲ, ಇಲಿ, ಹಲ್ಲಿ, ಹಾವು, ಬೆಕ್ಕು, ನಾಯಿ ಮತ್ತು ಇನ್ನೂ ಏನೇನು ಸಾಧ್ಯವೋ ಅವುಗಳನ್ನೆಲ್ಲಾ ಹುಡುಕಿಕೊಂಡು ಹೊರಟರು. ಏನಾದರೂ ಸರಿ, ಹೊಟ್ಟೆ ತುಂಬಿಸಿಕೊಳ್ಳುವುದಷ್ಟು ಅವರಿಗೆ ತುರ್ತಿನ ಅಗತ್ಯವಿತ್ತು. ಆದರೆ ಕಡೆ ಕಡೆಗೆ ಅವೂ ಸಿಗುವುದು ದುರ್ಲಭವಾಯಿತು. ವಿನ್ಸೆಂಟ್ ಸಹಾಯ ಕೋರಿ ಬ್ರಸೆಲ್ಸ್‌ಗೆ ಪತ್ರ ಬರೆದ. ಆದರೂ ಸಹಾಯ ಬರಲಿಲ್ಲ. ಕಾರ್ಮಿಕರು, ತಮ್ಮ ಕಣ್ಣಮುಂದೆಯೇ ಹೆಂಡತಿಮಕ್ಕಳು ಉಪವಾಸದಿಂದ ಸಾಯುವುದನ್ನು ನೋಡುತ್ತಾ ಕುಳಿತರು.

ಈ ಸಲದ ಗಣಿ ಅಪಘಾತದಲ್ಲಿ ಸತ್ತವರಿಗೂ ಮತ್ತು ಅದಕ್ಕೂ ಮೊದಲು ಸತ್ತವರಿಗೂ ಆತ್ಮಶಾಂತಿ ಕೋರುವ ಸಭೆ ನಡೆಸಲು ವಿನ್ಸೆಂಟ್‌ನನ್ನು ಬೇಡಿಕೊಂಡರು. ವಿನ್ಸೆಂಟ್‌ನ ಪುಟ್ಟ ಗುಡಿಸಲು ಕಿಕ್ಕಿರಿದು ತುಂಬಿತ್ತು. ಎಷ್ಟೋ ದಿನಗಳಿಂದ, ವಿನ್ಸೆಂಟ್, ಕಾಫಿಯೊಂದನ್ನು ಬಿಟ್ಟು ಬೇರೆ ಏನನ್ನೂ ತಿಂದಿರಲಿಲ್ಲ. ಅದರಿಂದಾಗಿ ಅವನಿಗೆ ನಿಲ್ಲಲೂ ಆಗುತ್ತಿರಲಿಲ್ಲ. ಕಣ್ಣುಗಳು, ಕೆನ್ನೆಗಳು ಮತ್ತೂ ಒಳಹೋಗಿದ್ದವು. ಮುಖ, ಮೈಯೆಲ್ಲಾ ಕೊಳಕಾಗಿತ್ತು. ಒರಟಾದ ಬಟ್ಟೆಯನ್ನೇ ಒಳ ಉಡುಪಿನಂತೆ ಸುತ್ತಿಕೊಂಡಿದ್ದ ಗುಡಿಸಲಿನ ಮೂಲೆಯಲ್ಲಿದ್ದ ಒಣ ಹುಲ್ಲಿನ ಮೇಲೆ, ಕೈಗಳನ್ನು ತಲೆಯಡಿಗೆ ಇರಿಸಿ ಮೈಚಾಚಿದ್ದ ಲಾಂಧ್ರದ ಬೆಳಕು ಅದ್ಭುತವಾದ ನೆರಳುಗಳನ್ನು ಚೆಲ್ಲುತ್ತಿತ್ತು.

ದುರ್ಬಲತೆಯಿಂದಾಗಿ, ಕ್ಷೀಣದನಿಯಲ್ಲಿ ಮಾತಾಡತೊಡಗಿದ. ನೋವು, ಹಸಿವುಗಳಿಂದ ಸಂತ್ರಸ್ತ ಕಾರ್ಮಿಕರು, ವಿನ್ಸೆಂಟ್‌ನನ್ನು ದೇವರನ್ನು ಕಾಣುತ್ತಿರುವರೋ ಎಂಬಂತೆ ನೋಡುತ್ತಿದ್ದರು.

ಅಷ್ಟರಲ್ಲಿ ಬಾಗಿಲ ಕಡೆಯಿಂದ ಗಟ್ಟಿಯಾಗಿ ಮಾತಾಡುತ್ತಿದ್ದ ಸದ್ದು ಕೇಳಿಸಿತು. ವಿನ್ಸೆಂಟ್ ತಲೆಯೆತ್ತಿ ನೋಡಿದ. ಹುಡುಗನೊಬ್ಬ "ಇವರೇ ಮಿಸ್ಟರ್ ವಿನ್ಸೆಂಟ್" ಎಂದು ವಿನ್ಸೆಂಟ್ ಕಡೆ ಬೊಟ್ಟು ಮಾಡಿ ತೋರಿಸಿದ. ಅಲ್ಲಿ ಕುಳಿತಿದ್ದ ಮಂದಿಯೆಲ್ಲ ಬಾಗಿಲ ಕಡೆ ತಿರುಗಿ ನೋಡಿದರು. ಒಳ್ಳೆ ಉಡುಪಿನಲ್ಲಿದ್ದ ಇಬ್ಬರು ವ್ಯಕ್ತಿಗಳನ್ನು ಗಮನಿಸಿದರು. ಆ ಇಬ್ಬರ ಕಣ್ಣುಗಳಲ್ಲಿ ಭಯ, ಭಯಾನಕತೆಗಳನ್ನು ಗುರುತಿಸಿದ. ಅವರನ್ನು ಗುರುತಿಸಿ ಕೂಡಲೇ ಸ್ವಾಗತಿಸಲು ಮುಂದಾದ.

"ಬರಬೇಕು ರೆವರೆಂಡ್ ಡಿ ಜಾಂಗ್. ರೆವರೆಂಡ್‌ವಾನ್ ಡೆನ್ ಬ್ರಿಂಕ್" ಕುಳಿತು ಕೊಂಡೇ ಸ್ವಾಗತ ಕೋರಿದ.

"ಮಾರ್ಕಾಸ್‌ನ ಗಣಿ ಅಪಘಾತದಲ್ಲಿ ಸಾವನ್ನಪ್ಪಿದ ಐವತ್ತೇಳು ಮಂದಿಯ ಸಂಸ್ಕಾರ ವಿಧಿಯನ್ನು ಆಚರಿಸುತ್ತಿದ್ದೇನೆ. ನೀವು ಕೂಡಾ ಒಂದೆರಡು ಮಾತಾಡಿ ನೊಂದವರಿಗೆ ಸಾಂತ್ವನ ನೀಡಿ."

ಅವರಿಗೆ ಮಾತಾಡಲು ಒಂದೆರಡು ನಿಮಿಷ ಬೇಕಾಯಿತು.

"ನಂಬೋಕೇ ಆಗೊಲ್ಲ! ನಂಬೋಕೇ ಆಗೊಲ್ಲ" – ಮುಂಚಾಚಿದ ಹೊಟ್ಟೆಯನ್ನು ಚಲಿಸುವಂತೆ ಮಾಡಿ ಮಾತಾಡಿದ.

"ನೀನು ನಿನ್ನನ್ನು ಏನೆಂದು ಕೊಂಡಿದ್ದೀಯ?

ಆಫ್ರಿಕಾದ ಕಾಡುಗಳಲ್ಲಿ ಇರುವೆಯೆಂದು ಭಾವಿಸಿರುವೇಯೇನು?" ವಾನ್ ಡೆನ್ ಬ್ರಿಂಕ್ ನುಡಿದ.

"ಅವನೆಷ್ಟು ಹಾಳು ಮಾಡಿದ್ದಾನೆ ಅನ್ನೋದು ದೇವರಿಗೇ ಗೊತ್ತು."

"ಇವರನ್ನು ಕ್ರಿಶ್ಚಿಯನ್ನರಾಗಿ ಮಾಡಲು ವರ್ಷಗಳೇ ಬೇಕಾಗಬಹುದು."

"ನಾನು ಮೊದಲೇ ಹೇಳಿದೆ. ಅವನಿಗೆ ಅಪಾಯಿಟ್‌ಮೆಂಟ್ ಕೊಡಬೇಡಾಂತ"– ಡಿಜಾಂಗ್ ಉದ್ವಿಗ್ನತೆಯಿಂದ ಹೇಳಿದ.

"ನನಗೂ ಗೊತ್ತು. ಆದರೆ ಪೀಟರ್‌ಸನ್..... ಈ ಥರಾ ಆಗುತ್ತೇಂತ ಯಾರು ತಾನೇ ಊಹಿಸಿದ್ದರು? ಇವನೊಬ್ಬ ಹುಚ್ಚ! ತಲೆ ಹಿಡುಕ!"

"ಮೊದಲಿನಿಂದಲೂ, ಅವನಿಗೆ ತಲೆ ಸರಿ ಇಲ್ಲ ಅಂತ ಅನುಮಾನ ಇದ್ದೇ ಇತ್ತು. ಅದಕ್ಕೇ ಅವನನ್ನು ನಾನು ನಂಬಲೇ ಇಲ್ಲ."

ಇಬ್ಬರು ರೆವರೆಂಡ್‌ಗಳೂ ಅಚ್ಚ ಫ್ರೆಂಚ್‌ನಲ್ಲಿ, ಅದೂ ವೇಗದದಲ್ಲಿ ಮಾತಾಡಿದ್ದರು. ಜೋರೈನ್‌ರಿಗೆ ಒಂದಕ್ಷರವೂ ಅರ್ಥವಾಗಿರಲಿಲ್ಲ. ಅವರು ಇಷ್ಟೆಲ್ಲಾ, ಹೀಗೆಲ್ಲ ಮಾತಾಡುವುದರ ಹಿಂದಿನ ಅರ್ಥವನ್ನು ಊಹಿಸಲು, ಅವನಿಗೆ ತ್ರಾಣವೇ ಇರಲಿಲ್ಲ.

ಡಿ ಜಾಂಗ್ ಜನರ ಗುಂಪಿನ ಮಧ್ಯೆ ನುಗ್ಗಿ, ವಿನ್ಸೆಂಟ್‌ಗೆ ಗಟ್ಟಿಯಾಗಿ ಹೇಳಿದ – "ಈ ಹೊಲಸು ಕುನ್ನಿಗಳನ್ನು ಮೊದಲು ಆಚೆಗೆ ಕಳಿಸು!"

"ಆದರೆ ಸಂಸ್ಕಾರ ವಿಧಿ!.... ಇನ್ನೂ ಪೂರ್ತಿ ಆಗಿಲ್ಲ."

"ಅದಕ್ಕೆಲ್ಲ ತಲೆಕೆಡಿಸಿಕೊಳ್ಳೋದು ಬೇಡ. ಮೊದಲು ಅವರನ್ನು ಇಲ್ಲಿಂದ ಹೊರಡಿಸು."

ಗಣಿ ಕೆಲಸಗಾರರು ಏನೂ ಅರ್ಥವಾಗದೆ, ಎದ್ದು ಸಾಲಾಗಿ ಹೊರಗೆ ಹೊರಟರು. ಆ ಇಬ್ಬರು ಕ್ರೈಸ್ತ ಪಾದ್ರಿಗಳು ವಿನ್ಸೆಂಟ್ ಕಡೆ ತಿರುಗಿ "ಇದೆಲ್ಲ ಏನು? ನೀನು ಏನು ಮಾಡಿಕೊಂಡಿದ್ದೀಯ? ದರಿದ್ರವಾದ ಈ ಕೊಂಪೆಯಲ್ಲಿ 'ಸರ್ವೀಸ್' ಕೊಡೊದೂಂದ್ರೆ ಏನರ್ಥ? ಯಾವ ಅನಾಗರೀಕ ಪದ್ಧತಿ ಶುರು ಮಾಡಿಕೊಂಡಿದ್ದೀ? ನಯ, ನಾಜೂಕು, ಪ್ರತಿಷ್ಠೆ ಗೌರವಗಳು ಬೇಡವೇ? ಕ್ರಿಶ್ಚಿಯನ್ ಪಾದ್ರಿ ಆದವನು ನಡೆದುಕೊಳ್ಳೊ ರೀತಿ ಇದೇ ಏನು? ಈ ಥರ ನಡ್ಕೊಳ್ಳೋಕೆ ನಿನಗೆ ಹುಚ್ಚುಗಿಚ್ಚು ಹಿಡಿದಿದೆಯೇನು? ನಮ್ಮ ಚರ್ಚ್‌ನ ಮಾನ ತೆಗೀಬೇಕೂಂತ ಇದ್ದೀಯೇನು?

ರೆವರೆಂಡ್ ಡಿ ಜಾಂಗ್ ಗುಡಿಸಲನ್ನು, ಮೂಲೆಯಲ್ಲಿದ್ದ ಹುಲ್ಲನ್ನೂ, ವಿನ್ಸೆಂಟ್‌ನ ಅವತಾರವನ್ನೂ ನೋಡಿದ.

"ಸಧ್ಯ, ನಮ್ಮ ಅದೃಷ್ಟ! ನಮ್ಮ ಚರ್ಚ್‌ನ ಮರ್ಯಾದೆ ಉಳೀತು; ನಿನಗೆ ತಾತ್ಕಾಲಿಕ ನೇಮಕಾತಿ ಮಾತ್ರವೇ ಕೊಟ್ಟದ್ದು! ನಮ್ಮ ಪುಣ್ಯ. ಈಗ ನಿನ್ನ ನೇಮಕಾತಿಯನ್ನು ರದ್ದು ಮಾಡಿದ್ದೇವೇಂತ ತಿಳಿದುಕೊಳ್ಳಬಹುದು. ತಕ್ಷಣವೇ ಇಲ್ಲಿಗೆ ಬೇರೊಬ್ಬರನ್ನು ಕಳಿಸಿಕೊಡುತ್ತೇವೆ. ಏನೋ ಹುಚ್ಚಾಂತ ಸುಮ್ಮನೆ ಬಿಟ್ಟಿದ್ದೇವೆ. ಇಲ್ಲವಾದಲ್ಲಿ "ಬೆಲ್ಜಿಯಮ್ ಇವ್ಯಾಂಜೆಲಿಕಲ್ ಚರ್ಚ್‌ನ ಹಿಂದೆಂದೂ ಕಾಣದಿದ್ದ ಬಹುದೊಡ್ಡ ವಿರೋಧಿ ಎಂದು ನಿನ್ನನ್ನು ತೀರ್ಮಾನಿಸಬೇಕಾಗುತ್ತಿತ್ತು!"

ದೀರ್ಘಮೌನದ ನಂತರ – "ಮಿಸ್ಟರ್ ವಿನ್ಸೆಂಟ್ ನಿನ್ನ ಪರವಾಗಿ ನೀನು ಏನನ್ನಾದರೂ ಹೇಳ ಬಯಸುವೆಯೇನು?"

ಬ್ರಸೆಲ್‌ನಲ್ಲಿ ತನಗೆ ಅಪಾಯಿಂಟ್‌ಮೆಂಟ್ ಕೊಡಲು ನಿರಾಕರಿಸಿದ್ದನ್ನು ನೆನಪಿಸಿಕೊಂಡ. ಅವನಿಗೆ ಮಾತಾಡುವುದಿರಲಿ, ಇದರಿಂದ ಏನೂ ಅನಿಸಲೇ ಇಲ್ಲ. ನಿರ್ಭಾವುಕನಾಗಿಯೇ ಇದ್ದ.

"ಬ್ರದರ್ ಜಾಂಗ್, ಈಗ ನಾವು ಹೊರಡಬಹುದು ಅನ್ನತ್ತೆ.... ಇಲ್ಲಿದ್ದು ಇನ್ನು ಮಾಡಬೇಕಾದ್ದು ಏನೂ ಇಲ್ಲ. ಇವನದಂತೂ ಹೋಪಲೆಸ್ ಕೇಸ್!.... ಇಲ್ಲಿ ಯಾವುದಾದರೂ ಒಳ್ಳೆ ಹೋಟೆಲ್ ಸಿಕ್ಕರೆ ಸರಿ, ಇಲ್ಲವಾದಲ್ಲಿ ಈ ರಾತ್ರೀನೇ ಹೊರಟು ಬಿಡೋಣ." – ಎಂದು ರೆವರೆಂಡ್ ವಾನ್‌ಡೆನ್ ಬ್ರಿಂಕ್ ಹೇಳಿದ.

–೧೬–

ಮಾರನೇ ದಿನ ಬೆಳಿಗ್ಗೆ ಹಿರಿಯ ಕಾರ್ಮಿಕರ ತಂಡವೊಂದು ವಿನ್ಸೆಂಟ್ ಬಳಿಗೆ ಬಂತು. ಅವರೆಲ್ಲರೂ "ಮಿಸ್ಟರ್ ವಿನ್ಸೆಂಟ್ ನಿಮಗೇ ಗೊತ್ತಿದೆ. ಇನ್ನು ಮುಂದೆ ಜಾಕ್ವೆಸ್ ವರ್ನೆ ನಮ್ಮ ಪಾಲಿಗೆ ಇಲ್ಲವಾಗಿದ್ದಾನೆ. ಈಗ ನಮ್ಮ ಕಷ್ಟ–ಸುಖ ನೋಡಿಕೊಳ್ಳೋಕೆ ಇರೋದು ನೀವು ಮಾತ್ರ. ನಾವು ಮುಂದೆ ಏನು ಮಾಡಬೇಕು ಅನ್ನೋದನ್ನ

ನೀವೇ ಹೇಳಬೇಕು. ಉಪವಾಸದಿಂದ ಸಾಯೋದು, ತೀರಾ ಅನಿವಾರ್ಯವಾದ ಹೊರತು, ನಮಗೆ ಇಷ್ಟವಿಲ್ಲ. ನೀವು ಅವರ ಹತ್ತಿರ ಮಾತಾಡಿ ನಮ್ಮ ಬೇಡಿಕೆಗಳನ್ನು ಪೂರೈಸಲು ಸಾಧ್ಯ. ನೀವು ಅವರನ್ನು ಭೇಟಿ ಮಾಡಿ ಬಂದ ಮೇಲೆ, ನಮ್ಮನ್ನು ಕೆಲಸಕ್ಕೆ ಹೋಗು ಅಂದ್ರೆ ಹೋಗ್ತೀವಿ, ಇಲ್ಲ, ಉಪವಾಸ ಇರು ಅಂದ್ರೂ ಇರ್ತೀವಿ. ನೀವು ಏನು ಹೇಳಿದರೂ ಅದರಂತೆ ಮಾಡೋಕೆ ನಾವು ಸಿದ್ಧ. ನಿಮ್ಮನ್ನು ಬಿಟ್ಟರೆ ನಮಗೆ ಬೇರೆ ಯಾರೂ ಇಲ್ಲ" ಎಂದು ತಮ್ಮ ಕಷ್ಟ ಹೇಳಿಕೊಂಡರು. 'ಬೆಲ್ಜಿಕ್' ಇದ್ದಿಲ ಕಂಪೆನಿ ಕಛೇರಿಯಲ್ಲಿಯೂ ಸೂತಕದ ವಾತಾವರಣ! ಕಂಪೆನಿಯ ಮ್ಯಾನೇಜರ್ ವಿನ್ಸೆಂಟ್‌ನನ್ನು ನೋಡಿ ಸಂತೋಷ ವ್ಯಕ್ತ ಪಡಿಸಿದ. ವಿನ್ಸೆಂಟ್ ಹೇಳಿದ್ದೆಲ್ಲವನ್ನೂ ಸಹಾನುಭೂತಿಯಿಂದಲೇ ಕೇಳಿಸಿಕೊಂಡ. "ನನಗೆ ಗೊತ್ತಿದೆ ಮಿಸ್ಟರ್, ಕಾರ್ಮಿಕರಿಗೆ ನಮ್ಮ ಮೇಲೆ ಕೋಪ ಇದೆ. ಹೆಣಗಳನ್ನು ಮೇಲೆ ತೆಗೆಯಲು ನಾವು ಪ್ರಯತ್ನಿಸಲಿಲ್ಲ ಅನ್ನೋದು ಅವರ ದೂರು. ಆದರೆ ಅದರಿಂದ ಪ್ರಯೋಜನವಾದರೂ ಏನು? ಗಣಿಯೇ ಮುಚ್ಚಿ ಹೋಗಿದೆ. ಒಳಗೆ ಇಳಿದು ದೇಹಗಳನ್ನು ತರುವುದು ಸಾಧ್ಯವೇ ಇಲ್ಲ. ಮತ್ತೆ ರಂಧ್ರ ಕೊರೆದು ದಾರಿ ಮಾಡಿ ತಳಭಾಗದವರೆಗೆ ಹೋದರೂ ಹೆಣಗಳು ಹೂತು ಹೋಗಿರುವುದರಿಂದ ಹೊರ ತೆಗೆಯಲು ಆಗುವುದಿಲ್ಲ. ಒಂದು ವೇಳೆ ಏನೆಲ್ಲ ಪ್ರಯಾಸ ಮಾಡಿ ಅಗೆದು ಆಚೆ ತೆಗೆದ ಮೇಲೆ ಮಾಡುವುದಾದರೂ ಏನು? ಇನ್ನೊಂದು ಕಡೆ ಗುಣಿ ತೆಗೆದು ಹೂಳಬೇಕು ಅಷ್ಟೆ! ಅಂದರೆ ಸಮಾಧಿಯಿಂದ ಹೊರತೆಗೆದು ಮತ್ತೆ ಸಮಾಧಿ ಮಾಡುವುದು! ಇದರಿಂದ ಕಂಪೆನಿಗೆ ಅಪಾರ ನಷ್ಟವೇ ಹೊರತು, ಅವರಿಗಾಗಲೀ ನಮಗಾಗಲೀ ಪ್ರಯೋಜನವಿಲ್ಲ."

"ನಿಮ್ಮ ಮಾತೇನೋ ಸರಿ. ಆದರೆ ಬದುಕಿರುವವರ ವಿಚಾರ? ಎಷ್ಟೊಂದು ಆಳದಲ್ಲಿ ಕೆಲಸ ಮಾಡುವವರಿಗೆ ಸರಿಯಾದ ಪರಿಸರ, ಭದ್ರತಾ ವ್ಯವಸ್ಥೆಯ ಅಗತ್ಯವಿದೆಯೆಂದು ಅನಿಸುವುದಿಲ್ಲವೇ? ನಿತ್ಯ ನಿರಂತರ ಸಾವಿನ ಸಹವಾಸದಲ್ಲಿಯೇ ಕೆಲಸ ಮಾಡುತ್ತಾರಲ್ಲವೇ?"

"ಹೌದು ಮಿಸ್ಟರ್, ಸಾವು, ದುರಂತಗಳ ಒಡನಾಟದಲ್ಲಿ ಕೆಲಸ ಮಾಡುತ್ತದೆಂಬುದು ನೂರಕ್ಕೆ ನೂರು ನಿಜ! ಆದರೆ ಅವರಿಗೆ ಭದ್ರತಾ ವ್ಯವಸ್ಥೆಯನ್ನು ಕಲ್ಪಿಸಲು ಕಂಪೆನಿ ಹತ್ತಿರ ದುಡ್ಡಿಲ್ಲ. ಕಾರ್ಮಿಕರಿಗೆ ಎಂದೂ ಗೆಲುವು ಸಾಧ್ಯವಿಲ್ಲ. ಕಾನೂನು ಸಾಕಷ್ಟು ರೀತಿಗಳಿಂದ ಅವರಿಗೆ ವಿರುದ್ಧವಾಗಿಯೇ ಇದೆ. ಇನ್ನೂ ಸ್ಪಷ್ಟವಾಗಿ ಹೇಳಬೇಕಾದರೆ, ಒಂದು ವಾರದ ಒಳಗೆ ಕೆಲಸಕ್ಕೆ ಹಾಜರಾಗಲಿಲ್ಲ ಅಂದ್ರೆ, ಮಾರ್ಕಾಸ್‌ನ ಗಣಿ ಕೆಲಸಗಳನ್ನು ನಿಲ್ಲಿಸಬೇಕಾಗುತ್ತೆ – ಅದೂ, ಶಾಶ್ವತವಾಗಿ!..... ಆಗ ಅವರನ್ನು ದೇವರೇ ಕಾಪಾಡಬೇಕು. ವಿನ್ಸೆಂಟ್ ನಿರಾಶೆಯಿಂದ ಹಿಂತಿರುಗಿದ. "ಬಹುಶಃ! ದೇವರೇ ಬಲ್ಲ!......ಇಲ್ಲ..... ದೇವರಿಗೆ ಗೊತ್ತೇ ಇಲ್ಲ!!" – ತನ್ನೊಳಗೇ ಹೇಳಿಕೊಂಡ.

ಕಾರ್ಮಿಕರಿಗೆ ತನ್ನಿಂದ ಇನ್ನು ಮುಂದೆ ಏನೂ ಪ್ರಯೋಜನ ಇಲ್ಲ ಅನ್ನೋದು ಸ್ಪಷ್ಟವಾಗಿತ್ತು. ಹದಿಮೂರು ಗಂಟೆಕಾಲ, ಗಣಿಯ ಗುಳಿಗಳಲ್ಲಿ, ಸಾವು, ರೋಗಗಳ

ವಿನಮ್ರತೆಯಿಂದ ಕೇಳಿಕೊಂಡಿದ್ದ. ಮೇಡಂ ಡೆನಿಸ್‌ಗೆ ಹಣ ನೀಡಿದ. ಆದರೆ ಬೋರಿನೇಜ್ ಬಿಡಲಿಲ್ಲ. ಬೋರಿನೇಜ್ ಬಿಡದಿರಲು ಕಾರಣ ಅವನು ಅದನ್ನು ಇಷ್ಟಪಡುತ್ತಿದ್ದಾನೆ ಎಂದೇನಲ್ಲ; ಅವನಿಗೆ ಹೋಗಲು ಬೇರೆಲ್ಲಿಯೂ ಸಾಧ್ಯವಿರಲಿಲ್ಲ. ಅಲ್ಲಿಂದ ಹೋಗುವುದಾದರೂ ಎಲ್ಲಿಗೆ? – ಇದು ಅವನ ಪ್ರಶ್ನೆಯಾಗಿತ್ತು.

ಅವನ ಪಾಲಿಗೆ ದೇವರೂ ಇಲ್ಲ; ತಾನೂ ಇಲ್ಲ. ಆದರೆ ಇದೆಲ್ಲಕ್ಕಿಂತ ಪ್ರಪಂಚದಲ್ಲಿ ಅತ್ಯಂತ ಅಮೂಲ್ಯವಾದ ಒಂದನ್ನು ಕಳೆದುಕೊಂಡ. ಅವನಿಗೆ ಪ್ರಪಂಚದಲ್ಲಿ ನಿಜವಾದ ಪ್ರೀತಿಯನ್ನು ತೋರುವವರು, ಅವನ ಬಗ್ಗೆ ಅತ್ಯಂತ ಕಾಳಜಿ ಇರಿಸಿಕೊಂಡಿದ್ದವರು, ಅವನ ಭವ್ಯ ಭವಿಷ್ಯದ ಕನಸು ಕಂಡವರು ಯಾರಾದರೂ ಇದ್ದರೆ, ಅದು ಅವನ ತಮ್ಮ ಥಿಯೋ! ಆದರೆ ವಿನ್ಸೆಂಟ್ ತನ್ನ ಧೋರಣೆಯಿಂದ ಅವನನ್ನೂ ಕಳೆದುಕೊಂಡ. ಎಷ್ಟೋ ಸಲ ಪ್ರೀತಿಯಿಂದ, ಏನಾದರೂ ಕೆಲಸದ ಬಗ್ಗೆ ಯೋಚಿಸಿ. ಬದುಕನ್ನು ರೂಪಿಸಿಕೊಳ್ಳಲು ಪ್ರಯತ್ನಿಸು' ಎಂದು ಸೂಚಿಸುತ್ತಾ ಬೇಡುತ್ತಾ ಬರೆದ ಪತ್ರಗಳಿಗೆ ವಿನ್ಸೆಂಟ್ ಯಾವುದೇ ರೀತಿಯಲ್ಲಿ ಪ್ರತಿಕ್ರಿಯಿಸದೆ ಹೋದಾಗ, ಥಿಯೋ, ಬೇಸರಗೊಂಡು ಪತ್ರಗಳನ್ನು ಬರೆಯುವುದನ್ನೇ ನಿಲ್ಲಿಸಿದ. ವಿನ್ಸೆಂಟ್‌ನನ್ನು ಉತ್ಸಾಹಗೊಳಿಸಲು, ಸಂತೋಷವುಂಟು ಮಾಡಲು ನಡೆಸಿದ ಪ್ರಯತ್ನಕ್ಕೆ ದೊರೆತ ನೀರಸ ಪ್ರತಿಕ್ರಿಯೆಯಿಂದ ಥಿಯೋ ಹತಾಶಗೊಂಡು, ಅವನನ್ನು ಮರೆಯಲು ಮುಂದಾದ. ವಿನ್ಸೆಂಟ್‌ನ ಬಗೆಗಿನ ನಂಬಿಕೆ, ಭರವಸೆಗಳನ್ನು ಸಂಪೂರ್ಣವಾಗಿ ಕೈ ಬಿಟ್ಟ. ವಿನ್ಸೆಂಟ್‌ನ ರೀತಿಯನ್ನು, ಮನಸ್ಸನ್ನು ಬಹುಶಃ ಆ ದೇವರಿಗೂ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ.

–೧೮–

ಬೇಸಿಗೆ ಕಳೆದು ಶರತ್ಕಾಲ ಬಂತು. ವಿನ್ಸೆಂಟ್‌ಗೆ ತನ್ನ ಬದುಕನ್ನು ಹೇಗೆ ಎದುರಿಸಬೇಕೆಂದು ತಿಳಿಯದಿದ್ದರೂ ಪುಸ್ತಕಗಳ ಮೂಲಕ ಬೇರೆ ಬೇರೆಯವರು ಬದುಕನ್ನು ಹೇಗೆ ಎದುರಿಸಿದರು ಅನ್ನುವುದನ್ನು ಅರ್ಥ ಮಾಡಿಕೊಳ್ಳಲು ಯತ್ನಿಸುತ್ತಿದ್ದ. ಅವರವರ ಬದುಕುಗಳಲ್ಲಿ ಆಸೆ, ಹತಾಶೆ, ಸಂಘರ್ಷ, ಸೋಲುಗಳು, ತನ್ನ ಬದುಕಿನ ಸೋಲುಗಳ ಚಿಂತೆಗಿಂತ ಹೆಚ್ಚಾಗಿ ಕಾಡಿತು.

ಹೊರಗಡೆ ಹವಾ ಚೆನ್ನಾಗಿದ್ದಾಗ ಹೊಲ, ಗದ್ದೆಗಳಲ್ಲಿ ಅಡ್ಡಾಡಿ ಬರುತ್ತಿದ್ದ. ಮಳೆ ಗಿಳೆ ಬರುವ ಹಾಗಿದ್ದರೆ, ತನ್ನ ಕೋಣೆಯಲ್ಲಿಯೇ ಕುಳಿತು ಓದುತ್ತಿದ್ದ. ಎಷ್ಟೋ ಸಾಮಾನ್ಯ ಜನರ ಬದುಕುಗಳಲ್ಲಿನ ಸಂಘರ್ಷ ಸೋಲುಗಳ ಬಗ್ಗೆ ಓದಿ ಓದಿ, ಅಲ್ಲಿ ಪಾತ್ರಗಳು ಸೋಲುಗಳ ನಡುವೆಯೂ ಗೆಲ್ಲಲು, ಬದುಕನ್ನು ಕಂಡುಕೊಳ್ಳಲು ನಡೆಸುವ ಪ್ರಯತ್ನಗಳ ಮೂಲಕ ಪ್ರೇರಣೆ ಪಡೆದು, ಆಗಾಗ ತನ್ನ ಸೋಲಿನ ಬಗ್ಗೆ ಯೋಚಿಸುತ್ತಿದ್ದ; ಮುಂದೆ ತಾನು ಏನಾಗಬೇಕು, ಏನಾಗಬಹುದು, ಎಂಬುದರ ಚಿಂತನೆ ನಡೆಸುತ್ತಿದ್ದ. ಯಾವುದು ತನ್ನ ಗುರಿ? ತಾನು ಏನನ್ನು ಮಾಡಬಲ್ಲೆ?– ಎಂದೆಲ್ಲಾ ಯೋಚಿಸಿ, ಹುಡುಕಾಟಕ್ಕೆ ಹೊರಟಿದ್ದ.

ಮನೆಯಿಂದಲೂ ಪತ್ರಗಳು ಬಂದವು. ಅವನ ಆಲಸಿ ಬದುಕಿನ ಬಗ್ಗೆ ತಂದೆಯ ಕೋಪ, ಚಿಂತೆ ವ್ಯಕ್ತವಾಗಿದ್ದವು. 'ಯಾವಾಗ ತಾನೇ ಜವಾಬ್ದಾರಿ ಮನುಷ್ಯನಾಗಿ ಬಾಳುವೆ, ನಿನ್ನನ್ನು ಸಾಕಿಕೊಳ್ಳುವ ಮತ್ತು ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿಯಾಗಿ ಬಾಳುವ, ಸಮಾಜಕ್ಕೂ ಏನಾದರೂ ನೀಡುವ ಕೆಲಸ ಯಾವಾಗ ನಿನ್ನಿಂದ ಸಾಧ್ಯವಾದೀತು' – ಎಂದೆಲ್ಲ ಪ್ರಶ್ನಿಸಿ ಕಾಗದ ಬರೆದಿದ್ದರು; ಅಲ್ಲಲ್ಲಿ ಬುದ್ಧಿವಾದ ಹೇಳಿದ್ದರು. ನಿಷ್ಪ್ರಯೋಜಕನಾಗಿ ಬದುಕುತ್ತಿರುವುದನ್ನು ಖಂಡಿಸಿದ್ದರು.

ಕಡೆಗೆ ಓದುವುದೂ ಅವನಿಗೆ ಬೇಸರವಾಯಿತು. ಪುಸ್ತಕವನ್ನೇ ಮುಟ್ಟುತ್ತಿರಲಿಲ್ಲ. ಒಂದಷ್ಟು ದಿನ ಕಳೆದ ಮೇಲೆ ಅವನಿಗೆ ಒಂದು ರೀತಿ ದುರ್ಬಲತೆ, ನಿರಾಸಕ್ತಿಗಳು ಮುತ್ತಿದೆಂತೆನಿಸಿತು. ಮತ್ತೆ ಅವನು ಸಾಹಿತ್ಯವನ್ನು ಓದಲು ಶುರುಮಾಡಿದ. ಇಲ್ಲಿಯವರೆಗೂ ಅದುಮಿಟ್ಟಕೊಂಡಿದ್ದ ಭಾವನೆಗಳು ಒಮ್ಮೆಲೇ ಸ್ಫೋಟದೊಂದಿಗೆ ಹೊರಚಿಮ್ಮಿ ಅವನನ್ನು ದುಃಖ, ಹತಾಶೆಗಳು ಆವರಿಸಿದವು. ಇದರಿಂದ ಅವನಿಗೆ ಸಮಾಧಾನವೆಂಬುದು ಇಲ್ಲವಾಯಿತು.

ಎಲ್ಲೋ ಒಂದು ಕಡೆ ಭರವಸೆಯ ಬೆಳ್ಳಿ ರೇಖೆ ಕಾಣಿಸಿತು.

ತನ್ನಲ್ಲಿ ಏನೋ ಒಳ್ಳೆಯದಿದೆ; ಎಲ್ಲರೂ ಭಾವಿಸಿದಂತೆ, ಮೂರ್ಖ ತಾನಲ್ಲ! ನಿರುಪಯುಕ್ತಪ್ರಾಣಿಯಲ್ಲ. ಈ ಪ್ರಪಂಚಕ್ಕೆ ಏನನ್ನಾದರೂ, ಅಲ್ಪ ಪ್ರಮಾಣದಲ್ಲಾದರೂ ಕೊಡಬಲ್ಲೆ ಎಂದುಕೊಂಡ. ಆದರೆ ಏನನ್ನು ಕೊಡಬಲ್ಲ? ಮನೆತನದಲ್ಲಿನ ವ್ಯಾಪಾರವನ್ನಾದರೂ ಚೆನ್ನಾಗಿ ಮಾಡಬಲ್ಲೆನೇ? ಅದೂ ಇಲ್ಲ. ಪ್ರಯತ್ನಮಾಡಿ ಪ್ರಚಂಡ ಸೋಲನ್ನು ಅನುಭವಿಸಿದ್ದ. ಹಾಗಾದರೆ ಅವನ ಬದುಕಿನಲ್ಲಿ ಬರೀ ಸೋಲು–ನೋವುಗಳು ಮಾತ್ರವೇ?! ಅವನ ಕತೆ ಮುಗಿದಂತೆಯೇ!?

ತನ್ನಲ್ಲಿ ತಾನೇ ಕೇಳಿಕೊಂಡ ಈ ಪ್ರಶ್ನೆಗಳಿಗೆ ಉತ್ತರ ಮಾತ್ರ ಸಾಧ್ಯವಾಗಲಿಲ್ಲ. ಇಂಥಾ ಯೋಚನೆಗಳಲ್ಲೇ ದಿನ ಕಳೆದು ಚಳಿಗಾಲವೂ ಬಂತು. ಅವನ ತಂದೆಗೆ ಬೇಸರವಾದರೆ ಹಣ ಕಳಿಸುವುದೂ ನಿಂತು ಹೋಗುತ್ತದೆ. ಊಟಕ್ಕೂ ಆಗ ಕಾಸಿರೋದಿಲ್ಲ. ಆದರೆ ಥಿಯೋಗೆ ಪಾಪ ಅನ್ನಿಸಿದರೆ, ಒಂದಿಷ್ಟು ಹಣ ಕಳಿಸಬಹುದು. ಅವನು ನಿಲ್ಲಿಸಿದರೆ, ತಂದೆಗೆ ಮಗನ ಮೇಲೆ ಸಹಾನುಭೂತಿ ಎನಿಸಿ ಕಳಿಸಬಹುದೇನೋ! ಹೀಗೆಲ್ಲಾ ಯೋಚನೆ ಮಾಡಿ. ಹಣಾನಾ ಬಹಳ ಜಾಗರೂಕತೆಯಿಂದ ಖರ್ಚು ಮಾಡುತ್ತಿದ್ದ. ಅರೆಹೊಟ್ಟೆಯಿಂದಲೇ ತೃಪ್ತಿ ಪಟ್ಟುಕೊಳ್ಳುತ್ತಿದ್ದ.

ನವೆಂಬರ್‌ನ ಒಂದು ದಿನ, ಸುಮ್ಮನೆ ಹಾಗೆಯೇ ಮಾರ್ಕಾಸ್ಸ್ ಕಡೆ ಹೆಜ್ಜೆ ಹಾಕಿದ. ಅಲ್ಲಿಯೇ ಒಂದು ಕಡೆ ಗೋಡೆಗೆ ಆನಿಸಿದ್ದ ತುಕ್ಕು ಹಿಡಿದ ಚಕ್ರದ ಮೇಲೆ ಕುಳಿತ. ದೂರದಿಂದ, ವ್ಯಕ್ತಿಯೊಬ್ಬ ಗೇಟಿನಿಂದ ಕಪ್ಪು ಹ್ಯಾಟ್ ಧರಿಸಿ, ಕೈಗಳನ್ನು ಜೇಬಿನೊಳಗೆ ಇರಿಸಿಕೊಂಡು ನಡೆದು ಬರುತ್ತಿದ್ದುದನ್ನು ನೋಡಿದ. ವಿನ್ಸೆಂಟ್‌ಗೆ ಅವನಲ್ಲಿ ಅದೇನು ವಿಶೇಷ ಕಾಣಿಸಿತೋ, ಕೂಡಲೇ ಜೇಬಿನಿಂದ ಪೆನ್ಸಿಲ್ ತುಂಡನ್ನು ಮತ್ತು ಮನೆಯಿಂದ ಬಂದ ಪತ್ರದ ಕವರನ್ನು ಹೊರತೆಗೆದು, ಇದ್ದಿಲ ಪ್ರದೇಶದಿಂದ ನಡೆದು ಬರುತ್ತಿದ್ದ ವ್ಯಕ್ತಿಯ ಚಿತ್ರವನ್ನು ಬಿಡಿಸಿದ.

ತಂದೆ ಬರೆದಿದ್ದ ಪತ್ರವನ್ನು ಬಿಡಿಸಿ ನೋಡಿದಾಗ, ಪತ್ರದ ಹಿಂಬದಿ ಖಾಲಿ ಇತ್ತು. ಸರಿ ಮತ್ತೊಬ್ಬ ಗಣಿ ಕಾರ್ಮಿಕನ ಚಿತ್ರ ಬಿಡಿಸಿದ. ಈ ಚಿತ್ರದ ವ್ಯಕ್ತಿ ಹದಿನೇಳು ವರ್ಷದ ಯುವಕನಾಗಿದ್ದ. ಅವನು ಎತ್ತರವಾಗಿಯೂ ನೇರವಾಗಿಯೂ ಇದ್ದ. ಮುಖದಲ್ಲಿ ಗೆಲುವಿತ್ತು. ಮಾರ್ಕಾಸ್‌ನ ಎತ್ತರದ ಕಲ್ಲು ಗೋಡೆಯಿಂದ ರೈಲ್ವೆ ಹಳಿಗಳ ಕಡೆಗೆ ತಿರುಗಿ ಬರುತ್ತಿದ್ದ. ಆ ಯುವಕಾರ್ಮಿಕ ಮರೆಯಾಗುವ ಮೊದಲು ಅವನಿಗೆ ಒಂದಷ್ಟು ನಿಮಿಷಗಳ ಅವಧಿ ಸಿಕ್ಕಿತ್ತು.

-೧೯-

ಡೆನಿಸ್‌ರ ಮನೆಯಲ್ಲಿ ಸಾಕಷ್ಟು ಖಾಲಿ ಹಾಳೆಗಳು ದೊರೆತವು. ಜೊತೆಗೆ ದಪ್ಪನೆಯ ಪೆನ್ಸಿಲ್ಲೂ ಸಿಕ್ಕಿತು. ರಫ್ ಸ್ಕೆಚ್‌ಗಳನ್ನು, ಮೇಜಿನ ಮೇಲಿರಿಸಿ ಅವುಗಳನ್ನು ಕಾಪಿ ಮಾಡಲು ಆರಂಭಿಸಿದ. ಆದರೆ ಯಾಕೋ ಅವನ ಮನಸ್ಸಿನಲ್ಲಿ ಮೂಡಿದ್ದ ಗೆರೆಗಳು ಹಾಳೆಗಳ ಮೇಲೆ ಮೂಡಲಿಲ್ಲ. ರಬ್ಬರ್‌ನಿಂದ ಅಳಿಸಿ ಅಳಿಸಿ ಮೂಡಿಸಲು ಯತ್ನಿಸಿದ. ಮತ್ತೆ ಮತ್ತೆ ಆಕಾರಗಳನ್ನು ಮೂಡಿಸುವ ಪ್ರಯತ್ನದಲ್ಲಿ ಮೈಮರೆತಿದ್ದವನಿಗೆ ಕತ್ತಲಾದದ್ದೂ ತಿಳಿಯಲಿಲ್ಲ. ಮೇಡಂ ಡೆನಿಸ್ ಬಾಗಿಲು ತಟ್ಟಿದಾಗ ಅವನು ಬೆಚ್ಚಿಬಿದ್ದ.

"ಮಿಸ್ಟರ್ ವಿನ್ಸೆಂಟ್ ಊಟ ಮೇಜಿನ ಮೇಲಿದೆ."

"ಏನು ಆಗಲೇ ರಾತ್ರಿ ಊಟದ ಸಮಯ ಆಗಿದೆಯೇ?" ಎಂದು ಆಶ್ಚರ್ಯದಿಂದ ಉದ್ಗರಿಸಿದ.

ಊಟ ಮಾಡುವಾಗ, ಬಹಳ ಉತ್ಸಾಹದಿಂದಲೇ ಡೆನಿಸ್ ದಂಪತಿಗಳ ಜೊತೆ ಮಾತಾಡಿದ. ದಂಪತಿಗಳಿಬ್ಬರೂ ಒಬ್ಬರನ್ನೊಬ್ಬರು ಅರ್ಥಪೂರ್ಣವಾಗಿ ನೋಡಿಕೊಂಡರು. ಸಾಧಾರಣವಾದ ಊಟದ ನಂತರ, ವಿನ್ಸೆಂಟ್ ಇಬ್ಬರ ಅಪ್ಪಣೆ ಪಡೆದು ತನ್ನ ಕೋಣೆಗೆ ಹೋದ. ತಾನು ಮಾಡಿದ ಸ್ಕೆಚ್‌ಗಳನ್ನು ಗೋಡೆಗೆ ತಗುಲಿಸಿ, ಸರಿಯಾದ ನೋಟ ಸಿಗುವಷ್ಟು ದೂರದಲ್ಲಿ ನಿಂತು ಅವುಗಳನ್ನು ಗಮನಿಸಿದ. "ಕೆಟ್ಟದ್ದಾಗಿದೆ! ಬಹಳ ಕೆಟ್ಟದ್ದಾಗಿದೆ! ನೋಡ್ತೀನಿ...... ನಾಳೆ ಇದಕ್ಕಿಂತ ಚೆನ್ನಾಗಿ ಮಾಡುವುದಕ್ಕೆ ಆಗಬಹುದೇನೋ!"

ಸೀಮೆಎಣ್ಣೆ ದೀಪವನ್ನು ಮಂಚದ ಪಕ್ಕದಲ್ಲಿ ನೆಲದ ಮೇಲೆ ಇರಿಸಿ, ಹಾಸಿಗೆಯಲ್ಲಿ ಬಿದ್ದುಕೊಂಡ. ತನ್ನ ಎರಡು ಸ್ಕೆಚ್‌ಗಳನ್ನು ಸುಮ್ಮನೆ ನೋಡ ತೊಡಗಿದ. ನಂತರ ಗೋಡೆ ಮೇಲೆ ಇದ್ದ ಬೇರೆ ಪ್ರಿಂಟ್‌ಗಳ ಕಡೆ ದೃಷ್ಟಿ ಹಾಯಿಸಿದ. ಸಲೋನ್ ಬಾಗಿಲು ಮುಚ್ಚಿಕೊಂಡು ಬಂದಮೇಲೆ ತನ್ನ ಗೋಡೆಯನ್ನು ಅಲಂಕರಿಸಿದ್ದ ಪ್ರಿಂಟ್‌ಗಳನ್ನು ಮೊದಲ ಬಾರಿಗೆ ಈಗ ಗಮನಿಸಿದ್ದ. ಇದ್ದಕ್ಕಿದ್ದಂತೆ ಅವನಲ್ಲಿ ಪಿಕ್ಚರ್‌ಗಳ (ಪೈಂಟಿಂಗ್‌ಗಳ) ಬಗ್ಗೆ ತುಡಿತ ಆರಂಭವಾಯಿತು. ಒಂದು ಕಾಲದಲ್ಲಿ ಅವನು ರ್‍ಯಾಮ್‌ಬ್ರಾಂಟ್, ಮಿಲ್ಲೆಟ್, ಜೂಲ್ಸ್ ಡೂಪ್ರೆ, ದೆಲಾಕ್ರ್ವಾ, ಮಾರಿಸ್ ಮೊದಲಾದ ಕಲಾಕಾರರ ಬಗ್ಗೆ ತಿಳಿದಿದ್ದ. ತನ್ನಲ್ಲಿದ್ದ ಸುಂದರವಾದ ಚಿತ್ರಗಳು ನೆನಪಾದವು. ತನ್ನ ತಂದೆ ತಾಯಿಗಳಿಗೆ, ಥಿಯೋಗೆ ಕಳಿಸಿಕೊಟ್ಟಿದ್ದ ಲಿಥೋಗ್ರಾಫ್ಸ್, ಎಚ್ಚಿಂಗ್ಸ್ ಮೊದಲಾದವು ಅವನ ಕಣ್ಮುಂದೆ

ಬಂದವು. ಲಂಡನ್ ಮತ್ತು ಆ್ಯಮ್‌ಸ್ಟರ್ ಡ್ಯಾಮ್ ಮ್ಯೂಸಿಯಂಗಳಲ್ಲಿ ನೋಡಿದ್ದ ತೈಲಚಿತ್ರಗಳು ನೆನಪಾದವು. ಇವೆಲ್ಲವನ್ನೂ ನೆನಪಿಗೆ ತಂದುಕೊಳ್ಳುತ್ತಾ ಸುಖನಿದ್ರೆಗೆ ಇಳಿದ. ಸೀಮೆಎಣ್ಣೆ ದೀಪ ಫಡಫಡಿಸುತ್ತಿತ್ತು.

ಮರುದಿನ ಬೆಳಿಗ್ಗೆ ಎರಡೂವರೆ ಗಂಟೆಗೇ ಎಚ್ಚರಗೊಂಡ. ಸಾಕಷ್ಟು ಹಾಯೆನಿಸಿತ್ತು. ಕೂಡಲೇ ಹಾಸಿಗೆ ಬಿಟ್ಟು ಎದ್ದು ಡ್ರೆಸ್ ಮಾಡಿಕೊಂಡು, ಪೇಪರ್, ಪೆನ್ಸಿಲ್ ಮತ್ತು ತೆಳುವಾದ ಬೋರ್ಡನ್ನು ಬೇಕರಿಯಿಂದ ಸಂಗ್ರಹಿಸಿ, ಮಾರ್ಕಾಸ್ ಕಡೆ ಹೆಜ್ಜೆ ಹಾಕಿದ. ಹಿಂದಿನ ದಿನ ಕುಳಿತಿದ್ದ ಅದೇ ಜಾಗದಲ್ಲಿ, ಚಕ್ರದ ಮೇಲೆ ಕುಳಿತ. ಹೋಗಿಬರುವ ಗಣಿ ಕಾರ್ಮಿಕರಿಗಾಗಿ ಕಾದ.

ಆದಷ್ಟು ಬೇಗ ಬೇಗನೆ, ತನ್ನ ಮನಸ್ಸಿನಲ್ಲಿ ಮೊದಲಿಗೆ ಅಚ್ಚೊತ್ತಿದ್ದ ರೀತಿಯಲ್ಲಿ ಸ್ಕೆಚ್‌ಗಳನ್ನು ಬಿಡಿಸಿದ. ಒಂದು ಗಂಟೆ ಕಷ್ಟಪಟ್ಟು ಮುಖಗಳಿಲ್ಲದ ಐದು ಆಕಾರಗಳನ್ನು ಬಿಡಿಸಿದ. ಸರಸರನೆ ಮನೆಗೆ ಬಂದು ಕಾಫಿ ಕುಡಿದು, ಬೆಳಗಾಗುತ್ತಿದ್ದಂತೆ ಸ್ಕೆಚ್‌ಗಳನ್ನು ಕಾಪಿ ಮಾಡಲು ಕುಳಿತ. ಅವನಿಗೆ ಆ ಮುಖಗಳಲ್ಲಿ, ತನಗೆ ಚೆನ್ನಾಗಿ ಪರಿಚಿತವಿದ್ದ ಬೊರೈನಿನ ಎಲ್ಲ ಲಕ್ಷಣಗಳನ್ನು ಅವುಗಳಲ್ಲಿ ತರಬೇಕೆಂದೆನಿಸಿತಾದರೂ, ಮನಸ್ಸಿನಲ್ಲಿ ಇದ್ದದ್ದು ಸ್ಕೆಚ್‌ಗಳಲ್ಲಿ ಮೂಡಿರಲಿಲ್ಲ.

ಅವನ ಶರೀರ ರಚನಾಜ್ಞಾನ ಸರಿಯಾಗಿರಲಿಲ್ಲ. ಅಳತೆ ಪ್ರಮಾಣಗಳು ಅವನ ಡ್ರಾಯಿಂಗ್‌ನಲ್ಲಿ ಸರಿಯಾಗಿ ಬರಲಿಲ್ಲ. ಒಂದು ರೀತಿ ವಿಚಿತ್ರವಾಗಿದ್ದವು. ಆದರೂ ನೋಡಿದರೆ, ತಕ್ಷಣ 'ಬೊರೈನ್' ಎನಿಸುತ್ತಿದ್ದುದರಲ್ಲಿ ಸಂದೇಹವಿರಲಿಲ್ಲ. ತನ್ನ ಸ್ಕೆಚ್‌ಗಳಲ್ಲಿ ತನಗೇ ತೃಪ್ತಿ ಸಿಕ್ಕದೆ ಹೋದಾಗ, ಅವುಗಳನ್ನೆಲ್ಲ ಹರಿದೆಸೆದ. ಹಾಸಿಗೆಯ ಅಂಚಿಗೆ ಕುಳಿತು ತನಗೆ ಎದುರಾಗಿದ್ದ, ಮುದಕಿಯೊಬ್ಬಳು ಚಳಿಗಾಲದ ದಿನದಲ್ಲಿ ಒಂದು ಬಿಸಿ ನೀರಿನ ಕೊಡವನ್ನು, ಇದ್ದಿಲನ್ನು ಹೊತ್ತೊಯ್ಯುತ್ತಿರುವ ಚಿತ್ರವನ್ನು ಗಮನಿಸಿ, ಅದನ್ನು ಕಾಪಿ ಮಾಡಲು ತೊಡಗಿದ. ಆದರೆ ತೃಪ್ತಿಯಾಗಲಿಲ್ಲ. ಹೆಂಗಸಿನ ಚಿತ್ರವನ್ನೇನೋ ಮೂಡಿಸಿದ. ಆದರೆ ಅವಳಿಗೆ ಹಿನ್ನೆಲೆಯಾಗಿ ಬರಬೇಕಿದ್ದ ರಸ್ತೆಯಾಗಲೀ, ಮನೆಗಳಾಗಲಿ ಸರಿಯಾಗಿ ಹೊಂದಿಕೆಯಾಗಲಿಲ್ಲ. ಕಾಗದವನ್ನು ಮುದ್ದೆ ಮಾಡಿ ಎಸೆದ. ಮತ್ತೆ ಒಂಟಿಮರದ ಚಿತ್ರ ಬಿಡಿಸಲು ಯತ್ನಿಸಿದ. ಒಂದೇ ಒಂದು ಮರ. ಅದರ ಹಿನ್ನೆಲೆಗೆ ಮೋಡ ಕವಿದ ಆಕಾಶ. ಬಹಳ ಸುಲಭ ಅನ್ನಿಸಿತು. ಒಂಟಿಮರ, ಒಂದಿಷ್ಟು ಮಣ್ಣು, ಮೇಲೆ ಮೋಡ – ಇಷ್ಟೇ! ಆದರೆ ವಿನ್ಸೆಂಟ್ ಅದರ ಪ್ರತಿಯನ್ನು ಬಿಡಿಸಲು ಪ್ರಯತ್ನಿಸಿದಾಗ ಕಷ್ಟವೆನಿಸಿತು. ನೋಡಲು ಸುಲಭವಾಗಿರುವಂತಹವುಗಳೇ ವಾಸ್ತವವಾಗಿ ನಕಲು ಮಾಡಲು ಅಥವಾ ಪ್ರತಿ ತೆಗೆಯಲು ತುಂಬ ಕಷ್ಟವೆಂಬ ಸಂಗತಿ ವಿನ್ಸೆಂಟ್‌ಗೆ ಮನದಟ್ಟಾಯಿತು.

ಅವನ ಅರಿವಿಗೆ ಬಾರದೆಯೇ ಬೆಳಗಾಗಿತ್ತು. ಕಡೆಯ ಹಾಳೆಯೂ ಮುಗಿದು ಹೋಗಿತ್ತು. ತನ್ನ ಬಟ್ಟೆಗಳ ಜೇಬುಗಳಲ್ಲಿ ಹುಡುಕಾಡಿದ ಎರಡು ಫ್ರ್ಯಾಂಕ್ ಸಿಕ್ಕಿತು. ಸರಿ ಪೇಪರ್ ಮತ್ತು ಒಂದು ತುಂಡು ಇದ್ದಿಲು ಕೊಳ್ಳಲು ಸಾಕಾಗಬಹುದೆಂದು

ಭಾವಿಸಿ ಹನ್ನೆರಡು ಕಿಲೋಮೀಟರ್ ದೂರದ ಮಾನ್ಸ್ ಕಡೆ ಹೆಜ್ಜೆ ಹಾಕಿದ. ಹೋಗುತ್ತಿದ್ದಾಗ ವಾಸ್ಮೆಯ ಕಾರ್ಮಿಕರ ಹೆಂಗಸರು ತಮ್ಮ ಗುಡಿಸಲ ಬಾಗಿಲುಗಳ ಮುಂದೆ ನಿಂತಿರುವುದನ್ನು ನೋಡಿದ. ಪರಸ್ಪರ ನಮಸ್ಕಾರಗಳಾದವು. ಮಾನ್ಸ್ ಹಾದಿಯಲ್ಲಿನ ಹುಲ್ಲುಗಾವಲುಗಳ ಬಳಿ ಇದ್ದ ಬೇಕರಿಯ ಹಿಂದೆ ಪುಟ್ಟ ಹುಡುಗಿಯೊಬ್ಬಳು ನಿಂತಿರುವುದನ್ನು ಗಮನಿಸಿದ. ಆ ಹುಡುಗಿಯನ್ನು ಹತ್ತಿರದಿಂದ ನೋಡುವ ಉದ್ದೇಶದಿಂದ ಬೇಕರಿಯತ್ತ ನಡೆದ. ಒಂದೆರಡು ಸೆಂಟೀಮ್‌ಗಳನ್ನು ಕೊಟ್ಟು ಬನ್ ಕೊಂಡುಕೊಂಡ.

ಹುಲ್ಲುಗಾವಲುಗಳು ಮತ್ತು ಕೂಸ್‌ಮೇಸ್‌ಗಳ ಮಧ್ಯೆ ಇದ್ದ ಹೊಲ, ಗದ್ದೆಗಳು ಮಳೆಯಿಂದಾಗಿ ಹಸುರಾಗಿದ್ದವು. ಹಸಿರು ಕ್ರೇಯಾನ್‌ಗಳನ್ನು ಕೊಳ್ಳಲು ಸಾಧ್ಯವಾದಾಗ, ಇಲ್ಲಿಗೆ ಬಂದು ಇವುಗಳ ಚಿತ್ರ ಬಿಡಿಸಬೇಕೆಂದು ಕೊಂಡ. ಮಾನ್ಸ್‌ನಲ್ಲಿ, ಹಳದಿ ಪೇಪರ್, ಇದ್ದಿಲು, ದಪ್ಪ ಸೀಸದ ಪೆನ್ಸಿಲ್‌ಗಳನ್ನು ಕೊಂಡುಕೊಂಡ. ಒಂದು ಅಂಗಡಿಯ ಮುಂಭಾಗದ ಡಬ್ಬವೊಂದರಲ್ಲಿ ಹಳೆಯ ಪ್ರಿಂಟ್‌ಗಳು ಇದ್ದವು. ಅವನಿಗೆ ಒಂದನ್ನೂ ಕೊಳ್ಳಲು ಸಾಧ್ಯವಿಲ್ಲದಿದ್ದರೂ ಅವುಗಳನ್ನೇ ತದೇಕ ದೃಷ್ಟಿಯಿಂದ ನೋಡಿದ. ಅಂಗಡಿಯ ಮಾಲಿಕ ಒಂದಾದ ಮೇಲೊಂದು ಪ್ರಿಂಟನ್ನು ಪರೀಕ್ಷಿಸುತ್ತಾ, ಒಂದು ಪ್ರಿಂಟ್ ಕುರಿತು, ಇಬ್ಬರೂ ಹಳೆಯ ಸ್ನೇಹಿತರೋ ಎಂಬಂತೆ ಚರ್ಚೆ ಮಾಡತೊಡಗಿದ.

ಎಷ್ಟೋ ಹೊತ್ತು ಪ್ರಿಂಟ್‌ಗಳನ್ನು ಪರೀಕ್ಷಿಸಿ ನೋಡಿದ ಮೇಲೆ, ವಿನ್ಸೆಂಟ್ ಮಾಲಿಕನಿಗೆ, "ಕ್ಷಮಿಸಿ ಒಂದನ್ನೂ ಕೊಳ್ಳಲು ನನ್ನ ಬಳಿ ಸಾಕಷ್ಟು ಹಣವಿಲ್ಲ." – ಎಂದು ಹೇಳಿ ಅಲ್ಲಿಂದ ಕಾಲ್ತೆಗೆದ. ಆದರೆ ಅದಕ್ಕೆ ಮುಂಚೆ ಅಂಗಡಿ ಮಾಲಿಕ, ಹಣವಿಲ್ಲದಿದ್ದರೂ ಮತ್ತೊಮ್ಮೆ ಭೇಟಿಯಾಗಲು ಆಹ್ವಾನಿಸಿದ.

ಹನ್ನೆರಡು ಕಿಲೋಮೀಟರ್ ದೂರವನ್ನು ನಿರಾಳವಾಗಿ ಕ್ರಮಿಸಿ ಮನೆ ಸೇರಿದ. ಸೂರ್ಯಾಸ್ತದ ಕೆಂಪು ಮಿಶ್ರಿತ ಹೊಂಬಣ್ಣ ಮೋಡಗಳ ಅಂಚನ್ನು ಹೊಳೆಸಿತ್ತು. ಗುಡ್ಡ ಹತ್ತಿ ನೋಡಿದ. ಪುಟ್ಟಪುಟ್ಟ ಕಲ್ಲಿನ ಮನೆಗಳು ಸಹಜ, ಸ್ವಾಭಾವಿಕ ಚಿತ್ರಗಳಂತೆ ತೋರಿದವು. ಕೆಳಗೆ ಕಣಿವೆಯಲ್ಲಿನ ಹಸಿರು ಮತ್ತು ಪ್ರಶಾಂತತೆ ಅವನನ್ನು ಆಕರ್ಷಿಸಿದವು.

ಮರುದಿನ ಇದ್ದಿಲ ಗುಡ್ಡಗಳಿದ್ದ ಜಾಗಕ್ಕೆ ಹೋದ. ಹೆಂಗಸರು ಹುಡುಗಿಯರು, ಇಳಿಜಾರಿನಲ್ಲಿ ಬಗ್ಗಿ ಇದ್ದಿಲನ್ನು ಅಗೆಯುತ್ತಿದ್ದ ದೃಶ್ಯಗಳನ್ನು ಬಿಡಿಸಿದ. ಊಟವಾದ ಮೇಲೆ, ವಿನ್ಸೆಂಟ್, "ಮೇಡಂ ಡೆನಿಸ್, ದಯವಿಟ್ಟು ಮೇಜನ್ನು ಬಿಟ್ಟು ಏಳಬೇಡಿ. ನನಗೇನೋ ಮಾಡಬೇಕಿದೆ"– ಎಂದ.

ತನ್ನ ಕೋಣೆಯತ್ತ ಓಡಿ ಹೋಗಿ, ಡ್ರಾಯಿಂಗ್ ಪ್ಯಾಡ್ ಇದ್ದಿಲು ಎಲ್ಲವನ್ನೂ ಹಿಡಿದುಕೊಂಡು ಬಂದ. ನಿಮಿಷದಲ್ಲಿ ಕೆಲವು ಚಿತ್ರಗಳನ್ನು ಬಿಡಿಸಿದ. ಮೇಡಂ ಡೆನಿಸ್ ಅದನ್ನು ನೋಡಲು ಎದ್ದು ಬಂದಳು. ನೋಡಿದ್ದೇ ಹರ್ಷದ ಉದ್ಗಾರದೊಂದಿಗೆ ಹೇಳಿದಳು – "ಓ! ನೀನೊಬ್ಬ ಕಲಾವಿದ!"

ವಿನ್ಸೆಂಟ್ ಸಂಕೋಚದಿಂದ – "ಅಲ್ಲ. ಸುಮ್ಮನೆ ಹಾಗೇ ತಮಾಶೆಗೆ ಗೀಚುತ್ತೇನೆ ಅಷ್ಟೆ!"

"ಆದರೆ ಇದು ತುಂಬ ಚೆನ್ನಾಗಿದೆ! ನೋಡೋಕೆ ನನ್ನ ಹಾಗೇ ಇದೆ."

"ಹೆಚ್ಚು ಕಡಿಮೆ ಅಷ್ಟೆ! ಪೂರ್ತಿಯಾಗಿ ಅಲ್ಲ!"

ತಾನು ಏನು ಮಾಡುತ್ತಿದ್ದೇನೆ, ಅನ್ನುವ ವಿಷಯವನ್ನು ಮನೆಯವರಿಗೆ ಬರೆಯಲಿಲ್ಲ. ತಿಳಿಸಿದರೆ, 'ಓ ಮತ್ತೆ ಅವನು ಮೊದಲಿನ ಹುಚ್ಚಿಗೆ ಬಿದ್ದಿದ್ದಾನೆ. ಯಾವತ್ತು ಅವನಿಗೆ ಬುದ್ಧಿ ಬಂದು ಜೀವನದಲ್ಲಿ ನೆಲೆಗೊಳ್ಳುತ್ತಾನೋ!" – ಎನ್ನುವ ಮಾತುಗಳೇ ಬರುವ ಸಾಧ್ಯತೆ ಇತ್ತು!

ಚಿತ್ರ ಬರೆಯುವ ಹೊಸ ಚಟುವಟಿಕೆಯ ಜೊತೆಗೆ ಅವನಲ್ಲಿ ಒಂದು ವಿಶೇಷ ಗುಣವಿತ್ತು. ತನ್ನ ಸ್ಕೆಚಸ್ ಬಗ್ಗೆ ಯಾರ ಜೊತೆ ಮಾತಾಡುತ್ತಲೂ ಇರಲಿಲ್ಲ; ಯಾರಿಗೂ ತೋರಿಸುತ್ತಲೂ ಇರಲಿಲ್ಲ. ಯಾರೂ ಹೊಸಬರು, ಅಪರಿಚಿತರು ಅವುಗಳನ್ನು ನೋಡಬಾರದು ಎನ್ನುವುದಕ್ಕೆ, ಅವನಲ್ಲಿ ಒಂದು ರೀತಿಯ ಸಂಕೋಚ ಮನೆ ಮಾಡಿತ್ತು. ಅವನ ಸ್ಕೆಚಸ್‌ಗಳಲ್ಲಿ ಅಂತಹ ಪ್ರಬುದ್ಧತೆ, ನಾಜೂಕುಗಳು ಕಾಣಿಸದಿದ್ದರೂ ಒಂದು ರೀತಿಯ ಪಾವಿತ್ರ್ಯತೆ ಇತ್ತು. ಮತ್ತೊಂದು ಸಲ ಅವನು ಕಾರ್ಮಿಕರ ಮನೆಗಳನ್ನು ಪ್ರವೇಶಿಸಿದ. ಆದರೆ ಈ ಬಾರಿ ಅವನ ಕೈಯಲ್ಲಿ ಬೈಬಲ್‌ಗೆ ಬದಲಾಗಿ ಪೇಪರ್ ಮತ್ತು ಕ್ರೇಯಾನ್‌ಗಳಿದ್ದವು. ಗಣಿಕಾರ್ಮಿಕ ಕುಟುಂಬಗಳ ಸದಸ್ಯರಿಗೆ ಇವನನ್ನು ನೋಡಿ ಸಂತೋಷವೇ ಆಯಿತು. ಅವರ ದೈನಂದಿನ ಬದುಕಿಗೆ ಸಂಬಂಧಿಸಿದ ಅನೇಕ ಚಟುವಟಿಕೆಗಳ ದೃಶ್ಯಗಳನ್ನು ಮೂಡಿಸಿದ. ನೆಲದ ಮೇಲೆ ಆಟವಾಡುವ ಮಕ್ಕಳು, ಒಲೆಯ ಮೇಲೆ ಬಗ್ಗಿ ಕೆಲಸ ಮಾಡುತ್ತಿರುವ ಹೆಂಗಸರು, ದಿನದ ಕೆಲಸ ಮುಗಿದ ಮೇಲೆ ಕುಟುಂಬದವರೆಲ್ಲರೂ ಊಟ ಮಾಡುತ್ತಿರುವುದು – ಹೀಗೆ ಹತ್ತಾರು ಸನ್ನಿವೇಶಗಳ ಸ್ಕೆಚ್‌ಗಳನ್ನು ಸಿದ್ಧಪಡಿಸಿದ. ಮಾರ್ಕಾಸ್‌ನ ಗಣಿ ಪ್ರದೇಶ, ಎತ್ತರದ ಚಿಮ್ನಿಗಳು, ಇಳಿಜಾರಿನಲ್ಲಿನ ಪೈನ್ ಕಾಡುಗಳು, ಹುಲ್ಲುಗಾವಲುಗಳ ಸುತ್ತಮುತ್ತ, ಹೊಲ ಉಳುತ್ತಿರುವ ರೈತರು – ಅವನ ಸ್ಕೆಚ್‌ಗಳ ವಸ್ತುವಾಯಿತು. ಹೊರಗೆ ವಾತಾವರಣ ಸರಿಯಾಗಿಲ್ಲದಿದ್ದರೆ, ಕೋಣೆಯಲ್ಲಿ ಕುಳಿತು, ತನ್ನಲ್ಲಿದ್ದ ಚಿತ್ರಗಳನ್ನು ಕಾಪಿ ಮಾಡುತ್ತಿದ್ದ; ಇಲ್ಲವೇ ಹಿಂದಿನ ದಿನದ ಸ್ಕೆಚ್‌ಗಳನ್ನು ಸುಧಾರಿಸುತ್ತಿದ್ದ. ಮಲಗಿದ್ದಾಗ, ಅವನಿಗೆ ತನ್ನ ಸ್ಕೆಚ್‌ಗಳಲ್ಲಿ ಒಂದೆರಡಾದರೂ ಪರವಾಗಿಲ್ಲ ಎಂದು ತನ್ನಲ್ಲೇ ಸಮಾಧಾನ ತಂದುಕೊಂಡ. ಮರುದಿನ, ಎದ್ದಾಗ ತನ್ನ ಸ್ಕೆಚ್‌ಗಳ ಸೃಷ್ಟಿಯ ಸಾರ್ಥಕತೆಯ ಅಮಲಿನಲ್ಲಿ ಮಲಗಿದ್ದೇನೆ ಎನಿಸಿತು. ತನ್ನ ಸ್ಕೆಚ್‌ಗಳು ಸರಿಯಾಗಿಲ್ಲ; ಸರಿಯಾಗಿಲ್ಲ – ಎನಿಸಿ, ಯಾವುದೇ ಭಾವುಕತೆಗೆ ಒಳಗಾಗದೆ, ಅವುಗಳನ್ನೆಲ್ಲ ಬಿಸಾಡಿದ.

ಅವನೆದೆಯಾಳದ ನೋವನ್ನು ಮರೆತಿದ್ದ. ತನ್ನನ್ನು ದುಃಖ ಕಾಡುತ್ತಿಲ್ಲವೆನಿಸಿ, ಖುಷಿಪಟ್ಟ. ತಂದೆ, ಸೋದರರು ಕಳಿಸುತ್ತಿರುವ ಹಣದ ಮೇಲೆ ಬದುಕುತ್ತಿರುವುದು ನಾಚಿಕೆಗೇಡಿನ ಸಂಗತಿ ಎನ್ನುವುದು ತಿಳಿದಿತ್ತು. ಆದರೂ ಅದರ ಬಗ್ಗೆ ಯೋಚಿಸುವುದನ್ನು ಬಿಟ್ಟು 'ಸ್ಕೆಚ'ಗಳ ಸೃಷ್ಟಿಯಲ್ಲಿ ನಿರತನಾದ.

ಕೆಲವಾರಗಳ ನಂತರ ತನ್ನಲ್ಲಿದ್ದ ಎಲ್ಲ ಪ್ರಿಂಟ್‌ಗಳನ್ನೂ ನಕಲು ಮಾಡಿ ಮುಗಿಸಿದ. ಈಗ ಅವನಿಗೆ ಇನ್ನಷ್ಟು ಪ್ರಿಂಟ್‌ಗಳ ಅಗತ್ಯ ಇತ್ತು. ಒಂದು ವರ್ಷದಿಂದ ಥಿಯೋ ತನಗೆ ಪತ್ರ ಬರೆದಿರಲಿಲ್ಲವಾದರೂ ತನ್ನ ಅಹಂಕಾರವನ್ನು ಬದಿಗಿರಿಸಿ, ತಾನೇ ಪತ್ರ ಬರೆದ.

ಪ್ರೀತಿಯ ಥಿಯೋ,

ನೀನು ತಪ್ಪು ತಿಳಿಯದಿದ್ದರೆ, ಮಿಲ್ಲೆಟ್‌ನ 'ಲೆ ತ್ರವೋ ದೇ ಚ್ಯಾಂಪ್ಸ್' (Les Travux des champs) (lei bracket) ಇನ್ನೂ ನಿನ್ನಲ್ಲಿಯೇ ಇರಬೇಕೆಂದು ಭಾವಿಸುತ್ತೇನೆ.

ದಯವಿಟ್ಟು ಅದನ್ನು ಒಂದೆರಡು ದಿವಸಕ್ಕಾಗಿ ನನಗೆ ಕಳಿಸಲು ಸಾಧ್ಯವಾದರೆ ಪೋಸ್ಟ್ ಮೂಲಕ ಕಳಿಸಬಹುದು.

ಬೋಸ್‌ಬೂಮ್ ಮತ್ತು ಅಲ್ಲೆಬೆಯರ ಡ್ರಾಯಿಂಗ್ಸ್‌ನ್ನು ಪ್ರತಿಮಾಡುತ್ತಿದ್ದೇನೆ ಎಂದು ತಿಳಿಸಲು ನನಗೆ ಸಂತೋಷವಾಗಿದೆ. ಅವುಗಳನ್ನು ನೋಡಿದರೆ, ನಿನಗೂ ಪರವಾಗಿಲ್ಲ ಎನಿಸಬಹುದು.

ನಿನ್ನಿಂದ ಏನು ಸಾಧ್ಯವಾದರೆ ಅದನ್ನು ಕಳಿಸಿಕೊಡು. ಹೆದರಿಕೆ ಬೇಡ. ಈಗ ನಾನು ಮಾಡುತ್ತಿರುವ ಕೆಲಸವನ್ನೇ ಮುಂದುವರೆಸಿದರೆ, ಎಲ್ಲಾ ಸರಿಹೋಗಬಹುದು ಎನಿಸುತ್ತದೆ.

ನಾನು ಡ್ರಾಯಿಂಗ್ ಮಾಡ್ತಾ ಮಾಡ್ತಾ ಮಧ್ಯದಲ್ಲಿ, ನಿನಗೆ ಪತ್ರ ಬರೆಯುತ್ತಿದ್ದೇನೆ. ಇಲ್ಲಿಗೆ ನಿಲ್ಲಿಸುತ್ತೇನೆ. ನನ್ನ ಕೆಲಸವನ್ನು ಮುಂದುವರೆಸಲು ಹೊರಡುತ್ತೇನೆ. ಆದ್ದರಿಂದ ಗುಡ್‌ನೈಟ್! ಆದಷ್ಟು ಬೇಗ ಪ್ರಿಂಟ್‌ಗಳನ್ನು ಕಳಿಸಿಕೊಡು.

ಹಾರ್ದಿಕ ಹ್ಯಾಂಡ್‌ಶೇಕ್‌ನೊಂದಿಗೆ

ವಿನ್ಸೆಂಟ್

ಕ್ರಮೇಣ ಅವನಲ್ಲಿ, ತನ್ನ ಡ್ರಾಯಿಂಗ್ಸ್ ಕುರಿತು ಬೇರೆಯರೊಂದಿಗಾದರೂ ಚರ್ಚೆ ಮಾಡಬೇಕು ಅನ್ನೋ ಆಕಾಂಕ್ಷೆ ಮೊಳೆಯಿತು. ಅವನಿಗೆ ತನ್ನ ಡ್ರಾಯಿಂಗ್ಸ್ ಸರಿಯಾಗಿಲ್ಲ ಎನಿಸಿದರೂ ಅವು ತನಗೆ ತೀರಾ ಹತ್ತಿರ ಎನಿಸಿದ್ದರಿಂದ, ಬೇರೆಯವರ ಹಾಗೆ ನಿಷ್ಠುರವಾಗಿ ಮಾತಾಡಲು, ದೋಷಗಳನ್ನು ಗುರುತಿಸಿಕೊಳ್ಳಲು ಸಾಧ್ಯವಾಗುವುದಿಲ್ಲ ಎನಿಸುತ್ತಿತ್ತು. ಇನ್ನೊಬ್ಬ ಕಲಾವಿದನ ಮೂಲಕ, ವಿಮರ್ಶೆಯಾದಲ್ಲಿ, ತಪ್ಪುಗಳು ಎಲ್ಲಿ ಎಂಬುದು ತಿಳಿಯಲು ಸಾಧ್ಯ.

ಯಾರ ಬಳಿಗೆ ಹೋಗುವುದು? ಅವನ ಹೊಟ್ಟೆ ಹಸಿವಿಗಿಂತ, ಈ ಹಸಿವು ಪ್ರಬಲವಾಯಿತು. ಪ್ರಪಂಚದಲ್ಲಿ ತನ್ನಂತಹ ಕಲಾವಿದರು ಇರುವುದನ್ನು, ಅವರಿಗೆ ಎದುರಾಗುವ ಸಮಸ್ಯೆಗಳನ್ನು, ಅವುಗಳಿಗೆ ಪರಿಹಾರವನ್ನು ಹೇಗೆ ಕಂಡುಕೊಳ್ಳುತ್ತಾರೆ, ಚಿತ್ರಕಾರನಿಗೆ ಇರಬೇಕಾದ ಕೌಶಲ್ಯತೆಯ ಮೂಲಕ ತಮ್ಮ ಚಿತ್ರಗಳನ್ನು ಹೇಗೆ ಸಮರ್ಥಿಸಿಕೊಳ್ಳುತ್ತಾರೆ – ಎಂಬುದನ್ನು ತಿಳಿಯಬೇಕೆಂದು ತುಡಿಯುತ್ತಿದ್ದ. ಅವನಿಗೆ ತಿಳಿದಿರುವಂತೆ, ಪ್ರಪಂಚದಲ್ಲಿ, ಪೈಂಟಿಂಗ್‌ಗಾಗಿಯೇ ಬದುಕನ್ನು ಮುಡಿಪಾಗಿಟ್ಟ ಮಾರಿಸ್, ಮಾವ್ ಮೊದಲಾದವರಿದ್ದಾರೆ. ಆದರೆ ಬೋರಿನೇಜ್‌ನಲ್ಲಿ ಅಂಥಾದ್ದನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ.

ಒಂದು ಮಳೆಗಾಲದ ಮಧ್ಯಾಹ್ನ, ಚಿತ್ರವೊಂದರ ನಕಲು ಮಾಡುತ್ತಾ ಕುಳಿತಿದ್ದಾಗ ಥಟ್ಟನೆ, ರೆವರೆಂಡ್ ಪೀಟರ್‌ಸನ್‌ನ ಚಿತ್ರ ಕಣ್ಮುಂದೆ ಹೊಳೆಯಿತು. ಒಮ್ಮೆ ಬ್ರಸೆಲ್‌ನಲ್ಲಿ ಪೀಟರ್‌ಸನ್ ತನ್ನ ಸ್ಟುಡಿಯೋದಲ್ಲಿ, "ತಾನು ಚಿತ್ರ ಬರೆಯುವ ವಿಷಯವನ್ನು ನನ್ನ ಗೆಳೆಯರಿಗೆ ಹೇಳಬೇಡ" ಎಂದದ್ದು ನೆನಪಾಯಿತು. ಆತನೇ ಸರಿಯಾದ ವ್ಯಕ್ತಿ ಎನಿಸಿ, ಎದ್ದು ಗಣಿ ಕಾರ್ಮಿಕರ ಮೇಲಿನ ಸ್ಕೆಚಸ್‌ಗಳಲ್ಲಿ ಕೆಲವರನ್ನು ಆರಿಸಿಕೊಂಡು, ಬ್ರಸೆಲ್‌ನತ್ತ ಹೆಜ್ಜೆ ಹಾಕಿದ.

ಅವನ ಬಳಿ ಮೂರು ನಾಲ್ಕು ಫ್ರ್ಯಾಂಕ್‌ಗಳಿಗಿಂತ ಹೆಚ್ಚಾಗಿ ಇರಲಿಲ್ಲ. ಟ್ರೈನ್‌ನಲ್ಲಿ ಹೋಗುವುದು ಸಾಧ್ಯವಿರಲಿಲ್ಲ. ನಡೆದು ಹೋಗಲು ಹೆಚ್ಚು ಕಡಿಮೆ ಎಂಬತ್ತು ಕಿಲೋಮೀಟರ್ ದೂರ. ಆದರೂ ನಡಿಗೆಯಲ್ಲಿಯೇ ಕ್ರಮಿಸಲು ಮುಂದಾದ. ಆ ದಿನ ಮಧ್ಯಾಹ್ನ ಪ್ರಾರಂಭಿಸಿದ ಕಾಲುನಡಿಗೆ ಮರುದಿನವೂ ಮುಂದುವರೆಯಿತು. ಮೂವತ್ತು ಕಿಲೋಮೀಟರಷ್ಟು ಸಾಧ್ಯವಾಗಿತ್ತು. ಇನ್ನೂ ನಡೆಯಬಹುದಾಗಿದ್ದರೂ ಅವನ ಷೂಗಳು ಹರಿದು ಹೋಗಿದ್ದವು. ಅವನು ತೊಟ್ಟುಕೊಂಡಿದ್ದ ಕೋಟೆಲ್ಲ ಕೊಳೆಯಾಗಿ ಹೋಗಿತ್ತು. ಅವನು ಹೊರಟಾಗ, ಒಂದು ಬಾಚಣಿಗೆಯನ್ನಾಗಲಿ, ಅಂಗಿಯನ್ನಾಗಲಿ ಹೆಚ್ಚಿಗೆ ತೆಗೆದುಕೊಂಡಿರಲಿಲ್ಲ. ಏನಿದ್ದರೂ ಒಂದಿಷ್ಟು ತಣ್ಣೀರಿನಿಂದ ಮುಖ ತೊಳೆದು ಕೊಳ್ಳುವುದು ಮಾತ್ರ ಸಾಧ್ಯವಾಯಿತು.

ಷೂಗಳಲ್ಲಿ ಆಗಿದ್ದ ತೂತುಗಳನ್ನು ರಟ್ಟಿನ ಚೂರುಗಳಿಂದ ಮುಚ್ಚಿದ. ಆದರೂ ನಡೆಯುವಾಗ ಕಾಲು ಬೆರಳುಗಳಿಗೆ ಹಿಂಸೆಯಾಯಿತು. ಬಲವಂತದ ನಡಿಗೆಯಿಂದ ಅವನ ಪಾದಗಳಲ್ಲಿ ರಕ್ತಬಂತು. ದೊಡ್ಡ ದೊಡ್ಡ ಬೊಬ್ಬೆಗಳೆದಿದ್ದವು. ಬೊಬ್ಬೆಗಳು ಒಡೆದೂ ಮತ್ತೂ ರಣವಾಯಿತು. ಒಂದು ಕಡೆ ಪಾದಗಳ ನೋವು. ಮತ್ತೊಂದು ಕಡೆ ಬಾಯಾರಿಕೆ. ಆದರೂ ಅವನು ಸಂತೋಷದಿಂದಲೇ ಇದ್ದ.

'ತನ್ನಂತಹ ಇನ್ನೊಬ್ಬ ಆರ್ಟಿಸ್ಟ್‌ನ ಜೊತೆ ಮಾತಾಡಲು ಹೋಗುತ್ತಿದ್ದೇನೆ' ಎಂಬ ಆಲೋಚನೆಯೇ ಅವನ ಸಂತೋಷವನ್ನು ಕೆಡಿಸದೆ ಉಳಿಸಿತ್ತು!

ಜೇಬಿನಲ್ಲಿ ಒಂದು ಬಿಡಿಗಾಸೂ ಇರಲಿಲ್ಲ. ಮಧ್ಯಾಹ್ನ ಬ್ರಸೆಲ್ ತಲುಪಿದ. ಪೀಟರ್‌ಸನ್ ಇರುವ ಜಾಗ ಅವನಿಗೆ ಗೊತ್ತಿತ್ತು. ವೇಗವಾಗಿ ಹೆಜ್ಜೆ ಹಾಕಿದ. ಎದುರಿಗೆ ಬಂದವರನ್ನು ಲೆಕ್ಕಿಸದೆ ನುಗ್ಗಿ ನಡೆಯುತ್ತಿದ್ದ. ಅವರೆಲ್ಲ ಅವನನ್ನು ಅಚ್ಚರಿಯಿಂದ ನೋಡಿದರು. ವಿನ್ಸೆಂಟ್‌ಗೆ ಅವರ ಕಡೆ ಲಕ್ಷ್ಯವೇ ಇರಲಿಲ್ಲ. ಕುಂಟುತ್ತಲೇ ವೇಗದ ಹೆಜ್ಜೆ ಹಾಕಿ ನಡೆದ.

ವಿನ್ಸೆಂಟ್ ಬೆಲ್ ಒತ್ತಿದ. ಪೀಟರ್‌ಸನ್‌ನ ಮಗಳು ಬಂದು ಬಾಗಿಲು ತೆಗೆದಳಾದರೂ ವಿನ್ಸೆಂಟ್‌ನ ವೇಷ ನೋಡಿ ಚೀರಿದಳು. ಕೊಳಕು ಬಟ್ಟೆ, ಕೆದರಿದ ಕೂದಲು, ರಕ್ತದಿಂದ ತೊಯ್ದಪಾದಗಳು ಧೂಳು, ಕೆಸರುಗಳು ಮೆತ್ತಿದ ಅಂಗಿ, ಷರಾಯಿ! – ಅವಳನ್ನು ಭೀತಗೊಳಿಸಿದವು. ಪೀಟರ್‌ಸನ್ ಮಗಳ ಚೀರುವಿಕೆಯನ್ನಾಲಿಸಿ ಬಂದ. ಮೊದಲಿಗೆ ಅವನಿಗೂ ವಿನ್ಸೆಂಟ್‌ನ ಗುರುತು ಹತ್ತಲಿಲ್ಲ. ನಂತರ ಗುರುತಿಸಿ ಮುಗುಳ್ನಗೆ ಬೀರಿದ.

"ಓಹ್ ವಿನ್ಸೆಂಟ್! ಬಾ ಮಗು, ನಿನ್ನ ನೋಡಿ ತುಂಬಾ ಸಂತೋಷವಾಯಿತು. ಒಳಗೆ ಬಾ! ಸಂಕೋಚ ಬೇಡ!" ಎಂದು ಸ್ವಾಗತಿಸಿದ.

ವಿನ್ಸೆಂಟ್‌ನನ್ನು ತನ್ನ ಸ್ಟಡಿ ರೂಮಿಗೆ ಕರೆದೊಯ್ದು ಕುರ್ಚಿಯೊಂದನ್ನು ತೋರಿ ಕುಳಿತುಕೊಳ್ಳಲು ಹೇಳಿದ. ವಿನ್ಸೆಂಟ್ ಇಲ್ಲಿಯವರೆಗೆ ತನ್ನ ಇಚ್ಛಾಶಕ್ತಿಯಿಂದ ಎಂಬತ್ತು ಮೈಲಿಗಳನ್ನು ಕ್ರಮಿಸಿ ಬಂದಿದ್ದ. ಅದುಮಿಟ್ಟುಕೊಂಡಿದ್ದ ಇಲ್ಲಿಯವರೆಗಿನ ದಣಿವು, ಆಯಾಸ, ನೋವುಗಳು ಒಮ್ಮೆಲೇ ಸಿಡಿದೆದ್ದವು. ಉಸಿರಾಡುವುದೂ ಕಷ್ಟವೆನಿಸುವಂತೆ ಆಯಾಸಗೊಂಡಿದ್ದ. ಮೈಕೈ ನೋವು ಕಾಣಿಸಿಕೊಂಡಿತು.

"ಇಲ್ಲಿಯೇ ನನ್ನ ಗೆಳೆಯನೊಬ್ಬನ ರೂಮಿದೆ. ನಿನ್ನ ಪ್ರಯಾಣದ ಆಯಾಸ ತೀರಿಸಿಕೊಂಡು, ಸ್ವಲ್ಪ ಸ್ನಾನ ಗೀನ ಮಾಡಿಕೊಂಡು ಫ್ರೆಷ್ ಆಗುವ ಹಾಗಿದ್ದರೆ!?" – ಎಂದು ಹೇಳಿದ ಪೀಟರ್‌ಸನ್.

"ಹೌದು. ಇಷ್ಟೊಂದು ದಣಿವಾಗುತ್ತೇಂತ ತಿಳಿದಿರಲಿಲ್ಲ." ಪೀಟರ್‌ಸನ್ ವಿನ್ಸೆಂಟ್‌ನನ್ನು ತನ್ನ ಜೊತೆ ಕರೆದೊಯ್ದ. ಅಕ್ಕಪಕ್ಕದವರು ಗಮನಿಸುತ್ತಿದ್ದುದನ್ನು ಲೆಕ್ಕಿಸದೆ ಹೆಜ್ಜೆ ಹಾಕುತ್ತಿದ್ದರು.

"ಇವತ್ತು ರಾತ್ರಿ ನಿನಗೆ ಮಲಗಬೇಕೆನಿಸಬಹುದು.

ನಾಳೆ ಮಧ್ಯಾಹ್ನ ತಪ್ಪದೆ ಊಟಕ್ಕೆ ಬಂದು ಬಿಡು ನಿನ್ನ ಜೊತೆ ತುಂಬ ಮಾತಾಡುವುದಿದೆ."

ವಿನ್ಸೆಂಟ್ ಚೆನ್ನಾಗಿ ಉಜ್ಜಿ ಮೈಕೈ ತೊಳೆದುಕೊಂಡ. ಸಂಜೆ ಆರುಗಂಟೆಯಷ್ಟೇ ಆಗಿತ್ತಾದರೂ, ಹಸಿದ ಹೊಟ್ಟೆಯನ್ನಿರಿಸಿಕೊಂಡೇ ನಿದ್ದೆ ಮಾಡಿದ. ಬೆಳಿಗ್ಗೆ ಎದ್ದಾಗ ಆಗಲೇ ಹತ್ತು ಗಂಟೆ ಆಗಿತ್ತು. ಹೊಟ್ಟೆ ವಿಪರೀತ ಹಸಿಯುತ್ತಿತ್ತು. ಪೀಟರ್‌ಸನ್‌ನ ಗೆಳೆಯ, ರೇಜರ್, ಬಾಚಣಿಗೆ, ಕನ್ನಡಿ ಮುಂತಾದವುಗಳನ್ನು ನೀಡಿದ. ನೋಡಲು ಚೆನ್ನಾಗಿ ಕಾಣುವುದಕ್ಕೆ ಎಷ್ಟು ಬೇಕೋ ಅಷ್ಟು, ತನ್ನನ್ನು ತಯಾರಿಸಿಕೊಂಡ. ಷೂ ಒಂದನ್ನು ಬಿಟ್ಟರೆ ಎಲ್ಲವನ್ನೂ ಸರಿಪಡಿಸಿಕೊಳ್ಳುವುದು ಸಾಧ್ಯವಾಗಿತ್ತು.

ವಿನ್ಸೆಂಟ್ ಬಕಾಸುರನಂತೆ, ಊಟ ಮಾಡಿದ. ಪೀಟರ್‌ಸನ್ ಇತ್ತೀಚೆಗೆ ನಡೆದ ಸಂಗತಿಗಳ ಬಗ್ಗೆ ಮಾತಾಡುತ್ತಿದ್ದ. ಊಟವಾದ ಮೇಲೆ ಮತ್ತೆ 'ಸ್ಟಡಿ' ರೂಮಿಗೆ ಹೋಗಿ ಕುಳಿತರು.

"ಓಹ್, ಬಹಳ ಕೆಲಸ ಮಾಡಿದ ಹಾಗಿದೆ!..... ಇವೆಲ್ಲ ಹೊಸದಾಗಿ ಮಾಡಿದ ಸ್ಕೆಚಗಳಿರಬೇಕು!"

"ಹೌದು! ನನಗಂತೂ ಉಪದೇಶ ಮಾಡುವುದರಲ್ಲಿ ಸಿಗುವ ಸಂತೋಷಕ್ಕಿಂತ, ಪೈಂಟಿಂಗ್‌ನಲ್ಲಿ ನೂರುಪಟ್ಟು ಹೆಚ್ಚು ಸಂತೋಷ ಸಿಗುತ್ತೆ!"

ವಿನ್ಸೆಂಟ್ ನಗುತ್ತಾ "ನಿಮಗೆ ಇಷ್ಟವಾದ ಕೆಲಸ ಮಾಡುತ್ತಿರುವಾಗ, ಯಾವಾಗಲಾದರೂ ನಿಮ್ಮ ಆತ್ಮಸಾಕ್ಷಿಗೆ ಧಕ್ಕೆಯಾಗಿದೆಯೇ?"

ಪೀಟರ್‌ಸನ್ ನಕ್ಕು ಹೇಳಿದ – "ರೂಬೆನ್ಸ್‌ಗೆ ಸಂಬಂಧಿಸಿದ ಒಂದು ಘಟನೆ ಗೊತ್ತೇನು ನಿನಗೆ?.... ರೂಬೆನ್, ಸ್ಪೈನ್‌ನ ಅಂಬಾಸಡರ್ ಆಗಿ ಹಾಲೆಂಡ್‌ನಲ್ಲಿದ್ದಾಗ, ತನ್ನ ಬಿಡುವಿನ ಮಧ್ಯಾಹ್ನಗಳಲ್ಲಿ, ರಾಯಲ್ ಗಾರ್ಡನ್‌ನಲ್ಲಿ ಈಸಲ್ ಮುಂದೆ ನಿಂತು ಪೈಂಟಿಂಗ್ ಮಾಡುತ್ತಿದ್ದ. ಒಮ್ಮೆ ಸ್ಪ್ಯಾನಿಷ್ ಕೋರ್ಟ್ ಸದಸ್ಯನೊಬ್ಬ, ಓಹ್ ಇದೇನು! ಒಂದೊಂದು ಸಲ ರಾಜಕಾರಣಿಯೊಬ್ಬರು ಪೈಂಟಿಂಗ್ ಮಾಡಿ ಸಂತೋಷ ಪಡ್ತಿರೋ ಹಾಗಿದೆ! – ಎಂದು ತಮಾಶೆಯಾಗಿ ಹೇಳಿದ್ದಕ್ಕೆ, ರೂಬೆನ್ ಏನೆಂದ ಗೊತ್ತಾ! – ಇಲ್ಲ ಪೈಂಟರ್ ಆಗಿರುವವನು ಒಂದೊಂದು ಸಲ ರಾಜಕೀಯದಲ್ಲಿ ಸಂತೋಷ ಕಾಣ್ತಾನೆ!" ಎಂದ.

ಇಬ್ಬರಿಗೂ ಅರ್ಥವಾಗಿ ನಕ್ಕರು. ವಿನ್ಸೆಂಟ್ ಜೇಬಿನಿಂದ ಒಂದಷ್ಟು ಸ್ಕೆಚ್‌ಗಳ ಕಟ್ಟು ತೆಗೆದ. ಇತ್ತೀಚೆಗೆ ಸಣ್ಣ ಪುಟ್ಟ ಸ್ಕೆಚಸ್ ಮಾಡ್ತಿದ್ದೀನಿ. ..... ನಿಮಗೆ ತೋರಿಸೋದಕ್ಕೆ ಒಂದು ಮೂರು ಸ್ಕೆಚಸ್ ತಂದಿದ್ದೀನಿ. ಅವು ಹೇಗಿದೇಂತ ತಿಳಿಸೋದಕ್ಕೆ ಅಭ್ಯಂತರ ಇಲ್ಲ ಅಂತ ಕಾಣುತ್ತೆ!"

ಈಗ ತಾನೇ ಕೆಲಸ ಶುರುಮಾಡಿರುವಂತಹವರ ಬಗ್ಗೆ ಟೀಕೆ ಮಾಡೋದು, ವಿಮರ್ಶೆ ಮಾಡೋದು ಅಷ್ಟೊಂದು ಸರಿ ಹೋಗೋದಿಲ್ಲ ಎಂದುಕೊಂಡ ಪೀಟರ್‌ಸನ್ ವಿನ್ಸೆಂಟ್‌ನ ಮೂರೂ ಸ್ಕೆಚ್‌ಗಳನ್ನು ಈಸಲ್ ಮೇಲೆ ಇರಿಸಿದ. ಅದರಿಂದ ಸ್ವಲ್ಪ ದೂರನಿಂತು ಅವುಗಳನ್ನು ಗಮನಿಸತೊಡಗಿದ. ವಿನ್ಸೆಂಟ್ ಪೀಟರ್‌ಸನ್‌ನ ಕಣ್ಣುಗಳಿಂದ ತಾನೂ ನೋಡಿದ. ಅವನಿಗೆ ಅವು ತೀರ (ಅಮೆಚೂರು ಅಥವಾ) ಅಪ್ರಬುದ್ಧವೆನಿಸಿದವು."

"ಮೊದಲ ಸಲಕ್ಕೇ ನನಗೆ ಅನಿಸಿದ್ದು, ನೀನು ಮಾಡಲ್‌ಗಳಿಗೆ ತೀರ ಹತ್ತಿರವಿದ್ದೆ ಅಂತ! ಹೌದಲ್ಲ!"

"ಹೌದು, ಹಾಗೆ ಇರಬೇಕಾಯ್ತು. ನನ್ನ ಸ್ಕೆಚ್‌ಗಳಲ್ಲಿ ಹೆಚ್ಚು ಕಡಿಮೆ ಗಣಿ ಕಾರ್ಮಿಕರ ಇಕ್ಕಟ್ಟಾದ ಗುಡಿಸಲುಗಳಲ್ಲಿ ಮಾಡಬೇಕಾಗಿ ಬಂತು."

"ಓಹ್! ಅದಕ್ಕೇ ಇವುಗಳಲ್ಲಿ ನಿನ್ನ ಗ್ರಹಿಕೆಯ ಸಾಮರ್ಥ್ಯದಲ್ಲಿ ಕೊರತೆ ಕಾಣುತ್ತಿದೆ. ನಿನ್ನ ಸ್ಕೆಚ್‌ಗೆ ಬೇಕಾದ ವ್ಯಕ್ತಿಗಳನ್ನು ಸ್ವಲ್ಪ ದೂರದಲ್ಲಿರಿಸಿ ಗ್ರಹಿಸುವುದಕ್ಕೆ ಸಾಧ್ಯವಿಲ್ಲವೇನು? ವಸ್ತು ಮತ್ತು ಕಲಾವಿದರ ನಡುವೆ ಸ್ವಲ್ಪ ಅಂತರವಿದ್ದರೆ ವಸ್ತುಗಳನ್ನು, ವ್ಯಕ್ತಿಗಳನ್ನು ಸರಿಯಾದ ನೋಟದೊಂದಿಗೆ ಹಿಡಿದಿಡೋಕೆ ಖಂಡಿತ ಅನುಕೂಲ ಆಗುತ್ತೆ. ಅಂತ ನನಗೆ ಅನಿಸುತ್ತೆ!"

"ಸರಿ ಹಾಗಾದರೆ ಸ್ವಲ್ಪ ಅನುಕೂಲಸ್ಥ ಗಣಿ ಕಾರ್ಮಿಕರ ಕೆಲವು ವಿಶಾಲವಾದ ಕ್ಯಾಬಿನ್‌ಗಳಿವೆ. ಅವುಗಳಲ್ಲಿ ಒಂದನ್ನು ಬಾಡಿಗೆಗೆ ಪಡೆದು ಸ್ಟುಡಿಯೋ ಮಾಡಿಕೊಳ್ತೇನೆ."

"ಬಹುಶಃ, ಇದು ತುಂಬ ಒಳ್ಳೆ ವಿಚಾರವೇ!" ಎಂದು ಹೇಳಿ ಸ್ವಲ್ಪ ಹೊತ್ತು ಮೌನವಾಗಿದ್ದು ಮತ್ತೆ ಮಾತು ಮುಂದುವರೆಸಿದ. "ಡ್ರಾಯಿಂಗ್ ಬಗ್ಗೆ ಏನಾದರೂ ಓದಿಕೊಂಡಿದ್ದೀಯ? ಮುಖಗಳನ್ನು ಚೌಕಾಕಾರದ ಕಾಗದದಿಂದ ಮುಚ್ಚುವೆಯಾ? ಆಕಾರಗಳ ಅಳತೆಯನ್ನು ತೆಗೆದುಕೊಳ್ಳುತ್ತೀಯಾ?"

ವಿನ್ಸೆಂಟ್ ನಾಚಿಕೆಯಾಯಿತು. ಸಂಕೋಚದಿಂದಲೇ ಹೇಳಿದ. – "ಅದನ್ನೆಲ್ಲ ಮಾಡೋಕೆ ನನಗೆ ಗೊತ್ತಿಲ್ಲ ನಾನೆಂದೂ ಇಂಥಾದ್ದರ ಬಗ್ಗೆ ಪಾಠ ಹೇಳಿಸಿಕೊಂಡಿಲ್ಲ. ನೀವು ಸುಮ್ಮನೆ ಹಾಗೇ ಡ್ರಾಯಿಂಗ್ ಮಾಡ್ತಿದ್ದೀರಿ ಅಂದುಕೊಂಡಿದ್ದೆ."

"ಹಾಗೇನಿಲ್ಲ. ಆದರೆ ಪ್ರಾಥಮಿಕ ಪಾಠಗಳು ಬೇಕಾಗುತ್ತೆ, ಮೊದಲಿಗೆ. ಆಮೇಲೆ ನಿಧಾನವಾಗಿ ಎಲ್ಲ ತನಗೆ ತಾನೇ ಬರುತ್ತೆ. ಈ ಹೆಂಗಸಿನ ಸ್ಕೆಚ್‌ನಲ್ಲಿ ಏನು ದೋಷ ಇದೆ ಅನ್ನೋದನ್ನು ಈಗ ನಿನಗೆ ತೋರಿಸ್ತೀನಿ, ನೋಡು."

ಪೀಟರ್‌ಸನ್ ಒಂದು ರೂಲರ್ ತೆಗೆದುಕೊಂಡು ಆಕೃತಿಯ ತಲೆ ಮತ್ತು ಇಡೀ ದೇಹದ ಸುತ್ತ ಚೌಕಗಳನ್ನು ಬರೆದು, ಆಕಾರದ ಅಳತೆ ಪ್ರಮಾಣಗಳಲ್ಲಿ ಇರುವ ಅಸಮಾನತೆಯನ್ನು ತೋರಿಸಿ, ನಂತರ ತಾನೇ ಆ ಆಕೃತಿಯನ್ನು ಬರೆದ. ಬರೆಯುತ್ತಲೇ ವಿವರಿಸುತ್ತಾ ಹೋದ. ಸುಮಾರು ಒಂದು ಗಂಟೆಯ ನಂತರ, ಡ್ರಾಯಿಂಗ್‌ನಿಂದ ದೂರ ಸರಿದು "ಈಗ ನೋಡು ನಮ್ಮ ಫಿಗರ್ ಸರಿಯಾದ ರೀತಿಯಲ್ಲಿ ಮೂಡಿಬಂದಿದೆ." ವಿನ್ಸೆಂಟ್, ಪೀಟರ್‌ಸನ್ ನಿಂತಿದ್ದ ಜಾಗಕ್ಕೆ ಹೋಗಿ ಪೇಪರನ್ನು ಗಮನಿಸಿದ. ಆ ಹೆಂಗಸಿನ ಆಕಾರ ಈಗ ತುಂಬಾ ಚೆನ್ನಾಗಿ ಸಪ್ರಮಾಣವಾಗಿ ಮೂಡಿ ಬಂದಿತ್ತು. ಆದರೆ ಈಗ ಆ ಹೆಂಗಸು ಗಣಿಕಾರ್ಮಿಕನ ಹೆಂಡತಿಯಾಗಿ ತೋರಲಿಲ್ಲ. ಇದ್ದಿಲರಾಶಿಯಿಂದ ಇದ್ದಿಲನ್ನು ಆರಿಸುತ್ತಿರುವ ಬೊರೈನ್‌ನ ಹೆಣ್ಣಾಗಿ ಕಾಣಲಿಲ್ಲ; ಬದಲಾಗಿ ಪ್ರಪಂಚದ ಯಾವುದೇ ಹೆಣ್ಣು ಬಗ್ಗಿ ಆರಿಸುತ್ತಿರುವಂತಿತ್ತು. ವಿನ್ಸೆಂಟ್ ಮಾತಿಲ್ಲದೆ ಈಸಲ್ ಬಳಿಗೆ ಹೋಗಿ, ಅಂಡಾಕಾರದ ಒಲೆಯ ಕಡೆ ಬಗ್ಗಿದ್ದ ಹೆಂಗಸಿನ ಸ್ಕೆಚ್ಚನ್ನು, ಅದರ ಪಕ್ಕದಲ್ಲಿ ಇರಿಸಿದ. ಪೀಟರ್‌ಸನ್ ಬಳಿ ನಡೆದು ನಿಂತ.

"ಹಾಂ! ಈಗ ನನಗೆ ಗೊತ್ತಾಯಿತು. ನಾನು ಅಳತೆ ಪ್ರಮಾಣಗಳಲ್ಲಿ ಪರ್‌ಫೆಕ್ಟ್ ಆದ ಆಕೃತಿಯನ್ನು ಕೊಟ್ಟೆ, ಆದರೆ ಅದರ 'ಕ್ಯಾರಕ್ಟರ್'ಅನ್ನು ಕಿತ್ತುಕೊಂಡೆ."

ಸುಮಾರು ಹೊತ್ತು ಅವರಿಬ್ಬರೂ ಅಲ್ಲಿಯೇ ನಿಂತಿದ್ದರು. ಈಸಲ್ ಕಡೆ ಗಮನವಿಟ್ಟು ನೋಡುತ್ತಿದ್ದರು. ಪೀಟರ್‌ಸನ್ ಅಪ್ರಯತ್ನಪೂರ್ವಕವಾಗಿ ಹೇಳಿದ. – ವಿನ್ಸೆಂಟ್, ಒಲೆಯ ಕಡೆ ಬಗ್ಗಿರುವ ಹೆಂಗಸಿನ ಸ್ಕೆಚ್ ಪರವಾಗಿಲ್ಲ. ಅಷ್ಟೇನೂ ಕೆಟ್ಟದಾಗಿಲ್ಲ. ಆದರೆ ಪೂರ್ತಿ ಡ್ರಾಯಿಂಗ್ ಮಾತ್ರ ಭಯಂಕರವಾಗಿದೆ. ನಿನ್ನ ಲೆಕ್ಕಾಚಾರ ಎಲ್ಲ ತಪ್ಪಾಗಿದೆ. ಮುಖನೋಡೋಕೆ ಆಗೊಲ್ಲ. ಹೇಳೋದಾದರೆ ಅವಳಿಗೆ ಮುಖವೇ ಇಲ್ಲ. ಆದರೆ ಸ್ಕೆಚ್‌ನಲ್ಲಿ ಏನೋ ಇದೇಂತ ಅನ್ಸತ್ತೆ!..... ಏನದು ವಿನ್ಸೆಂಟ್?"

"ಅದೇನೂಂತ ನನಗೂ ಗೊತ್ತಿಲ್ಲ. ನಾನು ಹೇಗೆ ನೋಡಿದೆನೋ ಹಾಗೆ ಬರೆದಿದ್ದೀನಿ.

ಈ ಬಾರಿ ಪೀಟರ್‌ಸನ್ ಈಸಲ್ ಇದ್ದ ಕಡೆ ವೇಗವಾಗಿ ಹೆಜ್ಜೆ ಹಾಕಿದ. ತಾನು ತಿದ್ದಿ ಸುಧಾರಿಸಿ ಬರೆದಿದ್ದ ಸ್ಕೆಚ್ಚನ್ನು ಈಸಲ್‌ನಿಂದ ಕಿತ್ತು ಉಂಡೆ ಮಾಡಿ ಕಸದ ಬುಟ್ಟಿಗೆ ಎಸೆದ. "ನೀನು ತಪ್ಪಾಗಿ ತಿಳಿಯೊಲ್ಲ ಅಂದುಕೊಂಡಿದ್ದೀನಿ." – ಎಂದು ಕ್ಷಮೆ ಕೇಳುವ ದನಿಯಲ್ಲಿ ಹೇಳಿದ. ಎರಡನೇ ಹೆಂಗಸಿನ ಸ್ಕೆಚ್ಚನ್ನು ಅಲ್ಲಿರಿಸಿದ. ಮತ್ತೆ ವಿನ್ಸೆಂಟ್ ಜೊತೆ ಬಂದು ಕುಳಿತ. ಮಾತಾಡಬೇಕೂಂತ ಪ್ರಯತ್ನಿಸುತ್ತಲೇ ಇದ್ದ.

ಆದರೂ ಮಾತು ಹೊರ ಬರಲೇ ಇಲ್ಲ. ಕಡೆಗೆ ಹೇಳಿದ – "ನನಗೆ ಒಪ್ಪಿಕೊಳ್ಳೋದಕ್ಕೆ ಇಷ್ಟ ಇಲ್ಲ. ಆದರೂ, ಆ ಹೆಂಗಸು ನನಗೆ ಇಷ್ಟವಾಗಿದೆ ಅನ್ನೋದಂತೂ ಸತ್ಯ. ಮೊದಲು ನೋಡಿದಾಗ ಏನೋ ಒಂದು ಥರಾ ಅಸಹ್ಯವಾಗಿದೆ ಅನಿಸಿತಾದರೂ. ಅದರಲ್ಲಿ ಏನೋ ಇದೆ ಅಂತ ಅನ್ನಿಸುತ್ತಿದೆ."

"ಒಪ್ಪಿಕೊಳ್ಳೋಕೆ ಯಾಕೆ ಇಷ್ಟ ಆಗೊಲ್ಲ?" – ವಿನ್ಸೆಂಟ್ ಕೇಳಿದ.

"ಯಾಕೇಂದ್ರೆ ನಾನು ಅದನ್ನು ಇಷ್ಟ ಪಡಬಾರದು. ನೀನು ಬರೆದಿರೋದೊಂದೂ ಸರಿ ಇಲ್ಲ. ಯಾವುದೇ ಪ್ರಾಥಮಿಕ ಕಲಾ ಶಾಲೆಯಲ್ಲಿ ಇಂಥಾದ್ದನ್ನು ನೋಡಿದರೆ ಹರಿದು ಬಿಸಾಕಿ ಮತ್ತೆ ಮೊದಲಿಂದ ಶುರು ಮಾಡಬೇಕಾಗುತ್ತೆ. ಆದರೆ ನಿನ್ನ ಸ್ಕೆಚ್‌ನಲ್ಲಿ ಇರೋ ಹೆಂಗಸನ್ನು ಎಲ್ಲೋ ನೋಡಿದ್ದೀನಿ ಅಂತ ನನಗೆ ಅನ್ಸತ್ತೆ. ಅಲ್ಲದೆ ಅವಳಲ್ಲಿ ಇರೋ ಏನೋ ವಿಶೇಷತೆ ನನ್ನನ್ನು ತಟ್ಟಿದೆ."

"ಬಹುಶಃ ಬೋರಿನೇಜ್‌ನಲ್ಲಿ ಆಕೆಯನ್ನು ನೋಡಿರಬಹುದು." – ಯಾವುದೇ ಕೃತಕತೆ ಇಲ್ಲದೆ ನುಡಿದ. ಪೀಟರ್‌ಸನ್, ಅವನೇನಾದರೂ ಚಾಲಾಕಿತನ ತೋರಿಸುತ್ತಿರುವನೇನೋ ಎಂದು ಅವನ ಕಡೆ ನೋಡಿ ಹೇಳಿದ–

"ಬಹುಶಃ ನೀನು ಹೇಳಿದ್ದು ನಿಜ ಇರಬಹುದು. ಅವಳಿಗೆ ಮುಖ ಇಲ್ಲ. ಅವಳು ಪ್ರತ್ಯೇಕತೆ ಉಳ್ಳವಳಲ್ಲ. ಯಾವ ಗಣಿ ಕಾರ್ಮಿಕನ ಹೆಂಡತಿಯಾಗಿರಬಹುದು. ನೀನು ಇದರಲ್ಲಿ ಹಿಡಿದಿರುವುದು, ಕಾರ್ಮಿಕನ ಹೆಂಡತಿಯನ್ನಲ್ಲ ಅವಳ ಸತ್ವವನ್ನು; ಚೈತನ್ಯವನ್ನು! ಅದಕ್ಕೇ ವಿನ್ಸೆಂಟ್, ನಿನ್ನ ಸ್ಕೆಚ್ ಅದರ ಸತ್ವದಿಂದಾಗಿ ಸಪ್ರಮಾಣವೂ ಶಾಸ್ತ್ರಬದ್ಧವೂ ಆದ ಡ್ರಾಯಿಂಗ್‌ಗಿಂತ ಸಾವಿರ ಪಾಲು ಮಹತ್ವದ್ದು. ನಿನ್ನ ಆ ಹೆಂಗಸು ನನಗೆ ತುಂಬ ಹಿಡಿಸಿತು. ಅವಳು ನೇರವಾಗಿ ನನ್ನ ಜೊತೆ ಮಾತನಾಡುತ್ತಾಳೆ."

ವಿನ್ಸೆಂಟ್ ನಡುಗಿದ. ಮಾತಾಡಲು ಹೆದರಿಕೆಯಾಯಿತು. ಪೀಟರ್‌ಸನ್ ಅನುಭವವುಳ್ಳ ಕಲಾವಿದ; ವೃತ್ತಿಪರ. ಅವನು ನಿಜವಾಗಿಯೂ ಈ ಡ್ರಾಯಿಂಗ್ ಅನ್ನು ಕೇಳಿದರೆ!"

"ವಿನ್ಸೆಂಟ್, ನೀನು ಅದನ್ನು ನನಗೆ ಕೊಡ್ತೀಯಾ? ಅವಳನ್ನು ನನ್ನ ಗೋಡೆಯ ಮೇಲೆ ಅಲಂಕರಿಸಬೇಕೆಂದಿದ್ದೇನೆ. ಅವಳೂ ನಾನೂ ಬಹಳ ಒಳ್ಳೆಯ ಸ್ನೇಹಿತರಾಗಬಲ್ಲೆವು ಎನಿಸುತ್ತೆ."

–೨೦–

ಇನ್ನು ಪೆತಿತ್ ವಾಸ್ಮೆಗೆ ಹಿಂತಿರುಗುವುದು ಒಳ್ಳೆಯದು ಎನಿಸಿತು ವಿನ್ಸೆಂಟ್‌ಗೆ. ಪೀಟರ್‌ಸನ್, ತನ್ನ ಹಳೆಯ ಷೂಗಳಲ್ಲಿ ಒಂದು ಜೊತೆ ಷೂ ನೀಡಿದ. ವಿನ್ಸೆಂಟ್‌ನ ಷೂಗಳು ಪೂರ್ತಿ ಹರಿದು ಹೋಗಿದ್ದವು. ಪೀಟರ್‌ಸನ್ ಷೂ ಜೊತೆ ರೈಲ್ವೆ ಟಿಕೇಟಿಗೆ ಹಣವನ್ನೂ ಕೊಟ್ಟ. ಕೊಡುವುದರಲ್ಲಿ ತೆಗೆದುಕೊಳ್ಳುವುದರಲ್ಲಿ ಶುದ್ಧ ಸ್ನೇಹವಿತ್ತೇ ಹೊರತು ಬೇರೇನೂ ಅಲ್ಲ.

ರೈಲಲ್ಲಿ ಕುಳಿತಿದ್ದಾಗ, ವಿನ್ಸೆಂಟ್‌ಗೆ ಎರಡು ವಿಷಯಗಳು ಸ್ಪಷ್ಟವಾದವು. ಪೀಟರ್‌ಸನ್ ತನ್ನನ್ನು ಧರ್ಮಬೋಧಕನಾಗಿ ಸೋತವನೆಂದು ಹೇಳಲಿಲ್ಲ; ಪ್ರಸ್ತಾಪವನ್ನೂ ಮಾಡಲಿಲ್ಲ. ತನ್ನನ್ನು ಒಬ್ಬ ಸಹಕಲಾವಿದನಾಗಿ ಗುರುತಿಸಿ ಸ್ನೇಹ ತೋರಿದ. ತನಗೆ ಬೇಕು - ಎನ್ನುವಷ್ಟರ ಮಟ್ಟಿಗೆ ಅದನ್ನು ಇಷ್ಟಪಟ್ಟಿದ್ದ. ಅದೇ ಒಂದು ಪರೀಕ್ಷೆ.

"ನನಗೆ ನನ್ನ ಕೆಲಸಕ್ಕೆ ಪ್ರೋತ್ಸಾಹ ಸಿಕ್ಕಾಗಿದೆ.... ಆತನಿಗೆ ಇಷ್ಟವಾದ ಮೇಲೆ, ಎಲ್ಲರಿಗೂ ಇಷ್ಟವಾಗುತ್ತೆ" - ಎಂದು ತನ್ನಲ್ಲೇ ಹೇಳಿಕೊಂಡ.

ಡೆನಿಸ್‌ರ ಮನೆ ತಲುಪಿದಾಗ ಥಿಯೋ ಕಳಿಸಿದ. ಪ್ರಿಂಟ್‌ಗಳು Les Travaux des champs ಪುಸ್ತಕ ಬಂದಿದ್ದವಾದರೂ ಅವುಗಳ ಜೊತೆಯಲ್ಲಿ ಅವನ ಪತ್ರ ಇರಲಿಲ್ಲ. ಪೀಟರ್‌ಸನ್ ಭೇಟಿಯಿಂದ ಮನಸ್ಸು ಸಾಕಷ್ಟು ಉಲ್ಲಸಿತವಾಗಿತ್ತು. ಫಾದರ್ ಮಿಲ್ಲೆಟ್‌ನನ್ನು ಓದಲು ಕುಳಿತ. ಥಿಯೋ ಒಂದಷ್ಟು ಸ್ಕೆಚ್ ಪೇಪರ್‍ಸ್ ಕಳಿಸಿದ್ದ. ಕೆಲವೇ ದಿನಗಳಲ್ಲಿ, 'Les Travaux' ಮೊದಲ ಸಂಪುಟದ ಹತ್ತು ಪುಟಗಳನ್ನು ಕಾಪಿ ಮಾಡಿದ. ನಂತರ 'ನಗ್ನ' ಚಿತ್ರಗಳು ಬೇಕೆನಿಸಿದವು. ಆದರೆ ಯಾರೂ ಇದಕ್ಕೆ ರೂಪದರ್ಶಿಯಾಗುವುದು ಸಾಧ್ಯವಿಲ್ಲವೆನಿಸಿ, ಗೂಪಿಲ್ ಗ್ಯಾಲರಿಯಲ್ಲಿನ ತನ್ನ ಹಳೆಯ ಗೆಳೆಯನಿಗೆ ಪತ್ರ ಬರೆದು, ಸಾಧ್ಯವಾದಲ್ಲಿ, ಕೆಲವು ದಿನಗಳಿಗಾಗಿ ಬಾರ್ಗ್‌ನ 'Exerises au Fusain' ಕೃತಿಯನ್ನು ಕಡತವಾಗಿ ಕೊಡುವಂತೆ ಕೇಳಿದ್ದ.

ಅಷ್ಟರಲ್ಲಿ, ಪೀಟರ್‌ಸನ್‌ನ ಸೂಚನೆಯಂತೆ, ಪೆತಿತ್ ವಾಸ್ಮೆಯಲ್ಲಿ, ತಿಂಗಳಿಗೆ ಒಂಬತ್ತು ಫ್ರ್ಯಾಂಕ್ ಬಾಡಿಗೆಗೆ ಸ್ವಲ್ಪ ವಿಶಾಲವಾಗಿದ್ದ, ಗಣಿಕಾರ್ಮಿಕನ ಮನೆಯೊಂದನ್ನು ಪಡೆದ. ಬಾಡಿಗೆಯ ಈ ಮನೆ ತುಂಬಾ ಚೆನ್ನಾಗಿತ್ತು. ಸ್ವಲ್ಪ ತರಿ ತರಿಯಾದ ಮರದ ಹಲಗೆಯ ನೆಲವಿತ್ತು. ಎರಡು ದೊಡ್ಡ ಕಿಟಕಿಗಳು, ಬೆಳಕು ಚೆನ್ನಾಗಿ ಬರುತ್ತಿತ್ತು; ಒಂದು ಹಾಸಿಗೆ, ಒಂದು ಸ್ಟೋವ್ ಕೂಡಾ ಇತ್ತು. ಜಾಗ ಸಾಕಷ್ಟು ವಿಶಾಲವಾಗಿದ್ದು, ಮಾಡೆಲ್ ಒಂದು ಕಡೆ, ಈಸಲ್ ಒಂದು ಕಡೆ ಇರಿಸಲು ಅವಕಾಶವಿತ್ತು. ಜೊತೆಗೆ ಮಾಡೆಲ್ ಇದ್ದ ಜಾಗದಿಂದ, ಸರಿಯಾದ ನೋಟ ಪಡೆಯುವಷ್ಟು ದೂರದಲ್ಲಿರಲೂ ಸಾಧ್ಯವಾಗುತ್ತಿತ್ತು. ವಿನ್ಸೆಂಟ್‌ನಿಂದ, ಭೀಕರ ಛಳಿಗಾಲದ ಸಮಯದಲ್ಲಿ ಒಂದಲ್ಲ ಒಂದು ರೀತಿಯಲ್ಲಿ, ಪ್ರತಿಯೊಂದು ಕಾರ್ಮಿಕ ಕುಟುಂಬವೂ ಸಹಾಯವನ್ನು ಪಡೆದಿದ್ದ ಕಾರಣ, ಮಾಡೆಲ್ ಆಗಿ ಅವನ ಬಳಿಗೆ ಬರಲು ಹಿಂದೇಟು ಹಾಕುವಂತಿರಲಿಲ್ಲ. ಅವನು ಕೇಳಿದ್ದೇ ಸಾಕು ಕಾರ್ಮಿಕರು ಭಾನುವಾರಗಳಲ್ಲಿ ಹಿಂಡು ಹಿಂಡಾಗಿ ಬಂದು ಅವನು ಒಬ್ಬೊಬ್ಬರ ಸ್ಕೆಚ್ಚನ್ನೂ ಮಾಡಲು ಅವಕಾಶ ನೀಡಿದ್ದರು. ಅವರಿಗೆ ಅದೊಂದು ತಮಾಶೆಯಾಗಿ, ವಿಚಿತ್ರ ಅನುಭವವಾಗಿತ್ತು. ಕ್ಯಾಬಿನ್ ತುಂಬ ಜನ ತುಂಬಿಕೊಂಡು, ಅವನ ಬೆನ್ನ ಹಿಂದೆ ನಿಂತು ಅವನು ಮಾಡುತ್ತಿದ್ದುದನ್ನು ಕುತೂಹಲದಿಂದ ಬೆರಗಿನಿಂದ ನೋಡುತ್ತಿದ್ದರು.

ಹೇಗ್‌ನಿಂದ ಅವನು ಕೇಳಿದ್ದ "Exercises au Fusain" ಬಂದು ತಲುಪಿತು. ವಿನ್ಸೆಂಟ್ ಎರಡುವಾರ, ಬೆಳಗಿನಿಂದ ಸಂಜೆವರೆಗೆ, ಪಟ್ಟು ಬಿಡದೆ ಅವುಗಳನ್ನು ಪ್ರತಿ ಮಾಡುತ್ತಿದ್ದ. ಟರ್ಸ್‌ಟೀಗ್ ಕೂಡ "Cours de Dessin" ಕೃತಿಯನ್ನು ಬಾರ್ಗ್‌ನಿಂದ

ಕಳಿಸಿದ್ದ. ವಿನ್ಸೆಂಟ್ ತುಂಬಾ ಉತ್ಸಾಹದಿಂದ ಮತ್ತು ಗಂಭೀರವಾಗಿ ಇವುಗಳ ಅಧ್ಯಯನ ಮಾಡಿದ.

ಮೊದಲಿನ ಐದೂ ಅವನ ಸೋಲನ್ನು ನೆನಪಿಸುತ್ತಿದ್ದವು. ಸೋಲಿನ ಆ ನೆನಪುಗಳು ಈಗ ಪೂರ್ತಿಯಾಗಿ ಅಳಿಸಿ ಹೋದವು. ದೇವರ ಸೇವೆಯಲ್ಲಿ ಸಿಗಬಹುದಾದ ಸಂತೋಷ, ಸಂಭ್ರಮಗಳಿಗಿಂತ ಒಬ್ಬ ಕಲಾವಿದನಾಗಿ ರೂಪುಗೊಳ್ಳುತ್ತಿರುವುದರಲ್ಲಿ ಹೆಚ್ಚಿನ ಸಂತೋಷವನ್ನು ಅನುಭವಿಸಿದ. ಸೃಜನಶೀಲ ಕ್ರಿಯೆಯಲ್ಲಿ ಅವನಿಗೆ ನಿರಂತರ ತೃಪ್ತಿ ಸಿಗುತ್ತಿತ್ತು. ಹನ್ನೊಂದು ದಿನಗಳನ್ನು, ಮೇಡಂ ಡೆನಿಸ್ ನೀಡುತ್ತಿದ್ದ ಬ್ರೆಡ್ಡಿನ ಚೂರುಗಳ ಹೊರತಾಗಿ ಬೇರೇನನ್ನೂ ಕೊಳ್ಳಲು ಅವನ ಬಳಿ ಒಂದು ಸೆಂಟೀಮ್ ಕೂಡಾ ಇರಲಿಲ್ಲವಾದರೂ, ಕಾರ್ಯನಿರತನಾಗಿದ್ದ ಕಾರಣ ಈ ಸಮಸ್ಯೆ ಅವನನ್ನು ಕಾಡಲೇ ಇಲ್ಲ. ಅವನ ಚೈತನ್ಯ, ಉತ್ಸಾಹಗಳು ಅವನನ್ನು ತುಂಬ ತಣಿಸಿದ್ದವು.

ಬೆಳಗಿನ ಜಾವ ೨.೩೦ಕ್ಕೆ ಅವನು ಮಾರ್ಕಾಸ್‌ನ ಗೇಟಿನ ಬಳಿ ಹೋಗಿ ಕಾರ್ಮಿಕರ ದೊಡ್ಡ ದೊಡ್ಡ ಸ್ಕೆಚ್‌ಗಳನ್ನು ಮಾಡುತ್ತಿದ್ದ. ಗಂಡಸರು, ಹೆಂಗಸರು ಮುಳ್ಳಿನ ಪೊದೆಗಳ ನಡುವಿನ ಹಾದಿಯಲ್ಲಿ ಷ್ಯಾಫ್ಟ್ ಮೂಲಕ ಹೋಗುತ್ತಿದ್ದುದು ಅಸ್ಪಷ್ಟವಾಗಿ ಕಾಣಿಸುತ್ತಿತ್ತು. ಅವರ ಹಿನ್ನೆಲೆಗೆ ಗಣಿಗಳ ನಿರ್ಮಾಣಗಳು, ರಾಶಿ ರಾಶಿ ಕ್ಲಿಕರ್‌ಗಳು, ಇವುಗಳ ಬೆನ್ನಿಗೆ ಆಕಾಶ – ಇರುವ ಬೃಹತ್ ಚಿತ್ರಗಳನ್ನು ಬರೆದ. ಸ್ಕೆಚ್ ಪೂರ್ಣವಾದ ಮೇಲೆ, ಅದರ ಮತ್ತೊಂದು ಪ್ರತಿ ಮಾಡಿ, ಲೆಟರ್‌ನೊಂದಿಗೆ ಥಿಯೋಗೆ ಕಳಿಸಿಕೊಟ್ಟ.

ಇದೇ ರೀತಿ ಎರಡು ತಿಂಗಳು ಕಳೆದವು. ಬೆಳಗಿನ ಜಾವದಿಂದ ಸಂಜೆವರೆಗೆ ಡ್ರಾಯಿಂಗ್ ಮಾಡುತ್ತಲೇ ಇರುತ್ತಿದ್ದ. ಒಮ್ಮೊಮ್ಮೆ ಅವುಗಳ ಪ್ರತಿಗಳನ್ನೂ ಮಾಡುತ್ತಿದ್ದ. ಇದ್ದಕ್ಕಿದ್ದಂತೆ, ಮತ್ತೊಮ್ಮೆ ಅವನ ಮನಸ್ಸಿನಲ್ಲಿ ಇನ್ನೊಬ್ಬರು ಯಾರಾದರೂ ಕಲಾವಿದರ ಜೊತೆ ಮಾತಾಡಬೇಕೆನಿಸಿತು. ತಾನು ಮಾಡುತ್ತಿರುವುದರಲ್ಲಿ ಸಾಕಷ್ಟು ಪ್ರಗತಿ ಇದೆ ಎಂದು ಅನಿಸಿದರೂ, ಇನ್ನೊಬ್ಬ ಕಲಾವಿದನ ಬಾಯಿಂದ ತನ್ನ ಕಲೆಯ ಬಗ್ಗೆ ಕೇಳಬೇಕೆಂಬ ಜಿಜ್ಞಾಸೆ. ಈ ಬಾರಿ ತನಗೆ ಚಿತ್ರಕಲೆಯ ಪ್ರಥಮಪಾಠಗಳನ್ನು ಮತ್ತು ಜಾಗರೂಕತೆಯಿಂದ ನಿಧಾನವಾಗಿ ಕಲಿಸಿಕೊಡಬಲ್ಲ ಗುರುಕಲಾವಿದ ಬೇಕೆಂದು ಯೋಚಿಸುತ್ತಿದ್ದ. ತನ್ನ ಕೃಪಾ ಪೋಷಣೆಯಲ್ಲಿ ತೆಗೆದುಕೊಂಡು ನಿರ್ವಂಚನೆಯಿಂದ ಕಲಿಸಿಕೊಡುವವರಿದ್ದರೆ ತಾನು ಅವರಿಗೆ ಯಾವ ಮಟ್ಟಕ್ಕೆ ಬೇಕಾದರೂ ಹೋಗಿ ಮಾಡಿಕೊಡಲು ಸಿದ್ಧನಾಗಿದ್ದ. ಅವನ ಸ್ಟುಡಿಯೋದಲ್ಲಿ, ಬೇಕಾದರೆ ೧೦ ಸಲವಾದರೂ ಕಸಗುಡಿಸಿ ಕೊಡಲು, ಷೂ ಪಾಲಿಷ್ ಮಾಡಿಕೊಡಲೂ ಸಿದ್ಧನಾಗಿದ್ದ.

ಅವನು ಮೊದಲಿನಿಂದಲೂ ತುಂಬಾ ಇಷ್ಟಪಟ್ಟಿದ್ದ ಚಿತ್ರಗಳ ಕಲಾವಿದ ಜೂಲ್ಸ್ ಬ್ರೆಟನ್, ತಾನಿದ್ದ ಜಾಗದಿಂದ ಸುಮಾರು ನೂರ ಎಪ್ಪತ್ತೈದು ಕಿಲೋಮೀಟರ್ ದೂರದ ಕುರಿಯರ್ಸ್‌ನಲ್ಲಿದ್ದ. ತನ್ನ ಜೇಬಲ್ಲಿದ್ದ ಹಣದಿಂದ ಎಷ್ಟು ದೂರ ಟ್ರೈನ್‌ನಲ್ಲಿ ಹೋಗಬಹುದೋ ಹೋಗಿ ಮುಂದಿನ ದೂರವನ್ನು ನಡೆದೇ ಸವೆಸಿ ಬ್ರೆಟನ್‌ನ ಸ್ಟುಡಿಯೋ ಪತ್ತೆ ಹಚ್ಚಿದ. ಸ್ಟುಡಿಯೋ ಬಹಳ ಭರ್ಜರಿಯಾಗಿದ್ದುದನ್ನು ನೋಡಿದ್ದೇ

ಹತಾಶನಾಗಿ ಬಿಟ್ಟ. ಸರಿಯಾದ ಸ್ವಾಗತ ಸಿಗದ ಕಾರಣ, ಅಷ್ಟೂ ದೂರವನ್ನು ಕ್ರಮಿಸಿ, ಬೋರಿನೇಜ್‌ಗೆ ಮರಳಿ ಬಂದು ಬಿಟ್ಟ. ಗಣಿ ಕಾರ್ಮಿಕರ ಕ್ಯಾಬಿನ್‌ಗಳಿಗೆ ಬಂದಾಗ ಅವನು ಬಹಳವಾಗಿ ದಣಿದಿದ್ದ. ಆರೋಗ್ಯವೂ ಸರಿಯಿರಲಿಲ್ಲ. ಕೈಯಲ್ಲಿ ಕಾಸಿಲ್ಲ. ಅವನಿಗಾಗಿ ಯಾವ ಪತ್ರವೂ ಬಂದಿರಲಿಲ್ಲ. ಹಾಸಿಗೆ ಹಿಡಿದು ಮಲಗಿದ. ಕಾರ್ಮಿಕರ ಮಡದಿಯರು ಅವನ ಶುಶ್ರೂಷೆ ಮಾಡಿದರು. ತಮ್ಮ ಊಟದಲ್ಲಿಯೇ ಸ್ವಲ್ಪ ಹಂಚಿಕೊಟ್ಟರು. ಪ್ರಯಾಣದ ಅವಧಿಯಲ್ಲಿ ಸಾಕಷ್ಟೂ ತೂಕ ಕಳೆದುಕೊಂಡಿದ್ದ. ಕೃಶನಾಗಿ ಕಾಣುತ್ತಿದ್ದ. ಕಣ್ಣುಗಳು ಕೆನ್ನೆ, ಗಲ್ಲಗಳು ಗುಳಿ ಬಿದ್ದಿದ್ದವು. ಅಸ್ವಸ್ಥನಾಗಿದ್ದರೂ, ತನ್ನ ಬಗ್ಗೆ ಸ್ಪಷ್ಟ ಕಲ್ಪನೆ ಇರಿಸಿಕೊಂಡಿದ್ದ. ಇನ್ನೇನು ತಾನೊಂದು ನಿರ್ಧಾರದ ಹಂತ ತಲುಪಲಿದ್ದೇನೆಂದು ಅವನಿಗೆ ಅನಿಸಿತು.

ಮುಂದೆ ತಾನು ಏನು ಮಾಡಬೇಕು? ಬದುಕಿನ ಗುರಿ ಏನು? ಟೀಚರ್ ಆಗುವುದೇ ಕಲಾವಿದನಾಗುವುದೇ? ಪುಸ್ತಕ ಮಾರಾಟಗಾರನಾಗುವುದೇ? ಅಂಗಡಿ ಗುಮಾಸ್ತ (ಕ್ಲಾರ್ಕ್) ಆಗಿ ಉಳಿಯುವುದೇ? ಇಲ್ಲವೇ ಎಟ್ಟೆನ್‌ನಲ್ಲಿ ತಂದೆ ತಾಯಿ ಜೊತೆ ಇರುವುದೇ? ಅಥವಾ ಥಿಯೋ ಜೊತೆ ಪ್ಯಾರಿಸ್‌ನಲ್ಲಿ ಇರುವುದೇ?.... ಇಲ್ಲವಾದಲ್ಲಿ ಆ್ಯಮ್‌ಸ್ಟರ್ ಡ್ಯಾಂನಲ್ಲಿ ಚಿಕ್ಕಪ್ಪ ದೊಡ್ಡಪ್ಪಂದಿರ ಜೊತೆ ಉಳಿಯುವುದೇ? ಇಲ್ಲವಾದಲ್ಲಿ ವಿಧಿ ತನ್ನನ್ನು ಎಲ್ಲಿ ಎತ್ತಿ ಹಾಕುತ್ತೋ ಅಲ್ಲಿ ಇದ್ದು ಬಿಡುವುದೇ?

ಸ್ವಲ್ಪ ಆರೋಗ್ಯ ಸುಧಾರಿಸಿದ ಮೇಲೆ ಒಂದು ದಿನ ಹಾಸಿಗೇಲಿ ಎದ್ದು ಕೂತು, ಥಿಯೋಡೋರ್ ರೂಸೋನ 'Les Four dans les landes' ನ ಕೃತಿಗಳನ್ನು ನಕಲು ಮಾಡುತ್ತಾ' ಇನ್ನೂ ಎಷ್ಟುದಿನ ಈ ರೀತಿ ಡ್ರಾಯಿಂಗ್‌ಗಳನ್ನು ಮಾಡುತ್ತಾ ಕುಳಿತಿರಬೇಕಾಗುತ್ತದೆಯೋ! – ಎಂದು ಯೋಚಿಸುತ್ತಿರುವಷ್ಟರಲ್ಲಿ, ಯಾರೋ ಬಾಗಿಲು ತೆರೆದುಕೊಂಡು ಒಳಬಂದರು.

ನೋಡಿದರೆ, ವಿನ್ಸೆಂಟ್‌ನ ತಮ್ಮ ಥಿಯೋ. ಥಿಯೋ ಈಗ ಸಾಕಷ್ಟು ಪ್ರಗತಿ ಹೊಂದಿದ್ದ. ಕೇವಲ ಇಪ್ಪತ್ತು ಮೂರರ ಹುಡುಗನಾಗಿದ್ದರೂ ಪ್ಯಾರಿಸ್‌ನಲ್ಲಿ ಬಹಳ ದೊಡ್ಡ ಆರ್ಟ್ ಡೀಲರ್ ಎಂದು ಹೆಸರು ಮಾಡಿದ್ದ. ಅವನ ಗೆಳೆಯರು, ಸಹೋದ್ಯೋಗಿಗಳು ಮನೆಯವರು ಎಲ್ಲರೂ ಗೌರವಿಸುತ್ತಿದ್ದರು. ಸಮಾಜದಲ್ಲಿ, ತನ್ನ ಅಂತಸ್ತಿಗೆ ತಕ್ಕಂತೆ ವೇಷ, ಭಾಷೆ, ವ್ಯವಹಾರ ಹೇಗಿರಬೇಕೆಂಬುದನ್ನು ಚೆನ್ನಾಗಿ ಅರಿತಿದ್ದ. ಶ್ರೀಮಂತಿಕೆ, ಪ್ರತಿಷ್ಠೆಗಳನ್ನು ಬಿಂಬಿಸಲು ಸಮರ್ಥವಾದ ರೀತಿಯಲ್ಲಿನ ಉಡುಪನ್ನು ತೊಡುತ್ತಿದ್ದ.

ವಾನ್‌ಗೋ ವಂಶದ ಕುರುಹಾಗಿತ್ತು ಅವನ ಹಣೆ. ಕಪ್ಪು ಕೂದಲು, ನಾಜೂಕಾದ ಅಂಗಾಂಗಗಳು. ಕರುಣೆ ತುಂಬಿದ ಕಣ್ಣುಗಳು. ಅವನ ಮುಖ ಅಂಡಾಕಾರದಲ್ಲಿದ್ದು ಗಲ್ಲ ಚೂಪಾಗಿತ್ತು.

ಥಿಯೋ, ಗುಡಿಸಲಿನ ಬಾಗಿಲಿಗೆ ಒರಗಿದ. ವಿನ್ಸೆಂಟ್ ಇದ್ದ ಆ ಮನೆಯ ಪರಿಸರವನ್ನು ಗಮನಿಸಿದ. ಕೆಲವು ಗಂಟೆಗಳ ಹಿಂದಷ್ಟೇ ಪ್ಯಾರಿಸ್‌ನಿಂದ ಹೊರಟು ಬಂದದ್ದು. ತನ್ನ ಅಪಾರ್ಟ್‌ಮೆಂಟ್‌ನಲ್ಲಿ ಐಷಾರಾಮಿ ಫರ್ನಿಚರ್ ಇದೆ. ಕುಳಿತುಕೊಳ್ಳಲು

ಮೆತ್ತನೆಯ ಸೋಫಾ, ಕೈತೊಳೆಯಲು ಸೋಪು. ವಾಷ್ ಬೌಲ್, ಟವೆಲ್ಲು, ಕಿಟಿಕಿಗಳಿಗೆ ಪರದೆಗಳು. ನೆಲದ ಮೇಲೆ ರತ್ನಗಂಬಳಿಯ ಹಾಸು, ಬರೆಯಲು ಡೆಸ್ಕ್, ಪುಸ್ತಕಗಳ ಅಲಮಾರಿ, ಕಣ್ಣಿಗೆ ಹಿತವಾದ ಬೆಳಕಿನ ದೀಪ, ನೋಡಲು ಮೋಹಕವಾದ ವಾಲ್‌ಪೇಪರ್. ಆದರೆ ವಿನ್ಸೆಂಟ್ ವಾಸಿಸುತ್ತಿರುವ ಜಾಗ? ಮಲಗಲು ಕೊಳಕಾದ ಹಾಸು, ಹೊದ್ದುಕೊಳ್ಳಲು ಯಾವುದೋ ಹಳೆಯ ಹರಕಲು ಬ್ಲಾಂಕೆಟ್ ಗೋಡೆಗಳು, ನೆಲದ ಹಾಸು ಒರಟಾದ ಮರದ ಹಲಗೆಗಳು, ಬರೆಯೋದಕ್ಕೆ ಮುರಕಲು ಮೇಜು, ಕುರ್ಚಿ, ಅವನೋ ಸ್ನಾನ ಕೂಡಾ ಮಾಡಿರಲಿಲ್ಲ. ಮುಖಕ್ಷೌರವೂ ಇಲ್ಲ. ಕೆಂಪು ಗಡ್ಡ ಎಡ್ಡಾದಿಡ್ಡಿ ಮುಖದಲ್ಲೆಲ್ಲ ಹರಡಿಕೊಂಡಿತ್ತು.

"ಚೆನ್ನಾಗಿದ್ದೀಯ ಥಿಯೋ" – ವಿನ್ಸೆಂಟ್ ವಿಚಾರಿಸಿದ. ಥಿಯೋ ಥಟ್ಟನೆ ಹಾಸಿಗೇಲಿ ಕುಳಿತು, ಸ್ವಲ್ಪ ಹಾಗೆಯೇ ಮೈಚಾಚುತ್ತಾ ಕೇಳಿದ – "ವಿನ್ಸೆಂಟ್, ದಮ್ಮಯ್ಯಾಂತೀನಿ, ನಿನಗೆ ಏನಾಗಿದೆ ಹೇಳು? ಯಾಕೆ ನೀನು ನಿನ್ನನ್ನು ಈ ಸ್ಥಿತಿಗೆ ತಂದುಕೊಂಡಿದ್ದೀ?"

"ಏನಿಲ್ಲ. ಈಗೆಲ್ಲ ಸರಿಹೋಗಿದ್ದೀನಿ. ಒಂದಿಷ್ಟು ದಿನ ಹುಷಾರಾಗಿರಲಿಲ್ಲ. ಅಷ್ಟೆ!"

"ಆದರೆ...... ಆದರೆ...... ಈ ಬಿಲದಂತಹ....? ಖಂಡಿತ ಇದು ನೀನು ವಾಸ ಮಾಡ್ತಿರೋ ಜಾಗ ಅಲ್ಲ..... ಅಲ್ವಾ?"

"ಇಲ್ಲ. ಇದು ನಾನು ಇರೋ ಜಾಗವೇ. ಯಾಕೆ ಚೆನ್ನಾಗಿಯೇ ಇದೆಯಲ್ಲ! ಇದನ್ನು ಸ್ಟುಡಿಯೋ ಮಾಡಿಕೊಂಡಿದ್ದೀನಿ."

"ಓಹ್ ವಿನ್ಸೆಂಟ್!"...... ಭಾವುಕನಾಗಿ ತನ್ನ ಬೆರಳುಗಳನ್ನು ಅವನ ಕೂದಲಲ್ಲಿ ಓಡಾಡಿಸಿ ಮಾತಾಡುವುದಕ್ಕೆ ಪ್ರಯತ್ನಿಸಿದಾಗ ಗಂಟಲು ತುಂಬಿ ಬಂತು.

"ಥಿಯೋ ನೀನು ಇಲ್ಲಿಗೆ ಬಂದದ್ದು ನನಗೆ ತುಂಬ ಸಂತೋಷ ಆಗಿದೆ."

"ವಿನ್ಸೆಂಟು ದಯವಿಟ್ಟು ನಿಜ ಹೇಳು ನಿನಗೆ ಏನಾಗಿತ್ತು? ಆರೋಗ್ಯ ಕೆಡೋಕೆ ಕಾರಣ ಏನು?"

ವಿನ್ಸೆಂಟ್ ಕುರಿಯರ್ಸ್‌ನ ಪ್ರಯಾಣದ ವಿಚಾರ ತಿಳಿಸಿದ. "ನೀನು ನಿನ್ನನ್ನು ತುಂಬ ದಣಿಸಿಬಿಟ್ಟಿದ್ದೀಯ. ಸರಿಯಾಗಿ ಊಟಗೀಟ ಮಾಡ್ತಿದ್ದೀಯೋ ಇಲ್ವೊ? ನಿನ್ನ ಬಗ್ಗೆ ಗಮನಕೊಡ್ತೀದ್ದೀಯೋ ಇಲ್ವೊ?"

"ಗಣಿ ಕಾರ್ಮಿಕ ಹೆಂಗಸರು ನನ್ನ ಶುಶ್ರೂಷೆ ಮಾಡಿ ನೋಡಿಕೊಳ್ತಿದ್ದಾರೆ."

"ತಿನ್ನೋಕೆ ಏನ್ಮಾಡ್ತಿದ್ದೀಯ? ಎಲ್ಲಿ..... ಎಲ್ಲಿಯೂ ದವಸಧಾನ್ಯಗಳ ಸ್ಟೋರ್ ಕಾಣ್ತಿಲ್ವಲ್ಲ?"

"ಹೆಂಗಸರು ಪ್ರತಿದಿನ ನನಗಾಗಿ, ತಮ್ಮಲ್ಲಿ ಏನೇನಿದ್ದರೆ, ಅದನ್ನು ತಂದುಕೊಡ್ತಿದ್ದಾರೆ. ಬ್ರೆಡ್ಡೋ, ಕಾಫೀನೋ ಚೀಸೋ, ಇಲ್ಲ ಬೇಯಿಸಿದ ಮೊಲವನ್ನೋ, ಏನೋ ಒಂದು ತಪ್ಪದೆ ತಂದು ಕೊಡ್ತಾರೆ."

"ವಿನ್ಸೆಂಟ್, ನಿನಗೇ ಗೊತ್ತು, ಒಂದಿಷ್ಟು ಬ್ರೆಡ್ಡು, ಕಾಫಿಗಳಿಂದ ಶಕ್ತಿ ಬರೋದಿಲ್ಲ. ಅದಕ್ಕಾಗಿ ನೀನು ಮೊಟ್ಟೇನೋ ಮಾಂಸಾನೋ, ತರಕಾರೀನೋ ಕೊಂಡ್ಕೊಳ್ಳಬೇಕಾಗುತ್ತೆ."

"ಬೋರಿನೇಜ್‌ನಲ್ಲಿ ಅವೆಲ್ಲಕ್ಕೂ ಬೆಲೆ ಜಾಸ್ತಿ." ಥಿಯೋ ನಿರಾಳವಾಗಿ ಬೆಡ್ ಮೇಲೆ ಕುಳಿತುಕೊಂಡ.

"ವಿನ್ಸೆಂಟ್ ಖಂಡಿತ ನಿನ್ನನ್ನು ಅರ್ಥಮಾಡಿಕೊಳ್ಳಲಿಲ್ಲ. ದಯವಿಟ್ಟು ನನ್ನನ್ನು ಕ್ಷಮಿಸು."

"ಛಿ! ಛಿ! ಹಾಗೆಲ್ಲ ಹೇಳ್ಬೇಡ. ನೀನು ಮಾಡಬಹುದಾದ್ದನ್ನೆಲ್ಲ ಮಾಡಿದೆ. ಈಗ ಸುಧಾರಿಸಿಕೊಳ್ತಿದ್ದೀನಿ. ಸ್ವಲ್ಪ ದಿನದಲ್ಲಿಯೇ ಎದ್ದು ಮಾಮೂಲಿನಂತೆ ಆಗ್ತೀನಿ."

ಥಿಯೋ ಬೂಜನ್ನು ಒರೆಸುವಂತೆ, ಅವನ ಕಣ್ಣಿನ ಮೇಲೆ ಮೃದುವಾಗಿ ಕೈಯಾಡಿಸಿದ. "ಖಂಡಿತ ನನಗೆ ಅರ್ಥ ಆಗಿರಲಿಲ್ಲ.... ನಾನು ನಿನ್ನ ಬಗ್ಗೆ..... ವಿನ್ಸೆಂಟ್ ನಿನ್ನನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ.... ಸರಿಯಾಗಿ....."

"ಓಹ್, ಬಿಡು ಥಿಯೋ, ಅದೆಲ್ಲ!...... ಇರಲಿ.... ಈಗ ಹೇಳು.... ಪ್ಯಾರಿಸ್‌ನಲ್ಲಿ ಎಲ್ಲ ಹೇಗಿದೆ?.... ಎಲ್ಲಿಗೆ ಹೊರಟಿದ್ದೀ? ಎಟ್ಟೆನ್‌ಗೆ ಹೋಗಿದ್ದೆಯೇನು?"

ಥಿಯೋ ಥಟ್ಟನೆ ಎದ್ದು ನಿಂತ. ಈ ಹಾಳು ಬಿದ್ದ ಊರಲ್ಲಿ ಅಂಗಡಿಗಳು ಏನಾದರೂ ಇವೆಯೇನು? ನನಗೆ ಕೊಂಡುಕೊಳ್ಳೋಕೆ ಏನಾದರೂ ಸಿಗುತ್ತಾ?"

"ವಾಸ್ಮೆಗಳಲ್ಲಿನ ಗುಡ್ಡದ ಸ್ವಲ್ಪ ಕೆಳಭಾಗದಲ್ಲಿ ಅಂಗಡಿಗಳಿವೆ. ಇರಲಿ. ಈಗ ಆ ಕುರ್ಚಿ ಎಳ್ಕೋ. ನಾನು ನಿನ್ನ ಹತ್ತಿರ ಸ್ವಲ್ಪ ಮಾತಾಡಬೇಕಿದೆ. ಅಬ್ಬಾ! ಈಗಾಗಲೇ ನಿನ್ನ ಹತ್ತಿರ ಮಾತಾಡಿ ಹೆಚ್ಚು ಕಡಿಮೆ ಎರಡು ವರ್ಷ ಆಗಿದೆ!"

ಥಿಯೋ, ವಿನ್ಸೆಂಟ್‌ನ ಮುಖದ ಮೇಲೆ ಕೈಯಾಡಿಸಿದ. ಹೇಳಿದ – "ಮೊದಲು ನಾನು ಮಾಡಬೇಕಾಗಿರೋ ಕೆಲಸ..... ಬೆಲ್ಜಿಯಂನಲ್ಲಿ ಸಿಗುವ ಅತ್ಯುತ್ಕೃಷ್ಟವಾದ ಊಟವನ್ನು ನಿನಗೆ ಮಾಡಿಸೋದು! ನೀನು ಈ ಥರ ಆಗೋಕೆ, ಉಪವಾಸ ಬಿದ್ದಿರೋದೇ ಕಾರಣ. ಆಮೇಲೆ ನಿನ್ನ ಜ್ವರಕ್ಕೆ ಔಷಧಿಕೊಟ್ಟು ಮೃದುವಾದ ದಿಂಬಿನ ಮೇಲೆ ತಲೆ ಇರಿಸಿ ಮಲಗಿಸಿ ಬಿಡ್ತೇನೆ. ಸದ್ಯ ನಾನು ಇಲ್ಲಿಗೆ ಬಂದದ್ದು ಒಳ್ಳೆಯದಾಯ್ತು. ನನಗೆ ಮೊದಲೇ ಸ್ವಲ್ಪಾನಾದರೂ ಸೂಚನೆ ಸಿಕ್ಕಿದ್ದರೆ....... ನೋಡು ನಾನು ಬರೋತನಕ ನೀನು ಇಲ್ಲಿಂದ ಕದಲಬಾರದು."

ಕೂಡಲೇ ಬಾಗಿಲಿಂದಾಚೆ ಓಡಿದ. ವಿನ್ಸೆಂಟ್ ಅವನು ಆ ಕಡೆ ಹೋಗುತ್ತಿದ್ದಂತೆಯೇ ಮತ್ತೆ ಕಾಪಿ ಮಾಡಲು ಹಾಳೆಗಳನ್ನು, ಪೆನ್ಸಿಲನ್ನು ಹಿಡಿದು ಕುಳಿತುಕೊಂಡ. ಒಂದರ್ಧ ಗಂಟೇಲಿ ಥಿಯೋ ಇಬ್ಬರು ಹುಡುಗರನ್ನು ಜೊತೇಲಿ ಕರೆದುಕೊಂಡು ಬಂದ. ಅವರು ತಂದಿದ್ದ ಸಾಮಾನುಗಳನ್ನೆಲ್ಲ ಇರಿಸಿದ. ಎರಡು ದಿಂಬುಗಳು, ಹೊದಿಕೆಗಳು, ಪಾತ್ರೆ ಸಾಮಾನುಗಳು, ಊಟದ ಪ್ಯಾಕೆಟ್ಟುಗಳು ಇದ್ದವು. ತಂದ ಹೊದಿಕೆಗಳನ್ನು ಹಾಸಿಗೆಗಳ ಮೇಲೆ ಹಾಸಿ, ವಿನ್ಸೆಂಟ್‌ನನ್ನು ಮಲಗಲು ಹೇಳಿದ. ಹಾಯಾಗಿ, ತಂಪಾಗಿ ಇದ್ದ ಹಾಸಿಗೆಗಳ ಮೇಲೆ ಮಲಗಿದ.

"ಸರಿ, ಈ ಸ್ಟೋವ್ ಹೇಗೆ ಹಚ್ಚೋದು?" ಕೋಟನ್ನು ಬಿಚ್ಚಿಟ್ಟು, ಷರ್ಟಿನ ತೋಳುಗಳನ್ನು ಮೇಲಕ್ಕೆ ಮಡಚುತ್ತಾ ಕೇಳಿದ.

"ಅಲ್ಲೊಂದಷ್ಟು ಪೇಪರ್, ಕಡ್ಡಿಗಳು ಇವೆ. ಮೊದಲು ಅವುಗಳನ್ನು ಹಚ್ಚು, ಆಮೇಲೆ ಇದ್ದಿಲು ಹಾಕು."

ಥಿಯೋ, ಕಳಪೆ ಇದ್ದಿಲನ್ನು ನೋಡಿದ. "ಏನು ಇದು ಇದ್ದಲೇ?"

"ಇಂಥಾದ್ದನ್ನೇ ನಾವು ಉಪಯೋಗಿಸೋದು. ಕೊಡು ಹೇಗೆ ಇದನ್ನು ಉಪಯೋಗಿಸೋದು ಅಂತ ತೋರಿಸಿಕೊಡ್ತೇನೆ."

ಹಾಸಿಗೆ ಬಿಟ್ಟು ಎದ್ದು ಬರೋಕೆ ಪ್ರಯತ್ನಿಸಿದ. ಆದರೆ ಥಿಯೋ ಜಿಗಿದೆದ್ದು ಅವನನ್ನು ತಡೆಯುತ್ತ, "ಸುಮ್ಮನೆ ಬಿದ್ದುಕೋ ಈಡಿಯಟ್!..... ಮತ್ತೆ ಏಳೋದಕ್ಕೆ ಪ್ರಯತ್ನ ಮಾಡಿದೆಯೋ, ಒದ್ದು ಬಿಡ್ತೇನೆ" ಎಂದು ಗದ್ದರಿಸುವ, ಎಚ್ಚರಿಸುವ ದನಿಯಲ್ಲಿ ಹೇಳಿದ.

ಎಷ್ಟೋ ತಿಂಗಳ ನಂತರ ಮೊದಲ ಬಾರಿಗೆ ಅವನ ಮುಖದಲ್ಲಿ ನಗು ಕಾಣಿಸಿತು. ಕಣ್ಣಲ್ಲಿನ ಆ ನಗೆಮಿಂಚು ಅವನ ಜ್ವರವನ್ನು ಪೂರ್ತಿಯಾಗಿ ಹೊರಗೆ ಅಟ್ಟಿಬಿಟ್ಟಿತ್ತು. ಥಿಯೋ ಹೊಸದಾಗಿ ತಂದಿದ್ದ ಒಂದು ಪಾತ್ರೇಲಿ ಎರಡು ಮೊಟ್ಟೆ ಹಾಕಿದ. ಇನ್ನೊಂದರಲ್ಲಿ ಬೀನ್ಸ್ ಕತ್ತರಿಸಿ ತುಂಡುಗಳನ್ನು ಮತ್ತೊಂದರಲ್ಲಿ ಹಾಕಿದ. ಮೂರನೇ ಪಾತ್ರೆಯಲ್ಲಿ ತಾಜಾ ಹಾಲನ್ನು ಸುರಿದು ಬಿಸಿ ಮಾಡಿದ. ಟೋಸ್ಟರ್‌ನಲ್ಲಿ ಬ್ರೆಡ್ ತುಂಡುಗಳನ್ನು ಇರಿಸಿ, ಒಲೆಯಲ್ಲಿ ಅದನ್ನು ಕಾಯಿಸಿದ. ತನ್ನ ಷರ್ಟ್ ತೋಳನ್ನು ಮೇಲಕ್ಕೆ ಮಡಿಚಿ ಸ್ಟೋವ್ ಕಡೆ ಬಗ್ಗಿ ಕೆಲಸ ಮಾಡುತ್ತಿದ್ದ ತನ್ನ ಪ್ರೀತಿಯ ತಮ್ಮನನ್ನು ನೋಡುತ್ತಿದ್ದಂತೆಯೇ ಹೊಟ್ಟೆ ತುಂಬಿ ಹೋಯಿತು.

ಅಂತೂ ಕಡೆಗೆ ಊಟ ತಯಾರಾಯಿತು. ಥಿಯೋ ಮೇಜನ್ನು ಮಂಚದ ಬಳಿಗೆ ಎಳೆದುಕೊಂಡು ಅದರ ಮೇಲೆ ತನ್ನ ಬ್ಯಾಗಿನಲ್ಲಿದ್ದ ಶುಭ್ರವಾದ ಟವೆಲನ್ನು ಹಾಸಿದ. ಬೇಯಿಸಿದ ಬೀನ್ಸ್ ಮೇಲೆ ಒಂದಿಷ್ಟು ಬೆಣ್ಣೆ ಹಾಕಿದ. ಬೆಂದ ಮೊಟ್ಟೆಗಳನ್ನು ಒಡೆದು ಅದನ್ನೂ ಅದರ ಮೇಲೆ ಹಾಕಿದ. ಕಡೆಗೆ ಒಂದು ಚಮಚ ತೆಗೆದುಕೊಂಡ.

"ಹೂಂ! ಎಲ್ಲಿ ಬಾಯಿತೆಗೆ. ಎಷ್ಟೋ ದಿನದ ಮೇಲೆ ಇಂಥಾ ಊಟ ಮಾಡ್ತಿದ್ದೀ ಅನ್ನೋದು ದೇವರೇಬಲ್ಲ."

"ಸುಮ್ಮನಿರು ಥಿಯೋ, ಬಿಡು, ನಾನೇ ತಿಂತೀನಿ."

ಥಿಯೋ ಚಮಚೆಯಲ್ಲಿ ಮೊಟ್ಟೆ ತುಂಡೊಂದನ್ನು ಇರಿಸಿ– "ನೋಡು ಬಾಯಿ ತೆಗೀತೀಯೋ ಇಲ್ಲ, ನಿನ್ನ ಮೂತಿ ಮೇಲೆ ಹಾಕಿ ಬಿಡಲೋ?"

ವಿನ್ಸೆಂಟ್ ಊಟ ಮುಗಿಸಿದ ಮೇಲೆ, ಹಿಂದಕ್ಕೆ ಒರಗಿ, ತೃಪ್ತಿಯ ನಿಟ್ಟುಸಿರನ್ನು ಬಿಟ್ಟ, "ನೀನು ಮಾಡಿದ ಅಡಿಗೆ ತುಂಬಾ ಚೆನ್ನಾಗಿದೆ. ನನಗಂತೂ ಮರೆತೇ ಹೋಗಿದೆ!"

"ಮುಂದೆಯಾದ್ರೂ ಮರೀಬೇಡ."

"ಹೂಂ! ಈಗ ಹೇಳು ಥಿಯೋ, ಅಲ್ಲಿನ ಸಂಗತಿಗಳೇನು? ವಿಶೇಷಗಳೇನು? ನನಗಂತೂ ಸುದ್ದಿ ಸಮಾಚಾರ ಕೇಳೋದಕ್ಕೆ ತಡೆಯಲಾಗದಷ್ಟು ಹಸಿವಾಗಿದೆ. ಗೂಪಿಲ್ಸ್‌ನಲ್ಲಿ ಎಲ್ಲಾ ಹೇಗೆ ನಡೀತಾ ಇದೆ? ಹೊರ ಪ್ರಪಂಚದ ವಿಷಯಗಳೇ ತಿಳೀತಿಲ್ಲ."

"ಹಾಗಾದರೆ ನೀನು ಸ್ವಲ್ಪ ಕಾಯಬೇಕಾಗುತ್ತದೆ. ನೀನು ನಿದ್ದೆ ಮಾಡೋಕೆ ಇಲ್ಲೇನೋ ಇದೆ! ಮೊದಲು ಬಾಯ್ಮುಚ್ಚಿಕೊಂಡು ಸುಮ್ಮನೆ ಮಲಗು. ತಿಂದದ್ದೆಲ್ಲ ಚೆನ್ನಾಗಿ ಜೀರ್ಣವಾಗಲಿ."

"ಥಿಯೋ, ದಯವಿಟ್ಟು ನನ್ನನ್ನು ಮಾತಾಡೋಕೆ ಬಿಡು. ನನಗೆ ಈಗ ನಿದ್ದೆಯಲ್ಲ ಬೇಕಾಗಿರೋದು. ನಿದ್ದೆ ಯಾವಾಗ ಬೇಕಾದರೂ ಸಿಗುತ್ತೆ, ಆದರೆ ನಿನ್ನ ಹತ್ತಿರ ಮಾತಾಡೋಕೆ....."

"ನಿನಗೆ ಏನು ಬೇಕೂಂತ ಯಾರೂ ಕೇಳಿಲ್ಲ. ಈಗ ಹೇಳಿದ್ದನ್ನು ಕೇಳಬೇಕು ಅಷ್ಟೆ. ಸುಮ್ಮನೆ ಇದನ್ನು ಕುಡಿದು, ಒಳ್ಳೆ ಹುಡುಗನಂತೆ ಮಲಕ್ಕೋ. ನೀನು ಎದ್ದಾಗ ನಿನಗೆ ಘಮಘಮಾಂತ ಇರೋ ಮೀನಿನ ಬಜ್ಜಿ ಮತ್ತು ಆಲೂಗಡ್ಡೆ ಸಿಗುತ್ತೆ. ಅವುಗಳನ್ನು ತಿನ್ನು. ಆಮೇಲೆ ನೋಡು ನೀನು ಹೇಗಾಗ್ತೀ ಅಂತ!"

ಸಂಜೆವರೆಗೂ ಮಲಗಿದ್ದ ವಿನ್ಸೆಂಟ್, ಎದ್ದಾಗ ಸಾಕಷ್ಟು ಖುಷಿಯಾಗಿ, ನಿರಾಳವಾಗಿ ಇದ್ದ. ಥಿಯೋ ಕಿಟಕಿಯ ಬಳಿ ಕುಳಿತು ವಿನ್ಸೆಂಟ್‌ನ ಡ್ರಾಯಿಂಗ್‌ಗಳನ್ನು ನೋಡುತ್ತಿದ್ದ. ಸದ್ದು ಮಾಡದೆ ಥಿಯೋನನ್ನು ಗಮನಿಸುತ್ತಿದ್ದ. ಅವನ ಮನಸ್ಸಿಗೆ ಹಾಯೆನಿಸಿತು. ವಿನ್ಸೆಂಟ್ ಎದ್ದಿರುವುದು ಗಮನಕ್ಕೆ ಬಂದ ಕೂಡಲೇ, ತಕ್ಷಣ ಎದ್ದು ನಿಂತು ದೊಡ್ಡದಾಗಿ ಮುಗುಳ್ನಕ್ಕ.

"ಹೇಳು, ಈಗ ಹೇಗೆ ಅನ್ನಿಸ್ತಿದೆ? ಪರವಾಗಿಲ್ಲಾಂತ ಅನ್ನಿಸ್ತಿದೆಯೇನು? ನೀನು ನಿಜವಾಗಿಯೂ ಚೆನ್ನಾಗಿಯೇ ನಿದ್ದೆ ಮಾಡಿದೆ."

"ನನ್ನ ಸ್ಕೆಚಸ್ ಬಗ್ಗೆ ನಿನಗೆ ಏನನ್ನಿಸುತ್ತೆ? ಅವುಗಳಲ್ಲಿ ನಿನಗೆ ಯಾವುದಾದರೂ ಇಷ್ಟವಾಯಿತೇನು?"

"ಮೀನಿನ ಬಜ್ಜಿ, ಕೆಲಸ ಮುಗಿಯಲಿ ಇರು. ಆಲೂಗಡ್ಡೆಗಳನ್ನು ಬೇಯೋಕೆ ಇಡಬೇಕಾಗಿದೆ."

ಒಲೆ ಹತ್ತಿರ ಮಾಡಬೇಕಾದ ಕೆಲಸಗಳನ್ನು ಮುಗಿಸಿ ಒಂದು ಬೇಸಿನ್‌ನಲ್ಲಿ ಬಿಸಿ ನೀರು ತಂದಿರಿಸಿದ. ವಿನ್ಸೆಂಟ್, ನನ್ನ ಬ್ಲೇಡನ್ನೇ ಉಪಯೋಗಿಸಲೇ ಅಥವಾ ನಿನ್ನದನ್ನೇ ತೆಗೆದುಕೊಳ್ಳಬೇಕೇ?"

"ಏನಪ್ಪ, ಷೇವ್ ಮಾಡ್ಕೊಳ್ಳದೆ, ಬಜ್ಜಿ, ತಿನ್ನಬಾರದೇನು?"

"ಇಲ್ಲಪ್ಪ, ಚೆನ್ನಾಗಿ ಮುಖ, ಕತ್ತು ಎಲ್ಲಾ ಕಡೆ ತೊಳ್ಕೊಂಡು ನೀಟಾಗಿ ಬಾಚ್ಕೊಳ್ಳೋವರೆಗೆ ತಿನ್ನೋಕೆ ಪರ್ಮಿಷನ್ ಕೊಡೊಲ್ಲ. ತಗೋ ಈ ಟವೆಲ್ಲನ್ನು ಕತ್ತಿಗೆ ಸುತ್ಕೋ."

ಥಿಯೋ ವಿನ್ಸೆಂಟ್‌ಗೆ ಷೇವ್ ಮಾಡಿದ. ಚೆನ್ನಾಗಿ ಮುಖ ತೊಳೆದು, ನೀಟಾಗಿ ತಲೆ ಬಾಚಿದ. ಹೊಸದಾಗಿ ತಂದಿದ್ದ ಷರ್ಟ್‌ನ್ನು ತೊಡಿಸಿದ.

"ಆಹಾ! ಈಗ ನೋಡು" ಎಂದು ಸ್ವಲ್ಪ ದೂರ ನಿಂತು, ಅವನನ್ನು ಗಮನಿಸಿ, "ನಿಜವಾಗಿ, ವಾನ್‌ಗೋನಂತೆ ಕಾಣಿಸ್ತಿದ್ದೀಯ ಈಗ!"

"ಥಿಯೋ ಬೇಗ ಹೋಗು. ಬಜ್ಜಿ ಸುಟ್ಟು ಹೋಗ್ತಿದೆ!"

ಥಿಯೋ ಟೇಬಲ್ ಸರಿಮಾಡಿ, ಅದರ ಮೇಲೆ ಆಲೂಗಡ್ಡೆ, ಬೆಣ್ಣೆ, ಮೀನಿನ ಬಜ್ಜಿ, ಹಾಲು –ಎಲ್ಲಾ ತಂದಿರಿಸಿದ.

"ಓಹ್ ಇಷ್ಟೆಲ್ಲಾ ನಾನು ತಿನ್ನಬೇಕೇ? ಖಂಡಿತ ಸಾಧ್ಯ ಇಲ್ಲ."

"ಇಲ್ಲಪ್ಪ, ಇಲ್ಲ. ಇದರಲ್ಲಿ ಅರ್ಧಪಾಲು ನನಗೆ ಸೇರಿದ್ದು. ಸರಿ, ಶುರು ಮಾಡು. ಈಗ ನಾವೇನು ಮಾಡ್ಬೇಕು ಗೊತ್ತೆ. ಕಣ್ಣುಮುಚ್ಚಿಕೊಂಡು, ಎಟ್ಟೆನ್‌ನ ನಮ್ಮ ಮನೇಲಿ ಇದ್ದೀವೀಂತ ಭಾವಿಸ್ಕೊಳ್ಳಬೇಕು."

ಊಟ ಆದ ಮೇಲೆ, ಥಿಯೋ ವಿನ್ಸೆಂಟ್‌ನ ಪೈಪನಲ್ಲಿ ಟೊಬ್ಯಾಕೋ ತುಂಬಿ 'ಊಂ! ಸ್ಮೋಕ್ ಮಾಡು! ಇದಕ್ಕೆ ನಾನು ಅವಕಾಶ ಕೊಡ್ತೀನಿ. ನನಗೆ ಅನ್ಸತ್ತೆ, ನಿಜವಾದ ಟೊಬ್ಯಾಕೋ ನಿನಗೆ ಕೆಡಕು ಮಾಡೋದಕ್ಕಿಂತ ಒಳ್ಳೇದೇ ಮಾಡುತ್ತೇಂತ!"

ವಿನ್ಸೆಂಟ್ ತೃಪ್ತಿಯಿಂದ ಟೊಬ್ಯಾಕೋ ಸೇದಿದ. ಆಗಾ ಬಿಸಿಯಾಗಿದ್ದ ಪೈಪನ್ನು ಕೆನ್ನೆಗೆ ಸವರಿಕೊಳ್ಳುತ್ತಿದ್ದ. ಟೊಬ್ಯಾಕೋ ಸೇದುತ್ತಿದ್ದ ವಿನ್ಸೆಂಟ್‌ನನ್ನು ನೋಡುತ್ತಿದ್ದಂತೆ, ಥಿಯೋಗೆ ಬ್ರಬ್ಯಾಂಟ್‌ನಲ್ಲಿನ ತಮ್ಮ ಬಾಲ್ಯದ ದಿನಗಳನ್ನು ನೆನಪು ಮಾಡಿಕೊಂಡ. ಪ್ರಪಂಚದಲ್ಲಿ ವಿನ್ಸೆಂಟ್, ಥಿಯೋಗೆ ಅಪ್ಪ ಅಮ್ಮನಿಗಿಂತಲೂ ಹೆಚ್ಚು. ತನ್ನ ಬಾಲ್ಯವನ್ನು ಮಧುರ ಸ್ಮೃತಿಗಳ ಗೂಡಾಗಿಸಿದ್ದು ವಿನ್ಸೆಂಟ್. ಹೋದ ವರುಷ ಪ್ಯಾರಿಸ್‌ನಲ್ಲಿದ್ದಾಗ, ವಿನ್ಸೆಂಟ್‌ನನ್ನು ಮರೆತಿದ್ದ. ಇನ್ನು ಮುಂದೆ ಯಾವಾಗಲೂ ಮರೆಯಬಾರದು. ವಿನ್ಸೆಂಟ್ ಇಲ್ಲದೆ ಅವನಿಗೆ ಬದುಕೇ ಇಲ್ಲ; ಅರ್ಥವೂ ಇಲ್ಲ. ಇದ್ದರೂ ಅದು ಅಪೂರ್ಣ. ವಿನ್ಸೆಂಟ್ ತನ್ನ ಬದುಕಿನ, ಅಸ್ತಿತ್ವದ ಅನನ್ಯ ಭಾಗವೆಂದು ಭಾವಿಸಿದ್ದ. ಇಬ್ಬರೂ ಜೊತೆಗಿದ್ದೇ ಜಗತ್ತನ್ನು ಕಂಡಿದ್ದರು. ಅರ್ಥಮಾಡಿಕೊಂಡಿದ್ದರು. ಜೊತೆಯಿಲ್ಲದೆ ಹೋದಲ್ಲಿ ಜಗತ್ತು ಅವನನ್ನು ದಿಗ್ಭ್ರಮೆಗೆ ಒಳಗಾಗಿಸಿತ್ತು. ಜೀವನದ ಉದ್ದೇಶ, ಅರ್ಥಗಳು ಅವನಿಂದಲೇ ಸಾಧ್ಯವಾದದ್ದು. ಇಬ್ಬರೂ ಅದನ್ನು, ಅದರ ಮೌಲ್ಯಗಳನ್ನು ಒಟ್ಟಾಗಿಯೇ ಗ್ರಹಿಸಿದ್ದರು. ಒಬ್ಬನೇ ಇದ್ದಾಗ, ತಾನು ಯಶಸ್ಸು ಸಾಧಿಸಿರುವಾಗ, ಇನ್ನೂ ಯಾಕೆ ದುಡೀಬೇಕು ಎಂದು ಆಶ್ಚರ್ಯಪಟ್ಟಿದ್ದ. ವಿನ್ಸೆಂಟ್ ತನ್ನ ಜೊತೆ ಇದ್ದಾಗಲೇ ಜೀವನದ ಪರಿಪೂರ್ಣತೆ. ಅದಕ್ಕೇ ಅವನಿಗೆ ವಿನ್ಸೆಂಟ್ ಬೇಕು. ವಿನ್ಸೆಂಟ್‌ಗೂ ಅವನು ಬೇಕು, ಅವನು ಮಗುವಿನ ಥರ ಇದ್ದಾನೆ. ಈಗಿರೋ ಸ್ಥಿತಿಯಿಂದ ಅವನನ್ನು ಹೊರಗೆ ತರಬೇಕು. ತನ್ನ ಕಾಲ ಮೇಲೆ ತಾನು ನಿಲ್ಲುವಂತೆ ಮಾಡಬೇಕು; ಮರುಚೇತನಗೊಳ್ಳುವಂತೆ ಏನಾದರೂ ಮಾಡಬೇಕು.

"ವಿನ್ಸೆಂಟ್, ನೀನು ಚೇತರಿಸಿಕೊಳ್ಳೋದಕ್ಕೆ ಒಂದೆರಡು ದಿನ ಟೈಂ ಕೊಡ್ತೀನಿ. ಆಮೇಲೆ ನೀನು ನನ್ನ ಜೊತೆ ಎಟ್ಟೆನ್‌ಗೆ ಬರಬೇಕು."

ವಿನ್ಸೆಂಟ್ ಧೂಮಪಾನದಲ್ಲಿ ಒಂದೆರಡು ನಿಮಿಷ ಮೌನವಾಗಿ ಮಗ್ನನಾಗಿದ್ದ. ಇದರ ವಿಷಯವಾಗಿ ಎಲ್ಲವನ್ನೂ ಸರಿಯಾಗಿ ಯೋಚಿಸಿ, ಒಂದು ತೀರ್ಮಾನಕ್ಕೆ ಬರಬೇಕು. ಇವರಿಗೆ ಮಾತಾಡೋದು ಬಿಟ್ಟರೆ ಬೇರೆ ಏನೂ ಅರ್ಥ ಆಗೊಲ್ಲ. ಥಿಯೋಗೆ ಸರಿಯಾಗಿ ಎಲ್ಲ ವಿಷಯವನ್ನು ಅರ್ಥ ಆಗುವ ಹಾಗೆ ತಿಳಿಸಬೇಕು. ಆಮೇಲೆ ಎಲ್ಲ ಸರಿಹೋಗುತ್ತೆ.

"ಥಿಯೋ ನಾನು ಮನೆಗೆ ಬರೋದ್ರಿಂದ ಆಗುವ ಪ್ರಯೋಜನವೇನು? ಹೇಗಿದ್ದರೂ ನಾನು ಮನೆಯವರ ದೃಷ್ಟಿಯಲ್ಲಿ ಅಯೋಗ್ಯ. ಕೆಲಸಕ್ಕೆ ಬಾರದವನು. ಯಾರಿಗೂ ನನ್ನ ಬಗ್ಗೆ ನಂಬಿಕೆ, ಭರವಸೆಗಳಿಲ್ಲ. ಅದಕ್ಕೇ ನನ್ನ ದೃಷ್ಟಿಯಲ್ಲಿ ಅವರಿಂದ ಎಷ್ಟು ದೂರ ಇದ್ದರೆ ಅಷ್ಟೂ ಒಳ್ಳೇದು. ಜೊತೆಗೆ ಅವರ ಪಾಲಿಗೆ ನಾನು ಇಲ್ಲವಾಗುತ್ತೇನೆ. ನಾನು ಒಂದು ರೀತಿ ಭಾವುಕ. ಏನೇನೋ ಹುಚ್ಚು ಕೆಲಸಗಳನ್ನು ಮಾಡ್ತಿರ್ತೀನಿ. ಬಹಳ ಬೇಗ ಉದ್ವೇಗಕ್ಕೆ ಒಳಗಾಗಿ, ತಾಳ್ಮೆಯಿಂದ ಇರಬಹುದಾಗಿದ್ದ ಸಂದರ್ಭದಲ್ಲೂ ಏನೇನೋ ಮಾಡಿಬಿಡ್ತೀನಿ. ಇದು ಹೀಗಿದ್ದಾಗ, ನನ್ನನ್ನು ನಾನು ಅಪಾಯಕಾರಿ ಮನುಷ್ಯ, ಯಾವುದನ್ನೂ ಮಾಡೋಕೆ ಲಾಯಕ್ಕಲ್ಲ ಅಂದುಕೊಳ್ಳಬೇಕೆ?.... ಈಗಿನ ಸಮಸ್ಯೆ ಇರೋದು, ನಾನು ನನ್ನ ಭಾವಾತಿರೇಕತೆಗಳನ್ನು ಒಳ್ಳೆಯ ರೀತಿಯಲ್ಲಿ ಬಳಸುವ ಪ್ರಯತ್ನ ಮಾಡುವುದು, ಉದಾಹರಣೆಗೆ ಚಿತ್ರಗಳ ಬಗ್ಗೆ ಮತ್ತು ಪುಸ್ತಕಗಳ ಬಗ್ಗೆ ನನಗೆ ಹೊಟ್ಟೆ ಹಸಿವಿಗಿಂತಲೂ, ಅದಮ್ಯವಾದ ಹಸಿವು. ಅದನ್ನೂ ತಣಿಸಿಕೊಳ್ಳುವುದು, ಊಟದಿಂದ ಹೊಟ್ಟೆ ತುಂಬಿಸಿಕೊಳ್ಳುವಷ್ಟೆ ಮುಖ್ಯವಾಗಿದೆ. ಬಹುಶಃ ಇದೆಲ್ಲ ನಿನಗೆ ಅರ್ಥ ಆಗುತ್ತೆ ಅಂದುಕೊಂಡಿದ್ದೇನೆ."

"ನನಗೆ ಅರ್ಥ ಆಗುತ್ತೆ ವಿನ್ಸೆಂಟ್. ಕಲಾಕೃತಿಗಳನ್ನು ಗಮನಿಸೋದು, ಪುಸ್ತಕ ಓದೋದು ನಿನ್ನ ಈ ವಯಸ್ಸಿಗೆ ಒಂದು ರೀತಿಯ ಡೈವರ್ಷನ್. ಜೀವನದ ಮುಖ್ಯ ಗುರಿಗೂ ಅದಕ್ಕೂ ಏನೂ ಸಂಬಂಧವಿಲ್ಲ. ಈಗ ಹೆಚ್ಚು ಕಡಿಮೆ ಐದು ವರ್ಷಗಳಿಂದ ಯಾವುದೇ ಉದ್ಯೋಗ ಇಲ್ಲದೆ ಸುಮ್ಮನೆ, ಅಲ್ಲಿ ಇಲ್ಲಿ ಅಲೀತಾ ಇದ್ದೀಯ. ಆ ಅವಧಿಯಲ್ಲಿ ನೀನು ಏನಾಗಿದ್ದೀಯ. ಕೆಳಕ್ಕೆ, ಕೆಳಕ್ಕೆ ಕುಸಿಯುತ್ತಾ, ವಿನಾಶದ ಕಡೆಗೆ ಸಾಗುತ್ತಿದ್ದೀ."

ವಿನ್ಸೆಂಟ್ ಸ್ವಲ್ಪ ಟೊಬ್ಯಾಕೋನ ಅಂಗೈ ಮೇಲೆ ಇರಿಸಿಕೊಂಡು ಎರಡೂ ಅಂಗೈಗಳಿಂದ ಅದನ್ನು ಮೆತ್ತಗೆ ಮಾಡಿ ಪೈಪ್‌ನ್ನು ತುಂಬಿದ. ಆದರೆ ಅದನ್ನು ಹಚ್ಚುವುದನ್ನು ಮರೆತ.

"ನಿಜ..... ಯಾವಾಗಲೋ ಒಮ್ಮೊಮ್ಮೆ ನಾನೇ ಸಂಪಾದನೆ ಮಾಡಿ ಹೊಟ್ಟೆ ತುಂಬಿಸಿಕೊಂಡೆ. ಒಂದೊಂದು ಸಲ ಯಾರದೋ ದಯಾಭಿಕ್ಷೆ ಹೊಟ್ಟೆ ತುಂಬಿಸಿತು. ಎಷ್ಟೋ ಜನರ ಭರವಸೆಯನ್ನು ಸುಳ್ಳು ಮಾಡಿದೆ. ನನ್ನ ಆರ್ಥಿಕ ಸ್ಥಿತಿಯಂತೂ ಭಯಂಕರವಾಗಿತ್ತು, ನನಗೆ ಭವಿಷ್ಯವಂತೂ ಇದೆ ಇಲ್ಲ ಅನ್ನೋದೇ ತಿಳಿಯದಷ್ಟು ಅಸ್ಪಷ್ಟವಾಗಿದೆ. – ಇದೆಲ್ಲ ನಿಜ.... ಆದರೆ ಇಷ್ಟರಿಂದಲೇ ನಾನು ಹಾಳಾದೆ ಎಂದು ತೀರ್ಮಾನಿಸಬಹುದೇ? ನಾನು ಆರಿಸಿಕೊಂಡ ಹಾದಿಯಲ್ಲಿ ನಾನು ಮುಂದುವರೆಯಲೇಬೇಕು

ಥಿಯೋ. ನಾನು ಓದದೆ ಇದ್ದರೆ, ಹುಡುಕಾಟದಲ್ಲಿ ಮುಂದುವರೆಯದಿದ್ದರೆ, ನನ್ನದು ಮುಗಿದ ಕತೆಯಾಗುತ್ತದೆ."

"ಸರಿ ಮಹಾನುಭಾವ. ನೀನು ಏನು ಹೇಳಬೇಕೆಂದು ಪ್ರಯತ್ನಿಸುತ್ತಿದ್ದೀಯ, ಅದನ್ನು ತಿಳಿದುಕೊಳ್ಳುವ ಶಕ್ತಿಯನ್ನು ದೇವರು ನನಗೆ ಕೊಟ್ಟಿದ್ದಾನೆ."

ವಿನ್ಸೆಂಟ್, ಬೆಂಕಿಕಡ್ಡಿ ಗೀರಿ, ಪೈಪ್ ಹಚ್ಚಿ, ಕಡ್ಡಿಯ ಜ್ವಾಲೆಯಲ್ಲಿ ಕಣ್ಣಿಟ್ಟು ಧೂಮಪಾನ ಮಾಡಲು ತೊಡಗಿದ.

"ನನಗೆ ಇನ್ನೂ ನೆನಪಿದೆ. ನಾವಿಬ್ಬರೂ ರಿಸ್‌ವಿಕ್‌ನ ಹಳೆ ಮಿಲ್ಲಿನ ಬಳಿ ಒಟ್ಟಿಗೆ ಓಡಾಡುತ್ತಿದ್ದಾಗ, ನಮ್ಮಿಬ್ಬರ ಮನಸ್ಸೂ ಒಂದೇ ಆಗಿತ್ತು. ಎಲ್ಲದರಲ್ಲೂ ನಮ್ಮ ಅಭಿಪ್ರಾಯ ಒಂದೇ ಆಗಿತ್ತು."

"ಆದರೆ ವಿನ್ಸೆಂಟ್ ನೀನು ಬಹಳ ಬದಲಾಗಿ ಬಿಟ್ಟಿದ್ದೀ"

"ಇಲ್ಲ. ನಾನು ಬದಲಾಗಿದ್ದೀನಿ ಅನ್ನೋದು ಸುಳ್ಳು. ಆಗ ನನ್ನ ಜೀವನದಲ್ಲಿ ಅಷ್ಟೊಂದು ಕಷ್ಟ ಇರಲಿಲ್ಲ. ಆದರೆ ನನ್ನ ಆಲೋಚನೆ, ನನ್ನ ದೃಷ್ಟಿಕೋನ ಯಾವರೀತಿಯಿಂದಲೂ ಬದಲಾಗಿಲ್ಲ."

"ನಿನಗೋಸ್ಕರ ನೀನು ಹೇಳೋದನ್ನು ನಂಬುತ್ತೇನೆ."

"ಥಿಯೋ ನಾನು ಎಲ್ಲ ಸುಳ್ಳು ಹೇಳ್ತೀನಿ ಅಂತ ತಿಳ್ಕೋಬೇಡ. ಅಪ್ರಾಮಾಣಿಕತೆಯಲ್ಲೂ ಪ್ರಾಮಾಣಿಕನಾಗಿದ್ದೀನಿ. ಈ ಪ್ರಪಂಚಕ್ಕೆ ಯಾವ ರೀತಿಯಲ್ಲಿ ನನ್ನಿಂದ ಪ್ರಯೋಜನವಾದೀತು ಅನ್ನೋ ವಿಚಾರದಲ್ಲಿ ಮಾತ್ರವೇ ನನಗೆ ಸ್ವಲ್ಪ ಆತಂಕ. ಯಾವುದಾದರೂ ಗುರಿಯನ್ನು ಸಾಧಿಸುವುದಾಗಲೀ, ಒಳ್ಳೆಯದನ್ನು ಮಾಡುವುದಾಗಲಿ ನನ್ನಿಂದ ಸಾಧ್ಯವಿಲ್ಲವೇನು?"

ಥಿಯೋ ಎದ್ದ. ಕಷ್ಟಪಟ್ಟು ಸೀಮೆಎಣ್ಣೆ ದೀಪ ಉರಿಸಿದ. ಒಂದು ಲೋಟ ಹಾಲು ಕಾಯಿಸಿ ವಿನ್ಸೆಂಟ್‌ಗೆ ಕೊಟ್ಟು "ತಗೋ ಈ ಹಾಲು ಕುಡಿ. ನೀನು ಹೆಚ್ಚು ಆಯಾಸ ಪಡೋದು ನನಗೆ ಇಷ್ಟವಿಲ್ಲ" ಎಂದ.

ವಿನ್ಸೆಂಟ್ ಗಟಗಟನೆ, ಗಂಟಲಲ್ಲಿ ಸರಾಗವಾಗಿ ಇಳಿಯದಿದ್ದರೂ ಕುಡಿದು ಮುಗಿಸಿದ. ಮೂತಿಗೆ ಮೆತ್ತಿದ ಕೆನೆಯನ್ನೂ ಒರೆಸಿಕೊಳ್ಳದೆ ಮಾತಿಗೆ ಮೊದಲಿಟ್ಟ.

"ನಮ್ಮ ಒಳಗಿನ ಆಲೋಚನೆಗಳು ಹೊರಗೆ ಕಾಣಿಸುವುದೇನು? ನಮ್ಮೊಳಗೆ ಭಯಂಕರವಾದ ಅಗ್ನಿ ಇರುತ್ತೆ. ಆದರೂ ಯಾರೂ ಬೆಂಕಿಕಾಯಿಸಿಕೊಳ್ಳಲು ನಮ್ಮ ಹತ್ತಿರ ಬರೊಲ್ಲ. ಬಳಿಗೆ ಯಾರಾದರೂ ಸುಳಿದಾಡಿದರೆ, ಅವರಿಗೆ ಚಿಮ್ನಿಯಿಂದ ಹೊರಗೆ ಬರುವ ಹೊಗೆ ಕಾಣಿಸುತ್ತದೆಯೇ ಹೊರತು ಬೆಂಕಿಕಾಣೊಲ್ಲ. ಅದರ ಬಗ್ಗೆ ಯಾರೂ ತಲೆ ಕೆಡಿಸಿಕೊಳ್ಳದೆ ಸುಮ್ಮನೆ ಮುಂದೆ ಸಾಗುತ್ತಾರೆ. ಈಗ ಹೇಳು ಏನು ಮಾಡಬೇಕು. ನಮ್ಮೊಳಗಿನ ಬೆಂಕಿಯನ್ನು ಮತ್ತಷ್ಟು ಪ್ರಜ್ವಲಿಸುವಂತೆ ಮಾಡಬಾರದೇನು? ನಮ್ಮಲ್ಲಿ ನಾವು ಭರವಸೆ ಇರಿಸಿಕೊಳ್ಳಬಾರದೇನು? ನಮ್ಮ ಬಳಿಗೆ ಯಾರಾದರೂ ಬಂದು ಕುಳಿತುಕೊಳ್ಳುವವರೆಗೆ ಸಹನೆಯಿಂದ ಕಾಯಬಾರದೇನು?"

ಥಿಯೋ ಎದ್ದು ಬಂದು. ಅವನ ಪಕ್ಕದಲ್ಲಿ ಕುಳಿತು, "ಈಗತಾನೇ ನನ್ನ ತಲೆಯಲ್ಲಿ ಒಂದು ಚಿತ್ರ ಮೂಡಿ ಬಂತು....... ಅದು ಯಾವುದು ಗೊತ್ತೇನು?" ಎಂದು ಕೇಳಿದ.

"ಇಲ್ಲ"

"ರಿಸ್‌ವಿಕ್ ಬಳಿಯ ಹಳೆ ಮಿಲ್ಲು"

"ಅದು ಸುಂದರವಾದ ಹಳೆ ಮಿಲ್ಲಾಗಿತ್ತು ಅಲ್ವಾ?"

"ಹೌದು."

"ನಮ್ಮ ಬಾಲ್ಯ ಕೂಡ ಚೆನ್ನಾಗಿತ್ತು ಅಲ್ವಾ?"

"ನನ್ನ ಬಾಲ್ಯವನ್ನು ಎಷ್ಟೊಂದು ಮಧುರವಾಗಿಸಿದೆ ಗೊತ್ತಾ ವಿನ್ಸೆಂಟ್? ನನ್ನ ನೆನಪುಗಳಲ್ಲಿ ನೀನೇ ಮೊದಲು ಬರುತ್ತೀ."

ಒಂದು ಸುದೀರ್ಘ ಮೌನ ಕವಿದಿತ್ತು.

"ವಿನ್ಸೆಂಟ್ ನಿನ್ನ ಬಗ್ಗೆ ನಾನು ಹೇಳಿದ್ದು, ದೂಷಿಸಿದ್ದು, ನನ್ನಿಂದ ಬಂದುದಲ್ಲ, ಅದು ಮನೆಯವರಿಂದ. ಇಲ್ಲಿಗೆ ಬರೋದಕ್ಕೆ ಒತ್ತಾಯ ಮಾಡಿದ್ದು ಮನೆಯವರೇ ಏನಾದರೂ ಬುದ್ಧಿ ಹೇಳಿ ನಿನ್ನನ್ನು ಕರೆತಂದು ಯಾವುದಾದರೂ ಉದ್ಯೋಗದಲ್ಲಿ ಇರುವಂತೆ ಹೇಳಲು, ಹೇಳಿಕಳಿಸಿದ್ದೂ ಅವರೇ."

"ಪರವಾಗಿಲ್ಲ ಥಿಯೋ. ಅವರು ಹೇಳಿದ್ದರಲ್ಲಿ ಯಾವುದೂ ಸುಳ್ಳಲ್ಲ. ಅವರಿಗೆ ನನ್ನ ಆಲೋಚನೆಗಳು, ಉದ್ದೇಶಗಳು ಗೊತ್ತಾಗಿಲ್ಲ. ಅವರು ನನ್ನ ವರ್ತಮಾನವನ್ನು ನೋಡಿ ನನ್ನ ಬಗ್ಗೆ ಮಾತಾಡ್ತಿದ್ದಾರೆ. ನಾನು ಜೀವನದಲ್ಲಿ ಸೋತು ಕೆಳಗೆ ಬಿದ್ದರೆ, ನೀನು ಮೇಲೇರಿದ್ದೀಯ. ನನ್ನ ಬಗ್ಗೆ ಸಹಾನುಭೂತಿ ಕಳೆದುಕೊಂಡಿದ್ದರೆ, ನೀನು ಸಹಾನುಭೂತಿಯನ್ನು ಅವರಿಂದ ಗೆದ್ದುಕೊಂಡಿದ್ದೀಯ. ಸಾಕು ನನಗೆ ಅದೇ ಸಂತೋಷ. ನಿಜವಾಗಿಯೂ, ಆತ್ಮಸಾಕ್ಷಿಯಾಗಿಯೂ ಹೇಳುತ್ತಿದ್ದೇನೆ. ಆದರೆ ನನ್ನಲ್ಲಿನ ಸೋಮಾರಿತನ, ನಿಷ್ಪ್ರಯೋಜಕತೆಗಳನ್ನು ನೋಡುವುದನ್ನು ಬಿಟ್ಟು, ನನ್ನಲ್ಲಿ ಬೇರೇನೋ ಇದೆ ಅನ್ನುವುದನ್ನು ಗುರುತಿಸಿದ್ದರೆ ನನಗೆ ಸಂತೋಷ ಆಗ್ತಿತ್ತು."

"ಸರಿ, ಅದೆಲ್ಲ ಮರೆತು ಬಿಡು. ಒಂದು ವರ್ಷದಿಂದ ನಾನು ನಿನಗೆ ಕಾಗದ ಬರೀದೆ ಇದ್ದದ್ದು, ನಿನ್ನ ಬಗ್ಗೆ ಅಸಮಾಧಾನದಿಂದ ಅಲ್ಲ, ಒಂದು ಬಗೆಯ ಮೈಮರೆವಿನಿಂದ ಅಷ್ಟೆ! ನಿನ್ನಲ್ಲಿ ನನಗೆ ನಂಬಿಕೆ ಇದೆ. ಜುಂಡರ್ಟ್ ಗ್ರಾಸ್‌ಲ್ಯಾಂಡ್ಸ್‌ಗಳ ಮೂಲಕ ನಡೆದು ಹೋಗುವಾಗ, ನಿನ್ನ ಕೈಯನ್ನು ಹಿಡಿದಿದ್ದಾಗಿನಿಂದಲೂ ನಿನ್ನ ಬಗ್ಗೆ ಭರವಸೆ, ಅಂತರ್ಗತವಾಗಿತ್ತು. ಈಗಲೂ ನಿನ್ನಲ್ಲಿ ನನಗಿರುವ ನಂಬಿಕೆಯಲ್ಲಿ ಒಂದಿಷ್ಟೂ ಕಡಿಮೆಯಾಗಿಲ್ಲ. ನಿನ್ನ ಬಳಿಯೇ ಇದ್ದು, ನೀನು ಸರಿಯಾದ್ದನ್ನೇ ಮಾಡುತ್ತಿದ್ದೀ ಎಂದ್ದು ತಿಳಿದುಕೊಳ್ಳುವ ಅವಶ್ಯಕತೆ ಇದೆ ನನಗೆ."

"ವಿನ್ಸೆಂಟ್ ಮುಗುಳ್ನಕ್ಕ. ಈ ರೀತಿ ಮಾತಾಡೋದು ನಿನ್ನ ದೊಡ್ಡತನ, ಥಿಯೋ"

ಥಿಯೋ ಥಟ್ಟನೆ ಚುರುಕಾದ.

"ನೋಡು ವಿನ್ಸೆಂಟ್, ಈಗಿಂದೀಗಲೇ ಎಲ್ಲಾ ನಿರ್ಧಾರ ಆಗಿಬಿಡಬೇಕು. ನಿನ್ನ ಈ ಎಲ್ಲಾ ವ್ಯವಹಾರಗಳ ಹಿಂದೆ, ನನಗೆ ಒಂದು ಅನ್ನಿಸ್ತಿದೆ, ಏನನ್ನೋ ಸಾಧಿಸಬೇಕು. ಅದರಿಂದ ನಿನಗೆ ತೃಪ್ತಿ, ಸಂತೋಷ ಸಿಗುತ್ತೆ, ಕಡೆಗೆ ಅದು ನಿನಗೆ ಕೀರ್ತಿಯನ್ನು ತಂದುಕೊಡುತ್ತೆ ಅನ್ನೋ ಭಾವನೆ ಇರಿಸಿಕೊಂಡಿದ್ದೀಯ..... ಸರಿ ಅದೇನೂಂತ ಬಾಯಿ ಬಿಟ್ಟು ಹೇಳು. ಹೋದ ಒಂದೂವರೆ ವರ್ಷದಲ್ಲಿ ಗೂಪಿಲ್ಸ್ ಅಂಡ್ ಕಂಪೆನಿ, ನನ್ನ ಸಂಬಳದಲ್ಲಿ ಸಾಕಷ್ಟು ಬಡ್ತಿ ನೀಡಿದೆ. ನನ್ನ ಹತ್ತಿರ, ನಾನು ಸಾಕಷ್ಟು ಖರ್ಚು ಮಾಡಿಯೂ ಮಿಗುವಷ್ಟು ದುಡ್ಡಿದೆ. ಅದನ್ನು ಏನು ಮಾಡಬೇಕೂಂತಲೂ ಗೊತ್ತಿಲ್ಲ. ನಿನಗೆ ಏನಾದರೂ ಮಾಡುವ ವಿಚಾರ ಇದ್ದರೆ ಹೇಳು. ನಾವಿಬ್ಬರೂ ಪಾರ್ಟನರ್ಸ್ ಆಗಿ ಕೆಲಸ ಮಾಡೋಣ. ನೀನು ನಿನ್ನ ಕಲಾಕೃತಿಗಳನ್ನು ಪೂರೈಸು, ನಾನು ಹಣ ಪೂರೈಸುತ್ತೇನೆ. ನೀನು ಸಂಬಳದ ಮೇಲೆ ನಿಯುಕ್ತನಾದಾಗ, ಬಂಡವಾಳವನ್ನು ಡಿವಿಡೆಂಡ್ ಜೊತೆಗೆ ತೀರಿಸು. ಹೇಳು, ನಿನ್ನ ತಲೇಲಿ ಏನಿದೆ? ತುಂಬಾ ಹಿಂದೆ, ನೀನು ನಿನ್ನ ಜೀವನದಲ್ಲಿ ಏನನ್ನೋ ಮಾಡಬೇಕೂಂತ ಹೇಳಿದ್ದೆ. ಅದೇನೂಂತ ಈಗ ಹೇಳು."

ವಿನ್ಸೆಂಟ್, ಇಷ್ಟು ಹೊತ್ತೂ ಕಿಟಕಿ ಬಳಿ ಕುಳಿತು ಥಿಯೋ ಗಮನಿಸುತ್ತಿದ್ದ ಸ್ಕೆಚ್‌ಗಳ ರಾಶಿಯತ್ತ ನೋಡಿದ. ಅವನ ಮುಖದಲ್ಲಿ ಆಶ್ಚರ್ಯ, ಸಂಭ್ರಮ, ಕುತೂಹಲ, ಏನೋ ಒಂದು ಬಗೆಯ ಹೊಳಹು ಕಾಣಿಸಿದವು. ಸೂರ್ಯನ ಎದುರಲ್ಲಿ ಸೂರ್ಯಕಾಂತಿಯ ಹೂವಿನ ಹಾಗೆ ಅವನ ಮುಖ ಅರಳಿತು.

"ದೇವರೇ, ಇದನ್ನೇ ನಾನು ನನ್ನ ಜೀವನದ ಉದ್ದಕ್ಕೂ ಹೇಳಬೇಕೂಂತ ಪ್ರಯತ್ನಿಸಿದ್ದು, ಆದರೆ ಹೇಳುವುದು ಹೇಗೇಂತ ಗೊತ್ತಿರಲಿಲ್ಲ."

ವಿನ್ಸೆಂಟ್ ಗಮನಿಸುತ್ತಿದ್ದ ಸ್ಕೆಚ್‌ಗಳ ಕಡೆಗೇ, ಥಿಯೋ ಕೂಡಾ ನೋಟ ಹಾಯಿಸಿದ.

"ನಾನೂ ಇದನ್ನೇ ಊಹಿಸಿದ್ದೆ." – ಹೇಳಿದ.

ವಿನ್ಸೆಂಟ್ ಸಂತೋಷಾತಿರೇಕದ ಭಾವಸ್ಥಿತಿಯಲ್ಲಿದ್ದ. ದೀರ್ಘ ನಿದ್ರೆಯಿಂದ ಥಟ್ಟನೆ ಎಚ್ಚತ್ತವನಂತೆ ಕಾಣಿಸಿದ.

"ಥಿಯೋ ನನಗೆ ತಿಳಿಯೋಕೆ ಮುಂಚಿನಿಂದಲೇ ನಿನಗೆ ಗೊತ್ತಿದೆ. ಅದರ ಬಗ್ಗೆ ಯೋಚನೆ ಮಾಡೋಕೇ ನನ್ನನ್ನು ನಾನೇ ಬಿಡಲಿಲ್ಲ. ಯಾಕೇಂದ್ರೆ ಭಯ. ಏನೋ ಮಾಡಬೇಕಾಗಿದೆ ನನಗೆ. ಇದನ್ನೇ ಉದ್ದಕ್ಕೂ ಯೋಚಿಸ್ತಿದ್ದೆ, ಇದೇ ಇರಬಹುದು ಅಂತಲೂ ಅಂದುಕೊಂಡೆ. ಸ್ಕೆಚ್ ಮಾಡ್ಬೇಕೂಂತ ಸಾಯ್ತಿದ್ದೆ. ಆ್ಯಮಸ್ಟರ್ ಡ್ಯಾಂ, ಬ್ರಸೆಲ್ಸ್‌ನಲ್ಲಿದ್ದಾಗ, ನೋಡಿದ್ದನ್ನೆಲ್ಲ ಪೇಪರ್ ಮೇಲೆ ಇಳಿಸಬೇಕೂಂತ ಇದ್ದೆ. ಆದರೆ ನನ್ನ ನಿಜವಾದ ಕೆಲಸಕ್ಕೆ ಅಂದರೆ ವೃತ್ತಿಗೆ ಅಡ್ಡಬರುತ್ತೇಂತ ಆ ಹಂಬಲವನ್ನು ಅದುಮಿಟ್ಟೆ. ನನ್ನ ನಿಜವಾದ ವೃತ್ತಿ ಎಂಥ ವ್ಯಂಗ್ಯ ನಾನು ಕುರುಡಾಗಿದ್ದೆ. ಹೇಳಬೇಕೂಂತ

ಒಳಗೆ ಒತ್ತಡ ಇದ್ದರೂ ಅದನ್ನು ಹೊರಗೆ ಬಿಡಲಿಲ್ಲ. ಹತ್ತಿಕ್ಕಿದೆ; ತುಳಿದಿಟ್ಟೆ, ನಾನೊಬ್ಬ ಮೂರ್ಖ! ಮಹಾ ಮೂರ್ಖ. ಸರಿಯಾಗಿ ನೋಡಲಾಗದ ಕುರುಡನಾಗಿದ್ದೆ."

"ಪರವಾಗಿಲ್ಲ ಬಿಡು. ಈಗಲೂ ತಡವಾಗಿಲ್ಲ. ನಿನ್ನ ಶಕ್ತಿ, ಸಾಮರ್ಥ್ಯ, ಸಂಕಲ್ಪಗಳಿಂದ, ಸಾವಿರಪಟ್ಟು ಹೆಚ್ಚಾಗಿ, ಬೇರೆ ಯಾರಿಗಿಂತಲೂ ಮೀರಿ ಸಾಧಿಸುತ್ತೀ. ನಿನ್ನ ಜೀವನದಲ್ಲಿ ಇನ್ನೂ ಬೇಕಾದಷ್ಟು ಸಮಯ ಇದೆ.

"ಇನ್ನೊಂದು ಹತ್ತು ವರ್ಷ. ಅಷ್ಟು ಹೊತ್ತಿಗೆ ಸಾಕಷ್ಟು ಸಾಧಿಸಿ ತೋರಿಸ್ತೇನೆ."

"ಖಂಡಿತ ನಿನಗೆ ಸಾಧ್ಯವಿದೆ. ನೀನು ಎಲ್ಲಿ ಇರೋದಕ್ಕೆ ಇಷ್ಟ ಪಡ್ತೀಯೋ, ಅಲ್ಲೇ ಇರು. ಪ್ಯಾರಿಸ್, ಲಂಡನ್, ಬ್ರಸೆಲ್ಸ್, ಆ್ಯಮ್‌ಸ್ಟರ್ ಡ್ಯಾಮ್, ದಿ ಹೇಗ್, – ಎಲ್ಲಿಯಾದರೂ ಸರಿ, ನಿನಗೇ ಬಿಡ್ತೀನಿ. ಪ್ರತಿ ತಿಂಗಳೂ ನಿನಗೆ ದುಡ್ಡು ಕಳಿಸುವ ಜವಾಬ್ದಾರಿ ನನಗಿರಲಿ. ಎಷ್ಟು ವರ್ಷಗಳಾದರೂ ಆಗಲಿ. ನೀನು ಭರವಸೆ ಕಳೆದುಕೊಳ್ಳದಿದ್ದರೆ, ನಾನೂ ಕಳೆದುಕೊಳ್ಳೊಲ್ಲ."

"ಥಿಯೋ ಈಗೊಂದಷ್ಟು ತಿಂಗಳಿಂದ ನನ್ನ ಜೀವನದ ಗುರಿ ಕಂಡು ಕೊಳ್ಳೋಕೆ ತಿಣುಕಾಡುತ್ತಿದ್ದೆ. ಆದರೂ ಗೊತ್ತಾಗಿರಲಿಲ್ಲ. ಈಗ ನನ್ನ ಗುರಿ ನನ್ನ ಮುಂದಿದೆ. ಅದೇನೆಂದೂ ನನಗೆ ಗೊತ್ತಾಗಿದೆ. ಮತ್ತೆಂದೂ ಹೆದರಿ ಹಿಂದಕ್ಕೆ ಹೋಗೋದಿಲ್ಲ. ಥಿಯೋ ಇದರ ಅರ್ಥ ಗೊತ್ತೇ? ವ್ಯರ್ಥವಾಗಿ ಇಷ್ಟು ವರ್ಷ ಕಳೆದ ಮೇಲೆ ಈಗ ನನ್ನನ್ನು ಕಂಡುಕೊಂಡಿದ್ದೇನೆ. ನನ್ನಲ್ಲಿನ ಕಲಾವಿದನನ್ನು ಗುರುತಿಸಿಕೊಂಡಿದ್ದೇನೆ. ನಾನೊಬ್ಬ ಕಲಾವಿದನಾಗುತ್ತೇನೆ. ಖಂಡಿತ ಆಗುತ್ತೇನೆ; ಆಗಲೇ ಬೇಕಾಗಿದೆ ಕೂಡಾ! ಅದಕ್ಕೆ ನಾನು ಏನೇನು ಮಾಡಿದರೂ ಅವುಗಳಲ್ಲಿ ಸೋಲನ್ನೇ ಅನುಭವಿಸಿದೆ. ಅವೆಲ್ಲ ನನಗಾಗಿ ಮಾಡಿದ ಕೆಲಸಗಳಲ್ಲ. ಈಗ ನಾನು ಕಂಡುಕೊಂಡ ನನ್ನ ಗುರಿಯನ್ನು ಸಾಧಿಸುವಲ್ಲಿ, ಸೋಲೇಂಬುದೇ ಇರುವುದಿಲ್ಲ. ಥಿಯೋ ಈಗ ನಾನು ಸೆರೆಯ ಬಂಧನದಿಂದ ಬಿಡುಗಡೆಗೊಂಡಿದ್ದೇನೆ. ಸೆರೆಮನೆಯ ಬಾಗಿಲು ತೆಗೆದವನೇ ನೀನು!! ನೀನೇ ಥಿಯೋ!!!"

"ಯವುದೂ ನಮ್ಮನ್ನು ಬೇರೆ ಮಾಡೋಕೆ ಆಗುವುದಿಲ್ಲ. ಯಾವಾಗಲೂ ನಾವಿಬ್ಬರೂ ಒಂದೇ. ಏನಂತೀಯ ವಿನ್ಸೆಂಟ್!"

"ಹೌದು ಥಿಯೋ. ಜೀವನ ಪರ್ಯಂತ!"

"ಸರಿ, ಈಗ, ವಿಶ್ರಾಂತಿ ತಗೋ. ಬೇಗ ಚೇತರಿಸಿಕೋ, ಪ್ಯಾರಿಸ್ಸೋ, ಹಾಲೆಂಡೋ, ನೀನು ಎಲ್ಲಿಗೆ ಹೇಳಿದರೆ ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ."

ವಿನ್ಸೆಂಟ್ ಅರೆಕ್ಷಣದಲ್ಲಿಯೇ, ಆವೇಶ ಬಂದವನಂತೆ ಹಾಸಿಗೆಯಿಂದ ಜಿಗಿದೆದ್ದ.

"ಕೆಲವು ದಿವಸದ ನಂತರ ಅಲ್ಲ. ಈಗ, ಈ ಕೂಡಲೇ ಹೊರಡೋಣ. ಒಂಬತ್ತು ಗಂಟೆಗೆ, ಬ್ರಸೆಲ್ಸ್‌ಗೆ ಒಂದು ಟ್ರೈನಿದೆ." –ಎಂದ.

ದೈತ್ಯಶಕ್ತಿಯನ್ನು ಆವಾಹಿಸಿಕೊಂಡವನಂತೆ ಗಬಗಬನೆ ಎದ್ದು ತನ್ನ ಬಟ್ಟೆ ಬರೆಗಳೆಲ್ಲವನ್ನೂ ತೆಗೆದಿಟ್ಟುಕೊಂಡ.

"ವಿನ್ಸೆಂಟ್, ಇವತ್ತು ರಾತ್ರಿ ಪ್ರಯಾಣ ಮಾಡುವಷ್ಟು ಶಕ್ತಿ ಇಲ್ಲ ನಿನಗೆ. ನಿನ್ನ ಆರೋಗ್ಯ ಸರಿ ಇಲ್ಲ.'

"ಇಲ್ಲ ಆಗುತ್ತೆ. ಅದೆಲ್ಲ ಹಳೆ ಕತೆ! ಈಗ ನನ್ನಲ್ಲಿ ತುಂಬಿರುವಷ್ಟು ಬಲ ಹಿಂದೆಂದೂ ಇರಲಿಲ್ಲ. ನಡಿ ಥಿಯೋ. ತಡಮಾಡಬೇಡ. ಕೇವಲ ಹತ್ತು ನಿಮಿಷ ಮಾತ್ರ ಇದೆ. ಆ ಬಿಳಿ ಹಾಸುಗಳನ್ನು ಬ್ಯಾಗ್‌ನಲ್ಲಿ ತುರುಕಿಕೊಂಡು ಹೊರಡು. ಆದಷ್ಟು ಬೇಗ ಸ್ಟೇಷನ್ ತಲುಪಬೇಕು."

□□

## ಭಾಗ – ಎರಡು

# ಎಂದಿಗೂ ಸಾಧ್ಯವಿಲ್ಲ; ಎಂದೆಂದಿಗೂ ಇಲ್ಲ!

–೧–

ಥಿಯೋ ಮತ್ತು ವಿನ್ಸೆಂಟ್, ಇಬ್ಬರೂ ಬ್ರಸೆಲ್ಸ್‌ನಲ್ಲಿ ಒಂದು ದಿನ ಒಟ್ಟಿಗೆ ಕಳೆದರು. ಥಿಯೋ ಅಲ್ಲಿಂದ ಪ್ಯಾರಿಸ್‌ಗೆ ಹೋದ. ವಿನ್ಸೆಂಟ್ ಒರಟಾದ ಮತ್ತು ಕೆಲಸದವರು ಧರಿಸುವ ಮಾದರಿಯ ಉಡುಪು ಮತ್ತು ಸ್ಕೆಚ್ ಮಾಡಲು ಬೇಕಾದ ಪೇಪರ್ ಕೊಂಡ. ಅಲ್ಲಿಂದ ನೇರವಾಗಿ, ಟ್ರೈನ್ ಹಿಡಿದು ಎಟ್ಟೆನ್ ತಲುಪಿದ.

ವಿನ್ಸೆಂಟ್ ಆಯ್ದುಕೊಂಡ ಬದುಕು, ಅವನಿಗೆ ಸಂತೋಷ ಕೊಡುವುದಕ್ಕಿಂತ ಹೆಚ್ಚು ನೋವು ಕೊಡುತ್ತೆ ಅನ್ನೋ ಕಾರಣಕ್ಕಾಗಿ, ಅನ್ನಾಕಾರ್ನೆಲಿಯಾ ಅದನ್ನು ಸಮ್ಮತಿಸಿರಲಿಲ್ಲ. ಥಿಯೋ ಡೋರಸ್ ಒಂದು ಉದ್ದೇಶದ ಹಿನ್ನೆಲೆಯಿಂದ, ಅಂಥಾ ಆಯ್ಕೆ ಬೇಡವೆಂದಿದ್ದ, ವಿನ್ಸೆಂಟ್ ಬೇರೆಯಾರದೋ ಮಗನಾಗಿದ್ದರೆ, ಅಷ್ಟೊಂದು ಯೋಚನೆ ಮಾಡಬೇಕಾಗಿರಲಿಲ್ಲ. ದೇವರಿಗೂ ಬಹುಶಃ ವಿನ್ಸೆಂಟ್‌ನ ದರಿದ್ರ ಬದುಕಿನ ರೀತಿ ಒಪ್ಪಿತವಾಗಿರಲಾರದು.

ವಿನ್ಸೆಂಟ್ ತಂದೆ ತಾಯಿಯರಲ್ಲಿ ಆದ ಬದಲಾವಣೆಯನ್ನು ಗಮನಿಸಿದ. ತಂದೆಯಲ್ಲಿ ವಯಸ್ಸಾಗಿರುವ ಲಕ್ಷಣಗಳು ಎದ್ದು ಕಾಣುತ್ತಿದ್ದವು. ತಂದೆಯ ಕೂದಲು ಬೆಳ್ಳಗಾಗಿತ್ತು. ಕಣ್ಣು ರೆಪ್ಪೆಗಳು ಜೋತಿದ್ದವು. ವಯಸ್ಸಿನ ವಿಕಾರವನ್ನು ತಪ್ಪಿಸಲು ಕ್ಲೀನಾಗಿ ಗಡ್ಡಮೀಸೆಗಳನ್ನು ತೆಗೆದು ಬಿಟ್ಟಿದ್ದ. ತಾಯಿ ಮಾತ್ರ ಮೊದಲಿಗಿಂತ ಚೆನ್ನಾಗಿ, ಉತ್ಸಾಹಶೀಲಳಾಗಿ ಕಾಣಿಸುತ್ತಿದ್ದಳು. ಮೊಗದಲ್ಲಿ ದಯಾರ್ದ್ರತೆ ಕಾಣಿಸುತ್ತಿತ್ತು.

ವಿನ್ಸೆಂಟ್‌ನನ್ನು ಮೊದಲಿನಂತೆ ಆರೋಗ್ಯವಂತನನ್ನಾಗಿ ಮಾಡಲು, ಪೌಷ್ಟಿಕವಾದ ಆಹಾರ, ಹಣ್ಣು ಹಂಪಲುಗಳನ್ನು ಉಣಿಸಿದರು. ಅವನ ಆರೈಕೆ ಮಾಡುವಲ್ಲಿ, ಕಾಳಜಿ ತೋರುವಲ್ಲಿ, ಅವನು ಕೆಲಸಕ್ಕೆ ಬಾರದವನೆಂಬ ಭಾವನೆಯಾಗಲೀ, ಕಾಸಿಲ್ಲದ ನಿರ್ಗತಿಕನೆಂಬ ತಾತ್ಸಾರವಾಗಲೀ ಇರಲಿಲ್ಲ. ಅವನು ಕೇವಲ ತಮ್ಮ ಪ್ರೀತಿಯ ಮಗ – ಎಂಬುದಷ್ಟೇ ಮುಖ್ಯವಾಗಿತ್ತು!

ಕುರುಚಲು ಬೆಳೆದಿದ್ದ ಪ್ರದೇಶದಲ್ಲಿ, ಹುಲ್ಲು ಛಾವಣಿಗಳಿಂದ ಕೂಡಿದ್ದ ಗುಡಿಸಲುಗಳಿದ್ದ ಕಡೆಗಳಲ್ಲಿ ಅಡ್ಡಾಡಿದ. ಒಂದು ಕಡೆ, ಕತ್ತರಿಸಿ ಬಿದ್ದಿದ್ದ ಪೈನ್ ಮರದ ತುಂಡನ್ನು ಮರಗೆಲಸದವರು ಕೊಯ್ಯುತ್ತಿದ್ದುದನ್ನು ನೋಡಿದ. ರುಸೆಂಡಾಲ್

ರಸ್ತೆಗಳಿದು, ಎಲ್ಫ್ ಮರಗಳು, ಮಿಲ್ಲು, ಪ್ರಾಟೆಸ್ಟೆಂಟ್ ಧಾನ್ಯಾಗಾರ – ಇತ್ಯಾದಿಗಳಿದ್ದೆಡೆಯಲ್ಲೆಲ್ಲಾ ನಿರಾಳವಾಗಿ ಓಡಾಡಿದ. ಬೋರಿನೇಜ್ ನೆನಪಿನಿಂದ ಮರೆಯಾಯಿತು. ಕಳೆದುಕೊಂಡಿದ್ದ ಆರೋಗ್ಯ ಮರಳಿ ಬಂತು; ಶಕ್ತಿ ಸಂಚಯವಾಯಿತು. ಆದಷ್ಟು ಬೇಗ ತನ್ನ ಕೆಲಸವನ್ನು ಆರಂಭಿಸಲು ಉತ್ಸುಕನಾದ.

ಮಳೆಗಾಲದ ಒಂದು ದಿನ ಅನ್ನಾ ಕಾರ್ನೆಲಿಯಾ ಅಡಿಗೆ ಮನೆ ಕಡೆ ಬಂದಳು. ಆಗಲೇ ಒಲೆ ಉರಿಯುತ್ತಿದ್ದುದು ಕಾಣಿಸಿತು. ವಿನ್ಸೆಂಟ್ ಒಲೆ ಮುಂದೆ ಕಾಲು ಚಾಚಿಕೊಂಡು ಕುಳಿತಿದ್ದ. ಅವನ ಮಡಿಲಲ್ಲಿ, 'Les Heures de la Journey' ಶೀರ್ಷಿಕೆಯ ಅರೆ ಮುಗಿದ ಸ್ಕೆಚ್ ಇತ್ತು.

"ಗುಡ್ ಮಾರ್ನಿಂಗ್ ಮಗು." – ಅವಳು ಉದ್ಗರಿಸಿದಳು.

"ಗುಡ್ ಮಾರ್ನಿಂಗ್ ಅಮ್ಮ." – ಪ್ರೀತಿಯಿಂದ ಅವಳ ಹಣೆಗೆ ಮುತ್ತಿಡುತ್ತ ಹೇಳಿದ.

"ಇಷ್ಟು ಬೆಳಿಗ್ಗೆ ಯಾಕೆ ಎದ್ದೆ ವಿನ್ಸೆಂಟ್?"

"ನನಗೆ ಸ್ವಲ್ಪ ಕೆಲಸ ಮಾಡಬೇಕಿತ್ತು."

"ಕೆಲಸ?"

ಅನ್ನಾ, ಅವನ ತೊಡೆಯ ಮೇಲಿದ್ದ ಸ್ಕೆಚ್ ಅನ್ನು ಗಮನಿಸಿದಳು; ನಂತರ ಸ್ಟೋವ್‌ನತ್ತ ದೃಷ್ಟಿ ಹರಿಸಿದಳು.

"ಅಂದ್ರೆ ಒಲೆ ಉರಿ ಹಾಕಬೇಕೂಂತ ಬಂದೆಯಾ? ಅದಕ್ಕೋಸ್ಕರ ಇಷ್ಟು ಬೇಗ ಎದ್ದು ಬರಬೇಕಿತ್ತಾ?"

"ಕೆಲಸ ಅಂದ್ರೆ ಅದಲ್ಲ. ನನ್ನ ಡ್ರಾಯಿಂಗ್ ಕೆಲಸ."

ಮತ್ತೊಮ್ಮೆ ಅವನ ತೊಡೆ ಮೇಲಿದ್ದ ಸ್ಕೆಚ್ ಗಮನಿಸಿದಳು. ಆಟ ಆಡುವ ಸಮಯದಲ್ಲಿ ಮಕ್ಕಳು ಯಾವುದಾದರೂ ಮ್ಯಾಗ್‌ಜಿನ್ ನೋಡಿ ಅದರಲ್ಲಿನ ಡ್ರಾಯಿಂಗ್ಸ್ ಕಾಪಿ ಮಾಡುತ್ತಿರುವಂತೆ ಅನಿಸಿತು.

"ನೀನು ಡ್ರಾಯಿಂಗ್ಸ್ ಮಾಡುವ ಕೆಲಸಕ್ಕೆ ಹೊರಟಿದ್ದೀಯ, ವಿನ್ಸೆಂಟ್?"

"ಹೌದು"

ವಿನ್ಸೆಂಟ್ ತನ್ನ ನಿರ್ಧಾರ, ಥಿಯೋ, ತನಗೆ ಸಹಾಯ ಮಾಡಲು ಒಪ್ಪಿದ ವಿಷಯ ಎಲ್ಲವನ್ನೂ ವಿವರಿಸಿ ಹೇಳಿದ. ತಾಯಿ, ಅವನ ನಿರೀಕ್ಷೆಗಿಂತ ಭಿನ್ನವಾಗಿ, ತುಂಬ ಖುಷಿ ಪಟ್ಟಂತೆ ಕಾಣಿಸಿದಳು. ಕೂಡಲೇ ವಾಸದ ಕೋಣೆ ಕಡೆ ಹೋಗಿ, ಒಂದು ಲೆಟರ್ ಹಿಡಿದುಕೊಂಡು ಬಂದಳು.

"ನಮ್ಮ ದಾಯಾದಿ, ಆಂಟನ್ ಮಾವ್, ಒಬ್ಬ ಪೈಂಟರ್. ಚೆನ್ನಾಗಿ ದುಡ್ಡು ಮಾಡಿಕೊಳ್ತಿದ್ದಾನೆ, ಮೊನ್ನೆ ತಾನೇ ನನ್ನ ಸೋದರಿಯಿಂದ ಈ ಲೆಟರ್ ಬಂತು ಅವಳ ಮಗಳು ಜೆಟ್‌ಳನ್ನು ಆ್ಯಂಟನ್ ಮದುವೆಯಾಗಿದ್ದಾನೆ. ಗೂಪಿಲ್ಸ್ ಅಂಡ್ ಕಂಪೆನಿಯ ಟೆರ್ಸ್‌ಟೀಗ್, ಆ್ಯಂಟನ್‌ನ ಕಲಾಕೃತಿಗಳಿಗೆ ಬಹಳ ಬೇಡಿಕೆಯಿದೆ,

ಒಂದೊಂದು ಕೃತಿಗೆ ಏನಿಲ್ಲವೆಂದರೂ ಐನೂರು ಅಥವಾ ಆರುನೂರು ಗಿಲ್ಡರ್ಸ್‌ಗಳ ಬೆಲೆ ಬರುತ್ತೇಂತ ಬರೆದಿದ್ದನಂತೆ!"

"ಹೌದು ಮಾವ್ ಇತ್ತೀಚಿನ ಚಿತ್ರಕಾರರಲ್ಲಿ ಬಹಳ ಪ್ರಸಿದ್ಧಿಗೆ ಬರ್‍ತಿದ್ದಾನೆ."

"ಅಂಥಾ ಪಿಕ್ಚರ್ಸ್ ಮಾಡಬೇಕಾದರೆ, ಎಷ್ಟು ದಿನ ಬೇಕಾಗಬಹುದು ವಿನ್ಸೆಂಟ್?"

"ಅದು ಹೇಳೋಕಾಗೊಲ್ಲ. ಕೆಲವಕ್ಕೆ ಕೆಲವೇ ದಿನ ಸಾಕು. ಮತ್ತೆ ಕೆಲವಕ್ಕೆ ವರ್ಷಗಳೇ ಬೇಕಾಗಬಹುದು."

"ಓಹ್ ಕೆಲವು ವರ್ಷಗಳೇ! ಅಬ್ಬಾ!"

ಅನ್ನಾ ಕಾರ್ನೆಲಿಯ ಒಂದು ಕ್ಷಣ ಯೋಚಿಸಿ ಕೇಳಿದಳು. – "ಜನರ ಚಿತ್ರಗಳನ್ನು, ಅವರು ಇರುವ ಹಾಗೇ ಬರೆಯ ಬಲ್ಲೆಯಾ ವಿನ್ಸೆಂಟ್?"

"ಅದು ನನಗೆ ಗೊತ್ತಿಲ್ಲ, ಆದರೆ ಮಾಹಡಿ ಮೇಲೆ ಕೆಲವು ಸ್ಕೆಚ್‌ಗಳನ್ನು ಇರಿಸಿದ್ದೇನೆ, ತೋರಿಸ್ತೇನೆ ನಿನಗೆ."

ಹೋಗಿ ಸ್ಕೆಚ್‌ಗಳನ್ನು ತಂದ. ತಾಯಿ ಕಿಚನ್ ಕ್ಯಾಪ್ ಹಾಕಿಕೊಂಡು, ಒಲೆ ಮೇಲೆ ಕೆಟಲ್ ಇರಿಸುತ್ತಿದ್ದಳು. ಅಡಿಗೆ ಮನೆಯಲ್ಲಿನ ನೀಲಿ ಮತ್ತು ಬಿಳಿಯ ಟೈಲ್ಸ್ ಆ ಪರಿಸರಕ್ಕೆ ಒಂದು ರೀತಿಯ ಕಳೆ ತಂದಿತ್ತು.

"ನಿನಗೆ ಇಷ್ಟವಾದ ಚೀಸ್ ಮಾಡ್ತಿದ್ದೇನೆ.... ನಿನಗೆ ನೆನಪಿದೆಯೇನು?" – ಅನ್ನಾ ಕಾರ್ನೆಲಿಯಾ ವಿಚಾರಿಸಿದಳು.

"ನೆನಪಿದೆ ಅಮ್ಮ! ನೆನಪಿದೆ!"

– ಎನ್ನುತ್ತ ತಾಯಿಯನ್ನು ತಬ್ಬಿ ಹಿಡಿದ. ಗೆಲುವಿನಿಂದ ಮುಗುಳ್ನಗೆ ಸೂಸಿ ಅವನ ಕಡೆ ನೋಡಿದಳು. ವಿನ್ಸೆಂಟ್ ಅವಳ ಹಿರಿಯ ಮಗ. ಪ್ರೀತಿಯ ಮಗ. ಅವನ ಕಷ್ಟ, ಸಂಕಟಗಳು ಮಾತ್ರ ಅವಳನ್ನು ಬಾಧಿಸುತ್ತಿದ್ದವು.

"ಅಮ್ಮನ ಜೊತೆ ಮನೇಲಿ ಇರೋದು, ಚೆನ್ನಾಗಿದೆ ಅನ್ನಿಸುತ್ತೆ ಅಲ್ವೆ?" ಕೇಳಿದಳು.

"ಹೌದು. ನನ್ನ ಪ್ರೀತಿಯ ಅಮ್ಮ!"

– ನಗುತ್ತ ಉತ್ತರಿಸಿದ.

ಬೊರೇನ್‌ರ ಸ್ಕೆಚ್‌ಗಳನ್ನು ಗಂಭೀರವಾಗಿ ಗಮನಿಸಿದಳು.

"ವಿನ್ಸೆಂಟ್, ಇವರ ಮುಖಗಳಿಗೆ ಏನಾಗಿದೆ?"

"ಏನೂ ಆಗಿಲ್ಲ, ಯಾಕೆ?"

"ಇವರಿಗೆ ಮುಖಗಳೇ ಇಲ್ಲ!"

"ಹೌದು. ನನಗೆ ಗೊತ್ತಿದೆ. ನನಗೆ ಆಕೃತಿಗಳು ಮಾತ್ರ ಬೇಕಿತ್ತು."

"ನೀನು ಮುಖಗಳನ್ನೂ ಬರೆಯಬಲ್ಲೆ – ಅಲ್ವಾ? ಎಟ್ಟೆನ್‌ನ ಹೆಂಗಸರು ಎಷ್ಟೊಂದು ಜನ ತಮ್ಮ ಚಿತ್ರಗಳನ್ನು ಬರೆಸಿಕೊಳ್ಳೋಕೆ, ಖಂಡಿತಾ ಇಷ್ಟಪಡ್ತಾರೆ ಅಂತ ನನಗೆ ಅನ್ಸತ್ತೆ. ಹಾಗೇನಾದರೂ ಆದಲ್ಲಿ, ಸಂಪಾದನೆಯೂ ಸುಲಭವಾಗುತ್ತೆ."

"ನನಗೂ ಹಾಗೇ ಅನ್ಸತ್ತೆ. ಆದರೆ ನಾನು ಚೆನ್ನಾಗಿ ಸ್ಕೆಚ್ ಮಾಡೋದನ್ನ ಕಲೀಬೇಕಾಗುತ್ತೆ."

ಅವನ ತಾಯಿ ಮೊಟ್ಟೆಗಳನ್ನು ಒಡೆದು ಹೆಂಚಿನ ಮೇಲೆ ಹಾಕುತ್ತಿದ್ದಳು. ಹಾಕಿ ಮುಗಿಸಿದ ಮೇಲೆ ಕೈಗಳಲ್ಲಿ ಮೊಟ್ಟೆಯ ಷೆಲ್‌ಗಳನ್ನು ಹಿಡಿದು ಒಲೆಯಿಂದ ದೂರ ಬಂದು ನಿಂತಳು.

"ಅಂದ್ರೆ, ಡ್ರಾಯಿಂಗ್ ಚೆನ್ನಾಗಿ ಕಲಿತರೆ, ಚಿತ್ರಗಳು ಚೆನ್ನಾಗಿ ಮೂಡಿದಾಗ, ಮಾರಾಟದಲ್ಲಿ ಒಳ್ಳೆ ಬೆಲೆ ಸಿಗುತ್ತೆ, ಹೌದಲ್ಲ!"

"ನಾನು ನನ್ನ ಡ್ರಾಯಿಂಗ್ಸ್ ಸರಿಯಾಗಿ ಮಾಡಬೇಕು. ಆಗ ನನ್ನ ಡ್ರಾಯಿಂಗ್ಸ್ ಸರಿಯಾಗಿರುತ್ತೆ."

"ಅದೇನೋ ಮಗ. ನೀನು ಹೇಳೋದು, ನನಗೊಂದೂ ಸರಿಯಾಗಿ ಅರ್ಥ ಆಗೊಲ್ಲ."

"ನನಗೂ ಹಾಗೇ..... ಇರಲಿ."

ಊಟ ಮಾಡ್ತಿರುವಾಗ, ಅನ್ನಾ ವಿನ್ಸೆಂಟ್‌ನ ವಿಚಾರವನ್ನು ತಿಳಿಸಿದಳು. ಗಂಡ ಹೆಂಡತಿ ಇಬ್ಬರೂ ಏಕಾಂತದಲ್ಲಿದ್ದಾಗ ಎಷ್ಟೋ ಸಲ ವಿನ್ಸೆಂಟ್ ಬಗ್ಗೆ ಚರ್ಚೆ ಮಾಡುತ್ತಿದ್ದರು.

"ವಿನ್ಸೆಂಟ್, ಅದಕ್ಕೆ ಒಳ್ಳೆ ಭವಿಷ್ಯ ಇದೆಯೇನು?... ನಿನ್ನ ಜೀವನಕ್ಕೆ ಆಧಾರವಾಗುತ್ತೇನು?" – ವಿನ್ಸೆಂಟ್‌ನ ತಂದೆ ಕೇಳಿದ.

"ಪ್ರಾರಂಭದಲ್ಲಿ ಸಾಧ್ಯ ಆಗದೆ ಇರಬಹುದು. ನನ್ನ ಕಾಲ ಮೇಲೆ ನಾನು ನಿಲ್ಲುವವರೆಗೆ, ಥಿಯೋ ನನಗೆ ಸಹಾಯ ಮಾಡ್ತಾನೆ. ನನ್ನ ಡ್ರಾಯಿಂಗ್ಸ್ ಪರಿಪೂರ್ಣತೆ ಪಡೆದಾಗ ದುಡ್ಡು ಸಂಪಾದನೆ ಸಾಧ್ಯವಾಗುತ್ತೆ. ಲಂಡನ್ ಮತ್ತು ಪ್ಯಾರಿಸ್‌ನಲ್ಲಿ ಒಬ್ಬೊಬ್ಬ ಡ್ರಾಫ್ಟ್ಸ್‌ಮನ್‌ಗೆ, ದಿನಕ್ಕೆ ಏನಿಲ್ಲವೆಂದರೂ ಹದಿನೈದು ಫ್ರ್ಯಾಂಕ್ ಕೊಡ್ತಾರೆ. ಅಲ್ಲದೆ ಮ್ಯಾಗ್‌ಜೀನ್‌ನಲ್ಲಿ ಇಲ್ಲಸ್ಟ್ರೇಷನ್ಸ್ ಮಾಡಿಕೊಟ್ಟರೂ ಚೆನ್ನಾಗಿ ದುಡ್ಡು ಕೊಡ್ತಾರೆ."

ಥಿಯೋಡೋರಸ್‌ಗೆ ಈಗ ಸ್ವಲ್ಪ ನಿರಾಳವೆನಿಸಿತು. ವಿನ್ಸೆಂಟ್, ಮೊದಲಿನ ಥರ ಸಮಯ ಹಾಳು ಮಾಡದೆ ಈಗ ಏನೋ ಒಂದನ್ನು ಮಾಡೋದಕ್ಕೆ ಹೊರಟಿದ್ದಾನೆ. ಅಷ್ಟೇ ಸಾಕು. – ಎಂದುಕೊಂಡ.

"ವಿನ್ಸೆಂಟ್, ಈಗ ಇದನ್ನು ಮಾಡ್ಬೇಕೂಂಥ ತೀರ್ಮಾನ ತಗೊಂಡಿದ್ದೀಯ. ಮತ್ತೆ ಅದೂ ಇದೂಂತ ಮನಸ್ಸು ಬದಲಾಯಿಸೋದಿಲ್ಲಾಂತ ಭರವಸೆ ಇಟ್ಟುಕೊಳ್ಳಬಹುದಲ್ಲ."

"ಹೂಂ!. ಇದೇ ನನ್ನ ಕಡೆಯ ತೀರ್ಮಾನ. ಮತ್ತೆಂದೂ ಬದಲಾಯಿಸುವ ಪ್ರಮೇಯವೇ ಇಲ್ಲ!"

-೨-

ಸ್ವಲ್ಪ ದಿನ ಕಳೆದ ಮೇಲೆ ಮಳೆ ನಿಂತಿತು. ಈಗ ತಾನೇ ಬಿಸಿಲು ಕಾಣಿಸಿಕೊಳ್ಳುತ್ತಿತ್ತು. ವಿನ್ಸೆಂಟ್ ತನ್ನ ಡ್ರಾಯಿಂಗ್‌ಗೆ ಬೇಕಾದ ವಸ್ತುಗಳನ್ನು ಮತ್ತು ಈಸಲ್ ಸ್ಟ್ಯಾಂಡನ್ನು ತೆಗೆದುಕೊಂಡು ಊರಿನ ಹೊರವಲಯದತ್ತ ಹೊರಟ. ಅವನಿಗೆ ಸೆಪ್ಪ್ ಬಳಿಯ ಕುರುಚಲು ಪ್ರದೇಶ, ಪ್ಯಾಸಿವಾರ್ಪ್ ಬಳಿಯ ಜೌಗು ಪ್ರದೇಶಗಳಲ್ಲಿ ಕೆಲಸ ಮಾಡುವುದರಲ್ಲಿ ತುಂಬಾ ಆಸಕ್ತಿ. 'ವಾಟರ್ ಲಿಲ್ಲೀ'ಗಳ ಡ್ರಾಯಿಂಗ್ ಮಾಡಬೇಕೆಂದುಕೊಂಡ. ಆ ಊರಿನ ಜನ, ಕಪ್ಪು ವೆಲ್ವೆಟ್ ಸೂಟಿನಲ್ಲಿದ್ದ ವ್ಯಕ್ತಿಯನ್ನು ಮೊಟ್ಟ ಮೊದಲ ಬಾರಿಗೆ ನೋಡುತ್ತಿದ್ದರು. ತಮ್ಮ ಜೀವನದಲ್ಲಿ ವಯಸ್ಸಿಗೆ ಬಂದ ಮನುಷ್ಯನೊಬ್ಬ ಹೀಗೆ ಕೆಲಸಕಾರ್ಯ ಇಲ್ಲದೆ, ನಿರಾಳವಾಗಿ ಅಡ್ಡಾಡುತ್ತಿದ್ದುದು, ಅದೂ ಕೈಯಲ್ಲಿ ಪೇಪರ್, ಪೆನ್ಸಿಲ್ ಹಿಡಿದು ಇಂಥ ಬಯಲು ಪ್ರದೇಶದಲ್ಲಿ ಕಾಣಿಸಿಕೊಂಡದ್ದು ಅತ್ಯಂತ ಅಚ್ಚರಿಯ ಸಂಗತಿಯಾಗಿತ್ತು. ಎಟ್ಟೆನ್ ಒಂದು ಪುಟ್ಟ ನಗರ; ಪ್ರಾಂತೀಯ ವಸಾಹತು ಆಗಿತ್ತು. ಇಂತಹ ಕಡೆ ವಿನ್ಸೆಂಟ್‌ನ ವೇಷ, ರೀತಿ ನೀತಿ, ಅವನ ಕೆಂಪು ಗಡ್ಡ, ಅವನ ಚರಿತ್ರೆ, ಎಲ್ಲವೂ ವಿಚಿತ್ರವಾಗಿ ಕಾಣಿಸಿತು. ಅದರಲ್ಲಿಯೂ ಆ ಪ್ರದೇಶದಲ್ಲೆಲ್ಲಾ ಅಡ್ಡಾಡುತ್ತಾ, ವಸ್ತುಗಳನ್ನು, ಪರಿಸರವನ್ನು ನೋಡುತ್ತ, ಗಮನಿಸುತ್ತಾ ಇದ್ದುದನ್ನು ನೋಡಿದರೆ ಅವನ ಬಗ್ಗೆ ಏನೇನೋ ಗುಮಾನಿಗಳು ಮೂಡಿದವು. ಅವನ ಬಳಿ ಸುಳಿಯುವುದಕ್ಕೂ ಹೆದರಿದರು. ಎಟ್ಟೆನ್‌ನಲ್ಲಿನ ಮಂದಿಗಿಂತ ಭಿನ್ನವಾಗಿದ್ದ. ಇದೆಲ್ಲ ಅವರಿಗೆ ಅಚ್ಚರಿ, ದಿಗ್ಭ್ರಮೆ ಮೂಡಿಸಿದರೂ, ಅವನಿಗೆ ಯಾವುದೇ ರೀತಿಯಲ್ಲಿ ತೊಂದರೆ ಮಾಡದೆ ಅವನ ಪಾಡಿಗೆ ಅವನನ್ನು ಬಿಟ್ಟರು.

ಅವನು, ಕತ್ತರಿಸಿ ಬೀಳಿಸಿದ್ದ ಪೈನ್ ಮರವನ್ನು ಗಂಭೀರವಾಗಿ ಗಮನಿಸುತ್ತಿದ್ದ. ಒಬ್ಬ ಕೂಲಿಯವನು ವಿನ್ಸೆಂಟ್ ಬರೆಯುತ್ತಿದ್ದ ಡ್ರಾಯಿಂಗ್ ಅನ್ನು ಹಿಂದೆ ನಿಂತು ನೋಡುತ್ತಿದ್ದ. ಒಮ್ಮೊಮ್ಮೆ ಗಟ್ಟಿಯಾಗಿ ವ್ಯಂಗ್ಯ ನಗೆ ನಗುತ್ತಿದ್ದ. ಸ್ಕೆಚ್ ಮುಗಿಸಲು ಸ್ವಲ್ಪ ಕಾಲ ಹಿಡಿಸಿತು. ದಿನದಿಂದ ದಿನಕ್ಕೆ ರೈತರು, ಕಾರ್ಮಿಕರ ಕೀಟಲೆ, ವಿನೋದ ಹೆಚ್ಚುತ್ತಿತ್ತು. ವಿನ್ಸೆಂಟ್ ಒಂದು ದಿನ, ಅವರ ಈ ತಮಾಷೆಗೆ ಕಾರಣ ತಿಳಿಯಬೇಕೆಂದುಕೊಂಡ.

"ನಾನು ಈ ಮರದ ಡ್ರಾಯಿಂಗ್ ಮಾಡಿದ್ದು ನಿಮಗೆ ತಮಾಷೆಯಾಗಿ ಕಾಣಿಸಿದೆಯೇನು?" -ಸೌಜನ್ಯದಿಂದ ಕೇಳಿದ.

ಆ ಮನುಷ್ಯ ಅಬ್ಬರಿಸಿ ಹೇಳಿದ – "ಹೌದೌದು! ತುಂಬಾ ತಮಾಶೆಯಾಗಿದೆ. ನೀನೇಲ್ಲೋ ಹುಚ್ಚ ಇರಬೇಕು."

ವಿನ್ಸೆಂಟ್ ಒಂದು ನಿಮಿಷ ತಡೆದು ಕೇಳಿದ – ನಾನು ಮರ ನೆಟ್ಟರೆ ಮೂರ್ಖನೋ ಹುಚ್ಚನೋ ಆಗ್ತಿನೇನು?"

ರೈತ ಸ್ವಲ್ಪ ತಣ್ಣಗಾದ "ಇಲ್ಲ ಖಂಡಿತ ಇಲ್ಲ."

"ನಾನು ಮರನೆಟ್ಟು ಅದರ ಆರೈಕೆ ಮಾಡಿದರೆ?"

"ಆಗಲೂ ಮೂರ್ಖ ಆಗೊಲ್ಲ."

"ಮರದಿಂದ ಹಣ್ಣು ಕಿತ್ತರೆ?"

"ಆಹಾ! ನೀನು..... ನೀನು..... ನನ್ನನ್ನು ತಮಾಶೆ ಮಾಡ್ತಿದ್ದೀಯ!"

"ಹಾಗಾದರೆ, ನಾನು ಮರ ಕಡಿದರೆ, ಅದೇ ಇವರು ಮಾಡಿದ ಹಾಗೆ!– ಮೂರ್ಖ ಆಗ್ತಿನೇನು?"

"ಇಲ್ಲ. ಮರಗಳನ್ನು ಕತ್ತರಿಸಿ ಹಾಕಬೇಕು."

"ಹಾಗಾದರೆ ನಾನು ಮರ ನೆಟ್ಟು ಬೆಳಸಬಹುದು, ಹಣ್ಣು ಕೀಳಬಹುದು, ಕಡಿದು ಹಾಕಬಹುದು. ಆದರೆ ಮರದ ಚಿತ್ರ ಬರೆದರೆ ಮಾತ್ರ ಮೂರ್ಖ, ಹುಚ್ಚ!– ಹೌದಲ್ಲ?"

ಆ ರೈತ ದೊಡ್ಡದಾಗಿ ಹಲ್ಲುಕಿಸಿದ. "ಈ ತರ ಇಲ್ಲಿ ಕೂತ್ಕೋಬೇಕಾದರೆ, ನೀನು ಹುಚ್ಚ, ಮೂರ್ಖ ಆಗಿರಬೇಕು ಅಂತ ಊರಿನವರೆಲ್ಲ ಹೇಳ್ತಾರೆ."

ಸಂಜೆ ಹೊತ್ತಿನಲ್ಲಿ ದೊಡ್ಡದಾದ, ವಿಶಾಲವಾದ ಮೇಜಿನ ಸುತ್ತ ಮನೆಯವರೆಲ್ಲ ಕುಳಿತು, ಅವರವರ ಕೆಲಸ ಅವರವರು ಮಾಡಿಕೊಳ್ಳುತ್ತಿದ್ದರು. ಓದುವುದು, ಬರೆಯುವುದು, ಹರಟೆ ಹೊಡೆಯುವುದು– ಎಲ್ಲಾ ಇದರ ಸುತ್ತ ನಡೆಯುತ್ತಿತ್ತು. ಅವನ ಕಡೆಯ ತಮ್ಮ ಕಾರ್ ಮಿತಭಾಷಿ. ಮಾತಾಡುವುದೇ ಅಪರೂಪ. ಅವನ ಸೋದರಿಯರಲ್ಲಿ, ಅನ್ನಾ ಮದುವೆಯಾಗಿ ಹೊರಟು ಹೋಗಿದ್ದಾಳೆ. ಎಲಿಜಬೆತ್‌ಗೆ ಅವನನ್ನು ಕಂಡರೆ ಆಗುತ್ತಿರಲಿಲ್ಲ. ಅವಳ ಪಾಲಿಗೆ ಅವನು ಮನೆಯಲ್ಲಿ ಇಲ್ಲವೇ ಇಲ್ಲ ಎಂಬಂತೆ. ವಿಲ್ಲೆಮಿಯನ್‌ಗೆ ಅವನ ಬಗ್ಗೆ ಒಂದು ರೀತಿಯ ಸಹಾನುಭೂತಿ. ಅವನು ಕೇಳಿದಾಗಲೆಲ್ಲ ಅವನ ಮುಂದೆ ರೂಪದರ್ಶಿಯಾಗಿ ಕುಳಿತುಕೊಳ್ಳುತ್ತಿದ್ದಳು. ಅವನ ಡ್ರಾಯಿಂಗ್ಸ್ ಬಗ್ಗೆ ಸ್ನೇಹದ ಒಂದೆರಡು ಮಾತನಾಡುತ್ತಿದ್ದಳು. ಅಷ್ಟು ಬಿಟ್ಟರೆ ಅವರ ನಡುವೆ ಅಂಥಾ ಗಾಢವಾದ ಪ್ರೀತಿಯ ಸಂಬಂಧವೇನೂ ಇರಲಿಲ್ಲ.

ಮೇಜಿನ ಮಧ್ಯದಲ್ಲಿರಿಸಿದ್ದ ಲ್ಯಾಂಪ್‌ನ ಬೆಳಕಲ್ಲಿ ತೊಂದರೆಯಿಲ್ಲದೆ, ಡ್ರಾಯಿಂಗ್ಸ್ ಕೆಲಸ ಮಾಡುತ್ತಿದ್ದ. ಬಯಲಲ್ಲಿ, ಹೊಲ, ಗದ್ದೆಗಳಲ್ಲಿ ಅಡ್ಡಾಡಿ ಮಾಡಿದ್ದ ಸ್ಕೆಚ್‌ಗಳನ್ನು ನಕಲು ಮಾಡುತ್ತಿದ್ದ. ಥಿಯೋಡೋರಸ್ ಮಗನ ಕೆಲಸವನ್ನು ಗಮನಿಸುತ್ತಿದ್ದ. ಒಂದು ಸ್ಕೆಚ್ ಅನ್ನು ಹತ್ತು ಸಲ ಬರೆದು ಬರೆದು, ಸರಿ ಎನಿಸದೆ, ಮುದ್ದೆ ಮಾಡಿ ಎಸೆಯುತ್ತಿದ್ದ. ಆತನಿಗೆ ಅದನ್ನು ನೋಡಿ ನೋಡಿ ಸಹಿಸಲಾಗದೆ, "ವಿನ್ಸೆಂಟ್, ಯಾಕೆ ಸರಿಯಾಗಿ ಡ್ರಾಮಾಡೋಕೆ ಆಗ್ತಿಲ್ವೇನು?" – ಮೇಜಿನ ಕಡೆಗೆ ವಾಲುತ್ತ ಕೇಳಿದ.

"ಇಲ್ಲ" – ವಿನ್ಸೆಂಟ್ ಉತ್ತರಿಸಿದ.

"ತಪ್ಪುಗಳೇನೂ ಮಾಡ್ತಿಲ್ಲ ತಾನೇ?"

"ತುಂಬಾ ತಪ್ಪುಗಳನ್ನು ಮಾಡ್ತಿದ್ದೀನಿ ಅಪ್ಪ. ಯಾವ ತಪ್ಪಿನ ಬಗ್ಗೆ ನಿಮ್ಮ ಪ್ರಶ್ನೆ?"

"ನನಗೆ ಅನ್ನತ್ತೆ, ನಿನ್ನಲ್ಲಿ ನಿಜವಾಗಿಯೂ ಪ್ರತಿಭೆ ಇದ್ದಿದ್ದರೆ, ನೀನು ಚಿತ್ರಕಾರನಾಗುವುದು ನಿನ್ನ ಹಣೇಲಿ ಬರೆದಿದ್ದರೆ, ಮೊದಲ ಸಲಕ್ಕೇ ನೀನು ಸರಿಯಾಗಿ ಬರೀತಿದ್ದೆ."

ವಿನ್ಸೆಂಟ್, ಚೀಲದಲ್ಲಿ ಆಲೂಗಡ್ಡೆ ತುಂಬುತ್ತಿದ್ದ ರೈತನ ಚಿತ್ರವನ್ನು ಗಮನಿಸುತ್ತಿದ್ದ. ಭಿಕ್ಷುಕನ ಕೈಯಗೆರೆಗಳು ಸರಿಯಾಗಿ ಮೂಡಿದಂತೆನಿಸಲಿಲ್ಲ.

"ನೀವು ಹೇಳೋದು ಬಹುಶಃ ಸರಿ ಇರಬಹುದು."

"ನಾನು ಹೇಳಿದ್ದಿಷ್ಟೆ, ನಿನ್ನಲ್ಲಿ ಸಹಜವಾದ ಪ್ರತಿಭೆ ಸಾಮರ್ಥ್ಯ ಇದ್ದಿದ್ದರೆ, ಇಷ್ಟು ಸಲ ಬರೆದು ಬರೆದು, ಸರಿಮಾಡಬೇಕಾಗಿರಲಿಲ್ಲ. ತಮಗೆ ತಾವೇ, ಅಪ್ರಯತ್ನ ಪೂರ್ವಕವಾಗಿ ಮೂಡಿ ಬರುತ್ತಿದ್ದವು."

"ಸಹಜತೆ, ಸ್ವಾಭಾವಿಕತೆ ಕಲಾವಿದನನ್ನು ಹತ್ತಿಕ್ಕಿ ಕಾಣಿಸಿಕೊಳ್ಳುತ್ತದೆ.... ನಾನು ನನ್ನ ಕೆಲಸವನ್ನು ಗಂಭೀರವಾಗಿ ತೆಗೆದುಕೊಂಡಾಗ, ಕಲಾವಿದನನ್ನು ಹತ್ತಿಕ್ಕಲು ಅವಕಾಶ ಕೊಡುವುದಿಲ್ಲ." – ಕೈನ ಪೆನ್ಸಿಲ್ ಕೆಳಗಿರಿಸದೆಯೇ ಉತ್ತರಿಸಿದ.

"ನೀನು ಹೇಳುವುದು ಸರಿಯಲ್ಲ. ಕೆಟ್ಟದ್ದರಿಂದ ಒಳ್ಳೆದು ಬರುವುದಿಲ್ಲ; ಒಳ್ಳೆ ಕೆಲಸವೂ ಕೆಟ್ಟದ್ದರಿಂದ ಹುಟ್ಟೋದಿಲ್ಲ."

"ತತ್ವಶಾಸ್ತ್ರದ ಪ್ರಕಾರ ಇರಬಹುದು. ಕಲೆಯ ಪ್ರಕಾರ ಅಲ್ಲ."

"ಇಲ್ಲ ಮಗನೇ. ಕಲಾವಿದನ ಕಲೆ ಒಳ್ಳೇದಿರುತ್ತೆ, ಇಲ್ಲ ಕೆಟ್ಟದಿರುತ್ತೆ. ಕೆಟ್ಟದಾಗಿದಾಗಿದ್ದಾಗ, ಅವನು ಒಳ್ಳೆ ಕಲಾವಿದ ಆಗಲಾರ. ಮೊದಲೇ ಅವನು ಅದನ್ನು ತನ್ನಲ್ಲಿ ಗುರುತಿಸಿಕೊಂಡರೆ, ಅವನ ಸಮಯ, ಅವನ ಪ್ರಯತ್ನ ಯಾವುದೂ ಹಾಳಾಗುವುದಿಲ್ಲ."

"ಒಂದು ವೇಳೆ ಕೆಟ್ಟ ಕಲಾಕೃತಿಗಳೇ ಅವನಿಗೆ ಸಂತೋಷ ನೀಡುವುದಾದರೆ?"

ಥಿಯೋಡೋರ್ ತತ್ವಶಾಸ್ತ್ರದಲ್ಲಿ ಸಮಾಧಾನ ಹುಡುಕಲು ಪ್ರಯತ್ನಿಸಿದ. ಅವನ ಪ್ರಶ್ನೆಗೆ ಉತ್ತರ ಕಾಣಲಿಲ್ಲ.

"ಇಲ್ಲ"... ಸ್ಕೆಚ್‌ನಲ್ಲಿನ ಆಲೂಗಡ್ಡೆ ಚೀಲವನ್ನು ರಬ್ಬರ್‌ನಿಂದ ಅಳಿಸಿದ. ಭಿಕ್ಷುಕನ ಎಡತೋಳು ಗಾಳಿಯಲ್ಲಿ ತೂಗಿಟ್ಟಂತೆ ಇರಿಸಿದ. ಆಳದಲ್ಲಿ ಕಲಾವಿದ ಮತ್ತು ಸಹಜ ಪ್ರತಿಭೆಗಳು ಒಂದಕ್ಕೊಂದು ಒಪ್ಪಿಕೊಂಡು ಇರುತ್ತವೆ. ಬಹಳ ಕಾಲ ಹೋರಾಟ ಮಾಡಬೇಕಾಗಿ ಬರಬಹುದು. ಕಡೆಗೆ ಕಲಾದೇವತೆ ಒಲಿಯುತ್ತಾಳೆ. ಕೆಡುಕು, ಕೆಟ್ಟ ಕೃತಿ ಎಲ್ಲವೂ ಒಳ್ಳೆಯದಾಗಿ ರೂಪಾಂತರಗೊಂಡು ನ್ಯಾಯ ಸಂದಾಯವಾಗುತ್ತದೆ."

'ಕಡೆಗೂ ಕಲೆ ತೀರಾ ಕನಿಷ್ಠವೆಂಬಂತೆಯೇ ಉಳಿದು ಬಿಟ್ಟರೆ?... ಆ ಮನುಷ್ಯ ಮೊಣಕಾಲೂರಿ ಕುಳಿತಿರುವುದನ್ನೇ ಎಷ್ಟು ದಿನಗಳಿಂದ ಡ್ರಾ ಮಾಡ್ತಾ ಇದ್ದೀಯ. ಆದರೂ ಅದು ಸರಿಯಾಗಿ ಬಂದಿಲ್ಲ. ಹೀಗೇ ನೀನು ಇದನ್ನು ವರ್ಷಗಟ್ಟಳೆ ಬರೆಯುತ್ತಾ ಹೋದರೂ ಅವನು ಸರಿಯಾಗೋದೇ ಇಲ್ಲ."

"ಕಲಾವಿದ ಒಂದೊಂದು ಸಲ ಜೂಜಾಟವನ್ನು ಸ್ವೀಕರಿಸುತ್ತಾನೆ."

"ಜೂಜಾಟದಿಂದ ಏನಾದರೂ ಲಾಭ ಸಾಧ್ಯವಿದೆಯೇನು?"

"ಲಾಭ? ಎಂಥಾ ಲಾಭ?"

"ಅದೇ ಹಣ.... ಸಮಾಜದಲ್ಲಿ ಅಂತಸ್ತು."

ವಿನ್ಸೆಂಟ್ ಮೊದಲ ಬಾರಿಗೆ ಪೇಪರ್ ಮೇಲಿಂದ ತಲೆ ಎತ್ತಿ ತಂದೆಯ ಕಡೆ ನೋಡಿದ. ಅವನನ್ನು ಪರೀಕ್ಷಿಸಿದ. ಅಂಗುಲಂಗುಲ ಪರೀಕ್ಷಿಸಿದ..... ವಿಚಿತ್ರವಾದ ವ್ಯಕ್ತಿಯನ್ನು ನೋಡುವಂತೆ ನೋಡಿದ.

"ಬಹುಶಃ ನಾವು ಒಳ್ಳೆಯ ಕಲೆ, ಕೆಟ್ಟ ಕಲೆಯ ಬಗ್ಗೆ ಚರ್ಚೆ ಮಾಡ್ತಿದ್ದೀವಿ ಅನ್ಸತ್ತೆ." – ಅವನು ಹೇಳಿದ.

–೩–

ಹಗಲೂ ರಾತ್ರಿ, ತನ್ನ ಕೆಲಸದಲ್ಲಿ ಮುಳುಗಿದ. ಅವನಿಗೆ ಭವಿಷ್ಯವೆಂದರೆ, ತನ್ನ ಕಾಲ ಮೇಲೆ ತಾನು ನಿಲ್ಲುವುದು; ಥಿಯೋನನ್ನು ಅವಲಂಬಿಸದೆ ಇರುವುದು. ತನ್ನ ಕಲೆಯಲ್ಲಿ ಕೌಶಲ್ಯ, ಪರಿಣತಿ ಪಡೆದರೆ ಮುಗೀತು, ಯಾರನ್ನೂ ಅವಲಂಬಿಸಬೇಕಾಗಿರುವುದಿಲ್ಲ. ಸ್ಕೆಚ್ ಮಾಡಿ ಮಾಡಿ ದಣಿದಾಗ ಓದುತ್ತಿದ್ದ. ಎರಡರಿಂದಲೂ ಬೇಸರವಾದರೆ ಹೋಗಿ ಮಲಗುತ್ತಿದ್ದ.

ಥಿಯೋ ಸ್ಕೆಚ್‌ಗೆ ಬೇಕಾದ ಪೇಪರ್, ವೆಟರಿನರಿ ಶಾಲೆಯಿಂದ ಕುದುರೆ, ಹಸು, ಕುರಿ ಮೊದಲಾದ ಪ್ರಾಣಿಗಳ ಅನಾಟಮಿಗೆ ಸಂಬಂಧಿಸಿದ ಪಿಕ್ಚರ್‌ಗಳನ್ನೂ ಕಳಿಸಿದ. 'Models from the Artists' ಪುಸ್ತಕ. ಪೆನ್ಸಿಲ್ಲುಗಳು, ಗರಿಲೆಕ್ಕಣಿಕೆಗಳು, ಮನುಷ್ಯನ ಅಸ್ಥಿಪಂಜರದ ಪ್ರತಿಗಳು, ಒಂದಷ್ಟು ಫ್ರ್ಯಾಂಕ್ಸ್, ಜೊತೆಗೆ ಸಾಮಾನ್ಯ ದರ್ಜೆಯ ಕಲಾವಿದನಾಗಬಾರದೆಂಬ ಎಚ್ಚರಿಕೆಯ ಮಾತುಗಳಿಂದ ಕೂಡಿದ ಲೆಟರ್ – ಎಲ್ಲವನ್ನೂ ಕಳಿಸಿಕೊಟ್ಟ. ಥಿಯೋ ನೀಡಿದ ಬುದ್ಧಿವಾದಕ್ಕೆ ವಿನ್ಸೆಂಟ್, – ನನಗೆ ಸಾಧ್ಯವಾದಷ್ಟು ಮಾಡುತ್ತೇನೆ. ಆದರೆ ಸಾಮಾನ್ಯತೆಯೂ ತನ್ನ ಸರಳತೆಯಲ್ಲಿ, ಅಸಹ್ಯಪಟ್ಟುಕೊಳ್ಳುವಂಥಾದ್ದೇನೂ ಅಲ್ಲ ಅನ್ನುವುದು ನನ್ನ ಭಾವನೆ. ಕಷ್ಟಪಡಬೇಕು ಅನ್ನೋ ವಿಚಾರಕ್ಕೆ, ನನ್ನ ಒಪ್ಪಿಗೆಯಿದೆ. ಗಾವರ್ನಿಯೇ ಎಚ್ಚರಿಸಿದ್ದಾನಲ್ಲ,– ಒಂದುಗೆರೆ ಇಲ್ಲದೆ ಒಂದು ದಿನವೂ ಇಲ್ಲ!"– ಎಂದು ತನ್ನಲ್ಲಿಯೇ ಹೇಳಿಕೊಂಡ.

ಆಕೃತಿಗಳ ರಚನೆಯಿಂದ ಬಹಳ ಪ್ರಯೋಜನವಿದೆ ಅಂತ ತಿಳಿದುಕೊಂಡ. ಲ್ಯಾಂಡ್ ಸ್ಕೇಪ್‌ಗಳ ರಚನೆಗೆ ಬಹಳ ಅನುಕೂಲವಾಗುತ್ತದೆಂದು ಭಾವಿಸಿದ. ಅವನು ರಚಿಸುತ್ತಿದ್ದ ವಿಲ್ಲೋ ಮರ ಜೀವಂತ ಮರವಾಗಿತ್ತು. ನಂತರ ಅದರ ಸುತ್ತಲ ಪರಿಸರವನ್ನು ಸ್ಕೆಚ್ ಮಾಡಿದ. ಅವನು ಬರೆಯುತ್ತಿದ್ದ ಮರವಾಗಲೀ ಗಿಡವಾಗಲೀ, ಅವುಗಳಲ್ಲಿ ಜೀವ ಬರಿಸುವವರೆಗೆ ಏಕಾಗ್ರತೆಯಿಂದ ಬರೆಯುತ್ತಿದ್ದ. ಅವನಿಗೆ ಲ್ಯಾಂಡ್ ಸ್ಕೇಪ್‌ಗಳನ್ನು ಚಿತ್ರಿಸುವುದೆಂದರೆ ಪ್ರಾಣ. ಜೊತೆಗೆ ಗಾವರ್ನಿ, ಡಾಮಿಯರ್, ಡೋರ್, ದ ಗ್ರೋಸ್ ಮತ್ತು ಫೆಲಿಸಿಯೆ ರೋಪ್ಸ್ ಮೊದಲಾದ ಕಲಾವಿದರಲ್ಲಿ ರಿಯಲಿಸಂ

ಕೂಡಾ ಅವನಿಗೆ ಬಹಳ ಇಷ್ಟವಾಗುತ್ತಿತ್ತು. ಈ ಮಧ್ಯೆ ಸಾಧ್ಯವಾದರೆ ಮ್ಯಾಗ್‌ಝಿನ್ ಮತ್ತು ನ್ಯೂಸ್ ಪೇಪರ್ಸ್‌ಗಳಲ್ಲಿ ಇಲ್ಲಸ್ಟ್ರೇಷನ್ಸ್ ಮಾಡಬೇಕು ಎಂದುಕೊಳ್ಳುತ್ತಿದ್ದ. ತಾನು ಪರಿಪೂರ್ಣತೆ ಸಾಧಿಸಲು ಹಿಡಿಯುವ ದೀರ್ಘಕಾಲದ ಅವಧಿಯಲ್ಲಿ, ತನ್ನನ್ನು ತಾನು ಪೋಷಿಸಿಕೊಳ್ಳಲು ಯೋಚಿಸುತ್ತಿದ್ದ. ಪರಿಪೂರ್ಣತೆ ಸಾಧ್ಯವಾದ ಮೇಲೆ 'ಎಕ್ಸ್‌ಪ್ರೆಷನಿಸಂ'ನ ಬೇರೆ ಶೈಲಿಗಳನ್ನು ಅಭ್ಯಾಸ ಮಾಡುವ ವಿಚಾರದಲ್ಲಿಯೂ ಇದ್ದ.

ಒಂದು ಸಲ ತಂದೆ ಕೇಳಿದರು –"ವಿನ್ಸೆಂಟ್, ಕಷ್ಟ ಪಡಬೇಕು ಅನ್ನೋ ವಿಚಾರಾನ ಪದೇ ಪದೇ ಹೇಳುತ್ತಿರುತ್ತೀ, ಹಾಗಿರುವಾಗ ಕೆಲಸಕ್ಕೆ ಬಾರದ ಆ ಫ್ರೆಂಚ್ ಪುಸ್ತಕಗಳನ್ನು ಯಾಕೆ ಓದುತ್ತಿರುತ್ತೀ?" ಎಂದು.

"ನೋಡಿ, ಬದುಕಿನೊಳಗಿಂದ ಆಕೃತಿಗಳನ್ನು ದೃಶ್ಯಗಳನ್ನು ಆಯ್ದು ಡ್ರಾಯಿಂಗ್ ಮಾಡಲು, ಕೌಶಲ್ಯವೊಂದೇ ಸಾಕಾಗುವುದಿಲ್ಲ. ಡ್ರಾಯಿಂಗ್‌ಗೆ ಸಂಬಂಧಪಟ್ಟ ಸಾಹಿತ್ಯವನ್ನು ಓದುವುದೂ ಬಹಳ ಮುಖ್ಯ."

"ನೀನು ಹೇಳೋದು ನನಗೆ ಅರ್ಥವಾಗ್ತಿಲ್ಲ. ನಾನು ಉಪದೇಶಗಳನ್ನು ಹೇಳಬೇಕಾದರೆ, ನಿಮ್ಮಮ್ಮ ಅಡಿಗೆ ಮನೆಯಲ್ಲಿ ಏನೇನು ಮಾಡ್ತಿದ್ದಾರೆ ಅಂತ ನೋಡ್ತಾ ಕೂತ್ಕೋಬೇಕಾಗಿಲ್ಲ."

"ನಾನು ಆಕೃತಿಗಳನ್ನು ಬರೆಯಬೇಕಾದರೆ, ದೇಹದ ಒಳಗಿನ ಎಲುಬುಗಳನ್ನು, ಮಾಂಸಖಂಡಗಳನ್ನು, ನರನಾಡಿಗಳನ್ನು, ಸ್ನಾಯುಗಳನ್ನು ಅರ್ಥಮಾಡಿಕೊಂಡಿರಬೇಕು. ಅವುಗಳ ಕೆಲಸವೇನೆಂದು ತಿಳಿದಿರಬೇಕು. ತಲೆ ಒಳಗೆ ಏನು ನಡೆಯುತ್ತೆ ಅಂತರಂಗದಲ್ಲಿ ಏನು ನಡೆಯುತ್ತೆ ಅನ್ನೋದು ತಿಳೀದೆ ತಲೇನ ಬರೆಯೋಕಾಗೊಲ್ಲ. ಜೀವಂತ ವ್ಯಕ್ತಿಗಳನ್ನು ಚಿತ್ರಸಿಬೇಕಾದರೆ, ಅನಾಟಮೀನೂ ಗೊತ್ತಿರಬೇಕು ಮತ್ತು ತಾವು ಬದುಕುತ್ತಿರುವ ಪ್ರಪಂಚದ ಬಗ್ಗೆ ಅವರು ಏನು ಯೋಚಿಸುತ್ತಿದ್ದಾರೆ ಅನ್ನೋದೂ ತಿಳಿದಿರಬೇಕು. ಪೈಂಟರ್ ಕೇವಲ ತನ್ನ ಕಲೆಗಾರಿಕೆಯನ್ನು ಮಾತ್ರ ತಿಳಿದಿದ್ದರೆ, ಅವನು ಕೇವಲ ಸೂಪರ್‌ಫಿಷಿಯಲ್ ಕಲಾವಿದ ಮಾತ್ರ ಆಗಬಲ್ಲ."

"ವಿನ್ಸೆಂಟ್, ನೀನು ಕೇವಲ ಕಲೆಯ ಸಿದ್ಧಾಂತ, ತತ್ವಗಳನ್ನು ಮಾತ್ರ ತಿಳಿದವನಾಗ್ತೀಯೇನೊ ಅಂತ ಭಯವಾಗ್ತಿದೆ"– ನಿಟ್ಟುಸಿರಿನೊಂದಿಗೆ ಥಿಯೋಡೋರಸ್ ನುಡಿದ.

ವಿನ್ಸೆಂಟ್ 'Le pere Goriot' ಪುಸ್ತಕದಲ್ಲಿ ಮುಳುಗಿದ.

ಒಂದು ದಿನ ಥಿಯೋ ಕಳಿಸಿಕೊಟ್ಟ 'ಕಸಾಗ್ನೆ'ಯ ಗ್ರಂಥಗಳು ತಲುಪಿ ಕೈ ಸೇರಿದಾಗ, ಸಂತೋಷಕ್ಕೆ ಎಣೆಯಿಲ್ಲದಾಯಿತು. ವಿನ್ಸೆಂಟ್ 'ಪರಿಕಲ್ಪನೆ'ಯಲ್ಲಿನ ದೋಷವನ್ನು ತಿದ್ದಿಕೊಳ್ಳಲು ಅನುಕೂಲವಾಗಲೆಂದು ಈ ಕೃತಿಗಳನ್ನು ಕಳಿಸಿದ್ದ. ತುಂಬಾ ಪ್ರೀತಿಯಿಂದ ಅವುಗಳ ಪುಟಗಳನ್ನು ತಿರುವಿ ಹಾಕಿದ. ವಿಲ್ಲೆಮಿಯೆನ್‌ಗೆ ತೋರಿಸಿದ.

"ಇದಕ್ಕಿಂತ ನನ್ನ ಖಾಯಿಲೆಗೆ ಬೇರೆ ಮದ್ದಿಲ್ಲ. ಇವುಗಳಿಂದ ನನ್ನ ಖಾಯಿಲೆ ವಾಸಿ ಆದರೆ, ಈ ಪುಸ್ತಕಗಳಿಗೆ ನಾನು ಕೃತಜ್ಞತೆ ಹೇಳಬೇಕಾಗುತ್ತದೆ." – ಎಂದು ಅವಳಿಗೆ ಹೇಳಿದ. ವಿಲ್ಲೆಮಿಯೆನ್ ಮುಗುಳ್ನಕ್ಕಳು.

ಥಿಯೋಡೋರಸ್‌ಗೆ, ಪ್ಯಾರಿಸ್‌ನಿಂದ ಬರುವ ಯಾವುದೇ ವಸ್ತುಗಳ ಬಗ್ಗೆ ನಂಬಿಕೆ ಇರಲಿಲ್ಲ. ಅದಕ್ಕೆಂದೇ, "ವಿನ್ಸೆಂಟ್, ಈ ಪುಸ್ತಕಗಳನ್ನು ಓದುವುದರಿಂದ, ಕಲೆಯ ಬಗೆಗಿನ ನಿನ್ನ ವಿಚಾರಗಳನ್ನು ಸರಿಮಾಡಿಕೊಳ್ಳಬಹುದೇನು?"

"ಹೌದು."

"ಎಂಥ ವಿಚಿತ್ರ."

"ನಾನು ಹೇಳೋದೇನೂಂದ್ರೆ, ಅಲ್ಲಿರುವ ವಿಚಾರಗಳನ್ನು ನನ್ನ ಡ್ರಾಯಿಂಗ್‌ಗಳಲ್ಲಿ ಅಳವಡಿಸಿಕೊಂಡರೆ ಮಾತ್ರ ಅಂತ. ಪ್ರಾಕ್ಟೀಸ್ ಅನ್ನೋದನ್ನು ಹೇಗಿದ್ದರೂ ಪುಸ್ತಕಗಳಂತೆ ಕೊಳ್ಳೋದಕ್ಕೆ ಆಗುವುದಿಲ್ಲ, ಇದಂತೂ ಸತ್ಯ. ಹಾಗೇನಾದರೂ ಅದೂ ಕೊಳ್ಳೋ ವಸ್ತು ಆಗಿದ್ದರೆ ಸಾಕಷ್ಟು ಮಾರಾಟ ಆಗ್ತಿತ್ತು."

ಅತಿಯಾದ ಬಿಸಿಲಿನಿಂದಾಗಿ ವಿನ್ಸೆಂಟ್ ಹೆಚ್ಚಾಗಿ ಹೊರಗಡೆ ಹೋಗಲಿಲ್ಲ. ಆದರೆ ಅನೇಕ ಸ್ಕೆಚಸ್ ಮಾಡಿದ. ಕೆಲವನ್ನು ಎರಡೆರಡು ಬಾರಿ, ಮತ್ತೆ ಕೆಲವನ್ನು ಐದೈದು ಬಾರಿ ತಿದ್ದಿ ತಿದ್ದಿ ಬರೆದು ಮುಗಿಸಿದ. ವಿಲ್ಲೆಮಿಯೆನ್ ಹೊಲಿಗೆಯಂತ್ರದ ಮುಂದೆ ಕೂತಿರುವ, ಸನಿಕೆ ಹಿಡಿದಿರುವ ಮನುಷ್ಯ, ಬಿಳಿ ಕ್ಯಾಪ್‌ನಲ್ಲಿ ಆಲೂಗಡ್ಡೆ ಸಿಪ್ಪೆ ತೆಗೆಯುತ್ತಿರುವ ಹೆಂಗಸು, ಕೈಲಿ ಹಿಡಿದ ಕೋಲಿಗೆ ಆನಿಕೊಂಡು ನಿಂತಿದ್ದ ಕುರಿಕಾಯುವ ಮನುಷ್ಯ, ಬೆಂಕಿಗೂಡಿನ ಮುಂದೆ ಕುರ್ಚಿಯಲ್ಲಿ ಮೊಣಕೈಗಳನ್ನು, ತಲೆಯನ್ನು ಮೊಣಕಾಲುಗಳ ಮಧ್ಯೆ ಇರಿಸಿಕೊಂಡು ಕುಳಿತಿದ್ದ ವಯಸ್ಸಾದ, ಖಾಯಿಲೆ ಬಿದ್ದಿರುವ ರೈತ, – ಮೊದಲಾದ ಅನೇಕ ಸ್ಕೆಚ್‌ಗಳನ್ನು ಮಾಡಿದ. ಅವನ ಕಣ್ಣಿಗೆ ಬಿದ್ದ ಪ್ರತಿಯೊಂದು ದೃಶ್ಯವನ್ನೂ ಸ್ಕೆಚ್ ಮಾಡಿದ. ನಿರಂತರವಾಗಿ ಡ್ರಾ ಮಾಡುತ್ತಲೇ ಇರುವುದು ಅವನ ಅಭ್ಯಾಸವಾಯಿತು. ಹಳ್ಳಿಗಾಡಿನ ಬದುಕಿನ ಎಲ್ಲ ವಿವರಗಳನ್ನೂ ಗೆರೆಗಳಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದ. ಈಗ ಅವನಿಗೆ ತಾನು ಅಸಹಾಯಕ ಎನ್ನುವ ಭಾವನೆ ಕಾಡಲಿಲ್ಲ. ಇದರಿಂದಾಗಿ ಅವನಲ್ಲಿ ಮೊದಲಿಗಿದ್ದ ಕೀಳರಿಮೆ ಉಳಿಯಲಿಲ್ಲ.

ಆದರೆ ಆ ಊರಿನ ಜನಕ್ಕೆ ಅವನೊಬ್ಬ ವಿಚಿತ್ರ ವ್ಯಕ್ತಿಯಾಗಿ ಕಾಣಿಸಿದ. ಅವನಿಂದ ಅವರು ದೂರವೇ ಉಳಿದರು. ಅವನ ತಾಯಿ, ತಂದೆ, ಸೋದರಿ ಎಲ್ಲರೂ ತಮ್ಮದೇ ಆದ ರೀತಿಯಲ್ಲಿ ಅವನ ಬಗಗೆ ಪ್ರೀತಿ, ವಾತ್ಸಲ್ಯಗಳನ್ನು ಅಂತರಂಗದಲ್ಲಿ ಇರಿಸಿಕೊಂಡಿದ್ದರಾದರೂ, ವಿನ್ಸೆಂಟ್‌ನನ್ನು ಒಂಟಿತನ ಬಹಳವಾಗಿ ಕಾಡಿತು.

ಸ್ವಲ್ಪ ದಿನ ಕಳೆದ ಮೇಲೆ ಕೃಷಿಕರು ಅವನ ಬಗ್ಗೆ ಪ್ರೀತಿ, ನಂಬಿಕೆ ಮೂಡಿಸಿಕೊಂಡು ಅವನಿಗೆ ಹತ್ತಿರವಾದರು. ಅವರ ಸರಳತೆಯಲ್ಲಿ ಮಣ್ಣಿನ ನಂಟು ಕಾಣಿಸಿತು. ಅದೆಲ್ಲವನ್ನೂ ತನ್ನ ಸ್ಕೆಚ್‌ಗಳಲ್ಲಿ ಮೂಡಿಸಲು ಯತ್ನಿಸಿದ. ಮನೆಯವರಿಗೆ ಸ್ಕೆಚ್‌ಗಳಲ್ಲಿ

ರೈತ ಮತ್ತು ಮಣ್ಣಿನ ಸಂಬಂಧ ಹೇಗೆ ಅನ್ನೋದು ಅರ್ಥವಾಗಲಿಲ್ಲವಾದರೂ ವಿನ್ಸೆಂಟ್‌ಗೆ ಮಾತ್ರ, ಸರಿಯಾಗಿದೆ ಎನಿಸಿ ತೃಪ್ತಿಗೊಂಡಿದ್ದ.

"ಭೂಮಿ ಮತ್ತು ರೈತನ ಮಧ್ಯೆ ಅಂತರ ಇರಬಾರದು."– ಎಂದು ವಿನ್ಸೆಂಟ್ ಒಂದು ಸಂಜೆ, ತಾಯಿಗೆ ವಿವರಿಸಿದ. 'ಅವು ಒಂದೇ ಸತ್ವದ ಎರಡು ಭಿನ್ನ ರೂಪಗಳು. ಒಂದು ಮತ್ತೊಂದರಲ್ಲಿ ಬೆರೆಯಬಹುದು. ಆದರೆ ಪ್ರತ್ಯೇಕಿಸಲು ಆಗದಷ್ಟು ಅನನ್ಯವಾಗಿ ಬೆಸೆದಿರುತ್ತವೆ."

ಅವನಿಗೆ ಇನ್ನೂ ಮದುವೆಯಿಲ್ಲ ಅವನನ್ನು ತಾನೇ ಕೈಗೆ ತೆಗೆದುಕೊಂಡು ಸುಧಾರಿಸಬೇಕು; ಅವನು ಏನಾದರೂ ಸಾಧಿಸಲು ಸಹಕರಿಸಬೇಕು ಎಂದುಕೊಂಡಳು.

ಒಂದು ದಿನ ಬೆಳಿಗ್ಗೆ, "ವಿನ್ಸೆಂಟ್, ನೀನು ಎರಡು ಗಂಟೆ ವೇಳೆಗೆ ಮನೆಗೆ ಬಂದುಬಿಡಬೇಕು. ನನಗೋಸ್ಕರ ಬರ್ತೀ ತಾನೇ?" –ಎಂದು ಕೇಳಿದಳು.

"ಬರ್ತೀನಿ. ಆದರೆ ಯಾಕೆ ಹಾಗೆ ಹೇಳ್ತಿದ್ದಿ?"

"ಏನಿಲ್ಲ, ನೀನು ನನ್ನ ಜೊತೆ ಟೀ ಪಾರ್ಟಿಗೆ ಬರಬೇಕು."

ಅವನಿಗೆ ದಿಗ್ಭ್ರಮೆಯಾಯಿತು. "ಅಮ್ಮ ಅಷ್ಟು ಸಮಯ ನನಗೆ ಹಾಳಾಗುತ್ತೆ!"

"ಯಾಕೆ ಹಾಳಾಗುತ್ತೆ?"

"ಯಾಕೇಂದ್ರೆ, ಪೈಂಟ್ ಮಾಡೋಕೆ ಟೀ ಪಾರ್ಟೀನಲ್ಲಿ ಏನೂ ಸಿಗೊಲ್ಲ."

"ಅಲ್ಲೇ ನೀನು ತಪ್ಪಾಗಿ ತಿಳಿದಿರೋದು. ಎಟ್ಟೆನ್‌ನ ಪ್ರಮುಖರಾದ ಹೆಂಗಸರೆಲ್ಲ ಅಲ್ಲಿಗೆ ಬಂದಿರ್ತಾರೆ."

ವಿನ್ಸೆಂಟ್‌ನ ದೃಷ್ಟಿ ಅಡಿಗೆ ಮನೆಯತ್ತ ಸರಿಯಿತು. ಕ್ಷಣಾರ್ಧದಲ್ಲಿ ಅಲ್ಲಿಗೆ ಓಡಿದ. ಪ್ರಯತ್ನದಿಂದ ತನ್ನನ್ನು ತಡೆದುಕೊಂಡು, ಮಾತಿಗೆ ಮೊದಲುಮಾಡಿದ; ಅವನ ಮಾತಿನಲ್ಲಿ ನೋವಿತ್ತು.

"ಅಮ್ಮ ನಾನು ಕೇಳೊದಿಷ್ಟೆ, ಈ ಪಾರ್ಟಿಯಲ್ಲಿನ ಹೆಂಗಸರಿಗೆ ನಾನು ಬಯಸುವ ಗುಣ ಇರೋದಿಲ್ವೆ."

"ಯಾರು ಹೇಳಿದರು ಹಾಗಂತ! ಅವರೆಲ್ಲ ಬಹಳ ಒಳ್ಳೆಯವರು. ಅವರ ವಿಚಾರದಲ್ಲಿ. ಯಾರೂ ಒಂದು ಕೆಟ್ಟ ಮಾತನ್ನೂ ಆಡಿಲ್ಲ."

"ಹಾಗಲ್ಲಮ್ಮ ನಾನು ಹೇಳಿದ್ದು, ನನ್ನ ದೃಷ್ಟೀಲಿ ಅವರೆಲ್ಲ ಒಂದೇ ಗುಂಪಿಗೆ ಸೇರಿದವರು. ಎಲ್ಲರೂ ಒಂದೇ ರೀತಿಯ ಜೀವನ ಶೈಲಿಯಲ್ಲಿ ಬದುಕುತ್ತಿರುವವರು, ಅಂದೆ."

"ನಾನು ಸುಲಭವಾಗಿ, ಯಾರು ಯಾರೂಂತ ಗುರುತಿಸಿ ಹೇಳಬಲ್ಲೆ."

"ನನ್ನ ಪ್ರೀತಿಯ ಅಮ್ಮ, ಹೇಳೋದು ಸ್ವಲ್ಪ ಕೇಳಿಸಿಕೋ. ಅವರೆಲ್ಲ ಸುಖವಾಗಿ, ಕಷ್ಟ ಏನೂಂತ ತಿಳೀದೆ ಬದುಕಿದವರು. ಅವರ ಮುಖಗಳಲ್ಲಿ ಏನೊಂದೂ ವಿಶೇಷ ಇರೋದಿಲ್ಲ."

"ನನಗೆ ನೀನು ಹೇಳೋದೇ ಅರ್ಥಆಗೊಲ್ಲ. ನೀನು ಕಾರ್ಮಿಕರನ್ನು, ರೈತರನ್ನು ಬರೀತೀಯ."

"ಹೌದು."

"ಅದರಿಂದ ನಿನಗೆ ಯಾವ ಪ್ರಯೋಜನ ಇದೆ ಹೇಳು? ಅವರೆಲ್ಲ ಬಡವರು. ಏನನ್ನೂ ಕೊಳ್ಳೋದಕ್ಕೆ ಆಗೋದಿಲ್ಲ. ಆದರೆ ಈ ಹೆಂಗಸರು, ಕಾಸುಕೊಟ್ಟು ಚಿತ್ರ ಬರೆಸಿಕೊಳ್ತಾರೆ."

ವಿನ್ಸೆಂಟ್ ತನ್ನ ಎರಡೂ ಕೈಗಳನ್ನು ಬಟ್ಟಲಿನಂತೆ ಅವಳ ಗಲ್ಲದ ಮೇಲೆ ಇರಿಸಿದ. ದಯೆ, ಕರುಣೆ, ಪ್ರೀತಿ ತುಂಬಿದ ಅವಳ ನೀಲಿ ಕಣ್ಣುಗಳನ್ನು ನೋಡಿದ. ಅವಳಿಗೇಕೆ ಅರ್ಥವಾಗುತ್ತಿಲ್ಲ ಅಂದುಕೊಂಡು,

"ನನ್ನಮ್ಮ, ನನ್ನ ಮೇಲೆ ಸ್ವಲ್ಪಾನಾದರೂ ಭರವಸೆ ಇಡು. ನಾನು ಹೇಗೆ ನನ್ನ ಕೆಲಸ ಮಾಡಬೇಕೂನ್ನೋದು ನನಗೆ ಗೊತ್ತಿದೆ. ನನಗೆ ಸ್ವಲ್ಪ ಅವಕಾಶಕೊಟ್ಟು ನೋಡು, ನಾನು ಹೇಗೆ ಮೇಲೆ ಬರ್‍ತೀನೀಂತ ತೋರಿಸ್ತೇನೆ. ಇವತ್ತು ನಿನ್ನ ಕಣ್ಣಲ್ಲಿ ಕೆಲಸಕ್ಕೆ ಬಾರದ ವಸ್ತುಗಳನ್ನು ಬರೀತಾ ಇದ್ದೀನಿ ಅಂತ ಅನಿಸಬಹುದು. ನಾಳೆ ಇವೇ ಎಷ್ಟು ದೊಡ್ಡ ಮೊತ್ತಕ್ಕೆ ಮಾರಾಟ ಆಗುತ್ತೆ ಅಂತ ನಿನಗೇ ಗೊತ್ತಾಗುತ್ತೆ."

ಅನ್ನಾಗೂ, ಅವನು ಹೇಳಿದ ರೀತೀಲಿ ಅರ್ಥ ಮಾಡಿಕೊಳ್ಳಬೇಕೆಂದೇ ಮನಸ್ಸಿದೆ. ತನ್ನ ತುಟಿಯನ್ನು ಒರಟಾದ ಅವನ ಕೆಂಪುಗಡ್ಡಕ್ಕೆ (ರಾಚಿದಳು) ಉಜ್ಜಿದಳು. ಹಿಂದಿನ ಒಂದು ದಿನದ ಘಟನೆಯನ್ನು ನೆನಪಿಸಿಕೊಂಡಳು. ಜುಂಡರ್ಟ್‌ನ ಕೌಟುಂಬಿಕ ಚರ್ಚ್‌ನಲ್ಲಿ, ವಿನ್ಸೆಂಟ್‌ನನ್ನು ತನ್ನ ಬಿಗಿಯಾದ ಅಪ್ಪುಗೆಯಿಂದ ಬಿಟ್ಟುಕೊಟ್ಟು ಕಳಿಸಬೇಕಾದ ಸಂದರ್ಭ, ಗಂಡಸಿನ ಮಾಂಸಲ ದೇಹದ ಸ್ಪರ್ಷದ ಅನುಭವ. ಹೀಗೆ ಒಂದೊಂದೇ ದೃಶ್ಯ ಅವಳ ಕಣ್ಣ ಮುಂದಿನಿಂದ ಹಾದುಹೋಯಿತು. ಅನ್ನಾಗೆ ಮೊದಲ ಮಗು ಸತ್ತುಹುಟ್ಟಿತ್ತು. ನಂತರ ಹುಟ್ಟಿದ ಮಗು ವಿನ್ಸೆಂಟ್. ಅವನ ಬರವಿನ ಹಿಂದಿದ್ದ ಭಯ, ಆತಂಕಗಳು, ಅವನು ಹುಟ್ಟಿದ ಕೂಡಲೇ ಗಟ್ಟಿಯಾಗಿ ಅಳಲು ಪ್ರಾರಂಭಿಸುವುದರೊಂದಿಗೆ ಮರೆಯಾಗಿ, ಅತಿಯಾದ ಸಂತೋಷದಿಂದ ಸಂಭ್ರಮಿಸಿದ್ದಳು. ಅದಕ್ಕೇ ಅವನ ಬಗ್ಗೆ ಅದೇನೋ ಒಂದು ರೀತಿಯ ವಿಶೇಷ ಪ್ರೀತಿ. ಆದರೆ ಈ ಪ್ರೀತಿಯ ಜೊತೆ ಜೊತೆಯಲ್ಲಿಯೇ ಮೊದಲ ಮಗುವಿನ ದುರಂತದ ನೆನಪೂ ಸೇರಿಕೊಂಡಿದ್ದು, ನೋವನ್ನೂ ಅನುಭವಿಸುತ್ತಿದ್ದಳು. ಉಳಿದ ಮಕ್ಕಳನ್ನು ಉಳಿಸಿಕೊಟ್ಟದ್ದಕ್ಕೆ, ಕೃತಜ್ಞತೆಯೂ ಅದರೊಂದಿಗೆ ಸೇರಿರುತ್ತಿತ್ತು.

"ವಿನ್ಸೆಂಟ್ ನೀನು ಬಹಳ ಒಳ್ಳೆಯ ಹುಡುಗ. ನಿನಗೆ ಹೇಗೆ ಬೇಕೋ ಹಾಗೇ ಇರು. ನಿನಗೆ ಯಾವುದು ಚೆನ್ನಾಗಿರುತ್ತೆ ಅನ್ನೋದನ್ನು ನೀನೇ ಬಲ್ಲೆ. ನಾನು ಹೇಳಿದ್ದು ನಿನಗೆ ಸಹಾಯವಾಗಲೆಂದು ಮಾತ್ರ!"

ಬಯಲು, ಗದ್ದೆ ಪ್ರದೇಶಗಳಲ್ಲಿ ಸ್ಕೆಚ್ ಮಾಡಲು ಹೋಗದೆ, ಒಂದು ದಿನ ತಮ್ಮ ತೋಟಮಾಲಿಯನ್ನೇ ಪೋಸ್ ಕೊಡಲು ಕೇಳಿಕೊಂಡ. ಮೊದಲಿಗೆ ಒಪ್ಪದಿದ್ದರೂ ನಂತರ ಅವನಿಗಾಗಿ ಕುಳಿತುಕೊಳ್ಳಲು ಒಪ್ಪಿದ.

"ಊಟ ಆದ ಮೇಲೆ...... ತೋಟದಲ್ಲಿ ಸಿಕ್ತೀನಿ"– ಮಾಲಿ ಹೇಳಿದ.

ಸ್ವಲ್ಪ ಹೊತ್ತಿನ ನಂತರ ವಿನ್ಸೆಂಟ್ ತೋಟದ ಕಡೆ ಹೊರಟಾಗ, ಮಾಲಿ ಪಿಯೆಟ್ ತುಂಬಾ ಚೆನ್ನಾಗಿರುವ ಸೂಟು ಧರಿಸಿದ. ನೀಟಾಗಿ ಮೇಕಪ್ ಮಾಡಿಕೊಂಡಿದ್ದ. ವಿನ್ಸೆಂಟ್ ಕಾಣಿಸಿದ ಕೂಡಲೇ ಥಟ್ಟನೆ ಏನೋ ನೆನಪಾಗಿ, "ಒಂದ್ನಿಮಿಷ"– ಎಂದು ಹೇಳಿ ಹೋಗಿ ಒಂದು ಸ್ಟೂಲು ಹೊತ್ತು ಬಂದ. ಸ್ಟೂಲನ್ನು ನೆಲದ ಮೇಲಿರಿಸಿ ಅದರ ಮೇಲೆ ಕುಳಿತು, ಒಂದು ಕೋಲಿನಂತೆ ಸ್ಟಿಫ್ಫಾಗಿ ಗಂಭೀರವಾಗಿ ಕುಳಿತು, ನಾನು ರೆಡಿ ಎಂದು ತಿಳಿಸಿದ. ವಿನ್ಸೆಂಟ್‌ಗೆ ಅವನ ಪೋಸ್, ವೇಷ ನೋಡಿ ನಗು ಬಂತು.

"ಪಿಯೆಟ್, ಈ ಥರ ಬಟ್ಟೇಲಿ ನಿನ್ನನ್ನು ಡ್ರಾ ಮಾಡೋಕೆ ಆಗೊಲ್ಲ."

ಅವನಿಗೆ ಆಶ್ಚರ್ಯ ಆಯ್ತು. ತನ್ನ ಬಟ್ಟೇನ ನೋಡಿಕೊಂಡ. "ಏನಾಗಿದೆ ನನ್ನ ಬಟ್ಟೆಗೆ? ಅವು ಹೊಸದು. ಒಂದೆರಡು ಭಾನುವಾರಗಳಲ್ಲಿ ಮಾತ್ರವೇ ಹಾಕ್ಕೊಂಡಿದ್ದೇನೆ."

"ಗೊತ್ತು ನನಗೆ. ಅದಕ್ಕೇ ಬೇಡ ಅಂದಿದ್ದು. ನೀನು ನಿನ್ನ ಹಳೇ ಬಟ್ಟೆಗಳಲ್ಲಿ, ಬಗ್ಗಿ ಕೆಲಸಮಾಡ್ತಿರೋದನ್ನು ಡ್ರಾ ಮಾಡಬೇಕಾಗಿದೆ. ಆಗ ಮಾತ್ರ ಚೆನ್ನಾಗಿ ಡ್ರಾಮಾಡೋಕೆ ಬರುತ್ತೆ. ನೀನು ಆ ರೀತಿ ಬಗ್ಗಿದ್ದರೆ, ನಿನ್ನ ಮೊಣಕ್ಕೈ, ಮೊಣಕಾಲು, ಭುಜಗಳು ಎಲ್ಲಾ ತುಂಬಾ ಚೆನ್ನಾಗಿ ಕಾಣುತ್ತೆ. ಈ ಥರ ಸೂಟಿದ್ದರೆ ಏನೂ ಕಾಣೋದಿಲ್ಲ ಅಲ್ವಾ?"

"ನನ್ನ ಹಳೆ ಬಟ್ಟೇ ಎಲ್ಲಾ ಕೊಳೆಯಾಗಿದೆ. ನನ್ನನ್ನು ಬರೀ ಬೇಕಾದರೆ, ನಾನೀಗ ಇರೋ ಹಾಗೇ ಬರೀಬೇಕು."

ವಿನ್ಸೆಂಟ್ ನೇರವಾಗಿ ಕೆಲಸದವರು ಕೆಲಸ ಮಾಡುತ್ತಿದ್ದ ಜಾಗಗಳಿಗೆ ಹೋದ. ಅಲ್ಲಿ ಕೆಲವರು ಬಾಗಿ ಮಣ್ಣು ಅಗೆಯುತ್ತಿದ್ದುದನ್ನು ಸ್ಕೆಚ್ ಮಾಡಿದ. ಅಂತೂ ಇಂತೂ ತನ್ನ ಸ್ವಪ್ರೇರಣೆ ನಿರ್ದೇಶನದಲ್ಲಿ ಎಷ್ಟು ಮಾಡಲು ಸಾಧ್ಯವೋ ಅಷ್ಟನ್ನು ಮಾಡಿದ. ಮತ್ತೆ ಅವನಿಗೆ ಯಾರಾದರೂ ಆರ್ಟಿಸ್ಟ್ ಜೊತೆ ಸ್ಟುಡಿಯೋದಲ್ಲಿ ಅನುಭವ ಪಡೆಯುವ ಮನಸ್ಸಾಯಿತು. ಅವರ ಜೊತೆ ಇದ್ದು, ಅವರು ಮಾಡಿದ ಉತ್ತಮ ಕಲಾಕೃತಿಗಳನ್ನು ನೋಡಿ ಅದರ ಒಳ್ಳೊಳ್ಳೆ ಅಂಶಗಳು ಯಾವುವೆಂದು ಗುರುತಿಸಿ, ತನ್ನ ಸ್ಕೆಚ್‌ಗಳಲ್ಲಿ ಅವುಗಳನ್ನು ತರುವ ಪ್ರಯತ್ನ ಮಾಡಬಹುದೆಂಬ ಆಲೋಚನೆ ಅವನಲ್ಲಿ ಮೂಡಿತು.

ಥಿಯೋ, ವಿನ್ಸೆಂಟ್‌ನನ್ನು ಪ್ಯಾರಿಸ್‌ಗೆ ಬರಲು ಹೇಳಿದ. ಆದರೆ ಪ್ಯಾರಿಸ್‌ಗೆ ಹೋಗುವಷ್ಟು ಪರಿಪಕ್ವತೆ ತನಗಿನ್ನೂ ಸಾಧಿಸಿಲ್ಲ ಎನಿಸಿತು. ತನ್ನ ಸ್ಕೆಚ್‌ಗಳು ಇನ್ನೂ ಬಾಲಿಶ, ಎಂದು ನಂಬಿದ್ದ. ಹೇಗ್ ಮಾತ್ರ ತಾನಿದ್ದ ಜಾಗದಿಂದ ಬಹಳ ದೂರ ಇರಲಿಲ್ಲವಾದ್ದರಿಂದ, ಅಲ್ಲಿ ಗೂಪಿಲ್ ಅಂಡ್ ಕಂಪೆನಿಯ ಟೆರ್ಸ್‌ಟೀಗ್‌ನಿಂದ ಬೇಕಾದ ಸಹಾಯ ಪಡೆಯಬಹುದು. ಜೊತೆಗೆ ಮಾವ್‌ನನ್ನೂ ಭೇಟಿಯಾಗಬಹುದು ಎಂದು ಕೊಂಡ. ಆದಕಾರಣ, ಇನ್ನೂ ಕಲಿಯುವ ಅವಸ್ಥೆಯಲ್ಲಿಯೇ ಇರುವುದರಿಂದ

ಹೇಗ್‌ನಲ್ಲಿಯೇ ಇರುವುದು ಒಳ್ಳೆಯದೆನಿಸಿ, ಥಿಯೋಗೆ ಬರೆದು ಅವನಿಂದ ಸಲಹೆ, ಸೂಚನೆಗಳನ್ನು ಬಯಸಿದ. ಥಿಯೋನಿಂದ ಉತ್ತರ ಮತ್ತು ರೈಲ್ವೆ ಟಿಕೀಟಿಗೆ ಸ್ವಲ್ಪ ಹಣವೂ ಬಂತು.

ಶಾಶ್ವತವಾಗಿ ಹೇಗ್‌ನಲ್ಲಿ ನೆಲೆಸುವುದಕ್ಕೆ ಮೊದಲು ಮಾವ್ ಮತ್ತು ಟೆರ್ಸ್ಟೀಗ್‌ರಿಗೆ ಪತ್ರ ಬರೆದು ಸಹಾಯವನ್ನು ಕೋರಿದ. ಸಹಾಯ ದೊರೆಯದಿದ್ದಲ್ಲಿ ಬೇರೆ ಎಲ್ಲಿಯಾದರೂ ಹೋಗಲು ಯೋಚಿಸುವುದಾಗಿ ತಿಳಿಸಿದ. ಜಾಗರೂಕತೆಯಿಂದ ತನ್ನೆಲ್ಲ ಸ್ಕೆಚ್‌ಗಳನ್ನು ಬಟ್ಟೆಯೊಂದರಲ್ಲಿ ಸುತ್ತಿಕೊಂಡು ತನ್ನ ದೇಶದ ರಾಜಧಾನಿಯ ಕಡೆ ಹೊರಟ.

–೪–

ಮಿಜ್ನಹೀರ್ ಟರ್ಸ್‌ಟೀಗ್ ಹೇಗ್ ಕಲಾಶಾಲೆಯ ಸಂಸ್ಥಾಪಕನಾಗಿದ್ದ. ಜೊತೆಗೆ ಹಾಲೆಂಡ್‌ನಲ್ಲಿ ಪ್ರತಿಷ್ಠಿತ ಆರ್ಟ್ ಡೀಲರ್ ಕೂಡಾ ಆಗಿದ್ದ. ದೇಶದ ಮೂಲೆ ಮೂಲೆಗಳಿಂದ ಕಲಾಪ್ರೇಮಿಗಳು ಬಂದು, ಟರ್ಸ್‌ಟೀಗ್‌ನೊಡನೆ ಸಮಾಲೋಚನೆ ಮಾಡಿ, ಎಂಥಾದ್ದು ಕೊಳ್ಳಬೇಕೆಂದು ತಿಳಿದುಕೊಳ್ಳುತ್ತಿದ್ದರು. ಅವನ ಅಭಿಪ್ರಾಯಕ್ಕೆ ಬಹಳ ಬೆಲೆ ಇತ್ತು. ಅವನು ಕ್ಯಾನ್‌ವಾಸ್ (ಚಿತ್ರಪಟ) ಚೆನ್ನಾಗಿದೇಂತ ಸೂಚಿಸಿದರೆ ಅದನ್ನೇ ಕೊಳ್ಳುತ್ತಿದ್ದರು.

ಮಿಜ್ನಹೀರ್ ಅಂಕಲ್ ವಿನ್ಸೆಂಟ್ ವಾನ್‌ಗೋನ ನಂತರ ಗೂಪಿಲ್ ಅಂಡ್ ಕಂಪೆನಿಯ ಜವಾಬ್ದಾರಿ ವಹಿಸಿಕೊಂಡಿದ್ದ. ಆ ಸಮಯದಲ್ಲಿ ಯುವ ಪ್ರತಿಭಾವಂತ ಡಚ್ ಕಲಾವಿದರು ದೇಶದ ಎಲ್ಲೆಲ್ಲೋ ಮೂಲೆಗಳಲ್ಲಿ ಹರಡಿಕೊಂಡಿದ್ದರು. ಆ್ಯಂಟನ್ ಮಾವ್, ಜೋಸೆಫ್‌ರು ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿ ನೆಲೆಸಿದ್ದರು. ಜಾಕೋಬ್, ವಿಲ್ಲೆಮ್ ಮಾರಿಸ್‌ರು ಬೇರೆ ಬೇರೆ ಪ್ರಾಂತಗಳಲ್ಲಿದ್ದರು. ಜೋಸೆಫ್ ಇಸ್ರೇಲ್ಸ್, ಜೋಹಾನ್ಸ್, ಬೋಸ್‌ಬೂಮ್ ಮತ್ತು ಬ್ಲೂಮರ್ಸ್ ಊರಿಂದ ಊರಿಗೆ ಅಲೆಯುತ್ತಿದ್ದರು. ಇರುವುದಕ್ಕೆ ಶಾಶ್ವತವಾದ ಒಂದು ಜಾಗ ಇರಲಿಲ್ಲ. ಟರ್ಸ್‌ಟೀಗ್, ಒಬ್ಬೊಬ್ಬರಿಗೂ ಸರದಿಯಂತೆ ಪತ್ರ ಬರೆದು ಹೇಳಿದ–

"ನಾವೆಲ್ಲ ಒಟ್ಟಿಗೆ ಇಲ್ಲಿ ಹೇಗ್‌ನಲ್ಲಿ ಸೇರಿ ಇದನ್ನು ಡಚ್‌ಕಲೆಯ ಕೇಂದ್ರವನ್ನಾಗಿ ಮಾಡಬಾರದೇಕೆ? ಪರಸ್ಪರ ಸಹಾಯವೂ ಆಗುತ್ತದೆ; ಒಬ್ಬರಿಂದ ಒಬ್ಬರು ಕಲಿತ ಹಾಗೂ ಆಗುತ್ತೆ. ಹೀಗೆ ಮಾಡುವುದರಿಂದ, ಫ್ರಾನ್ಸ್‌ಹಾಲ್ಸ್ ಮತ್ತು ರ್‍ಯಾಮ್‌ಬ್ರ್ಯಾಂಟ್‌ನ ಕಾಲದಲ್ಲಿ ಡಚ್ ಕಲೆಗಿದ್ದ ವಿಶ್ವಖ್ಯಾತಿಯನ್ನು ಮತ್ತೆ ತರುವುದಕ್ಕೂ ಸಾಧ್ಯವಾಗುತ್ತದೆ."

ಮೊದಲಿಗೆ ಉತ್ಸಾಹದ ಪ್ರತಿಕ್ರಿಯೆಯೇನೂ ಇರಲಿಲ್ಲ. ಆದರೆ ಕ್ರಮೇಣ, ಟರ್ಸ್‌ಟೀಗ್ ಆಯ್ದ ಯುವ ಕಲಾವಿದರು ಹೇಗ್‌ನಲ್ಲಿ ಬಂದು ನೆಲೆಸಿದರು. ಆ ಕಾಲದಲ್ಲಿ ಅವರ ಕ್ಯಾನ್‌ವಾಸ್‌ಗಳಿಗೆ ಅಷ್ಟೊಂದು ಬೇಡಿಕೆ ಇರಲಿಲ್ಲ. ಟರ್ಸ್‌ಟೀಗ್ ಅವುಗಳನ್ನು ಪ್ರತ್ಯೇಕವಾಗಿ ಆರಿಸಿಕೊಂಡ. ಅವುಗಳನ್ನು ಆಯ್ಕೆ ಮಾಡಿದ್ದು ಒಳ್ಳೆ ಮಾರುಕಟ್ಟೆ ಇದೆ ಎನ್ನುವ ಕಾರಣಕ್ಕಲ್ಲ. ಮುಂದೆ ಇವುಗಳಿಗೆ ಮಹತ್ವ ಬರುತ್ತೆ

ಅನ್ನುವುದನ್ನು ಊಹಿಸಿದ್ದ. ಜನರಿಗೆ ಅವುಗಳ ಮಹತ್ವವನ್ನು ವಿವರಿಸಿ ತಿಳಿಸುವುದಕ್ಕೆ ಮೊದಲೇ, ಆರು ವರ್ಷದ ಹಿಂದೆಯೇ, ಇಸ್ರೇಲ್ಸ್ ಮಾವ್, ಜಾಕೋಬ್ ಮಾರಿಸ್ ಮೊದಲಾದವರಿಂದ ಕ್ಯಾನ್‌ವಾಸ್‌ಗಳನ್ನು ಕೊಂಡಿರಿಸಿದ್ದ.

ಒಂದೊಂದು ವರ್ಷಾನೂ ಬಹಳ ತಾಳ್ಮೆಯಿಂದ ಬೋಸ್‌ಬೂಮ್, ನ್ಯೂಹಿಸ್ ಮಾರಿಸ್, ನೂ ಹ್ಯೂಇಸ್ ಮುಂತಾದ ಕಲಾವಿದರ ಕ್ಯಾನ್‌ವಾಸ್‌ಗಳನ್ನು ಕೊಳ್ಳುತ್ತಾ ತನ್ನ ಅಂಗಡಿಯ ಗೋಡೆಯನ್ನಲಂಕರಿಸಿ ಇರಿಸುತ್ತಿದ್ದ. ಇವರು ಹೆಸರು ಮಾಡುವುದಕ್ಕೆ ಮೊದಲು ಇವರಿಗೆ ಪ್ರೋತ್ಸಾಹ, ಸಹಾಯದ ಅಗತ್ಯವಿದೆಯೆಂದು ಮನಗಂಡಿದ್ದ. ಡಚ್ ಜನರಿಗೆ ತಮ್ಮವರ ದೇಸೀ ಪ್ರತಿಭೆಯನ್ನು ಗುರುತಿಸಲಾಗದಿದ್ದರೂ ಟರ್ಸ್‌ಟೀಗ್ ಒಳ್ಳೆಯ ಕಲಾವಿಮರ್ಶಕ, ಪ್ರಸಿದ್ಧ ಆರ್ಟ್‌ಡೀಲರ್, ಆಗಿದ್ದುದರಿಂದ, ಕಲಾವಿದರ ಬಡತನ, ಸಮಾಜದ ನಿರ್ಲಕ್ಷ್ಯಗಳಿಂದ ಅವರ ಮಹಾನ್ ಕಲಾಪ್ರತಿಭೆ ಜಗತ್ತಿಗೆ ದಕ್ಕದೆ ಹೋಗಬಾರದೆಂದು. ಹೀಗೆ ಕೊಂಡಿರಿಸುತ್ತಿದ್ದ. ಅಷ್ಟೇ ಅಲ್ಲದೆ ಕೃತಿಗಳು ಮಾರಾಟವಾಗದಿದ್ದರೂ, ಆರ್ಥಿಕ ನೆರವಾಗುವುದೆಂದು ಭಾವಿಸಿಕೊಳ್ಳುತ್ತಿದ್ದ; ಸಮಕಾಲೀನ ಚಿತ್ರ ಕಲಾವಿದರ ಪರಿಚಯ ಮಾಡಿಸುತ್ತಿದ್ದ; ಅವರ ಕೃತಿಗಳನ್ನು ವಿಮರ್ಶೆ ಮಾಡುತ್ತಿದ್ದ; ಅವರ ಆತ್ಮವಿಶ್ವಾಸ ಹೆಚ್ಚಿಸುವ ರೀತಿಯಲ್ಲಿ ಪ್ರೋತ್ಸಾಹ ನೀಡುತ್ತಿದ್ದ. ದಿನ ಕಳೆದಂತೆ ಡಚ್ ಪ್ರಜೆಗಳಿಗೆ ತಮ್ಮವರ ಪ್ರತಿಭೆಯನ್ನು ಗುರುತಿಸುವಂತೆ, ಅವರ ಕಲಾಕೃತಿಗಳ ಬಗ್ಗೆ ವಿವರಿಸಿ ಹೇಳುತ್ತಿದ್ದ.

ವಿನ್ಸೆಂಟ್ ಹೇಗ್ ತಲುಪುವ ಹೊತ್ತಿಗೆ, ಇವರೆಲ್ಲ ಸಾಕಷ್ಟು ಪ್ರಸಿದ್ಧಿಗೆ ಬಂದಿದ್ದರು. ಅವರ ಕಲಾಕೃತಿಗಳು ಗೂಪಿಲ್ ಅಂಡ್ ಕಂಪೆನಿಯಲ್ಲಿ ಹೆಚ್ಚಿನ ಬೆಲೆಗೆ, ಮಾರಾಟವಾಗುತ್ತಿತ್ತು. ಅವರು ಮಾಡಿದ್ದೆಲ್ಲಕ್ಕೂ ಬಹಳ ಬೇಡಿಕೆಯಿತ್ತು. ಅಷ್ಟೇ ಮಹತ್ವದ ಕಲಾಕೃತಿಗಳ ಎತ್ತರಕ್ಕೆ ಏರುವುದರಲ್ಲಿದ್ದವು.

ಟರ್ಸ್‌ಟೀಗ್ ಡಚ್ ಸಂಪ್ರದಾಯದ ಒಬ್ಬ ಸುಂದರ ಪುರುಷನಾಗಿದ್ದ. ಡಚ್ ಜನಾಂಗದ ಮುಖಲಕ್ಷಣಗಳನ್ನು ಪ್ರತಿನಿಧಿಸುತ್ತಿದ್ದ. ಕಂದು ಬಣ್ಣದ ಕೂದಲನ್ನು ಹಿಂದಕ್ಕೆ ಬಾಚಿರುತ್ತಿದ್ದ. ಕಪ್ಪು ಜಾಕೆಟ್, ಅಗಲವಾದ ಪಟ್ಟಿಗಳುಳ್ಳ ಟ್ರೌಷರ್ಸ್, ಕಪ್ಪು ಟೈ – ಇವನು ಧರಿಸುತ್ತಿದ್ದ ಉಡುಪಾಗಿತ್ತು.

ಈತನಿಗೆ ವಿನ್ಸೆಂಟ್ ಎಂದರೆ ಪ್ರಾಣ. ವಿನ್ಸೆಂಟ್ ಲಂಡನ್‌ಗೆ ಟ್ರಾನ್ಸ್‌ಫರ್ ಆದಾಗ, ಅವನ ಬಗ್ಗೆ ಒಳ್ಳೆಯ ಮಾತುಗಳನ್ನು ಹೇಳಿ ಬರೆದು ಕಳಿಸಿದ್ದ. ವಿನ್ಸೆಂಟ್ ಕೇಳಿದ್ದ "ಎಕ್ಸರ್‌ಸೈಸಸ್ ಒ ಫ್ಯುಸೆನ್" ಮತ್ತು ಕೋರ್ಸ್‌ದ ದೆಸ್ಸಿನ್‌ಬಾರ್ಗ್' ಮೊದಲಾದ ಪುಸ್ತಕಗಳನ್ನು ಬೋರಿನೇಜ್‌ಗೆ ಕಳಿಸಿಕೊಟ್ಟಿದ್ದ. ಇವುಗಳಿಂದ ಅವನಿಗೆ ತುಂಬ ಪ್ರಯೋಜನವಾಗುವುದೆಂದು ಅವನು ತಿಳಿದಿದ್ದ. ಗೂಪಿಲ್ ಅಂಡ್ ಕಂಪೆನಿಯ ಮಾಲಿಕ ವಿನ್ಸೆಂಟ್‌ನ ಅಂಕಲ್ ಆಗಿದ್ದರೂ, ವಿನ್ಸೆಂಟ್‌ನನ್ನು ಶುದ್ಧ ಮನಸ್ಸಿನಿಂದ, ವಿನ್ಸೆಂಟ್ ಮೇಲಿನ ಅಭಿಮಾನದಿಂದಲೇ ಪ್ರೀತಿಸುತ್ತಿದ್ದ.

ಗೂಪಿಲ್ ಅಂಡ್ ಕಂಪೆನಿ ಇಡೀ ಹೇಗ್‌ನಲ್ಲಿಯೇ ಅತ್ಯಂತ ಪ್ರಖ್ಯಾತವಾದ ಮತ್ತು ದುಬಾರಿಯಾದ ಮತ್ತು ಶ್ರೀಮಂತರು ಮಾತ್ರವೇ ಹೋಗಲು ಸಾಧ್ಯವಿದ್ದ

ಕಲಾಕೃತಿಗಳ ಮಾರಾಟ ಮಳಿಗೆಯಾಗಿತ್ತು. ಇಲ್ಲಿ ರೂಬೆನ್ಸ್, ಹಾಲ್ಸ್, ರ್ಯಂಬ್ರಾಟ್ ಮೊದಲಾದ ಪ್ರಸಿದ್ಧ ಡಚ್ ಕಲಾವಿದರ ಕಲಾಕೃತಿಗಳು ಲಭ್ಯವಾಗಿರುತ್ತಿದ್ದವು.

ವಿನ್ಸೆಂಟ್ ಸ್ಟೇಷನ್‌ನಿಂದ ಸಂಕೀರ್ಣವಾದ ರಸ್ತೆಗಳನ್ನು ದಾಟುತ್ತ, ಎಂಟು ವರ್ಷಗಳ ಹಿಂದೆ ಬಿಟ್ಟು ಹೋಗಿದ್ದ ಗೂಪಿಲ್ಸ್ ಅಂಡ್ ಕಂಪೆನಿ ತಲುಪಿದ. ಹಿಂದಿನ ನೋವಿನ ದಿನಗಳ ನೆನಪಾಗಿ ಅಚ್ಚರಿಗೊಂಡ.

ಎಂಟು ವರ್ಷಗಳ ಹಿಂದೆ, ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದರು; ಹೆಮ್ಮೆ ಪಡುತ್ತಿದ್ದರು. ಇವನು ಅಂಕಲ್ ವಿನ್ಸೆಂಟ್‌ನ ಅಚ್ಚುಮೆಚ್ಚಿನ ಹುಡುಗನಾಗಿದ್ದ. ಎಲ್ಲರಿಗೂ ಮುಂದೆ ಇವನೇ ಇದರ ಮಾಲಿಕನಾಗುತ್ತಾನೆಂದೇ ಭಾವಿಸಿದ್ದರು. ಬಯಸಿದ್ದರೆ ವಿನ್ಸೆಂಟ್ ಇಷ್ಟು ಹೊತ್ತಿಗೆ ಊಹಿಸಲಾಗದಷ್ಟು ಶ್ರೀಮಂತನೂ ಆಗಿ ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿಯೆನಿಸಿಕೊಂಡು ಎಲ್ಲರ ಗೌರವಕ್ಕೂ ಪಾತ್ರನಾಗಿರುತ್ತಿದ್ದ. ಅಲ್ಲದೆ ಅನೇಕ ಮಳಿಗೆಗಳ ಮಾಲಿಕತ್ವವನ್ನೂ ಗಳಿಸಿಕೊಳ್ಳುತ್ತಿದ್ದ.

ಆದರೆ ಇವನಿಗೆ ಆದದ್ದಾದರೂ ಏನು?

ಈ ಪ್ರಶ್ನೆಗೆ ಉತ್ತರಿಸಲು ಇವನಿಂದ ಸಾಧ್ಯವಾಗಲಿಲ್ಲ. ಪ್ಲಾಟ್ಸ್ ದಾಟಿ ಗೂಪಿಲ್ ತಲುಪಿದ. ಸುಂದರವಾದ ರೀತಿಯಲ್ಲಿ ಪ್ರದೇಶ ಅಲಂಕೃತವಾಗಿತ್ತು. ತಕ್ಷಣ ಅವನಿಗೆ ತಾನು ಧರಿಸಿದ ಕೊಳಕು ಬಟ್ಟೆಯ ನೆನಪಾಗಿ ನಾಚಿಕೆಯೆನಿಸಿತು. ಎರಡು ಅಂತಸ್ತುಗಳ ವಿಶಾಲವಾದ ಕಟ್ಟಡ. ಗ್ಯಾಲರಿ ಪರದೆಗಳಿಂದ, ಗಾಜಿನ ಮೇಲ್ಹಾವಣಿಯಿಂದ ಅಲಂಕೃತವಾಗಿತ್ತು. ಎರಡನೇ ಅಂತಸ್ತಿನಲ್ಲಿ ಟರ್ಸ್‌ಟೀಗ್‌ನ ಕಛೇರಿ ಇತ್ತು. ಪಿರಾಮಿಡ್ ರೀತಿಯಲ್ಲಿದ್ದ ಗೋಡೆಗಳ ಮೇಲೆ ಕಲಾಕೃತಿಗಳು ರಂಜಿಸುತ್ತಿದ್ದವು.

ಗ್ಯಾಲರಿಯನ್ನು ನೋಡುತ್ತಿದ್ದಂತೆಯೇ ಅದರ ಶ್ರೀಮಂತಿಕೆ, ಸಂಸ್ಕೃತಿಗಳ ನಿಚ್ಚಳ ನೋಟವು ಕಣ್ಣಿಗೆ ಬೀಳುತ್ತಿತ್ತು. ಅಲ್ಲಿ ಕೆಲಸಮಾಡುತ್ತಿದ್ದ ಸಿಬ್ಬಂದಿಯೂ ಕೂಡ ಸಾಕಷ್ಟು ಶಿಸ್ತಿನ ನಡೆವಳಿಕೆಯ ತರಬೇತಿ ಪಡೆದವರಾಗಿದ್ದರು. ಚಿತ್ರಪಟಗಳಿಗೆ ಹಾಕಿದ್ದ ಚೌಕಟ್ಟುಗಳೂ ಬಹಳ ಬೆಲೆಯುಳ್ಳದ್ದಾಗಿದ್ದವು. ನಡೆದಾಡಲು ನೆಲದ ಮೇಲೆ ಮೆತ್ತನೆಯ ರತ್ನಗಂಬಳಿಯನ್ನು ಹಾಸಲಾಗಿದ್ದು ಅಲ್ಲಲ್ಲಿ ಮೂಲೆಗಳಲ್ಲಿ ಕುರ್ಚಿಗಳನ್ನು ಇರಿಸಿದ್ದರು. ಅವೆಲ್ಲವೂ ಅತ್ಯಂತ ಅಮೂಲ್ಯವಾದ ಪುರಾತನ ಕಾಲದವಾಗಿದ್ದುದನ್ನು ನೆನಪಿಸಿಕೊಂಡ. ಇಂತಹ ಅದ್ಭುತ ಕಲಾಕೃತಿಗಳ ಎದುರಿನಲ್ಲಿ ತನ್ನ ಸ್ಕೆಚ್‌ಗಳು ಅದೂ ಅಗೆಯುತ್ತಿರುವ, ರೈತರ, ಕಲ್ಲಿದ್ದಲ ಗಣಿ ಕಾರ್ಮಿಕರ, ತೀರ ಬಡವೆನಿಸುವ ಅವುಗಳು ಎಂದಾದರೂ ಇಂಥ ಕಡೆಗಳಲ್ಲಿ, ಮಹತ್ವದ ಕಲಾಕೇಂದ್ರದಲ್ಲಿ, ಮಾರಾಟವಾಗಲು ಸಾಧ್ಯವೇ?

ಖಂಡಿತ ಸಾಧ್ಯವಾಗಲಾರದು ಎನಿಸಿತು.

ಮಾವ್ ಬಿಡಿಸಿದ್ದ 'ಕುರಿಯ ತಲೆ' ಚಿತ್ರವನ್ನು ಒಂದು ವಿಚಿತ್ರ ರೀತಿಯ ಮೆಚ್ಚುಗೆಯಿಂದ ನೋಡುತ್ತಾ ನಿಂತ. ಟೇಬಲ್‌ನ ಹಿಂದೆ ನಿಂತಿದ್ದ ಕ್ಲರ್ಕ್‌ಗಳು ಇವನ ಕೊಳಕಾದ ಬಟ್ಟೆ, ನಿಂತ ಭಂಗಿಯತ್ತ ಒಮ್ಮೆ ನೋಟ ಬೀರಿ ಹರಟುತ್ತಿದ್ದರೇ ಹೊರತು ಅವನನ್ನು ಮಾತಾಡಿಸಿ, ವಿಚಾರಿಸುವ ಗೋಜಿಗೆ ಹೋಗಲೇ ಇಲ್ಲ. ಟರ್ಸ್‌ಟೀಗ್

ಮೇಲುಗಡೆ, ಕಲಾಕೃತಿಗಳ ಪ್ರದರ್ಶನಕ್ಕೆ ಏರ್ಪಾಟುಗಳನ್ನು ಮಾಡುತ್ತಿದ್ದವನು, ಕೆಳಗಿಳಿದು ಅಂಗಡಿಯ ಮುಖ್ಯಭಾಗಕ್ಕೆ ಬಂದ. ವಿನ್ಸೆಂಟ್ ಅವನು ಬಂದದ್ದನ್ನು ಗಮನಿಸಲಿಲ್ಲ.

ಟರ್ಸ್‌ಟೀಗ್ ಮಾತ್ರ ಒಂದೆರಡು ಮೆಟ್ಟಿಲು ಇಳಿದು ನಿಂತು, ತಮ್ಮ ಹಿಂದಿನ ಕ್ಲರ್ಕ್‌ನ್ನು ಗಮನಿಸಿದ. ಕೆದರಿದ ಕೂದಲು, ಕೆಂಪು ಕುರುಚಲು ಗಡ್ಡ, ಗುಂಡಿ ಹಾಕಿಕೊಳ್ಳದ ಷರ್ಟ್, ಕಂಕುಳ ಕೆಳಗೆ ತುರುಕಿಕೊಂಡಿದ್ದ ಒಂದು ಮೂಟೆ..... ಎಲ್ಲವೂ ಏನೋ ವಿಚಿತ್ರ, ವಿಪರೀತ ಎನಿಸುತ್ತಿತ್ತು. ಇಷ್ಟು ಸುಂದರವಾದ ಗ್ಯಾಲರಿಯೆಡೆಯಲ್ಲಿ ತೀರಾ ಕೆಟ್ಟದಾಗಿ ಕಾಣುತ್ತಿತ್ತು.

"ವಿನ್ಸೆಂಟ್.... ನಮ್ಮ ಕ್ಯಾನ್‌ವಾಸ್‌ಗಳನ್ನು ನೋಡಿ ಮೆಚ್ಚುತ್ತಿರುವಂತಿದೆ".... ಸದ್ದಿಲ್ಲದೆ ಬಳಿಗೆ ಬಂದು ಹೇಳಿದ.

ವಿನ್ಸೆಂಟ್, ತಿರುಗಿ ಉತ್ತರಿಸಿದ– ಹೌದು ತುಂಬಾ ಚೆನ್ನಾಗಿದೆ. ಹೌದಲ್ಲ?"..... ಹೇಗಿದ್ದೀರಿ ಟರ್ಸ್‌ಟೀಗರೇ ನನ್ನ ತಂದೆ ತಾಯಿ ತಮ್ಮನ್ನು ಬಹಳವಾಗಿ ಕೇಳಿದರು. ಶುಭಾಶಯಗಳನ್ನು ತಿಳಿಸಲು ಹೇಳಿದರು.

ಇಬ್ಬರೂ ಕೈಕುಲುಕಿ ಎಂಟು ವರ್ಷಗಳ ಸ್ನೇಹವನ್ನು ಮತ್ತಷ್ಟು ಭದ್ರ ಪಡಿಸಿದರು.

"ನಾನು ಮೊದಲು ನೋಡಿದ್ದಕ್ಕಿಂತ, ಚೆನ್ನಾಗಿ ಕಾಣಿಸುತ್ತಿದ್ದೀರಿ, ಮಿಜ್ನಹೀರ್!"

"ಹೌದು. ಇಲ್ಲಿನ ಬದುಕು, ಕೆಲಸ ಸದಾ ನನ್ನನ್ನು ಯುವಕನ್ನಾಗಿರುವಂತೆ ಮಾಡುತ್ತದೆ...... ಬಾ ನನ್ನ ಆಫೀಸಿಗೆ ಹೋಗೋಣ."

ವಿನ್ಸೆಂಟ್ ಟರ್ಸ್‌ಟೀಗ್‌ನನ್ನು ಹಿಂಬಾಲಿಸಿ ಮೆಟ್ಟಿಲೇರತೊಡಗಿದನಾದರೂ, ಚಿತ್ರಪಟಗಳ ಮೇಲಿಂದ ತನ್ನ ಕಣ್ಣನ್ನು ಕೀಳಲಾರದೆ ಅವುಗಳನ್ನೇ ದೃಷ್ಟಿಸುತ್ತಿದ್ದುದರಿಂದ, ಏರುವಾಗ ಹೆಜ್ಜೆ ತಡವರಿಸಿ ಬೀಳುತ್ತಿದ್ದ. ಬ್ರಸೆಲ್ಸ್‌ನಲ್ಲಿ ಥಿಯೋ ಜೊತೆಗೆ ಇದ್ದಾಗ ನೋಡಿದ್ದರ ಹೊರತು ಮತ್ತೆಂದೂ ಇಂತಹ ಸುಂದರ ಕಲಾಕೃತಿಗಳನ್ನು ನೋಡುವ ಅವಕಾಶ ಸಿಕ್ಕಿರಲಿಲ್ಲ. ಈಗ ನೋಡುತ್ತಿದ್ದಂತೆ ದಿಗ್ಭ್ರಮೆಗೆ ಒಳಗಾಗಿದ್ದ. ಟರ್ಸ್‌ಟೀಗ್ ತನ್ನ ಕಛೇರಿಯ ಬಾಗಿಲು ತೆಗೆದು ವಿನ್ಸೆಂಟ್‌ನನ್ನು ಒಳಗೆ ಬರಮಾಡಿಕೊಂಡ.

"ವಿನ್ಸೆಂಟ್, ಕುಳಿತುಕೋಬಹುದಲ್ಲ!"

ವಿನ್ಸೆಂಟ್‌ನ ಕಣ್ಣು ವೀಸೆನ್‌ಬ್ರೂಕ್‌ನ ಚಿತ್ರಪಟದ ಮೇಲೆ ನೆಟ್ಟಿತ್ತು. ಅಂತಹುದನ್ನು ಹಿಂದೆಂದೂ ನೋಡಿರಲಿಲ್ಲ. ಅವನು ಕುಳಿತುಕೊಂಡು ತನ್ನ ಕೈಲಿದ್ದ ಪುಸ್ತಕಗಳ ಕಟ್ಟನ್ನು ಕೆಳಗಿರಿಸಿ, ಮತ್ತೆ ಕೈಗೆತ್ತಿಕೊಂಡ. ಟರ್ಸ್‌ಟೀಗ್ ಕುಳಿತಿದ್ದೆಡೆಗೆ ಅದನ್ನು ಸರಿಸಿದ.

"ಮಿಜ್ನಹೀರ್ ಟರ್ಸ್‌ಟೀಗ್, ನೀವು ನೀಡಿದ್ದ ಪುಸ್ತಕಗಳನ್ನು ಹಿಂದಕ್ಕೆ ತಂದಿದ್ದೇನೆ." ಎಂದು ಹೇಳಿದ.

ಪುಸ್ತಕಗಳ ಕಟ್ಟನ್ನು ಬಿಚ್ಚಿ, ಅದರ ಜೊತೆಗೇ ಇರಿಸಿದ್ದ ಒಂದು ಅಂಗಿ, ಒಂದು ಜೊತೆ ಕಾಲುಚೀಲಗಳನ್ನು ಪಕ್ಕಕ್ಕೆ ಇರಿಸಿ, "ಇದು 'Exercises au fussain' ಎಂದು ತೋರಿಸಿ ಮೇಜಿನ ಮೇಲೆ ಇರಿಸಿದ.

"ಡ್ರಾಯಿಂಗ್ಸ್‌ನ ಚೆನ್ನಾಗಿ ಅಭ್ಯಾಸ ಮಾಡಿದೆ. ನಿಮ್ಮಿಂದ ಬಹಳ ಉಪಕಾರ ಆಯಿತು."

"ನೀನು ಮಾಡಿರುವ ಡ್ರಾಯಿಂಗ್ಸ್ ತೋರಿಸು, ನೋಡೋಣ, ಹೇಗಿದೇಂತ!"

ವಿನ್ಸೆಂಟ್ ಒಂದು ರಾಶಿ ಪೇಪರುಗಳ ಜೊತೆ ಇರಿಸಿದ್ದ, ಮೊದಲ ಕಂತಿನ ಡ್ರಾಯಿಂಗ್‌ಗಳನ್ನು ತೆಗೆದು ತೋರಿಸಿದ. ಅವೆಲ್ಲವೂ ಬೋರಿನೇಜ್‌ನಲ್ಲಿ ಇದ್ದಾಗ ಮಾಡಿದಂತಹುಗಳಾಗಿದ್ದವು. ಟರ್ಸ್‌ಟೀಗ್ ಅವುಗಳನ್ನು ನೋಡಿದನಾದರೂ ಶೀತಲ ಮೌನಿಯಾಗಿದ್ದ. ಎಟ್ಟೆನ್‌ನಲ್ಲಿದ್ದಾಗ ಮಾಡಿದ ಸ್ಕೆಚ್‌ಗಳನ್ನು ನೋಡಿದಾಗ, 'ಹೂಂ!' ಎಂದನೇ ಹೊರತಾಗಿ ಮತ್ತೊಂದು ಮಾತಿರಲಿಲ್ಲ. ಕಡೆಯದಾಗಿ, ಇಲ್ಲಿಗೆ ಬರುವುದಕ್ಕೆ ಸ್ವಲ್ಪ ಮೊದಲು ಮಾಡಿದ್ದವುಗಳನ್ನು ನೋಡುತ್ತಿದ್ದಂತೆ, ಅವನಲ್ಲಿ ಆಸಕ್ತಿ ಮೂಡುತ್ತಿದ್ದಂತೆ ಕಾಣಿಸಿತು.

"ಪರವಾಗಿಲ್ಲ, ರೇಖೆಗಳ ಸಂಯೋಜನೆ, ಷೇಡಿಂಗ್ ಎಲ್ಲ ಚೆನ್ನಾಗಿ ಬಂದಿದೆ. ನಿನ್ನ ಹಿಡಿತಕ್ಕೆ ಬಂದಿದೆ ಅಂತ ಅನ್ನಿಸುತ್ತೆ."

"ನನಗೂ ಇವು ಪರವಾಗಿಲ್ಲ ಅಂತ ಅನ್ನಿಸ್ತು." ಟರ್ಸ್‌ಟೀಗ್ ಮುಂದೆ ಹೇಳುವುದನ್ನು ಕಾಯುತ್ತಿದ್ದ.

"ಹೌದು ವಿನ್ಸೆಂಟ್...... ಸ್ವಲ್ಪ ಮಟ್ಟಿಗೆ ಸಾಧಿಸಿದ್ದೀಯ" –ಎಂದು ಡೆಸ್ಕಿನ ಮೇಲೆ ಕೈಯಿರಿಸುತ್ತಾ ಹೇಳಿದ. ಹಾಗೆಯೇ ಮಾತು ಮುಂದುವರೆಸಿದ.

ನಿನ್ನ ಮೊದಲ ಕಂತಿನ ಸ್ಕೆಚ್‌ಗಳನ್ನು ನೋಡಿದಾಗ ನಿರಾಶೆಯಾಯಿತು. ಆಮೇಲಾಮೇಲೆ ನೋಡುತ್ತಾ ಹೋದಾಗ, ನೀನು ಸಾಕಷ್ಟು ಶ್ರಮ ಪಡುತ್ತಿದ್ದುದು ಕಾಣಿಸಿತು. ತೀರಾ ಹೇಳಿಕೊಳ್ಳುವಷ್ಟು ಸಾಧನೆಯಾಗಿದೆ ಎನಿಸದಿದ್ದರೂ ಸ್ವಲ್ಪ ಪರವಾಗಿಲ್ಲ."

"ಅಂದ್ರೇ? ಅಷ್ಟೇನಾ? ನಾನು ಕಷ್ಟಪಡ್ತಿದ್ದೇನೆ ಅನ್ನೋದು ಬಿಟ್ಟರೆ, ನನಗೆ ಸಾಮರ್ಥ್ಯ ಇದೆ ಅಂತ ತಿಳಿಯೋದಿಲ್ಲವೇ?"

"ಈಗಲೇ ನಿನ್ನ ಸಾಮರ್ಥ್ಯದ ಬಗ್ಗೆ ಮಾತಾಡೋದು ಅಷ್ಟು ಸರಿ ಅಲ್ಲ ಅಂತ ಅನಿಸೋದಿಲ್ಲವೆ!"

"ಅದು ನಿಜವೇ? ನಾನು ಮೂಲ ಅಂದರೆ ಸ್ವಂತದ ಡ್ರಾಯಿಂಗ್ಸ್ ತಂದಿದ್ದೇನೆ. ನೋಡಲು ಅಭ್ಯಂತರ ಇಲ್ಲತಾನೆ?"

"ನೋಡೋದರಿಂದ ನನಗೂ ಸಂತೋಷವೇ"

ವಿನ್ಸೆಂಟ್ ಡ್ರಾ ಮಾಡಿದ್ದ, ಗಣಿ ಕಾರ್ಮಿಕರ, ರೈತರ ಸ್ಕೆಚ್‌ಗಳನ್ನು ಟರ್ಸ್‌ಟೀಗ್ ಮುಂದೆ ಬಿಡಿಸಿಟ್ಟ. ಟರ್ಸ್‌ಟೀಗ್ ಮೊದಲಿಗೆ ತೋರಿದ್ದ ಮೌನವನ್ನೇ ಈಗಲೂ ತೋರಿದ. ಮೊದಲಿಗೆ ಮಾತಿಲ್ಲವೆಂದರೆ, ಎಷ್ಟು ಹೊತ್ತಾದರೂ ಮಾತಾಡುವುದಿಲ್ಲ ಎಂಬುದು ವಿನ್ಸೆಂಟ್‌ಗೆ ತಿಳಿದಿತ್ತು. ಕೆಟ್ಟ ಡ್ರಾಯಿಂಗ್‌ಗಳನ್ನು ನೋಡಿದಾಗ, ಹೊರ ಕಾಣುವ ಪ್ರತಿಕ್ರಿಯೆಯೆಂದರೆ ಈ ಬಗೆಯ ಮೌನ! ವಿನ್ಸೆಂಟ್ ಒಳಗೊಳಗೇ ಅಸ್ವಸ್ಥನಾದ.

ಟರ್ಸ್‌ಟೀಗ್ ಹಿಂದಕ್ಕೆ ಒರಗಿ ಕುಳಿತು ಕಿಟಕಿಯಾಚೆಗೆ ದೃಷ್ಟಿ ಹಾಯಿಸಿ, ಕೊಳದಲ್ಲಿನ ಹಂಸಗಳನ್ನು ಗಮನಿಸುತ್ತಿದ್ದ.

"ಮಿಜ್ನಹೀರ್ ಟರ್ಸ್‌ಟೀಗ್, ಇವುಗಳಲ್ಲಿ ಏನೊಂದೂ ಸುಧಾರಣೆ ಕಾಣಿಸುತ್ತಿಲ್ಲವೆ? ಬೋರಿನೇಜ್‌ನಲ್ಲಿ ಮಾಡಿದ್ದ ಸ್ಕೆಚ್‌ಗಳಿಗಿಂತ, ಬ್ರಬಾಂಟ್‌ನ ಸ್ಕೆಚ್‌ಗಳು ಚೆನ್ನಾಗಿಲ್ಲವೇ?"

ಹೊರಗೆ ನೆಟ್ಟಿದ್ದ ದೃಷ್ಟಿಯನ್ನು ವಿನ್ಸೆಂಟ್‌ನ ಕಡೆ ಹಾಯಿಸಿ, "ಹೇಳೋದಾದರೆ, ಇವು ಪರವಾಗಿಲ್ಲ. ಆದರೆ ಅಷ್ಟಾಗಿ ಚೆನ್ನಾಗಿಲ್ಲ. ಪ್ರಾರಂಭದಲ್ಲಿಯೇ ಎಲ್ಲೋ ಏನೋ ದೋಷ ಕಾಣಿಸುತ್ತೆ. ಆದ್ದರಿಂದ ಇನ್ನೂ ಸ್ವಲ್ಪಕಾಲ ಕಾಪಿಮಾಡುವುದನ್ನೇ ಮುಂದುವರೆಸು. ನೀನೇ ಸ್ವತಂತ್ರವಾಗಿ ಸ್ಕೆಚ್ ಮಾಡುವಷ್ಟು, ಇನ್ನೂ ನೀನು ಬೆಳೆದಿಲ್ಲ. ಜೀವಂತ ವ್ಯಕ್ತಿಗಳ ಸ್ಕೆಚ್ ಮಾಡುವುದಕ್ಕೆ ಮೊದಲು, ಪ್ರಾಥಮಿಕ ಅಂಶಗಳ ಕಡೆ ಗಮನವಿಟ್ಟು ಕಲಿಯಬೇಕು."

"ನಾನು ಇಲ್ಲಿ ಹೇಗ್‌ನಲ್ಲಿ ಉಳಿದು ಅಭ್ಯಾಸ ಮಾಡಬೇಕೆಂದಿದ್ದೇನೆ. ತಾವೇನಂತೀರಿ?"

ಟರ್ಸ್‌ಟೀಗ್ ಏನನ್ನೂ ಹೇಳಲಿಲ್ಲ. ಯಾವುದನ್ನೂ ನಿರ್ಧರಿಸಲಾರದ ವಿಚಿತ್ರ ಸ್ಥಿತಿಯಲ್ಲಿದ್ದ.

"ಹೇಗ್ ಒಳ್ಳೆ ಜಾಗಾನೇ ಒಳ್ಳೊಳ್ಳೆ ಆರ್ಟ್ ಗ್ಯಾಲರಿಗಳು ಇವೆ. ಪ್ರತಿಭಾವಂತ ವರ್ಣಚಿತ್ರ ಕಲಾವಿದರಿದ್ದಾರೆ. ಆದರೆ ಪ್ಯಾರಿಸ್, ಬ್ರಸೆಲ್ಸ್ ಮೊದಲಾದ ಪ್ರದೇಶಗಳಿಗಿಂತ ಇಲ್ಲಿ ಇರುವವರು, ಅಲ್ಲಿನವರಿಗಿಂತ ಶ್ರೇಷ್ಠರೇ ಅನ್ನುವುದು ವಿಚಾರಿಸಬೇಕಾದ ಸಂಗತಿ!"

ವಿನ್ಸೆಂಟ್ ಅಲ್ಲಿಂದ ಹೊರಟನಾದರೂ ನಿರುತ್ಸಾಹಗೊಳ್ಳಲಿಲ್ಲ. ಹಾಲೆಂಡ್‌ನಲ್ಲಿಯೇ ಟರ್ಸ್‌ಟೀಗ್ ಹೆಸರಾಂತ ಕಲಾವಿಮರ್ಶಕನಾಗಿದ್ದ. ಅವನೇನೂ ಪೂರ್ತಿಯಾಗಿ ವಿನ್ಸೆಂಟ್‌ನ ಪ್ರತಿಭೆಯನ್ನು ನಿರಾಕರಿಸಿರಲಿಲ್ಲ. ಸ್ವಲ್ಪಮಟ್ಟಿನ ಸಾಮರ್ಥ್ಯವನ್ನು ಗಮನಿಸಿದ್ದ. ವಿನ್ಸೆಂಟ್‌ಗೂ ಗೊತ್ತು, ತಾನು ಮಾಡಿದ್ದ, ಜೀವಂತ ವ್ಯಕ್ತಿ ಸನ್ನಿವೇಶಗಳ ಸ್ಕೆಚ್‌ಗಳು ಅಷ್ಟಾಗಿ ಚೆನ್ನಾಗಿರಲಿಲ್ಲ. ಆದರೆ ಪ್ರಯತ್ನ ಪಟ್ಟರೆ, ಸಾಧಿಸಬಲ್ಲೆ ಎಂಬ ವಿಶ್ವಾಸವನ್ನು ಮಾತ್ರ ಕಳೆದುಕೊಂಡಿರಲಿಲ್ಲ. ಹೀಗೆಯೇ ಸಾಧನೆ ಮುಂದುವರೆದರೆ, ಖಂಡಿತವಾಗಿಯೂ ಗೆಲ್ಲಬಲ್ಲೆ ಎಂದು ದೃಢವಾಗಿ ನಂಬಿದ್ದ.

–೫–

ಇಡೀ ಯೂರೋಪಿನಲ್ಲಿಯೇ ಹೇಗ್ ಅತ್ಯಂತ ಸ್ವಚ್ಛ ಮತ್ತು ಶ್ರೀಮಂತನಗರವೆನಿಸಿಕೊಂಡಿತ್ತು. ಇದು ಸರಳ, ಸುಂದರ, ಪವಿತ್ರ, ಶಿಸ್ತಿನ ಬದುಕಿನ ಮೂಲಕ ಹಾಲೆಂಡ್ ಶೈಲಿಯ ಅನ್ಯ ಬದುಕಿಗೆ ಮಾದರಿಯಾಗಿತ್ತು. ಶುಭ್ರವೂ ಅಗಲವೂ ಆದ ರಸ್ತೆಗಳು; ಹಾದಿಬದಿಯಲ್ಲಿ ತಲೆತುಂಬ ಹೂ ಮುಡಿದು ನಿಂತ ಮರಗಳು, ನಾಜೂಕಿನ ಇಟ್ಟಿಗೆಗಳಿಂದ ನಿರ್ಮಿತವಾದ ಮನೆಗಳು, ಅವುಗಳ ಮುಂದೆ ಸುಂದರ ಉದ್ಯಾನಗಳು, ಕಂಗೊಳಿಸುತ್ತಿದ್ದವು. ಎಲ್ಲಿಯೂ ಬಡತನವಾಗಲೀ, ಕೊಳೆಗೇರಿಗಳಾಗಲೀ ಕಣ್ಣಿಗೆ ಬೀಳುವುದೇ ಇಲ್ಲ. ಪ್ರತಿಯೊಂದೂ ಅಚ್ಚುಕಟ್ಟು, ಏನೋ

ಒಂದು ಬಗೆಯ ಆಹ್ಲಾದಕರ, ಶಿಸ್ತುಬದ್ಧ ಪರಿಸರ ಕಣ್ಣಿಗೆ ಮನಸ್ಸಿಗೆ ಹಿತಕರವೆನಿಸುತ್ತಿತ್ತು. 'ಡಚ್' ಮಾದರಿಯ ಜೀವನ ಶೈಲಿಗೆ ಪ್ರತೀಕವಾಗಿತ್ತು. ಬಹಳ ವರ್ಷಗಳ ಹಿಂದೆ ಬೆಳ್ಳಕ್ಕಿಯೇ ಹೇಗ್‌ನ ರಾಷ್ಟ್ರೀಯ ಚಿಹ್ನೆಯಾಗಿತ್ತು. ಆದರೆ ಬರಬರುತ್ತ ಜನಸಂಖ್ಯೆ ವಿಪರೀತವಾಗಿ ಬೆಳೆಯಿತು.

ಮರುದಿನ, ಮಾವ್‌ನಿಂದ ಕರೆ ಬರುವವರೆಗೂ ತನ್ನ ಮನೆಯಲ್ಲಿಯೇ ಕಾದಿದ್ದ. ಮಾವ್‌ನ ಅತ್ತೆ ಕಾರ್‌ಬೆನ್‌ಟಸ್, ಅನ್ನಾ ಕಾರ್ನೆಲಿಯಾಳ ಸೋದರಿ. ಕೌಟುಂಬಿಕ ಸಂಬಂಧಗಳು ಬಹಳ ಗಾಢವಾಗಿದ್ದುದರಿಂದ, ವಿನ್ಸೆಂಟ್ ಬರುತ್ತಿದ್ದಂತೆಯೇ ಪ್ರೀತಿಯಿಂದ ಬರಮಾಡಿಕೊಂಡರು.

ಮಾವ್ ಬಲಿಷ್ಠ ವ್ಯಕ್ತಿಯಾಗಿದ್ದ. ಅವನ ಬಾಹುಗಳು ವಿಶಾಲವಾಗಿದ್ದವು. ಅಂತೆಯೇ ಅವನದು ವಿಶಾಲ ವಕ್ಷಸ್ಥಳ. ಮುಖ ಚಹರೆಗಿಂತ ಅವನ ತಲೆ ವಿಶಿಷ್ಟವಾಗಿ ಕಾಣುತ್ತಿತ್ತು. ಮೂಗು, ಕಣ್ಣು, ಕಿವಿ, ಹಣೆ ಎಲ್ಲವೂ ವಿಶೇಷವಾಗಿ ಎದ್ದುಕಾಣುತ್ತಿತ್ತು. ಕೂದಲನ್ನು ಪೂರ್ತಿಯಾಗಿ ಬಲಗಡೆಗೆ ಬಾಚಿತ್ತು.

ಮಾವ್ ಉತ್ಸಾಹಶಾಲಿ ವ್ಯಕ್ತಿಯಾಗಿದ್ದ. ದಣಿದರೂ ಚಿತ್ರಬಿಡಿಸುವುದನ್ನು ನಿಲ್ಲಿಸುತ್ತಿರಲಿಲ್ಲ. ದಣಿವೆನಿಸಿದಾಗ ಮತ್ತಷ್ಟು ಹೆಚ್ಚಿಗೆ ಕೃತಿರಚನೆಯಲ್ಲಿ ಮುಳುಗುತ್ತಿದ್ದ. ಅದರ ಮೂಲಕವೇ ಚೇತರಿಸಿಕೊಂಡು ಮತ್ತೆ ತನ್ನ ಕೆಲಸದಲ್ಲಿ ತೊಡಗುತ್ತಿದ್ದ.

"ಜೆಟ್ ಮನೆಯಲ್ಲಿಲ್ಲ ವಿನ್ಸೆಂಟ್, ನಾವು ಸ್ಟುಡಿಯೋ ಕಡೆ ಹೋಗಿ ಬರೋಣವೇ? ಇಲ್ಲಿಗಿಂತ ಅಲ್ಲಿವಾಸಿ ಎನಿಸುತ್ತೆ." ಮಾವ್ ಹೇಳಿದ.

"ಆಯ್ತು ಅಲ್ಲಿಗೇ ಹೋಗೋಣ" – ವಿನ್ಸೆಂಟ್‌ಗೆ ಸ್ಟುಡಿಯೋ ನೋಡುವ ಆತುರ. ಅದಕ್ಕೆಂದೇ ಕೂಡಲೇ ಒಪ್ಪಿದ.

ಮಾವ್ ವಿನ್ಸೆಂಟ್‌ನನ್ನು ವಿಶಾಲವಾದ ತನ್ನ ಸ್ಟುಡಿಯೋಗೆ ಕರೆದೊಯ್ದ. ಮನೆಗೆ ಹತ್ತಿರವಿದ್ದರೂ, ಪ್ರವೇಶದ್ವಾರ ಮನೆಯ ಕಡೆ ಮುಖಮಾಡಿದ್ದರೂ, ಅವನ ಏಕಾಂತಕ್ಕೆ ತೊಂದರೆಯಾಗದಂತೆ ಸುತ್ತಲೂ ಬೇಲಿಗಿಡಗಳ ಗೋಡೆಯಿತ್ತು.

ಪ್ರವೇಶಿಸುತ್ತಿದ್ದಂತೆ ಅವನ ಮೂಗಿಗೆ, ಟೊಬ್ಯಾಕೋ, ವಾರ್ನಿಷ್‌ಗಳ ವಾಸನೆ ಹಿತವಾಗಿ ಬಡಿಯಿತು. ಸ್ಟುಡಿಯೋ ಸಾಕಷ್ಟು ವಿಶಾಲವಾಗಿತ್ತು. ಈಸಲ್‌ಸ್ಟಾಂಡ್ ಮೇಲೆ ಇನ್ನೂ ಪೂರ್ತಿಯಾಗಿರದಿದ್ದ ಚಿತ್ರಪಟವಿತ್ತು. ಮೂಲೆಯಲ್ಲೊಂದು ಹಳೆಯಕಾಲದ ಮೇಜಿತ್ತು. ಅದರ ಮುಂದೆ ಪರ್ಷಿಯನ್ ಕಂಬಳಿ ಹಾಸಿತ್ತು. ಅಷ್ಟಷ್ಟು ದೂರಕ್ಕೂ ವರ್ಣ ಚಿತ್ರಕಾರನಿಗೆ ಅಗತ್ಯವಾದ ವಸ್ತುಗಳೆಲ್ಲ ಹರಡಿಕೊಂಡು ಬಿದ್ದಿದ್ದವು. ನೋಟಕ್ಕೆ ಅಸ್ತವ್ಯಸ್ತವಾಗಿ ಕಾಣಿಸಿದರೂ ವಿನ್ಸೆಂಟ್ ಮಾವ್‌ನ ವ್ಯಕ್ತಿತ್ವದಲ್ಲಿದ್ದ ಒಂದು ಬಗೆಯ ಆಂತರಿಕ ಶಿಸ್ತನ್ನೇ ಇಲ್ಲಿಯೂ ಗ್ರಹಿಸಿದ.

ಔಪಚಾರಿಕವಾದ ಕುಶಲ ಕ್ಷೇಮಗಳು ವಿನಿಮಯ ಆದದ್ದು, ಕೇವಲ ಒಂದೆರಡು ನಿಮಿಷಗಳು ಮಾತ್ರ. ನಂತರ ನೇರವಾಗಿ ವಿಷಯ ಸಂಬಂಧಿ ಗಹನವಾದ ಚರ್ಚೆಗೆ ತೊಡಗಿದರು. ಸಾಮಾನ್ಯವಾಗಿ, ಮಾವ್ ತನ್ನ ಸಹ ಕಲಾವಿದರೊಂದಿಗೆ ಮಾತಿಗೆ ಇಳಿಯುತ್ತಲೇ ಇರಲಿಲ್ಲ. ವರ್ಣಚಿತ್ರ ಕಲಾವಿದನಾದವನು ಚಿತ್ರಕಲೆಯಲ್ಲಿ ತೊಡಗಿರುತ್ತಾನೆ

ಇಲ್ಲವೇ ಮಾತಿನಲ್ಲಿ ತೊಡಗಿರುತ್ತಾನೆ. ಮಾತು ಕೆಲಸಗಳು ಒಟ್ಟಿಗೆ ಸಾಧ್ಯವಾಗುವುದಿಲ್ಲ ಎಂಬುದು ಅವನ ನಂಬಿಕೆಯಾಗಿತ್ತು. ಈಗಂತೂ ಅವನೊಂದು ಹೊಸ ಯೋಜನೆಯಲ್ಲಿ ತೊಡಗಿದ್ದ. ಮುಸ್ಸಂಜೆಯ ಮುಸುಕಿನಲ್ಲಿನ ಲ್ಯಾನ್ಡ್‌ಸ್ಕೇಪ್ ಮಾಡುವ ಚಿಂತನೆಯಲ್ಲಿದ್ದ. ಅದನ್ನು ಕುರಿತು ವಿನ್ಸೆಂಟ್‌ನೊಂದಿಗೆ ಕೇವಲ ಚರ್ಚಿಸಲಿಲ್ಲ; ತನ್ನ ಭಾವನೆಗಳನ್ನು, ಚಿಂತನೆಗಳನ್ನು ತೋಡಿಕೊಂಡ.

ಮಾವ್‌ನ ಶ್ರೀಮತಿ ಬರುತ್ತಿದ್ದಂತೆಯೇ ವಿನ್ಸೆಂಟ್‌ನನ್ನು ಮಾತನಾಡಿಸಿ, ಊಟಕ್ಕೆ ಇರಲೇ ಬೇಕೆಂದು ಒತ್ತಾಯ ಮಾಡಿದಳು. ಊಟ ಮುಗಿದ ಮೇಲೆ ಬೆಂಕಿಗೂಡಿನ ಬಳಿ ಕುಳಿತು ಮಕ್ಕಳೊಂದಿಗೆ ಹರಟೆ ಹೊಡೆದ. ತನಗೂ ಹೀಗೆಯೇ ಒಂದು ಪುಟ್ಟ ಮನೆ, ಮಡದಿ, ಮಕ್ಕಳು ಇದ್ದಿದ್ದರೆ ಎಷ್ಟು ಚೆನ್ನ! – ಎಂದುಕೊಳ್ಳುವುದನ್ನು ಮರೆಯಲಿಲ್ಲ. ತನ್ನನ್ನು ಪ್ರೀತಿಸುವ, ಗೌರವಿಸುವ, ಯಜಮಾನನೆಂದು ಭಾವಿಸುವ ಹೆಂಡತಿ, 'ಅಪ್ಪ' ಎಂದು ಕರೆಸಿಕೊಳ್ಳಲು ಮಕ್ಕಳು!..... ಎಂದಾದರೂ ತನ್ನ ಬದುಕಿನಲ್ಲಿ ಸಾಧ್ಯವಾಗುವುದೇ?

ಇಬ್ಬರೂ ಮತ್ತೆ ಸ್ಟುಡಿಯೋಗೆ ಮರಳಿದರು. ಪೈಪುಗಳನ್ನು ಹೊರತೆಗೆದು, ತಂಬಾಕು ಸೇವಿಸಲು ಮುಂದಾದರು. ವಿನ್ಸೆಂಟ್ ತನ್ನೊಂದಿಗೆ ತಂದಿದ್ದ ಸ್ಕೆಚ್‌ಗಳನ್ನು ಮಾವ್‌ನ ಮುಂದಿಟ್ಟ. ಮಾವ್ ಅದನ್ನು ವೃತ್ತಿಪರತೆಯೊಂದಿಗೆ ತೀಕ್ಷ್ಣವಾಗಿ ಗಮನಿಸಿದ.

"ಅಂಥ ಕೆಟ್ಟದಾಗೇನೂ ಇಲ್ಲ,...... ಆದರೆ ಇವುಗಳ ಪ್ರಾಮುಖ್ಯತೆಯಾದರೂ ಏನು?"

"ಪ್ರಾಮುಖ್ಯತೆ?.... ಅದು ನನಗೆ ಗೊತ್ತಿಲ್ಲ."

"ವಿನ್ಸೆಂಟ್, ಶಾಲೆ ಹುಡುಗನಂತೆ ಕೇವಲ ಕಾಪಿ ಮಾಡುತ್ತಿರುವಿ ಅಷ್ಟೆ! ಬೇರೆಯವರು ನಿಜವಾದ ತಮ್ಮ ಸೃಜನಶೀಲತೆಯೊಂದಿಗೆ ಕೆಲಸಮಾಡುತ್ತಿದ್ದಾರೆ."

"ಹೀಗೆ ಮಾಡುವುದರಿಂದ, ನಾನು ಸರಿಯಾಗಿ ಗ್ರಹಿಸಲು ಸಾಧ್ಯವಾಗುತ್ತೆ ಎಂದುಕೊಂಡಿದ್ದೆ."

"ಯಾರು ಹಾಗೆ ಹೇಳಿದ್ದು? ಏನನ್ನಾದರೂ ಸೃಷ್ಟಿಸಬೇಕೆಂದಿದ್ದರೆ, ಜೀವವಿರುವಂತಹುಗಳ ಕಡೆಗೆ ಹೋಗು. ಅನುಕರಣೆ ಮಾಡುವುದನ್ನು ಬಿಟ್ಟು, ಸ್ವಂಥದ್ದನ್ನು ಸೃಷ್ಟಿಸು.

ಯಾಕೆ ಇಲ್ಲೀವರೆಗೆ ನೀನು ಸ್ವತಂತ್ರವಾಗಿ ಸೃಷ್ಟಿಸಿದ ಸ್ಕೆಚ್‌ಗಳು ಇಲ್ಲವೇನು?"

ವಿನ್ಸೆಂಟ್ ಟರ್ಸ್‌ಟೀಗ್ ತನ್ನ ಒರಿಜಿನಲ್ ಸ್ಕೆಚ್‌ಗಳ ಬಗ್ಗೆ ಹೇಳಿದ ಮಾತುಗಳು ನೆನಪಾಗಿ, ಅವುಗಳನ್ನು ತೋರಿಸುವುದೇ ಬೇಡವೇ ಎಂಬ ಸಂದಿಗ್ಧಕ್ಕೆ ಒಳಗಾದ. ತಾನು ಬಂದಿರುವುದು ಮಾವ್‌ನನ್ನು ಗುರುವಾಗಿ ಪಡೆದು ಅವನಿಂದ ಕಲಿಯಲು. ಅಂತಹುದರಲ್ಲಿ ತಾನು ತೋರಿಸುವ ಸ್ಕೆಚ್‌ಗಳು ತೀರಾ ಕೆಟ್ಟದ್ದೆನಿಸಿದರೆ! ಎಂಬ ಅನುಮಾನ ಕಾಡಿತು.

"ನಾನು ಪ್ರಸ್ತುತ character studies ಮಾಡುತ್ತಿದ್ದೇನೆ."

"ಒಳ್ಳೇದು"

"ಬೊರೈನ್‌ನ ಕಲ್ಲಿದ್ದಲ ಗಣಿ ಕಾರ್ಮಿಕರ, ಬ್ರಬಾಂಟ್‌ನ ರೈತರ ಸ್ಕೆಚ್‌ಗಳಲ್ಲಿ ಕೆಲವನ್ನು ತಂದಿದ್ದೇನೆ ಅವೇನೂ ತುಂಬಾ ಚೆನ್ನಾಗಿಲ್ಲ, ಆದರೂ......"

"ಪರವಾಗಿಲ್ಲ, ಚಿಂತೆ ಮಾಡ್ಬೇಡ. ಏನು ತಂದಿದ್ದೀಯ ಅವುಗಳನ್ನು ತೋರಿಸು. ಎಲ್ಲೋ ಒಂದು ಕಡೆ ಅವುಗಳಲ್ಲಿ (ಆತ್ಮವನ್ನು ಹಿಡಿದಿಟ್ಟಿರುತ್ತೀ) ಏನಾದರೂ ಅರ್ಥವನ್ನು ಕಾಣಿಸಿರಬಹುದು."

ವಿನ್ಸೆಂಟ್ ಸ್ಕೆಚ್‌ಗಳನ್ನು ಅವನ ಮುಂದಿರಿಸಿದ. ಮಾವ್ ತನ್ನ ಹಣೆ ಮೇಲಿನ ಕೂದಲನ್ನು ಸರಿಪಡಿಸಿಕೊಳ್ಳುತ್ತಾ ಮತ್ತೆ ಮತ್ತೆ ಸ್ಕೆಚ್ ಕಡೆ ಗಮನವಿರಿಸಿ ನೋಡಿದ. ಒಳಗೊಳಗೇ ನಗುತ್ತಿದ್ದ. ಒಂದು ಗಳಿಗೆಯ ನಂತರ, ವಿನ್ಸೆಂಟ್‌ನತ್ತ ನೋಡುತ್ತಾ ಸರಿಯಿಲ್ಲವೆನ್ನುವಂತೆ ತಲೆಯಾಡಿಸಿದ. ಆದರೆ ಕಾರ್ಮಿಕನ ಸ್ಕೆಚ್ ಅನ್ನು ಈಗ ಪರಿಶೀಲಿಸಲು ತೆಗೆದುಕೊಂಡು ಎದ್ದು, ತಾನು ಹೊಸದಾಗಿ ಮಾಡುತ್ತಿದ್ದ ಕ್ಯಾನ್‌ವಾಸ್‌ನ ಪಕ್ಕದಲ್ಲಿ ಇರಿಸಿ, ಎರಡನ್ನೂ ಗಂಭೀರವಾಗಿ ಗಮನಿಸಿದ.

"ನಾನು ಎಲ್ಲಿ ತಪ್ಪಿದ್ದೇನೆ ಎಂದು ಈಗ ತಿಳಿಯಿತು ನೋಡು!" ಎಂದು ಉದ್ಗರಿಸಿ ನುಡಿದ.

ಡ್ರಾಯಿಂಗ್ ಪೆನ್ಸಿಲ್ ತೆಗೆದುಕೊಂಡು, ಬೆಳಕಿಗೆ ಸರಿಯಾಗಿ ಹಿಡಿದು ಒಂದೆರಡು ಬಾರಿ ಪೆನ್ಸಿಲ್‌ನಿಂದ ಟಚಪ್ ಕೊಟ್ಟ, ಕೊಡುವಾಗಲೆಲ್ಲ ವಿನ್ಸೆಂಟ್‌ನ ಸ್ಕೆಚ್‌ನತ್ತಲೇ ದೃಷ್ಟಿಯಿರಿಸಿದ್ದ.

"ಹೂಂ ಈಗ ಭಿಕ್ಷುಕ ನಿಜವಾದ ಭಿಕ್ಷುಕನಾಗಿ ಕಾಣುತ್ತಿದ್ದಾನೆ."

ಕ್ಯಾನ್‌ವಾಸ್‌ನಿಂದ ದೂರ ಸರಿದು ಬಂದು ವಿನ್ಸೆಂಟ್‌ನ ಬೆನ್ನಿಗೆ ನಿಂತ. ಕೈಗಳನ್ನು ಭುಜಗಳ ಮೇಲಿರಿಸಿ,

"ಈಗ ನೀನು ಸರಿಯಾದ ದಾರಿಯಲ್ಲಿದ್ದೀಯ. ನಿನ್ನ ಸ್ಕೆಚ್‌ಗಳು ಅಷ್ಟೊಂದು ನಾಜೂಕಲ್ಲದಿದ್ದರೂ, ಅವುಗಳಲ್ಲಿ ವಾಸ್ತವತೆ ಇದೆ; ಅಧಿಕೃತತೆ ಇದೆ. ಅವುಗಳಲ್ಲಿ ನಾನೆಂದೂ ಕಾಣದ ಒಂದು ಬಗೆಯ ಜೀವಂತಿಕೆ, ಲಯಗಳಿವೆ. ವಿನ್ಸೆಂಟ್, ಕೂಡಲೇ ನಕಲು ಮಾಡುವ ಕೆಲಸವನ್ನು ನಿಲ್ಲಿಸು. ನಿನ್ನ ಕಾಪಿ ಪುಸ್ತಕವನ್ನು ಬಿಸಾಡು. ಪೈಂಟ್ ಬಾಕ್ಸ್ ಕೊಂಡುಕೊಂಡು, ನಿನ್ನ ರೀತಿಯಿಂದಲೇ ನೀನು ಪೈಂಟಿಂಗ್ ಆರಂಭಿಸು. ಬಣ್ಣಗಳಲ್ಲಿ ಕೆಲಸ ಮಾಡುವುದನ್ನು ಎಷ್ಟು ಬೇಗ ಆರಂಭಿಸಿದರೆ, ಅಷ್ಟೂ ಒಳ್ಳೆಯದು. ನಿನ್ನ ಡ್ರಾಯಿಂಗ್‌ಗಳು ಅರ್ಧ ಯಶಸ್ಸನ್ನು ಕಂಡಿವೆ. ಹಾಗೇ ಅಭ್ಯಾಸ ಮುಂದುವರೆಸಿದರೆ ಎಲ್ಲ ಸರಿಹೋಗುತ್ತೆ."

ವಿನ್ಸೆಂಟ್‌ಗೆ ಇವು ಮಹತ್ವದ ಕ್ಷಣಗಳೆನಿಸಿದವು.

"ನಾನು ಹೇಗ್‌ನಲ್ಲಿ ನೆಲೆಗೊಳ್ಳಬೇಕೆಂದಿದ್ದೇನೆ. ಇಲ್ಲಿದ್ದೂ ನನ್ನ ಪೈಂಟಿಂಗ್ ಕಲೆಯನ್ನು ಮುಂದುವರೆಸಲು ಯೋಚಿಸುತ್ತಿದ್ದೇನೆ. ನಿನಗೆ ಬಿಡುವಾದಾಗ ನಾನು ನಿನ್ನೊಂದಿಗೆ ಚರ್ಚೆಮಾಡಿ ವಿಷಯಗಳನ್ನು ತಿಳಿಯಬೇಕೆಂದಿದ್ದೇನೆ. ನಿನ್ನ ಸಹಾಯ ನನಗೆ ಅನಿವಾರ್ಯವಾಗಿ ಬೇಕಿದೆ. ಹೆಚ್ಚೇನೂ ಕೇಳುವುದಿಲ್ಲ. ಅದೇ ಈಗ

ತೋರಿಸಿಕೊಟ್ಟಂತೆ, ನನ್ನ ಕೆಲಸದಲ್ಲಿನ ಸಣ್ಣಪುಟ್ಟ ದೋಷಗಳನ್ನು ತೋರಿಸಿಕೊಟ್ಟರೆ ಸಾಕು. ನಾನು ಕಲಿತು ಸುಧಾರಿಸಿಕೊಳ್ಳುತ್ತೇನೆ. ಪ್ರತಿಯೊಬ್ಬ ಯುವಕಲಾವಿದನಿಗೆ ಗುರುವಿನ ಅಗತ್ಯ ಇದ್ದೇ ಇರುತ್ತದೆ."

ಮಾವ್ ಅಪೂರ್ಣವಾಗಿದ್ದ ತನ್ನ ಕ್ಯಾನ್‌ವಾಸ್‌ನತ್ತ ನೋಡಿದ. ಅವನು ತನಗೆ ಬಿಡುವು ದೊರೆತಾಗ, ಆ ವೇಳೆಯನ್ನು ಕುಟುಂಬದ ಜೊತೆಗೆ ಕಳೆಯಲು ಯೋಚಿಸಿದ್ದ. ಈಗ, ಇಲ್ಲೀವರೆಗೆ ವಿನ್ಸೆಂಟ್‌ನ ಬಗ್ಗೆ ತೋರಿಸಿದ ಪ್ರೋತ್ಸಾಹದಾಯಕ ಸ್ನೇಹ, ಪ್ರೀತಿಗಳು ಕೂಡಲೇ ಮರೆಯಾದವು. ಒಂದು ಬಗೆಯ ನಿರಾಸಕ್ತ ಮುಖಭಾವ! ವಿನ್ಸೆಂಟ್ ಕೂಡಲೇ ಮಾವ್‌ನ ಚಹರೆಯಲ್ಲಿ, ನಿಲುವಿನಲ್ಲಿ ಕಾಣಿಸಿಕೊಂಡ ಬದಲಾವಣೆಯನ್ನು ಅರ್ಥಮಾಡಿಕೊಂಡ.

"ವಿನ್ಸೆಂಟ್ ನನಗೆ ಬಿಡುವೆನ್ನುವುದೇ ಇಲ್ಲ....... ಬೇರೆಯವರಿಗೆ ಹೇಗೆ ಸಹಾಯ ಮಾಡಲಿ. ಯಾವಾಗಲೂ ಆರ್ಟಿಸ್ಟ್ ಸ್ವಲ್ಪ ಸ್ವಾರ್ಥಿಯಾಗಿರಲೇಬೇಕು. ಅವನ ಒಂದೊಂದು ಕ್ಷಣವೂ ಕ್ರಿಯಾತ್ಮಕವಾಗಿ ಪರಿಣಮಿಸುತ್ತಿರಬೇಕು. ಆದ್ದರಿಂದ ನಿನಗೆ ನಾನು ಸಹಾಯಮಾಡಬಲ್ಲೆ; ಕಲಿಸಬಲ್ಲೆ–ಎನ್ನುವುದು ಅನುಮಾನವೇ!"

"ನಾನೇನು ನಿನ್ನಿಂದ ಹೆಚ್ಚಿಗೆ ಅಪೇಕ್ಷಿಸೋದಿಲ್ಲ. ನೀನು ಕ್ಯಾನ್‌ವಾಸ್‌ಗಳನ್ನು ಮಾಡುವುದನ್ನು ನೋಡಲು ಅವಕಾಶವಾಗುವಂತೆ ಇಲ್ಲಿಗೆ ಬರಲು ಅನುಮತಿಕೊಡು. ನೀನು ಮಾಡುವುದನ್ನು, ಅದರ ಬಗ್ಗೆ ವಿಚಾರ ಮಾಡುವುದನ್ನು ಗಮನಿಸುತ್ತಲೇ ಕಲಿಯುತ್ತೇನೆ. ನಿನಗೆ ಬಿಡುವಾದಾಗ, ವಿಶ್ರಾಂತಿ ತೆಗೆದುಕೊಳ್ಳುವಾಗ ನನ್ನ ಸ್ಕೆಚ್‌ಗಳನ್ನು ಗಮನಿಸು. ಇವತ್ತು ಚರ್ಚೆ ಮಾಡಿದ ಹಾಗೆ ಒಂದೆರಡು ನಿಮಿಷ ಚರ್ಚೆ ಮಾಡಿ ತಪ್ಪುಗಳನ್ನು ತೋರಿಸು. ಇದಿಷ್ಟೇ ನಾನು ನಿನ್ನಿಂದ ಬಯಸುವುದ. ಕಸಿನ್ ಮಾವ್."

"ಏನೆಂದೆ? ಇದಿಷ್ಟೇ! ಓ ವಿನ್ಸೆಂಟ್, ಇದು ಬಹಳ ಗಂಭೀರವಾದ ವಿಷಯ. ನಂಬು. ಯಾರನ್ನೇ ಶಿಷ್ಯನನ್ನಾಗಿ ಸ್ವೀಕರಿಸುವುದು ಸಾಧ್ಯವೇ ಇಲ್ಲ."

"ನಾನು ನಿನಗೆ ಎಂದೂ ಹೊರೆಯಾಗುವುದಿಲ್ಲ. ಪ್ರಮಾಣ ಮಾಡಿ ಹೇಳುತ್ತಿದ್ದೇನೆ."

ಮಾವ್ ಒಂದೆರಡು ಕ್ಷಣ ಸುಮ್ಮನಿದ್ದ. ಅವನು ಯಾರನ್ನೂ ಶಿಷ್ಯನನ್ನಾಗಿ ಇರಿಸಿಕೊಳ್ಳಲು ಇಚ್ಚೈಸಿರಲಿಲ್ಲ. ತಾನು ಕೆಲಸಮಾಡುವಾಗ ಬೇರೆಯವರು ಯಾರೂ ಇರಬಾರದೆಂಬುದು ಅವನ ಅಭಿಪ್ರಾಯವಾಗಿತ್ತು. ಜೊತೆಗೆ ತಾನು ಕೆಲಸಮಾಡುತ್ತಿರುವ ಕಲಾಕೃತಿ ಕುರಿತು, ಮೊದಲಿಗೇ ಚರ್ಚಿಸುವುದು ಅವನಿಗಿಷ್ಟವಿರಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ, ತನ್ನ ಸಲಹೆ ಸೂಚನೆಗಳನ್ನು ಬಯಸಿ ಬರುವ ಯುವ ಕಲಾವಿದರಾಗಲೀ, ಹೊಸಬರಾಗಲೀ, ನಿಷ್ಠುರ ಅಭಿಪ್ರಾಯಗಳನ್ನು ತಿಳಿಸಿದಾಗ, ಬೇಸರಪಟ್ಟುಕೊಳ್ಳುತ್ತಿದ್ದರು. ಆದರೆ ವಿನ್ಸೆಂಟ್ ತನಗೆ ಕಸಿನ್ ಆಗಬೇಕು. ಅಲ್ಲದೆ ಅವನ ಚಿಕ್ಕಪ್ಪ ದೊಡ್ಡಪ್ಪಂದಿರಾದ ವಾನ್‌ಗೋಗಳ ಸಂಸ್ಥೆ, ಗೂಪಿಲ್ ಅಂಡ್ ಕಂಪೆನಿ ತನ್ನ ಕ್ಯಾನ್‌ವಾಸ್‌ಗಳನ್ನು ಕೊಳ್ಳುತ್ತಿತ್ತು. ಮತ್ತೂ ಒಂದು ಮುಖ್ಯವಾದ ಅಂಶವೆಂದರೆ, ತಾನು ಯಾವುದಾದರೂ ಕಲಾಕೃತಿಗಳನ್ನು ಇಷ್ಟಪಟ್ಟರೆ, ಅವುಗಳ ಬಗ್ಗೆ ಅದಮ್ಯವಾದ ಪ್ರೀತಿ ಒಂದು ಬಗೆಯ ಹುಚ್ಚನ್ನು

ಬೆಳೆಸಿಕೊಳ್ಳುತ್ತಿದ್ದಂತೆ, ವಿನ್ಸೆಂಟ್ ಕೂಡ ಅದೇ ಬಗೆಯ ಭಾವನೆಗಳನ್ನು ತನ್ನಲ್ಲಿ ರೂಢಿಸಿಕೊಂಡಿದ್ದ– ಇದು ಮಾವ್ ವಿನ್ಸೆಂಟ್ ಬಗ್ಗೆ ಮೃದು ಭಾವನೆ ತಳೆಯಲು ಕಾರಣವಾಯಿತು.

"ಆಯ್ತು ವಿನ್ಸೆಂಟ್, ನೀನು ಹೇಳಿದ ಹಾಗೆ ಪ್ರಯತ್ನ ಮಾಡಿ ನೋಡೋಣ."

"ಓಹ್ ಕಸಿನ್ ಮಾವ್" – ಎಂದು ಭಾವೋದ್ರೇಕದೊಂದಿಗೆ ನುಡಿದ.

"ನಾನೇನೂ ನಿನಗೆ ಭರವಸೆ ಕೊಡೋದಿಲ್ಲ. ನೆನಪಿರಲಿ, ನಿನಗೆ ಅಸಮಾಧಾನ ಆದರೂ ಆಗಬಹುದು. ನೀನು ಹೇಗ್‌ನಲ್ಲಿ ಉಳಿದುಕೊಂಡಾಗ, ಸ್ಟುಡಿಯೋ ಕಡೆ ಬಂದು ಹೋಗು. ನೋಡೋಣ. ಏನಾದರೂ ಮಾಡಲು ಸಾಧ್ಯವಾಗುವುದಾದರೆ! ನೀನು ಬರುವುದಾದರೆ ಚಳಿಗಾಲದಲ್ಲಿ ತಾನೇ! ಅದಕ್ಕೆ ಮೊದಲು ನಾನು ಇರುವುದ ಕೂಡಾ ಇಲ್ಲ."

"ಹೂಂ. ನಾನೂ ಆವಾಗಲೇ ಬರಬೇಕೆಂದು ಕೊಂಡದ್ದು. ಇನ್ನೂ ಬ್ರಬಾಂಟ್‌ನಲ್ಲಿ ಸ್ವಲ್ಪ ಕೆಲಸ ಇದೆ."

"ಹಾಗಾದರೆ ಎಲ್ಲಾ ತೀರ್ಮಾನ ಆದ ಹಾಗೇ ತಾನೇ!"

ಮನೆಯ ಕಡೆ ಹೊರಟಾಗ, ಅವನ ಮನಸ್ಸಿನಲ್ಲಿ ಏನೋ ಒಂದು ಬಗೆಯ ಸಮಾಧಾನ, "ನನಗೊಬ್ಬ ಗುರು ಸಿಕ್ಕಿದ್ದಾನೆ. ಕೆಲವೇ ತಿಂಗಳಲ್ಲಿ ದೊಡ್ಡ ಕಲಾವಿದನೊಬ್ಬನ ಸಹವಾಸದಲ್ಲಿ ಪೈಂಟಿಂಗ್ ಕಲಿಯುತ್ತೇನೆ. ನಾನೂ ದೊಡ್ಡ ವರ್ಣಶಿಲ್ಪಿಯಾಗುತ್ತೇನೆ. ಚೆನ್ನಾಗಿ ಅಭ್ಯಾಸ ಮಾಡುತ್ತೇನೆ. ಅಲ್ಲಿಗೆ ತಲುಪುವಷ್ಟರಲ್ಲಿ ನಾನು ಏನಾದರೂ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗುವುದೋ, ನೋಡುತ್ತೇನೆ."

ಅವನು ಎಟ್ಟೆನ್ ತಲುಪಿದಾಗ, ಕೇ ಓಸ್‌ಳನ್ನು ನೋಡಿದ.

–೬–

ಕೇಳ ಬದುಕಿನಲ್ಲಿನ ನೋವು ಸಂಕಟಗಳು, ಅವಳನ್ನು ಅಧ್ಯಾತ್ಮದ ಕಡೆಗೆ ಪ್ರೇರೇಪಿಸಿದ್ದವು. ಗಂಡನನ್ನು ಅತಿಯಾಗಿ ಪ್ರೀತಿಸುತ್ತಿದ್ದವಳಿಗೆ, ಅವನ ಸಾವು ದೊಡ್ಡ ಆಘಾತವನ್ನು ಉಂಟುಮಾಡಿತ್ತು. ಅವಳಲ್ಲಿನ ಸಂತೋಷ, ಉತ್ಸಾಹಗಳು ಪೂರ್ತಿಯಾಗಿ ಬತ್ತಿ ಹೋಗಿದ್ದವು. ಸದಾ ಅನ್ಯ ಮನಸ್ಕಳಾಗಿರುತ್ತಿದ್ದಳು. ಏನನ್ನೋ ಯೋಚಿಸುತ್ತಾ, ವಾಸ್ತವ ಪ್ರಪಂಚವನ್ನೇ ಮರೆಯುತ್ತಿದ್ದಳು. ಮುಖ ಬಾಡಿ ಹೋಗಿತ್ತು, ಕಣ್ಣುಗಳು, ಕೆನ್ನೆಗಳು ಗುಳಿ ಬಿದ್ದಿದ್ದವು. ಆ್ಯಮ್‌ಸ್ಟರ್ ಡ್ಯಾಂನಲ್ಲಿದ್ದಾಗ, ಅವಳಲ್ಲಿ ಕಾಣಿಸುತ್ತಿದ್ದ ಜೀವಂತಿಕೆ ಈಗ ಕಾಣದೇ ಹೋದರೂ, ಅದರ ಜಾಗದಲ್ಲಿ ಸೌಮ್ಯ ಸೌಂದರ್ಯವಿರುವುದನ್ನು ಗಾಂಭೀರ್ಯವನ್ನು ರೂಢಿಸಿಕೊಂಡಿದ್ದನ್ನು ಗಮನಿಸಿದ.

"ನೀನು ಇಲ್ಲಿಗೆ, ಈಗಲಾದರೂ ಬಂದೆಯಲ್ಲ ಕೇ, ಅದೇ ನನಗೆ ಸಂತೋಷ!"

"ಥ್ಯಾಂಕ್ಯೂ ವಿನ್ಸೆಂಟ್."

ಇಬ್ಬರೂ ಒಬ್ಬರನ್ನೊಬ್ಬರು ತೀರಾ ಅನೌಪಚಾರಿಕ ರೀತಿಯಲ್ಲಿ ಹೆಸರಿಡಿದು ಸಂಬೋಧಿಸಿದ್ದು ಇದೇ ಮೊದಲು, ಅವರಿಗರಿವಿಲ್ಲದೆ, ಪರಸ್ಪರ ಸನಿಹಕ್ಕೆ ಬಂದಂತೆ ಭಾಸವಾಯಿತು.

"ಜ್ಯಾನ್ ಕೂಡಾ ನಿನ್ನೊಂದಿಗೆ ಬಂದಿರಬೇಕಲ್ಲ!"

"ಹೂಂ. ಇಲ್ಲೇ ಗಾರ್ಡನ್‌ನಲ್ಲಿ ಎಲ್ಲೋ ಇರಬೇಕು."

"ಬ್ರಬಾಂಟ್‌ಗೆ ನೀನು ಬಂದಿರೋದು ಇದೇ ಮೊದಲು. ನಾನು ನಿನಗೆ ಇಲ್ಲಿನ ಎಲ್ಲವನ್ನೂ ತೋರಿಸಿಕೊಂಡು ಬರುತ್ತೇನೆ. ಆ ಕಡೆ ಬಯಲು ಪ್ರದೇಶದಲ್ಲಿ ಮುಳ್ಳು ಬೇಲಿಯ ಗುಂಟಾ ಚೆನ್ನಾಗಿ ಅಡ್ಡಾಡಿ ಬರಬೇಕು."

"ಹೌದು ನನಗೂ ಅದು ಇಷ್ಟವೇ!"

ಮೆದುವಾಗಿ, ಮೃದುವಾಗಿ ಮಾತಾಡಿದಳೇ ಹೊರತು ಆ ಮಾತಿನಲ್ಲಿ ಅವಳ ಉತ್ಸಾಹ ಹೊರಚಿಮ್ಮಲಿಲ್ಲ. ಅವಳ ಗಂಟಲು ತುಂಬಿ ಬಂದದ್ದನ್ನು, ಉತ್ಸಾಹ ಶೀಲವಾದದ್ದನ್ನು ಗಮನಿಸಿದ. ಅವಳ ಮನೆಯಲ್ಲಿ ಉಳಿದುಕೊಂಡಿದ್ದಾಗ, ತನ್ನ ಬಗ್ಗೆ ಅವಳು ತೋರಿದ ಪ್ರೀತಿ ಸಹಾನುಭೂತಿಗಳನ್ನು ನೆನಪಿಸಿಕೊಂಡ. ಅವಳ ಗಂಡನ ಸಾವಿಗೆ ಸಂತಾಪದ ನುಡಿಗಳನ್ನು ಹೇಳಿ ಸಮಾಧಾನಪಡಿಸಬೇಕೆಂದು ಅನಿಸಿದರೂ, ಮರೆತದ್ದನ್ನೂ ನೆನಪಿಸಿ, ಮತ್ತೆ ಅವಳ ಮುಖದಲ್ಲಿ ದುಃಖದ ಛಾಯೆ ಮೂಡಿಸಲು ಅವನು ಇಚ್ಛಿಸಲಿಲ್ಲ.

'ಕೇ'ಗೆ ಅವನ ಮನಸ್ಸು, ಸಂದಿಗ್ಧತೆಗಳು ಅರ್ಥವಾದವು. ಅವಳಿಗೆ ಅವಳ ಗಂಡ ಪವಿತ್ರ ಚೇತನವಾಗಿದ್ದ. ಅವರಿವರೊಂದಿಗೆ ಗಂಡನ ಬಗ್ಗೆ ಮಾತಾಡುವುದೂ ಅವಳಿಗಿಷ್ಟವಿರಲಿಲ್ಲ. ಅವಳಿಗೂ ವಿನ್ಸೆಂಟ್ ತಮ್ಮಲ್ಲಿದ್ದಾಗ, ಅವನೊಂದಿಗೆ ಕಳೆದ ಸಂತೋಷದ ಕ್ಷಣಗಳು ನೆನಪಾದವು. ಮೂಕ ವೇದನೆ, ಹನಿಗಟ್ಟಿ ಹೊರ ಕಾಣಿಸಿತು. ವಿನ್ಸೆಂಟ್ ಅವಳ ಕೈ ಮೇಲೆ ಮೃದುವಾಗಿ ತನ್ನ ಕೈಯಿರಿಸಿ ಒತ್ತಿದ. ಅವರಿಬ್ಬರ ನಡುವೆ ಸ್ಪರ್ಷದ ಮೂಲಕ ಭಾವಸಂವಹನೆಯಾಯಿತು. ವಿನ್ಸೆಂಟ್‌ನ ಪ್ರೀತಿಗೆ ಕೃತಜ್ಞತೆಯ ಭಾವ ತಳೆದಳು. ವಿನ್ಸೆಂಟ್ ಅವಳ ನೋವಿನ ತೀವ್ರತೆಯನ್ನು ಅರ್ಥ ಮಾಡಿಕೊಂಡ. ಮೊದಲಿಗೆ ಅವಳು ಚೈತನ್ಯ ತುಂಬಿಸಿಕೊಂಡಿದ್ದ ಹುಡುಗಿಯಾಗಿದ್ದಳು. ಈಗ ನೋವಿನ ತೀವ್ರತೆಯಿಂದ ನರಳುತ್ತಿರುವ ಹೆಣ್ಣಾಗಿದ್ದಳು. ಥಟ್ಟನೆ ಅವನಿಗೆ,

'ನೋವಿನ ಮೂಲಕ ಸೌಂದರ್ಯ' – ಎಂಬ ಹೇಳಿಕೆ ನೆನಪಾಯಿತು.

"ನೀನು ಇಲ್ಲಿ ಸಂತೋಷವಾಗಿರಬಲ್ಲೆ ಕೇ.... ನಾನಂತೂ ಇಡೀ ದಿನ, ಗದ್ದೆ, ಬಯಲು, ತೋಟಗಳಲ್ಲಿ ಸ್ಕೆಚ್ ಮಾಡುವುಕ್ಕಾಗಿ, ಅಡ್ಡಾಡುತ್ತಿರುತ್ತೇನೆ. ನೀನು, ಜ್ಯಾನ್‌ನನ್ನೂ ಕರೆದುಕೊಂಡು ನನ್ನ ಜೊತೆ ಬರಬೇಕು."

"ನಾನು ಬರೋದ್ರಿಂದ ನಿನ್ನ ಕೆಲಸಕ್ಕೆ ಅಡ್ಡಿಯಾಗುತ್ತೆ."

"ಖಂಡಿತ ಇಲ್ಲ. ಯಾರಾದರೂ ಜೊತೆಗಿರೋದು ನನಗೆ ತುಂಬ ಇಷ್ಟ. ಹಾಗೆಯೇ ನಿನಗೆ, ತುಂಬಾ ಇಂಟರೆಸ್ಟಿಂಗಾಗಿ ಇರುವ ವಸ್ತುಗಳನ್ನು ತೋರಿಸ್ತೇನೆ."

"ಹಾಗಾದರೆ ನಾನು ಬರೋಕೆ ರೆಡಿ."

"ಜ್ಯಾನ್ ಕೂಡಾ ಜೊತೆಗಿದ್ದರೆ ಚೆನ್ನಾಗಿರುತ್ತೆ. ತಾಜಾ ಗಾಳಿ ಅವನ ಆರೋಗ್ಯಕ್ಕೂ ಒಳ್ಳೇದು."

ಅವಳು ವಿನ್ಸೆಂಟ್‌ನ ಕೈಯನ್ನು ಮೃದುವಾಗಿ ಅಮುಕಿದಳು.

"ನಾವಿಬ್ಬರೂ ಸ್ನೇಹಿತರಾಗಿರೋಣ. ಏನಂತೀಯಾ?"

"ಹೌದು ಕೇ, ನಾವು ಸ್ನೇಹಿತರಾಗಿರೋಣ." ಅವನ ಕೈ ಬಿಟ್ಟಳು. ರಸ್ತೆಗೆ ಇಳಿದರು.

ವಿನ್ಸೆಂಟ್ ಗಾರ್ಡನ್ ಪ್ರವೇಶಿಸಿದ. ಕೇ ಗಾಗಿ ಒಂದು ಬೆಂಚ್ ತಂದು ಹಾಕಿದ. ಜ್ಯಾನ್ ಮರಳಿನ ಮನೆ ಕಟ್ಟುವುದಕ್ಕೆ ಸಹಾಯ ಮಾಡಿದ. ಇದರಲ್ಲಿ ತೊಡಗಿದ್ದವನಿಗೆ, ಹೇಗ್‌ನಿಂದ ತಂದಿದ್ದ ಸಂತಸದ ಸುದ್ದಿಯೇ ಮರೆತುಹೋಗಿತ್ತು.

ರಾತ್ರಿ ಊಟದ ಸಮಯದಲ್ಲಿ, ಮಾವ್ ತನ್ನನ್ನು ವಿದ್ಯಾರ್ಥಿಯಾಗಿ ಒಪ್ಪಿಕೊಂಡದ್ದನ್ನು ತಿಳಿಸಿದ. ಆದರೆ 'ಕೇ' ಅಲ್ಲಿ ಇದ್ದುದರಿಂದ, ಮಾವ್ ಮತ್ತು ಟರ್ಸ್‌ಟೀಗ್ ತನ್ನ ಸ್ಕೆಚ್‌ಗಳ ಬಗ್ಗೆ ಹೇಳಿದ್ದ ಏನನ್ನೂ ಹೇಳಲಿಲ್ಲ. ಕೇಳ ಮುಂದೆ, ತನ್ನ ಪ್ರತಿಭೆಯನ್ನು ಕೀಳಾಗಿ ಬಿಂಬಿಸಲು ಇಷ್ಟಪಡಲಿಲ್ಲ. ಅವನ ತಾಯಿಗೆ ಈ ಸುದ್ದಿಯಿಂದ ತುಂಬ ಸಂತೋಷವಾಗಿತ್ತು.

"ಮಾವ್ ಹೇಳಿದ ಹಾಗೆ ನಡೆದುಕೊಳ್ಳಬೇಕು. ಅವನು ಬಹಳ ಯಶಸ್ವೀ ಕಲಾವಿದ" ತಾಯಿ ನುಡಿದಳು.

ಮಾರನೆಯದಿನ ಬೆಳಿಗ್ಗೆ ಕೇ, ಜ್ಯಾನ್ ಮತ್ತು ವಿನ್ಸೆಂಟ್ ಮೂವರೂ ಬೇಗನೆ ಎದ್ದು ಲೀಸ್‌ಬಾಷ್ (Liesbosch)ಗೆ ಹೊರಟರು. ಅಲ್ಲಿ ಸ್ಕೆಚ್ ಮಾಡಬೇಕೆಂದು ವಿನ್ಸೆಂಟ್ ಯೋಚಿಸುತ್ತಿದ್ದ. ಮಧ್ಯಾಹ್ನ ಊಟಕ್ಕೆ ಏನಾದರೂ ಬೇಕಾಗಬಹುದೆಂಬ ಆಲೋಚನೆ ಮಾಡಿರಲಿಲ್ಲವಾದರೂ ವಿನ್ಸೆಂಟ್‌ನ ತಾಯಿ, ಒಳ್ಳೆಯ ಊಟವನ್ನು ಪ್ಯಾಕ್‌ಮಾಡಿಕೊಟ್ಟಿದ್ದಳು. ಅವಳಿಗೆ ಅದೊಂದು ಪಿಕ್‌ನಿಕ್ ಆಗಿರಬಹುದೆಂಬ ಭಾವನೆಯಿತ್ತು. ದಾರಿಯಲ್ಲಿ ಹಕ್ಕಿಗೂಡುಗಳನ್ನು ನೋಡಿದ ಜ್ಯಾನ್ ರೋಮಾಂಚಿತನಾಗಿದ್ದ. ಅವನಿಗೆ ಹೇಗಾದರೂ ಒಂದು ಮೊಟ್ಟೆಯನ್ನು ಹುಡುಕಿಕೊಡುವುದಾಗಿ ವಿನ್ಸೆಂಟ್ ಮಾತುಕೊಟ್ಟ. ಪೈನ್ ಕಾಡುಗಳನ್ನು ಹಾದು. ಬಣ್ಣಬಣ್ಣದ ಮರಳಿನಿಂದ ತುಂಬಿದ್ದ ಬಂಜರು ಪ್ರದೇಶಕ್ಕೆ ಬಂದರು. ಅಲ್ಲಿ ದೂರದಲ್ಲಿ, ಒಂದು ಖಾಲಿಗಾಡಿ ನಿಂತಿತ್ತು. ಪಕ್ಕದಲ್ಲಿಯೇ ನೇಗಿಲೊಂದು ಬಿದ್ದಿತ್ತು. ವಿನ್ಸೆಂಟ್ ಕೂಡಲೇ ಈಸಲ್‌ಸ್ಟಾಂಡನ್ನು ಸಿದ್ಧಪಡಿಸಿದ. ಜ್ಯಾನ್‌ನನ್ನು ಗಾಡಿಯಲ್ಲಿ ಕುಳ್ಳಿರಿಸಿದ. ಕೇ ಅಲ್ಲಿಯೇ ಸ್ವಲ್ಪ ದೂರದಲ್ಲಿ ನಿಂತಿದ್ದಳು. ಮಾತಿಲ್ಲದೆ ಮೌನವಾಗಿದ್ದ ಅವಳನ್ನು ಡಿಸ್ಟರ್ಬ್ ಮಾಡುವುದು ಬೇಡವೆಂದು, ತಾನೂ ಮಾತಿಗೆಳೆಯಲು ಮುಂದಾಗಲಿಲ್ಲ. ಅವನು ತನ್ನೊಂದಿಗೆ ಕೇ ಇರುವುದರಿಂದ ಬಹಳ ಸಂತೋಷದಲ್ಲಿದ್ದ. ಒಂದು ಹೆಣ್ಣನ್ನು ಸನಿಹದಲ್ಲಿ ಇರಿಸಿಕೊಂಡು ಕೆಲಸಮಾಡುವುದರಲ್ಲಿ ಸಿಗುವ ಆನಂದ ಹೇಗಿರಬಹುದೆಂಬುದನ್ನು ಇಂದು ಖುದ್ದಾಗಿ ಅನುಭವಿಸಿದ್ದ.

ಅವರು ಅನೇಕ ಗುಡಿಸಲುಗಳನ್ನು, ಹುಲ್ಲು ಛಾವಣಿಗಳನ್ನು ಹಾದು ರೋಜೆಂಡಾಲ್‌ಗೆ ಹೋಗುವ ರಸ್ತೆಗೆ ಬಂದರು. ಸ್ವಲ್ಪ ಸಮಯದ ಬಳಿಕ 'ಕೇ'

"ವಿನ್ಸೆಂಟ್ ನೀನು ಈಸಲ್ ಮುಂದೆ ನಿಂತಿರುವುದನ್ನು ನೋಡಿದಾಗ, ಆ್ಯಮ್‌ಸ್ಟರ್ ಡ್ಯಾಮನಲ್ಲಿ ನೀನಿರುವಾಗ, ನಿನ್ನ ಬಗ್ಗೆ ಏನಂದ್ಕೊಂಡಿದ್ದೆ ಅನ್ನೋದು. ನೆನಪಿಗೆ ಬರ್‍ತಿದೆ."

"ಏನದು ಕೇ?"

"ನಾ ಹೇಳಿದರೆ ನೀನು ತಪ್ಪಾಗಿ ತಿಳ್ಕೊಳ್ಳೋದಿಲ್ಲತಾನೇ?"

"ಖಂಡಿತ ಇಲ್ಲ."

"ನಿಜ ಹೇಳಬೇಕೆಂದರೆ, ನೀನು ಪಾದ್ರಿಯಾಗೋಕೆ ಲಾಯಕ್ಕಲ್ಲ. ಅದು ನಿನ್ನ ಜಾಯಮಾನಕ್ಕೇ ಹೊಂದೋದಿಲ್ಲ ಅಂದ್ಕೊಂಡಿದ್ದೆ. ಸುಮ್ಮನೆ ಪಾದ್ರಿ ಆಗೋ ಕನಸಿನ ಬೆನ್ನೇರಿ ಸಮಯ ಹಾಳು ಮಾಡ್ಕೊಳ್ತಿದ್ದೀ ಅಂತಲೇ ನನಗೆ ಅನಿಸಿತ್ತು."

"ಅದನ್ನು ನನಗ್ಯಾಕೆ ಹೇಳಲಿಲ್ಲ?"

"ಅದನ್ನು ಹೇಳುವ ಅಧಿಕಾರ ನನ್ನದಾಗಿರಲಿಲ್ಲ."

ಹಣೆಯ ಮೇಲೆ ಬಿದ್ದಿದ್ದ ಕೆಂಚು ಕೂದಲನ್ನು ಕೇ ಹಿಂದಕ್ಕೆ ಸರಿಸಿಕೊಂಡಳು. (ವಕ್ರ ವಕ್ರವಾಗಿದ್ದ) ಅಂಕುಡೊಂಕಾಗಿದ್ದ ರಸ್ತೆಯಲ್ಲಿ ಹೆಜ್ಜೆಹಾಕುವಾಗ, ಎಡವಿದ ಕೇ ನೇರವಾಗಿ ವಿನ್ಸೆಂಟ್ ಮೇಲೆ ಬಿದ್ದಳು. ವಿನ್ಸೆಂಟ್ ಅವಳಿಗೆ ಕೈ ಆಸರೆ ನೀಡಿದ. ಕಂಕುಳ ಕೆಳಗೆ ಇರಿಸಿದ್ದ ಕೈಗಳನ್ನು ಎಷ್ಟೋ ಹೊತ್ತು, ತೆಗೆದೆಳೆದುಕೊಳ್ಳುವುದನ್ನೇ ಮರೆತಿದ್ದ.

"ನನಗೆ ಗೊತ್ತಿತ್ತು, ನೀನಾಗಿ ನೀನು ಅಭ್ಯಾಸ ಮಾಡಿ ಕಲಿಯದ ಹೊರತು, ಬೇರೆಯವರು ಏನೇ ಹೇಳಿದರೂ ಪ್ರಯೋಜನವಾಗುವುದಿಲ್ಲಾಂತ."

"ಹೂಂ. ನನಗೂ ನೆನಪಾಗ್ತಿದೆ. ಸಂಕುಚಿತ ಮನಸ್ಸಿನ ಪಾದ್ರಿಯಾಗುವುದು ಬೇಡವೆಂದು ಎಚ್ಚರಿಸಿದ್ದೆ. ಆ ಮಾತು ಪಾದ್ರಿಯಾದವನ ಮಗಳಿಂದ ಬಂದದ್ದು ನೋಡಿ ನನಗೂ ಬಹಳ ವಿಚಿತ್ರ ಎನಿಸಿತ್ತು."

ಅವಳತ್ತ ಮುಗುಳ್ನಗೆ ಬೀರಿದ. ಆದರೆ ಅವಳ ಮೊಗದಲ್ಲಿ ದುಃಖದ ಛಾಯೆ ಹಾಗೆಯೇ ಉಳಿದಿತ್ತು. "ವಿನ್ಸೆಂಟ್, ವೋಸ್ ನನಗೆ ಬಹಳಷ್ಟು ಕಲಿಸಿದ. ಅವನು ಹೇಳಿಕೊಡದಿದ್ದರೆ, ಇವತ್ತು ಪ್ರಪಂಚವನ್ನು ಅರ್ಥಮಾಡಿಕೊಳ್ಳುವುದೇ ಕಷ್ಟವಾಗುತ್ತಿತ್ತು."

ವೋಸ್‌ನ ಹೆಸರು ಕಿವಿಗೆ ಬೀಳುತ್ತಿದ್ದಂತೆ, ವಿನ್ಸೆಂಟ್ ಕೈಯನ್ನೆಳೆದುಕೊಂಡ. ಥಟ್ಟನೆ ತಮ್ಮ ನಡುವಿನ ಅಂತರ ನೆನಪಿಸಿಕೊಟ್ಟಂತಾಯಿತು.

ಒಂದು ಗಂಟೆ ನಡೆದ ಮೇಲೆ ಲೀಸ್‌ಬಾಷ್ ತಲುಪಿದರು. ವಿನ್ಸೆಂಟ್ ಮತ್ತೊಮ್ಮೆ ಈಸಲ್ ಅನ್ನು ಸ್ಥಾಪಿಸಿದ. ಅಲ್ಲಿ ಸ್ವಲ್ಪದೂರದಲ್ಲಿ ಒಂದಿಷ್ಟು ಜೌಗು ಪ್ರದೇಶವಿತ್ತು. ಅದನ್ನು ಸ್ಕೆಚ್‌ನಲ್ಲಿ ಸೆರೆಹಿಡಿಯಬೇಕೆಂದಿದ್ದ. ಜ್ಯಾನ್ ಮರಳಿನೊಂದಿಗೆ ಆಟವಾಡುತ್ತಿದ್ದ. ಜೊತೆಗೆ ತಂದಿದ್ದ ಒಂದು ಪುಟ್ಟ ಸ್ಟೂಲಿನ ಮೇಲೆ 'ಕೇ' ಕುಳಿತು, ಓದಲೆಂದು ಪುಸ್ತಕ

ಹಿಡಿದಿದ್ದರೂ ಅವಳ ಮನಸ್ಸು ಓದಿನ ಕಡೆಗೆ ಇರಲಿಲ್ಲ. ವಿನ್ಸೆಂಟ್ ಒಳಗಿನಿಂದ ಪ್ರಚೋದನೆಗೊಂಡಂತೆ, ವೇಗವಾಗಿ ಸ್ಕೆಚ್ ಮಾಡುತ್ತಿದ್ದ, ಮೊದಲೆಂದೂ ಸಾಧ್ಯವಾಗದಿದ್ದ ಉತ್ಸಾಹದೊಂದಿಗೆ ಕೆಲಸ ಮಾಡುತ್ತಿದ್ದ, ಹೀಗಾಗಲು ಮಾವ್‌ನ ಪ್ರೋತ್ಸಾಹದ ಮಾತುಗಳೋ ಇಲ್ಲ 'ಕೇ' ತನ್ನ ಜೊತೆಗಿದ್ದದ್ದೋ' –ಕಾರಣ ತಿಳಿಯಲಿಲ್ಲ. ಈಗ ಅವನ ಒಂದೊಂದು ಗೆರೆಯೂ ಖಚಿತತೆಯೊಂದಿಗೆ ಮೂಡಿ ಬರುತ್ತಿತ್ತು. ಒಂದಾದ ಮೇಲೆ ಒಂದರಂತೆ, ಹಲವು ಸ್ಕೆಚ್‌ಗಳನ್ನು ಮುಗಿಸಿದ. ಅವನಾಗಲೀ ಅವಳಾಗಲೀ ಮಾತಾಡಲೇ ಇಲ್ಲ. ಈ ದಿನದ ತನ್ನ ಕೆಲಸ ಚೆನ್ನಾಗಿ ಆಗಬೇಕು. ತಾನು ಮಾಡಿದ ಸ್ಕೆಚ್‌ಗಳನ್ನು ಕೇ ಮೆಚ್ಚಿ ಹೊಗಳಬೇಕು ಎಂಬುದು ಅವನ ಆಸೆಯಾಗಿತ್ತು.

ಊಟದ ಹೊತ್ತಾದಾಗ ಓಕ್‌ತೋಪಿನ ಕಡೆ ಹೆಜ್ಜೆ ಹಾಕಿದರು. ಕೇ ಬುಟ್ಟಿಯಲ್ಲಿದ್ದ ಊಟದ ಪದಾರ್ಥಗಳನ್ನು, ಒಂದು ಮರದ ತಣ್ಣನೆಯ ನೆರಳಲ್ಲಿ ತೆಗೆದು ಹರಡಿ ಇರಿಸಿದಳು. ಒಂದು ಕಡೆ ಜೌಗಿನಲ್ಲಿ ಬೆಳೆದಿದ್ದ ವಾಟರ್‌ಲಿಲ್ಲಿಗಳ ಪರಿಮಳ ಪೈನ್ ಮರಗಳ ಪರಿಮಳದೊಂದಿಗೆ ಬೆರೆತು ಹಿತವಾದ ಅನುಭವವನ್ನು ನೀಡಿತ್ತು. ಬುಟ್ಟಿಯ ಒಂದು ಬದಿಗೆ ಕೇ ಮತ್ತು ಜ್ಯಾನ್ ಕುಳಿತರು. ಮತ್ತೊಂದು ಬದಿಗೆ ವಿನ್ಸೆಂಟ್ ಕುಳಿತ. ಕೇ ಊಟವನ್ನು ಬಡಿಸಿದಳು. ಅದನ್ನು ನೋಡಿ ಅವನಿಗೆ ಮಾವ್‌ನ ಮನೆಯಲ್ಲಿ ಊಟದ ಟೇಬಲ್ ಸುತ್ತ ಮಾವ್‌ನ ಪರಿವಾರದೊಂದಿಗೆ ಕುಳಿತಿದ್ದ ದೃಶ್ಯ ಕಣ್ಮುಂದೆ ಬಂತು.

'ಕೇ'ಳನ್ನು ನೋಡಿದಾಗ, ಅವಳಷ್ಟು ಸುಂದರಿ ಬೇರೊಬ್ಬರು ಇರಲಾರರು ಎನಿಸಿತು. ತಾಯಿ ಕಳಿಸಿಕೊಟ್ಟಿದ್ದ ಚೀಸ್, ಬ್ರೆಡ್ಡು, ಮತ್ತು ಸಿಹಿತಿಂಡಿಗಳು ತುಂಬ ರುಚಿಕರವಾಗಿದ್ದರೂ ವಿನ್ಸೆಂಟ್‌ಗೆ ಹೆಚ್ಚಿಗೆ ತಿನ್ನಲು ಆಗಲಿಲ್ಲ. ಈಗ ಅವನೊಳಗೆ ಪುಟಿದೇಳುತ್ತಿದ್ದ ಹಸಿವು ಬೇರೆ ತೆರನದಾಗಿತ್ತು. ಅವನ ದೃಷ್ಟಿ, ಮನಸ್ಸು 'ಕೇ'ಳ ಸೌಂದರ್ಯದಲ್ಲಿ ಸೆರೆಗೊಂಡಿದ್ದವು. ಕೋಮಲ ದೇಹ, ಆರ್ದ್ರ ಕಣ್ಣುಗಳು, ಸೌಂದರ್ಯ ಶಿಲ್ಪಿಯೊಬ್ಬನಿಂದ ಅದ್ಭುತ ಕೌಶಲದಿಂದ ಕಡೆದಿಟ್ಟಂತಹ ಚೆಲುವಾದ ಮುಖ, ಪುಟ್ಟ ಬಾಯಿ, ನೋವಿನಿಂದಾಗಿ ಸ್ವಲ್ಪ ಬಾಡಿದಂತೆನಿಸಿದರೂ ಅದು ಮತ್ತೆ ಚಿಗುರೊಡೆದು ಪೂರ್ವದ ಚೆಲುವಿನೊಂದಿಗೆ ಅರಳುತ್ತದೆಂಬುದನ್ನು ವಿನ್ಸೆಂಟ್ ಬಲ್ಲವನಾಗಿದ್ದ.

ಊಟದ ನಂತರ ಜ್ಯಾನ್ ಅಮ್ಮನ ತೊಡೆಯ ಮೇಲೆ ತಲೆಯಿರಿಸಿ ನಿದ್ದೆ ಮಾಡಿದ. ತಾಯಿ, ತನ್ನ ತೊಡೆಯ ಮೇಲೆ ಮಲಗಿದ್ದ ಮಗುವಿನ ತಲೆನೇವರಿಸುತ್ತಾ, ಮುಗ್ಧ ಮುಖವನ್ನೇ ನೋಡುತ್ತಾ ಆನಂದಿಸುವುದನ್ನು ನೋಡಿದ, ವಿನ್ಸೆಂಟ್ ಅವನಿಗೆ ಗೊತ್ತು ಅವಳು ನೋಡುತ್ತಿದ್ದುದು, ಮುಗ್ಧ ಮುಖದಲ್ಲಿ ಪ್ರತಿಫಲಿತವಾದ ಗಂಡನನ್ನು? ಕೀಜೆರ್‌ಗ್ರಾಕ್ಟ್‌ನ ಮನೆಯಲ್ಲಿದ್ದ ತನ್ನ ಪ್ರೀತಿಯ ಸಂಗಾತಿಯನ್ನು?!, ಬ್ರಬಾಂಟ್‌ನ ಬಂಜರು ಪ್ರದೇಶದಲ್ಲಿ ಅವಳೆದುರಿಗೆ ಇರುವ ಕಸಿನ್ ವಿನ್ಸೆಂಟ್‌ನನ್ನಲ್ಲ!!!

ಮಧ್ಯಾಹ್ನವಿಡೀ ಸ್ಕೆಚ್ ಮಾಡುತ್ತಲೇ ಇದ್ದ. ಮಧ್ಯೆಮಧ್ಯೆ ಜ್ಯಾನ್‌ನನ್ನು ತೊಡೆಯ ಮೇಲೆ ಮಲಗಿಸಿಕೊಂಡೂ ಸ್ಕೆಚ್ ಮಾಡಿದ. ಜ್ಯಾನ್‌ಗೆ ವಿನ್ಸೆಂಟ್ ಬಹಳ ಮೆಚ್ಚಿಗೆಯಾಗಿದ್ದ. ಅವನ ಡ್ರಾಯಿಂಗ್ ಹಾಳೆಗಳನ್ನು ಚಿತ್ತು ಮಾಡಿ ಬಿಸಾಡಲೂ

ಬಿಟ್ಟ, ನಗುತ್ತಾ, ಕೆನೆಯುತ್ತಾ ಆ ವಿಶಾಲ ಪ್ರದೇಶದಲ್ಲಿ ಓಡಾಡಿ ಬಂದು ಅವನನ್ನು, ಅವನು ಮಾಡುತ್ತಿದ್ದ ಕೆಲಸದ ಬಗ್ಗೆ ಅನೇಕ ಮುಗ್ಧ ಪ್ರಶ್ನೆಗಳನ್ನು ಹಾಕುತ್ತಿದ್ದ, ತನ್ನ ಜೊತೆ ಆಡಲು ಬರಬೇಕೆಂದು ಹಟ ಮಾಡುತ್ತಿದ್ದ. ಅವನು ಮಾಡುತ್ತಿದ್ದ ಚೇಷ್ಟೆಗಳು, ತುಂಟಾಟಗಳು ವಿನ್ಸೆಂಟ್‌ಗೆ ಬೇಸರಬರಿಸಲಿಲ್ಲ. ಬದಲಾಗಿ ಈ ಪುಟ್ಟ ಪ್ರಾಣಿ ತನ್ನ ಹೆಗಲೇರಿ ಆಟವಾಡಿದಾಗ ಅವನಿಗೆ, ಹಿತವೆನಿಸುತ್ತಿತ್ತು.

ಶರತ್ಕಾಲದ ಪ್ರವೇಶವಾಗಿತ್ತು. ಸೂರ್ಯ ಬೇಗನೆ ಅಸ್ತಮಿಸುತ್ತಿದ್ದ. ಮುಳುಗುವ ಸೂರ್ಯನ ಬಣ್ಣಗಳ ಪ್ರತಿಫಲನವನ್ನು ನೋಡಲು, ಕೊಳಗಳಿದ್ದಲ್ಲೆಲ್ಲ ನಿಲ್ಲುತ್ತಿದ್ದರು. ವಿನ್ಸೆಂಟ್, 'ಕೇ'ಗೆ ತನ್ನ ಡ್ರಾಯಿಂಗ್ಸ್ ತೋರಿಸಿದ, ಅವಳಿಗೆ ಕಂಡದ್ದು ಒರಟಾದ, ನಾಜೂಕಿಲ್ಲದ ನೋಟಗಳು. ಆದರೆ ವಿನ್ಸೆಂಟ್ ತನ್ನ ಮಗನನ್ನು ತುಂಬ ಪ್ರೀತಿಸುತ್ತಿದ್ದ, ಅವನಿಗೆ ನೋವುಂಟು ಮಾಡುವುದು ಇಷ್ಟವಿರಲಿಲ್ಲ. ನೋವಿನ ತೀವ್ರತೆ ಪರಿಣಾಮಗಳು ಅನುಭವ ಇತ್ತು.

"ವಿನ್ಸೆಂಟ್ ನಿನ್ನ ಸ್ಕೆಚ್‌ಗಳು ತುಂಬಾ ಚೆನ್ನಾಗಿವೆ" – ಎಂದು ಹೇಳಿದಳು.

"ನಿಜ ಹೇಳ್ತಿದ್ದೀಯ ಕೇ?"

ತನ್ನೆದೆಯಲ್ಲಿ ಇಲ್ಲಿಯವರೆಗೆ ಅದುಮಿಟ್ಟಯಕೊಂಡಿದ್ದ ಭಾವನೆಗಳೆಲ್ಲ ಒಮ್ಮೆಲೇ ಕಟ್ಟೆಯೊಡೆದುಕೊಂಡು ಹೊರಹೊಮ್ಮಿದವು. ಆ್ಯಮಸ್ಟರ್ ಡ್ಯಾಮ್‌ನಲ್ಲೂ ತನ್ನ ಜೊತೆ ತುಂಬಾ ಚೆನ್ನಾಗಿ ಪ್ರೀತಿಯಿಂದ, ಅನುಕಂಪದಿಂದ ನೋಡಿಕೊಂಡಿದ್ದಳು. ತಾನು ಹೇಳುವುದನ್ನೆಲ್ಲ ಅರ್ಥಮಾಡಿಕೊಳ್ಳುತ್ತಾಳೆ. ಅವಳಿಗಲ್ಲದೆ ಯಾರಿಗೆ ತಾನೇ ತನ್ನನ್ನು, ತನ್ನ ಯೋಜನೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯ. ಮನೆಯವರಿಗೆ ತಾನು ಉಪಯೋಗಿಸುವ ಶಬ್ದಗಳೂ ಕೂಡಾ ಅರ್ಥವಾಗಲಾರದು. ಮಾವ್ ಮತ್ತು ಟರ್ಸ್‌ಟೀಗ್‌ರೊಂದಿಗೆ ತಾನು ವಿನಯದೊಂದಿಗೆ, ಒಬ್ಬ ವಿಧೇಯ ವಿದ್ಯಾರ್ಥಿಯಂತೆ ಅಂಗಲಾಚಿದ್ದನ್ನೂ ಹೇಳಿಕೊಂಡ.

ತನ್ನಲ್ಲಿದ್ದ ಎಲ್ಲ ಭಾವನೆಗಳನ್ನೂ ಅವಳ ಮುಂದೆ ತೋಡಿಕೊಂಡ. ಅವನಲ್ಲಿ ಹೆಚ್ಚುತ್ತಿದ್ದ ಉತ್ಸಾಹದಿಂದಾಗಿ ಹೆಚ್ಚಿದ ನಡಿಗೆಯ ರಭಸಕ್ಕೆ, ಕೇ ಹೊಂದಿಕೊಳ್ಳಲಾಗದೆ ತತ್ತರಿಸಿದಳು. ಅವನು ಯಾವುದನ್ನಾದರೂ ತೀವ್ರವಾಗಿ ಹಚ್ಚಿಕೊಂಡಾಗ ಅವನ ನಡೆ, ನುಡಿಗಳೂ ರಭಸಗೊಂಡು, ಅವನ ಸ್ವಭಾವ ಜನ್ಯ ನಡೆವಳಿಕೆ ಮರುಕಳಿಸುತ್ತದೆ. ಮಧ್ಯಾಹ್ನ ಅವನಲ್ಲಿ ಕಾಣಿಸಿದ್ದ ಸಭ್ಯತೆ, ಸೌಜನ್ಯಗಳು ಮರೆಯಾಗಿ, ಒರಟುತನ, ಕಾಣಿಸಿಕೊಳ್ಳುತ್ತಿದ್ದಂತೆ ಅವಳಿಗೆ ಹೆದರಿಕೆಯಾಯಿತು. ಅವನ ಮಾತಿನ ಆವೇಗ, ಉದ್ರೇಕಗಳು, ತೀರಾ ಬಾಲಿಶವೆನ್ನುವಂತೆ ತೋರಿದವು. ಒಬ್ಬ ಗಂಡಸು ಹೆಣ್ಣಿಗೆ ನೀಡಬಹುದಾಗಿದ್ದ ಅಪರೂಪದ, ಅಮೂಲ್ಯವಾದ ಪ್ರಶಂಸೆಯನ್ನು ನೀಡುತ್ತಿದ್ದಾನೆಂಬುದನ್ನೂ ತಿಳಿಯದಾದಳು.

ಪ್ಯಾರಿಸ್‌ನಲ್ಲಿ ಥಿಯೋನನ್ನು ಅಗಲಿಬಿಟ್ಟು ಬಂದಾಗಿನಿಂದ ತನ್ನಲ್ಲಿ ಸಂಚಯಿಸಿ ಇರಿಸಿಕೊಂಡಿದ್ದ ಭಾವನೆಗಳ ಮಹಾಪೂರವನ್ನೇ ಅವಳ ಮುಂದೆ ಹರಿಸಿಬಿಟ್ಟ. ತನ್ನ

ಆಸೆ, ಆಕಾಂಕ್ಷೆಗಳನ್ನು, ತಾನು ಕೆಲಸದಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕಾದ ರೀತಿಯನ್ನು – ವಿವರಿಸಿ ಹೇಳಿದ, ಬಹಳವಾಗಿ ಭಾವೋದ್ರಿಕ್ತನಾಗಿದ್ದ. ಇಷ್ಟೊಂದು ಭಾವುಕನಾಗುತ್ತಿರುವುದೇಕೆಂದು ಮಾತ್ರ 'ಕೇ'ಗೆ ಅರ್ಥವಾಗಲಿಲ್ಲ. ಆದರೂ ಅವನನ್ನು ತಡೆಯಯುವ ಪ್ರಯತ್ನವನ್ನಾಗಲೀ, ಕೇಳಿಸಿಕೊಳ್ಳುವ ಪ್ರಯತ್ನವನ್ನಾಗಲೀ ಮಾಡವುದಕ್ಕೆ ಹೋಗಲಿಲ್ಲ. 'ಕೇ' ಯಾವಾಗಲೂ ಭೂತಕಾಲದಲ್ಲೇ ಕಳೆದು ಹೋಗುತ್ತಿದ್ದಳು. ಯಾವಾಗಲೂ ಗತಕಾಲದ ನೆನಪುಗಳಲ್ಲದೆ ಬೇರೆ ಕಡೆ ಲಕ್ಷ್ಯವಿರುತ್ತಿರಲಿಲ್ಲ. ಭವಿಷ್ಯದ ಬಗ್ಗೆ ಇಷ್ಟೊಂದು ಉತ್ಸಾಹ ಉದ್ರೇಕಗಳನ್ನು ತೋರುತ್ತಾ ಖುಷಿ ಪಡುವುದು ಅವಳಿಗೆ ಇಷ್ಟವಾಗುತ್ತಿರಲಿಲ್ಲ. ಅವಳೇಕೆ ಹೀಗೆ ಜೀವನ ವಿಮುಖಳಾಗುತ್ತಿದ್ದಾಳೆಂದು ತಿಳಿಯುವುದಕ್ಕೆ ತನ್ನೆಲ್ಲ ಶಕ್ತಿ ಮೀರಿ ಪ್ರಯತ್ನಿಸುತ್ತಿದ್ದನಾದರೂ ಪ್ರಯೋಜನವಾಗಿರಲಿಲ್ಲ. ಅವಳು ಯಾವುದಕ್ಕೂ ಸ್ಪಂದಿಸುತ್ತಿರಲಿಲ್ಲ. ಆದರೆ ವಿನ್ಸೆಂಟ್ ಪ್ರಸ್ತಾಪಿಸಿದ ಒಂದು ಹೆಸರು ಮಾತ್ರ ಅವಳ ಕಿವಿಗೆ ಬೀಳುತ್ತಿದ್ದಂತೆ ಥಟ್ಟನೆ ಸ್ಪಂದಿಸಿದಳು.

"ನ್ಯೂಹಿಸ್? ಅಂದರೆ? ಪೈಂಟರ್? ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿದ್ದವನು?"

"ಮೊದಲಿದ್ದ ಆದರೆ ಈಗ ಹೇಗ್‌ನಲ್ಲಿ ಇರುತ್ತಿದ್ದಾನೆ."

"ಹೌದೇ! ವೋಸ್ ಅವನ ಗೆಳೆಯನಾಗಿದ್ದ. ಹಲವು ಬಾರಿ ಮನೆಗೂ ಕರೆದುಕೊಂಡು ಬಂದಿದ್ದ." ವಿನ್ಸೆಂಟ್ ಸ್ತಂಭಿಸಿದ.

ವೋಸ್! ಯಾವಾಗಲೂ ಅವನದೇ ಧ್ಯಾನ. ಅವನು ಸತ್ತು ಹೋಗಿದ್ದಾನೆ. ಸತ್ತು ಆಗಲೇ ಒಂದು ವರ್ಷವಾಯಿತು. ಇಷ್ಟು ಹೊತ್ತಿಗೆ ಮರೆತಿರಬೇಕಿತ್ತು. ಅವನು ಭೂತಕಾಲಕ್ಕೆ ಸಂದವನು. ನನ್ನ ಪಾಲಿನ ಉರ್ಸುಲಾಳ ಹಾಗೆ. ಆದರೂ ಮಾತಿನ ಮಧ್ಯೆ ಅವನನ್ನೇಕೆ ಎಳೆದು ತರುತ್ತಾಳೆ? ಆ್ಯಮ್ಸ್ಟರ್ ಡ್ಯಾಮ್‌ನಲ್ಲಿದ್ದಾಗಲೂ ವಿನ್ಸೆಂಟ್‌ಗೆ ವೋಸ್‌ನನ್ನು ಕಂಡರೆ ಅಷ್ಟಕ್ಕಷ್ಟೆ!

ಸಮಯ ಕಳೆಯಿತು. ಪೈನ್ ಮುಳ್ಳುಗಳು ಕಂದು ಬಣ್ಣಕ್ಕೆ ತಿರುಗಿದವು. ಜ್ಯಾನ್ ಮತ್ತು ಕೇ ಪ್ರತಿದಿನಾ ವಿನ್ಸೆಂಟ್‌ನ ಜೊತೆ ಹೊಲ, ಗದ್ದೆ ಬಯಲುಗಳಿಗೆ ಭೇಟಿ ನೀಡುತ್ತಿದ್ದರು, ಅವನು ಕೆಲಸ ಮಾಡುವಾಗ, ಸುತ್ತಾಡಿ ಬರುತ್ತಿದ್ದರು. ಸ್ವಲ್ಪ ಸ್ವಲ್ಪವೇ ಅವಳ ಕೆನ್ನೆಗಳು ತುಂಬಿಕೊಂಡವು. ಬಣ್ಣವೂ ಬಂತು. ಈಗ ಅವಳ ಹೆಜ್ಜೆಗಳಲ್ಲಿ ಸ್ಥಿರತೆ, ಭರವಸೆಗಳು ಕಾಣಿಸುತ್ತಿದ್ದವು. ಹೊಲಿಗೆ ಸಾಮಾನನ್ನೂ ಜೊತೆಗೆ ತರುತ್ತಿದ್ದಳು. ವಿನ್ಸೆಂಟ್ ಸ್ಕೆಚ್‌ಗಳಲ್ಲಿ ತೊಡಗಿದ್ದರೆ ಇವಳು ಹೊಲಿಗೆ ಕೆಲಸದಲ್ಲಿ ಮಗ್ನಳಾಗಿರುತ್ತಿದ್ದಳು. ಈಗ ಮನಬಿಚ್ಚಿ ತನ್ನ ಬಾಲ್ಯದ ಬಗ್ಗೆ, ತಾನು ಓದಿದ ಪುಸ್ತಕಗಳ ಬಗ್ಗೆ, ಆ್ಯಮ್ಸ್ಟರ್ ಡ್ಯಾಮ್‌ನಲ್ಲಿ ತನಗೆ ಪ್ರಿಯರಾಗಿದ್ದವರ ಬಗ್ಗೆ ಮಾತಾಡುತ್ತಿದ್ದಳು.

ಮನೆಯವರಿಗೂ ಅವರಿಬ್ಬರ ನಡುವಿನ ಮುಕ್ತ ಸ್ನೇಹ ಇಷ್ಟವಾಯಿತು. ವಿನ್ಸೆಂಟ್‌ನ ಸ್ನೇಹ, ಅವಳಿಗೆ ಜೀವನದಲ್ಲಿ ಆಸಕ್ತಿ ಮೂಡಿಸುತ್ತಿತ್ತು. ಅವಳು ಮನೆಯಲ್ಲಿದ್ದದ್ದು ವಿನ್ಸೆಂಟ್‌ಗೂ ಪ್ರಿಯವಾಗಿತ್ತಲ್ಲದೆ ಅವನೂ ಈಗ ಸ್ನೇಹಪರತೆಯನ್ನು ರೂಢಿಸಿಕೊಂಡಿದ್ದ. ಅನ್ನಾ ಕಾರ್ನೆಲಿಯಾ ಥಿಯೋಡೋರಸ್ ಇವರಿಬ್ಬರನ್ನೂ ಹತ್ತಿರಮಾಡಲು ಅವಕಾಶ ಒದಗಿಸಿಕೊಟ್ಟದ್ದಕ್ಕೆ ದೇವರಿಗೆ ಕೃತಜ್ಞತೆ ತಿಳಿಸಿದರು.

'ಕೇ'ಗೆ ಸಂಬಂಧಿಸಿದ ಪ್ರತಿಯೊಂದೂ ವಿನ್ಸೆಂಟ್‌ಗೆ ಪ್ರಿಯವಾಗತೊಡಗಿತು. ಅವಳು ಧರಿಸಿದ್ದ ಉದ್ದನೆಯ ಕಪ್ಪು ಉಡುಪು, ಕಪ್ಪು ಹ್ಯಾಟು ಅವಳ ತೆಳ್ಳನೆಯ, ನೀಳದೇಹಕ್ಕೆ ಸುಂದರವಾಗಿ ಒಪ್ಪುತ್ತಿತ್ತು. ಅವನು ಒಮ್ಮೊಮ್ಮೆ ಅವಳಿದ್ದೆಡೆ ಬಾಗಿದಾಗ ಅವಳು ಸಿಂಪಡಿಸಿಕೊಂಡಿದ್ದ ಸೆಂಟಿನ ವಾಸನೆ ಅವನ ಮೂಗಿಗೆ ಇಳಿದು ಉನ್ಮತ್ತನಾಗುತ್ತಿದ್ದ. ಅವಳ ನಡೆ, ನುಡಿ, ನೋಟ, ಅವಳ ಸ್ಪರ್ಷ ಅವಳ ಧ್ವನಿ ಎಲ್ಲವೂ ಅವನಲ್ಲಿನ ಮಧುರಾನುಭೂತಿಗಳನ್ನು ಹೊಡೆದೆಬ್ಬಿಸಿದವು. ಮಲಗಿದ ಕೂಡಲೇ ಅವಳ ಕಂಠಮಾಧುರ್ಯ ಅನುರಣಿಸುತ್ತಿದ್ದಂತೆ ಭಾಸವಾಗುತ್ತಿತ್ತು. ಕಾಂತಿಯುಕ್ತ ಚರ್ಮದ ಸ್ಪರ್ಷಕ್ಕಾಗಿ, ಹಸಿದ ತುಟಿಗಳ ಸಾಂತ್ವನಕ್ಕಾಗಿ ಅವನ ಮನಸ್ಸು ಚಡಪಡಿಸುತ್ತಿತ್ತು.

ಇಲ್ಲಿಯವರೆಗೆ ತಾನು ಹೇಗೆ ಬದುಕಿದ ಎನ್ನುವ ಅರಿವಿತ್ತು. ಆಗ ಅವನದು ಬದುಕು ಬದುಕೇ ಆಗಿರಲಿಲ್ಲ. ಪ್ರೀತಿ, ಮಾರ್ದವತೆಗಳು ಪೂರ್ತಿಯಾಗಿ ಬತ್ತಿ ಹೋಗಿದ್ದವು. ಮನಸ್ಸನ್ನು ತಣಿಸಲು ಯಾರಿಂದಲೂ ಅವನಿಗೆ ಪ್ರೀತಿ ದಕ್ಕಿರಲಿಲ್ಲ. ಕೇ ಈಗ ಅವನ ಹತ್ತಿರದಲ್ಲಿಯೇ ಇದ್ದಾಳೆ. ಇದಿಷ್ಟೇ ವಿಚಾರ ಅವನ ಸಂತೋಷಕ್ಕೆ ಸಾಕಾಯಿತು. ಅವಳ ಜೊತೆಯಾಗಿ ಗದ್ದೆ ಬಯಲುಗಳಲ್ಲಿ ಓಡಾಡಿದಾಗ, ಅವನಿಗೆ ಕೆಲಸ ಮಾಡಲು ಎಲ್ಲಿಲ್ಲದ ಉತ್ಸಾಹ, ಸ್ಫೂರ್ತಿ! ಚಕಚಕನೆ ಕೆಲಸ ಮುಗಿಸಿ ಬಿಡುತ್ತಿದ್ದ. ಮಾಡಿದ್ದನ್ನು ಮುತುವರ್ಜಿ, ಆಸಕ್ತಿಗಳಿಂದಲೇ ಮಾಡಿದ್ದ. ಅವಳು ಮನೆಯಲ್ಲಿದ್ದಾಗ ಮೇಜಿನ ಮುಂದೆ ಅವಳಿಗೆ ಹತ್ತಿರವಾಗಿಯೇ ಕುಳಿತುಕೊಳ್ಳುತ್ತಿದ್ದ, ಸ್ಕೆಚ್ ಮಾಡುವುದರಲ್ಲಿ ಮಗ್ನನಾಗಿದ್ದರೂ ತನ್ನ ಮತ್ತು ಪೇಪರ್ ನಡುವೆ ಅವಳ ಮುಖವೇ ನಿಲ್ಲುತ್ತಿತ್ತು. ಮಧ್ಯೆ ಮಧ್ಯೆ ದೀಪದ ಹಳದಿ ಬೆಳಕಿನಲ್ಲಿ ಅವಳ ಕಡೆ ನೋಡುತ್ತಿದ್ದ. ಅದೇ ಸಮಯದಲ್ಲಿ ಅವಳೂ ಅವನತ್ತ ನೋಡಿ ಮುಗುಳ್ನಗುತ್ತಿದ್ದಳು. ಆ ನಗುವಿನಲ್ಲಿ ಮಧುರಯಾತನೆಯ ಛಾಯೆ ಇರುತ್ತಿತ್ತು. ಆಗಾಗ, ಅವನಿಗೆ ಅವಳಿಂದ ದೂರವಿರಲು ಸಾಧ್ಯವೇ ಇಲ್ಲ ಎನಿಸುತ್ತಿತ್ತು. ಓಡಿ ಹೋಗಿ ಅವಳನ್ನು ಬಿಗಿಯಾಗಿ ಅಪ್ಪಿ, ಅವಳ ತುಟಿಗೆ ತುಟಿಯಿಟ್ಟು ತಣಿಯ ಬೇಕೆಂದು ಹಾತೊರೆಯುತ್ತಿದ್ದ.

ಅವಳ ಸೌಂದರ್ಯಕ್ಕೆ ಮಾತ್ರವೇ ಆಕರ್ಷಿತನಾಗಿರಲಿಲ್ಲ. ಅವಳನ್ನು ಇಡಿಯಾಗಿ, ಅವಳ ವ್ಯಕ್ತಿತ್ವ, ಸೌಂದರ್ಯ ಮತ್ತೆಲ್ಲವನ್ನೂ ಒಳಗೊಂಡಂತೆ ಪ್ರೀತಿಸುತ್ತಿದ್ದ. ಅವಳ ನಿಧಾನ ನಡೆ, ಗಾಂಭೀರ್ಯ, ಸೌಮ್ಯ ಸೌಂದರ್ಯ, ಸಂಸ್ಕಾರ – ಎಲ್ಲವೂ ಅವನಿಗೆ ಮೆಚ್ಚಿಗೆಯಾಗಿತ್ತು.

ಉರ್ಸುಲಾ ಕೈ ತಪ್ಪಿದ ಮೇಲೆ ಏಳುವರ್ಷದ ದೀರ್ಘ ಅವಧಿಯಲ್ಲಿ ಒಂಟಿತನದ ಭಯಂಕರತೆಯನ್ನು ಕಲ್ಪಿಸಿಕೊಂಡೇ ಇರಲಿಲ್ಲ. ಪ್ರೀತಿಯಿಂದ, ನಿಜವಾದ ಕಳಕಳಿಯಿಂದ ಮಾತನಾಡಿಸುವ ಒಂದು ಹೆಣ್ಣಾದರೂ ಅವನ ಬಾಳಿನಲ್ಲಿ ಲಭ್ಯವಾಗಿರಲಿಲ್ಲ; ಅವನ ಕಡೆ ಕಣ್ಣೆತ್ತಿಯೂ ನೋಡಿದವರು ಇರಲಿಲ್ಲ.

ಒಂದು ಹೆಣ್ಣೂ ಅವನನ್ನು ಎಂದೂ ಪ್ರೀತಿಸಿರಲಿಲ್ಲ. ಹೆಣ್ಣಿನ ಪ್ರೀತಿ ಇಲ್ಲದ ಬದುಕು ಬದುಕಲ್ಲ ಸಾವು, ಉರ್ಸುಲಾಳನ್ನು ಪ್ರೀತಿಸಿದ್ದೇನೋ ಹೌದು. ಅವನ ಪ್ರಾಯದಲ್ಲಿ ಉರ್ಸುಲಾಳನ್ನು ಪ್ರೀತಿಸಿದ; ಪ್ರೀತಿಯನ್ನು ನೀಡಿದ. ಆದರೆ ನೀಡಿದ

ಪ್ರೀತಿಗೆ ದೊರೆತದ್ದು ನಿರಾಕರಣೆ. ಆದರೆ ಈಗ? ಪರಿಪಕ್ವ ವಯಸ್ಸಿನಲ್ಲಿ ಪ್ರೀತಿಯನ್ನು ಕೊಡುವುದಷ್ಟೇ ಅಲ್ಲ, ಪಡೆಯಬೇಕೆಂದೂ ಬಯಸಿದ. 'ಕೇ'ಳ ಬೆಚ್ಚನೆಯ ಪ್ರೀತಿ ತನಗೆ ದೊರೆಯದ ಹೊರತು, ತನ್ನಲ್ಲಿ ಮೂಡಿದ ಹೊಸ ಹಸಿವು ತಣಿಯುವುದು ಸಾಧ್ಯವಿಲ್ಲವೆಂದು ಅವನಿಗೆ ಅರ್ಥವಾಯಿತು.

ಮಿಷೆಲ್ ಹೇಳಿದ್ದ ಮಾತುಗಳು ನೆನಪಾದವು. ಒಂದು ಹೆಣ್ಣಿನ ಉಸಿರಿನ ಪರಿಮಳದ ಸೋಂಕು ಸಾಧ್ಯವಾಗದಿದ್ದರೆ ಅವನು ಮನುಷ್ಯನೇ ಆಗುವುದಿಲ್ಲ- ಎಂದದ್ದು ನಿಜ. ಈಗ 'ಕೇ'ಳ ಪ್ರೀತಿ, ಸೌಂದರ್ಯಗಳು ದೊರೆತು, ತಾನು ಮನುಷ್ಯನಾಗಿದ್ದೇನೆ ಎನಿಸಿತು.

ಒಬ್ಬ ಗಂಡಸಾಗಿ, ತನಗೆ 'ಕೇ' ಬೇಕೇಬೇಕು. ಅತಿಯಾಗಿ ಪ್ರೀತಿಸುತ್ತಿದ್ದ ಅವಳನ್ನು ಪಡೆಯದೆ ಬದುಕು ಸಾಧ್ಯವಿಲ್ಲ. ತಾನು ಪ್ರೀತಿಸುತ್ತಿರುವ 'ಕೇ'ಳ ಭಾಗವಾಗಿರುವುದರಿಂದ ಜ್ಯಾನ್ ಕೂಡಾ ಪ್ರಿಯವಾಗಿದ್ದ. ಆದರೆ ಅದೇಕೊ ವೋಸ್ ಹೆಸರು ಕೇಳಿದರೆ ಸಿಡಿಮಿಡಿಗೊಳ್ಳುತ್ತಿದ್ದ. ಅವನ್ನು ಕಂಡರೆ ಅವನಿಗೆ ಆಗುತ್ತಿರಲಿಲ್ಲ. ಸತ್ತುಹೋದ ಅವನ ನೆನಪಿನಿಂದ ಅವಳನ್ನು ಬಿಡಿಸುವುದು ಹೇಗೆಂದೇ ಅವನಿಗೆ ತಿಳಿಯಲಿಲ್ಲ. ಹಿಂದೆ ಸಾಧ್ಯವಾಗದಿದ್ದ ಅವಳ ಪ್ರೀತಿಗಾಗಲೀ ಮದುವೆಗಾಗಲೀ ಅವನು ಪಶ್ಚಾತ್ತಾಪ ಪಡಲಿಲ್ಲ. ಆದರೆ ಉರ್ಸುಲಾ ತನ್ನ ಪ್ರೀತಿಯನ್ನು ತಿರಸ್ಕರಿಸಿ, ತನಗುಂಟು ಮಾಡಿದ ನೋವು ನೆನಪಾಗಿ, ಅದಕ್ಕೆ ಪಶ್ಚಾತ್ತಾಪ ಪಟ್ಟ. ತಾವಿಬ್ಬರೂ ಒಂದಲ್ಲ ಒಂದು ರೀತಿಯಿಂದ ಪ್ರೀತಿಯ ಆಘಾತಕ್ಕೆ ಒಳಗಾದವರು. ಆದ್ದರಿಂದ ಈಗ ಅವರ ನಡುವಿನ ಪ್ರೀತಿ ಪರಿಶುದ್ಧವಾಗಿರುತ್ತದೆ.

'ಕೇ' ತನ್ನ ಹಿಂದಿನ ಬದುಕನ್ನು, ಗಂಡನನ್ನು ಮರೆಯುವಂತೆ ತಾನು ಮಾಡಬಲ್ಲೆ; ತಾನು ಎಷ್ಟೊಂದು ಪ್ರೀತಿಯನ್ನು ನೀಡಬಲ್ಲೆನೆಂದರೆ, ಹಿಂದಿನದಲ್ಲೆವನ್ನೂ, ವರ್ತಮಾನದ ಪ್ರೀತಿಯಲ್ಲಿ ಕೊಚ್ಚಿಹೋಗಲು ಬಿಡುತ್ತಾಳೆ. ಮಾವ್‌ನ ಬಳಿ ಕಲಿಯಲು ತಾನು ಹೇಗ್‌ಗೆ ಹೋಗಲಿರುವುದರಿಂದ 'ಕೇ'ಳನ್ನೂ ಜೊತೆಯಲ್ಲಿ ಕರೆದೊಯ್ಯಬೇಕು. ಅವಳಿಗೊಂದು ಒಂದು ಮನೆ ಮಾಡಬೇಕು. 'ಕೇ'ಳನ್ನು ತನ್ನ ಹೆಂಡತಿಯನ್ನಾಗಿ ಪಡೆದು, ಅವಳಿಂದ ಮಕ್ಕಳನ್ನು ಪಡೆಯಬೇಕು. ಅವರು ತನ್ನ ಅಚ್ಚೊತ್ತಿದ್ದಂತೆ ಇರಬೇಕು ಎಂಬುದು ಅವನ ಬಯಕೆಯಾಗಿತ್ತು. ಈಗ ಅವನೊಬ್ಬ ಗಂಡಸು ಮನುಷ್ಯ. ಅಲ್ಲಿ ಇಲ್ಲಿ ಅಲೆಯುವುದನ್ನು ಬಿಟ್ಟು ಬಿಡಬೇಕು. ಅವನಿಗೆ ಹೆಂಡತಿಯ ಮೂಲಕ ಪ್ರೀತಿಬೇಕು. ಅದು ಅವನಲ್ಲಿನ ಒರಟುತನವನ್ನು ಸಂಪೂರ್ಣವಾಗಿ ಒರೆಸಿಬಿಡುತ್ತದೆ; ವಾಸ್ತವತೆಯ ಅರಿವನ್ನು ಮೂಡಿಸುತ್ತದೆ. ಅವನ ಜೀವನದಲ್ಲಿ ಪ್ರೀತಿಯ ಕೊರತೆಯಿಂದಾಗಿ ಎಷ್ಟೆಲ್ಲವನ್ನು ಕಳೆದುಕೊಂಡಿದ್ದಾವೆಂಬುದು ಅವನಿಗೂ ತಿಳಿದಿಲ್ಲ. ಬಹುಶಃ ಪ್ರೀತಿಯ ಬೆಲೆ, ಅಗತ್ಯಗಳ ಅರಿವಿದ್ದರೆ, ತನ್ನ ಬದುಕಿನಲ್ಲಿ ಎದುರಾದ ಮೊಟ್ಟಮೊದಲ ಹೆಣ್ಣನ್ನೇ ಅತಿಯಾಗಿ ಪ್ರೀತಿಸಿಬಿಡುತ್ತಿದ್ದ. ಪ್ರೀತಿ ಬದುಕಿಗೆ ರುಚಿ ಕೊಡುವಂಥಾದ್ದು, ಅದರ ರೀತಿಯಿಂದ ಒಳ್ಳೆಯದಾಯಿತೆಂದು ಸಂತೋಷಪಟ್ಟ, ಆಗ ತನ್ನ ಪ್ರೀತಿ ಕೇವಲ ಮೇಲು ಪದರದ್ದು, ಆದರೆ ಈಗಿನ ಪ್ರೀತಿ ಅಂತರಾಳದಿಂದ

ಹೊಮ್ಮಿದ್ದು ಎಂಬ ಅರಿವಾಯಿತು. ತಾನೇನಾದರೂ ಉರ್ಸುಲಾಳನ್ನು ಮದುವೆಯಾಗಿ ಬಿಟ್ಟಿದ್ದರೆ, ನಿಜವಾದ ಪ್ರೀತಿಯ ಅರ್ಥವೇ ಆಗುತ್ತಿರಲಿಲ್ಲ. 'ಕೇ'ಳನ್ನು ಪ್ರೀತಿಸಲೂ ಆಗುತ್ತಿರಲಿಲ್ಲ. ಮೊಟ್ಟ ಮೊದಲ ಬಾರಿಗೆ ಉರ್ಸುಲಾ, ಅವಳ ಪ್ರೀತಿ, ಅವಳ ವ್ಯಕ್ತಿತ್ವ, ಅವಳ ನಡವಳಿಕೆ ಎಲ್ಲವೂ ಟೊಳ್ಳು; ಅರ್ಥಹೀನ ಎನಿಸತೊಡಗಿತು. ಇದಕ್ಕಾಗಿ ತಾನು ಅನುಭವಿಸಿದ ಯಾತನೆ! – 'ಕೇ'ಳ ಜೊತೆ ಒಂದು ಗಂಟೆಯ ಬದುಕು, ಉರ್ಸುಲಾಳ ಜೊತೆಗಿನ ಇಡೀ ಬದುಕಿಗೂ ಮೀರಿದ್ದು! ಇಲ್ಲಿಯವರೆಗೆ ಅನುಭವಿಸಿದ ನೋವು ಎಂಥಾದ್ದು?..... ಇನ್ನು ಮುಂದೆ ತನ್ನ ಬದುಕಿನಲ್ಲಿ ಯಾವುದೇ ಕಷ್ಟಗಳು ಇರಲಾರವು. 'ಕೇ'ಳ ತುಂಬು ಪ್ರೀತಿ, ಕೈ ತುಂಬ ಕೆಲಸ; ಚೆನ್ನಾಗಿ ಮಾರಾಟವಾಗಬಲ್ಲ ಸ್ಕೆಚ್‌ಗಳು!!.... ಇನ್ನೇನು ಬೇಕು! ತಾವಿಬ್ಬರೂ ಸುಖವಾಗಿ ಇರಬಲ್ಲೆವು. ಪ್ರತಿಯೊಬ್ಬ ಮನುಷ್ಯನಿಗೂ ತನ್ನದೇ ಆದ ಬದುಕಿನ ಶೈಲಿ ಇರುತ್ತದೆ. ನಿಧಾನವಾಗಿ ತನ್ನ ರೀತಿಯನ್ನು, ಶೈಲಿಯನ್ನು ರೂಪಿಸಿಕೊಳ್ಳಬೇಕು ಅಷ್ಟೆ!

ಸ್ವಭಾವತಃ ಅವನು ತುಂಬಾ ಭಾವುಕ. ಅತಿವೇಗವಾಗಿ ಉದ್ವಿಗ್ನತೆಗೆ ಒಳಗಾಗುತ್ತಾನೆ. ಆದರೂ ಹೇಗೋ ಈಗ ಸ್ವಲ್ಪ ಮಟ್ಟಿಗೆ ತನ್ನನ್ನು ನಿಯಂತ್ರಿಸಿಕೊಂಡ. ಸಾವಿರಾರು ಸಲ ಅವನು 'ಕೇ'ಳ ಜೊತೆ ಜೊತೆಯಾಗಿ ಬಯಲು, ಗದ್ದೆಗಳಲ್ಲೆಲ್ಲಾ ಓಡಾಡಿ, ಅದೂ ಇದೂ ನೂರೆಂಟು ವಿಷಯಗಳ (ಬೇಕಾದ್ದು, ಬೇಡಾದ್ದು) ಬಗ್ಗೆ ಮಾತನಾಡುತ್ತಿದ್ದ. ಒಮ್ಮೊಮ್ಮೆ ಅವನಿಗೆ ಹುಕಿ ಬಂದು, "ಕೇ, ನೋಡು, ಇನ್ನು ಮುಂದೆ ಇಂಥ ನಾಟಕ ಗೀಟಕ ಬೇಡ. ನನಗೆ ನೀನು ಬೇಕು. ನಿನ್ನನ್ನು ಬಿಗಿದಪ್ಪಿ ನಿನ್ನ ತುಟಿಗಳ ಮೇಲೆ ಮುತ್ತಿನ ಮುದ್ರೆಯೊತ್ತಬೇಕು. ಮತ್ತೆ ಮತ್ತೆ ನಿನ್ನನ್ನು ಚುಂಬಿಸುತ್ತಲೇ ಇರಬೇಕು. ನೀನು ನನಗೆ ಹೆಂಡತಿಯಾಗಿ, ಕಡೆ ತನಕ ನನ್ನೊಂದಿಗೆ ಇರಬೇಕು. ನಾನು ನಿನಗೆ ನೀನು ನನಗೆ! ನಮ್ಮ ಒಂಟಿತನಗಳಲ್ಲಿ ಒಬ್ಬರಿಗೊಬ್ಬರ ಅವಶ್ಯಕತೆಯಿದೆ" – ಎಂದು ಚೀರಿ ಹೇಳಬೇಕೆಂದು ಬಯಸುತ್ತಿದ್ದ.

ಆದರೆ ಅದು ಹೇಗೋ ತಡೆದುಕೊಂಡ. ಇದ್ದಕ್ಕಿದ್ದಂತೆ ಪ್ರೀತಿಯ ಬಗ್ಗೆ ಮಾತನಾಡಲಾರ. ಹಾಗೆ ಮಾಡುವುದು ಸಭ್ಯತೆಯಲ್ಲ. 'ಕೇ' ಪ್ರೀತಿಯ ಬಗ್ಗೆ ಮಾತಾಡುವುದಕ್ಕೆ ಅವಕಾಶವನ್ನೇ ಕೊಡಲಿಲ್ಲ. ಸಾಧ್ಯವಾದಷ್ಟೂ ಪ್ರೀತಿ, ಮದುವೆ ಇತ್ಯಾದಿ ವಿಷಯಗಳ ಚರ್ಚೆಯನ್ನು ನಿವಾರಿಸುತ್ತಿದ್ದಳು. ಹೀಗಿದ್ದಾಗ, ಅವನು ತಾನೇ ಹೇಗೆ ಮಾತಾಡಬಲ್ಲ! ಆದರೂ ತಾನು ಹೇಗ್‌ಗೆ ಹೋಗುವುದಕ್ಕೆ ಮೊದಲೇ ಇದರ ಬಗ್ಗೆ ಏನಾದರೂ ತೀರ್ಮಾನ ಆಗಲೇ ಬೇಕು ಎಂದುಕೊಳ್ಳುತ್ತಿದ್ದ.

ಇನ್ನು ತಡೆಯುವುದು ಅವನಿಂದ ಸಾಧ್ಯವಾಗಲಿಲ್ಲ. ಬ್ರೆಡಾ ಕಡೆ ಹೊರಟಿದ್ದರು. ವಿನ್ಸೆಂಟ್ ಬೆಳಗಿನಿಂದ 'ಅಗೆಯುವವರ' ಸ್ಕೆಚ್‌ಗಳನ್ನು ಮಾಡುತ್ತಿದ್ದ. ಮಧ್ಯಾಹ್ನ ಊಟಕ್ಕೆಂದು, ಎಲ್ಮ್ ಮರದ ನೆರಳಿನಲ್ಲಿ, ಒಂದು ಸಣ್ಣ ಹೊಳೆಯ ಪಕ್ಕದಲ್ಲಿ ಕುಳಿತಿದ್ದರು. 'ಕೇ' ಹೊಲಿಗೆ ಬುಟ್ಟಿಯನ್ನು ಪಕ್ಕದಲ್ಲಿ ಇರಿಸಿಕೊಂಡಿದ್ದಳು. ಜ್ಯಾನ್ ನಿದ್ದೆ ಮಾಡುತ್ತಿದ್ದ – ವಿನ್ಸೆಂಟ್ ತನ್ನ ಸ್ಕೆಚ್‌ಗಳನ್ನು ತೋರಿಸಲು 'ಕೇ' ಕಡೆಗೆ ಬಾಗಿದ.

ಅವಳ ಭುಜ ಇವನ ಭುಜಕ್ಕೆ ತಾಕಿತು. ಬೆಚ್ಚನೆಯ ಸ್ಪರ್ಷದ ಅನುಭವ. ಅವನಲ್ಲಿ ಅದುಮಿಟ್ಟುಕೊಂಡಿದ್ದ ಭಾವನೆಗಳು ಸ್ಫೋಟಗೊಂಡು ಹೊರಚಿಮ್ಮುವಂತೆ ಮಾಡಿತು. ಸ್ಕೆಚ್‌ಗಳು ಅವನ ಕೈಯಿಂದ ಜಾರಿ ಬಿದ್ದವು. ಅತಿ ಉದ್ವಿಗ್ನಗೊಂಡು ಅವನು 'ಕೇ'ಳ ಕೈಯನ್ನು ಹಿಡಿದುಕೊಂಡ. ಭಾವೋದ್ವೇಗಗೊಂಡು, ಹೇಳಿದ–

"ಕೇ ಇನ್ನೊಂದು ಕ್ಷಣವೂ ನನ್ನಿಂದ ತಡೆದುಕೊಳ್ಳಲು ಸಾಧ್ಯವಿಲ್ಲ. ನಿನಗೆ ಗೊತ್ತಿದೆ, ನಾನು ನಿನ್ನನ್ನು ಪ್ರೀತಿಸುತ್ತಿದ್ದೇನೆ. ನನ್ನನ್ನು ನಾನು ಪ್ರೀತಿಸುವುದಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದೇನೆ. ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿ ನಿನ್ನನ್ನು ನೋಡಿದ ಕ್ಷಣದಿಂದಲೂ ನಿನ್ನನ್ನು ಪ್ರೀತಿಸುತ್ತಿದ್ದೇನೆ. ಎಂದೆಂದೂ ನೀನು ನನ್ನ ಜೊತೆಯಲ್ಲಿರಬೇಕು. ನಿನ್ನಿಂದ ನಾನು ಬಯಸುತ್ತಿರುವುದು, ಒಂದಿಷ್ಟು, ಇಷ್ಟು ಪ್ರೀತಿಯನ್ನು! ಹೇಗ್‌ಗೆ ಹೋಗಿ, ನಾವಿಬ್ಬರೂ ಸಂಸಾರ ಮಾಡೋಣ; ಸಂತೋಷವಾಗಿ ಕಾಲ ಕಳೆಯೋಣ.

'ಕೇ' ಹೇಳು, ನೀನು ನನ್ನನ್ನು ಪ್ರೀತಿಸುತ್ತಿರುವೆಯಲ್ಲ!...... ಹೇಳು...... ಮದುವೆಯಾಗುತ್ತೇನೆ ಎಂದು ಹೇಳು, ನನ್ನ ಪ್ರೀತಿಯ 'ಕೇ'!

'ಕೇ' ಬಿಡಿಸಿಕೊಳ್ಳಲು ಪ್ರಯತ್ನಿಸಲಿಲ್ಲ. ದಿಗ್ಭ್ರಮೆಗೊಂಡಿದ್ದವಳ ಬಾಯಿಂದ ಮಾತೇ ಹೊರಡಲಿಲ್ಲ. ಅವನು ಹೇಳಿದ್ದು ಸರಿಯಾಗಿ ಕೇಳಿಸದಿದ್ದರೂ, ಅದರ ಅರ್ಥವನ್ನು ಗ್ರಹಿಸಿದ್ದಳು. ಒಳಗಿಂದೊಳಗೇ ಭೀತಿಯಿಂದ ಕಂಗೆಟ್ಟಳು. ಅವನತ್ತ ಕ್ರೂರವಾಗಿ ನೋಡಿದಳು. ಬಾಯಿಂದ ಹೊರಡಲಿದ್ದ ಚೀತ್ಕಾರವನ್ನು ತಡೆದುಕೊಂಡಳು.

"ಇಲ್ಲ; ಖಂಡಿತ ಇಲ್ಲ; ಎಂದೆಂದಿಗೂ ಸಾಧ್ಯವಿಲ್ಲ" – ಗಟ್ಟಿಯಾಗಿ ಹೇಳಿದಳು.

ಅವನ ಹಿಡಿತದಿಂದ ಕೊಸರಾಡಿ ಬಿಡಿಸಿಕೊಂಡಳು. ಮಲಗಿದ್ದ ಮಗುವನ್ನೆತ್ತಿಕೊಂಡು, ಅಲ್ಲಿಂದ ಓಡತೊಡಗಿದಳು. ವಿನ್ಸೆಂಟ್ ಅವಳನ್ನು ಹಿಂಬಾಲಿಸಿದ. ಅದನ್ನು ಗಮನಿಸಿದ 'ಕೇ' ಭೀತಿಯಿಂದ ಮತ್ತಷ್ಟು ವೇಗವಾಗಿ ಓಡಿದಳು. ಅವಳಿಗೆ ಏನಾಯಿತೆಂದು, ಅವನಿಗೆ ಅರ್ಥವಾಗಿರಲಿಲ್ಲ.

"'ಕೇ'..... 'ಕೇ'....... ಓಡಬೇಡ" – ಕೂಗಿ ಹೇಳಿದ.

ಅವನ ಧ್ವನಿ ಕೇಳಿ ಇನ್ನಷ್ಟು ವೇಗ ಹೆಚ್ಚಿಸಿದಳು. ವಿನ್ಸೆಂಟ್, ಅಷ್ಟೇ ವೇಗದಲ್ಲಿ, ಕೈಗಳನ್ನಾಡಿಸುತ್ತಾ ಅವಳ ಹಿಂದೆ ಓಡಿದ. 'ಕೇ' ಎಡವಿ ಬಿದ್ದಳು. ಜ್ಯಾನ್ ಮುಲುಗಿದ. ವಿನ್ಸೆಂಟ್ ಅವಳತ್ತ ಒಮ್ಮೆಲೇ ನೆಗೆದು, ಮೊಣಕಾಲೂರಿ, ಕೊಚ್ಚೆಯಲ್ಲಿ ಕುಳಿತುಕೊಳ್ಳುವುದಕ್ಕೆ ಮೊದಲೇ ಅವಳನ್ನು ಹಿಡಿದು ತಡೆದ.

"'ಕೇ' ಯಾಕೆ ನನ್ನಿಂದ ದೂರ ಓಡ್ತಾ ಇದ್ದೀ? ನಾನು ನಿನ್ನನ್ನು ಪ್ರೀತಿಸುತ್ತಿದ್ದೀನಿ. ನೀನು ನನಗೆ ಬೇಕು. ನೀನೂ ನನ್ನನ್ನು ಪ್ರೀತಿಸುತ್ತಿರುವೆ. ನನಗೆ ಗೊತ್ತು. ಹೆದರಿಕೆ ಯಾಕೆ? 'ನೀನು ನನಗೆ ಬೇಕು' ಎಂದಷ್ಟೇ ನಾನು ಹೇಳಿದ್ದು! ನಡೆದದ್ದನ್ನೆಲ್ಲಾ ಮರೆತು, ಹೊಸದಾಗಿ ಜೀವನ ಆರಂಭಿಸೋಣ!

ಅವಳ ನೋಟದಲ್ಲಿದ್ದ ಭಯ ಮರೆಯಾಗಿ, ದ್ವೇಷ ಕಾಣಿಸಿಕೊಂಡಿತು. ಹೆಣಗಾಡಿ ಅವನ ಕೈಯಿಂದ ಬಿಡಿಸಿಕೊಂಡಳು. ಜ್ಯಾನ್ ನಿದ್ದೆಯಿಂದ ಎದ್ದುಬಿಟ್ಟಿದ್ದ. ವಿನ್ಸೆಂಟ್‌ನ

ಮುಖದಲ್ಲಿ ಕಾಣುತ್ತಿದ್ದ ಉಗ್ರತೆ. ಅವನು ಆಡುತ್ತಿದ್ದ ಮಾತುಗಳ ರಭಸ, ಭಯಾನಕವಾಗಿ ಅಲುಗುತ್ತಿದ್ದ ತುಟಿಗಳು, ಮಗುವನ್ನು ಮತ್ತಷ್ಟು ಭೀತಗೊಳಿಸಿತು. ತನ್ನ ಎರಡೂ ಕೈಗಳನ್ನು ತಾಯಿಯ ಕುತ್ತಿಗೆಯನ್ನು ಬಳಸಿ ಬಿಗಿಯಾಗಿ ಹಿಡಿದುಕೊಂಡ.

"'ಕೇ' ನನ್ನ ಪ್ರಿಯೆ, ಸ್ವಲ್ಪವಾದರೂ ಪ್ರೀತಿಸುತ್ತೇನೆಂದು ಹೇಳಬಾರದೇ?"

"ಇಲ್ಲ..... ಇಲ್ಲ..... ಹೇಳುವುದಿಲ್ಲ."

ಮತ್ತೊಮ್ಮೆ ಓಡಲು ಆರಂಭಿಸಿದಳು. ವಿನ್ಸೆಂಟ್ ಮೌನವಾಗಿ, ದಿಗ್ಭ್ರಾಂತನಾಗಿ ಅಲ್ಲಿಯೇ ಮರಳಿನ ಮೇಲೆ ಕುಳಿತುಕೊಂಡ. 'ಕೇ' ರಸ್ತೆಯ ಕಡೆ ಓಡಿ, ಅಲ್ಲಿಂದ ಕಾಣೆಯಾದಳು. ವಿನ್ಸೆಂಟ್ ಎದ್ದು, ಅವಳ ಹೆಸರು ಹಿಡಿದು ಕೂಗುತ್ತಾ, ಅವಳು ಹೋದ ದಿಕ್ಕಿನಲ್ಲಿ ಓಡಿದ. ರಸ್ತೆಗೆ ಬಂದಾಗ, ದೂರದಲ್ಲಿ, ಅವರಿಬ್ಬರೂ ಕಾಣಿಸಿದರು. ಮಗುವನ್ನು ಎದೆಗೆ ತಬ್ಬಿಹಿಡಿದುಕೊಂಡಿದ್ದಳು. ಓಡುವುದನ್ನು ನಿಲ್ಲಿಸಿ, ಸುಮ್ಮನೆ ಅವರನ್ನು ಗಮನಿಸುತ್ತಾ ನಿಂತ. ಸ್ವಲ್ಪಹೊತ್ತಿಗೆ ಅವರು ಮರೆಯಾದರು. ನೆಲಕ್ಕೆ ಬಿದ್ದಿದ್ದ ಸ್ಕೆಚ್‌ಗಳನ್ನು ತೆಗೆದಿರಿಸಿಕೊಂಡ. ಅವುಗಳು ಸ್ವಲ್ಪ ಕೊಳೆಯಾಗಿದ್ದವು. ಊಟದ ಡಬ್ಬಿಯನ್ನು ಬುಟ್ಟಿಯಲ್ಲಿ ಇರಿಸಿ, ಈಸಲ್ ಅನ್ನು ಬೆನ್ನಿಗೆ ಬಿಗಿದುಕೊಂಡ. ಮನೆಯ ಕಡೆ ಹೆಜ್ಜೆ ಹಾಕಿದ.

ಪಾದ್ರಿಯ ಮನೆಯಲ್ಲಿ ಗಂಭೀರವಾದ ವಾತಾವರಣ ನಿರ್ಮಾಣವಾಗಿತ್ತು. ಪ್ರವೇಶಿಸುತ್ತಿದ್ದಂತೆ ಅವನಿಗೆ ಪರಿಸ್ಥಿತಿ ಅರ್ಥವಾಯಿತು. 'ಕೇ' ಮಗುವಿನೊಂದಿಗೆ, ಕೊಠಡಿ ಸೇರಿ ಬಾಗಿಲು ಹಾಕಿಕೊಂಡಿದ್ದಳು. ತಂದೆತಾಯಿ ಇಬ್ಬರೇ ಹೊರಗೆ ಹಜಾರದಲ್ಲಿ ಕುಳಿತಿದ್ದರು. ಮಾತು ಅರ್ಧಕ್ಕೆ ನಿಂತುಹೋದದ್ದು ಅವನ ಗಮನಕ್ಕೆ ಬಂತು. ಒಳಗೆ ಬಂದು ಬಾಗಿಲನ್ನು ಮುಚ್ಚಿದ. ಅವನಿಗೆ ಗೊತ್ತು, ತಂದೆ ಸಿಟ್ಟಿನಲ್ಲಿ ಇದ್ದಾರೆಂದು!

"ವಿನ್ಸೆಂಟ್ ಏನು ಮಾಡಿದೆ?" – ತಾಯಿ ಬೇಸರದಿಂದ ಕೇಳಿದಳು.

"ಏನು ಮಾಡಿದೆ?! ಏನು ಮಾಡಿದೆ ಹೇಳಿ?"

"ನಿನ್ನಕಸಿನ್ ಜೊತೆ ಆ ರೀತಿ ನಡ್ಕೊಳ್ಳಬಾರದಿತ್ತು?"

ಈ ಪ್ರಶ್ನೆಗೆ ವಿನ್ಸೆಂಟ್‌ನಲ್ಲಿ ಉತ್ತರವಿರಲಿಲ್ಲ. ಬೆನ್ನಿಂದ ಈಸಲ್ ಇಳಿಸಿ, ಮೂಲೆಯಲ್ಲಿರಿಸಿದ. ತಂದೆ ಇನ್ನೂ ಮಾತಾಡುವ ಸ್ಥಿತಿಯಲ್ಲಿರಲಿಲ್ಲ.

"ನಿಜವಾಗಿಯೂ ಏನು ನಡೀತು ಅನ್ನೋದನ್ನ 'ಕೇ' ನಿಮಗೆ ಸರಿಯಾಗಿ ವಿವರಿಸಿ ಹೇಳಿದಳೇನು?" – ಕೇಳಿದ.

ತಂದೆ, ಚುಚ್ಚುತ್ತಿದ್ದ ಷರ್ಟಿನ ಕಾಲರ್ ಅನ್ನು ಸಡಿಲಗೊಳಿಸುತ್ತಾ ಹೇಳಿದ.

"ನೀನು ಹುಚ್ಚನಂತೆ ಅವಳ ಮೇಲೆ ಬಿದ್ದು ತೋಳುಗಳಲ್ಲಿ ಬಿಗಿದು ಹಿಡಿದುಕೊಂಡೆಯಂತೆ"

"ನಾನು ಅವಳನ್ನು ಪ್ರೀತಿಸುತ್ತಿದ್ದೇನೆಂದು ಹೇಳಿದೆ. ಅದರಲ್ಲಿ ತಪ್ಪೇನಿದೆ?" ಮೆಲ್ಲಗೆ ನುಡಿದ.

"ಅಷ್ಟು ಮಾತ್ರವೇ ಹೇಳಿದ್ದೇನು?"

"ಇಲ್ಲ, ಅದರ ಜೊತೆಗೆ, ನನ್ನನ್ನು ಮದುವೆಯಾಗು ಅಂತ ಕೇಳಿಕೊಂಡೆ."

"ಮದುವೆ! ನಿನಗೆ ಹೆಂಡತಿ!!"

"ಯಾಕೆ, ಇದರಲ್ಲಿ ಆಶ್ಚರ್ಯಪಡುವಂಥಾದ್ದೇನಿದೆ?"

"ಓಹ್ ವಿನ್ಸೆಂಟ್!.... ವಿನ್ಸೆಂಟ್.... ಇಂಥಾ ಆಲೋಚನೆ ಬಂದದ್ದಾದರೂ ಹೇಗೆ?" ತಾಯಿ ಕೇಳಿದಳು.

"ನೀನೂ ಬಹುಶಃ ಇದನ್ನೇ ಯೋಚಿಸಿರಬೇಕಲ್ಲ?"

"ನೀನು ಅವಳನ್ನು ಪ್ರೀತಿಸ್ತೀಯ ಅನ್ನುವ ಕಲ್ಪನೆಯೂ ನನಗೆ ಹೇಗೆ ತಾನೇ ಸಾಧ್ಯವಾದೀತು?"

"ವಿನ್ಸೆಂಟ್, ಕೇ ನಿನ್ನ ಫಸ್ಟ್ ಕಸಿನ್ ಅನ್ನೋ ಕಲ್ಪನೆಯಾದರೂ ಇದೆಯೇನು?" ತಂದೆ ಹೇಳಿದ.

"ಇರಬಹುದು. ಅದರಿಂದೇನಾಯಿತು?"

"ನಿನ್ನ ಫಸ್ಟ್ ಕಸಿನ್ ಆದವಳನ್ನು ಮದುವೆಯಾಗುವುದು ಸಾಧ್ಯವಿಲ್ಲ. ಹಾಗೇನಾದರೂ ಆದರೆ ಅದು..... ಅದು......."

"ಅದು...... ಅದು....... ಏನಾಗುತ್ತೆ ಹೇಳಿ."

"ಅದು 'ಇನ್‌ಸೆಸ್ಟ್' (ನಿಷಿದ್ಧ ಸಂಭೋಗ) ಆಗುತ್ತೆ. ಧರ್ಮವಿರುದ್ಧ ಲೈಂಗಿಕ ಸಂಬಂಧವಾಗುತ್ತದೆ."

"ಪ್ರಯತ್ನದಿಂದ ತನ್ನ ಸಿಟ್ಟನ್ನು ತಡೆದುಕೊಂಡ. ಅಶ್ಲೀಲವಾದ ಇಂಥ ಮಾತನ್ನಾಡಲು ಎಷ್ಟು ಧೈರ್ಯ" - ಎಂದುಕೊಂಡ.

"ಅದೆಲ್ಲ ಕೆಲಸಕ್ಕೆ ಬಾರದ ವಿಚಾರಗಳು' ಅದರಲ್ಲಿಯೂ ತಮ್ಮಂಥವರು ಆಡುವುದೆಂದರೆ.......!"

"ನಾನು ಹೇಳ್ತಾ ಇದ್ದೀನಿ. ಇದು ಧರ್ಮ ವಿರುದ್ಧವಾದ ಕೆಲಸ. ವಾನ್‌ಗೋ ವಂಶದಲ್ಲಿ ಇಂಥ ಪಾಪದ ಕೆಲಸಕ್ಕೆ ನಾನು ಅವಕಾಶ ಕೊಡಲಾರೆ" ಥಿಯೋ ಡೋರಸ್ ಅಬ್ಬರಿಸಿ ಹೇಳಿದ.

"ಬೈಬಲ್‌ನಲ್ಲಿ ಹೇಳಿರುವುದನ್ನು ಹೇಳ್ತಿಲ್ಲ ತಾನೇ?..... ಕಸಿನ್ಸ್ ಮದುವೆಯಾಗಲು, ಎಂದಿನಿಂದಲೋ ಅವಕಾಶ ಕೊಡಲಾಗಿದೆ."

"ಮಗು ವಿನ್ಸೆಂಟ್, ನೀನು ಅವಳನ್ನು ಪ್ರೀತಿಸುತ್ತಿರುವುದಾದರೆ, ಸ್ವಲ್ಪ ತಡೆದುಕೊಳ್ಳಬೇಕಿತ್ತು. ಅವಳ ಗಂಡ ಸತ್ತು ಒಂದು ವರ್ಷವೂ ಆಗಿಲ್ಲ. ಅವನನ್ನು ಇನ್ನೂ ಪ್ರೀತಿಸುತ್ತಿದ್ದಾಳೆ: ಅವನನ್ನು ಮರೆಯಲು ಸಾಧ್ಯವಾಗಿಲ್ಲ. ಅಲ್ಲದೆ ಅವಳನ್ನು ಮದುವೆಯಾದರೆ, ಸಂಸಾರ ನಿರ್ವಹಿಸೋದಕ್ಕೆ, ನಿನಗೆ ಸಂಪಾದನೆಯೂ ಇಲ್ಲ."

"ನನಗೆ ಅನಿಸುತ್ತೆ, ನೀನು ಮಾಡಿದ್ದು ಅವಸರದ್ದು, ಅಚಾತುರ್ಯದ್ದು!" ತಂದೆ ಹೇಳಿದ.

ವಿನ್ಸೆಂಟ್ ಬೇಸರದಿಂದ ಸುಮ್ಮನಾದ. ಪೈಪ್‌ಗಾಗಿ ತಡಕಾಡಿದ.

"ಅಪ್ಪ, ಇನ್ನು ಮುಂದೆ ನೀವು ಇಂಥಾ ಅಸಭ್ಯವಾದ ಅಶ್ಲೀಲವಾದ ಮಾತಾಡಬೇಡಿ ಅಂತ ಕೇಳಿಕೊಳ್ತೀನಿ. 'ಕೇ' ಬಗ್ಗೆ ನನ್ನ ಪ್ರೀತಿ ಪರಿಶುದ್ಧವಾದದ್ದು. ನನ್ನ ಜೀವನದ ಅತ್ಯಂತ ಸುಂದರವಾದ, ಚೆಲುವಾದ ವಸ್ತುವೆಂದರೆ ಕೇ!..... ಆದ್ದರಿಂದ ಅಚಾತುರ್ಯ, ಅವಸರ ಇತ್ಯಾದಿ ಪದಗಳನ್ನು ಬಳಸಬೇಡಿ."

ಈಸಲ್ ಅನ್ನು ಮೂಲೆಯಿಂದ ಎಳೆದುಕೊಂಡು ತನ್ನ ಕೋಣೆಯ ಕಡೆ ಹೆಜ್ಜೆ ಹಾಕಿದ. ಹಾಸಿಗೆಯಲ್ಲಿ ಕುಳಿತು ತನ್ನನ್ನು ತಾನೇ ಪ್ರಶ್ನಿಸಿಕೊಂಡ. "ಏನಾಯಿತು? ಏನು ಮಾಡಿದೆ?... 'ಕೇ'ಳನ್ನು ಪ್ರೀತಿಸುತ್ತೇನೆ ಎಂದೆ. ಅವಳು ಓಡಿಹೋದಳು ಯಾಕೆ? ಅವಳಿಗೆ ನಾನು ಬೇಡವಾದೆನೆ?"

"ಇಲ್ಲ, ಎಂದಿಗೂ ಎಂದಿಗೂ ಬೇಡ."

ನಡೆದದ್ದನ್ನೆಲ್ಲ ಮತ್ತೆ ಮತ್ತೆ ತನ್ನ ಕಣ್ಣಮುಂದೆ ತಂದುಕೊಳ್ಳುತ್ತಲೇ ರಾತ್ರಿಯನ್ನು ಕಳೆದ. ಅವಳ ನಿರಾಕರಣೆಯ ಒಂದೆರಡು ಪದಗಳು ಪದೇ ಪದೇ ಅವನ ಕಿವಿಯಲ್ಲಿ ಅನುರಣಿಸುತ್ತಿದ್ದವು.

ಮಾರನೆಯ ದಿನ ಬೆಳಿಗ್ಗೆ, ಕೆಳಗೆ ಹೋಗಲು ತಡವಾಗಿತ್ತು. ಪರಿಸ್ಥಿತಿ ಸುಧಾರಿಸಿತ್ತು. ಹಿಂದಿನ ದಿನದ ಗಂಭೀರತೆ ಇರಲಿಲ್ಲ. ತಾಯಿ ಅಡಿಗೆ ಮನೆಯಲ್ಲಿದ್ದಳು. ಅವನು ಒಳಗೆ ಬಂದಾಗ, ಅವಳು ಅವನನ್ನು ಮುದ್ದಿಸಿದಳು. ಪ್ರೀತಿಯಿಂದ ಕೆನ್ನೆಯ ಮೇಲೆ ತಟ್ಟಿದಳು.

"ನಿದ್ದೆ ಮಾಡಿದೆಯಾ ಮಗು?" – ಆಕೆ ಕೇಳಿದಳು.

"ಕೇ ಎಲ್ಲಿದ್ದಾಳೆ?"

"ಅಪ್ಪ, ಬ್ರೆಡಾಗೆ ಕರೆದುಕೊಂಡು ಹೋದರು."

"ಯಾಕೆ?"

"ತನ್ನ ಮನೆಗೆ ಹೊರಟಿದ್ದಾಳೆ. ಸ್ಟೇಷನ್‌ಗೆ ಬಿಟ್ಟು ಬರಲು ಹೋಗಿದ್ದಾರೆ."

"ಆ್ಯಮ್‌ಸ್ಟರ್ ಡ್ಯಾಮ್‌ಗೆ?"

"ಹೌದು."

"ಓ ಹಾಗೋ!"

"ಅಲ್ಲಿಗೆ ಹೋಗೋದೇ ಒಳ್ಳೇದು ಅಂತ ಭಾವಿಸಿದಳು."

"ನನಗೇನಾದರೂ ಬರೆದಿಟ್ಟಿದ್ದಾಳೇನು?"

"ಏನೂ ಇಲ್ಲ ಮಗು. ಕೂತ್ಕೋ. ತಿಂಡಿ ತಿನ್ನು."

"ಒಂದು ಮಾತೂ ಹೇಳಲಿಲ್ಲವೇ? ನೆನ್ನೆ ನಡೆದದ್ದರ ಬಗ್ಗೆ?.... ನನ್ನ ಮೇಲೆ ಸಿಟ್ಟಾಗಿದ್ದಳೇನು?"

"ಹಾಗೇನಿಲ್ಲ. ತನ್ನ ತಂದೆತಾಯಿ ಜೊತೆಗೆ ಇರ್ತೀನಿ ಅಂತ ಹೇಳಿದಳು."

ಅನ್ನಾ ಕಾರ್ನೇಲಿಯಾ, 'ಕೇ' ಹೇಳಿದ್ದ ಮಾತುಗಳನ್ನು ಮತ್ತೆ ಮತ್ತೆ ಹೇಳುವುದು ಸರಿಯಲ್ಲ ಎಂದುಕೊಂಡು ಮೊಟ್ಟೆಯನ್ನು ಒಲೆಯ ಮೇಲೆ ಇರಿಸಿದಳು.

"ಟ್ರೈನ್ ಎಷ್ಟು ಹೊತ್ತಿಗೆ ಹೊರಡುತ್ತೆ?"

"ಹತ್ತು ಇಪ್ಪತ್ತಕ್ಕೆ."

ವಿನ್ಸೆಂಟ್ ಅಡಿಗೆ ಮನೆಯಲ್ಲಿದ್ದ ನೀಲಿ ಗಡಿಯಾರದ ಕಡೆ ನೋಡಿದ.

"ಹೊತ್ತಾಗಿ ಹೋಯಿತು."

"'ಹೌದು."

"ಇನ್ನು ನಾನು ಏನು ಮಾಡಲೂ ಸಾಧ್ಯವಿಲ್ಲ."

"ಸುಮ್ಮನೆ ಇಲ್ಲಿ ಬಂದು ಕೂತ್ಕೊ. ತಾಜಾ ಆಗಿರುವ ಮಾಂಸ ಬೇಯಿಸಿದ್ದೇನೆ."

ಟೇಬಲ್ ಮೇಲಿದ್ದ ವಸ್ತುಗಳನ್ನು ಸರಿಸಿ, ಅವನಿಗಾಗಿ ಪ್ಲೇಟನ್ನು ಇರಿಸಿದಳು. ಬಡಿಸುತ್ತಾ, ಪ್ರೀತಿಯಿಂದ ಅವನನ್ನು ತಿನ್ನುವಂತೆ ಒತ್ತಾಯಿಸುತ್ತಿದ್ದಳು. ಅವಳಿಗೆ ಗೊತ್ತು, ಅವನು ಚೆನ್ನಾಗಿ ತಿಂದು ಹೊಟ್ಟೆ ತುಂಬಿಸಿಕೊಂಡರೆ ಎಲ್ಲ ಸರಿಹೋಗುತ್ತೆ-ಅಂತ.

ತಾನೂ ತಿಂದಷ್ಟೂ ತಾಯಿಗೆ ಸಂತೋಷವಾಗುತ್ತೆ ಅಂತ ತಿಳಿದಿದ್ದ ವಿನ್ಸೆಂಟ್, ಪ್ಲೇಟಿಗೆ ಬಡಿಸಿದ್ದೆಲ್ಲವನ್ನೂ ತಿಂದು ಮುಗಿಸಿದ. ಆದರೆ 'ಕೇ'ಳ –"ಇಲ್ಲ, ಎಂದಿಗೂ ಇಲ್ಲ' – ಎನ್ನುವ ಮಾತುಗಳ ಕಹಿ, ಅವನ ರುಚಿಯನ್ನೇ ಕೆಡಿಸಿತ್ತು.

–೭–

'ಕೇ'ಳನ್ನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ ಸ್ಕೆಚ್‌ಗಳನ್ನೇ ಪ್ರೀತಿಸುತ್ತೇನೆಂಬ ಅರಿವಿತ್ತು. ಎರಡರಲ್ಲಿ ಯಾವುದಾದರೂ ಒಂದನ್ನು ಆರಿಸಿಕೊಳ್ಳುವ ಪ್ರಸಂಗ ಬಂದರೆ, ಸ್ಕೆಚ್‌ಗಳನ್ನೇ ಆರಿಸುವುದರಲ್ಲಿ, ಅವನಿಗೆ ಅನುಮಾನವೇ ಇರಲಿಲ್ಲ. ಆದರೂ ಈಗ ಯಾಕೋ, ಸ್ಕೆಚ್‌ಮಾಡುವ ಉತ್ಸಾಹ ತಣ್ಣಗಾಗಿತ್ತು. ಸ್ಕೆಚ್‌ಮಾಡುವುದರಲ್ಲಿ ಮನಸ್ಸಿರಲಿಲ್ಲ. ಬ್ರಬಾಂಟ್‌ನಲ್ಲಿ ಮಾಡಿದ್ದ ಸ್ಕೆಚ್‌ಗಳನ್ನು ಗೋಡೆಯ ಮೇಲೆ ಗಮನಿಸಿದ. 'ಕೇ'ಳ ಉಪಸ್ಥಿತಿಯಲ್ಲಿ ಅವು ತುಂಬ ಚೆನ್ನಾಗಿ ಮೂಡಿದ್ದವು. 'ಕೇ'ಳ ಬಗ್ಗೆ ಪ್ರೀತಿ ಜಾಗೃತವಾಗುತ್ತಿದ್ದಂತೆ, ತನ್ನ ಸ್ಕೆಚ್‌ಗಳಲ್ಲಿ ಸಾಕಷ್ಟು ಪ್ರಗತಿ ಕಾಣಿಸಿತ್ತು. ಆದರೂ ಪರಿಪೂರ್ಣವಾದ ನಯಗಾರಿಕೆ, ಸೂಕ್ಷ್ಮತೆಗಳಿರಲಿಲ್ಲ. ಅವುಗಳನ್ನೂ ಇನ್ನೂ ಕರಗತ ಮಾಡಿಕೊಂಡಿರಲಿಲ್ಲ. 'ಕೇ'ಳ ಪ್ರೀತಿ ಮುಂದುವರೆದರೆ, ಅದೆಲ್ಲವನ್ನೂ ಸುಲಭವಾಗಿ ಸಾಧಿಸಬಹುದೆಂದು ಭರವಸೆ ಇರಿಸಿಕೊಂಡಿದ್ದ ಅವನು ಪ್ರಾಮಾಣಿಕವಾಗಿಯೂ ಗಾಢವಾಗಿಯೂ ಪ್ರೀತಿಸುತ್ತಿದ್ದ. ಅವಳೆಷ್ಟು ನಿರಾಕರಿಸಿದರೂ, ಅವನ ಪ್ರೀತಿ ಕಡಿಮೆಯಾಗಲು ಸಾಧ್ಯವಿರಲಿಲ್ಲ. ಅವಳ ತಿರಸ್ಕಾರ, ನಿರಾಕರಣೆಯ ಮಂಜು ತನ್ನ ಹೃದಯದ ಬಿಸುಪಿಗೆ ಕರಗಿ ಹೋಗುವುದೆಂದು ನಂಬಿದ್ದ.

ಇಷ್ಟೆಲ್ಲಾ ಇದ್ದರೂ, 'ಒಂದು ವೇಳೆ ಅವಳ ನಿರ್ಧಾರವನ್ನು ಬದಲಾಯಿಸಲು ಸಾಧ್ಯವಿಲ್ಲವಾದರೆ? ಎಂಬ ಅನುಮಾನದ ಹುಳು ಅವನ ತಲೆಹೊಕ್ಕಿದ್ದರಿಂದ, ಅವನಿಗೆ ಕೆಲಸ ಮಾಡಲು ಆಗುತ್ತಿರಲಿಲ್ಲ. ಅವಳು ಮತ್ತೊಮ್ಮೆ ಪ್ರೀತಿಸುವ ವಿಚಾರವನ್ನು ಕಲ್ಪಿಸಿಕೊಳ್ಳಲೂ ನಿರಾಕರಿಸಿದ್ದಳು. ಅವನಿಗೆ, ಮೊದಲು ಅವಳನ್ನು ಭೂತಕಾಲದ

ನೆನಪುಗಳಲ್ಲಿ ಬದುಕುವ ಖಾಯಿಲೆಯಿಂದ ಪಾರುಮಾಡದ ಹೊಗತು, ವರ್ತಮಾನಕ್ಕೆ ಸ್ಪಂದಿಸುವುದು ಸಾಧ್ಯವಿಲ್ಲ ಎನಿಸಿತು. ತನ್ನಲ್ಲಿದ್ದ ತಲೆ, ಅವಳ ಸಹಯೋಗ, ನೆಮ್ಮದಿಯ ಬದುಕಿಗೆ ದಾರಿಯಾಗಬೇಕು ಎಂದೆಲ್ಲ ಬಯಸಿದ್ದ.

ತನ್ನ ಕೋಣೆಯಲ್ಲಿ ಕುಳಿತು, 'ಕೇ' ಗೆಂದು ಅತ್ಯಂತ ಭಾವನಾತ್ಮಕವಾದ ಮತ್ತು ಕ್ಷಮಾಯಾಚನೆಯ ಪತ್ರಗಳನ್ನು ಬರೆದ. ಎಷ್ಟೋ ವಾರಗಳ ನಂತರ, ಅವಳು ತಾನು ಬರೆದ ಪತ್ರಗಳನ್ನು ನೋಡಲೂ ಇಲ್ಲ ಎಂಬ ವಿಷಯ ತಿಳಿಯಿತು. ದಿನಕ್ಕೆ ಎರಡು ಮೂರು ಪತ್ರಗಳನ್ನು ಬರೆಯುತ್ತಿದ್ದ. ಜೊತೆಗೆ ಥಿಯೋಗೂ ಪತ್ರ ಬರೆದು ಮನೆಯಲ್ಲಿ ತಂದೆತಾಯಿ ಬೈದದ್ದನ್ನೂ, ರೆವರೆಂಡ್ ಸ್ಟ್ರಿಕರ್ ಅಸಮಾಧಾನಗೊಂಡದ್ದನ್ನೂ ತಿಳಿಸಿದ. ತನ್ನ ನೋವು, ಸಂಕಟಗಳನ್ನು ತೋಡಿಕೊಂಡ. ಅವನಿಗೆ ಎಂದೂ ತನ್ನ ಭಾವನೆಗಳನ್ನು ಮುಚ್ಚಿಡಲು ಸಾಧ್ಯವಾಗುತ್ತಿರಲಿಲ್ಲ. ತಾಯಿ ಬಳಿಗೆ ಬಂದು, ಅವನಿಗೆ ಸಮಾಧಾನ ಮಾಡಿದಳು.

"ವಿನ್ಸೆಂಟ್, ವ್ಯರ್ಥವಾಗಿ ನಿನ್ನ ತಲೆ ಬಂಡೆಗೆ ಚಚ್ಚಿಕೊಳ್ಳುತ್ತಿದ್ದೀ. ಸ್ಟ್ರಿಕರ್ ಒಪ್ಪಿಗೆ ಕೊಡುವವರೆಗೂ, ಅವಳು ಒಪ್ಪುವುದು ಸಾಧ್ಯವೇ ಇಲ್ಲ."

"ಅಂಕಲ್ ಮಾತು ನನಗೆ ಮುಖ್ಯ ಅಲ್ಲ."

"ಆದರೆ ಅವಳು 'ಬೇಡ' ಅಂತ ಅಂಕಲ್‌ಗೆ ಹೇಳಿದ್ದಾಳೆ."

"ಅಂದ್ರೆ? ನನ್ನನ್ನು ಮದುವೆಯಾಗುವುದು ಬೇಡ, ಎಂದೇ?"

"ಹೌದು. ಅವಳು ಒಂದು ಸಲ ಹೇಳಿದರೆ, ತನ್ನ ನಿರ್ಧಾರ ಬದಲಿಸುವುದೇ ಇಲ್ಲ."

"ಹಾಗಾದರೆ, ನಾನೂ ನೋಡಿಯೇ ಬಿಡ್ತೇನೆ."

"ಇಲ್ಲ ವಿನ್ಸೆಂಟ್, ಯಾವ ಆಸೇನೂ ಇಟ್ಕೋಬೇಡ. 'ಕೇ' ಅಕಸ್ಮಾತ್ ಒಪ್ಪಿಗೆ ಕೊಟ್ಟರೂ, ನೀನು ನಿನ್ನ ಕಾಲಮೇಲೆ ನಿಂತು ಸಂಪಾದನೆ ಮಾಡೋ ಸಾಮರ್ಥ್ಯ ಪಡೆಯುವ ವರೆಗೂ ಈ ಮದುವೆಗೆ ಒಪ್ಪುವುದೇ ಇಲ್ಲ. ನಿನಗೇ ಗೊತ್ತು, ನಿನ್ನ ಸಂಪಾದನೆ ಹೇಗಿದೇಂತ?"

"ಆಯ್ತು ಬಿಡಮ್ಮ, ಪ್ರೀತಿ ಮಾಡುವವನು ಬದುಕುತ್ತಾನೆ, ಬದುಕುವವನು ದುಡೀತಾನೆ, ದುಡಿದವನು ಹೊಟ್ಟೆ ತುಂಬಿಸಿಕೊಂಡೇ ತುಂಬಿಸಿಕೊಳ್ತಾನೆ."

"ಚೆನ್ನಾಗಿಯೇ ಹೇಳಿದೆ. ಆದರೆ 'ಕೇ' ಸುಖವಾಗಿ, ಸಾಕಷ್ಟು ಲಕ್ಸುರಿಯಾಗಿ ಬದುಕಿದವಳು. ತುಂಬ ಒಳ್ಳೊಳ್ಳೇದನ್ನೇ ಅನುಭವಿಸಿದವಳು."

"ಒಳ್ಳೊಳ್ಳೆ ವಸ್ತುಗಳು ಅವಳಿಗೆ ಈಗ ಸಂತೋಷಕೊಡೋದಿಲ್ಲ."

"ನೀವಿಬ್ಬರೂ ಒಂದು ವೇಳೆ ಸೆಂಟಿಮೆಂಟಲ್ ಆಗಿ ಒಬ್ಬರನ್ನೊಬ್ಬರು ಪ್ರೀತಿಸಿ ಮದುವೆಯಾಗಿದ್ದರೆ, ನಿಮ್ಮ ಪಾಲಿಗೆ, ಬರೀ ಗೋಳು, ಬಡತನ, ಹಸಿವು ರೋಗಗಳು ಮಾತ್ರವೇ ಸಾಧ್ಯವಾಗುತ್ತಿತ್ತು. ಯಾರೂ ನಿಮಗೊಂದು ಕಾಸಿನ ಸಹಾಯವನ್ನೂ ಮಾಡುತ್ತಿರಲಿಲ್ಲ."

"ಇಂಥದ್ದನ್ನೆಲ್ಲ ಈ ಹಿಂದೇನೇ ನಾನು ಅನುಭವಿಸಿ ಬಿಟ್ಟಿದ್ದೀನಿ. ಅವುಗಳಿಗೆ ನಾನೇನು ಹೆದರುವವನಲ್ಲ. ಇಂಥಾದ್ದರಲ್ಲೂ, ನಾವಿಬ್ಬರೂ ದೂರ ದೂರ ಇರದೆ, ಒಟ್ಟಿಗೆ ಜೊತೆಗೆ ಇದ್ದರೇನೇ ಸುಖ."

"ಆದರೆ ಮಗು, 'ಕೇ' ನಿನ್ನನ್ನು ಪ್ರೀತಿಸದಿದ್ದರೆ!"

"ನೋಡ್ತೀನಿ, ಸಾಧ್ಯವಾಗುವುದಾದರೆ ಆ್ಯಮ್‌ಸ್ಟರ್ ಡ್ಯಾಮ್‌ಗೆ ಹೋಗಿ, ಅವಳನ್ನು ಮಾತಾಡಿಸಿ, ಒಪ್ಪುವ ಹಾಗೆ ಮಾಡಲು ಪ್ರಯತ್ನಿಸುತ್ತೇನೆ!"

ಅವನ ಬದುಕಿನಲ್ಲಿನ ಒಂದು ದುರಂತ ಸಂಗತಿಯೆಂದರೆ, ತಾನು ಪ್ರೀತಿಸುವ ಹೆಣ್ಣನ್ನು ಹೋಗಿ ನೋಡಲು, ರೈಲ್ವೆ ಟಿಕೆಟ್ಟಿಗೆ ಬೇಕಾದ ಒಂದು ಫ್ರ್ಯಾಂಕನ್ನೂ ಅವನಿಂದ ಸಂಪಾದಿಸಲು ಸಾಧ್ಯವಾಗಲಿಲ್ಲ.

ತನ್ನ ಅಸಮರ್ಥತೆಗೆ ತಾನೇ ಸಿಡಿಮಿಡಿಗೊಂಡ. ಇಪ್ಪತ್ತೆಂಟರ ವಯಸ್ಸು. ಮೂಲಭೂತ ಅಗತ್ಯಗಳ ಹೊರತಾಗಿ, ಅವನಿಗೆ ಏನೂ ಅನುಭವಿಸಲು ಸಾಧ್ಯವಿರಲಿಲ್ಲ. ರೈಲು ಟಿಕೆಟ್ಟು ಕೊಳ್ಳುವಷ್ಟು ಒಂದು ಸಣ್ಣ ಮೊತ್ತವನ್ನೂ ಗಳಿಸಲು ಸಮರ್ಥನಿರಲಿಲ್ಲ.

ನೂರು ಕಿಲೋಮೀಟರ್‌ಗಳಷ್ಟು ದೂರವನ್ನು ನಡೆದೇ ಕ್ರಮಿಸಲು ಯೋಚಿಸಿದ. ಇದರಿಂದ ಬಟ್ಟೆ ಬರೆ ಕೊಳೆಯಾಗುವುದಲ್ಲದೆ ಸಾಕಷ್ಟು ಬಳಲಿ ಬೆಂಡಾಗುತ್ತೇನೆಂಬ ಅರಿವೂ ಇತ್ತು. ಅದನ್ನೆಲ್ಲ ತಾನು ಸಹಿಸಿಕೊಳ್ಳಬಹುದು. ಆದರೆ ಆ ಸ್ಥಿತಿಯಲ್ಲಿ ಆ್ಯಮ್‌ಸ್ಟರ್ ಡ್ಯಾಮ್ ತಲುಪಿ ಅಂಕಲ್ ಸ್ಟ್ರಿಕರ್ ಮನೆ ಪ್ರವೇಶಿಸಿದರೆ, ತನ್ನ ಸ್ಥಿತಿಯನ್ನು ನೋಡಿ ಹೊರಗಟ್ಟದೆ ಬಿಡುವುದಿಲ್ಲ. ಥಿಯೋಗೆ ಬೆಳಿಗ್ಗೆ ಒಂದು ಪತ್ರ ಬರೆದಿದ್ದ. ಆದರೆ ಸಂಜೆಗೆ ಮತ್ತೊಂದು ಬರೆದ:–

ಪ್ರೀತಿಯ ಥಿಯೋ,

ನಾನು ಆ್ಯಮ್‌ಸ್ಟರ್ ಡ್ಯಾಮ್‌ಗೆ ಹೋಗಬೇಕಾಗಿದೆ. ನನಗೆ ಹಣದ ತೀರಾ ಅವಶ್ಯಕತೆಯಿದೆ. ಅಲ್ಲಿಗೆ ಹೋಗಲು ಸಾಕಾಗುವಷ್ಟು ನನ್ನಲ್ಲಿ ಹಣ ಇದ್ದರೆ, ನಾನು ಹೋಗಬಲ್ಲೆ.

"ಇದರೊಂದಿಗೆ ನನ್ನ ಕೆಲವು ಡ್ರಾಯಿಂಗ್‌ಗಳನ್ನು ಕಳಿಸುತ್ತಿದ್ದೇನೆ. ಅವುಗಳು ಮಾರಾಟವಾಗದಿದ್ದರೆ, ಮಾರಾಟವಾಗುವಂತೆ ಮಾಡಲು ನಾನು ಏನು ಮಾಡಬೇಕೆಂದು ತಿಳಿಸುವುದು. ಹೇಗಾದರೂ ಒಂದಷ್ಟು ಹಣ ಸಂಪಾದನೆ ಮಾಡಿ ರೈಲ್ವೆ ಟಿಕೆಟ್‌ಕೊಂಡು, ಅವಳನ್ನು ಮಾತಾಡಿಸಿ, ಒಪ್ಪಿಕೊಳ್ಳುವಂತೆ ಮಾಡಬೇಕಿದೆ."

ದಿನ ಕಳೆದಂತೆ ಅವನಲ್ಲಿ ಶಕ್ತಿ ಸಂಚಯವಾಯಿತು. ಪ್ರೀತಿ ಅವನಲ್ಲಿ ದೃಢತೆಯನ್ನು ತಂದಿತು. ಅವನ ತಲೆಹೊಕ್ಕಿದ್ದ ಅನುಮಾನದ ಹುಳುವನ್ನು ಹೊರಗೆಸೆದಿದ್ದ. ಅವಳನ್ನು ಕಂಡು ಮಾತಾಡಿಸಿ, ಅವಳಿಗೆ ತಾನು ನಿಜವಾಗಿಯೂ ಎಂಥವನೆಂಬುದನ್ನು ತಿಳಿಸಿ ಹೇಳಿ, 'ಇಲ್ಲ, ಎಂದಿಗೂ ಇಲ್ಲ' – ಎನ್ನುವ ಪಲ್ಲವಿಯನ್ನು ಬದಲಾಯಿಸಬೇಕು ಎಂದುಕೊಂಡ. ಮತ್ತೊಮ್ಮೆ ಹುರುಪಿನಿಂದ ತನ್ನಕೆಲಸದಲ್ಲಿ ತೊಡಗಿದ. ಕರಕುಶಲತೆ

ಪೂರ್ತಿಯಾಗಿ ಸಾಧಿತವಾಗಿಲ್ಲ ಎನ್ನುವುದು ತಿಳಿದಿತ್ತಾದರೂ, ಪ್ರಯತ್ನಪಟ್ಟು ಸಾಧಿಸಿಕೊಳ್ಳುತ್ತೇನೆ ಎನ್ನುವ ಭರವಸೆಯನ್ನು, 'ಕೇ'ಳನ್ನು ಬದಲಾಯಿಸಬಲ್ಲೆ ಎಂಬ ಭರವಸೆಯನ್ನೂ ಬಿಟ್ಟು ಕೊಡಲಿಲ್ಲ.

ಮಾರನೆದಿನ ಸಂಜೆ ರೆವರೆಂಡ್ ಸ್ಟ್ರಿಕರ್‌ಗೆ ತನ್ನ ವಿಷಯವನ್ನೆಲ್ಲ ಸ್ಪಷ್ಟವಾಗಿ ಬರೆದು ಕಳುಹಿಸಿದ. ಬರೆದದ್ದರಲ್ಲಿ ಅತಿಶಯೋಕ್ತಿಯಾಗಲೀ, ಸತ್ಯವನ್ನು ಮರೆಮಾಚಿದ್ದಾಗಲೀ ಇರಲಿಲ್ಲ. ಇದನ್ನು ಓದಿ ಅಂಕಲ್‌ನ ಪ್ರತಿಕ್ರಿಯೆ ಹೇಗಿರಬಹುದೆಂದು ಯೋಚಿಸಿ ತನ್ನಲ್ಲಿ ತಾನೇ ವ್ಯಂಗ್ಯವಾಗಿ ನಕ್ಕ. ಅವನ ತಂದೆ ಪತ್ರ ಬರೆಯುವುದು ಬೇಡವೆಂದಿದ್ದ. ಪಾದ್ರಿಯ ಮನೆಯಲ್ಲಿ ಸಮರದ ಸಿದ್ಧತೆಗಳು ನಡೆಯುತ್ತಿದ್ದವು. ಥಿಯೋ ಡೋರಸ್ ದೃಷ್ಟಿಯಲ್ಲಿ ವಿನಯ, ವಿಧೇಯತೆ, ನಿಷ್ಠುರ ಶಿಸ್ತುಗಳೇ ಜೀವನದಲ್ಲಿ ಮುಖ್ಯ; ಮನುಷ್ಯ ಭಾವನೆಗಳಿಗೆ ಮಹತ್ವವೇ ಇರಲಿಲ್ಲ. ಮಗ ತನ್ನ ನಿರೀಕ್ಷೆಗಳಿಗೆ ಹೊಂದಿಕೆಯಾಗಿರಲಿಲ್ಲ. ಅವನ ದೃಷ್ಟಿಯಲ್ಲಿ ಮಗನೇ ತಪ್ಪಿತಸ್ಥ.

"ನೀನು ಓದಿದ ಫ್ರೆಂಚ್ ಪುಸ್ತಕಗಳೇ ನಿನ್ನ ಈ ರೀತಿಯ ನಡವಳಿಕೆಗೆ ಕಾರಣ." ಸಂಜೆ ಊಟಕ್ಕೆ ಕುಳಿತಾಗ ಥಿಯೋಡೋರಸ್ ಹೇಳಿದ. "ಕಳ್ಳಕಾಕರ, ಕೊಲೆಗಡುಕರ ಸಹವಾಸದಲ್ಲಿ ಇದ್ದರೆ, ಸಜ್ಜನನಾದ ಒಬ್ಬ ತಂದೆಗೆ ವಿಧೇಯ ಮಗನಾಗಿರಲು ಹೇಗೆ ಸಾಧ್ಯ?" ಮುಂದುವರೆದು ಹೇಳಿದ.

ವಿನ್ಸೆಂಟ್ ಆಶ್ಚರ್ಯದಿಂದ ತಂದೆಯನ್ನು ನೋಡಿದ. "ಏನಂದಿರಿ? ಕಳ್ಳರು, ಕೊಲೆಗಡುಕರು? ವಿಕ್ಟರ್‌ಹ್ಯೂಗೋ, ಮಿಷಲೆಟ್- ಇವರು ಕಳ್ಳರೇ?"

"ಅಲ್ಲ. ಆದರೆ ಅವರು ಬರೆಯುವುದು ಅಂಥವರನ್ನು ಕುರಿತೇ! ಕೇಡು, ಪಾಪಗಳನ್ನು ಕುರಿತು ಬರೆಯುತ್ತಾರೆ!"

"ನೀವು ಮಾತಾಡುವುದರಲ್ಲಿ ಅರ್ಥವೇ ಇಲ್ಲ. ಮಿಷಲೆಟ್ ಬೈಬಲ್‌ನಷ್ಟೇ ಪವಿತ್ರನಾದವನು."

"ಧರ್ಮ ವಿರೋಧಿಯಾದ ನಿನ್ನ ಮಾತುಗಳು ನನಗೆ ಬೇಕಿಲ್ಲ...... ಆ ಪುಸ್ತಕಗಳೆಲ್ಲ ಅಧಾರ್ಮಿಕವಾದವುಗಳು. ನಿನ್ನ ಈ ಫ್ರೆಂಚ್ ವಿಚಾರಗಳೇ ನಿನ್ನ ವಿನಾಶಕ್ಕೆ ಕಾರಣವಾಗಿವೆ." – ಎಂದು ಗಟ್ಟಿಯಾಗಿ ಅಬ್ಬರಿಸಿ ಹೇಳಿದ.

ವಿನ್ಸೆಂಟ್ ಟೇಬಲ್ ಬಿಟ್ಟು ಎದ್ದು, ತಂದೆಯ ಮುಂದೆ, 'L'Amour et la femme' ಪುಸ್ತಕವನ್ನು ಇರಿಸಿದ.

"ಇಲ್ಲಿನ ಕೆಲವು ಭಾಗಗಳನ್ನು ಓದಿರಿ. ನಿಮಗೇ ತಿಳಿಯುತ್ತದೆ. ಜೊತೆಗೆ ಸಮಾಧಾನವೂ ಆಗುತ್ತೆ. ಮಿಷಲೆಟ್ ಇದರಲ್ಲಿ ನಮ್ಮ ಚಿಕ್ಕ ಚಿಕ್ಕ ಸಮಸ್ಯೆಗಳನ್ನು, ನಮ್ಮ ಸಂಕಷ್ಟಗಳನ್ನು ಪರಿಹರಿಸಿಕೊಳ್ಳಲು ಸಹಾಯಮಾಡಲು ಬಯಸುತ್ತಾನೆ."

ಥಿಯೋಡೋರಸ್, ವಿನ್ಸೆಂಟ್ ತನ್ನ ಮುಂದಿರಿಸಿದ್ದ ಪುಸ್ತಕವನ್ನು ಪಾಪವನ್ನು ದೂರ ಎಸೆಯುವಂತೆ, ನೆಲಕ್ಕೆ ಒಗೆದು ಎಸೆದ.

"ಅದನ್ನು ಓದಬೇಕಾದ ಅಗತ್ಯ ನನಗೆ ಇಲ್ಲ. ನಿನ್ನೊಬ್ಬ ಅಂಕಲ್ ವಾನ್‌ಗೋ ವಂಶದಲ್ಲಿ ಈ ಥರದ ಫ್ರೆಂಚ್ ವಿಚಾರಗಳಿಂದ ಕೆಟ್ಟು ಹೋಗಿ, ಕುಡಿತಕ್ಕೆ ಬಿದ್ದ!"

"ನನ್ನನ್ನು ಕ್ಷಮಿಸಿ ಫಾದರ್ ಮಿಷಲೆಟ್" – ಎನ್ನುತ್ತಾ ಪುಸ್ತಕವನ್ನು ಎತ್ತಿಕೊಂಡ.

"ನಾನು ಕೇಳಬಹುದಾದರೆ, ಫಾದರ್ ಮಿಷಲೆಟ್ ಯಾಕೆ?.... ನನಗೆ ಅವಮಾನ ಮಾಡುವ ಉದ್ದೇಶವೇ?" ಸಣ್ಣಗೆ ಕೇಳಿದ.

"ಅವಮಾನ ಮಾಡುವ ಆಲೋಚನೆ ಇರಲಿಲ್ಲ ಅಪ್ಪ. .... ಆದರೆ ನನಗೆ ಸಲಹೆ, ಮಾರ್ಗದರ್ಶನಗಳು ಬೇಕಾದರೆ ನಿಮಗಿಂತ ಹೆಚ್ಚಾಗಿ ಮಿಷಲೆಟ್ ಬಳಿಗೆ ಹೋಗುತ್ತೇನೆ,..... ಇದಂತೂ ಸತ್ಯ."

"ವಿನ್ಸೆಂಟ್, ಯಾಕೆ ಹೀಗೆಲ್ಲ ಮಾತಾಡ್ತೀಯ? ಯಾಕೆ ಕುಟುಂಬದೊಂದಿಗೆ, ಈ ರೀತಿ ಮಾತಾಡಿ ಸಂಬಂಧ ಕಡಿದುಕೊಳ್ಳುತ್ತೀ?" ಪ್ರಾರ್ಥಿಸುವ ದನಿಯಲ್ಲಿ ಕೇಳಿದಳು.

"ಹೌದು. ನೀನು ಮಾಡುತ್ತಿರುವುದು, ಬಯಸುತ್ತಿರುವುದು ಇದನ್ನೇ..... ನಿನಗೆ ತಂದೆತಾಯಿ ಯಾರೂ ಬೇಕಿಲ್ಲ. ನಿನ್ನ ನಡತೆ ಅಕ್ಷಮ್ಯವಾದದ್ದು. ನಿನ್ನಂಥವನು ಮನೇಲಿ ಇರುವುದಕ್ಕಿಂತ, ಮನೆಬಿಟ್ಟು ಹೋಗೋದೇ ಒಳ್ಳೇದು."– ಎಂದು ಅಬ್ಬರಿಸಿ ಹೇಳಿದ.

ವಿನ್ಸೆಂಟ್ ತನ್ನ ಸ್ಟುಡಿಯೋ ಇದ್ದ ಕೋಣೆಗೆ ನಡೆದು ಹಾಸಿಗೆ ಮೇಲೆ ಕುಳಿತ. ತನಗೆ ಭಯಂಕರ ಆಘಾತಗಳಾದಾಗ ಹೀಗೆ ಹಾಸಿಗೆ ಮೇಲೆ ಬಂದೇಕೆ ಕುಳಿತುಕೊಳ್ಳುತ್ತೇನೆಂದು ತನ್ನಲ್ಲಿ ತಾನೇ ಚಕಿತನಾಗಿ ಪ್ರಶ್ನಿಸಿಕೊಂಡ. ಸುತ್ತಲೂ ಗೋಡೆಗೆ ಅಂಟಿಸಿದ್ದ ತನ್ನ ಡ್ರಾಯಿಂಗ್‌ಗಳನ್ನು ನೋಡಿದ. ಅಗೆಯುವವರು, ಉಳುವವರು, ಕೂಲಿಕಾರರು, ದರ್ಜಿಗಳು.... ಎಷ್ಟೊಂದು ಬಗೆ!...... ಸಾಕಷ್ಟು ಪ್ರಗತಿ ಇದೆ ಎನಿಸಿತು. ಇನ್ನೂ ಬೆಳೆಯುತ್ತಿದ್ದ. ಇಲ್ಲಿ ತನ್ನ ಕೆಲಸಗಳು ಪೂರ್ತಿಯಾಗಿರಲಿಲ್ಲ. ಮಾವ್ ಡ್ರೆನ್ಸ್‌ನಲ್ಲಿದ್ದ. ಬರುವುದಕ್ಕೆ ಒಂದು ತಿಂಗಳಾಗುತ್ತೆ. ಎಟ್ಟೆನ್ ಬಿಡಲು ಇಷ್ಟವಾಗಲಿಲ್ಲ. ಇಲ್ಲಿ ಎಲ್ಲ ಸೌಕರ್ಯಗಳಿದ್ದವು. ಬೇರೆ ಎಲ್ಲಿಯಾದರೂ ಇರುವುದೆಂದರೆ, ಖರ್ಚಿನ ಸಮಸ್ಯೆ. ತನ್ನ ಒರಟು ಒರಟಾದ ಅಭಿವ್ಯಕ್ತಿಯನ್ನು ಸುಧಾರಿಸಿ, ನಿಜವಾದ ಸತ್ವವನ್ನು, ಅದರಲ್ಲೂ ಬ್ರಬಾಂಟ್‌ನ ಸತ್ವವನ್ನು ಹಿಡಿದಿಡಬೇಕೆಂದಿದ್ದ. ತಾನು ಇಲ್ಲಿಂದ ಹೋಗುವುದಕ್ಕೆ ಮೊದಲೇ ಅಂದುಕೊಂಡದ್ದನ್ನು ಸಾಧಿಸಿಯೇ ತೀರಬೇಕೆಂಬ ನಿರ್ಧಾರದಲ್ಲಿದ್ದ. ಆದರೆ ಈಗ ತಂದೆ ಮನೆಬಿಟ್ಟು ಹೋಗಲು ಹೇಳುತ್ತಿದ್ದಾರೆ. ಹಾಗೆ ಹೇಳಿದ್ದು ಕೋಪದಲ್ಲಿ!..... ಒಂದು ವೇಳೆ ಅವರು ಹೇಳಿದ್ದು ನಿಜವೇ ಆದರೆ?..... ಮನೆಯಿಂದ ಆಚೆಗೆ ಅಟ್ಟುವಷ್ಟು ಕೆಟ್ಟವನೇ ತಾನು?

ಮರುದಿನ ಬೆಳಿಗ್ಗೆ ಅವನಿಗೆ ಎರಡು ಪತ್ರಗಳು ಬಂದವು. ಒಂದು ತಾನು ಬರೆದ ರಿಜಿಸ್ಟರ್ ಪತ್ರಕ್ಕೆ ಉತ್ತರವಾಗಿ, ರೆವರೆಂಡ್ ಸ್ಟ್ರಿಕರ್ ಬರೆದದ್ದು, ಅದರ ಜೊತೆಗೆ ಶ್ರೀಮತಿ ರೆವರೆಂಡ್ ಬರೆದಿದ್ದ ಒಂದು ಸಣ್ಣ ಚೀಟಿಯೂ ಇತ್ತು. ವಿನ್ಸೆಂಟ್‌ನ

ಕೆರಿಯರ್ ಬಗ್ಗೆ ಬರೆದದ್ದೇ ಅಲ್ಲದೆ, ಕೇ ಬೇರೆ ಯಾರನ್ನೋ ಪ್ರೀತಿಸುತ್ತಿದ್ದಾಳೆ ಎಂದು ಸ್ಪಷ್ಟವಾಗಿ ತಿಳಿಸಲಾಗಿತ್ತು. ಆ ಬೇರೆ ಮನುಷ್ಯ ಬಾರಿ ಶ್ರೀಮಂತನೆಂಬುದನ್ನೂ ಬರೆದಿದ್ದರು. ಜೊತೆಗೆ, ಈ ಕ್ಷಣದಿಂದಲೇ 'ಕೇ'ಳನ್ನು ಪ್ರೀತಿಸುವುದನ್ನು ನಿಲ್ಲಿಸಬೇಕೆಂಬ ಎಚ್ಚರಿಕೆಯನ್ನೂ ನೀಡಿದ್ದರು.

ಈಗ ಅವನಿಗೆ, ಪ್ರಾಪಂಚಿಕ ಆಸಕ್ತಿಗಳನ್ನುಳ್ಳವರು, ಕಠಿಣ ಹೃದಯಿಗಳು, ಧರ್ಮೋಪದೇಶಕರು, ಪಾದ್ರಿಗಳು – ಇವರಿಗಿಂತ ಬೇರೆ ಇರಲಾರರು ಎನ್ನುವುದು ಖಚಿತವಾಯಿತು. ರೆವರೆಂಡ್‌ರ ಪತ್ರವನ್ನು ಕ್ರೋಧಾಗ್ನಿಯಿಂದ ಉರಿದು ಬಿಸಾಡುವಂತೆ, ಅದನ್ನು ಹಿಸುಕಿ ಎಸೆದ. ರೆವರೆಂಡ್‌ರನ್ನೇ ನುಚ್ಚುನೂರು ಮಾಡಿದಷ್ಟು ಸಂತೋಷದಿಂದ ವಿಕಾರವಾಗಿ ನಕ್ಕ.

ಎರಡನೇ ಪತ್ರ ಥಿಯೋನಿಂದ ಬಂದುದಾಗಿತ್ತು.

"ಡ್ರಾಯಿಂಗ್ಸ್ ಚೆನ್ನಾಗಿ ಬಂದಿವೆ. ಅವುಗಳ ಮಾರಾಟಕ್ಕೆ ಆದಷ್ಟೂ ಪ್ರಯತ್ನಿಸುತ್ತೇನೆ. ಸದ್ಯಕ್ಕೆ ಇಪ್ಪತ್ತು ಫ್ರ್ಯಾಂಕ್‌ಗಳನ್ನು ಆ್ಯಮ್‌ಸ್ಟರ್ ಡ್ಯಾಮ್ ಪ್ರಯಾಣಕ್ಕೆಂದು ಇರಿಸಿದ್ದೇನೆ. ಒಳ್ಳೆಯದಾಗಲಿ?"

–೮–

ಸೆಂಟ್ರಲ್ ರೈಲೆ ಸ್ಟೇಷನ್ ತಲುಪಿದಾಗ, ರಾತ್ರಿ ಕಳೆಯುವುದರಲ್ಲಿತ್ತು. ಅವನು ಡಾಮ್ರಾಕ್ ಅಣೆಕಟ್ಟನು ತಲುಪಿದ. ಅರಮನೆ, ಪೋಸ್ಟ್ ಆಫೀಸ್‌ಗಳನ್ನು ದಾಟಿ ಕೀಜರ್ಸ್‌ಗ್ರಾಕ್ಟ್ ತಲುಪಿದ. ಅಂಗಡಿಗಳಲ್ಲಿ ಇನ್ನೂ ಸಿಬ್ಬಂದಿ ಇರಲಿಲ್ಲ.

ಹೀರೆನ್ ಗ್ರಾಕ್ಟ್ ಸೇತುವೆ ಮೇಲಿಂದ ನಿಂತು, ಅಲ್ಲಿ ಜನ ಊಟ ಮಾಡುತ್ತಿದ್ದುದನ್ನು ನೋಡಿದ. ಅಲ್ಲಿಂದ ಎಡಕ್ಕೆ ತಿರುಗಿ ಕಿರಿದಾದ ವಸತಿಗೃಹಗಳನ್ನು ಹಾದು, ರೆವರೆಂಡ್ ಸ್ಟ್ರಿಕರ್ ಮನೆಯ ಮೆಟ್ಟಿಲ ಬಳಿ ಬಂದು ನಿಂತ. ಮೊದಲ ಸಲ ಬಂದಾಗ ಅಲ್ಲಿಯೇ ನಿಂತದ್ದು ನೆನಪಾಯಿತು.

ತುಂಬಾ ಉತ್ಸಾಹ, ಕಾತರಗಳಿಂದ ವೇಗವಾಗಿ ಡಾಮ್ರಾಕ್ ತಲುಪಿದರೂ ಈಗ ಮಾತ್ರ ಮನೆ ಒಳಗೆ ಪ್ರವೇಶಿಸಲು ಸಂಕೋಚ ಪಡುತ್ತಿದ್ದ. ಜೊತೆಗೆ ಏನಾಗುವುದೋ ಎಂಬ ಭಯವೂ ಕಾಡಿತು. ತಲೆಯೆತ್ತಿ ನೋಡಿದ. ಕಿಟಕಿಯಿಂದ ಒಂದು ಕೊಕ್ಕೆ ಇಳಿಬಿದ್ದಿತ್ತು. ಅದನ್ನು ನೋಡಿದ ಕೂಡಲೇ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ ತುಂಬ ಒಳ್ಳೆ ಅವಕಾಶ ಎಂದುಕೊಂಡ. ಕೆಂಪು ಇಟ್ಟಿಗೆಗಳಿಂದಾದ ರಸ್ತೆಯ ಮೇಲೆ ನಿಂತು ಕಾಲುವೆಯತ್ತ ದೃಷ್ಟಿ ಹಾಯಿಸಿದ. ಮುಂದೆ ಇನ್ನೊಂದು ಗಂಟೆಯಲ್ಲಿ ಅವನ ಭವಿಷ್ಯ ನಿರ್ಧಾರ ಆಗುತ್ತದೆ ಎಂಬುದನ್ನು ಅರಿತ. 'ಕೇ'ಳನ್ನು ನೋಡಿ ಮಾತನಾಡಿಸಿ ಅವಳಿಗೆ ಸರಿಯಾಗಿ ಅರ್ಥಮಾಡಿಸಿದರೆ ಸಮಸ್ಯೆ ಪರಿಹಾರವಾಗುತ್ತೆ. ಆದರೆ ಪ್ರವೇಶದ್ವಾರದ ಬೀಗದ ಕೈ ರೆವರೆಂಡ್ ಕೈಯಲ್ಲಿದೆ. ಅವರು ಅವನನ್ನು ಒಳಗೆ ಬಿಡುತ್ತಾರೋ ಇಲ್ಲವೊ ಎಂದು ಅನುಮಾನಿಸಿದ.

ವಿನ್ಸೆಂಟ್ ಕಲ್ಲಿನ ಮೆಟ್ಟಿಲನ್ನು ಏರಿದ. ಬಾಗಿಲಮುಂದೆ ನಿಂತು ಗಂಟೆ ಬಾರಿಸಿದ. ಒಂದು ನಿಮಿಷದ ನಂತರ ಕೆಲಸದವಳು. ಬಂದು, ವಿನ್ಸೆಂಟ್ ನಿಂತಿದ್ದನ್ನು ನೋಡಿದಳು. ತನ್ನ ಸ್ಥೂಲವಾದ ದೇಹದೊಂದಿಗೆ ಬಾಗಿಲಿಗೆ ಅಡ್ಡವಾಗಿ ನಿಂತಳು.

"ರೆವರೆಂಡ್ ಸ್ಟ್ರಿಕರ್ ಮನೆಯಲ್ಲಿದ್ದಾರೇನು?" ವಿನ್ಸೆಂಟ್ ವಿಚಾರಿಸಿದ.

"ಇಲ್ಲ. ಹೊರಗೆ ಹೋಗಿದ್ದಾರೆ" – ಅವರು ಆದೇಶಿಸಿದ್ದಂತೆ ಉತ್ತರಿಸಿದಳು.

ವಿನ್ಸೆಂಟ್‌ಗೆ ಒಳಗೆ ಮಾತಾಡುತ್ತಿದ್ದುದು ಕೇಳಿಸುತ್ತಿತ್ತು. ಅಡ್ಡವಾಗಿ ನಿಂತಿದ್ದ ಆ ಹೆಂಗಸನ್ನು ಪಕ್ಕಕ್ಕೆ ತಳ್ಳಿ ಒಳನುಗ್ಗಿದ.

ಆ ಹೆಂಗಸು ಅವನ ಹಿಂದೆಯೇ ವೇಗವಾಗಿ ನುಗ್ಗಿ ಅವನನ್ನು ತಡೆಯಲು ಪ್ರಯತ್ನಿಸಿದಳು. ಅವನು ಹಾಗೆ ನುಗ್ಗಿದಾಗ, ತನಗೆ ಪರಿಚಿತವಿದ್ದ ಕಪ್ಪು ಉಡುಪಿನ ಆಕೃತಿ ಮತ್ತೊಂದು ಬಾಗಿಲನ್ನು ದಾಟಿ ಹೋದದ್ದು ಕಾಣಿಸಿತು. ಊಟದ ಮೇಜಿನ ಮೇಲೆ ಐದು ತಟ್ಟೆಗಳಿದ್ದವು. ಆದರೆ ರೆವರೆಂಡ್ ಸ್ಟ್ರಿಕರ್, ವಿಲ್‌ಹೆಲ್‌ಮಿನಾ, ಇಬ್ಬರು ಮಕ್ಕಳು ತಟ್ಟೆಗಳ ಮುಂದೆ ಕೂತಿದ್ದರು. ಮತ್ತೊಂದು ತಟ್ಟೆಯ ಮುಂದೆ ಖಾಲಿ ಕುರ್ಚಿಯಿತ್ತು. ತಟ್ಟೆಗಳಲ್ಲಿ ಬೀನ್ಸ್, ಆಲೂಗಳನ್ನು ಇರಿಸಲಾಗಿತ್ತು.

"ಸಾರ್, ಅವರನ್ನು ತಡೆಯುವುದು ನನ್ನಿಂದ ಸಾಧ್ಯವಾಗಲಿಲ್ಲ. ನನ್ನನ್ನು ತಳ್ಳಿ ಒಳಗೆ ಬಂದರು."

ಮೇಜಿನ ಮೇಲೆ ಎರಡು ಮೇಣದ ಬತ್ತಿ ಸ್ತಂಭಗಳಿದ್ದವು. ಉರಿಯುತ್ತಿದ್ದ ಮೇಣದಬತ್ತಿಗಳಿಂದ ಹಳದಿ ಬೆಳಕು ಪಸರಿಸಿತ್ತು. ಮೊದಲ ಸಲ 'ಕೇ'ಳೊಂದಿಗೆ ನಿಂತು ಮಾತನಾಡಿದ್ದ, ಎತ್ತರದ ಕಿಟಕಿ ಕಣ್ಣಿಗೆ ಬಿತ್ತು.

"ಏನಪ್ಪ ವಿನ್ಸೆಂಟ್, ದಿನದಿನಕ್ಕೆ ನಿನಗೆ ಸಭ್ಯತೆ ಅನ್ನೋದು ಮರೆತು ಹೋಗುತ್ತಿದೆ."

"ನಾನು 'ಕೇ'ಳ ಜೊತೆ ಮಾತಾಡಬೇಕು."

"ಅವಳು ಇಲ್ಲಿಲ್ಲ. ಫ್ರೆಂಡ್ಸ್‌ನ ನೋಡೋಕೆ ಹೋಗಿದ್ದಾಳೆ."

"ಸುಳ್ಳು! ನಾನು ಬಾಗಿಲ ಬಳಿ ಬಂದಾಗ, ಅವಳು ಆ ಖಾಲಿ ಕುರ್ಚಿಯಲ್ಲಿ ಕುಳಿತಿದ್ದಳು. ಅಲ್ಲದೆ ಊಟ ಮಾಡೋಕೂ ಹೊರಟಿದ್ದಳು."

ರೆವರೆಂಡ್ ಹೆಂಡತಿಯ ಕಡೆ ತಿರುಗಿ "ಮಕ್ಕಳನ್ನು ಇಲ್ಲಿಂದ ಕರೆದುಕೊಂಡು ಒಳಗೆ ಹೋಗು."

"ನೋಡು ವಿನ್ಸೆಂಟ್, ನಿನ್ನದು ಅತಿಯಾಯಿತು. ಎಲ್ಲರಿಗೂ ನೀನೊಂದು ತಲೆನೋವಾಗಿದ್ದೀಯ. ನಿನ್ನ ಸಹವಾಸ ಮನೆಯವರೆಲ್ಲರಿಗೂ ಸಾಕಾಗಿ ಹೋಗಿದೆ. ನೀನೊಬ್ಬ ನಾಲಾಯಕ್ಕು, ಅಸಭ್ಯ, ಸೋಮಾರಿ, ಅಲೆಮಾರಿ. ಅಷ್ಟೇ ಅಲ್ಲ ಮಹಾ ಕೃತಘ್ನ ಕೂಡ! ಇಂಥಾದ್ದರಲ್ಲಿ ನನ್ನ ಮಗಳನ್ನು ಪ್ರೀತಿಸೋಕೆ ನಿನಗೆಷ್ಟು ಧೈರ್ಯ? ಇದು ನನಗೆ ಆಗುತ್ತಿರುವ ದೊಡ್ಡ ಅವಮಾನ!"

"ಅಂಕಲ್ 'ಕೇ' ಜೊತೆ ಮಾತಾಡೋಕೆ ಬಿಡಿ."

"ಅವಳಿಗೆ ನಿನ್ನ ಜೊತೆ ಮಾತಾಡುವುದಿರಲಿ, ನಿನ್ನನ್ನು ನೋಡೋದಕ್ಕೂ ಇಷ್ಟ ಪಡ್ತಿಲ್ಲ."

"ಹಾಗಂತ ಅವಳೇ ಹೇಳಿದಳೇನು?"

"ಹೌದು."

"ನನಗೆ ನಂಬಿಕೆ ಇಲ್ಲ."

ಸ್ಟ್ರಿಕರ್ ದಿಗ್ಭ್ರಾಂತನಾದ. ತಾನು ಧರ್ಮೋಪದೇಶಕ್ಕೆ ದೀಕ್ಷೆಗೊಂಡಾಗಿನಿಂದ, ಸುಳ್ಳಿನ ಆರೋಪ ತನ್ನ ಮೇಲೆ ಆಗುತ್ತಿರುವುದು ಇದೇ ಮೊದಲ ಸಲ!

"ನಾನು ಸುಳ್ಳು ಹೇಳ್ತಿದ್ದೀನಿ ಅಂತ ಆಕ್ಷೇಪ ಮಾಡೋಕೆ ನಿನಗೆಷ್ಟು ಧೈರ್ಯ!"

"ಅವಳ ಬಾಯಿಂದ ಖುದ್ದಾಗಿ ಕೇಳುವವರೆಗೆ ನಾನು ನಂಬುವುದಿಲ್ಲ. ಬಹುಶಃ ಆಮೇಲೂ ಕೂಡ!"

"ನಿನಗಾಗಿ ಹಿಂದೆ ಖರ್ಚು ಮಾಡಿದ ಹಣ, ಸಮಯ, ಎಲ್ಲಾ ಹಾಳಾಗಿ ಹೋಯ್ತಲ್ಲ ಅಂತ ಅನ್ನಿಸ್ತಿದೆ."

ವಿನ್ಸೆಂಟ್ 'ಕೇ' ಗಾಗಿ ಇರಿಸಿದ್ದ. ಖಾಲಿ ಕುರ್ಚಿಯಲ್ಲಿ ಕುಳಿತು, ಎರಡೂ ಕೈಗಳನ್ನು ಮೇಜಿನ ಮೇಲೆ ಊರಿ ಇರಿಸಿದ.

"ಅಂಕಲ್ ದಯವಿಟ್ಟು ನನ್ನ ಮಾತು ಕೇಳಿ. ಪಾದ್ರಿಗಳೂ ಕೂಡ ತಮ್ಮ ನಿಷ್ಠುರ ಹೃದಯದಲ್ಲಿ ಮಾನವತ್ವದ ಮೃದು ಭಾವನೆಗಳನ್ನು ಇರಿಸಿಕೊಂಡು ಇರುತ್ತಾರೆಂಬುದು ನಿಮ್ಮಿಂದ ಲೋಕಕ್ಕೆ ತಿಳಿಯಲಿ. ನಿಮ್ಮ ಮಗಳನ್ನು ನಾನು ಅತಿಯಾಗಿ ಪ್ರೀತಿಸುತ್ತೇನೆ. ಹಗಲೂ ರಾತ್ರಿ ಅವಳಿಗಾಗಿ ಹಂಬಲಿಸುತ್ತಿದ್ದೇನೆ. ನೀವು ದೇವರ ಕೆಲಸ ಮಾಡುತ್ತೀರಿ. ದೇವರ ದಯೆ, ಕರುಣೆಗಾಗಿ ಪ್ರಾರ್ಥಿಸುತ್ತೀರಿ. ನನಗೂ ಸ್ವಲ್ಪ ನಿಮ್ಮ ಕರಣೆಯಿರಲಿ. ಇಷ್ಟೊಂದು ಕ್ರೂರವಾಗಬೇಡಿ. ನನಗೂ ಗೊತ್ತು, ಜೀವನದಲ್ಲಿ ಇಲ್ಲೀವರೆಗೆ ನಾನು ಏನನ್ನೂ ಸಾಧಿಸಿಲ್ಲ. ಯಶಸ್ಸನ್ನು ಕಂಡಿಲ್ಲ. ಆದರೆ ಸ್ವಲ್ಪ ಕಾಲಾವಕಾಶ ಕೊಡಿ. ನಾನು ಸಾಧಿಸಿ ತೋರಿಸುತ್ತೇನೆ. ನನ್ನ ಪ್ರೀತಿ ಏನು ಅನ್ನುವುದು ಅವಳಿಗೆ ಅರ್ಥಮಾಡಿಸಲು ನನಗೊಂದು ಸಣ್ಣ ಅವಕಾಶ ಕೊಡಿ. ನೀವು ಯಾರನ್ನಾದರೂ ಪ್ರೀತಿಸಿರಲೇಬೇಕು. ಅಗಲಿಕೆಯ ನೋವು ಎಷ್ಟು ತೀವ್ರ ಅನ್ನುವುದನ್ನು ಬಾಯಲ್ಲಿ ಹೇಳಬೇಕಾಗಿಲ್ಲ. ಸಾಕಷ್ಟು ನೊಂದಿದ್ದೇನೆ. ಒಮ್ಮೆಯಾದರೂ ಸಂತೋಷ, ಸುಖ ಏನು ಅನ್ನುವುದನ್ನು ಅನುಭವಿಸಲು ಬಿಡಿ. ಅವಳ ಪ್ರೀತಿ ಗೆಲ್ಲಲು ದಾರಿ ಮಾಡಿಕೊಡಿ. ಇನ್ನು ಈ ಒಂಟಿತನದ ನೋವನ್ನು ಭರಿಸಲು ನನ್ನಿಂದ ಆಗುವುದಿಲ್ಲ."

ರೆವರೆಂಡ್ ಅವನ ಕಡೆ, ಒಂದು ಕ್ಷಣ ನೋಡಿ – "ಯಾಕೆ ಇಷ್ಟು ಸಣ್ಣ ನೋವನ್ನು ಸಹಿಸಿಕೊಳ್ಳಲು ಆಗದಷ್ಟು ದುರ್ಬಲನೇ? ಹೇಡಿಯೇ? ಯಾವಾಗಲೂ ಹೀಗೆ ನರಳುತ್ತಲೇ ಇರುವೆಯೇನು?"

ವಿನ್ಸೆಂಟ್ ಆವೇಶದೊಂದಿಗೆ ಎದ್ದುನಿಂತ. ಇಲ್ಲಿವರೆಗೆ ಇದ್ದ ಸೌಮ್ಯತೆ, ನಯಗಳು ಮರೆಯಾದವು. ಅವರಿಬ್ಬರ ನಡುವೆ ಎರಡು ಮೇಣದ ಬತ್ತಿಯ ಸ್ತಂಭಗಳಷ್ಟೇ

ಗೋಡೆಯಾಗಿತ್ತು. ಮೇಜಿನ ವಿರುದ್ಧ ದಿಕ್ಕುಗಳಲ್ಲಿ ನಿಂತಿದ್ದ ಅವರಿಬ್ಬರೂ ತಣ್ಣನೆಯ ಬೆಳಕಿನಲ್ಲಿ ದುರುಗುಟ್ಟಿ ಒಬ್ಬರನ್ನೊಬ್ಬರು ನೋಡುತ್ತಿದ್ದರು. ಕೋಪದಿಂದ ರೆವರೆಂಡ್‌ರನ್ನು ಹೊಡೆಯಲು ಅಡ್ಡವಾಗಿದ್ದದ್ದು ಕೇವಲ ಮೇಣದ ಬತ್ತಿಯ ಸ್ತಂಭಗಳು ಮಾತ್ರ!

ಎಷ್ಟು ಹೊತ್ತು ಹಾಗೆಯೇ ಕಳೆಯಿತೋ, ಅರಿವಿಗೆ ಬರಲಿಲ್ಲ. ವಿನ್ಸೆಂಟ್ ಸುಮ್ಮನೆ ತನ್ನ ಕೈಯೆತ್ತಿ ಮೇಣದ ಬತ್ತಿಯ ದೀಪದ ಹತ್ತಿರ ತಂದ. "ಅಂಕಲ್, ದೀಪದ ಜ್ವಾಲೆಗೆ ಹಿಡಿದಿರುವಷ್ಟು ಹೊತ್ತು ಮಾತ್ರ, ಅವಳ ಜೊತೆ ಮಾತಾಡಲು ಅವಕಾಶ ಕೊಡಿ."

ಕೈನ ಹಿಂಭಾಗವನ್ನು ಉರಿಯುತ್ತಿರುವ ಜ್ವಾಲೆಯ ಮೇಲೆ ಇರಿಸಿದ. ಕೈ ಅಡ್ಡವಾದದ್ದರಿಂದ ಪ್ರಕಾಶ ಕಡಿಮೆಯಾಯಿತು. ದೀಪದ ಮಸಿ ಅವನ ಕೈಯನ್ನು ಕಪ್ಪಾಗಿಸಿತ್ತು. ನಂತರ ಚರ್ಮ ಸುಟ್ಟು ಹೋದದ್ದರಿಂದ ಕೆಂಪನೆಯ ಗಾಯ ಕಾಣಿಸಿತು. ಬರಬರುತ್ತಾ ಊದಿಕೊಂಡು ದೊಡ್ಡದೊಂದು ಬೊಬ್ಬೆಯಾಯಿತು. ರೆವರೆಂಡ್ ಭಯ ಭೀತನಾದ; ನಿಶ್ಚಲನಾಗಿ ಕಂಬದಂತೆ ನಿಂತ. ಮಾತಾಡಲು ಎಷ್ಟೇ ಪ್ರಯತ್ನಿಸಿದರೂ, ಮಾತೇ ಹೊರಡಲಿಲ್ಲ. ವಿನ್ಸೆಂಟ್‌ನ ಕ್ರೂರವಾದ, ಕ್ರೋಧಾಗ್ನಿಯಿಂದ ಉರಿಯುತ್ತಿರುವ ಕಣ್ಣಿನ ನೋಟದಲ್ಲಿ ಸೆರೆಯಾಗಿ ಬಿಟ್ಟಿದ್ದ. ಹದಿನೈದು ಸೆಕೆಂಡುಗಳು ದಾಟಿ ಹೋಗಿದ್ದವು. ಬೊಬ್ಬೆ ಒಡೆದು ಅತೀವ ಹಿಂಸೆಯಾಗುತ್ತಿದ್ದರೂ ಕೈಯನ್ನು ಕದಲಿಸಲಿಲ್ಲ. ಒಂದಿಷ್ಟೂ ವಿಚಲಿತನಾಗಲಿಲ್ಲ. ಆದರೆ ರೆವರೆಂಡ್ ಒಮ್ಮೆ ಬೆಚ್ಚಿಬಿದ್ದು ಸಹಜ ಸ್ಥಿತಿಗೆ ಬಂದ.

"ನೀನೊಬ್ಬ ಹುಚ್ಚ! ಬುದ್ಧಿ ಭ್ರಮಿತ ಮಹಾಮೂರ್ಖ!" ಅಬ್ಬರಿಸಿ ಹೇಳಿದ ರೆವರೆಂಡ್.

ಮೇಜಿನ ಮೇಲಿದ್ದ, ವಿನ್ಸೆಂಟ್ ಕೈ ಹಿಡಿದಿದ್ದ ಮೇಣಬತ್ತಿಯನ್ನು ಎಳೆದುಕೊಂಡು ಆರಿಸಿದ. ಹಾಗೆಯೇ ತನ್ನ ಬಳಿಯೂ ಇದ್ದ ಮೇಣದಬತ್ತಿ ದೀಪವನ್ನೂ ಆರಿಸಿದ.

ಕೋಣೆ ಕತ್ತಲಿಂದ ತುಂಬಿತು. ಮೇಜಿನ ಮೇಲೆ ಒರಗಿ ಇಬ್ಬರೂ ಕುಳಿತರು. ಒಬ್ಬರಿಗೊಬ್ಬರು ಕಾಣಿಸದಿದ್ದರೂ, ಕಲ್ಪನೆಯಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿದ್ದರು.

"ನೀನೊಬ್ಬ ಹುಚ್ಚ. ಕೇಗೆ ನಿನ್ನನ್ನು ಕಂಡರೆ ಅಸಹ್ಯ. ಮನೆಯಿಂದ ಆಚೆ ನಡಿ. ಇನ್ನೆಂದೂ ನಿನ್ನ ಮುಖ ಹೀಗೆ ಬಂದು ತೋರಿಸಬೇಡ."

ಆ ಕತ್ತಲಲ್ಲಿಯೇ ಹೊರಟು, ವಿನ್ಸೆಂಟ್ ಊರಿನ ಹೊರಭಾಗವನ್ನು ತಲುಪಿದ. ಕಾಲುವೆಯಿಂದ ಹೊರಡುತ್ತಿದ್ದ ದುರ್ಗಂಧ ಅವನ ಮೂಗಿಗೆ ಬಡಿಯಿತು. ಮೂಲೆಯಲ್ಲಿದ್ದ ಗ್ಯಾಸ್‌ಲ್ಯಾಂಪಿನ ಬೆಳಕು ಅವನ ಎಡಗೈ ಮೇಲೆ ಬಿತ್ತು. ಬೆಳಕಿನಲ್ಲಿ ಕೈಯನ್ನು ನೋಡಿಕೊಂಡ. ಅದೃಷ್ಟಕ್ಕೆ, ಯಾವುದೋ ಪ್ರೇರಣೆಯಿಂದ ಬಲಗೈಯನ್ನು ಸುಟ್ಟುಕೊಂಡಿರಲಿಲ್ಲ. ಇಲ್ಲವಾದಲ್ಲಿ ಅವನ ಡ್ರಾಯಿಂಗ್ ಕೆಲಸಕ್ಕೆ ತೊಂದರೆಯಾಗುತ್ತಿತ್ತು. ಸಣ್ಣ ಸಣ್ಣ ಕಾಲುವೆಗಳನ್ನು ಹಾದು ಹೋದ. ಕಡೆಗೆ ಮೆಂಡೆಸ್ ಡಕೋಸ್ಟಾ ಮನೆಯ ಸಮೀಪ ಇರುವುದರ ಅರಿವಾಯಿತು. ಕಾಲುವೆಯ ದಂಡೆಯ ಮೇಲೆ ಕುಳಿತು

ಒಂದೆರಡು ಕಲ್ಲುಗಳನ್ನು ಅಚ್ಚಹಸುರಿನ ಹಾಸಿನ ಮೇಲೆ ಎಸೆದ. ಅಲ್ಲಿ ನೀರಿರುವುದರ ಸುಳಿವೂ ನೀಡದಂತೆ ಆ ಕಲ್ಲುಗಳು ಮುಳುಗಿದವು.

'ಕೇ' ಬದುಕಿನಿಂದ ದೂರವಾಗಿದ್ದಿರಬಹುದು. ಆದರೆ ಅವನ ಮನಸ್ಸಿನಲ್ಲಿ. ಅವನ ಆತ್ಮದಲ್ಲಿ ಆಳವಾಗಿ ನೆಲೆಗೊಂಡಿದ್ದಳು. ಅವನ ಕಿವಿಗಳಲ್ಲಿ ಅನುರಣಿಸುತ್ತಿದ್ದ, "ಇಲ್ಲ. ಎಂದಿಗೂ ಇಲ್ಲ, ಅವಳನ್ನು ನೋಡಲು ಸಾಧ್ಯವೇ ಇಲ್ಲ, ಅವಳ ಧ್ವನಿಯನ್ನೂ ಕೇಳಲಾರೆ, ಅವಳ ಮುಗುಳ್ನಗೆಯೂ ನಿನಗೆ ಸಿಗಲಾರದು, ಬದುಕಿರುವವರೆಗೆ 'ಪ್ರೀತಿ' ಎನ್ನುವುದನ್ನು ನೀನು ಅನುಭವಿಸಲಾರೆ, ನೀನೆಷ್ಟೇ ನಿನ್ನನ್ನು ಸುಟ್ಟುಕೊಂಡರೂ ನಿನಗೆ ಸಾಧ್ಯವಾಗದು!" – ಎನ್ನುವ ಶಬ್ದಗಳಷ್ಟೇ ಅವನ ಪಾಲಿನ ಆಸ್ತಿಯಾಗಿತ್ತು.

ತೀಕ್ಷ್ಣವಾದ ವೇದನೆಯ ಸ್ವರವೊಂದು ಹೊರಹೊಮ್ಮಿತು. ತನ್ನ ಬಾಯಿಂದ ಹೊಮ್ಮಬಹುದಾಗಿದ್ದ ಚೀರನ್ನು ತಡೆಯಲು ಕೈಯನ್ನು ಬಾಯಿಗೆ ಅಡ್ಡವಾಗಿರಿಸಿದ. ಆ್ಯಮ್‌ಸ್ಟರ್‌ಡ್ಯಾಮ್ ಮತ್ತು ಇಡೀ ಜಗತ್ತು, ತಾನೆಷ್ಟು ನಿಷ್ಪ್ರಯೋಜಕ, ಅಯೋಗ್ಯ ಎನ್ನುವುದನ್ನು ಎಂದಿಗೂ ತಿಳಿಯಬಾರದೆಂಬುದನ್ನು ಮುಚ್ಚಿಡುವಂತೆ, ಬಾಯನ್ನು ಮುಚ್ಚಿರಿಸಿಕೊಂಡ. ಪೂರೈಸಲಾಗದ ಬಯಕೆಯ ಕಹಿಯನ್ನು, ಅವನ ತುಟಿಗಳು ಸವಿಯುತ್ತಿದ್ದವು.



## ಭಾಗ – ಮೂರು

# ಗಂಡಿಗೊಂದು ಹೆಣ್ಣು ಬೇಕು

–೧–

ಮಾವ್ ಇನ್ನೂ ಡ್ರೆಂತ್‌ನಲ್ಲಿಯೇ ಇದ್ದ. ಇಲೆಬೂಮೆನ್‌ನ ನೆರೆಹೊರೆಯಲ್ಲಿ ವಾಸಕ್ಕಾಗಿ ಹುಡುಕಾಡಿದ. ಕಡೆಗೆ ಒಂದು ಜಾಗ ಸಿಕ್ಕಿತು. ವಿನ್ಸೆಂಟ್ ಬರುವ ಮೊದಲು ಅದೊಂದು ಬರೀ ಕೋಣೆ ಮಾತ್ರವಾಗಿತ್ತು. ಈಗ ವಿನ್ಸೆಂಟ್ ಅದನ್ನೇ ಸ್ಟುಡಿಯೋ ಆಗಿ ಪರಿವರ್ತಿಸಿದ, ಸಾಕಷ್ಟು ವಿಶಾಲವಾಗಿತ್ತು. ದಕ್ಷಿಣ ಭಾಗದಲ್ಲಿ ಒಂದು ಕಿಟಕಿಯಿತ್ತು. ಒಂದು ಪಕ್ಕದಲ್ಲಿ ಒಲೆ. ಮತ್ತೊಂದು ಕಡೆ ಬೆಂಕಿಗೂಡು ಇತ್ತು. ವಾಲ್ ಪೇಪರ್ ಕೂಡಾ ಶುಭ್ರವಾಗಿತ್ತು. ಆದರೆ ಹೊರಗಡೆ ರೈನ್ ಸ್ಟೇಷನ್‌ನಿಂದ ಓಡಾಡುವ ಟ್ರೈನ್‌ಗಳಿಂದ ಹೊರಡುತ್ತಿದ್ದ ಹೊಗೆಯಿಂದ ಕಪ್ಪಾಗಿತ್ತು.

ಅಡಿಗೆ ಮನೆಗೆಂದು ಗಟ್ಟಿಯಾಗಿದ್ದ ಮೇಜು, ಒಂದೆರಡು ಕುರ್ಚಿಗಳನ್ನು ತಂದ. ನೆಲದ ಮೇಲೆ ಹಾಸಿಕೊಂಡು ಮಲಗಲು ದಪ್ಪನೆಯ ಬ್ಲಾಂಕೆಟ್ಟನ್ನೂ ಕೊಂಡು ತಂದ. ಇದಕ್ಕೆಲ್ಲ, ತನ್ನಲ್ಲಿದ್ದ ಹಣದಲ್ಲಿ ಸಾಕಷ್ಟು ಖರ್ಚಾಗಿ ಹೋಗಿತ್ತು. ತಿಂಗಳು ಪ್ರಾರಂಭವಾಗುತ್ತಿದ್ದಂತೆ, ಥಿಯೋ ಮಾಸಿಕ ಭತ್ಯೆಯಂತೆ ಕಳಿಸುತ್ತಿದ್ದ ನೂರು ಫ್ರ್ಯಾಂಕ್‌ಗಳ ನೆನಪಿನಿಂದ ಸ್ವಲ್ಪ ಸಮಾಧಾನ! ಜನವರಿಯ ಚಳಿಯಲ್ಲಿ ಹೊರಗೆ ಹೋಗಿ ಡ್ರಾಯಿಂಗ್ ಮಾಡಲು ಸಾಧ್ಯವಾಗುವುದಿಲ್ಲ. ಮಾಡೆಲ್‌ಗಳಿಗೆ ಕೊಡಲು ಸಾಕಷ್ಟು ಹಣವಿರಲಿಲ್ಲ. ಹಾಗಾಗಿ ಒಳಗೇ ಉಳಿದು ಮಾವ್‌ಗಾಗಿ ಕಾಯುವುದರ ಹೊರತು ಬೇರೆ ದಾರಿಯೇ ಇರಲಿಲ್ಲ.

ಮಾವ್ ಇಲೆಬೂಮೆನ್‌ಗೆ ಹಿಂತಿರುಗಿದ. ವಿನ್ಸೆಂಟ್ ಕೂಡಲೇ ತನ್ನ ಕಸಿನ್‌ನ ಸ್ಟುಡಿಯೋಗೆ ಹೋದ. ಮಾವ್ ಬೃಹತ್ತಾದ ಚಿತ್ರಪಟದ ವಸ್ತುವನ್ನೂ ಯೋಚಿಸಿದ್ದ. ಷಿವೆನಿಂಜೆನ್ ಬೀಚ್‌ನಲ್ಲಿ ಮೀನು ಹಿಡಿಯುವ ದೊಡ್ಡ ದೋಣಿಯನ್ನು ಕುದುರೆಗಳೆರಡು ಎಳೆಯುತ್ತಿರುವ ದೃಶ್ಯವನ್ನು ಚಿತ್ರಪಟದಲ್ಲಿ ಬಿಡಿಸುವ ಯೋಜನೆ ಅವನದಾಗಿತ್ತು. ಮಾವ್ ಮತ್ತು ಅವನ ಹೆಂಡತಿಗೆ ವಿನ್ಸೆಂಟ್ ಹೇಗ್‌ಗೆ ಬರುತ್ತಾನೆಂಬ ನಂಬಿಕೆ ಇರಲಿಲ್ಲ. ಯಾಕೆಂದರೆ ಪ್ರತಿಯೊಬ್ಬರೂ ಇಲ್ಲಿಗೆ ಬಂದು ದೊಡ್ಡ ಕಲಾವಿದರಾಗುವ ಕನಸು ಕಾಣುವುದು ಸಾಮಾನ್ಯವಾಗಿತ್ತು.

"ಅಂತೂ ಕೊನೆಗೆ ಹೇಗ್‌ಗೆ ಬಂದೇ ಬಿಟ್ಟೆ ಅನ್ನು! ಒಳ್ಳೇದು ವಿನ್ಸೆಂಟ್. ನಿನ್ನನ್ನು ಒಳ್ಳೆ ಪೈಂಟರ್ ಆಗಿಸಲು ಪ್ರಯತ್ನ ಮಾಡೋಣ..... ಇರುವುದಕ್ಕೆ ಜಾಗ ಎಲ್ಲಿಯಾದರೂ ಸಿಕ್ಕಿದೆಯೇನು?

"ರೈನ್ ಸ್ಟೇಷನ್ ಹಿಂಭಾಗದಲ್ಲಿ ಷೆಂಕ್‌ವೇಗ್‌ನ ೧೩೮ನೇ ನಂಬರ್ ಮನೆಯಲ್ಲಿ ಇದ್ದೇನೆ."

"ಹಾಗಾದರೆ, ಇಲ್ಲಿಗೆ ಹತ್ತಿರವೇ ಆಯ್ತು. ದುಡ್ಡಿಗೆ ಏನು ಮಾಡಿಕೊಂಡಿದ್ದೀಯ?"

"ತುಂಬಾ ದುಡ್ಡೇನೂ ಇಲ್ಲ. ಒಂದು ಮೇಜು, ಎರಡು ಕುರ್ಚಿ ತಗೊಂಡಿದ್ದೀನಿ."

"ಹಾಸಿಗೆ?" ಜೆಟ್ ಕೇಳಿದಳು.

"ಇಲ್ಲ. ಹಾಸಿಗೆ ತಗೊಂಡಿಲ್ಲ. ನೆಲದ ಮೇಲೆ ಮಲಗೋಕೇಂತ ಒಂದು ಬ್ಲಾಂಕೆಟ್ ಕೊಂಡುಕೊಂಡಿದ್ದೀನಿ."

ಮಾವ್ ಸನ್ನೆಯಿಂದ ಹೆಂಡತಿಗೆ ಏನೋ ಹೇಳಿದ. ಜೆಟ್ ಒಳಗೆ ಹೋಗಿ, ಒಂದು ವ್ಯಾಲೆಟ್ ತಂದುಕೊಟ್ಟಳು.

ಮಾವ್ ವ್ಯಾಲೆಟ್ ಒಳಗಿನಿಂದ ನೂರರ ಗಿಲ್ಡರ್ ನೋಟೊಂದನ್ನು ವಿನ್ಸೆಂಟ್ ಕಡೆಗೆ ಚಾಚಿ –"ವಿನ್ಸೆಂಟ್, ಇದನ್ನು ಸಾಲವಾಗಿ ಇರಿಸಿಕೋ. ನನಗಾಗಿ ಒಂದು ಹಾಸಿಗೆ ತಗೋ. ರಾತ್ರಿಹೊತ್ತು ಚೆನ್ನಾಗಿ ನಿದ್ದೆ ಮಾಡಬೇಕು. ಬಾಡಿಗೆ ಕೊಟ್ಟಿದ್ದೀ ಏನು?"

"ಇನ್ನೂ ಇಲ್ಲ."

"ಸರಿ ಅದರ ಬಗ್ಗೆ ಚಿಂತೆ ಬೇಡ. ಬೆಳಕಿನ ವ್ಯವಸ್ಥೆ ಹೇಗಿದೆ?"

"ಬೆಳಕೇನೋ ಸಾಕಷ್ಟಿದೆ. ಆದರೆ ಕಿಟಕಿ ದಕ್ಷಿಣದ ಕಡೆಗಿದೆ."

"ಹಾಗಿದ್ದರೆ ಸರಿ ಹೋಗೊಲ್ಲ. ಕಿಟಕಿಯ ಜಾಗವನ್ನು ಬದಲಾಯಿಸಬೇಕು. ಸೂರ್ಯನ ಬೆಳಕು, ನಿನ್ನ ಮಾಡೆಲ್ಸ್ ಮೇಲೆ ಹತ್ತತ್ತು ನಿಮಿಷಕ್ಕೆ ಬದಲಾಯಿಸುತ್ತದೆ. ಕೆಲವು ಪರದೆಗಳನ್ನೂ ಕೊಂಡುಕೋ."

ನಿಮ್ಮಿಂದ ಸಾಲ ಪಡೆಯುವುದು ನನಗೆ ಇಷ್ಟವಾಗುವುದಿಲ್ಲ ಕಸಿನ್. ನೀನು ನನಗೆ ಕಲಿಸೋದಕ್ಕೆ ಒಪ್ಪಿಕೊಂಡಿರುವುದೇ ದೊಡ್ಡದು!"

"ನಾನ್‌ಸೆನ್ಸ್, ಪ್ರತಿಯೊಬ್ಬರ ಜೀವನದಲ್ಲೂ ಮನೆ ಮಠ ಮಾಡಿಕೊಳ್ಳಬೇಕಾದ ಅಗತ್ಯ ಬಂದೇ ಬರುತ್ತೆ. ಬರ್‍ತಾ ಬರ್‍ತಾ, ನಮ್ಮದೇ ಆದ ಸ್ವಂತದ್ದನ್ನು ಮಾಡಿಕೊಳ್ಳೋಕೆ ಸಾಧ್ಯ ಆಗುತ್ತೆ. ಅಲ್ಲೀಯವರೆಗೆ ಅವರಿವರ ಸಹಾಯ ಬೇಕಾಗುತ್ತೆ.

"ಅದೇನೋ. ನಿಜ. ನನ್ನ ಡ್ರಾಯಿಂಗ್ಸ್ ಅನ್ನು ಮಾರೋದಕ್ಕೆ ಸಾಧ್ಯ ಆಗಬಹುದು ಅಂತ ಅಂದುಕೊಂಡಿದ್ದೇನೆ. ಆಗ ನಿನ್ನ ಸಾಲಾನ ತೀರಿಸ್ತೀನಿ."

"ಟರ್ಸ್‌ಟೀಗ್ ನಿನಗೆ ಸಹಾಯ ಮಾಡುತ್ತಾನೆ. ಮೊದಲಿಗೆ ನಾನು ಇನ್ನೂ ಚಿಕ್ಕವನಾಗಿದ್ದಾಗ, ಆಗಿನ್ನು ಕಲಿಯುವ ಸ್ಥಿತಿಯಲ್ಲಿ ಇದ್ದಾಗಲೇ ನನ್ನ ಪೈಂಟಿಂಗ್ಸ್ ಅನ್ನು ಕೊಂಡು ಕೊಂಡ. ನೀನು ವಾಟರ್ ಕಲರ್ಸ್, ಆಯಿಲ್ ಕಲರ್ಸ್ ಉಪಯೋಗಿಸುವುದನ್ನು ಅಭ್ಯಾಸ ಮಾಡಬೇಕು.

ಮಾವ್ ದಢೂತಿ ದೇಹ ಇಟ್ಟುಕೊಂಡೂ ದಢದಢನೆ ಹೆಜ್ಜೆ ಹಾಕುತ್ತಿದ್ದ. ಏನನ್ನೋ ಹುಡುಕುತ್ತಿದ್ದಂತೆ ಇದ್ದ ಅವನ ಕಣ್ಣು ಒಂದು ಕಡೆ ನಿಂತಿತು. ಆ ದಿಕ್ಕಿಗೆ ನಡೆದು, ಕೈ ಚಾಚಿ ಏನನ್ನೋ ಎತ್ತಿಕೊಂಡ.

"ಹಾಂ! ನೋಡು, ವಿನ್ಸೆಂಟ್, ಇಲ್ಲಿದೆ ಪೈಂಟಿಂಗ್ ಬಾಕ್ಸ್. ಇದರಲ್ಲಿ ಕೆಲವು ವಾಟರ್ ಕಲರ್ಸ್ ಇದೆ. ಜೊತೆಗೆ ಬ್ರಷ್‌ಗಳೂ, ಪ್ಯಾಲೆಟ್ ಎಲ್ಲಾ ಇವೆ. ನಿನ್ನ ಈಸಲ್ ಮುಂದೆ ಪ್ಯಾಲೆಟ್ ಹೇಗೆ ಇಟ್ಟುಕೋಬೇಕು ಅನ್ನೋದನ್ನು ತೋರಿಸಿಕೊಡ್ತೀನಿ, ನೋಡು."

ಮಾವ್ ವಿನ್ಸೆಂಟ್‌ಗೆ ಪೈಂಟಿಂಗ್‌ನ ಕೆಲವು ಪ್ರಾಥಮಿಕ ಪಾಠಗಳನ್ನು ತಿಳಿಸಿಕೊಟ್ಟ; ಪೈಂಟಿಂಗ್ ಮಾಡುವ ಕ್ರಮವನ್ನು ತೋರಿಸಿಯೂ ಕೊಟ್ಟ. ವಿನ್ಸೆಂಟ್ ಬಹಳ ಬೇಗನೆ ಗ್ರಹಿಸಿದ.

"ಓಹ್. ವೆರಿಗುಡ್! ನಿನಗೆ ತಲೆ ಇಲ್ಲ ಅಂತ ಅಂದುಕೊಂಡಿದ್ದೆ. ಆದರೆ ನನ್ನ ಭಾವನೆ ಸುಳ್ಳೂಂತ ಈಗ ತಿಳೀತು. ಬೆಳಿಗ್ಗೆ ಹೊತ್ತು ಇಲ್ಲಿಗೆ ಬಂದು, ವಾಟರ್ ಕಲರ್ಸ್ ಜೊತೆ ಅಭ್ಯಾಸ ಮಾಡು. 'ಪುಲ್ಕ್ರಿ' ಸಂಸ್ಥೆಯಲ್ಲಿ ವಿಶೇಷ ಸದಸ್ಯತ್ವಕ್ಕೆ ನಿನ್ನ ಹೆಸರನ್ನು ಸೂಚಿಸುತ್ತೇನೆ. ಅಲ್ಲಿ ಬೇಕಾದಷ್ಟು ಡ್ರಾಯಿಂಗ್ಸ್ ಮಾಡಬಹುದು; ಜೊತೆಗೆ ಬೇರೆ ಬೇರೆ ಕಲಾವಿದರ ಜೊತೆಗೆ ಸ್ನೇಹ ಮಾಡಬಹುದು, ಅವರಿಂದ ಎಷ್ಟೋ ವಿಷಯಗಳನ್ನು ಕಲೀಬಹುದು. ನಿನ್ನ ಡ್ರಾಯಿಂಗ್ಸ್ ಮಾರಾಟವಾಗೋಕೆ ಶುರುವಾದ ಕೂಡಲೇ ಶಾಶ್ವತ ಸದಸ್ಯತ್ವ ಪಡೆಯುವಿಯಂತೆ."

"ಹೌದು, ನಾನು ಮಾಡಲ್ ಇಟ್ಟುಕೊಂಡು ಮಾಡಬೇಕೆಂದಿದ್ದೇನೆ. ಪ್ರತಿದಿನಾ ಬರೋದಕ್ಕೆ ಯಾರನ್ನಾದರೂ ಗೊತ್ತುಮಾಡಿಕೊಳ್ತೇನೆ. ಜೀವಂತ ಮನುಷ್ಯನ ಆಕೃತಿಯನ್ನು ಸಮರ್ಪಕವಾಗಿ ಸೃಷ್ಟಿಸಲು ಸಾಧ್ಯವಾದರೆ ಮಿಕ್ಕಿದ್ದು ತನಗೆ ತಾನೇ ಬರುತ್ತೆ!"

"ಹೌದು ಅದೇ ರೀತಿ ಮಾಡಬೇಕಾದ್ದು." ಮಾವ್ ತನ್ನ ಒಪ್ಪಿಗೆಯನ್ನು ಸೂಚಿಸಿದ.

"ಮನುಷ್ಯನ ಆಕೃತಿಯನ್ನು ಸಾಧಿಸುವುದು ಬಹಳ ಕಷ್ಟ. ಒಂದು ಸಲ ಅದು ಸಾಧ್ಯವಾಯಿತೂಂದ್ರೆ, ಮರಗಿಡ, ಪಶು, ಪಕ್ಷಿ, ಸೂರ್ಯಾಸ್ತ ಇತ್ಯಾದಿ ಎಲ್ಲವೂ ಸರಳ, ಸುಲಭವಾಗುತ್ತದೆ. ಬಹಳ ಜನ ಇದನ್ನು ಮರೀತಾರೆ. ಅವರಿಗೆ ಮನುಷ್ಯಾಕೃತಿ ಸುಲಭವಾಗಿ ಕೈಗೆ ಎಟುಕುವುದಿಲ್ಲವಾದ್ದರಿಂದ, ಅದನ್ನು ಬಿಟ್ಟೇ ಬಿಡುತ್ತಾರೆ.

ವಿನ್ಸೆಂಟ್ ಹಾಸಿಗೆ, ಪರದೆಗಳು ವೊದಲಾದ್ದನ್ನು ಕೊಂಡುಕೊಂಡ. ಮನೆಬಾಡಿಗೆಯನ್ನೂ ಚುಕ್ತಾ ಮಾಡಿದ. ಬ್ರಬ್ಯಾಂಟ್‌ನಲ್ಲಿ ಮಾಡಿದ್ದ ಸ್ಕೆಚ್‌ಗಳನ್ನು ಗೋಡೆಯ ಮೇಲೆ ತೂಗು ಹಾಕಿದ. ಅವುಗಳು ಅಷ್ಟೊಂದು ಉತ್ತಮವಾಗಿಲ್ಲವಾದರೂ ಅವುಗಳಲ್ಲಿ ಏನೋ ವಿಶೇಷತೆ, ಸತ್ವ ಇದೆಯೆಂದು ಭಾವಿಸಿದ್ದ. ಅಲ್ಲದೆ ಅವೆಲ್ಲವುಗಳ ಹಿಂದೆ ತನ್ನ ತೀವ್ರ ಸಂವೇದನೆಗಳು ಕೆಲಸ ಮಾಡಿದ್ದವು. ಅವು ಹೇಗೆ ಮೂಡಿಬಂದವು ಎನ್ನುವುದು ಅವನ ಅರಿವಿಗೂ ಬಂದಿರಲಿಲ್ಲ. ಡಿ ಬಾಕ್‌ನ ಸ್ನೇಹ ಲಭಿಸುವವರೆಗೂ ಅವುಗಳ ಬೆಲೆ ಏನೆಂದು ಗೊತ್ತಿರಲಿಲ್ಲ.

ಡಿ ಬಾಕ್ ಆಕರ್ಷಕ ವ್ಯಕ್ತಿಯಾಗಿದ್ದ. ಒಳ್ಳೆ ಮನೆತನದಲ್ಲಿ ಹುಟ್ಟಿದ ಬಹಳ ಸುಸಂಸ್ಕೃತ ಸ್ವಭಾವದವನಾಗಿದ್ದ. ಅವನಿಗೆ ಸ್ಥಿರವಾದ ಆದಾಯವಿತ್ತು. ಇಂಗ್ಲೆಂಡಿನಲ್ಲಿ ಶಿಕ್ಷಣ ಪಡೆದಿದ್ದ. ವಿನ್ಸೆಂಟ್‌ಗೆ, ಗೂಪಿಲ್ಸ್‌ನಲ್ಲಿದ್ದಾಗ ಅವನ ಪರಿಚಯವಾಗಿತ್ತು. ವಿನ್ಸೆಂಟ್‌ನ ಸ್ವಭಾವಕ್ಕೆ ತದ್ವಿರುದ್ಧ ಸ್ವಭಾವದವನಾಗಿದ್ದ. ಬದುಕನ್ನು ಅವನು ಸಹಜವಾಗಿ

ತೆಗೆದುಕೊಂಡಿದ್ದ. ಆಕ್ರೋಶ, ಆವೇಶ, ಭಾವುಕತೆಗಳಿಂದ ಎಂದೂ ವಿಚಲಿತನಾಗುತ್ತಿರಲಿಲ್ಲ. ಒಟ್ಟಿನಲ್ಲಿ ಅವನದು ಬಹಳ ನಾಜೂಕಿನ ಸ್ವಭಾವವಾಗಿತ್ತು.

"ನನ್ನ ಜೊತೆ ಚಹಾಕ್ಕೆ ಬರಬಹುದಲ್ಲ?" – ವಿನ್ಸೆಂಟನನ್ನು ಆಹ್ವಾನಿಸಿದ. ನನ್ನ ಕೆಲವು ಹೊಸದಾಗಿ ಮಾಡಿದ ಪೈಂಟಿಂಗ್ಸ್ ನಿನಗೆ ತೋರಿಸಬೇಕಾಗಿದೆ. ಈಗ ನನ್ನಲ್ಲಿ ಮತ್ತೊಂದು ಹೊಸ ಅಭಿರುಚಿ ಮೂಡಿದೆ. ಟರ್ಸ್‌ಟೀಗ್ ನನ್ನ ಕೃತಿಗಳನ್ನು ಮಾರಾಟ ಮಾಡುತ್ತಿದ್ದಾನೆ."

ಶ್ರೀಮಂತರ ಬಡಾವಣೆಯಾಗಿದ್ದ, ಹೇಗ್‌ನಲ್ಲಿನ ವಿಲ್ಲೆಮ್ಸ್ ಪಾರ್ಕ್‌ನಲ್ಲಿ ಅವನ ಸ್ಟುಡಿಯೋ ಇತ್ತು. ಗೋಡೆಗಳಿಗೆ ವೆಲ್ವೆಟ್ ಪರದೆಗಳನ್ನು ಇಳಿಬಿಟ್ಟಿದ್ದ. ಅದ್ದೂರಿಯಾದ, ಮೆತ್ತನೆಯ ಸುಖಾಸನಗಳು, ವೈಭವಯುತ ಪರಿಸರವನ್ನು ನಿರ್ಮಾಣಮಾಡಿದ್ದವು. ಹೊಗೆ ಸೇದಲೆಂದೇ ಪ್ರತ್ಯೇಕವಾದ ಮೇಜುಗಳು, ಪುಸ್ತಕದ ಕಪಾಟುಗಳು, ಬೆಲೆಯುಳ್ಳ ರಗ್ಗುಗಳು, – ಎಲ್ಲವ್ನ ನೋಡಿದಾಗ, ತನ್ನ ಸ್ಟುಡಿಯೋ anchorite ಮಾದರಿಯದೆನಿಸಿತು.

ಅವನು ರಷ್ಯನ್‌ಮಾದರಿಯ ಒಲೆಯನ್ನು ಹಚ್ಚಿದ. ಕೆಲಸದವಳನ್ನು ಕೇಕ್ ತರಲೆಂದು ಕಳಿಸಿದ. ಅಲಮಾರಿಯೊಳಗಿಂದ ಚಿತ್ರಪಟವೊಂದನ್ನು ಹೊರತೆಗೆದು ಈಸಲ್ ಮೇಲೆ ಇರಿಸಿ, "ಇದು ನನ್ನ ಇತ್ತೀಚಿನ ಕೃತಿ.... ಇದನ್ನು ನೋಡ್ತಾ, ಸಿಗರೇಟಾನಾದ್ರೂ ಸೇದುವೆಯೇನು? ಗಮನಿಸಲು ಸಹಾಯ ಆಗಬಹುದು. ಗೊತ್ತಿಲ್ಲ!.... ಹೇಳೋಕಾಗಲ್ಲ.... ಏನಾದರೂ ಹೊಳೀಬಹುದು."

ಅವನು ತಮಾಶೆಯಾಗಿ ಮಾತನಾಡಿದ. ಟರ್ಸ್‌ಟೀಗ್ ಅವನ ಪ್ರತಿಭೆಯನ್ನು ಗುರುತಿಸಿದ್ದೇ, ಅವನ ಆತ್ಮವಿಶ್ವಾಸಕ್ಕೆ ಎಣೆಯಿಲ್ಲದಂತಾಯಿತು. ವಿನ್ಸೆಂಟ್‌ಗೆ ಈ ಪೈಂಟಿಂಗ್ ಇಷ್ಟವಾಗುತ್ತೆ ಅಂತ ಭಾವಿಸಿದ್ದ. ರಷ್ಯನ್ ಮಾದರಿಯ ಉದ್ದನೆಯ ಸಿಗರೇಟನ್ನು ಹೊರತೆಗೆದ. ಈ ಮಾದರಿಯ ಸಿಗರೇಟಿಗೆ ಹೇಗ್‌ನಲ್ಲಿ ಅವನು ಹೆಸರುವಾಸಿಯಾಗಿದ್ದ. ತನ್ನ ಕೃತಿಯ ಬಗ್ಗೆ ಏನು ಅಭಿಪ್ರಾಯ ಹೇಳವನೋ ಎಂದು ಅವನನ್ನೇ ಗಮನಿಸುತ್ತಿದ್ದ.

ಡಿ ಬಾಕ್ ನೀಡಿದ್ದ ಸ್ಪೆಷಲ್ ಸಿಗರೇಟಿನ ಹೊಗೆ ಸೇವಿಸುತ್ತಾ, ಈಸಲ್ ಮೇಲಿನ ಚಿತ್ರವನ್ನು ಗಂಭೀರವಾಗಿ ಗಮನಿಸುತ್ತಿದ್ದ. ತನ್ನ ಕಲೆಯನ್ನು ಮೊದಲ ಬಾರಿ ಒಬ್ಬ ಹೊಸಬನಿಗೆ ತೋರಿಸಿದಾಗ ಎಂಥ ಅಭಿಪ್ರಾಯ ಹೊರಬರುತ್ತೋ ಎಂಬ ಅಳುಕಿನ ಭಯಂಕರ ಕ್ಷಣ ಸ್ಥಿತಿಯಲ್ಲಿರುವಂತೆ 'ಡಿ ಬಾಕ್' ವಿನ್ಸೆಂಟ್‌ನ ಅಭಿಪ್ರಾಯವನ್ನು ಎದುರು ನೋಡುತ್ತಿದ್ದ. ಆದರೆ ಅವನಿಗೆ ಹೇಳುವುದಕ್ಕೇನಿದೆ. ನಿಸರ್ಗದೃಶ್ಯ ಅಂಥ ಕೆಟ್ಟದ್ದಾಗಿ ಇರಲಿಲ್ಲ. ಹಾಗಂತ ತುಂಬ ಚೆನ್ನಾಗಿಯೂ ಇರಲಿಲ್ಲ. ಹೆಚ್ಚು ಕಡಿಮೆ ಅವನ ವ್ಯಕ್ತಿತ್ವದ ಹಾಗೆ ಸಹಜವಾಗಿತ್ತು. ಯಾರಾದರೂ ಇನ್ನೂ ಕಲಿಯಲು ಆರಂಭಿಸಿದ್ದವನು ವಿಮರ್ಶೆಮಾಡುವ ಧೈರ್ಯ ಮಾಡಿದರೆ, ಎಷ್ಟು ಭಯಂಕರವಾಗಿ ಸಿಟ್ಟುಗೊಳ್ಳಬಹುದು ಎಂಬುದು ನೆನಪಾಯಿತು. ಒಂದೇ ಸಲಕ್ಕೆ ಆ ಕ್ಯಾನ್‌ವಾಸನ್ನು ನೋಡಿ ಮುಗಿಸಬಹುದಾಗಿತ್ತಾದರೂ, ವಿನ್ಸೆಂಟ್ ಗಂಭೀರವಾಗಿ ಅಧ್ಯಯನ ಮಾಡಲು ತೊಡಗಿದ.

"ಲ್ಯಾಂಡ್‌ಸ್ಕೇಪ್‌ಗಳ ಬಗ್ಗೆ ನಿನ್ನ ಆಸಕ್ತಿ ಇದೆ ಡಿ ಬಾಕ್. ಅದರಲ್ಲಿ ಮೋಹಕತೆಯನ್ನು ಹೇಗೆ ತುಂಬಿಸಬಹುದು ಅನ್ನುವುದು ನಿನಗೆ ಚೆನ್ನಾಗಿ ಕರಗತವಾಗಿದೆ."

ವಿನ್ಸೆಂಟ್‌ನ ಅಭಿಪ್ರಾಯವನ್ನು ಪ್ರಶಂಸೆಯೆಂದೇ ಭಾವಿಸಿ, "ಥ್ಯಾಂಕ್ಸ್, ವಿನ್ಸೆಂಟ್!... ಒಂದು ಕಪ್ ಚಹಾ ಆಗಬಹುದಲ್ಲ!"

ವಿನ್ಸೆಂಟ್, ಅಮೂಲ್ಯವಾದ ರಗ್ಗಿನ ಮೇಲೆ ಟೀ ಎಲ್ಲಿ ಚೆಲ್ಲುತ್ತದೋ ಎಂಬ ಹೆದರಿಕೆಯಿಂದ ಟೀ ಕಪ್ಪನ್ನು ಎರಡೂ ಕೈಗಳಿಂದ ಭದ್ರವಾಗಿ ಹಿಡಿದುಕೊಂಡ, ಡಿ ಬಾಕ್ ಹೋಗಿ ತನಗೂ ಒಂದು ಕಪ್ ತಂದುಕೊಂಡ, ಡಿ ಬಾಕ್‌ನ ಕೃತಿಯ ಬಗ್ಗೆ ಟೀಕೆ ಎನಿಸಬಹುದಾದ ಯಾವ ಮಾತನ್ನೂ ಆಡಬಾರದೆಂದು ಪ್ರಯತ್ನ ಪೂರ್ವಕವಾಗಿ ತಡೆದುಕೊಂಡ. ಡಿ ಬಾಕ್ ತುಂಬ ಒಳ್ಳೆಯ ಮನುಷ್ಯ. ಅವನ ಸ್ನೇಹವನ್ನು ಬಯಸಿದ್ದ. ಆದರೆ ಅವನೊಳಗಿನ ವಿಮರ್ಶಕ ಮನಸ್ಸನ್ನು ತಡೆಹಿಡಿಯಲು ಸಾಧ್ಯವಾಗಲಿಲ್ಲ.

"ನಿನ್ನ ಕ್ಯಾನ್‌ವ್ಯಾಸ್‌ನಲ್ಲಿ ಎಲ್ಲಾ ಸರಿ.....ಆದರೆ ಒಂದೇ ಒಂದು....."

ಡಿ. ಬಾಕ್ ಕೇಕ್ ಇದ್ದ ಟ್ರೇಯನ್ನು ವಿನ್ಸೆಂಟ್‌ನ ಮುಂದೆ ತಂದು, ಬ್ರದರ್ ಒಂದು ಪೀಸ್ ತಗೋ" – ಎಂದ.

ಟೀನೂ ಕುಡೀತಾ, ಕೇಕನ್ನು ತೊಡೆ ಮೇಲೆ ಇಟ್ಟುಕೊಂಡು, ಕ್ಯಾನ್‌ವಾಸ್ ಗಮನಿಸೋದು ಹೇಗೇಂತ ಗೊತ್ತಾಗದೆ, ಕೇಕನ್ನು ಬೇಡವೆಂದ.

"ಸರಿ, ನಿನಗೆ ಇದರಲ್ಲಿ ಏನು ಇಷ್ಟವಾಗಲಿಲ್ಲ ಹೇಳು" – ಎಂದು ಸಹಜವಾಗಿ ಪ್ರಶ್ನಿಸಿದ.

"ನಿನ್ನ ಆಕೃತಿಗಳು. ಅವು ಅಧಿಕೃತ, ಯಥಾರ್ಥ ಅಂತ ಅನಿಸುತ್ತಿಲ್ಲ."

"ಅದು ಯಾಕೇಂತ ಹೇಳ್ತೀನಿ ನೋಡು. ನಾನು ಮಾಡುವಾಗ ಎಷ್ಟೋ ಸಲ ಅವುಗಳನ್ನು ಸರಿಯಾಗಿ ಮೂಡಿಸಲು ಸೆರೆ ಹಿಡಿಯಲು ಪ್ರಯತ್ನಿಸುತ್ತೇನಾದರೂ, ಯಾಕೋ ಏನೋ ನನ್ನ ಹಿಡಿತಕ್ಕೆ ಸಿಗುತ್ತಿಲ್ಲ. ಮಾಡೆಲ್ಸ್ ಇರಿಸಿಕೊಂಡು ಕೆಲವಷ್ಟು ದಿನ ಪ್ರಯತ್ನ ಪಡ್ತೇನೆ. ಆದರೆ ಯಾಕೋ ಏನೋ ನನ್ನ ಮನಸ್ಸು ಯಾವಾಗಲೂ ಲ್ಯಾಂಡ್‌ಸ್ಕೇಪ್‌ಗಳ ಕಡೆಗೇ ಹೋಗುತ್ತೆ. ಅಲ್ಲದೆ ಲ್ಯಾಂಡ್‌ಸ್ಕೇಪ್‌ಗಳೇ ನನ್ನ ಕಲಾಭಿವ್ಯಕ್ತಿಯ ಮಾಧ್ಯಮ. ಆದ್ದರಿಂದ ಮನುಷ್ಯರ, ಪ್ರಾಣಿಗಳ ಆಕೃತಿಗಳಿಗೆ ನಾನು ಅಷ್ಟಾಗಿ ಗಮನಕೊಡೊಲ್ಲ. ಕೊಡಬೇಕಾಗಿಲ್ಲ ತಾನೇ ವಿನ್ಸೆಂಟ್!?"

"ನಾನೂ ಲ್ಯಾಂಡ್‌ಸ್ಕೇಪ್ಸ್ ಮಾಡುತ್ತೇನೆ. ಆದರೆ ಅದರೊಳಗೇ ಆಕೃತಿಯೊಂದನ್ನಾದರೂ ತರುವ ಪ್ರಯತ್ನ ಮಾಡುತ್ತೇನೆ. ಹಾಗೆ ನೋಡಿದರೆ ನೀನು ನನಗಿಂತ ಬಹಳ ಮುಂದಿದ್ದೀಯ. ನೀನೊಬ್ಬ ಕಲಾಕಾರನೆಂದು ಜನರೂ ಒಪ್ಪಿಕೊಂಡಿದ್ದಾರೆ. ಸ್ನೇಹಿತನಾಗಿ ನಾನೊಂದು ಮಾತನ್ನು ಹೇಳಲೇನು?"

"ಖಂಡಿತವಾಗಿಯೂ"

"ಹಾಗಾದರೆ ಕೇಳು, ನಿನ್ನ ಪೈಂಟಿಂಗ್‌ನಲ್ಲಿ (ಪ್ಯಾಷನ್) ಭಾವನೆಗಳ ತೀವ್ರತೆ ಕಾಣುವುದಿಲ್ಲ."

"(ಪ್ಯಾಷನ್?)..... ಭಾವನೆಗಳ ತೀವ್ರತೆ? ಎಲ್ಲಿ, ಎಂತಹ ಭಾವನೆಗಳು? ಯಾವ ಭಾವನೆಯನ್ನು ಸೂಚಿಸುತ್ತಿದ್ದೀಯ?" ಅವನತ್ತ ನೋಡುತ್ತಾ ಹೇಳಿದ.

"ಹೇಗೆ, ಎಲ್ಲಿ, ಯಾವುದೂಂತ ತೋರಿಸಲು ಸಾಧ್ಯವಿಲ್ಲವಾದರೂ, ನನ್ನ ಅಭಿಪ್ರಾಯದಲ್ಲಿ, ಭಾವನೆಗಳಲ್ಲಿ ಇನ್ನಷ್ಟು ಗಾಢತೆಯ ಅಗತ್ಯವಿದೆ ಎನಿಸುತ್ತೆ."

"ವಿನ್ಸೆಂಟ್, ಭಾವನೆಗಳನ್ನು, ಜನ ಬಯಸುತ್ತಾರೇಂತ ಕ್ಯಾನ್‌ವಾಸ್‌ನ ತುಂಬ ಚೆಲ್ಲುವುದು ಸಾಧ್ಯವಿಲ್ಲ. ಹೌದಲ್ಲ! ನಾನು ನೋಡಿದ್ದು, ನನಗೆ ಅನಿಸಿದ್ದನ್ನು ಮಾತ್ರವೇ ನಾನು ಪೈಂಟ್ ಮಾಡ್ತೀನಿ, ಅದೂ ಇದೂ ಭಾವನೆಗಳೂಂತ ನನ್ನ ಬ್ರಷ್‌ನಿಂದ ಇಲ್ಲಿ ತುಂಬಲಿಕ್ಕೆ ಸಾಧ್ಯವಿಲ್ಲ. ಅದು ಯಾವುದೇ ಅಂಗಡೀಲಿ ಸಿಗುವಂಥಾದ್ದೂ ಅಲ್ಲ, ಕೊಂಡ್ಕೊಳ್ಳೋಕೆ." – ಎಂದು ತನ್ನ ಕ್ಯಾನ್‌ವಾಸನ್ನು ಸರಿಮಾಡುತ್ತಾ ಹೇಳಿದ.

ಡಿ ಬಾಕ್‌ನ ಸ್ಟುಡಿಯೋ ಮುಂದೆ ತನ್ನ ಸ್ಟುಡಿಯೋ ಏನೇನೂ ಅಲ್ಲ. ಆದರೂ ಅದಕ್ಕೆ ಅದರದೇ ಆದ ಪಾವಿತ್ರ್ಯತೆ ಇದೆ. ಹಾಸಿಗೆಯನ್ನು ಮೂಲೆಗೆ ಸರಿಸಿ ಅಡಿಗೆ ಪಾತ್ರೆಗಳನ್ನು ಮರೆಮಾಚಿದ. ತನ್ನ ಮನೆ ವಾಸದ ಮನೆಯಾಗಿ ಕಾಣಿಸದೆ ಸ್ಟುಡಿಯೋ ಆಗಿ ಕಾಣಿಸಬೇಕೆಂದು ಪ್ರಯತ್ನಿಸುತ್ತಿದ್ದ. ಥಿಯೋನಿಂದ ಬರಬೇಕಾಗಿದ್ದ ಹಣ ಬಂದಿರಲಿಲ್ಲ. ಆದರೆ ಮಾವ್ ಕಡವಾಗಿ ಕೊಟ್ಟಿದ್ದ ಹಣದಲ್ಲಿ ಇನ್ನೂ ಕೆಲವು ಫ್ರ್ಯಾಂಕ್ಸ್ ಉಳಿದಿದ್ದವು. ಆ ಹಣವನ್ನು ಮಾಡೆಲ್ಸ್‌ಗೆ ಬಾಡಿಗೆ ಕೊಡಲು ಬಳಸಿಕೊಳ್ಳುತ್ತಿದ್ದ. ತನ್ನ ಸ್ಟುಡಿಯೋದಲ್ಲಿ ಸ್ವಲ್ಪ ಹೊತ್ತಿದ್ದ. ಅಷ್ಟರಲ್ಲಿ ಮಾವ್ ಅವನನ್ನು ಭೇಟಿಯಾಗಲು ಬಂದ.

"ಇಲ್ಲಿಗೆ ಬರೋಕೆ ನನಗೆ ಕೇವಲ ಹತ್ತು ನಿಮಿಷ ಮಾತ್ರ ಹಿಡಿಸಿತು." ಎಂದು ಸುತ್ತಲೂ ಕಣ್ಣು ಹಾಯಿಸುತ್ತ ಹೇಳಿದ. "ಹೂಂ! ಇದೀಗ ಸರಿಯಾಗಿದೆ. ಉತ್ತರದ ಕಡೆಯಿಂದ ಬೆಳಕು ಬೇಕು. ಆದರೂ ಪರವಾಗಿಲ್ಲ. ಯಾರ್‍ಯಾರು ನಿನ್ನನ್ನು ಅಮೆಚೂರ್ ಅಂತ ಕರೀತಿದ್ದರೋ, ಅವರಿಗೆ ಈಗ ಒಳ್ಳೆ ಅಭಿಪ್ರಾಯ ಬರೋ ಸಾಧ್ಯತೆ ಇದೆ. ಮಾಡೆಲ್ ಇರಿಸಿಕೊಂಡು ಡ್ರಾ ಮಾಡ್ತಿದ್ದೇಂತ ಅನ್ಸತ್ತೆ!"

"ಹೌದು ಪ್ರತಿದಿನಾ ಹೀಗೇನೆ. ಆದರೆ ತುಂಬಾ ಖರ್ಚಾಗುತ್ತೆ."

"ಆ ಮೇಲೆ ನೋಡು, ಕಡೆಗೆ ಬಹಳ ಅಗ್ಗ ಅಂತ ನಿನಗೇ ಗೊತ್ತಾಗುತ್ತೆ. ವಿನ್ಸೆಂಟ್, ನಿನಗೆ ಹಣ-ಗಿಣ ಬೇಕಾಗುತ್ತೋ ಹೇಗೆ?"

"ಥ್ಯಾಂಕ್ಯೂ ಕಸಿನ್. ಪರವಾಗಿಲ್ಲ, ಹೇಗೋ ನಡೆಯುತ್ತೆ."

ಮಾವ್‌ಗೆ ಹಣದಿಂದಾಗಿ ಹೊರೆಯಾಗುವುದು ಬೇಡವೆನಿಸಿತು. ಒಂದು ದಿನಕ್ಕೆ ಮಾತ್ರ ಸಾಕಾಗುವಂತೆ, ಒಂದೇ ಒಂದು ಫ್ರ್ಯಾಂಕ್ ಅವನ ಜೇಬಿನಲ್ಲಿತ್ತು. ಮಾವ್‌ನಿಂದ ಉಚಿತವಾಗಿ ಪಾಠ ಹೇಳಿಸಿಕೊಳ್ಳುವ ವಿಚಾರದಲ್ಲಿದ್ದ. ಹಣ ಮುಖ್ಯವಾಗಿರಲಿಲ್ಲ.

ಮಾವ್ ವಾಟರ್ ಕಲರ್ಸ್ ಹೇಗೆ ಬಳಸುವುದು, ಹೇಗೆ ಅದನ್ನು ವಾಷ್ ಮಾಡುವುದು, ಮೊದಲಾದ ಕೆಲಸಗಳನ್ನು ಹೇಳಿಕೊಟ್ಟ. ಆದರೆ ವಿನ್ಸೆಂಟ್ ಕಲಸು ಮೇಲೋಗರ ಮಾಡಿಬಿಟ್ಟ.

"ಇದರಿಂದ ಮನಸ್ಸು ಕೆಡಿಸಿಕೊಳ್ಳಬೇಡ. ಬ್ರಷ್ ಅನ್ನು ಸರಿಯಾಗಿ ಹಿಡಿದು ಡ್ರಾಯಿಂಗ್ ಮಾಡೋದನ್ನ ಕಲಿಯೋಕೆ ಮುಂದೆ ಹತ್ತೆಂಟು ಡ್ರಾಯಿಂಗ್‌ಗಳು ಹಾಳಾಗುವುದು ಸಹಜ. ಇರಲಿ. ಇತ್ತೀಚಿನ ನಿನ್ನ ಬ್ರಬಾಂಟ್ ಸ್ಕೆಚ್‌ಗಳನ್ನು ಸ್ವಲ್ಪ ನೋಡೋಣ, ತೆಗಿ."

ವಿನ್ಸೆಂಟ್ ಅವುಗಳನ್ನು ತಂದ. ಮಾವ್, ಸ್ಕೆಚ್‌ನಲ್ಲಿ ಇರಬಹುದಾದ ದೋಷಗಳನ್ನು ತತ್‌ಕ್ಷಣ ಪತ್ತೆ ಹಚ್ಚುವಷ್ಟು ಪ್ರೌಢಿಮೆ ಪಡೆದಿದ್ದ. ಅದಕ್ಕೇ ಅವನು ಕೂಡಲೇ "ನೋಡು, ಇಲ್ಲಿ ತಪ್ಪಾಗಿದೆ" ಎಂದು ಬೆರಳಿಟ್ಟು ತೋರಿಸಿದ. "ಇದನ್ನು ಹೀಗೆ ಮಾಡು" ಎಂದು ಪ್ರತ್ಯಕ್ಷವಾಗಿ ಮಾಡಿ ತೋರಿಸಿದ. ವಿನ್ಸೆಂಟ್ ಗಮನವಿಟ್ಟು ಕೇಳಿಸಿಕೊಂಡ. ತಾನೇ ತಪ್ಪುಮಾಡಿದರೆ, ತನಗೆ ತಾನೇ ಹೇಗೆ ಮಾಡಬೇಕು ಎಂದು ನಿರ್ದೇಶಿಸಿಕೊಳ್ಳುತ್ತಿದ್ದನೋ ಅದೇ ಧಾಟಿಯಲ್ಲಿ ಹೇಳುತ್ತಿದ್ದಾನೆ ಎನಿಸಿತು ವಿನ್ಸೆಂಟ್‌ಗೆ.

"ನಿನಗೆ ಡ್ರಾ ಮಾಡೋಕೆ ಸಾಧ್ಯವಾಗುತ್ತೆ. ನಿನ್ನ ಪೆನ್ಸಿಲ್ ಸ್ಕೆಚ್‌ಗೂ ಬೆಲೆ ಬರುತ್ತೆ. ಖಂಡಿತವಾಗಿಯೂ ಟರ್ಸ್‌ಟೀಗ್ ನಿನ್ನ 'ವಾಟರ್‌ಕಲರ್ಸ್' ಕೊಂಡುಕೊಳ್ಳುತ್ತಾನೆ. ಅದೇನೂ ನನಗೆ ಆಶ್ಚರ್ಯಾಂತ ಅನಿಸೋದಿಲ್ಲ."

ಮಾವ್‌ನ ಸಮಾಧಾನದ ಮಾತುಗಳು, ಪ್ರಶಂಸೆ ಯಾವುದೂ ಅವನಿಗೆ ಒಳ್ಳೇದನ್ನು ಮಾಡಲಿಲ್ಲ. ಅವನ ಜೇಬಿನಲ್ಲಿ ಒಂದು ಸೆಂಟೀಮ್ ಕೂಡಾ ಇರಲಿಲ್ಲ. ತಿಂಗಳು ಕಳೆದು ದಿನಗಳೇ ಆಗಿದ್ದರೂ ಥಿಯೋನಿಂದ ಹಣ ಬಂದಿರಲಿಲ್ಲ. ಅವನಿಗೆ ಯೋಚನೆಗೆ ಇಟ್ಟುಕೊಂಡಿತು. ಅವನ ಮನಸ್ಸಿನಲ್ಲಿ ಹಲವಾರು ಪ್ರಶ್ನೆಗಳು ಎದ್ದವು. ಏನಾಗಿರಬಹುದು? ಯಾಕಿರಬಹುದು? ನನ್ನ ಬಗ್ಗೆ ಥಿಯೋ ಸಿಟ್ಟಾಗಿರಬಹುದೇ? ಅಥವಾ ಯಾಕೆ ಕಳಿಸಬೇಕು ಎಂದು ಸುಮ್ಮನಾದನೇ? ಈಗ ತಾನೇ ಒಂದು ಹಂತಕ್ಕೆ, ಸ್ಥಿಮಿತಕ್ಕೆ ಬರುತ್ತಿರುವಾಗ ಹೀಗಾದರೆ ಮುಂದೆ ಹೇಗೆ?.... ಜೇಬಿನಲ್ಲಿ ಒಂದು ಸ್ಟ್ಯಾಂಪ್ ಸಿಕ್ಕಿತು. ಅದರ ಮೇಲೇ, ಹಣ ಕಳಿಸಬೇಕೆಂದು ವಿನಂತಿಸುತ್ತಾ ಥಿಯೋಗೆ ಬರೆದ. ಕಳಿಸುತ್ತಿದ್ದುದರಲ್ಲಿ, ಸ್ವಲ್ಪ ಭಾಗವನ್ನಾದರೂ ಮಾಡೆಲ್‌ಗಳಿಗೆ ನೀಡಲು ಕಳಿಸಿಕೊಡುವಂತೆ ಬೇಡಿದ್ದ.

ಊಟ, ತಿಂಡಿ ಇಲ್ಲದೆ ಮೂರು ದಿನ ಕಳೆದ. ಅಲ್ಲಿ ಇಲ್ಲಿ ಮೂರನೇ ದರ್ಜೆ ಪೈಂಟಿಂಗ್ ರೂಂಗಳಲ್ಲಿ, ವಾಟರ್ ಕಲರ್ಸ್ ಮಾಡುತ್ತಿದ್ದ. ಬೆಳಗಿನ ಹೊತ್ತು ಮಾವ್ ಮನೆಯಲ್ಲಿ ಮಾಡುತ್ತಿದ್ದ. ಒಮ್ಮೊಮ್ಮೆ ಪುಲ್‌ಕ್ರಿ ಕ್ಲಬ್ಬಿನಲ್ಲಿಯೂ ದಿನ ಕಳೆಯುತ್ತಿದ್ದ. ಮಾವ್‌ಗೆ ತನ್ನ ಪರಿಸ್ಥಿತಿ ಗೊತ್ತಾದರೆ? ಎನ್ನುವ ಹೆದರಿಕೆ ಅವನನ್ನು ಕಾಡುತ್ತಿತ್ತು. ತನ್ನನ್ನು ಕಂಡರೆ ಮಾವ್‌ಗೆ ಪ್ರೀತಿ ಇದೆ ಅಂತ ಗೊತ್ತಿತ್ತಾದರೂ, ತನ್ನ ಕಷ್ಟಗಳಿಂದ ಅವನ ಪೈಂಟಿಂಗ್ ಕೆಲಸಕ್ಕೆ ತೊಂದರೆಯಾದರೆ, ತನ್ನನ್ನು ಪಕ್ಕಕ್ಕೆ ಸರಿಸಿಬಿಡಬಹುದು. ಅದಕ್ಕಾಗಿಯೇ ಜೆಟ್ ಊಟಕ್ಕೆ ಆಹ್ವಾನಿಸಿದರೂ, ಹೋಗಲಿಲ್ಲ.

ಹೊಟ್ಟೆಯ ಹಸಿವಿನ ಹಿಂಸೆ, ಬೋರಿನೇಜನ್ನು ನೆನಪಿಸಿತು. ಬದುಕಿನುದ್ದಕ್ಕೂ ಹೀಗೆ ಸಾಯುವುದೇ ನನ್ನ ಹಣೆಬರಹವೇ? ಎಂದಾದರೂ ಹೊಟ್ಟೆತುಂಬ ಊಟ, ನೆಮ್ಮದಿ, ಸುಖಗಳು ಸಾಧ್ಯವಾಗ ಬಲ್ಲವೇ?

ಮರುದಿನ ತನ್ನ ಸ್ವಾಭಿಮಾನವನ್ನು ಬದಿಗಿರಿಸಿ, ಟರ್ಸ್‌ಟೀಗ್‌ನನ್ನು ಕಾಣಲು ಹೋದ. ಅವನಿಂದ ಒಂದು ಹತ್ತು ಫ್ರ್ಯಾಂಕ್‌ಗಳನ್ನು ಸಾಲ ಪಡೆಯಲು ಸಾಧ್ಯವಾದರೆ? ಎಂದು ಯೋಚಿಸಿದ್ದ. ಆದರೆ ಟರ್ಸ್‌ಟೀಗ್ ಪ್ಯಾರಿಸ್‌ಗೆ ಹೋಗಿದ್ದ. ಬಂದ ದಾರಿಗೆ ಸುಂಕವಿಲ್ಲವೆಂದು ಪ್ಲಾಟ್ಸ್‌ಗೆ ಹಿಂತಿರುಗಿದ. ಆದರೆ ಅಲ್ಲಿ ಆರ್ಟ್‌ಡೀಲರ್ ಟರ್ಸ್‌ಟೀಗ್ ಕಾಣಿಸಿದ. ಆತ ವಿನ್ಸೆಂಟ್‌ನನ್ನು ತಾನು ನೋಡಿಕೊಳ್ಳುವುದಾಗಿ ಥಿಯೋಗೆ ಮಾತುಕೊಟ್ಟಿದ್ದ. ವಿನ್ಸೆಂಟ್‌ಗೆ ಆತ ಇಪ್ಪತ್ತು ಫ್ರ್ಯಾಂಕ್‌ಗಳನ್ನು ನೀಡಿದ.

"ವಿನ್ಸೆಂಟ್ ನಿನ್ನ ಸ್ಟುಡಿಯೋ ನೋಡೋಕೆ ಒಂದು ಸಲ ಬರಬೇಕೂಂತ ಯೋಚನೆ ಮಾಡ್ತಿದ್ದೀನಿ. ಇಷ್ಟರಲ್ಲಿಯೇ ಬರ್ತೀನಿ."

ಸಮ್ಮತಿ ಸೂಚಿಸುವಂತೆ ತಲೆತೂಗಿದ. ಅವನಿಗೆ ಕೂಡಲೇ ಹೊಟ್ಟೆ ತುಂಬಿಸಿಕೊಳ್ಳುವ ಆತುರ. ಗೂಪಿಲ್ಸ್‌ಗೆ ಹೋಗುವ ದಾರಿಯಲ್ಲಿ "ನನಗೆ ಸ್ವಲ್ಪ ಹಣ ಸಿಕ್ಕರೆ ಎಲ್ಲ ಸರಿ ಹೋಗುತ್ತೆ" ಎಂದುಕೊಂಡ. ಆದರೆ ಕೈಯಲ್ಲಿ ಈಗ ಹಣ ಇದ್ದರೂ ಏನೋ ಒಂದು ಬಗೆಯ ಸಂಕಟ, ಏಕಾಕಿತನ!

"ಊಟ ಮಾಡಿದರೆ, ಎಲ್ಲ ದಾರಿಗೆ ಬರುತ್ತೆ." ತನ್ನಲ್ಲೇ ಹೇಳಿಕೊಂಡ.

ಊಟದಿಂದ ಹೊಟ್ಟೆ ಶಾಂತವಾಯಿತು. ಆದರೆ ಒಂಟಿತನದ ನೋವಿಗೆ ಬಿಡುಗಡೆ ಸಿಗಲಿಲ್ಲ. ಅಗ್ಗದ ಟೊಬ್ಯಾಕೋ ಕೊಂಡ; ಮನೆಯತ್ತ ಹೆಜ್ಜೆ ಹಾಕಿದ. ಹಾಸಿಗೆಯಲ್ಲಿ ಕುಳಿತು ಪೈಪ್ ತುಟಿಗಿರಿಸಿಕೊಂಡ. ಧುತ್ತನೆ 'ಕೇ'ಳ ಪ್ರೀತಿಯ ಹಸಿವು ಅವನನ್ನು ಭಯಂಕರ ಹಿಂಸೆಗೆ ದೂಡಿತು. ಅವಳ ಅದಮ್ಯ ಹಂಬಲ ಅವನನ್ನು ಉಸಿರು ಕಟ್ಟುವಂತೆ ಮಾಡಿತು. ಭಂಗನೆ ಹಾಸಿಗೆಯಿಂದ ಎದ್ದು, ಕಿಟಕಿ ಕಡೆ ಹೆಜ್ಜೆ ಹಾಕಿ, ಜನವರಿಯ ಚಳಿಗಾಲದ ರಾತ್ರಿಯಲ್ಲಿ ಕವಿದ ಮಂಜನ್ನು ದಿಟ್ಟಿಸಿದ. ರೆವರೆಂಡ್ ಸ್ಟ್ರಿಕರ್‌ನ ನೆನಪಾಯಿತು. ಚರ್ಚಿನ ಮಂಜುಕವಿದ ಕಂಬಕ್ಕೆ ಒರಗಿದಾಗ ಉಂಟಾಗುವ ನಡುಕದಂತೆ, ನಡುಗಿದ. ಕಿಟಕಿಯ ಬಾಗಿಲು ಮುಚ್ಚಿದ. ಹ್ಯಾಟು ಕೋಟು ಧರಿಸಿ ರೈನ್ ಸ್ಟೇಷನ್ ಬಳಿಯ ಹೆಂಡದ ಕೆಫೆಯತ್ತ ಹೆಜ್ಜೆ ಹಾಕಿದ.

-೨-

ಹೆಂಡದ ಕೆಫೆಯ ಪ್ರವೇಶದ್ವಾರದಲ್ಲಿ ಒಂದು ಎಣ್ಣೆ ದೀಪ ತೂಗುತ್ತಿತ್ತು. ಒಳಗೆ ಮತ್ತೊಂದು ದೀಪ ಉರಿಯುತ್ತಿತ್ತು. ಕೊಳಕಾದ ಗೋಡೆಗಳಿಗೆ ಆನಿಕೊಂಡಂತೆ ಬೆಂಚುಗಳು, ಅವುಗಳ ಮುಂದೆ ಕಲ್ಲಿನ ಮೇಜುಗಳು ಇದ್ದವು. ಅದರ ನೆಲ, ಗೋಡೆಗಳು ನೋಡಿದರೆ, ತೀರಾ ಹದಗೆಟ್ಟಿದ್ದವು. ನೊಂದವರಿಗದೊಂದು ತಲೆಮರೆಸಿಕೊಳ್ಳಲು ತಾಣವಾಗಿತ್ತೇ ಹೊರತು, ಖುಷಿಯಿಂದ ಹೆಂಡ ಕುಡಿದು ಹೋಗುವುದಕ್ಕೆ ತಕ್ಕ ಜಾಗವಾಗಿರಲಿಲ್ಲ.

ಅಲ್ಲಿದ್ದ ಒಂದು ಮೇಜಿನ ಮುಂದೆ ಕುಳಿತ. ಬಹಳವಾಗಿ ದಣಿದಿದ್ದ. ಕೆಲಸದಲ್ಲಿ ತೊಡಗಿದ್ದಾಗ, ಊಟ, ತಿಂಡಿಗೆ ದುಡ್ಡಿದ್ದಾಗ ಏನೂ ಅನಿಸುತ್ತಿರಲಿಲ್ಲ. ಆದರೆ ಒಂಟಿತನ ಕಳೆಯಲು ಸ್ನೇಹ ಬೇಕೆನಿಸುತ್ತಿತ್ತು. ಯಾರ ಸ್ನೇಹ ಮಾಡುವುದು? ಯಾರು ಸಿಕ್ತಾರೆ?

ಸ್ನೇಹಿತರಿಲ್ಲದೆ ಹೊತ್ತು ಕಳೆಯುವುದು ಹೇಗೆ? ಮಾವ್ ತನಗೆ ಪಾಠ ಹೇಳಿಕೊಡುವ ಗುರು. ಟರ್ಸ್‌ಟೀಗ್ ಬಹಳ ಬ್ಯುಸಿ ಮನುಷ್ಯ. ಡಿ ಬಾಕ್ ಭಾರಿ ಶ್ರೀಮಂತ. ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿ. ಇಂಥ ಸಮಯದಲ್ಲಿ ಒಂದು ಗ್ಲಾಸ್ ವೈನ್ ಸಹಾಯವಾಗಬಹುದೇನೋ! ಇಂದಿಲ್ಲ ನಾಳೆಯಾದರೂ, ತನ್ನ ಕೆಲಸವನ್ನು ಜನ ಮೆಚ್ಚಿದರೆ, ಎಲ್ಲಾ ಚೆನ್ನಾಗಿ ಆಗುತ್ತೆ.

ವಿನ್ಸೆಂಟ್ ಹುಳಿ ಹೆಂಡವನ್ನು ಗುಟುಕು ಗುಟುಕಾಗಿ ಕುಡಿದು ಸವಿಯುತ್ತಿದ್ದ. ಹೆಂಡದಂಗಡಿಯಲ್ಲಿ ಹೆಚ್ಚು ಜನ ಇರಲಿಲ್ಲ. ಅವನಿಗೆ ಎದುರಾಗಿ ಕೂಲಿಯೊಬ್ಬ ಕುಳಿತಿದ್ದ. ಬಾರ್‌ನ ಮೂಲೆಯೊಂದರಲ್ಲಿ ಹೆಣ್ಣು-ಗಂಡು ಜೋಡಿಯೊಂದು ಕುಳಿತಿತ್ತು. ಆ ಹೆಂಗಸು ಕಣ್ಣಿಗೆ ರಾಚುವ ಬಣ್ಣಗಳ ಬಟ್ಟೆ ತೊಟ್ಟಿದ್ದಳು. ಅವನ ಮೇಜಿನ ಪಕ್ಕದಲ್ಲಿ ಹೆಂಗಸೊಬ್ಬಳು ಕುಳಿತಿದ್ದಳು. ಆದರೆ ಅವನು ಅವಳ ಕಡೆ ನೋಡಲೇ ಇಲ್ಲ.

ವೈಟರ್ ಆ ಹೆಂಗಸನ್ನು "ಇನ್ನೂ ಸ್ವಲ್ಪ ವೈನ್ ಬೇಕೇನು?" -ಎಂದು ಒರಟಾಗಿ ಕೇಳಿದ.

"ನಿನ್ನ ಹತ್ತಿರ ಒಂದು 'ಸೂ' ಇದೆಯೇನು?" ಆ ಹೆಂಗಸು ಉತ್ತರಿಸಿದಳು.

ವಿನ್ಸೆಂಟ್ ಅವಳ ಕಡೆ ತಿರುಗಿದ. "ನನ್ನ ಜೊತೆ ಒಂದು ಗ್ಲಾಸ್ ವೈನ್ ತಗೋತೀಯೇನು?" - ಕೇಳಿದ.

"ಸಂತೋಷದಿಂದ ಆಗಬಹುದು" ಎಂದು ಹೇಳಿ ಒಂದು ಕ್ಷಣ ಅವನನ್ನು ದಿಟ್ಟಿಸಿದಳು.

ವೈಟರ್ ಮತ್ತೊಂದು ಗ್ಲಾಸ್ ವೈನ್ ತಂದುಕೊಟ್ಟು ಇಪ್ಪತ್ತು ಸೆಂಟ್‌ಗಳನ್ನು ಅವನಿಂದ ಪಡೆದು ಹೊರಟು ಹೋದ. ಅವರಿಬ್ಬರ ಮೇಜುಗಳೂ ಒಂದಕ್ಕೊಂದು ತಾಕಿಕೊಂಡಿದ್ದವು.

"ಥ್ಯಾಂಕ್ಸ್" - ಆ ಹೆಂಗಸು ಹೇಳಿದಳು.

ವಿನ್ಸೆಂಟ್ ಅವಳನ್ನು ಗಂಭೀರವಾಗಿ ಗಮನಿಸಿದ. ಪ್ರಾಯವೂ ಇರಲಿಲ್ಲ; ಸುಂದರವಾಗಿಯೂ ಇರಲಿಲ್ಲ, ಆದರೆ ಅವಳ ದೇಹದ ಆಕಾರ ಚೆನ್ನಾಗಿತ್ತು. ಅವಳ ಕೈಗಳತ್ತ ನೋಡಿದ. ಅವು ನಾಜೂಕಿನ ಹೆಂಗಸಿನ ಕೈಗಳಂತಿರಲಿಲ್ಲ. ಕೆಲಸ ಮಾಡಿ ಒರಟಾಗಿದ್ದವು. ಮಸುಕು ಕತ್ತಲಲ್ಲಿ, ಅವಳು ಚ್ಹಾರ್ಡಿನ್ ಅಥವಾ ಜ್ಯಾನ್‌ಸ್ಟೀನ್‌ನ, ವಿಚಿತ್ರ ಆಕಾರದ ಹೆಣ್ಣಿನ ಕಲಾಕೃತಿಯನ್ನು ನೆನಪಿಗೆ ತಂದಿತು. ಸೊಟ್ಟಾಗಿದ್ದ ಮೂಗು, ಮಧ್ಯದಲ್ಲಿ ಸ್ವಲ್ಪ ಉಬ್ಬಿತ್ತು. ಮೇಲ್ತುಟಿಯ ಮೇಲುಭಾಗದಲ್ಲಿ ಮೂಡಿ ಮೂಡದ ಮೀಸೆಯ ಗುರುತು; ವೇದನೆ ತುಂಬಿದ ಕಣ್ಣುಗಳು..... ಎಲ್ಲಿಯೂ ಯಾವ ರೀತಿಯಲ್ಲೂ ಒಂದಿಷ್ಟಾದರೂ ಸೌಂದರ್ಯ ಕಾಣದಿದ್ದರೂ, ವಿನ್ಸೆಂಟ್‌ಗೆ ಅವಳಲ್ಲಿ ಏನೋ ಸತ್ವವಿದೆ ಅನಿಸಿತು.

"ಥ್ಯಾಂಕ್ಸ್ ಬೇಡ. ನನಗೆ ಕಂಪನಿ ಕೊಟ್ಟದ್ದಕ್ಕೆ ನಾನೇ ಥ್ಯಾಂಕ್ಸ್ ಹೇಳಬೇಕು."

"ನನ್ನ ಹೆಸರು ಕ್ರಿಸ್ಟೀನ್. ನಿನ್ನ ಹೆಸರು?"

"ವಿನ್ಸೆಂಟ್."

"ಇಲ್ಲಿ ಹೇಗ್‌ನಲ್ಲಿ ಕೆಲಸ ಮಾಡ್ತಿದ್ದೀಯೇನು?"

"ಹೌದು."

"ಎಂಥ ಕೆಲಸ?"

"ನಾನು ಒಬ್ಬ ಪೈಂಟರ್."

"ಅಯ್ಯೋ, ಬಹಳ ಕಷ್ಟದ ಕೆಲಸ ಅಲ್ವಾ?"

"ಹಾಂ! ಕೆಲವು ಸಲ!"

"ನಾನು ಲಾಂಡ್ರೀಲಿ ಕೆಲಸ ಮಾಡ್ತೀನಿ. ಕೈಯಲ್ಲಿ ಸಾಧ್ಯವಾಗುವವರೆಗೂ ಮಾಡ್ತೀನಿ. ಆಗಲಿಲ್ಲಾಂದ್ರೆ.....

"ಆಗಲಿಲ್ಲಾಂದ್ರೆ?..... ಮತ್ತೇನು ಮಾಡ್ತಿ?"

"ಬೀದೀಲಿ ಭಿಕ್ಷೆ ಬೇಡ್ತೀನಿ. ಕೆಲಸ ಮಾಡೋ ಶಕ್ತಿ ಇಲ್ಲದಾಗ, ಖಾಯಿಲೆ ಬಿದ್ದಾಗ, ಇಂಥ ಕೆಲಸಕ್ಕೆ ಹೋಗ್ತೀನಿ."

"ಲಾಂಡ್ರೀಲಿ ಕೆಲಸ ಮಾಡೋದು ಕಷ್ಟಾನಾ?"

"ಹೌದು. ಹನ್ನೆರಡು ಗಂಟೆ ದುಡೀತೀನಿ. ಆದರೆ ಅವರು ಕೊಡೋದು ಊಟಕ್ಕೂ ಸಾಕಾಗೊಲ್ಲ. ಇಡೀ ದಿವಸ ಬಟ್ಟೆ ಒಗೆದೂ, ಊಟಕ್ಕೆ ಹಣಬೇಕೆಂದಾಗ, ಮಕ್ಕಳಿಗೆ ಹೊಟ್ಟೆ ತುಂಬಿಸಬೇಕಾದಾಗ, ಯಾರಾದರೂ ಗಂಡಸನ್ನು ಬರಮಾಡಿಕೊಳ್ತೇನೆ.

"ನಿನಗೆ ಎಷ್ಟು ಜನ ಮಕ್ಕಳಿದ್ದಾರೆ. ಕ್ರಿಸ್ಟೀನ್?"

"ಐದು.... ಆರನೇದು ಈಗ ನನ್ನ ಹೊಟ್ಟೇಲಿದೆ."

"ನಿನಗೆ ಗಂಡ ಇಲ್ಲವೇನು?"

"ಈ ಮಕ್ಕಳೆಲ್ಲ ಯಾರು ಯಾರಿಗೋ ಹುಟ್ಟಿದವರು."

"ಅದೇ ಕಷ್ಟ ಆದದ್ದು! ಹೌದಲ್ಲ?"

ಭುಜಹಾರಿಸಿ ಹೇಳಿದಳು – "ಗಣಿ ಕಾರ್ಮಿಕ ಗಣಿ ಒಳಗೆ ಇಳಿದರೆ ಸಾಯ್ತೀನಿಂತ, ಗಣಿಯೊಳಗೆ ಇಳಿಯುವುದನ್ನು ಬೇಡ ಅನ್ನಲು ಸಾಧ್ಯವೇ?"

"ಯಾರಾದರೂ, ಒಬ್ಬ ತಂದೆಯಾದರೂ ಗೊತ್ತಿದ್ದಾನೇನು?"

"ಮೊದಲನೆಯವನೊಬ್ಬ ಮಾತ್ರ ಗೊತ್ತು. ಮಿಕ್ಕವರ ಹೆಸರುಗಳು ಕೂಡಾ ನೆನಪಿಲ್ಲ."

'ಈಗ ನಿನ್ನ ಹೊಟ್ಟೇಲಿರೋ ಮಗುವಿನ ತಂದೆ?"

"ಸರಿಯಾಗೇನೂ ನೆನಪಿಲ್ಲ. ಯಾರು, ಏನೂಂತ ನೆನಪಿನಲ್ಲಿ ಇರಿಸಿಕೊಳ್ಳೋದಕ್ಕೆ, ನನಗೆ ಹುಷಾರಿರಲಿಲ್ಲ. ಜೊತೆಗೆ ಬೀದಿ ಹೆಂಗಸಾಗಿದ್ದೆ. ಅದೆಲ್ಲ ನನಗೆ ಬೇಕಾಗಿಲ್ಲ."

"ಇನ್ನೊಂದು ಗ್ಲಾಸ್ ವೈನ್ ಕುಡೀತೀಯಾ?"

"ಜಿನ್ ಇರಲಿ." ಪರ್ಸ್ ಹೊರತೆಗೆದು, ಅದರೊಳಗಿಂದ ಸಿಗರೇಟಿನ ತುಂಡೊಂದನ್ನು ತೆಗೆದು ಹಚ್ಚಿಕೊಂಡಳು. "ನಿನ್ನನ್ನು ನೋಡಿದರೆ, ಅಷ್ಟಾಗಿ ಸಂಪಾದನೆ ಇದ್ದಂಗಿಲ್ಲ."...... "ಪೈಂಟಿಂಗ್ಸ್ ಏನಾದರೂ ಮಾರಾಟ ಮಾಡ್ತಿದ್ದೀ ಏನು?"

"ಇಲ್ಲ. ಈಗ ತಾನೇ ಪೈಂಟಿಂಗ್ಸ್ ಶುರುಮಾಡಿದ್ದೀನಿ."

"ಶುರು ಮಾಡೋಕೆ, ನಿನಗೆ ಈಗಲೇ ಸಾಕಷ್ಟು ವಯಸ್ಸಾದಂತಿದೆ."

"ನನಗೆ ಮೂವತ್ತು ವರ್ಷ."

"ನೋಡಿದರೆ ನಲವತ್ತರ ಹಾಗೆ ಕಾಣ್ತೀಯ. ಜೀವನ ಹೇಗೆ ಮಾಡ್ತಿದ್ದೀಯ?"

"ನನ್ನ ತಮ್ಮ ಸ್ವಲ್ಪ ಹಣ ಕಳಿಸಿಕೊಡ್ತಾನೆ."

"ಸರಿ ಸರಿ, ನನ್ನ ಲಾಂಡ್ರಿ ಕೆಲಸಕ್ಕಿಂತ ಸ್ವಲ್ಪ ಪರವಾಗಿಲ್ಲ."

"ಯಾರ ಜೊತೆಗಿದ್ದೀಯ ಕ್ರಿಸ್ಟೀನ್?"

"ನಾವೆಲ್ಲ ನಮ್ಮಮ್ಮನ ಮನೇಲಿದ್ದೀವಿ."

"ನೀನು ಬೀದಿ ಬದುಕಿಗೆ ಇಳಿದಿದ್ದೀಯಾಂತ ಅವಳಿಗೆ ಗೊತ್ತೇನು?"

ಹೆಂಗಸು ಗಟ್ಟಿಯಾಗಿ ನಕ್ಕಳು. "...... ಓ ದೇವರೇ, ಅಲ್ಲಿಗೆ ಕಳಿಸಿದ್ದೇ ಅವಳು!! ಜೀವನದುದ್ದಕ್ಕೂ, ಅವಳು ಮಾಡಿದ್ದೂ ಅದನ್ನೇ! ಅಂಥ ಬದುಕಿನ ಮೂಲಕವೇ ನನ್ನನ್ನು, ನನ್ನ ತಮ್ಮನನ್ನು ಪಡೆದದ್ದು."

"ನಿನ್ನ ಆ ತಮ್ಮ ಏನು ಮಾಡ್ತಾನೆ?"

"ಅವನಾ? ಅವನಿಗೆ ಮನೇಲಿ ಒಬ್ಬಳು ಹೆಂಗಸಿದ್ದಾಳೆ. ಅವಳಿಗೆ ಗಂಡಸರನ್ನು ಸಪ್ಲೈ ಮಾಡ್ತಾನೆ."

"ನಿನ್ನ ಐದು ಜನ ಮಕ್ಕಳು ಇದರಿಂದ ಕೆಟ್ಟು ಹೋಗ್ತಾರೆ."

"ಪರವಾಗಿಲ್ಲ. ಹೇಗಿದ್ದರೂ ನಾಳೆ ಅವರು ಮಾಡೋ ವೃತ್ತೀನೂ ಇದೇ.

"ಇದೆಲ್ಲ ಸರಿಯಲ್ಲ ಅಲ್ವಾ ಕ್ರಿಸ್ಟೀನ್?"

"ಹಾಗಂತ ಅದರ ಬಗ್ಗೆ ಅಳ್ತಾ ಕೂರೋದ್ರಿಂದ ಪ್ರಯೋಜನ ಇಲ್ಲ. ಇನ್ನೊಂದು ಗ್ಲಾಸು ಜಿನ್ ಮತ್ತು ಬಿಟ್ಟರ್ಸ್ ಕೊಡಿಸ್ತೀಯ!.... ಅರೆ ಅದೇನು ನಿನ್ನ ಕೈ ಮೇಲೆ? ಅಲ್ಲಿ ಯಾಕೆ ಕಪ್ಪಾಗಿದೆ?"

"ನಾನು ಸುಟ್ಟುಕೊಂಡೆ."

"ಅಬ್ಬಬ್ಬಾ! ತುಂಬಾ ನೋವಾಗಿರಬೇಕಲ್ಲ?"

"ಇಲ್ಲ ಕ್ರಿಸ್ಟೀನ್. ನನಗೇನೂ ಅನಿಸಲಿಲ್ಲ. ನಾನು ಬೇಕೆಂದೇ ಸುಟ್ಟುಕೊಂಡೆ."

ಅವನ ಕೈಯನ್ನು ಬಿಟ್ಟಳು. "ಇಲ್ಲಿಗೆ ಒಬ್ಬನೇ ಯಾಕೆ ಬಂದೆ? ನಿನಗೆ ಯಾರೂ ಫ್ರೆಂಡ್ಸ್ ಇಲ್ಲವೇನು?"

"ಇಲ್ಲ. ನನ್ನ ತಮ್ಮ ಒಬ್ಬ ಇದ್ದಾನೆ. ಆದರೆ ಪ್ಯಾರಿಸ್‌ನಲ್ಲಿ."

"ತುಂಬಾ ಒಂಟಿತನ ಕಾಡುತ್ತಿರಬೇಕಲ್ಲ?"

"ಹೌದು ಕ್ರಿಸ್ಟೀನ್, ಭಯಂಕರವೆನಿಸುತ್ತೆ."

"ನನಗೂ ಹಾಗೇ ಅನಿಸುತ್ತೆ. ಮನೆಯಲ್ಲಿ ಅಮ್ಮ, ತಮ್ಮ, ಮಕ್ಕಳಿದ್ದಾರೆ. ನನಗೆ ಬೇಕಾದ ಗಂಡಸರಿದ್ದಾರೆ. ಆದರೂ ಒಂಟಿತನದಲ್ಲಿ ಬದುಕುತ್ತಿರುತ್ತೇವೆ. ನಮ್ಮ ಜೊತೆ ಇರುವವರ ಸಂಖ್ಯೆ ಮುಖ್ಯವಲ್ಲ. ನಮಗೆ ಬೇಕಾದವರು ಇರಬೇಕು ಜೊತೇಲಿ ಅನ್ನೋದು, ನಮ್ಮ ಆಸೆ."

"ನಿನಗೆ ತುಂಬಾ ತುಂಬಾ ಬೇಕಾದವರು ಯಾರಾದರೂ ನಿನಗೆ ಇದ್ದಾರೆಯೇ ಕ್ರಿಸ್ಟೀನ್?"

"ಮೊದಲ ಪರಿಚಯವಾದ ವ್ಯಕ್ತಿಯೊಬ್ಬ ಇದ್ದ. ನನಗೆ ಹದಿನಾರು ವರ್ಷ. ಅವನು ಬಹಳ ಶ್ರೀಮಂತನಾಗಿದ್ದ. ಅವನ ಮನೆಯವರಿಂದಾಗಿ ನನ್ನನ್ನು ಮದುವೆಯಾಗಲು ಸಾಧ್ಯವಾಗಲಿಲ್ಲ. ಆದರೆ ಮಗುವಿಗೋಸ್ಕರ ಹಣ ಕೊಡುತ್ತಿದ್ದ. ಆ ಮೇಲೆ ಅವನು ಸತ್ತುಹೋದ. ನನ್ನ ಹತ್ತಿರ ಒಂದು ಸೆಂಟೀಮ್ ಕೂಡಾ ಇರಲಿಲ್ಲ.

"ಈಗೆಷ್ಟು ವಯಸ್ಸು ನಿನಗೆ?"

"ಮೂವತ್ತೆರಡು. ಮಕ್ಕಳನ್ನು ಹೆರುವುದಕ್ಕೆ ಸಾಧ್ಯವಿಲ್ಲ. ಫ್ರೀವಾರ್ಡಿನ ಡಾಕ್ಟರು ಹೇಳಿಯೇ ಬಿಟ್ಟಿದ್ದಾರೆ, ಈ ಮಗು ನಿನ್ನನ್ನು ಬದುಕಲು ಬಿಡೋದಿಲ್ಲ ಅಂತ."

"ಸರಿಯಾದ ಔಷಧೋಪಚಾರ ಸಿಕ್ಕರೆ, ಹಾಗೇನೂ ಆಗೋದಿಲ್ಲ."

"ಅದಕ್ಕೆಲ್ಲ ದುಡ್ಡು ಎಲ್ಲಿಂದ ತರಲಿ? ಒಂದು ಕಾಸನ್ನೂ ಉಳಿಸಿಕೊಂಡಿಲ್ಲ. ಫ್ರೀವಾರ್ಡಿನ ಡಾಕ್ಟರುಗಳು ನಮ್ಮ ಕಡೆ ಲಕ್ಷ್ಯಾನೇ ಕೊಡೋದಿಲ್ಲ. ಕಾಯಿಲೆಯಿಂದ ನರಳುತ್ತಿರುವ ಎಷ್ಟೊಂದು ಮಂದಿ ಹೆಂಗಸರು ರೋಗಿಗಳಿದ್ದಾರೆ ಅವರಿಗೆ."

"ಸ್ವಲ್ಪ ಹಣಾನಾ ಹೇಗಾದರೂ ಸಂಪಾದಿಸಲು ಸಾಧ್ಯ ಇಲ್ಲವೇನು?"

"ಹಾಂ, ತಿಂಗಳುಗಟ್ಟಲೆ, ರಾತ್ರಿ ಜೀವನ ಮಾಡಿದರೆ ಸಾಧ್ಯವಾಗಬಹುದು. ಆದರೆ, ಮಗು, ನನ್ನನ್ನು ಸಾಯಿಸುವುದಕ್ಕೆ ಮೊದಲೇ ನಾನು ಸತ್ತು ಹೋಗ್ತೀನಿ."

ಅವರಿಬ್ಬರೂ ಕೆಲಕ್ಷಣಗಳು ಮೌನವಾಗಿದ್ದರು.

"ಇಲ್ಲಿಂದ ಎಲ್ಲಿಗೆ ಹೋಗ್ತಿದ್ದೀಯ ಕ್ರಿಸ್ಟೀನ್?"

"ಇಷ್ಟು ಹೊತ್ತೂ, ಬಟ್ಟೆ ಒಗೆಯುವ ಘಾಟಲ್ಲಿದ್ದೆ. ತುಂಬಾ ಆಯಾಸ ಆಗಿದ್ದಕ್ಕೆ, ಒಂದು ಗ್ಲಾಸ್ ವೈನ್ ಕುಡಿದು ಹಗೋಣಾಂತ ಬಂದೆ. ಅವರು ನನಗೆ ಕೂಲಿ ಹಣ ಕೊಡಬೇಕಾಗಿತ್ತು. ಆದರೆ ಶನಿವಾರದ ತನಕ ಕೊಡೋದಿಲ್ಲಾಂದ್ರು, ಊಟಕ್ಕೆ ಒಂದೆರಡು ಫ್ರ್ಯಾಂಕ್ ಆದ್ರೂ ಬೇಕಾಗುತ್ತೆ. ಒಬ್ಬ ಗಂಡಸನ್ನು ಹುಡುಕ್ಕೊಳ್ಳಬೇಕು. ಅದಕ್ಕೆ ಮುಂಚೆ ಸ್ವಲ್ಪ ರೆಸ್ಟ್ ತಗೊಳ್ಳೋಣಾಂತ ಯೋಚನೆ ಮಾಡ್ದೆ."

"ನಾನು ನಿನ್ನ ಜೊತೆ ಬರಬಹುದಾ ಕ್ರಿಸ್ಟೀನ್? ನನಗೂ ಒಬ್ಬನೇ ಬೇಜಾರಾಗಿದೆ."

"ಖಂಡಿತವಾಗಿಯೂ! ಸದ್ಯ ಹುಡುಕಿಕೊಂಡು ಹೋಗೋ ಕಷ್ಟ ತಪ್ಪಿತು. ಅಲ್ಲದೆ ನೀನು ಒಳ್ಳೆಯವನಂತೆ ಕಾಣ್ತಿದ್ದೀಯ."

"ನೀನು ನನಗೆ ತುಂಬ ಹಿಡಿಸಿದೆ. ನನ್ನ ಸುಟ್ಟು ಹೋಗಿದ್ದ ಕೈಯನ್ನು ನಿನ್ನ ಕೈಲಿ ಇರಿಸಿಕೊಂಡಾಗ, ನೀನಾಡಿದ ಸಹಾನುಭೂತಿಯ ಮಾತು.... ಮೊಟ್ಟ ಮೊದಲಬಾರಿಗೆ ಹೆಂಗಸೊಬ್ಬಳು ಆಡಿದ್ದು.... ಗೊತ್ತಿಲ್ಲ.... ಎಷ್ಟೋದಿನಗಳ ನಂತರ."

"ತಮಾಶೆಯಾಗಿದೆ; ನೋಡೋಕೂ ನೀನು ಚೆನ್ನಾಗಿದ್ದೀಯ ನಿನ್ನ ನಡವಳಿಕೆ ಕೂಡ ತುಂಬ ಒಳ್ಳೆದಾಗಿದೆ."

"ಪ್ರೀತಿಯ ವಿಚಾರದಲ್ಲಿ ನಾನು ಬಹಳ ದುರಾದೃಷ್ಟವಂತ."

"ಹೌದು ಅದೆಲ್ಲ ಹಾಗೇನೆ.... ಇನ್ನೊಂದು ಗ್ಲಾಸು ಜಿನ್ ಮತ್ತು ಬಿಟ್ಟರ್ಸ್?"

"ನೋಡು. ನಾವಿಬ್ಬರೂ ಒಬ್ಬರಿಗೊಬ್ಬರು ಸಹಾನುಭೂತಿ ತೋರಿಸಿಕೊಳೋದಕ್ಕೆ ನಾವಿಬ್ಬರೂ ಇಷ್ಟೊಂದು ಕುಡೀಬೇಕಿಲ್ಲ. ನಾನು ಕೊಡೋದನ್ನು ಪಾಕೆಟ್ಟಲ್ಲಿ ಇಟ್ಕೋ. ಹೆಚ್ಚು ಹಣ ಕೊಡೋಕೆ ನನ್ನಿಂದ ಸಾಧ್ಯವಾಗೋದಿಲ್ಲ."

"ನನಗಿಂತ ನಿನಗೇ ಹಣದ ಅಗತ್ಯ ಹೆಚ್ಚಾಗಿದೆ ಅಂತ ಅನ್ಸತ್ತೆ. ನೀನು ಬರಬಹುದು; ಹಿಂಜರಿಕೆ ಬೇಡ. ನೀನು ಹೋದ ಮೇಲೆ ನನಗೆ ಬೇಕಾಗಿರುವ ಎರಡು ಫ್ರ್ಯಾಂಕ್‌ಗಳಿಗಾಗಿ ಬೇರೆ ಯಾರನ್ನಾದರೂ ನೋಡ್ಕೊಳ್ತೀನೆ."

"ಇಲ್ಲ. ನೀನು ಈ ಹಣ ತಗೋ. ಒಂದಿಪ್ಪತ್ತೈದು ಫ್ರ್ಯಾಂಕ್‌ಗಳನ್ನು ನನ್ನ ಸ್ನೇಹಿತನಿಂದ ಸಾಲ ಪಡೆದಿದ್ದೇನೆ. ನಿನಗೆ ಕೊಡೋದಕ್ಕೆ ಸಾಧ್ಯವಿದೆ."

"ಆಯ್ತು ನಡಿ. ಇಲ್ಲಿಂದ ಹೊರಗೆ ಹೋಗೋಣ."

ದಾರೀಲಿ ಇಬ್ಬರೂ ತಮ್ಮ ತಮ್ಮ ಬಗ್ಗೆ ಮಾತಾಡಿಕೊಂಡರು. ಎಷ್ಟೋ ದಿನಗಳ ಹಿಂದಿನ ಸ್ನೇಹಿತರಂತೆ ತಮ್ಮ ತಮ್ಮ ಜೀವನದ ಬಗ್ಗೆ ಹೇಳಿಕೊಂಡರು. ಕ್ರಿಸ್ಟೀನ್‌ಗೆ ತನ್ನ ಜೀವನದ ಎಲ್ಲ ವಿವರಗಳನ್ನು ತಿಳಿಸುವಾಗ, ನಾಚಿಕೆ, ಸಂಕೋಚಗಳಾಗಲೀ, ಪಶ್ಚಾತ್ತಾಪವಾಗಲೀ ಇರಲಿಲ್ಲ. ಮುಕ್ತವಾಗಿ ಎಲ್ಲವನ್ನೂ ಬಿಚ್ಚಿಟ್ಟಳು.

"ಯಾವಾಗಲಾದರೂ ಮಾಡೆಲ್ ಆಗಿ ಕೆಲಸ ಮಾಡಿದ್ದೀಯ?"

"ನಾನು ಚಿಕ್ಕವಳಿದ್ದಾಗ."

"ಹಾಗಾದರೆ, ನನಗೇ ಮಾಡೆಲ್ ಆಗಿ ಯಾಕೆ ಬರಬಾರದು? ನೀನು ನಿರೀಕ್ಷಿಸುವಷ್ಟು ಹಣ, ಕೊಡೋಕೆ ಸಾಧ್ಯವಾಗಲಾರದು. ದಿನಕ್ಕೆ ಫ್ರ್ಯಾಂಕ್ ಒಂದರಂತೆಯೂ ಕೊಡಲಾರೆ. ಆದರೆ ನಾನು ಮಾಡಿದ ಪೈಂಟಿಂಗ್ಸ್ ಮಾರಾಟವಾದರೆ, ಎರಡೆರಡು ಫ್ರ್ಯಾಂಕ್ ಕೊಡಬಲ್ಲೆ. ಬಟ್ಟೆ ಒಗೆಯುವುದಕ್ಕಿಂತ, ಈ ಕೆಲಸ ಮೇಲು ಅಂತ ಅನಿಸೋದಿಲ್ಲವೇ?"

"ಸರಿ, ನನಗೂ ಇದು ಇಷ್ಟವಾದ್ದೆ. ನನ್ನ ಜೊತೆ ನನ್ನ ಮಗನನ್ನೂ ಕರೆದುಕೊಂಡು ಬರ್ತೀನೆ. ನನಗೆ ಬೇಸರ ಆದಾಗ, ಅವನು ಮಾಡೆಲ್ ಆಗ್ತಾನೆ. ಅವನೂ ಬೇಡಾಂದ್ರೆ ನನ್ನ ಅಮ್ಮ ಕೂತ್ಕೋತಾಳೆ. ಒಂದೆರಡು ಫ್ರ್ಯಾಂಕ್ ಹೆಚ್ಚಿಗೆ ಸಂಪಾದಿಸೋದು ಅವಳಿಗೂ ಇಷ್ಟವಾಗುತ್ತೆ. ಅವಳು ಮನೆಗೆಲಸ ಮಾಡೋಕೆ ಹೋಗ್ತಾಳೆ."

ಕಡೆಗೆ ಇಬ್ಬರೂ ಕ್ರಿಸ್ಟೀನ್‌ನ ಮನೆ ತಲುಪಿದರು. ಒರಟಾದ ಕಲ್ಲಿನ ಕಟ್ಟಡ ಅದಾಗಿತ್ತು. "ನೀನು ಯಾರನ್ನೂ ನೋಡಬೇಕಾದ್ದಿಲ್ಲ. ಮುಂದುಗಡೇನೇ ನನ್ನ ರೂಮಿದೆ."

ಅವಳಿದ್ದ ಕೋಣೆ ಪುಟ್ಟದಾಗಿ, ಸರಳವಾಗಿತ್ತು. ಗೋಡೆಯ ಮೇಲಿನ ಪೇಪರ್, ಬೂದು ಬಣ್ಣದ ಛಾಯೆಯನ್ನು ಪಸರಿಸಿತ್ತು. ಮರದ ನೆಲದ ಮೇಲೆ ಹಳೆಯದಾದ ಕಡುಗೆಂಪಿನ ಕಂಬಳಿ ಹಾಸಿತ್ತು. ಒಂದು ಮೂಲೆಯಲ್ಲಿ ಸಾಧಾರಣವಾದ ಒಲೆಯೊಂದಿತ್ತು. ಮತ್ತೊಂದು ಕಡೆ ಡ್ರಾಯರ್ಸ್ ಇದ್ದ ಪೆಠಾರಿಯೊಂದಿತ್ತು. ಮಧ್ಯದಲ್ಲಿ ದೊಡ್ಡದಾದ ಹಾಸಿಗೆಯೊಂದಿತ್ತು. ಅದೆಲ್ಲ ನೋಡಿದಾಗ ವೃತ್ತಿನಿರತ ಹೆಂಗಸಿನ ಮನೆಯೆಂಬುದು ಸ್ಪಷ್ಟವಾಗಿ ತಿಳಿಯುತ್ತಿತ್ತು.

ಬೆಳಿಗ್ಗೆ ಎದ್ದಾಗ, ತಾನೊಬ್ಬನೇ ಇರಲಿಲ್ಲ. ತನ್ನ ಪಕ್ಕದಲ್ಲಿ ಮತ್ತೊಬ್ಬ ಮಲಗಿದ್ದುದು ಕಾಣಿಸಿತು. ಅವನಿಗೆ ಜಗತ್ತೇ ಈಗ ಆತ್ಮೀಯವೆನಿಸಿತು. ಒಂಟಿತನದ ನೋವು ಮರೆಯಾಗಿ, ಆ ಜಾಗದಲ್ಲಿ ಶಾಂತಿ, ನೆಮ್ಮದಿಗಳು ತುಂಬಿಕೊಂಡವು.

–೩–

ಬೆಳಗಿನ ಅಂಚೆಯಲ್ಲಿ ಅವನಿಗೆ ಥಿಯೋನಿಂದ ಒಂದು ಕಾಗದ ಮತ್ತು ಅದರ ಜೊತೆಗೆ ಇರಿಸಿದ್ದ ನೂರು ಫ್ರ್ಯಾಂಕ್‌ಗಳು ಬಂದವು. ಮೊದಲ ತಾರೀಖು ಆದ ಮೇಲೆ, ತಡವಾಗಿ ಕಳಿಸಿದ್ದಕ್ಕಾಗಿ ಕ್ಷಮೆ ಕೋರಿದ್ದ. ಸಮಯಕ್ಕೆ ಸರಿಯಾಗಿ ಕಳಿಸಲು ಅವನಿಗೆ ಸಾಧ್ಯವಾಗಿರಲಿಲ್ಲ. ಕೈಗೆ ಹಣ ಬಂದದ್ದೇ ಹೊರಗೋಡಿದ. ಹತ್ತಿರದ ತೋಟದಲ್ಲಿ ಪುಟ್ಟ ಹೆಂಗಸೊಬ್ಬಳು ಅಗೆಯುತ್ತಿದ್ದಳು. ಅವಳ ಬಳಿ ಹೋಗಿ, ಐವತ್ತು ಸೆಂಟೀಮ್‌ಗೆ ಮಾಡೆಲ್ ಆಗಿ ಬರಲು ಕೇಳಿಕೊಂಡ. ಆಕೆ ಸಂತೋಷದಿಂದ ಬರಲು ಒಪ್ಪಿದಳು.

ಸ್ಟುಡಿಯೋದಲ್ಲಿ ಅವಳನ್ನು ಮಂಕಾಗಿದ್ದ ಹಿನ್ನೆಲೆಯಲ್ಲಿ ಚಿಮ್ನಿ ಮತ್ತು ಸ್ಟೋವ್‌ಗಳ ಮಧ್ಯೆ ಪಕ್ಕದಲ್ಲೊಂದು ಟೀ ಕೆಟಲ್ ಇರಿಸಿ ಕೂರಿಸಿದ. ನೆರಳು ಬೆಳಕಿನ ಪರಿಣಾಮವನ್ನು ಪರೀಕ್ಷಿಸಿದ. ಮುದಿ ಹೆಂಗಸಿನ ತಲೆಯ ಕಡೆ ಸಾಕಷ್ಟು ಬೆಳಕಿತ್ತು, ಜೀವಂತಿಕೆ ಇತ್ತು. ಆಕೆ ಕುಳಿತಿದ್ದ ಮೂಲೆಯನ್ನು ಸಾಕಷ್ಟು ಪರಿಣಾಮಕಾರಿಯಾಗಿ ಮೂಡಿಸಿದ. ಒಂದು ಕಾಲದಲ್ಲಿ ಅವನ ಡ್ರಾಯಿಂಗ್ಸ್ ನೀರಸವಾಗಿಯೂ, ಶುಷ್ಕವಾಗಿಯೂ ಇತ್ತು. ಆದರೆ ಈಗ ಅವು ಸಜಲತೆ, ತರಲತೆಗಳೊಂದಿಗಿದ್ದವು.

ಸ್ಕೆಚ್ಚನ್ನು ಗೋಡೆಯ ಮೇಲಿರಿಸಿ ನೋಡಿದ. ಭಾವನೆಗಳು ಚೆನ್ನಾಗಿ ಮೂಡಿದ್ದವು. ಮನಸ್ಸಿನಲ್ಲಿ ಕ್ರಿಸ್ಟೀನ್‌ಗೆ ಧನ್ಯವಾದ ಹೇಳಿದ. ಅವನ ಜೀವನದಲ್ಲಿ ಪ್ರೀತಿಯಿಲ್ಲದೆ ನೋವನ್ನು ಅನುಭವಿಸಿದ. ಆದರೆ ಅದರಿಂದ ಅವನಿಗೆ ನಷ್ಟವೇನೂ ಆಗಿರಲಿಲ್ಲ. ಲೈಂಗಿಕ ಅತೃಪ್ತಿ ಅವನನ್ನು ಸಂಪೂರ್ಣವಾಗಿ ಬತ್ತಿಹೋಗುವಂತೆ ಮಾಡಿತ್ತು; ಅವನ ಕಲಾಪ್ರವೃತ್ತಿಯ ಅಭಿವ್ಯಕ್ತಿಗೆ ಪ್ರಚೋದನೆಯೇ ಇಲ್ಲದಂತೆ ಮಾಡಿತ್ತು. ಮಾನಸಿಕವಾಗಿ ಅವನನ್ನು ಕೊಲೆ ಮಾಡಿತ್ತು.

'ಲೈಂಗಿಕ ತೃಪ್ತಿ ನವ ಚೈತನ್ಯವನ್ನು ತುಂಬುತ್ತದೆ." – ಎಂದು ತನ್ನಲ್ಲಿ ತಾನೇ, ಅಂದುಕೊಂಡ. ಮಿಷಲೆಟ್ ಇಂಥದ್ದರ ಬಗ್ಗೆ ಯಾಕೆ ಮಾತಾಡಿಲ್ಲ – ಎನ್ನುವುದು ಅವನಿಗೆ ಅರ್ಥವಾಗಲಿಲ್ಲ.

ಬಾಗಿಲು ಬಡಿದ ಸದ್ದು ಕೇಳಿ ಹೋದ. ಮಿಜ್ನಹೀರ್ ಟರ್ಸ್‌ಟೀಗ್ ನಿಂತಿದ್ದ. ವಿನ್ಸೆಂಟ್ ಅವನನ್ನು ಬರಮಾಡಿಕೊಂಡ. ಅವನು ಧರಿಸಿದ್ದ ಷರಾಯಿ, ತೊಟ್ಟಿದ್ದ ಬೂಟು – ಹೊಚ್ಚ ಹೊಸದರಂತೆ ಹೊಳೆಯುತ್ತಿದ್ದವು. ತಲೆಗೂದಲನ್ನು ನೀಟಾಗಿ ಬಾಚಿದ್ದ. ಗಡ್ಡವನ್ನೂ ಹಾಗೆಯೇ ನೀಟಾಗಿ ಕತ್ತರಿಸಿದ್ದ. ಷರಟಿನ ಕಾಲರ್ ಕೂಡ ಬೆಳ್ಳಗೆ ಶುಭ್ರವಾಗಿತ್ತು.

ವಿನ್ಸೆಂಟ್ ಕಷ್ಟಪಟ್ಟು ಕೆಲಸಮಾಡುತ್ತಿದ್ದುದನ್ನೂ, ತನ್ನದೇ ಆದ ಒಂದು ಸ್ಟುಡಿಯೋ ಮಾಡಿಕೊಂಡದ್ದನ್ನು ನೋಡಿ ಸಂತೋಷ ಪಟ್ಟ. ಯುವ ಕಲಾವಿದರು ಜೀವನದಲ್ಲಿ ಮುಂದು ಬರಬೇಕು; ಯಶಸ್ವಿಯಾಗಬೇಕು ಎನ್ನುವದು ಅವನ ಬಯಕೆ. ಅದಕ್ಕಾಗಿಯೇ ಅವರನ್ನು ಪ್ರೋತ್ಸಾಹಿಸುತ್ತಿದ್ದ. ಆದರೆ ಯಶಸ್ಸನ್ನು ಕ್ರಮಬದ್ಧ ರೀತಿಯಲ್ಲಿ, ಸಾಧನೆಯ ಮೂಲಕ ಗಳಿಸಬೇಕು ಎನ್ನುವುದು ಅವನ ಸಿದ್ಧಾಂತವಾಗಿತ್ತು. ಸಾಂಪ್ರದಾಯಿಕ ಮಾದರಿಯಲ್ಲಿಯೇ ಮುಂದುವರೆದು ಸೋತರೂ ಪರವಾಗಿಲ್ಲ. ಆದರೆ ರೀತಿ ನೀತಿ, ನಿಯಮಗಳೆಲ್ಲವನ್ನೂ ಧಿಕ್ಕರಿಸಿ ಯಶಸ್ಸಿಗೆ ಆಶಿಸುವುದನ್ನು ಅವನೆಂದೂ ಒಪ್ಪುತ್ತಿರಲಿಲ್ಲ. ಗೆಲುವಿಗಿಂತ, ನಿಯಮಗಳು, ಸಂಪ್ರದಾಯ ಅವನಿಗೆ ಮುಖ್ಯವೆನಿಸಿದ್ದವು. ತಾನು ಒಳ್ಳೆಯವನಾಗಿ, ಗೌರವಯುತ ವ್ಯಕ್ತಿಯಾಗಿದ್ದರೆ ಮಾತ್ರ ಸಾಲದು. ಎಲ್ಲರೂ ತನ್ನಂತೆಯೇ ಒಳ್ಳೆಯತನ, ಗೌರವಗಳನ್ನು ಪಡೆದಿರಬೇಕೆಂದು ಹಾರೈಸುತ್ತಿದ್ದ. ಗೂಪಿಲ್ಸ್‌ಗೆ ತಮ್ಮ ಕ್ಯಾನ್‌ವಾಸ್‌ಗಳನ್ನು ಮಾರುತ್ತಿದ್ದ ಪೈಂಟರ್ಸ್ ಎಲ್ಲರಿಗೂ ಗೊತ್ತಿತ್ತು, – ಟರ್ಸ್‌ಟೀಗ್ ಎಂತಹ ಸಂದರ್ಭದಲ್ಲಿಯೇ ಆಗಲಿ, ಒಳ್ಳೆಯ ನಡತೆಯಿಲ್ಲದವರನ್ನು ಎಂದಿಗೂ ಹತ್ತಿರ ಸೇರಿಸುತ್ತಿರಲಿಲ್ಲ; ಅವರ ಕ್ಯಾನ್‌ವಾಸ್‌ಗಳನ್ನೂ ಕೊಳ್ಳುತ್ತಿರಲಿಲ್ಲ – ಕಲಾಕೃತಿಗಳು ಎಷ್ಟೇ ಮಹತ್ವದ್ದಾಗಿದ್ದರೂ, ನಿರಾಕರಿಸಿಬಿಡುತ್ತಿದ್ದ.

"ಒಳ್ಳೆಯದು ವಿನ್ಸೆಂಟ್, ಈ ರೀತಿ ಬಂದು ನಿನಗೆ ಅಚ್ಚರಿ ಮೂಡಿಸಿದ್ದು, ನನಗೇ ಖುಷಿಕೊಟ್ಟಿದೆ. ಎಲ್ಲ ಆರ್ಟಿಸ್ಟ್‌ಗಳ ಜೊತೆ ನಾನು ಹೀಗೆ ಮಾಡೋದು!"

"ಮಿಜ್ನಹೀರ್ ಟರ್ಸ್‌ಟೀಗ್, ನೀವು ಈ ರೀತಿ ಬಂದು ನನ್ನ ಕೆಲಸ ನೋಡಿದ್ದು ನನಗೆ ತುಂಬ ಸಂತೋಷ ತಂದಿದೆ."

"ನೀನು ಇಲ್ಲಿಗೆ ಬಂದಾಗಿನಿಂದ, ನಿನ್ನನ್ನು, ನಿನ್ನ ಸ್ಟುಡಿಯೋವನ್ನು ನೋಡಬೇಕೂಂತ ಅಂದುಕೊಳ್ಳುತ್ತಲೇ ಇದ್ದೆ."

"ನೋಡೋಕೆ ಅಂಥಾದ್ದೇನೂ ಹೆಚ್ಚಿಗೆ ಇಲ್ಲ." – ಕೋಣೆಯಲ್ಲಿದ್ದ ಸ್ಟೊವ್, ಕುರ್ಚಿ, ಮೇಜು, ಹಾಸಿಗೆಗಳತ್ತ ನೋಡುತ್ತಾ ಹೇಳಿದ.

"ಅದನ್ನೆಲ್ಲ ಯೋಚಿಸಬೇಡ. ಖಂಡಿತ ಆದಷ್ಟು ಬೇಗ ನಿನ್ನಿಂದ ಒಳ್ಳೇದು ಸೃಷ್ಟಿಯಾಗುತ್ತೆ. ನೀನು ವಾಟರ್‌ಕಲರ್ಸ್ ಪ್ರಯೋಗ ಮಾಡ್ತಿದ್ದೀ ಅಂತ ಮಾವ್ ತಿಳಿಸಿದ. ಆ ಥರದ ಸ್ಕೆಚಸ್‌ಗೆ ತುಂಬಾ ಬೇಡಿಕೆ ಇದೆ. ನಾನೂ ಅವುಗಳು ಮಾರಾಟ ಆಗುವ ಹಾಗೆ ನೋಡಿಕೊಳ್ತೀನಿ. ಜೊತೆಗೆ ಥಿಯೋ ಕೂಡಾ ನಿನಗಾಗಿ ಕೆಲಸಮಾಡ್ತಾನೆ."

"ಅಂಥಾದ್ದನ್ನೇ ನಾನೂ ಮಾಡೋ ಪ್ರಯತ್ನದಲ್ಲಿ ಇದ್ದೇನೆ ಮಿಜ್ನಹೀರ್."

"ನೆನ್ನೆ ನೋಡಿದ್ದಕ್ಕಿಂತ ಇವತ್ತು ತುಂಬಾ ಚುರುಕಾಗಿ ಉತ್ಸಾಹಶೀಲನಾಗಿ ಇದ್ದೀಯ."

"ಹೌದು. ಸ್ವಲ್ಪ ಹುಷಾರಿರಲಿಲ್ಲ. ಆದರೆ ಹಿಂದಿನ ರಾತ್ರಿಯಿಂದ ಸ್ವಲ್ಪ ಪರವಾಗಿಲ್ಲ."

ವೈನ್, ಜಿನ್ನು, ಬಿಟ್ಟರ್ಸ್, ಕ್ರಿಸ್ಟೀನ್ – ಎಲ್ಲವನ್ನೂ ನೆನಪಿಗೆ ತಂದುಕೊಂಡ. ಇದೆಲ್ಲ ಟರ್ಸ್‌ಟೀಗ್‌ಗೆ ಗೊತ್ತಾದರೆ ಏನೆಂದುಕೊಳ್ಳುವನೋ ಎಂದು ಸ್ವಲ್ಪ ಅಳುಕಿದ. "ನನ್ನ ಕೆಲವು ಸ್ಕೆಚ್‌ಗಳನ್ನು ನೋಡ್ತೀರಾ ಮಿಜ್ನಹೀರ್? ನಿಮ್ಮ ಅಭಿಪ್ರಾಯ, ಅನಿಸಿಕೆಗಳು ನನಗೆ ತುಂಬಾ ಮುಖ್ಯ."

ಹಿತವಾದ ಹಸಿರು ಹಿನ್ನೆಲೆಗೆ, ಬಿಳಿ ಏಪ್ರನ್ ಧರಿಸಿದ ಮುದುಕಿಯೊಬ್ಬಳು ನಿಂತಿರುವ ಸ್ಕೆಚ್ಚನ್ನು ನೋಡಿದ. ಪ್ಲಾಟ್ಸ್‌ನಲ್ಲಿದ್ದಾಗಿನಿಂದ, ಟರ್ಸ್‌ಟೀಗ್‌ನ ಮೌನದಿಂದ ಏನು ಹೇಳುತ್ತಾನೆಂದು ಗ್ರಹಿಸುವುದು ಸಾಧ್ಯವಿರಲಿಲ್ಲ. ತನ್ನ ವಾಕಿಂಗ್‌ಸ್ಟಿಕ್ ಮೇಲೆ ಸ್ವಲ್ಪ ಬಾಗಿ, ಮುಂತೋಳಿಗೆ ಆ ಸ್ಕೆಚ್ಚನ್ನು ತೂಗುಹಾಕಿದ.

"ಹೂಂ! ಹೂಂ! ಪರವಾಗಿಲ್ಲ. ಬೆಳೀತಾ ಇದೀಯ. ಮಾವ್ ನಿನ್ನನ್ನು ವಾಟರ್‌ಕಲರಿಸ್ಟ್ (ಜಲವರ್ಣಚಿತ್ರಕಾರ) ಆಗಿ ತಯಾರು ಮಾಡಿಬಿಡ್ತಾನೆ. ನನಗೆ ಈಗಲೇ ಗೊತ್ತಾಗ್ತಾ ಇದೆ. ಸ್ವಲ್ಪ ಸಮಯ ಹಿಡಿಸುತ್ತೆ. ಆದರೆ ನೀನು ಸಾಧಿಸ್ತೀಯ. ನೀನು ಸ್ವಲ್ಪ ಬೇಗ ಬೇಗ ಮುಂದುವರೆಯಬೇಕು. ನಿನ್ನ ಬದುಕಿಗೆ ಸಂಪಾದನೆಯ ದಾರಿಯೊಂದನ್ನು ಸ್ವತಂತ್ರವಾಗಿ ಮಾಡ್ಕೋಬೇಕು. ತಿಂಗಳಿಗೆ ನೂರು ಫ್ರ್ಯಾಂಕ್ ಕಳಿಸೋದು ಥಿಯೋಗೂ ಸ್ವಲ್ಪ ಹೊರೆಯಾಗುತ್ತೆ. ನಾನು ಪ್ಯಾರಿಸ್‌ನಲ್ಲಿದ್ದಾಗ ಅವನ ಪಟ್ಟ ಕಷ್ಟಾನ ಖುದ್ದಾಗಿ ನಾನೇ ನೋಡಿದ್ದೀನಿ. ಆದಷ್ಟು ಶೀಘ್ರದಲ್ಲಿಯೇ ನಿನ್ನ ಸಣ್ಣ ಸಣ್ಣ ಸ್ಕೆಚ್‌ಗಳನ್ನು ನಾನು ಕೊಂಡುಕೊಳ್ಳುವ ಸಾಧ್ಯತೆ ಕೂಡ ಇದೆ."

"ಥ್ಯಾಂಕ್ಯೂ ಮಿಜ್ನಹೀರ್, ನನ್ನ ಬಗ್ಗೆ ಇಷ್ಟೊಂದು ಆಸಕ್ತಿ ತಗೊಂಡಿರೋದು ನಿಮ್ಮ ದೊಡ್ಡತನ."

ನಿನ್ನನ್ನು ಆದಷ್ಟೂ ಯಶಸ್ವಿಯಾಗುವಂತೆ ಮಾಡುವುದು ನನ್ನಾಸೆ. ನಿನ್ನ ಸ್ಕೆಚ್‌ಗಳನ್ನು ನಾನು ಕೊಂಡುಕೊಳ್ಳಲು ಶುರು ಮಾಡಿದಾಗ ಸ್ವಲ್ಪ ದುಡ್ಡು ಬರಬಹುದು. ಒಳ್ಳೆ ಬಟ್ಟೆ, ಬರೆ, ತಿಂಡಿ, ಊಟ, ಜೊತೆಗೆ ಸೊಸೈಟಿಯಲ್ಲಿ ಸ್ನೇಹಿತರು. ಅವರು ಇವರೂಂತ – ಎಲ್ಲ ನಿನಗೆ ಆಗ ಸಾಧ್ಯವಾಗಬಹುದು. ಮುಂದೆ ಆಯಿಲ್ಸ್ ಮಾಡಬೇಕಾದರೆ. ಮಾರಾಟ ಮಾಡಬೇಕಾದರೆ ಇಂಥದ್ದೆಲ್ಲ ಅಗತ್ಯವಿರುತ್ತದೆ. ಸರಿ, ಈಗ ನಾನು ಮಾವ್ ಬಳಿಗೆ ಹೋಗಬೇಕು. ಅವನು ಮಾಡುತ್ತಿರುವ 'ಷೆವನಿಂಜೆನ್' ವರ್ಕ್ ನೋಡಬೇಕಾಗಿದೆ."

"ಮತ್ತೊಮ್ಮೆ ಬಂದು ನೋಡ್ತೀರಾ ಮಿಜ್ನಹೀರ್?"

"ಖಂಡಿತ ಒಂದೆರಡು ವಾರ ಬಿಟ್ಟು ಮತ್ತೆ ಬರ್ತೀನಿ. ಅಷ್ಟು ಹೊತ್ತಿಗೆ ನಿನ್ನ ಕೆಲಸ ಇನ್ನಷ್ಟು ಚೆನ್ನಾಗಿ ಆಗಿರಬೇಕು."

"ನಾನು ಇಲ್ಲಿಗೆ ಬರೋದು ಸಾರ್ಥಕವಾಗುವ ಹಾಗೆ ನೋಡ್ಕೊಳ್ಬೇಕು."

ವಿನ್ಸೆಂಟ್‌ನ ಕೈ ಕುಲುಕಿ ಅಲ್ಲಿಂದ ಹೊರಟ. ಹೋಗುವಾಗ ಮತ್ತೊಮ್ಮೆ ಕಷ್ಟಪಟ್ಟು ಕೆಲಸ ಮಾಡಬೇಕೆಂದು ಎಚ್ಚರಿಸುವುದನ್ನು ಮರೆಯಲಿಲ್ಲ.

ಅವನು ಅತ್ತ ಹೋಗುತ್ತಲೇ, ವಿನ್ಸೆಂಟ್ ಮತ್ತೆ ತನ್ನ ಕೆಲಸದಲ್ಲಿ ಮಗ್ನನಾದ. ತನ್ನ ಕಾಲಮೇಲೆ ತಾನು ನಿಂತು, ಸರಳವಾದ ಬದುಕಿಗೆ ಸಾಕಾಗುವಷ್ಟು ಹಣ ಗಳಿಸಿದರೆ ಅಷ್ಟೇ ಸಾಕೆಂದುಕೊಂಡ. ತಾನು ಸ್ವತಂತ್ರವಾಗಿರಬಹುದು; ಯಾರಿಗೂ ಹೊರೆಯಾಗುವ ಅಗತ್ಯ ಇರುವುದಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಆತುರಪಡುವ ಕೆಲಸ ಇರುವುದಿಲ್ಲ. ನಿಧಾನವಾಗಿ, ಪ್ರಬುದ್ಧತೆಯನ್ನು ತನ್ನ ಅಭಿವ್ಯಕ್ತಿಯಲ್ಲಿ ತಂದುಕೊಳ್ಳಲು ಸಾಧ್ಯವಾಗುತ್ತದೆ ಎಂದು ಯೋಚಿಸಿದ.

ಮಧ್ಯಾಹ್ನದ ಹೊತ್ತಿಗೆ ಡಿ ಬಾಕ್‌ನಿಂದ ಒಂದು ಕಾಗದ ಬಂತು.

"ಪ್ರೀತಿಯ ವಿನ್ಸೆಂಟ್ ವಾನ್‌ಗೋ,

ನಾನು ನಾಳೆ ಬೆಳಿಗ್ಗೆ ಆರ್ಟ್ಸ್ ಮಾಡೆಲ್ ಅನ್ನು ಕರೆತರುತ್ತಿದ್ದೇನೆ. ಇಬ್ಬರೂ ಒಟ್ಟಿಗೇ ಸ್ಕೆಚ್ ಮಾಡಬಹುದು.

ಡಿ ಬಾಕ್.

ಅವನು ಕರೆತಂದ ಮಾಡೆಲ್ ಚೆಲುವೆಯಾಗಿದ್ದ ಚಿಕ್ಕ ಹುಡುಗಿಯಾಗಿದ್ದಳು. ಪೋಸ್ ಕೊಡಲು ಒಂದು ಫ್ರ್ಯಾಂಕ್ ಐವತ್ತು ಸೆಂಟೀಮ್ ಕೊಡಬೇಕಾಗಿತ್ತು. ವಿನ್ಸೆಂಟ್‌ಗೆ ಬಹಳ ಖುಷಿಯಾಯಿತು. ತಾನೇ ಏನಾದರೂ ಬಾಡಿಗೆಗೆ ಪಡೆಯಬೇಕಿದ್ದರೆ ಅಷ್ಟೊಂದು ದುಡ್ಡು ಕೊಡುವುದು ಸಾಧ್ಯವಾಗುತ್ತಿರಲಿಲ್ಲ. ಸ್ಟೋವ್ ಉರಿಯುತ್ತಿತ್ತು. ಅವಳು ಬೆತ್ತಲೆಯಾಗಿ ಪೋಸ್ ಕೊಡುವಾಗ, ಬೆಚ್ಚಗಿರಲೆಂದು ಬೆಂಕಿಯನ್ನು ಸ್ವಲ್ಪ ಹೆಚ್ಚಿಸಲಾಗಿತ್ತು. ಹೇಗ್‌ನಲ್ಲಿ ವೃತ್ತಿಪರ ಮಾಡೆಲ್‌ಗಳು ಮಾತ್ರವೇ 'ನಗ್ನ'ರಾಗಿ ಪೋಸ್ ಕೊಡಲು ಒಪ್ಪುತ್ತಿದ್ದರು. ವಿನ್ಸೆಂಟ್‌ಗೆ ಒಂದು ರೀತಿ ಮುಜುಗರ, ಸಿಟ್ಟು. ಅವನು ಸ್ಕೆಚ್ ಮಾಡುತ್ತಿದ್ದುದು, ಮುದಿ ಹೆಂಗಸರ ಮತ್ತು ಗಂಡಸರ ದೇಹಗಳನ್ನು. ಆ ದೇಹಗಳಲ್ಲಿ ಅವನಿಗೆ ವ್ಯಕ್ತಿತ್ವ ಮತ್ತು ಗುಣ, ಸಂಸ್ಕಾರಗಳು ಮತ್ತು ಸಾಮರಸ್ಯಗಳು, ಉಜ್ವಲಕಾಂತಿ ಕಾಣಿಸುತ್ತಿತ್ತು.

"ನಾನು ಒಂದಿಷ್ಟು ತಂಬಾಕು, ಊಟದ ಡಬ್ಬಿ ತಂದಿದ್ದೇನೆ. ಮಧ್ಯೆ ಎದ್ದು ಹೋಗಿ ನಮ್ಮ ಕೆಲಸಕ್ಕೆ ತೊಂದರೆ ಆಗಬಾರದಲ್ವ?"

"ನಿನ್ನದರಲ್ಲಿಯೇ ಸ್ವಲ್ಪ ತಂಬಾಕು ತಗೋತೇನೆ. ನನ್ನದು ಬಹಳ ಘಾಟು."

"ನಾನು ರೆಡಿ, ಪೋಸ್ ಹೇಗೆ, ಹೇಳ್ತೀರಾ?" – ಮಾಡೆಲ್ ಪ್ರಶ್ನಿಸಿದಳು.

"ಏನು ಡಿ ಬಾಕ್, ಕೂತ್ಕೊಂಡಾ? ನಿಂತ್ಕೊಂಡಾ?"

"ಮೊದಲು ನಿಂತುಕೊಂಡಿರೋದು ಟ್ರೈ ಮಾಡೋಣ. ನನ್ನ ಲ್ಯಾಂಡ್ ಸ್ಕೇಪಿನಲ್ಲಿ ನಿಂತಿರೋ ಆಕೃತಿಗಳೇ ಜಾಸ್ತಿ."

ಅವರಿಬ್ಬರೂ ಒಂದು, ಒಂದೂವರೆ ಗಂಟೆ ಸ್ಕೆಚ್ ಮಾಡಿದರು. ಮಾಡೆಲ್ ಆಗಲೇ ದಣಿದಿದ್ದಳು.

"ಅವಳು ಕುಳಿತುಕೊಳ್ಳಲಿ. ಆಕೃತಿ ಒಂದು ಥರಾ ನಿರಾಳವಾಗಿ ಇರುತ್ತೆ." – ಎಂದು ವಿನ್ಸೆಂಟ್ ಹೇಳಿದ.

ಮಧ್ಯಾಹ್ನದ ವರೆಗೂ ಕೆಲಸಮಾಡಿದರು. ಡ್ರಾಯಿಂಗ್‌ಬೋರ್ಡ್ ಕಡೆ ಬಗ್ಗಿ ಸಾಕಷ್ಟು ಮಗ್ನತೆಯೊಂದಿಗೆ ಸ್ಕೆಚ್ ಮಾಡುತ್ತಿದ್ದರು. ಮಧ್ಯೆ ಮಧ್ಯೆ ಟೊಬ್ಯಾಕೋ ವಿರಾಮಕ್ಕೆಂದು, ಒಂದೆರಡು ನಿಮಿಷ ವಿರಾಮಕೊಟ್ಟದ್ದಷ್ಟೇ ಹೊರತು, ಒಂದೇ ಸಮನೆ ಕೆಲಸದಲ್ಲಿ ತೊಡಗಿದ್ದರು. ಡಿ ಬಾಕ್ ತಾನು ತಂದಿದ್ದ ಲಂಚ್ ಬಾಕ್ಸ್ ಬಿಚ್ಚಿದ ಮೂವರೂ ಊಟಕ್ಕೆಂದು ಕುಳಿತರು. ಬ್ರೆಡ್ ಚೂರು, ಚೀಸ್, ತಣ್ಣಗಾಗಿದ್ದ ಮಾಂಸದ ತುಂಡುಗಳು – ಇವುಗಳನ್ನೇ ಸವಿದರು. ನಂತರ ಬೆಳಗಿನಿಂದ ಮಾಡಿದ್ದ ತಮ್ಮ ಡ್ರಾಯಿಂಗ್‌ಗಳನ್ನು ಪರಿಶೀಲಿಸಿದರು.

"ಒಂದು ಸಲ ಹೊಟ್ಟೆ ತುಂಬಿಸಿಕೊಂಡರೆ ಸಾಕು, ನೀನು ಮಾಡಿರುವ ಕೆಲಸದ ಬಗ್ಗೆ ಒಂದು ನಿರ್ದಿಷ್ಟ ನೋಟ ಸಾಧ್ಯವಾಗುತ್ತೆ, ಎಂಥಾ ವಿಚಿತ್ರ ಅಲ್ಲ!" ಡಿ ಬಾಕ್ ಹೇಳಿದ.

"ನೀನು ಏನು ಮಾಡಿದ್ದೀಯ. ನೋಡಬಹುದಾ?"

"ಸಂತೋಷವಾಗಿ!"

ಡಿ ಬಾಕ್ ಹುಡುಗಿಯ ಯಥಾವತ್ತಾದ ಆಕಾರವನ್ನೇನೋ ಬಿಡಿಸಿದ್ದ. ಆದರೆ ಅವಳ ದೇಹದ ಆಕೃತಿಯಲ್ಲಿ ಅವಳ ವ್ಯಕ್ತಿತ್ವದ, ತನ್ನತನದ ಛಾಯೆ ಎಳ್ಳಿನಷ್ಟೂ ಕಾಣಿಸುತ್ತಿರಲಿಲ್ಲ. ಪರ್‌ಫೆಕ್ಟ್ ಆದ ದೇಹಾಕೃತಿ ಅದಾಗಿತ್ತು.

ಡಿ ಬಾಕ್ ವಿನ್ಸೆಂಟ್‌ನ ಸ್ಕೆಚ್ಚ್‌ನ್ನು ಗಮನಿಸುತ್ತಾ, "ಅರೆ, ಇದೇನು ಅವಳ ಮುಖ ಇರಬೇಕಾದ ಜಾಗದಲ್ಲಿ ಇದೇನಿದು? ಭಾವನೆಗಳನ್ನು ತುಂಬುವುದೆಂದರೆ ಇದೇಯೇನು?"

"ನಾವು ಭಾವಚಿತ್ರಗಳನ್ನು ಮಾಡುತ್ತಿರಲಿಲ್ಲ. ನಾವು ಮಾಡುತ್ತಿದ್ದುದು ಆಕೃತಿಗಳನ್ನು" ವಿನ್ಸೆಂಟ್ ಉತ್ತರಿಸಿದ.

"ವಿನ್ಸೆಂಟ್, ಮೊಟ್ಟ ಮೊದಲ ಬಾರಿಗೆ, ಆಕೃತಿಗೆ ಮುಖದ ಅಗತ್ಯ ಇರೋದಿಲ್ಲ ಅಂತ, ನಿನ್ನಿಂದ ಕಂಡುಕೊಂಡೆ!"

"ನಿನ್ನ ಸ್ಕೆಚ್‌ನ ಆಕೃತಿಯಲ್ಲಿ ಹೊಟ್ಟೆಯನ್ನು ಗಮನಿಸು" ವಿನ್ಸೆಂಟ್ ಹೇಳಿದ.

"ಏನಾಗಿದೆ ನನ್ನ ಫಿಗರ್‌ಗೆ?"

"ಅದು ಬಿಸಿಗಾಳಿ ತುಂಬಿಕೊಂಡು ಇರುವ ಹಾಗಿದೆಯೇ ಹೊರತಾಗಿ ಒಂದಿಂಚಿನಷ್ಟಾದರೂ ಕರುಳಾಗಲೀ, ಗರ್ಭವಾಗಲೀ ಇದ್ದಂತಿಲ್ಲ."

"ಯಾಕಿರಬೇಕು? ಅಲ್ಲದೆ ಅವಳ ಹೊಟ್ಟೆಯೊಳಗಿದ್ದ ಕರುಳಿನ ಭಾಗವಾಗಲೀ, ಗರ್ಭವಾಗಲಿ, ಹೊರಗೆ ಇಣುಕಿದ್ದನ್ನು ನಾನು ನೋಡಲಿಲ್ಲವಲ್ಲ."

ಮಾಡೆಲ್ ಮಾತ್ರ, ಕಲಾವಿದರು ಒಂದು ಥರಾ ಹುಚ್ಚರು ಎಂದುಕೊಂಡದ್ದರಿಂದ, ತನ್ನ ಪಾಡಿಗೆ ತಾನು ತಿನ್ನುವುದರಲ್ಲಿ ಮಗ್ನಳಾಗಿದ್ದಳು. ವಿನ್ಸೆಂಟ್ ತನ್ನ ಸ್ಕೆಚ್ಚನ್ನು ಡಿ ಬಾಕ್‌ನ ಸ್ಕೆಚ್ ಪಕ್ಕದಲ್ಲಿ ಇರಿಸಿದ.

"ನೀನು ಚೆನ್ನಾಗಿ ಗಮನಿಸಿದರೆ ನಿನಗೇ ಗೊತ್ತಾಗುತ್ತೆ. ನನ್ನ ಫಿಗರ್‌ನ ಹೊಟ್ಟೆ ಒಳಗೆ ಆಹಾರವೂ ಪ್ರವೇಶ ಆಗಿರುವುದು ಕಾಣುತ್ತೆ."

"ಪೈಂಟಿಂಗ್‌ಗೂ ಅದಕ್ಕೂ ಏನು ಸಂಬಂಧ? ನಾವೇನು ಉದರ ಸಂಬಂಧಿ ತಜ್ಞರೇ? ಜನ ನಗ್ನ ಕ್ಯಾನ್‌ವಾಸ್ ನೋಡುವಾಗ, ಮರಗಳ ಮೇಲಿನ ಮಂಜು, ಮುಳುಗುತ್ತಿರುವ ಸೂರ್ಯ, – ಇವುಗಳನ್ನು ಗಮನಿಸ್ಸಲು ಬಯಸುತ್ತಾರೆಯೇ ಹೊರತಾಗಿ ಹೊಟ್ಟೆಯ ಒಳಭಾಗದ ಕರುಳು ಅದೂ ಇದೂಂತಲ್ಲ."

ಪ್ರತಿದಿನ ಬೆಳಿಗ್ಗೆ ಬೇಗನೆ ಎದ್ದು ದಿನ ದಿನಕ್ಕೆ ಬೇಕಾದ ಮಾಡೆಲ್‌ಗಳನ್ನು ಹುಡುಕಿಕೊಂಡು ಹೋಗುತ್ತಿದ್ದ. ಕಮ್ಮಾರನ ಮಗ, ಅನಾಥಾಶ್ರಮದ ಮುದಿಹೆಂಗಸು, ಯಾವುದೋ ಮಾರ್ಕೆಟ್ಟಿನಿಂದ ಗಂಡು ವ್ಯಕ್ತಿ, ಅಜ್ಜಿ ಮತ್ತು ಮೊಮ್ಮಗಳು – ಹೀಗೆ ಒಂದೊಂದು ದಿನಕ್ಕೆ ಒಬ್ಬೊಬ್ಬರೂಂತ ಹುಡುಕಿ ಹಿಡಿಯುತ್ತಿದ್ದ. ಮಾಡೆಲ್ಸ್‌ಗೆ ತುಂಬಾ ಹಣ ಖರ್ಚಾಗುತ್ತಿತ್ತು. ಊಟಕ್ಕೇಂತ ಸ್ವಲ್ಪ ಹಣಾನಾದರೂ ಉಳಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಆದರೂ ಹೇಗ್‌ಗೆ ಬಂದು ಬೇಗ ಬೇಗ ಕಲಿತು, ಕೆಲಸ ಮುಗಿಸದಿದ್ದರೆ ಬರುವ ಸಾರ್ಥಕತೆ ಏನಿರುತ್ತೆ? ಹೊಟ್ಟೆ ಹಸಿದಿದ್ದರೂ ಪರವಾಗಿಲ್ಲ. ಅದರ ಕಡೆ ಗಮನ ಕೊಡದೆ ಬಂದ ಉದ್ದೇಶವನ್ನು ಸಾಧಿಸಿಕೊಂಡು ಹೋಗುವುದು ಮುಖ್ಯ. ತಿನ್ನುವುದು ಇದ್ದೇ ಇದೆ! ಚೆನ್ನಾಗಿ ಕಲಿತು, ಒಳ್ಳೆ ಸಾಧನೆಮಾಡಿದ ಮೇಲೆ ತಿಂದರಾಯಿತು, ಎಂದುಕೊಳ್ಳುತ್ತಿದ್ದ.

ಮಾವ್ ಸಹನೆಯಿಂದ ವಿನ್ಸೆಂಟ್‌ಗೆ ಕಲಿಸಿಕೊಡುತ್ತಿದ್ದ. ಪ್ರತಿದಿನಾ ಸಾಯಂಕಾಲ ವಿನ್ಸೆಂಟ್ ಇಲೆಬೂಮೆನ್‌ಗೆ ಮಾವ್‌ನ ಬೆಚ್ಚನೆಯ ಸ್ಟುಡಿಯೋಗೆ ಭೇಟಿ ನೀಡುತ್ತಿದ್ದ. ಅವನ ವಾಟರ್‌ಕಲರ್ಸ್ ಅಷ್ಟು ಚೆನ್ನಾಗಿ ಬರುತ್ತಿರಲಿಲ್ಲವಾದ ಕಾರಣ ಅವನು ಒಮ್ಮೊಮ್ಮೆ ತುಂಬ ನಿರುತ್ಸಾಹಗೊಳ್ಳುತ್ತಿದ್ದ. ಆದರೆ ಮಾವ್ ಮಾತ್ರ ಸುಮ್ಮನೆ ನಕ್ಕುಬಿಡುತ್ತಿದ್ದ.

"ಈಗ ನಿನ್ನ ವಾಟರ್‌ಕಲರ್ಸ್ ಅಷ್ಟು ಚೆನ್ನಾಗಿಲ್ಲ ನಿಜ. ಆದರೆ ಮೊದಲೇ ಅವು ಪಾರದರ್ಶಕವಾಗಿ, ತೆಳುವಾಗಿದ್ದರೆ, ಬರಬರುತ್ತಾ ದಟ್ಟ ಬಣ್ಣಗಳಾಗಿ ಪರಿವರ್ತಿತವಾಗುತ್ತವೆ. ಈಗ ದಟ್ಟವಾಗಿರುವುದರಿಂದ ಮುಂದೆ ಅವು ತೆಳುವಾಗಿ ಚೆನ್ನಾಗಿ ಹರಡುತ್ತವೆ."

"ಕಸಿನ್ ಮಾವ್ ನೀನು ಹೇಳೋದೇನೋ ಸರಿ. ಆದರೆ ಹಣ ಸಂಪಾದನೆ ಮಾಡಬೇಕಾದರೆ, ಡ್ರಾಯಿಂಗ್‌ಗಳನ್ನು ಹೇಗೆ ಸಿದ್ಧಪಡಿಸಬೇಕು?"

"ವಿನ್ಸೆಂಟ್ ನೀನು ಆತುರ ಪಡುವುದರಿಂದ, ನಿನ್ನ ಕಲೆ ಪರಿಪೂರ್ಣತೆಯನ್ನು ತಲುಪಲು ಸಾಧ್ಯವಿಲ್ಲ. ಆ ದಿನಕ್ಕೆ ಬದುಕಬೇಕೆನ್ನುವ ಮನುಷ್ಯ ಆ ದಿನಕ್ಕೆ ಮಾತ್ರವೇ ಮನುಷ್ಯನಾಗಿರುತ್ತಾನೆ. ಕಲೆಯ ಜಗತ್ತಿನ ವಿಚಾರಗಳೇ ಬೇರೆ. ಯಾರು ಪ್ರಾಮಾಣಿಕತೆಯಿಂದ ಬದುಕಲು ಪ್ರಯತ್ನಿಸುತ್ತಾರೋ ಅವರಿಗೆ ಮುಂದಿನ ಬದುಕು ಉತ್ತಮವಾಗುತ್ತದೆ. ಏನೋ ತಕ್ಷಣಕ್ಕೆ ಸಾಧಿಸಿ, ಪ್ರಶಂಸೆ ಪಡೆಯುವುದು ಮುಖ್ಯವಾಗಬಾರದು."

"ಕಸಿನ್ ಮಾವ್ ನಾನು ಬದುಕಿಗೆ ಪ್ರಾಮಾಣಿಕನಾಗಿರಬೇಕೆಂದು ಬಯಸುತ್ತೇನೆ. ಜೀವನದ ಕಟುವಾದ ಸತ್ಯಗಳನ್ನು ಒರಟಾಗಿಯಾದರೂ ಕಾಣಿಸಲು ಪ್ರಯತ್ನಿಸುತ್ತೇನೆ. ಆದರೆ ಬದುಕುವುದಕ್ಕೆ ದಾರಿ ಬೇಕೆಂದಾಗ.....? ನಾನೊಂದಷ್ಟು ಡ್ರಾಯಿಂಗ್ಸ್ ಮಾಡಿದ್ದೇನೆ. ಟರ್ಸ್‌ಟೀಗ್ ಕೊಳ್ಳುವುದು ಸಾಧ್ಯವಾದರೆ..... ಆದರೆ ನನಗೆ ಗೊತ್ತು...."

"ಎಲ್ಲಿ ನೋಡೋಣ, ಅವುಗಳನ್ನು ಕೊಡು" – ಮಾವ್ ಕೇಳಿದ.

ಅವನು ವಾಟರ್‌ಕಲರ್ಸ್‌ಗಳನ್ನು ನೋಡಿದ್ದೇ, ಸಾವಿರ ತುಂಡುಗಳಾಗಿ ಹರಿದು ಎಸೆದ. ನೀನು ಹೇಗೆ ನಿನ್ನ ಒರಟು ಶೈಲಿಯಲ್ಲಿ ಮಾಡುತ್ತಿದ್ದೀಯ. ಅದನ್ನೇ ಮುಂದುವರೆಸು ವಿನ್ಸೆಂಟ್. ಅಮೆಚ್ಯೂರ್ ಕಲಾವಿದರು. ಡೀಲರ್ಸ್ ಅಂತ ತಲೆಕೆಡಿಸಿಕೊಳ್ಳಬೇಡ. ಯಾರಿಗೆ ಇಷ್ಟವಾಗುತ್ತೋ ಅವರೇ ಬರಲಿ ನಿನ್ನ ಹತ್ರ, ಸಮಯ ಬಂದ್ರೆ ನೋಡು, ನೀನು ಹೇಗಾಗ್ತೀಯ."

ವಿನ್ಸೆಂಟ್ ಹರಿದ ಕಾಗದ ಚೂರುಗಳತ್ತ ನೋಡಿದ. ಧನ್ಯವಾದಗಳು ಕಸಿನ್. ನನಗೆ ಈ ರೀತಿಯ ಒಂದು ಕಿಕ್ ಬೇಕಿತ್ತು."

ಆ ದಿನ ರಾತ್ರಿ ಮಾವ್ ಒಂದು ಸಣ್ಣ ಪಾರ್ಟಿ ಏರ್ಪಡಿಸಿದ್ದ. ಅನೇಕ ಚಿತ್ರ ಕಲಾವಿದರು ಆಗಮನಿಸಿದರು. ಅವರಲ್ಲಿ, 'ನಿಷ್ಠುರ ಕಲಾವಿಮರ್ಶಕ' ಎಂದು ಗುರುತಿಸಿಕೊಂಡಿದ್ದ ವೀಸೆನ್‌ಬ್ರೂಕ್, ಡಿ ಬಾಕ್, ಬಾಕಿಜೆನ್, ನ್ಯೂಹಿಸ್ ಮತ್ತು ವೋಸ್‌ನ ಗೆಳೆಯ ಮೊದಲಾದವರೆಲ್ಲ ಇದ್ದರು.

ವೀಸೆನ್‌ಬ್ರೂಕ್ ನೋಡಲು ಪುಟ್ಟ ಆಕೃತಿಯಾದರೂ ತುಂಬು ಉತ್ಸಾಹದ ವ್ಯಕ್ತಿಯಾಗಿದ್ದ. ಯಾವುದರಿಂದಲೂ ಅವನನ್ನು ಗೆಲ್ಲುವುದು ಸಾಧ್ಯವಿರಲಿಲ್ಲ. ಅವನಿಗೆ ಯಾವುದಾದರೂ ಇಷ್ಟವಾಗದಿದ್ದಲ್ಲಿ ನಿರ್ದಯೆಯಿಂದ ಮುಲಾಜಿಲ್ಲದೆ ಟೀಕಾಸ್ತ್ರದಿಂದ ಮುಗಿಸಿಬಿಡುತ್ತಿದ್ದ.

ಅವನಿಗೆ ಯಾವುದು ಇಷ್ಟವಾದರೆ ಅದನ್ನು ತನಗೆ ಇಷ್ಟ ಬಂದಂತೆ ಪೈಂಟ್ ಮಾಡುತ್ತಿದ್ದ. ಜನ ಅದನ್ನು ಮೆಚ್ಚಿಕೊಳ್ಳುತ್ತಿದ್ದರು. ಟರ್ಸ್‌ಟೀಗ್ ಯಾವುದೋ ಒಂದು ಸಂದರ್ಭದಲ್ಲಿ, ಅವನ ಕ್ಯಾನ್‌ವಾಸ್ ಬಗ್ಗೆ ಏನೋ ಹೇಳಿದ್ದಕ್ಕೆ, ಗೂಪಿಲ್ಸ್ ಮೂಲಕ ತನ್ನ ಕ್ಯಾನ್‌ವಾಸ್‌ಗಳನ್ನು ಮಾರುವುದನ್ನೇ ನಿಲ್ಲಿಸಿಬಿಟ್ಟಿದ್ದ. ಆದರೂ ಅವನು ಮಾಡಿದ ಪೈಂಟಿಂಗ್ಸ್ ಎಲ್ಲವೂ ಚೆನ್ನಾಗಿ ಮಾರಾಟವಾಗುತ್ತಿದ್ದವು. ಅವನ ವ್ಯಕ್ತಿತ್ವ ಅವನ ದೇಹರಚನೆ ಎಲ್ಲವೂ ಅವನ ನಾಲಿಗೆಯಷ್ಟೇ ತೀಕ್ಷ್ಣವಾಗಿದ್ದವು. ಎಲ್ಲರೂ ಅವನಿಗೆ ಹೆದರುತ್ತಿದ್ದರೂ ಅವನ ಅಭಿಪ್ರಾಯಕ್ಕಾಗಿ ಹಾತೊರೆಯುತ್ತಿದ್ದರು. ಅವನೊಬ್ಬ ತನ್ನ ನಿಷ್ಠುರ, ವಿಚಿತ್ರ ಸ್ವಭಾವದಿಂದಲೇ ರಾಷ್ಟ್ರದ ನೆಲೆಯಲ್ಲಿಯೂ ಗುರುತಿಸಿಕೊಂಡಿದ್ದ. ವಿನ್ಸೆಂಟ್‌ನನ್ನು ಬೆಂಕಿಗೂಡಿದ್ದ ಕಡೆಯಲ್ಲಿನ ಒಂದು ಮೂಲೆಯತ್ತ ಕರೆದುಕೊಂಡು ಹೋದ. ಆಗಾಗ ಬೆಂಕಿಯಲ್ಲಿ ಉಗುಳನ್ನು ಉಗಿಯುತ್ತ,

"ನೀನು ವಿನ್ಸೆಂಟ್ ವಾನ್‌ಗೋ ಅಂತ ಗೊತ್ತಾಯ್ತು. ನಿನ್ನ ಅಂಕಲ್ಸ್ ಕಲಾಕೃತಿಗಳ ಭರ್ಜರಿ ಮಾರಾಟ ಮಾಡುವ ಹಾಗೆ, ಭರ್ಜರಿಯಾಗಿ ಪೈಂಟಿಂಗ್ಸ್ ಮಾಡುತ್ತಿರುವೆಯೇನು?"

"ಇಲ್ಲ. ನಾನು ಯಾವುದನ್ನೂ ಸರಿಯಾಗಿ ಮಾಡ್ತಿಲ್ಲ."

"ಒಳ್ಳೇದಾಯ್ತು ಬಿಡು. ಪ್ರತಿಯೊಬ್ಬ ಕಲಾವಿದ ಅರವತ್ತನೇ ವಯಸ್ಸಾಗುವವರೆಗೂ ಹೀಗೆಯೇ ಸಾಯಬೇಕು. ಬಹುಶಃ ಆಮೇಲೇ ಅವನಿಗೆ ಒಳ್ಳೊಳ್ಳೇ ಕಲಾಕೃತಿಗಳನ್ನು ಮಾಡೋಕೆ ಸಾಧ್ಯವಾಗುತ್ತೆ."

"ಅಬ್ಬ! ನಿನಗಿನ್ನೂ ನಲವತ್ತು ಪೂರ್ತಿಯಾದ ಹಾಗೆ ಇಲ್ಲ!. ಆದರೂ ತುಂಬಾ ಚೆನ್ನಾಗಿ ಮಾಡಿದ್ದೀಯ."

ವೀಸೆನ್ ಬ್ರೂಕ್‌ಗೆ ಅವನ 'ಅಬ್ಬ!' ಎನ್ನುವ ಉದ್ಗಾರ ತುಂಬ ಇಷ್ಟವಾಯಿತು. ಎಷ್ಟೋ ವರ್ಷಗಳ ನಂತರ ಮೊದಲ ಬಾರಿಗೆ, ಅವನ ಬಗ್ಗೆ ಒಂದೆರಡು ಮಾತು ಹೇಳುವ ಸಾಹಸಕ್ಕೆ ಮುಂದಾದದ್ದು. ಅವನಿಗೆ ಆದ ಮೆಚ್ಚುಗೆಯನ್ನು, ವಿನ್ಸೆಂಟ್‌ನ ಸಿಗರೇಟಿಗೆ ಬೆಂಕಿ ಹಚ್ಚುವುದರ ಮೂಲಕ ತೋರಿಸಿದ.

"ನಿನಗೆ ನನ್ನ ಪೈಂಟಿಂಗ್ಸ್ ಇಷ್ಟವಾದರೆ, ಪೈಂಟ್ ಮಾಡೋದು ಬಿಟ್ಟು ಪೈಂಟಿಂಗ್ಸ್‌ನ ಕೇರ್‌ಟೇಕರ್ ಆಗ್ಬಿಡು. ನನ್ನ ಪೈಂಟಿಂಗ್ಸ್‌ನ ಪಬ್ಲಿಕ್ ಯಾಕೆ ಕೊಂಡುಕೊಳ್ಳುತ್ತೆ ಗೊತ್ತೇ? ಯಾಕೇಂದ್ರೆ, ಅದೆಲ್ಲ ಕಸ, ಜಂಕ್! ಅವು ಚೆನ್ನಾಗಿದ್ದರೆ ನಾನೇ ಇಟ್ಕೊಂಡು ಬಿಡ್ತೇನೆ.... ಇಲ್ಲ ಮರಿ, ನಾನಿನ್ನೂ ಅಭ್ಯಾಸಮಾಡುವುದರಲ್ಲಿಯೇ ಇದ್ದೇನೆ! ನನಗೆ ಅರವತ್ತಾದಾಗಲೇ, ನಿಜವಾದ 'ಪೈಂಟಿಂಗ್' ಶುರುವಾಗುತ್ತೆ, ಆಗ ಮಾಡುವುದನ್ನೆಲ್ಲ ನನ್ನ ಹತ್ತಿರವೇ ಇರಿಸಿಕೊಳ್ಳುತ್ತೇನೆ. ಸತ್ತಾಗ ಅವುಗಳನ್ನೂ ನನ್ನ ಜೊತೆ ಸಮಾಧಿ ಮಾಡಲು ಹೇಳುತ್ತೇನೆ. ಯಾವೊಬ್ಬ ಕಲಾವಿದನೂ ತಾನು ಮಾಡಿದ ತುಂಬ ಒಳ್ಳೆಯ ಕಲಾಕೃತಿಯನ್ನು ತನ್ನ ಕೈಯಿಂದ ಹೋಗುವುದಕ್ಕೆ ಬಿಡುವುದೇ ಇಲ್ಲ. ಪಬ್ಲಿಕ್‌ಗೆ ಮಾರೋದೆಲ್ಲ ಬರೀ ಕಚಡ!!"

ಕೋಣೆಯ ಮತ್ತೊಂದು ದಿಕ್ಕಿನಲ್ಲಿದ್ದ ಡಿ ಬಾಕ್ ವಿನ್ಸೆಂಟ್‌ನತ್ತ ಕಣ್ಣು ಹೊಡೆದ. "ವೀಸೆನ್‌ಬ್ರೂಕ್ ನೀವೊಬ್ಬ ಕಲಾವಿಮರ್ಶಕ ಆಗಬೇಕಿತ್ತು. ಅದನ್ನು ತಪ್ಪಿಸಿಕೊಂಡಿರಿ."

ವೀಸೆನ್‌ಬ್ರೂಕ್ ನಕ್ಕು, ಮಾವ್‌ಗೆ "ನಿನ್ನ ಕಸಿನ್ ಇದ್ದಾನಲ್ಲ ಕಾಣುವಷ್ಟು ಕೆಟ್ಟವನೇನಲ್ಲ. ಬಹಳ ಬುದ್ಧಿವಂತ. ಮಾತನ್ನು ಚೆನ್ನಾಗಿ ಆಡಬಲ್ಲ" ಎಂದು ಹೇಳಿದ. ವಿನ್ಸೆಂಟ್‌ನ ಕಡೆ ಕ್ರೂರವಾಗಿ ನೋಡುತ್ತಾ, "ನಿನಗೇನಾಗಿದೆ, ಈ ಚಿಂದಿ ಉಡೋದು ಬಿಟ್ಟು, ಸ್ವಲ್ಪ ಡೀಸೆಂಟಾದ ಬಟ್ಟೆ ಹಾಕ್ಕೋ ಬಾರದೇ?" ಎಂದ.

ವಿನ್ಸೆಂಟ್, ಥಿಯೋನ ಸೂಟನ್ನೇ ತನ್ನಳತೆಗೆ ಸರಿಮಾಡಿಸಿ ಹಾಕಿಕೊಂಡಿದ್ದ. ಆದರೆ ಹೊಲಿಗೆ ಸರಿಯಾಗಿರಲಿಲ್ಲ. ಜೊತೆಗೆ ಈಸಲ್ ಮುಂದೆ ನಿಲ್ಲುವಾಗಲೆಲ್ಲ ಅದನ್ನೇ ಧರಿಸುತ್ತಿದ್ದ.

"ನಿನ್ನ ಅಂಕಲ್‌ಗಳ ಬಳಿ, ಇಡೀ ಹಾಲೆಂಡ್ ಜನಕ್ಕೇ ಬೇಕಾಗುವಷ್ಟು ಬಟ್ಟೆ ಕೊಡಿಸುವಷ್ಟು ಹಣ ಇದೆ. ನಿನಗೆ ಬಟ್ಟೆ ಕೊಡಿಸೋದಕ್ಕೆ ಆಗೋದಿಲ್ವೇನು?"

"ಅವರು ಯಾಕೆ ಕೊಡಿಸಬೇಕು? ನಿಮ್ಮ ಮಾತನ್ನು ಅವರೂ ಒಪ್ಪುತ್ತಾರೆ. ಕಲಾವಿದರು ಬಡತನದಲ್ಲಿ ಸಾಯಬೇಕು! ಅಂತ."

"ನಿನ್ನಲ್ಲಿ ಅವರಿಗೆ ವಿಶ್ವಾಸ ಇಲ್ಲ ಅನ್ನುವುದಾದರೆ, ಅವರು ಮಾಡಿದ್ದು ಸರಿ. ವಾನ್‌ಗೋ ವಂಶದವರು ನೂರು ಕಿಲೋಮೀಟರ್ ದೂರದಲ್ಲಿದ್ದರೂ ಕಲಾವಿದರನ್ನು ಗುರುತಿಸಿ ಅರ್ಥಮಾಡಿಕೊಂಡಿರ್ತಾರೆ. ಬಹುಶಃ ನೀನು ಹೋಪ್‌ಲೆಸ್ಸ್ ಅಂತ ಅವರಿಗೆ ಅನಿಸಿರಬೇಕು."

"ಹಾಳಾಗಿ ಹೋಗು."

ವಿನ್ಸೆಂಟ್‌ಗೆ ಸಿಟ್ಟು ನೆತ್ತಿಗೇರಿತು. ಎದ್ದು ನಿಂತ. ಆದರೆ ವೀಸೆನ್‌ಬ್ರೂಕ್ ಅವನ ಕೈಹಿಡಿದುಕೊಂಡು, ದೊಡ್ಡದಾಗಿ ನಕ್ಕ.

"ಹೂಂ! ಇದನ್ನೇ ನಾನು ಕಾಣಬೇಕೂಂತ ಅಂದುಕೊಂಡದ್ದು. ಎಷ್ಟು ಬೈಗುಳನ್ನು ಸಹಿಸಿಕೊಳ್ಳಬಲ್ಲೆ ಅನ್ನುವುದನ್ನು ಪರೀಕ್ಷೆ ಮಾಡಬೇಕಿತ್ತು. ಧೈರ್ಯ ಕಳೆದುಕೊಳ್ಳಬೇಡ ವಿನ್ಸೆಂಟ್. ನಿನ್ನಲ್ಲಿ ಸತ್ವ ಸಾಮರ್ಥ್ಯಗಳು ಇವೆ."

ಮಾವ್, ಕ್ರೈಸ್ತಪಾದ್ರಿಯ ಮಗನಾಗಿದ್ದ. ಆದರೆ ಅವನು ನಂಬಿದ್ದು ಒಂದೇ ಒಂದು ಧರ್ಮ. ಅದೆಂದರೆ ಪೈಂಟಿಂಗ್! ಜೆಟ್, ಟೀ, ಬನ್ಸ್, ಚೀಸ್‌ಕೇಕ್‌ಗಳನ್ನು ಅತಿಥಿಗಳಿಗೆ ನೀಡುತ್ತಿದ್ದಾಗ, ಅಣಕ ಭಾಷಣವೊಂದನ್ನು ಮಾಡಿದ.

ಪೀಟರ್‌ನ ಮೀನು ಹಿಡಿಯುವ ದೋಣಿಯ ಬಗ್ಗೆ ಒಂದು ಭಾಷಣ (ಪ್ರವಚನ) ಮಾಡಿದ. ಪೀಟರ್‌ಗೆ ಆ ದೋಣಿ ವಂಶಪಾರಂಪರ್ಯವಾಗಿ ಬಂದಿತ್ತಾ? ಇಲ್ಲವೇ ಕಂತುಗಳ ಯೋಜನೆಯಡಿಯಲ್ಲಿ ಕೊಂಡಿದ್ದನೇ? ಓಹ್ ಯೋಚಿಸುವುದಕ್ಕೂ ಭಯವಾಗುತ್ತದೆ.... ದೋಣಿಯನ್ನು, ಕಳ್ಳತನದಿಂದ ಪಡೆದನೇ!...." ಅಲ್ಲಿ ಸೇರಿದ್ದ ಕಲಾವಿದರಿಗೆ ಈ ಕತೆ ಬಹಳ ಮೋಜೆನಿಸಿತು. ಜೋರಾಗಿ ಚಪ್ಪಾಳೆ ಹೊಡೆಯುತ್ತ ನಗುತ್ತಿದ್ದರು. ತಮ್ಮ ಕೈಲಿದ್ದ ಕೇಕು, ಟೀಗಳನ್ನು ಗಬಗಬನೆ ತಿಂದು ಮುಗಿಸಿದರು.

"ಮಾವ್ ತುಂಬ ಬದಲಾಗಿದ್ದಾನೆ." ವಿನ್ಸೆಂಟ್ ಯೋಚಿಸಿದ. ಮಾವ್‌ನಲ್ಲಿ ಸುಪ್ತನಾಗಿದ್ದ ಸೃಜನಶೀಲ ಕಲಾವಿದ ರೂಪಾಂತರ ಹೊಂದುತ್ತಿದ್ದನೆಂಬುದನ್ನು ತಿಳಿದಿರಲಿಲ್ಲ. ಕ್ಯಾನ್‌ವಾಸ್ ಶುರುಮಾಡಿದಾಗ ಆಸಕ್ತಿಯಾಗಲೀ ಉತ್ಸಾಹವಾಗಲೀ, ಚುರುಕುತನವಾಗಲಿ ಇರಲಿಲ್ಲ. ಆದರೆ ಕ್ರಮೇಣ ಅವನ ತಲೆಯಲ್ಲಿ ವಿಚಾರಗಳು ಹೊಳೆಯುತ್ತಿದ್ದಂತೆ, ಕ್ಯಾನ್‌ವಾಸ್‌ನಲ್ಲಿ ರೂಪ ಪಡೆಯಲು ಆರಂಭವಾಯಿತು. ದಿನದಿನಕ್ಕೆ ಅವನು ಕೆಲಸ ಮಾಡುವ ಸಮಯವನ್ನು ಹೆಚ್ಚಿಸುತ್ತಿದ್ದ. ವಸ್ತುಗಳು ಕ್ಯಾನ್‌ವಾಸ್‌ನಲ್ಲಿ ಸ್ಪಷ್ಟವಾಗಿ ಮೂಡತೊಡಗಿದವು. ಅವನಿಂದ ಇನ್ನಷ್ಟು ಹೆಚ್ಚಿನ ಶ್ರಮ, ಸಮಯಗಳು ಬೇಕಾಗಿದ್ದವು. ಮನೆ, ಸ್ನೇಹಿತರು, ಹೆಂಡತಿ – ಎಲ್ಲವನ್ನೂ ದೂರವಿರಿಸುವಂತಾಯಿತು. ಹಸಿವು, ನಿದ್ದೆಗಳೂ ಅವನಿಗೆ ಬೇಡವಾದವು. ಎಷ್ಟೋ ರಾತ್ರಿಗಳು ನಿದ್ದೆ ತೊರೆದು ಕ್ಯಾನ್‌ವಾಸ್‌ನಲ್ಲಿ ಮುಳುಗಿದ. ಉತ್ಸಾಹ ಹೆಚ್ಚಾದ ಹಾಗೆಲ್ಲ ಅವನ ಶಕ್ತಿ ಕುಸಿಯುತ್ತಿತ್ತು. ದೇಹದಲ್ಲಿ ಕೃಶತೆ, ಕಣ್ಣಲ್ಲಿ ಕಾಂತಿಹೀನತೆಗಳು ಮನೆಮಾಡಿದವು.

ದಣಿವು ಹೆಚ್ಚಾಗುತ್ತಿದ್ದಂತೆಲ್ಲ ಕೆಲಸದ ರಭಸ ಏರಿತು. ಭಾವ ತನ್ಮಯತೆಯೊಂದಿಗೆ ಅದನ್ನು ಪೂರೈಸುವುದರಲ್ಲಿ ಸಂಪೂರ್ಣವಾಗಿ ಮಗ್ನನಾದ; ಲೀನವಾದ, ಯಾವಾಗ

ಮುಗಿಯಬಹುದೆಂಬ ಕಲ್ಪನೆಯೂ ಇರಲಿಲ್ಲ. ಆದರೂ ಅದನ್ನು ಮುಗಿಸಲೇಬೇಕೆಂಬ ಹಟಕ್ಕೆ ಅಂಟಿಕೊಂಡ. ಕ್ಯಾನ್‌ವಾಸ್ ಮುಗಿಸಬೇಕೆಂಬ ನಿರ್ಧಾರದಿಂದ, ದೆವ್ವದಂತೆ ಕೆಲಸಮಾಡಿದ. ಯಾವುದೋ ಅಗೋಚರ ಶಕ್ತಿಯೊಂದು ಅವನನ್ನು ಒಳಗೊಳಗೇ ಛಿದ್ರಗೊಳಿಸುತ್ತಿತ್ತು. ಕಡೆಗೆ ಅವನು ಎಂಥಾ ಸ್ಥಿತಿ ತಲುಪಿದ ಎಂದರೆ, ಎದುರಿಗೆ ಬಂದವರನ್ನು ಆವೇಶಕ್ಕೊಳಗಾಗಿ ದೂಡಿ ಬೀಳಿಸುತ್ತಿದ್ದ. ತನ್ನೆಲ್ಲ ಶಕ್ತಿಯನ್ನು ಸಂಚಯಿಸಿಕೊಂಡು ಕ್ಯಾನ್‌ವಾಸ್ ಮೇಲೆ ಮುಗಿಬಿದ್ದ. ಕಡೆಯ ತೊಟ್ಟು ಬಣ್ಣವಿರುವವರೆಗೂ ಮಾಡಲೇ ಬೇಕೆಂದು ನಿರ್ಧರಿಸಿದಂತಿದ್ದ. ಎಷ್ಟೇ ಆಯಾಸವಾದರೂ, ತನಗೇನೇ ಆದರೂ ಕ್ಯಾನ್‌ವಾಸ್ ಮುಗಿಸದ ಹೊರತು, ನಿಲ್ಲುವಂತಿಲ್ಲ ಎಂಬಂತೆ, ಮಾಡುತ್ತಲೇ ಹೋದ.

ಕ್ಯಾನ್‌ವಾಸ್ ಮುಗಿಯುತ್ತಿದ್ದಂತೆ, ಅದನ್ನು ತಲುಪಿಸಿ ಬಿಟ್ಟ. ಮರುಕ್ಷಣದಲ್ಲಿಯೇ ಕಪ್ಪೆಯಂತೆ ಕುಸಿದುಬಿದ್ದ. ಬಲಹೀನತೆ, ಅನಾರೋಗ್ಯ, ಅವ್ಯಕ್ತಭೀತಿಗಳಿಂದ ನರಳಿದ. ಅವನನ್ನು ಮೊದಲಿನ ಸ್ಥಿತಿಗೆ ತರಬೇಕಾದರೆ, ಜೆಟ್ ಎಷ್ಟೋ ದಿನಗಳು ಅವನ ಶುಶ್ರೂಷೆ ಮಾಡಿದಳು.

ಅವನು ಪೈಂಟಿಂಗ್ ಮಾಡಿ ಎಷ್ಟು ಸೋತು ಹೋಗಿದ್ದನೆಂದರೆ, ಬಣ್ಣಗಳ ವಾಸನೆ ಹತ್ತಿದರೆ ಸಾಕು, ವಾಂತಿ ಬರುವಂತಾಗುತ್ತಿತ್ತು. ನಿಧಾನವಾಗಿ, ಕಳೆದುಕೊಂಡ ಶಕ್ತಿ ಹಿಂತಿರುಗಿ ಬರುತ್ತದೆ. ಮತ್ತೆ ಮೊದಲಿನ ಆಸಕ್ತಿ ಹುಟ್ಟುತ್ತದೆ. ಮತ್ತೆ ಹೊಲ, ಗದ್ದೆ, ಬಯಲು ಅದು ಇದೂಂತ ಓಡಾಟ ಶುರುವಾಗುತ್ತದೆ. ಸುಂದರವಾದ ದೃಶ್ಯಗಳು ಅವನ ಕಣ್ಣಲ್ಲಿ ಸೆರೆಯಾಗುತ್ತವೆ. ತನಗೆ ಇಷ್ಟವಾದ ದೃಶ್ಯವೊಂದನ್ನು ಕಣ್ಸೆರೆಯಿಂದ ಬಿಡಿಸಿ, ಕ್ಯಾನ್‌ವಾಸ್ ಮೇಲೆ ಇಳಿಸುತ್ತಾನೆ. ಮೊದಲಿನಂತೆ ಕೆಲಸ ಪ್ರಾರಂಭವಾಗುತ್ತದೆ.

ವಿನ್ಸೆಂಟ್ ಹೇಗ್‌ಗೆ ಬಂದಾಗ, ಮಾವ್ ಷೆವೆನಿಂಜೆನ್ ಕ್ಯಾನ್‌ವಾಸನ್ನು ಆಗಷ್ಟೇ ಆರಂಭಿಸಿದ್ದ. ಆದರೆ ಈಗ ಅವನ ನರನಾಡಿಗಳಲ್ಲೆಲ್ಲ, ಸೃಜನಶೀಲತೆಯ ಭೂತಹೊಕ್ಕು, ಬುದ್ಧಿ ಭ್ರಮಣೆಯ ಸ್ಥಿತಿಗೆ ಅವನನ್ನು ದೂಡಿತ್ತು.

–೪–

ಕೆಲದಿನಗಳು ಕಳೆದ ನಂತರ, ಒಂದು ದಿನ ರಾತ್ರಿ, ಕ್ರಿಸ್ಟೀನ್ ವಿನ್ಸೆಂಟ್‌ನ ಮನೆಗೆ ಬಂದು ಬಾಗಿಲು ತಟ್ಟಿದಳು. ಕಪ್ಪು ಉಡುಪಿನಲ್ಲಿದ್ದಳು. ಇಡೀ ದಿವಸ ವಾಷ್‌ಟಬ್ ಬಳಿ ಇದ್ದಳು. ಅದಕ್ಕೆಂದೇ ತುಂಬ ದಣಿದಿದ್ದವಳಂತೆ ಕಾಣಿಸಿದಳು. ಮುಖದ ಮೇಲಿನ ಕಲೆಗಳು ಮೊದಲಿಗಿಂತ ಗಾಢವಾಗಿ ಕಾಣಿಸುತ್ತಿದ್ದವು.

"ಹಲೋ ವಿನ್ಸೆಂಟ್. ಸುಮ್ಮನೆ ಹಾಗೇ ನಿನ್ನನ್ನು ನೋಡಿ ಹೋಗೋಣ. ನಿನ್ನ ಮನೆ ಎಲ್ಲಿದೇಂತ ತಿಳ್ಕೊಳ್ಳೋಣಾಂತ ಅನ್ನಿಸಿತು, ಬಂದೆ."

"ನನ್ನ ಮನೆಗೆ ಬಂದವರಲ್ಲಿ, ಹೆಂಗಸರಲ್ಲಿ ನೀನೇ ಮೊದಲಿಗಳು. ಬಾ ಒಳಗೆ."

ಒಳಗೆ ಬಂದು ಕುಳಿತು, ಬೆಂಕಿಯಲ್ಲಿ ಕೈಕಾಯಿಸಿ ಕೊಂಡಳು. ಒಂದು ಕ್ಷಣದ ನಂತರ ಕೋಣೆಯ ಸುತ್ತ ಕಣ್ಣಾಡಿಸಿದಳು. "ಖಾಲಿ ಖಾಲಿಯಾಗಿದೆ ಅನ್ನೋದು ಬಿಟ್ಟರೆ, ಪರವಾಗಿಲ್ಲ ಅನ್ಸತ್ತೆ."

"ಹೌದು. ಫರ್ನಿಚರ್ ಕೊಳ್ಳೋಕೆ ನನ್ನ ಬಳಿ ಹಣ ಇಲ್ಲ."

"ಅದೊಂದೇ ಇಲ್ಲಿಗೆ ಬೇಕಾಗಿರುವುದು."

"ನಾನು ಊಟ ತರೋಕೇಂತ ಹೊರಟಿದ್ದೆ. ನೀನೂ ಜೊತೆಗೆ ಊಟ ಮಾಡ್ತೀಯಲ್ಲ ಕ್ರಿಸ್ಟೀನ್?"

"ನನ್ನನ್ನು ಸಿಯೆನ್ ಅಂತ ಕರೀಬಹುದಲ್ಲ? ಎಲ್ಲರೂ ನನ್ನನ್ನು ಹಾಗೇ ಕರೆಯೋದು."

"ಆಯ್ತು ಸಿಯೆನ್."

"ಊಟಕ್ಕೆ ಏನು ತರಬೇಕೂಂತ ಇದ್ದೀಯ?"

"ಆಲೂಗಡ್ಡೆ, ಟೀ."

"ಇವತ್ತು ನಾನು ಎರಡು ಫ್ರ್ಯಾಂಕ್ ಸಂಪಾದನೆ ಮಾಡಿದೆ. ಹೋಗಿ ಒಂದಿಷ್ಟು 'ಬೀಫ್' ತರ್ತೀನಿ."

"ತಗೋ ಇಲ್ಲಿದೆ ದುಡ್ಡು. ನನ್ನ ತಮ್ಮ ಕಳಿಸಿಕೊಟ್ಟಿದ್ದಾನೆ. ಎಷ್ಟು ಬೇಕಾಗುತ್ತೆ?"

"ಒಂದು ಐವತ್ತು ಸೆಂಟೀಮ್ಸ್ ಆದರೆ ಸಾಕಾಗುತ್ತೆ."

ಸ್ವಲ್ಪ ಹೊತ್ತಿನಲ್ಲಿ 'ಬೀಫ್' ಸುತ್ತಿದ್ದ ಪೊಟ್ಟಣವನ್ನು ತಂದಳು. ವಿನ್ಸೆಂಟ್ ಅದನ್ನು ಅವಳಿಂದ ತೆಗೆದುಕೊಂಡ. ಅಡಿಗೆ ಕೆಲಸಕ್ಕೆ ಮುಂದಾದ.

"ನೀನು ಇಲ್ಲಿ ಕೂತ್ಕೋ. ನಿನಗೆ ಅಡಿಗೆ ಮಾಡೋಕೆ ಬರುವುದಿಲ್ಲ. ನಾನು ಹೆಂಗಸು."

ಸ್ಟೋವ್ ಬಳಿ ನಿಂತಾಗ, ಬೆಂಕಿಯ ಜ್ವಾಲೆಯ ಬೆಳಕಿನಲ್ಲಿ ಅವಳು ಮುದ್ದಾಗಿ ಕಾಣಿಸಿದಳು. ಆಲೂಗಡ್ಡೆಗಳನ್ನು ತುಂಡುತುಂಡಾಗಿ ಕತ್ತರಿಸುವುದು, ಅದನ್ನು ಒಲೆಯ ಮೇಲಿನ ಪಾತ್ರೆಗೆ ಹಾಕಿ ಬೇಯಿಸುವುದು, ಅದರೊಳಕ್ಕೇ ಮಾಂಸದ ತುಂಡುಗಳನ್ನು ಹಾಕುವುದು – ಎಲ್ಲವೂ ಸಹಜವಾಗಿ, ಸ್ವಾಭಾವಿಕವಾಗಿ ಕಾಣಿಸಿದವು. ಕುರ್ಚಿಗೆ ಒರಗಿ, ಅವಳು ಅಡಿಗೆ ಮಾಡುವುದನ್ನು ಗಮನಿಸುತ್ತಿದ್ದ. ಏನೋ ಒಂದು ಬಗೆಯ ಬೆಚ್ಚನೆಯ ಅನುಭವ. ಅದು ತನ್ನ ಮನೆ, ಹೆಣ್ಣೊಬ್ಬಳು ಪ್ರೀತಿ ತುಂಬಿದ ಕೈಗಳಿಂದ ಅಡಿಗೆ ಮಾಡಿ ಬಡಿಸುತ್ತಿದ್ದಾಳೆ. ಇದೇ ರೀತಿಯ ಚಿತ್ರವನ್ನು 'ಕೇ' ವಿಷಯದಲ್ಲಿ ಊಹಿಸಿಕೊಳ್ಳುತ್ತಿದ್ದ. ಸಿಯೆನ್ ಅವನತ್ತ ದೃಷ್ಟಿ ಹಾಯಿಸಿದಳು. ಕುರ್ಚಿಯಲ್ಲಿ ಬೀಳುವ ಸ್ಥಿತಿಯಲ್ಲಿ ಒರಗಿ ಕುಳಿತಿದ್ದ.

"ಮುಠ್ಠಾಳ, ಸರಿಯಾಗಿ ನೇರವಾಗಿ ಕೂತ್ಕೋ. ಯಾಕೆ ಸೊಂಟ ಮುರ್ಕೊಳ್ಳೋ ಆಸೆ ಆಗಿದೆಯೇನು?"

ವಿನ್ಸೆಂಟ್, ಸ್ವಲ್ಪ ಆವೇಶದಿಂದ ನೋಡಿದ. ಇವನ ಜೊತೆಗಿದ್ದ ಅಮ್ಮ, ಆಂಟಿ, ಅಕ್ಕ, ಕಸಿನ್ಸ್ – ಎಲ್ಲರೂ ಇದೇ ಮಾತನ್ನು ಹೇಳುತ್ತಿದ್ದರು. 'ವಿನ್ಸೆಂಟ್ ಕುರ್ಚೀಲಿ ಸರಿಯಾಗಿ ಕೂತ್ಕೋ, ಇಲ್ಲಾಂದ್ರೆ ಸೊಂಟ ಮುರ್ಕೋತೀಯ."

"ಹಾಗೇ ಕೂತ್ಕೊಳ್ತೀನಿ ಸಿಯೆನ್. ಇನ್ನು ಮುಂದೆ ಹಾಗೆ ಮಾಡೊಲ್ಲ" ಎಂದ.

ಆದರೆ ಮತ್ತೆ, ಅವಳು ತಿರುಗಿದ ಕೂಡಲೇ ಮೊದಲಿನಂತೆಯೇ ಕುರ್ಚಿಯನ್ನು ಗೋಡೆಗೆ ತಾಗುವಂತೆ ಬಾಗಿಸಿ, ನಿರಾಳವಾಗಿ ಸಿಗರೇಟ್ ಸೇದುತ್ತಾ ಕುಳಿತುಕೊಂಡ. ಸಿಯೆನ್ ಟೇಬಲ್ ಮೇಲೆ ಊಟವನ್ನು ಅಣಿಮಾಡಿದಳು. ಆಲೂಗಡ್ಡೆ ತಿಂದು ಮುಗಿಸಿದ ಮೇಲೆ, ಬ್ರೆಡ್ಡಿನ ಚೂರುಗಳನ್ನು ಗ್ರೇವಿಯಲ್ಲಿ ಅದ್ದಿಕೊಂಡು ತಿಂದರು.

"ಗೊತ್ತಾಯ್ತು ಈಗ? ನಾನು ಮಾಡಿದ ಹಾಗೆ ನಿನಗೆ ಅಡಿಗೆ ಮಾಡಲು ಸಾಧ್ಯವಿಲ್ಲ."

"ಹೌದು ನಿಜ. ನಾನು ಅಡಿಗೆ ಮಾಡಿದರೆ, ತಿನ್ನುತ್ತಿರುವುದು ಮೀನೋ ಕೋಳೀನೋ! ಮತ್ತೊಂದೋ ಹೇಳೋಕೇ ಬರೋದಿಲ್ಲ."

ಟೀ ಕುಡಿಯುತ್ತಾ ಸಿಯೆನ್ ಸಿಗರೇಟು ಸೇದಿದಳು. ಗೆಲುವಿನಿಂದ ಹರಟೆ ಹೊಡೆದರು. ಮಾವ್ ಜೊತೆಗೆ ಡಿಬಾಕ್ ಜೊತೆಗೆ ಇರುವುದಕ್ಕಿಂತ ಆತ್ಮೀಯ ಪರಿಸರದಲ್ಲಿ ಇದ್ದಂತೆ ಭಾಸವಾಯಿತು. ವಿನ್ಸೆಂಟ್ ಮಾತಾಡ್ತಾ ಇದ್ದರೆ, ಅವಳು ಸಹನೆಯಿಂದ ಕೇಳಿಸಿಕೊಳ್ಳುತ್ತಿದ್ದಳು. ತನ್ನ ಬಗ್ಗೆ ಮಾತಾಡುವ ಉತ್ಸುಕತೆ ಹೆಚ್ಚಾಗಿಯೇನೂ ಇರಲಿಲ್ಲ.

ಆದ್ದರಿಂದಲೇ ಅವನು ಎಷ್ಟು ಮಾತಾಡಬೇಕೆಂದು ಕೊಂಡನೋ ಅಷ್ಟು ಮಾತಾಡಲು ಬಿಟ್ಟಳು. ತನ್ನದನ್ನೇ ಹೇಳಿಕೊಳ್ಳಬೇಕೆಂಬ ಪ್ರತಿಷ್ಠೆಯೂ ಅವಳಲ್ಲಿ ಇರಲಿಲ್ಲ; ಜೊತೆಗೆ ಅವರಿಬ್ಬರಲ್ಲಿಯೂ ಪರಸ್ಪರ ಪ್ರಭಾವ ಬೀರಬೇಕೆಂಬ ಉದ್ದೇಶವೂ ಇರಲಿಲ್ಲ. ಸಿಯೆನ್ ತನ್ನ ಬದುಕಿನ ಕಷ್ಟಗಳನ್ನು, ಅನುಭವಿಸಿದ ಯಾತನೆಯನ್ನು ವಿವರಿಸಿದ ಮೇಲೆ, ವಿನ್ಸೆಂಟ್ ಅವಳು ವಿವರಿಸಿದ ಯಾತನೆಯಲ್ಲಿನ ಕೆಲವು ಶಬ್ದಗಳನ್ನಷ್ಟೇ ಬದಲಾಯಿಸಿದ. ಇಬ್ಬರದೂ ಒಂದೇ ಗೋಳಿನ ಕತೆಯಾಗಿತ್ತು. ಒಬ್ಬರನ್ನೊಬ್ಬರು ವಿವರಣೆ ನೀಡುವಲ್ಲಿ, ಮೀರಿಸಬೇಕೆಂಬ ಭಾವನೆಯನ್ನು ಹೊಂದಿರಲಿಲ್ಲ; ಅವರ ಮೌನಗಳಲ್ಲಿ ಯಾವುದೇ ಕೃತಕತೆ ಇರಲಿಲ್ಲ. ಇವರಿಬ್ಬರ ಭೇಟಿ, ಎರಡು ನಗ್ನ ವಾಸ್ತವಗಳ, ಭೇಟಿಯಾಗಿತ್ತು. ಕೃತಕತೆಯಿಲ್ಲ, ಭೇದಭಾವಗಳಿಲ್ಲ, ಅಂತಸ್ತಿನ ತಾರತಮ್ಯಗಳಿಲ್ಲ.

ವಿನ್ಸೆಂಟ್ ಎದ್ದ. "ಯಾಕೆ? ಏನು ಮಾಡಲು ಹೊರಟೆ?" – ಅವಳು ಕೇಳಿದಳು.

"ಏನಾದರೂ ತಿಂಡಿ ಪದಾರ್ಥಗಳನ್ನು ಮಾಡೋದಕ್ಕೆ."

"ಕೂತ್ಕೋ. ನಿನಗೆ ಅವೆಲ್ಲ ಮಾಡೋಕೆ ಗೊತ್ತಾಗೋದಿಲ್ಲ. ನಾನು ಹೆಣ್ಣು."

ವಿನ್ಸೆಂಟ್ ಕುರ್ಚಿಯನ್ನು ಒಲೆಯಿದ್ದ ಕಡೆಗೆ ತಿರುಗಿಸಿದ. ಪೈಪ್ ತುಂಬಿಸಿ, ಬೆಂಕಿ ಹಚ್ಚಿ, ಹೊಗೆ ಸೇವನೆಗೆ ತೊಡಗಿದ. ಅವಳು ಬೇಸಿನ್‌ನಲ್ಲಿ ಕೈಗಳನ್ನಿರಿಸಿ ಸೋಪಿನಿಂದ ತೊಳೆಯ ತೊಡಗಿದಳು. ಅವಳ ಕೈಗಳಲ್ಲಿ ಎದ್ದು ಕಾಣುತ್ತಿದ್ದ ನರಗಳ ಮೇಲೆ ಸೋಪಿನ ಗುಳ್ಳೆಗಳಿಂದ ಕೈಗಳು ಅಂದವಾಗಿ ಕಾಣುತ್ತಿದ್ದವು. ನೋಡುತ್ತಿದ್ದಂತೆ ಕಷ್ಟಪಟ್ಟ ಕೈಗಳೆಂದು ತಿಳಿಯುತ್ತಿತ್ತು. ವಿನ್ಸೆಂಟ್ ಕೂಡಲೇ ಎದ್ದು ಪೇಪರ್, ಪೆನ್ಸಿಲ್ ತೆಗೆದುಕೊಂಡು ಅವುಗಳನ್ನು ಡ್ರಾ ಮಾಡಲು ತೊಡಗಿದ.

ತಿಂಡಿ ಪದಾರ್ಥಗಳನ್ನು ಮಾಡಿಯಾದ ಮೇಲೆ, "ಈಗ ಸ್ವಲ್ಪ ಜಿನ್ ಮತ್ತು ಬಿಟ್ಟರ್ಸ್ ಇದ್ದರೆ ಮಜಾ ಇರುತ್ತಿತ್ತು. ಇಲ್ಲಿ ತುಂಬ ಚೆನ್ನಾಗಿದೆ."

ಜಿನ್ ಮತ್ತು ಬಿಟ್ಟರ್ಸ್ ಕುಡಿಯುತ್ತಾ ಸಂಜೆ ಕಳೆದರು. ವಿನ್ಸೆಂಟ್ ಸಿಯೆನ್‌ಳ ಸ್ಕೆಚ್ ಬರೆದ. ಒಲೆಯ ಬದಿಯಲ್ಲಿ, ಕುರ್ಚಿಯಲ್ಲಿ, ಕೈಗಳನ್ನು ತೊಡೆಯಮೇಲೆ ಇರಿಸಿಕೊಂಡು ಬೆಚ್ಚಗೆ ಕುಳಿತುಕೊಂಡಿದ್ದು ತುಂಬ ಹಿತವೆನ್ನಿಸಿತ್ತು. ಬೆಂಕಿಯ ಬೆಳಕು, ತನ್ನ ಬಗ್ಗೆ ಆತ್ಮೀಯರೊಬ್ಬರ ಜೊತೆ ಮಾತನಾಡುವ ಅವಕಾಶ ಅವಳಲ್ಲಿ ಜೀವಂತಿಕೆ, ಉತ್ಸಾಹಗಳನ್ನು ಹೆಚ್ಚಿಸಿತ್ತು.

"ನಿನ್ನ ಧೋಬಿ ಕೆಲಸ ಯಾವಾಗ ಮುಗಿಯುತ್ತೆ?" –ಕೇಳಿದ.

"ನಾಳೆ.... ಇನ್ನು ಹೆಚ್ಚು ಕಾಲ ತಡ್ಕೊಳ್ಳೋಕೆ ಆಗುವುದಿಲ್ಲ."

"ಯಾಕೆ, ಹಿಂಸೆ ಆಗ್ತಿದೆಯೇನು?"

"ಹೊಟ್ಟೆ ಒಳಗೆ ಮಗು ಆ ಕಡೆ ಈ ಕಡೆ, ಒಂದೊಂದು ಸಲ ಹೊರಳಾಡ್ತಿದೆ. ಇನ್ನೇನು ಬಂದೇ ಬಿಡುತ್ತೆ, ಬಂದೇ ಬಿಡುತ್ತೆ?"

"ಮುಂದಿನವಾರ ನನಗೆ ಪೋಸ್ ಕೊಡಲಿಕ್ಕೆ ಆಗುತ್ತಾ?"

"ಅಂದರೆ? ಸುಮ್ಮನೆ ಹೀಗೆ ಕೂತಿರಬೇಕು ಅಷ್ಟೇ ತಾನೆ?"

"ಹೌದು, ಅಷ್ಟೇ. ಒಂದೊಂದು ಸಲ ಮಾತ್ರ ನಿಂತ್ಕೋಬೇಕಾಗುತ್ತೆ. ಬೆತ್ತಲೂ ಆಗಬೇಕಾಗುತ್ತೆ."

"ಪರವಾಗಿಲ್ಲ. ಅದೆಲ್ಲ ಅಂಥ ಕಷ್ಟಾಂತ ಅನಿಸೊಲ್ಲ. ನೀನು ಕೆಲಸ ಮಾಡ್ತೀಯ, ಕಾಸು ನನಗೆ ಕೊಡ್ತೀಯ."

ಅವಳು ಕಿಟಕಿಯಾಚೆ ನೋಡಿದಳು. ಮಂಜು ಬೀಳುತ್ತಿತ್ತು.

"ಈಗ ಮನೆಯಲ್ಲಿದ್ದರೆ ಚೆನ್ನಾಗಿತ್ತು. ತುಂಬಾ ಚಳಿಯಿದೆ ಹೊರಗಡೆ. ಈ ಶಾಲು ಬಿಟ್ಟರೆ, ನನ್ನ ಹತ್ತಿರ ಬೇರೇನೂ ಇಲ್ಲ. ದೂರ ಬೇರೆ ನಡೀಬೇಕು."

"ನಾಳೇನೂ ನೀನು ಈ ಕೆಲಸಕ್ಕೆ ಬರಬೇಕಾಗಿದೆಯೇನು?"

"ಹೌದು. ಬೆಳಗ್ಗೆ ಆರುಗಂಟೆಗೇನೆ ಬರಬೇಕು. ಅಷ್ಟು ಹೊತ್ತಿಗೆ ಇನ್ನೂ ಕತ್ತಲಾಗಿಯೇ ಇರುತ್ತೆ."

"ನಿನಗೆ ಅಭ್ಯಂತರ ಇಲ್ಲದಿದ್ದರೆ ಈ ರಾತ್ರಿ ನೀನು ಇಲ್ಲಿಯೇ ಇರಬಹುದು ಸಿಯೆನ್, ನನಗೂ ಕಂಪನಿ ಇರುತ್ತೆ."

"ನಿನಗೆ ತೊಂದರೆ ಆಗುವುದಿಲ್ವೇನು?"

"ಸ್ವಲ್ಪಾನೂ ಇಲ್ಲ. ಹಾಸಿಗೆ ಬೇರೆ ವಿಶಾಲವಾಗಿದೆ."

"ಇಬ್ಬರಿಗೂ ಜಾಗ ಸಾಕಾಗುತ್ತೇನು?"

"ಆರಾಮಾಗಿ ಇರಬಹುದು."

"ಹಾಗಾದರೆ ನಾನು ಇಲ್ಲಿಯೇ ಉಳಿದುಕೊಳ್ತೇನೆ."

"ಒಳ್ಳೇದಾಯ್ತು."

"ನನಗೆ ಇರೋಕೆ ಅವಕಾಶ ಕೊಟ್ಟಿದ್ದು ನಿನ್ನ ದೊಡ್ಡಗುಣ ವಿನ್ಸೆಂಟ್."

"ನೀನು ಇಲ್ಲಿ ಇರೋಕೆ ಒಪ್ಪಿದ್ದೂ ಕೂಡಾ ಅಷ್ಟೇ!"

ಬೆಳಿಗ್ಗೆ ಅವನಿಗಾಗಿ ಕಾಫಿ ಮಾಡಿದಳು. ಹಾಸಿಗೆ ಸರಿಮಾಡಿದಳು. ಸ್ಟುಡಿಯೋನೆಲ್ಲಾ ಗುಡಿಸಿದಳು. ಆಮೇಲೆ ಧೋಬಿಘಾಟಿಗೆ ಹೋದಳು. ಅವಳು ಆ ಕಡೆ ಹೋದದ್ದೇ ಪರಿಸರವೆಲ್ಲವನ್ನೂ ಶೂನ್ಯವೊಂದು ಆವರಿಸಿತು.

–೫–

ಟರ್ಸ್‌ಟೀಗ್, ಆ ದಿನ ಮಧ್ಯಾಹ್ನ ಮತ್ತೊಂದು ಸಲ ಕಾಣಿಸಿಕೊಂಡ. ಕೊರೆಯುವ ಚಳಿಯಲ್ಲಿ ಬಂದಿದ್ದ. ಅವನ ಕಣ್ಣುಗಳು ಕಾಂತಿಯಿಂದ ಹೊಳೆಯುತ್ತಿದ್ದವು. ಅವನ ಕೆನ್ನೆಗಳು ಕೆಂಪಾಗಿದ್ದವು.

"ಹೇಗೆ ನಡೀತಿದೆ ವಿನ್ಸೆಂಟ್?"

"ತುಂಬ ಚೆನ್ನಾಗಿ ನಡೀತಿದೆ ಮಿಜ್ನಹೀರ್. ಮತ್ತೊಮ್ಮೆ ನೀವು ಬಂದದ್ದು, ನನಗೆ ಬಹಳ ಖುಷಿಯಾಯ್ತು."

"ನನಗೆ ತೋರಿಸುವುದಕ್ಕೆ ವಿಶೇಷವಾದದ್ದೇನಾದರೂ ಇದೆಯೇನು? ನಾನು ಬಂದದ್ದೇ ಅದಕ್ಕೆ."

"ಹೌದು, ಕೆಲ ಹೊಸ ಡ್ರಾಯಿಂಗ್‌ಗಳು ಇವೆ. ಕೂತ್ಕೋಬಹುದಲ್ಲ?"

"ಟರ್ಸ್‌ಟೀಗ್ ಕುರ್ಚಿಕಡೆ ನೋಡಿದ. ಅದರ ಧೂಳು ಒರೆಸಲಿಕ್ಕೆ ಕರ್ಚೀಫ್ ತೆಗೆದ. ಆದರೆ ಅದು ಸರಿಯಲ್ಲ ಎನಿಸಿ ಸುಮ್ಮನಾದ. ಅದರಲ್ಲಿ ಕುಳಿತ. ವಿನ್ಸೆಂಟ್, ಮೂರು, ನಾಲ್ಕು ವಾಟರ್‌ಕಲರ್ಸ್ ತಂದು ಆತನ ಮುಂದಿಟ್ಟ. ಮೊದಲು ಬೇಗಬೇಗ ಕಣ್ಣಾಡಿಸಿದ. ನಂತರ (ಒಂದರ) ಮೊದಲು ನೋಡಿದ್ದನ್ನು ಮತ್ತೊಮ್ಮೆ ಗಂಭೀರವಾಗಿ ಪರಿಶೀಲಿಸತೊಡಗಿದ.

"ಮುಂದುವರೀತಿದ್ದೀಯ. ಪೂರ್ತಿ ಸರಿಯಾಗಿದೇಂತಲ್ಲ. ಅವು ಇನ್ನೂ ಅಷ್ಟು ಚೆನ್ನಾಗಿ ಬಂದಿಲ್ಲವಾದರೂ, ಪ್ರಯತ್ನ ಮುಂದುವರೆದರೆ, ನಾನು ಕೊಂಡುಕೊಳ್ಳಲೂ ಸಾಧ್ಯವಾಗಬಹುದು."

"ಹೌದು ಮಿಜ್ನಹೀರ್, ಅದಾದರೆ ತುಂಬಾ ಒಳ್ಳೇದು."

"ನಿನ್ನ ಸಂಪಾದನೆಗೆ ದಾರೀನ ನೀನೇ ಮಾಡ್ಕೋಬೇಕು ವಿನ್ಸೆಂಟ್, ಇನ್ನೊಬ್ಬರ ಆಧಾರದ ಮೇಲೆ ಬದುಕೋದು ಅಷ್ಟು ಚೆನ್ನಾಗಿರೊಲ್ಲ. ಬೇಗಬೇಗ ಮಾಡೋದಕ್ಕೆ ಪ್ರಯತ್ನಪಡು. ನಿನ್ನ ಸ್ಕೆಚ್‌ಗಳನ್ನು ಕೊಂಡ್ಕೊಳ್ಳೋಕೆ ಆದಷ್ಟು ಬೇಗ ನಾನು ಬರ್ತೀನಿ."

"ಆಯ್ತು ಮಿಜ್ನಹೀರ್."

"ಏನಾದರಾಗಲೀ, ನೀನು ಸಂತೋಷವಾಗಿದ್ದೀಯ ಥಿಯೋ ನಿನ್ನನ್ನು ವಿಚಾರಿಸಿಕೊಳ್ಳುತ್ತಿರಲು ಹೇಳುತ್ತಿದ್ದಾನೆ. ಒಳ್ಳೆ ಕೆಲಸ ಮಾಡು ವಿನ್ಸೆಂಟ್. ಪ್ಲಾಟ್ಸ್‌ನಲ್ಲಿ ನಿನ್ನನ್ನು ನೆಲೆಗೊಳಿಸಬೇಕೂಂತ ಇದ್ದೀನಿ."

"ನನಗೇನೋ ಚೆನ್ನಾಗಿಯೇ ಮಾಡ್ಬೇಕೂಂತ ಇರುತ್ತೆ, ಆದರೆ ನನ್ನ ಕೈಗಳು ನನಗೆ ಸಹಕಾರ ಕೊಡೊಲ್ಲ. ಆದರೂ ಮಾವ್ ಮಾತ್ರ ನನ್ನೊಂದು ವಾಟರ್‌ಕಲರನ್ನು ತುಂಬ ಮೆಚ್ಚಿಕೊಂಡ."

"ಏನಂತ ಹೇಳಿದ?"

"ಈಗ ನಿಜವಾಗಿಯೂ 'ವಾಟರ್‌ಕಲರ್' ಅಂತ ಗೊತ್ತಾಗುತ್ತೆ," ಅಂತ ಹೇಳಿದ.

"ಮಾಡ್ತಾ ಹೋಗು.... ಮಾಡ್ತಾ ಹೋಗು.... ಮಹತ್ವದ ಕಲಾಕೃತಿಗಳೆಲ್ಲ ಮೈ ತಳೆದದ್ದು ಹಾಗೇ."

ವಿನ್ಸೆಂಟ್ ತನ್ನ ಅಂಕಲ್ ಕೋರ್‌ಗೆ ಪತ್ರ ಬರೆದು ತಾನು ಹೇಗ್‌ನಲ್ಲಿ ಇರುವುದಾಗಿಯೂ, ಒಮ್ಮೆಯಾದರೂ ಬಂದು ತನ್ನನ್ನು ಕಾಣಬೇಕೆಂದು, ಕೇಳಿಕೊಂಡ. ಕೋರ್ ಆಗಾಗ ತನ್ನ ಆರ್ಟ್‌ಷಾಪ್‌ಗೆ ಬೇಕಾಗಿದ್ದ ಸರಕನ್ನು, ಕಲಾಕೃತಿಗಳನ್ನು ಕೊಳ್ಳಲು ಬರುತ್ತಿದ್ದ. ಆ್ಯಮ್‌ಸ್ಟರ್ ಡ್ಯಾಮ್‌ನಲ್ಲಿ ಅವನ ಅಂಗಡಿ ಸಾಕಷ್ಟು ಪ್ರಖ್ಯಾತವಾಗಿತ್ತು.

ಒಂದು ದಿನ ಭಾನುವಾರ, ತನ್ನನ್ನು ತುಂಬಾ ಹಚ್ಚಿಕೊಂಡು ಸ್ನೇಹ ಬೆಳೆಸಿದ್ದ ಮಕ್ಕಳಿಗಾಗಿ ಪಾರ್ಟಿಕೊಟ್ಟ. ತಾನು ಸ್ಕೆಚ್ ಮಾಡುವಾಗ ಅವರನ್ನು ಹೇಗಾದರೂ ಖುಷಿಯಲ್ಲಿ ಇರಿಸಬೇಕಿತ್ತು. ಅದಕ್ಕಾಗಿ ಒಂದು ಚೀಲದ ತುಂಬ ಸಿಹಿತಿಂಡಿಗಳನ್ನು ತಂದಿದ್ದ. ಜೊತೆಗೆ ಕತೆಗಳನ್ನೆಲ್ಲ ಹೇಳುತ್ತ ಹೇಳುತ್ತಲೇ ಡ್ರಾಯಿಂಗ್ ಬೋರ್ಡ್ ಮೇಲೆ ಬಾಗಿ ಸ್ಕೆಚ್‌ಗಳನ್ನು ತಯಾರಿಸುತ್ತಿದ್ದ. ಅದೇ ಸಮಯದಲ್ಲಿ ಬಾಗಿಲ ಮೇಲೆ ದೊಡ್ಡದಾಗಿ ಬಡಿದ ಸದ್ದಾಯಿತು. ಮತ್ತು ದೊಡ್ಡದಾಗಿ ಧ್ವನಿಯೊಂದು ಕೇಳಿಸಿತು. ಕೂಡಲೇ ಅವನಿಗೆ ತನ್ನ ಅಂಕಲ್ ಬಂದಿರುವುದು ತಿಳಿಯಿತು.

ಕಾರ್ನೇಲಿಯಸ್ ಚಿರಪರಿಚಿತ. ಒಳ್ಳೆಯ ವ್ಯಾಪಾರ ಇತ್ತು. ಶ್ರೀಮಂತಿಕೆಯೂ ಇತ್ತು. ವಿಶಾಲವಾದ ಆ ಕಪ್ಪು ಕಣ್ಣುಗಳಲ್ಲಿ ಅದೇನೋ ಒಂದು ಬಗೆಯ ವಿಷಾದ ಛಾಯೆ ಇಣುಕುತ್ತಿತ್ತು. ವಾನ್‌ಗೋ ವಂಶದವರಿಗಿಂತ ಅವನ ಬಾಯಿ ಸ್ವಲ್ಪ ಭಿನ್ನವಾಗಿತ್ತು. ಆದರೆ ಅವನ ತಲೆ ವಾನ್‌ಗೋ ವಂಶವನ್ನು ಪ್ರತಿನಿಧಿಸುತ್ತಿತ್ತು. ದುಂಡನೆಯ ಗಲ್ಲ, ಬಲಿಷ್ಠವಾದ ದವಡೆಗಳು, ಎದ್ದು ಕಾಣುವ ಮೂಗು – ಅವನಿಗೆ ವಿಶಿಷ್ಟ ವ್ಯಕ್ತಿತ್ವವನ್ನು ನೀಡಿತ್ತು.

ಕಾರ್ನೀಲಯಸ್, ವಿನ್ಸೆಂಟ್‌ನ ಸ್ಟುಡಿಯೋವನ್ನು ಯಾರಿಗೂ ಕಾಣದ ರೀತಿಯಲ್ಲಿ ಸೂಕ್ಷ್ಮವಾಗಿ ಗಮನಿಸುತ್ತಿದ್ದ. ಬಹುಶಃ ಚಿತ್ರಕಲಾವಿದರ ಸ್ಟುಡಿಯೋಗಳನ್ನು ಹಾಲೆಂಡಿನಲ್ಲಿ ಬೇರೆ ಯಾರೂ ನೋಡಿರಲಾರದಷ್ಟು ಸಂಖ್ಯೆಯಲ್ಲಿ ನೋಡಿದ್ದಾನೆ.

ವಿನ್ಸೆಂಟ್ ಉಳಿದಿದ್ದ ಸಿಹಿತಿಂಡಿಗಳನ್ನು ಮಕ್ಕಳಿಗೆ ಕೊಟ್ಟು ಕಳುಹಿಸಿಬಿಟ್ಟ.

"ಹೊರಗಡೆ ಬಹಳ ಚಳಿಯಿದೆ. ನನ್ನ ಜೊತೆ ಒಂದು ಕಪ್ ಟೀ ಆಗಬಹುದಲ್ಲವೇ ಅಂಕಲ್ ಕಾರ್."

"ಥ್ಯಾಂಕ್ಯೂ ವಿನ್ಸೆಂಟ್."

ಅಂಕಲ್ ಕಾರ್, ತೊಡೆ ಮೇಲೆ ಟೀ ಕಪ್ಪನ್ನು, ಅದೂ ಇದೂ ಹರಟೆಯಲ್ಲಿ ತೊಡಗಿರುತ್ತಲೇ ಬ್ಯಾಲೆನ್ಸ್ ಮಾಡಿ ಇರಿಸಿಕೊಂಡದ್ದನ್ನು ವಿನ್ಸೆಂಟ್ ಬೆರಗು ಕಣ್ಣುಗಳಿಂದ ನೋಡಿದ.

"ಅಂತೂ ಇಂತೂ ಆರ್ಟಿಸ್ಟ್ ಆಗಬೇಕೂಂತ ಹೊರಟಿದ್ದೀ. ವಾನ್‌ಗೋ ಕುಟುಂಬದಲ್ಲಿ ಕಡೆಗಾದರೂ ಒಬ್ಬರು ಇರಲಿಕ್ಕೆ ಸಾಧ್ಯವಾಯಿತು. ಹೀನ್, ವಿನ್ಸೆಂಟ್ ಮತ್ತು ನಾನು ಕಡೇ ಪಕ್ಷ ಮೂವತ್ತು ವರ್ಷಗಳಿಂದ ಹೊರಗಡೆಯಿಂದ ಕಲಾಕೃತಿಗಳನ್ನು ಕೊಂಡುಕೊಳ್ಳುತ್ತಿದ್ದೀವಿ. ಹೋಗಲಿಬಿಡು, ಇನ್ನು ಮೇಲಾದರೂ ಸ್ವಲ್ಪ ಹಣಾನಾ ವಾನ್‌ಗೋ ಫ್ಯಾಮಿಲೀಲೇ ಉಳಿಸಿಕೊಳ್ಳೋಕೆ ಆಗುತ್ತೆ" ಎಂದ.

"ಫ್ಯಾಮಿಲೀನಲ್ಲಿ ಮೂರು ಜನ ಅಂಕಲ್‌ಗಳು, ಒಬ್ಬ ಸೋದರ ಈ ವ್ಯಾಪಾರದಲ್ಲಿ ಇರುವಾಗ, ನನ್ನ ಡ್ರಾಯಿಂಗ್ಸ್, ಪೈಂಟಿಂಗ್ಸ್‌ಗೆ ಭರ್ಜರಿ ಬೇಡಿಕೆ ಸಾಧ್ಯ ಆಗುತ್ತೆ. ಅಂಕಲ್ ಕಾರ್, ಹಸಿವಾಗಿರಬೇಕು ಬ್ರೆಡ್ಡು, ಚೀಸು ಒಂದಿಷ್ಟು ತಂದುಕೊಡಲೇ?"

ಒಬ್ಬ ಆರ್ಟಿಸ್ಟ್ ಕೊಡುವ ತಿನಿಸನ್ನು ನಿರಾಕರಿಸುವುದೆಂದರೆ ಅವನಿಗೆ ಅವಮಾನ ಮಾಡಿದಂತೆ ಎಂಬುದನ್ನು ಅರಿತಿದ್ದ. ಅದಕ್ಕೆಂದೇ,

"ಕೊಡು ವಿನ್ಸೆಂಟ್. ನಾನು ಬಹಳ ಬೇಗ ತಿಂಡಿ ತಿಂದಿದ್ದೆ. ಅದಕ್ಕೇ ಹಸಿವಾಗ್ತಿದೆ."

ವಿನ್ಸೆಂಟ್, ಅಲ್ಲಲ್ಲಿ ಚಿಪ್ಪೆದಿದ್ದ ಪ್ಲೇಟೊಂದರಲ್ಲಿ ಒಂದಷ್ಟು ಬ್ರೆಡ್ ಚೂರುಗಳನ್ನು ಇರಿಸಿದ! ಪೇಪರ್‌ನಲ್ಲಿ ಸುತ್ತಿ ಇರಿಸಿದ್ದ ಒಂದಿಷ್ಟು ಚೀಸನ್ನೂ ಅದರ ಮೇಲಿರಿಸಿದ, ಕಾರ್ ಕಷ್ಟಪಟ್ಟುಕೊಂಡು ಒಂದೆರಡು ತುಂಡನ್ನು ಮಾತ್ರ ತಿಂದು ಮುಗಿಸಿದ.

"ಟರ್ಸ್‌ಟೀಗ್ ಹೇಳ್ತಿದ್ದ, ಥಿಯೋ ನಿನಗೆ ತಿಂಗಳಿಗೆ ನೂರು ಫ್ರ್ಯಾಂಕ್ ಕಳಿಸ್ತಿದ್ದಾನಂತೆ?"

"ಹೌದು."

"ಥಿಯೋ ಇನ್ನೂ ಸಣ್ಣವನು. ಅವನೂ ಹಣವನ್ನು ಸ್ವಲ್ಪ ಉಳಿಸಿಕೋ ಬೇಕಾಗುತ್ತೆ. ನಿನ್ನ ಸಂಪಾದನೆಗೆ ನೀನೇ ದಾರಿ ಹುಡುಕಿಕೋ ಬೇಕು ವಿನ್ಸೆಂಟ್."

ವಿನ್ಸೆಂಟ್‌ಗೆ ಸಿಟ್ಟು ಇನ್ನಷ್ಟು ಏರಿತು. ಮೊನ್ನೆ ತಾನೇ ಟರ್ಸ್‌ಟೀಗ್ ಇದನ್ನೆಲ್ಲ ಹೇಳಿದ್ದಾನೆ. ಏನು ಮಾತಾಡಬೇಕೂಂತ ಯೋಚನೇನೂ ಮಾಡದೆ.

"ನಿನ್ನ ಊಟ ನೀನು ಸಂಪಾದನೆ ಮಾಡಬೇಕು ಅಂದ್ರೆ? ಏನು ನಿಮ್ಮ ಅರ್ಥ ಅಂಕಲ್ ಕಾರ್? ನೀವು ಹೇಳುವುದು ನಾನು ಊಟಕ್ಕೆ ಅರ್ಹನಲ್ಲ ಅಂತಲೇ? ಹಾಗೆನ್ನುವುದಾದರೆ ಅದು ಬಹಳ ದೊಡ್ಡ ಅಪರಾಧ. ಪ್ರತಿಯೊಬ್ಬರಿಗೂ ಊಟದ ಹಕ್ಕಿದೆ. ಆದರೆ ಏನು ಮಾಡಲಿ, ನನಗೆ ಅದನ್ನು ಸಂಪಾದನೆ ಮಾಡೋಕೆ ಆಗ್ತಿಲ್ಲ. ಹೀಗೆಂದ ಮಾತ್ರಕ್ಕೆ ನಾನು ಅದಕ್ಕೆ ಅರ್ಹನಲ್ಲ ಅಂತ ಅರ್ಥವಲ್ಲ. ನಾನು ದುರಾದೃಷ್ಟವಂತ. ನನ್ನದು ಬಹಳ ದುರಾದೃಷ್ಟ."

"ನೀವು ಕೊಡೋ ಊಟದಿಂದ ನಾನು ಬದುಕ್ತಿದ್ದೀನಿ ಅನ್ನೋದಾದರೆ, ನನಗೆ ನೀವು ಬಹಳ ಅವಮಾನ ಮಾಡ್ತಿದ್ದೀರಿ! ಆದರೆ ಸುಮ್ಮನೆ, ನನಗೆ ಸಂಪಾದನೆ

ಮಾಡೋಕೆ ಆಗ್ತಿಲ್ಲ ಅಂತ ಹೇಳುವುದಾದರೆ, ಅದು ನಿಜಾಂತಲೇ ಒಪ್ಕೋತೀನಿ. ಸುಮ್ಮನೆ ಈ ರೀತಿ ಅಭಿಪ್ರಾಯ ಹೇಳುವುದರಿಂದ ಬರೋ ಪ್ರಯೋಜನವಾದರೂ ಏನು? ಹೀಗೆ ಹೇಳುವುದರ ಜೊತೆ ಮುಂದೆ ಹೇಗೆ ಎನ್ನುವುದಾದರೆ......."

ಕಾರ್ನಿಲಿಯಸ್ ಮಾರಿನಸ್ ಮುಂದೆ ಏನೂ ಮಾತಾಡಲಿಲ್ಲ. ಸಾಕಷ್ಟು ಹೊತ್ತು ಇಬ್ಬರೂ ಗೆಲುವಾಗಿಯೇ ಮಾತಾಡಿಕೊಂಡು ಇದ್ದರು. ಹಾಗೇ ಮಾತಾಡ್ತಾ, ಆಕಸ್ಮಿಕವಾಗಿ ಡಿ.ಗ್ರೂಕ್ಸ್‌ನ ಬಗ್ಗೆ, 'ಎಕ್ಸ್‌ಪ್ರೆಷನಿಸಂ' ಕುರಿತು ಮಾತಾಡುವಾಗ, ಪ್ರಸ್ತಾಪ ಬಂತು.

"ವಿನ್ಸೆಂಟ್, ಖಾಸಗಿ ಜೀವನಕ್ಕೆ ಸಂಬಂಧಿಸಿದಂತೆ ಡಿ ಗ್ರೂಕ್ಸ್ ಬಗ್ಗೆ ಒಳ್ಳೆ ಅಭಿಪ್ರಾಯ ಇಲ್ಲ ಅನ್ನೋದು ಗೊತ್ತಿದೆ ತಾನೇ?"

ಡಿ ಗ್ರೂಕ್ಸ್‌ನಂತಹ ದೊಡ್ಡ ವ್ಯಕ್ತಿಯ ಬಗ್ಗೆ ಇಂತಹ ಮಾತು ಕೇಳುವುದಕ್ಕೆ ಅವನಿಂದ ಆಗಲಿಲ್ಲ. ಆದರೂ ಸುಮ್ಮನೆ ಒಪ್ಪಿಕೊಳ್ಳೋದೇ ವಾಸಿ ಅಂತ. "ಹೌದು" ಎಂದು ಹೇಳಬೇಕೆಂದುಕೊಂಡರೂ ಯಾರೇ ವಾನ್‌ಗೋರ ಹತ್ತಿರ ಮಾತಾಡುವಾಗಲೂ, 'ಹೌದು' ಎನ್ನುವ ಪದ ಸಾಧ್ಯವಾಗುತ್ತಲೇ ಇರಲಿಲ್ಲ.

"ಅಂಕಲ್ ಕಾರ್, ಒಬ್ಬ ಆರ್ಟಿಸ್ಟ್ ತನ್ನ ಕೃತಿಯನ್ನು ಪಬ್ಲಿಕ್ ಮುಂದೆ ಇಡುವಾಗ, ಅವನ ಖಾಸಗಿ ಬದುಕನ್ನು ರಹಸ್ಯವಾಗಿರಿಸಿಕೊಳ್ಳುವ ಹಕ್ಕು ಅವನಿಗಿರುತ್ತಲ್ಲವೇ? ಅಲ್ಲದೆ ಅವನು ಯಾವುದಾದರೂ ಒಂದು ಕಲಾಕೃತಿಯನ್ನು ರಚಿಸುವಾಗ ಅದರ ಹಿಂದೆ ಪರಸ್ಪರ ಸಂಬಂಧ ಇರುವ ವಿಚಿತ್ರ ಸನ್ನಿವೇಶಗಳು, ಸಂದರ್ಭಗಳು, ಅವನ ಖಾಸಗಿ ಬದುಕಿನ ಮೂಲಕ ಏರ್ಪಟ್ಟಿರುತ್ತವೆ."

"ಎಲ್ಲಾ ಒಂದೇ" ಟೀ ಗುಟುಕಿಸುತ್ತಾ ಕಾರ್ ಮಾತು ಮುಂದುವರೆಸಿದ. "ಯಾವ ಮನುಷ್ಯ ನೇಗಿಲು, ಸನಿಕೆ ಪಿಕಾಸಿಗೆ ಬದಲಾಗಿ ಪೈಂಟ್ ಬ್ರಷ್ ಹಿಡಿದಿರುತ್ತಾನೋ ಅಂಥವನು ಅನೈತಿಕವಾಗಿ ಬದುಕುವುದಕ್ಕೆ ಹಕ್ಕನ್ನು ಪಡೆದಿರುವುದಿಲ್ಲ. ಶಿಸ್ತು, ನೀತಿ, ಮರ್ಯಾದೆಯಿಂದ ಬದುಕಲಾರದವರಿಂದ ಪಿಕ್ಚರ್ಸ್ ಕೊಂಡುಕೊಳ್ಳಬೇಕಾದ ಅಗತ್ಯ ಇರೋದಿಲ್ಲ ಅಂದುಕೊಂಡಿದ್ದೀನಿ."

"ಒಬ್ಬ ಆರ್ಟಿಸ್ಟ್ ಕಲಾಕೃತಿ ತುಂಬ ಚೆನ್ನಾಗಿರುವಾಗ, ಕಲಾವಿಮರ್ಶಕನಾದವನು ಅವನ ಖಾಸಗಿ ಬದುಕಿನೊಳಗೆ ಇಣುಕಿ ನೋಡುವುದೂ ಸರಿಯಲ್ಲ ಅನ್ನೋದು ನನ್ನ ವಿಚಾರ. ಆರ್ಟಿಸ್ಟ್‌ನ ಕೃತಿ ಮತ್ತು ಆರ್ಟಿಸ್ಟ್‌ನ ಖಾಸಗಿ ಬದುಕು ಹೇಗೆಂದರೆ ಮಗುವಿಗೆ ಜನ್ಮಕೊಡುವ ಸ್ಥಿತಿಯಲ್ಲಿರುವ ತಾಯಿ ಮತ್ತು ಮಗು ಇದ್ದಹಾಗೆ. ಮಗುವನ್ನು ನೋಡಬಹುದು ಆದರೆ ಅವಳ ಒಳ ಉಡುಪನ್ನು ರಕ್ತದ ಕಲೆಗಳಿವೆಯೇ ಎಂದು ಎತ್ತಿ ನೋಡಬಾರದು. ಅದು ಅಸಭ್ಯ ಎನಿಸುತ್ತೆ."

ಕಾರ್ನೇಲಿಯುಸ್ ಒಂದು ಚೂರು ಬ್ರೆಡ್ಡನ್ನು ಚೀಸನ್ನು ಬಾಯಲ್ಲಿ ಇರಿಸಿಕೊಂಡಿದ್ದವನು ಥಟ್ಟನೆ ಎದ್ದು, ಕೈಯಲ್ಲಿ ಹಿಡಿದಿದ್ದ ಟೀ ಕಪ್ಪಿನಲ್ಲಿ ಉಗುಳಿದ. ಮತ್ತು ಅದನ್ನು ಬೆಂಕಿಗೆ ಎಸೆದ.

"ಸರಿ.... ಸರಿ..... ಸರಿ..... ಸರಿ!"

ಅಂಕಲ್‌ಗೆ ಚೆನ್ನಾಗಿ ಸಿಟ್ಟು ಬಂದಿರುತ್ತೆ ಅಂದುಕೊಂಡವನಿಗೆ ಆಶ್ಚರ್ಯವಾಯಿತು. ಬಿಗಡಾಯಿಸಬಹುದಾಗಿದ್ದ ಪರಿಸ್ಥಿತಿ ತಿಳಿಯಾಯಿತು. ಅದೃಷ್ಟಕ್ಕೆ ಒಳ್ಳೆಯದಾಗುವ ಹಾಗೆ ಕಾಣಿಸಿತು. ವಿನ್ಸೆಂಟ್ ತನ್ನ ಸ್ಕೆಚ್‌ಗಳ ಒಂದು ಕಟ್ಟನ್ನೇ ತಂದ. ಬೆಳಕು ಚೆನ್ನಾಗಿದ್ದ ಕಡೆಗೆ ಕುರ್ಚಿ ಹಾಕಿದ. ಮೊದಲಿಗೆ ಅಂಕಲ್ ಏನೂ ಮಾತಾಡಲಿಲ್ಲ. ನಂತರ ಒಂದು ಚಿಕ್ಕ ಡ್ರಾಯಿಂಗ್ ನೋಡಿದ. ಅದನ್ನು ವಿನ್ಸೆಂಟ್, ಒಂದು ದಿನ ರಾತ್ರಿ [illegible]ಲ್ಲಿ ತನ್ನ ಗೆಳೆಯನ ಜೊತೆ ಅಡ್ಡಾಡುವಾಗ ಕಂಡ ದೃಶ್ಯವನ್ನು ಸ್ಕೆಚ್ ಮಾ[illegible]. ಅದನ್ನು ತೋರಿಸುತ್ತಾ, "ಇದು ಚೆನ್ನಾಗಿದೆ. ಇದೇ ರೀತಿಯ ಇನ್ನೊಂದಷ್ಟು ದೃಶ್ಯಗಳನ್ನು ಸ್ಕೆಚ್ ಮಾಡಿ ಕೊಡಬಲ್ಲೆಯಾ?"

"ಹೂಂ!.... ಮಾಡೆಲ್‌ಗಳ ಮೇಲೆ ಕೆಲಸ ಮಾಡಿ ಬೇಜಾರಾದಾಗ, ಈ ಬಗೆಯ ದೃಶ್ಯಗಳನ್ನು ಸ್ಕೆಚ್ ಮಾಡ್ತೀನಿ. ಇನ್ನೂ ಇದೇ ಥರದ ಕೆಲವು ಸ್ಕೆಚ್‌ಗಳಿವೆ. ನೋಡ್ತೀರಾ?"

ಅಂಕಲ್‌ನ ಹಿಂಬದಿಯಿಂದ ಬಾಗಿ, ಅವುಗಳ ಮಧ್ಯೆ ಇದ್ದ ಕೆಲವನ್ನು ತೆಗೆದು ತೋರಿಸಿದ. "ಇದು ಲೀರ್‌ಸ್ಟೀನ್, .... ಇದು ಗೀಸ್ಟ್.... ಇದು ಮೀನು ಬಜಾರು."

"ನನಗಾಗಿ ಒಂದು ಹನ್ನೆರಡು ಸ್ಕೆಚ್‌ಗಳನ್ನು ಮಾಡಿಕೊಡು."

"ಆಯ್ತು. ಆದರೆ ಇದು ಬಿಸಿನೆಸ್ ವ್ಯವಹಾರ. ಒಂದೊಂದಕ್ಕೆ ಎಷ್ಟು ಬೆಲೆ ಅನ್ನೋದು ನಿರ್ಧಾರ ಆಗಬೇಕು."

"ಹೌದು. ಆದರೆ ನೀನೇ ಅದರ ಬೆಲೆ ಹೇಳು."

"ಚಿಕ್ಕ ಚಿಕ್ಕ ಡ್ರಾಯಿಂಗ್‌ಗಾದರೆ, ಒಂದಕ್ಕೆ ಎರಡೂವರೆ ಫ್ರ್ಯಾಂಕ್. ಅದು ಜಾಸ್ತಿ ಅಂತ ಅನ್ಸತ್ತಾ?"

ಕಾರ್ನೆಲಿಯಸ್ ಸುಮ್ಮನೆ ನಕ್ಕ. ಅವನು ಹೇಳಿದ ಬೆಲೆ ತೀರಾ ಕಡಿಮೆಯಾಗಿತ್ತು.

"ಇಲ್ಲ. ಇವುಗಳ ಮಾರಾಟ ಚೆನ್ನಾಗಿ ಆದರೆ ಆ್ಯಮ್‌ಸ್ಟರ್ ಡ್ಯಾಮ್‌ನ ಒಂದು ಹನ್ನೆರಡು ಸ್ಕೆಚ್‌ಗಳನ್ನು ಮಾಡಿಕೊಡು. ನಾನೇ ಅವುಗಳ ಬೆಲೆ ಹೇಳ್ತೀನಿ. ನಿನಗೂ ಒಂದು ನಾಲ್ಕು ಕಾಸು ಹೆಚ್ಚಾಗಿ ಬರುತ್ತೆ."

"ಅಂಕಲ್ ಇದೇ ನನಗೆ ಬಂದಿರುವ ಮೊಟ್ಟ ಮೊದಲ ಆರ್ಡರ್. ನನಗೆ ಎಷ್ಟು ಸಂತೋಷ ಆಗಿದೆ ಗೊತ್ತಾ? ಅದನ್ನು ವ್ಯಕ್ತ ಪಡಿಸೋಕೆ ಆಗ್ತಿಲ್ಲ!"

"ವಿನ್ಸೆಂಟ್ ನಿನಗೆ ಸಹಾಯಮಾಡಬೇಕು ಅನ್ನೋದೆ ನಮ್ಮೆಲ್ಲರ ಆಸೆ. ಚೆನ್ನಾಗಿ, ಸ್ಟ್ಯಾಂಡರ್ಡ್ ಆದ ಕಲಾಕೃತಿಗಳನ್ನು ಮಾಡು. ನೀನು ಮಾಡುವ ಎಲ್ಲವನ್ನೂ ನಾವೇ ನಮ್ಮಲ್ಲೇ ತಗೊಳ್ಳೋಣ..... ತನ್ನ ಹ್ಯಾಟು, ಗ್ಲೋವ್ಸ್‌ಗಳನ್ನು ಎತ್ತಿಕೊಳ್ಳುತ್ತಾ, "ಥಿಯೋಗೆ, ನಾನು ಕೇಳಿದೆನೆಂದು ಹೇಳು. ಶುಭಾಶಯ ತಿಳಿಸು."

ತನ್ನ ಯಶಸ್ಸಿನಿಂದ ಉನ್ಮಾದಗೊಂಡಿದ್ದ ವಿನ್ಸೆಂಟ್, ಕೂಡಲೇ ವಾಟರ್ ಕಲರ್ಸ್ ಎತ್ತಿಕೊಂಡು ಮಾವ್‌ನ ಮನೆ ಕಡೆ ಓಡಿದ. ಜೆಟ್ ಬಾಗಿಲು ತೆಗೆದಳು. ಅವಳ ಮುಖದಲ್ಲಿ ಮ್ಲಾನತೆ ಇತ್ತು.

"ವಿನ್ಸೆಂಟ್, ನೀನು ಸ್ಟುಡಿಯೋಗೆ ಹೋಗೋದು ಸರಿಕಾಣೊಲ್ಲ. ಅವನ ಪರಿಸ್ಥಿತಿ......."

"ಏನಾಗಿದೆ? ಹುಷಾರಿಲ್ಲವೇನು?"

ಒಂದು ನಿಟ್ಟುಸಿರಿನೊಂದಿಗೆ ಜೆಟ್ –" ಅದೇ ಮಾಮೂಲಿ" ಎಂದು ಉತ್ತರಿಸಿದಳು.

"ಹಾಗಾದರೆ ಅವನು ನನ್ನನ್ನು ನೋಡೋಕೆ ಇಷ್ಟ ಪಡೊಲ್ಲ."

"ಇನ್ನೊಂದು ಸಲ, ಬೇರೆ ಯಾವಾಗಲಾದರೂ ನೋಡುವಿಯಂತೆ. ನೀನು ಬಂದಿದ್ದೇ ಅಂತ ಹೇಳ್ತೀನಿ. ಸ್ವಲ್ಪ ಸಮಾಧಾನ ಆದ ಮೇಲೆ ಬಹುಶಃ ಅವನೇ ನಿನ್ನನ್ನು ನೋಡೋಕೆ ಬರಬಹುದು."

"ನಾನು ಬಂದಿದ್ದನ್ನು ಮರೆಯದೆ ಹೇಳ್ತೀಯಲ್ಲ?"

"ಖಂಡಿತ ಮರೆಯೊಲ್ಲ."

ವಿನ್ಸೆಂಟ್ ತುಂಬಾ ದಿನ ಕಾದ. ಆದರೆ ಮಾವ್ ಬರಲೇ ಇಲ್ಲ. ಬದಲಾಗಿ ಟರ್ಸ್‌ಟೀಗ್, ಒಂದು ಸಲ ಅಲ್ಲ, ಎರಡು ಸಲ ಬಂದಿದ್ದ. ಪ್ರತಿಸಲ ಬಂದಾಗಲೂ ಒಂದೇ ರೀತಿಯ ಹಾಡು.

"ಹೌದೌದು, ಸ್ವಲ್ಪ ಸುಧಾರಿಸಿದ್ದೀಯ. ಇನ್ನೂ ಚೆನ್ನಾಗಿ ಮಾಡಬೇಕು. ಪ್ಲಾಟ್ಸ್‌ನಲ್ಲಿ ಇನ್ನೂ ಅವುಗಳನ್ನು ಮಾರೋಕೆ ಆಗೊಲ್ಲ. ನೀನು ಇನ್ನಷ್ಟು ಕಷ್ಟ ಪಡಬೇಕು. ಬೇಗ ಬೇಗ ಮಾಡಬೇಕು ವಿನ್ಸೆಂಟ್."

"ಮಿಸ್ಟರ್ ಮಿಜ್ನಹೀರ್, ಬೆಳಿಗ್ಗೆ ಐದಕ್ಕೇ ಏಳ್ತೀನಿ. ರಾತ್ರಿ ಹನ್ನೊಂದು ಹನ್ನೆರಡು ಗಂಟೆ ತನಕ ಮಾಡ್ತೀನಿ. ಮಧ್ಯೆ ಮಧ್ಯೆ ಸಿಗರೇಟಿಗೋ ಊಟಕ್ಕೋ ಅಲ್ಲದೆ ಏಳೋದೇ ಇಲ್ಲ."

ಟರ್ಸ್‌ಟೀಗ್ ಅರ್ಥವಾಗದೆ ತಲೆಯಾಡಿಸಿದ. ವಾಟರ್‌ಕಲರ್ಸ್ ಅನ್ನು ಮತ್ತೊಮ್ಮೆ ಗಮನಿಸಿದ. "ನನಗೇನೋ ಅರ್ಥವಾಗ್ತಿಲ್ಲ. ಮೊದಲಿದ್ದ ಹಾಗೆ ಇದೆ. ಇನ್ನೂ ಕಾಣಿಸುತ್ತಲೇ ಇರುವ ಅಪರಿಪಕ್ವತೆಯನ್ನು ಆದಷ್ಟು ಬೇಗ ಗೆಲ್ಲಬೇಕು. ಕಷ್ಟಪಡೋದ್ರಿಂದ ಮಾತ್ರವೇ ಸಾಧ್ಯವಾಗುತ್ತೆ, ಆದರೆ ಸಾಮರ್ಥ್ಯ ಇದ್ದವನಿಗೆ ಮಾತ್ರ."

"ಕಷ್ಟಪಟ್ಟು ಕೆಲಸ ಮಾಡುವುದೇ?" ವಿನ್ಸೆಂಟ್ ಹೇಳಿದ.

"ನಿನಗೆ ಗೊತ್ತೇನು, ವಿನ್ಸೆಂಟ್? ನೀನು ಮಾಡುವುದನ್ನು ನಾನು ಕೊಂಡುಕೊಳ್ಳಬೇಕೂಂತಿದ್ದೀನಿ. ನಿನಗೆ ಸ್ವಂತ ಸಂಪಾದನೆ ಇರಬೇಕೂಂತ ಬಯಸ್ತೀನಿ. ಆದರೆ ನಿನ್ನಲ್ಲಿ ಪರಿಪೂರ್ಣತೆ, ಪರಿಪಕ್ವತೆಗಳು ಸಾಧ್ಯವಾದಾಗ ಮಾತ್ರ! ಹೌದಲ್ಲ?...... ಯಾರದೋ ಔದಾರ್ಯದ ಮೇಲೆ ಬದುಕುವುದು ಬಹುಶಃ ನಿನಗೂ ಇಷ್ಟವಾಗಲಾರದು."

"ಹೌದು."

"ನೀನು ಆದಷ್ಟು ಬೇಗ ಇಂಪ್ರೂವ್ ಆಗ್ಬೇಕು. ನಿನ್ನ ಕೃತಿಗಳು ಬೇಗ ಮಾರುಕಟ್ಟೆಗೆ ಬರಬೇಕು."

ಇಂಥ ಮಾತುಗಳು ಟರ್ಸ್‌ಟೀಗ್‌ನಿಂದ ಬಂದದ್ದು ನಾಲ್ಕನೆ ಸಲ. ಈ ಮನುಷ್ಯ ತನ್ನ ಜೊತೆ ಆಟ ಆಡ್ತಿದ್ದಾನೋ ಹೇಗೆ ಎಂಬ ಅನುಮಾನ ಬಂತು. ನೀನು ಸಂಪಾದನೆ ಮಾಡಬೇಕು.... ಸ್ವಂತ ಸಂಪಾದನೆ ಮಾಡಬೇಕು!

ಈತ ಏನೆಂದುಕೊಂಡಿದ್ದಾನೆ!....... ಯಾರೂ ನಾನು ಮಾಡಿದ್ದನ್ನು ಕೊಂಡುಕೊಳ್ಳದೆ ಹೋದರೆ, ಸಂಪಾದನೆ ಆಗುವುದಾದರೂ ಹೇಗೆ?"

ಒಂದು ದಿನ ವಿನ್ಸೆಂಟ್, ಮಾವ್ ತಲೆ ಬಗ್ಗಿಸಿಕೊಂಡು ಆತುರಾತುರವಾಗಿ ಹೋಗ್ತಿರೋದನ್ನು ನೋಡಿದ. ಅವನು ವಿನ್ಸೆಂಟ್‌ನನ್ನು ಗಮನಿಸದ ಹಾಗೆ ಕಾಣಿಸಿದ.

"ಕಸಿನ್ ಮಾವ್, ನಿನ್ನನ್ನು ಬಹಳ ದಿನಗಳಿಂದ ನೋಡಲೇ ಇಲ್ಲ!"

"ನನಗೇನೋ ಕೆಲಸ ಇತ್ತು." ಮಾವ್‌ನ ದನಿಯಲ್ಲಿ ಒಂದು ಬಗೆಯ ನಿರ್ಲಕ್ಷ್ಯ ಕಾಣಿಸಿತು.

"ಇರಬೇಕು. ಹೊಸ ಕ್ಯಾನ್‌ವಾಸ್ ಮಾಡ್ತಿದ್ದೀಯಲ್ಲ, ಹೇಗೆ ಬರ್‍ತಾ ಇದೆ?"

"ಓಹ್ ಅದಾ! ಪರವಾಗಿಲ್ಲ." ಆಸಕ್ತಿಯಿಲ್ಲದೆ ಉತ್ತರಿಸಿದ.

"ನಿನ್ನ ಸ್ಟುಡಿಯೋಗೆ ಒಮ್ಮೆ ಬರಲೇನು? ಯಾಕೋ ಏನೋ ವಾಟರ್‌ಕಲರ್ಸ್ ಸರಿಯಾಗಿಯೇ ಬರ್‍ತಿಲ್ಲ!"

"ಬೇಡ ಬೇಡ. ಈಗ ಸದ್ಯಕ್ಕಂತೂ ಬೇಡವೇ ಬೇಡ. ನನಗೆ ತುಂಬ ಕೆಲಸ ಇದೆ. ಸಮಯ ಹಾಳು ಮಾಡೋಕೆ ನನಗೆ ಪುರಸೊತ್ತಿಲ್ಲ."

"ಹೋಗಲಿ ನೀನೆ ವಾಕಿಂಗ್ ಅಂತ ಸ್ವಲ್ಪ ಹೊತ್ತು ಆಚೆ ಬಂದಾಗ, ನನ್ನನ್ನು ಭೇಟಿಯಾಗಿ, ನನ್ನ ಪೈಂಟಿಂಗ್ಸ್ ನೋಡಿ ಒಂದೆರಡು ಮಾತು ಹೇಳು. ನನಗಷ್ಟೇ ಸಾಕು. ಅದರಿಂದಲೇ ನಾನು ಸರಿ ಮಾಡ್ಕೊಳ್ತೀನಿ."

"ನೋಡೋಣ. ನೋಡೋಣ. ಈಗ ನನಗೆ ಕೆಲಸ ಇದೆ. ಮತ್ತೆ ಬರ್‍ತೀನಿ!"

ಒಂದೇ ಸಲಕ್ಕೆ ಅಲ್ಲಿಂದ ಜಾರಿ ಹೊರಟು ಬಿಟ್ಟ. ವಿನ್ಸೆಂಟ್ ಬೆರಗಾಗಿ ಅವನು ಹೋದ ದಿಕ್ಕನ್ನೇ ನೋಡುತ್ತಿದ್ದ.

ಅವನಿಗೇನಾಯಿತು? ತನ್ನ ಕಸಿನ್‌ಗೆ ಅವಮಾನ ಮಾಡಿದನೇ? ಅವನಿಂದ ದೂರ ಆಗುವುದಕ್ಕೆ ಪ್ರಯತ್ನಿಸಿದನೇ?

ಕೆಲದಿನ ಕಳೆದ ಮೇಲೆ, ವೀಸೆನ್‌ಬ್ರೂಕ್ ಇದ್ದಕ್ಕಿದ್ದಂತೆ ತನ್ನ ಸ್ಟುಡಿಯೋಗೆ ಬಂದದ್ದು ಅವನಿಗೆ ದಿಗ್ಭ್ರಮೆಯುಂಟು ಮಾಡಿತು. ಅವನು ಸಾಮಾನ್ಯವಾಗಿ ಯುವ ಕಲಾವಿದರ ಬಳಿಗೆ ಬರುವುದೇ ಇಲ್ಲ. ಅಕಸ್ಮಾತ್ ಬಂದರೂ ಕೂಡ, ಅವನ ಕೃತಿಗಳನ್ನು ನಿಷ್ಠುರವಾಗಿ ಟೀಕಿಸುವುದಕ್ಕೆ ಮಾತ್ರ!

"ಆಹಾ! ಬಹಳ ಚೆನ್ನಾಗಿದೆ. ಅರಮನೆ ಇದ್ದ ಹಾಗಿದೆ ಈ ಜಾಗ. ಸದ್ಯದಲ್ಲಿಯೇ. ನೀನು ರಾಜ ಮತ್ತು ರಾಣಿಯರ ಭಾವಚಿತ್ರಗಳನ್ನು ಮಾಡಲಿರುವೆ."

"ನಿನಗೆ ಇಷ್ಟ ಇಲ್ಲಾಂದ್ರೆ, ದಯವಿಟ್ಟು ಇಲ್ಲಿಂದ ಹೊರಗೆ ಹೋಗು." ವಿನ್ಸೆಂಟ್ ಸಿಟ್ಟಿನಿಂದ ಹೇಳಿದ.

"ಪೈಂಟಿಂಗ್ ಮಾಡೋದನ್ನು ಬಿಡಬಾರದೇಕೆ ವಿನ್ಸೆಂಟ್? ಅದೊಂದು ನಾಯಿಪಾಡು!"

"ನೀನು ಮಾತ್ರ ಮಾಡುತ್ತಲೇ ಇದ್ದೀ...!"

"ಹೌದು. ನಾನು ಅದರಲ್ಲಿ ಯಶಸ್ವಿಯಾಗಿದ್ದೀನಿ. ಆದರೆ ನೀನು ಮಾತ್ರ ಎಂದಿಗೂ ಯಶಸ್ಸು ಪಡೆಯೋದಿಲ್ಲ."

"ಯಶಸ್ಸು ಸಿಗದೆ ಹೋಗಬಹುದು. ಆದರೆ ನೀನು ಮಾಡುತ್ತಿರುವುದಕ್ಕಿಂತ ಉತ್ತಮವಾದದ್ದನ್ನು ನಾನು ಮಾಡಬಲ್ಲೆ."

ವೀಸೆನ್‌ಬ್ರೂಕ್ ಗಟ್ಟಿಯಾಗಿ ನಕ್ಕ. ನನ್ನನ್ನು ಮೀರಿಸುವುದಕ್ಕೆ ಸಾಧ್ಯವೇ ಇಲ್ಲ. ಬಹುಶಃ ಪ್ರಯತ್ನ ಮಾಡಿದರೆ, ನನಗೆ ಹತ್ತಿರ ಬರಬಹುದು. ಹೇಗ್‌ನಲ್ಲಿ ನನಗೆ ಹತ್ತಿರ ಬರುವಂತಹವರು ಯಾರೂ ಇಲ್ಲದಿದ್ದರೂ, ಕಷ್ಟದಿಂದ ನೀನೊಬ್ಬ ಅದನ್ನು ಸಾಧಿಸಬಲ್ಲೆಯೇನೋ!"

ವಿನ್ಸೆಂಟ್ ತನ್ನಲ್ಲಿದ್ದ ಡ್ರಾಯಿಂಗ್ಸ್‌ಗಳ ಕಟ್ಟನ್ನು ಅವನ ಮುಂದಿರಿಸಿ, "ಕೂತ್ಕೋತೀಯೇನು?" ಎಂದ.

"ಕೂತ್ಕೊಂಡ್ರೆ ಸರಿಯಾಗಿ ನೋಡೋಕೆ ಆಗೊಲ್ಲ."

ಅವನು ವಾಟರ್‌ಕಲರ್ಸ್ ಪಕ್ಕಕ್ಕೆ ಸರಿಸುತ್ತಾ ಹೇಳಿದ– ಇದು ನಿನ್ನ ಮಾಧ್ಯಮ ಅಲ್ಲ. ನೀನು ಹೇಳಲು ಬಯಸುವುದಕ್ಕೆ ಈ ಮಾಧ್ಯಮ ಸರಿಹೋಗುವುದಿಲ್ಲ." ನಂತರ ವಿನ್ಸೆಂಟ್‌ನ ಪೆನ್ಸಿಲ್ ಸ್ಕೆಚ್‌ಗಳನ್ನು ಗಮನಿಸಿದ. ಬೋರೈನ್ಸ್, ಬ್ರಾಬಾಂಟ್‌ಟಿನ್ಸ್, ಮುದುಕರು ಮೊದಲಾಗಿ, ಹೇಗ್‌ನಲ್ಲಿದ್ದಾಗ ಮಾಡಿದ ಡ್ರಾಯಿಂಗ್ಸ್ ಮೇಲೆ ಕಣ್ಣಾಡಿಸುತ್ತ ಮುಸಿ ಮುಸಿ ನಗಲು ತೊಡಗಿದ. ಅವನ ರೀತಿಯನ್ನು ಗಮನಿಸಿದ ವಿನ್ಸೆಂಟ್, ಅವನಿಂದ ಬರಬಹುದಾದ ಟೀಕೆ, ಬೈಗುಳ– ಎಲ್ಲಕ್ಕೂ ಸಿದ್ಧನಾದ.

ತೀಕ್ಷ್ಣವಾದ ಕಣ್ಣುಗಳಿಂದ ಸ್ಕೆಚ್‌ಗಳನ್ನು ಗಮನಿಸುತ್ತಾ "ನೀನು ಇವನ್ನೆಲ್ಲ ಸಾಕಷ್ಟು ಚೆನ್ನಾಗಿಯೇ ಮಾಡಿದ್ದೀಯ. ಇವುಗಳನ್ನೇ ಇಟ್ಟುಕೊಂಡು ನಾನೂ ಸಹ ಮಾಡಬಲ್ಲೆ."

ಅವನ ಮಾತುಗಳು ಭಾರವೆನಿಸಿದವು. ಇದ್ದಕ್ಕಿದ್ದಂತೆ ಕೆಳಗೆ ಕುಳಿತ.

"ನಿರ್ದಯ ಖಡ್ಗ" ಎಂದು ಕರೀತಾರೆ ಅಂತ ಭಾವಿಸಿದ್ದೆ.

"ಹೌದು. ಈಗಲೂ ನಾನು ನಿರ್ದಯ ಖಡ್ಗವೇ!..... ನೀನು ಮಾಡಿದ್ದರಲ್ಲಿ, ಯಾವುದೂ ಚೆನ್ನಾಗಿಲ್ಲ ಅಂತ ಅನಿಸಿದ್ದರೆ, ನಿನಗೂ ನಾನು ನಿರ್ದಯವಾಗಿಯೇ ಹೇಳ್ತಿದ್ದೆ."

"ಟರ್ಸ್‌ಟೀಗ್ ಇವುಗಳನ್ನು ನೋಡಿ ಏನೂ ಚೆನ್ನಾಗಿಲ್ಲ. ಒರಟಾಗಿವೆ, ನಾಜೂಕಾಗಿಲ್ಲ– ಎಂದೆಲ್ಲ ಬೈದಿದ್ದ."

"ನಾನ್‌ಸೆನ್ಸ್. ಹೀಗೆ ಟೀಕೆ ಮಾಡುವುದರಲ್ಲಿಯೇ ಅವರ ಸತ್ವ ಇರೋದು!"

"ನನಗೇನೋ ಪೆನ್ ಡ್ರಾಯಿಂಗ್ಸ್ ಮುಂದುವರೆಸಬೇಕೆಂದಿದೆ, ಆದರೆ ಟರ್ಸ್‌ಟೀಗ್ ವಾಟರ್‌ಕಲರ್ಸ್ ಅಂತಾನೆ."

"ಯಾಕೇಂದ್ರೆ ಅದಕ್ಕೆ ಬೇಡಿಕೆ ಇದೆ. ಇಲ್ಲ ಹುಡುಗ, ನಿನಗೆ ಪೆನ್ ಡ್ರಾಯಿಂಗ್ಸ್‌ನಲ್ಲಿ ಆಸಕ್ತಿ ಇದ್ದರೆ ಅದನ್ನೇ ಮಾಡು. ಅಲ್ದೆ ಯಾರು ಹೇಳೋದನ್ನೂ ಕೇಳಬೇಡ. ಕಡೆಗೆ ನಾನೇ ಹೇಳಿದ್ರೂ! ನಿನ್ನ ಮನಸ್ಸಿನಂತೆ ನೀನು ನಡ್ಕೋ."

"ಮಾವ್ ನನ್ನನ್ನು ಹುಟ್ಟಾ ಕಲಾವಿದ ಅಂತಾನೇ!"

"ಆ ಮಾತಿಂದ ನಿನ್ನ ತಲೆ ತಿರುಗೋದು ಬೇಡ."

"ಮತ್ಯಾಕೆ ನನ್ನ ಜೊತೆ ತಣ್ಣಗಿದ್ದ?" ಒಂದು ಶಬ್ದ ಕೂಡಾ ಮಾತಾಡಲಿಲ್ಲ."

"ಏನಾದರೂ ಹೊಸ ಪಿಕ್ಚರ್ ಮಾಡ್ತಿದ್ದರೆ, ಅವನು ಎಲ್ಲರ ಜೊತೆಗೂ ಹಾಗೇನೇ! ಅದರಿಂದ ಮನಸ್ಸು ಕೆಡಿಸಿಕೋಬೇಡ. ಷೆವೆನಿಂಜನ್ ಕ್ಯಾನ್‌ವಾಸ್ ಮುಗೀತೂಂದ್ರೆ ಮಾಮೂಲಿ ಸ್ಥಿತಿಗೆ ಬರ್‍ತಾನೆ. ಈ ಮಧ್ಯೆ ನಿನಗೇನಾದರೂ ಸಹಾಯ ಬೇಕಾದಲ್ಲಿ, ನನ್ನ ಸ್ಟುಡಿಯೋ ಕಡೆ ಬರಬಹುದು."

"ವೀಸೆನ್‌ಬ್ರೂಕ್, ನಾನೊಂದು ಮಾತು ಕೇಳಲೇ?"

"ಕೇಳು."

"ಮಾವ್ ನಿನ್ನನ್ನು ಇಲ್ಲಿಗೆ ಕಳಿಸಿರಬೇಕಲ್ಲ."

"ಹೌದು."

"ಹಾಗ್ಯಾಕೆ ಮಾಡಿದ?"

"ನಿನ್ನ ಕೆಲಸದ ಬಗ್ಗೆ ನನ್ನ ಅಭಿಪ್ರಾಯ ತಿಳಿಯೋಕೆ."

"ನಾನು ಹುಟ್ಟಾ ಕಲಾವಿದ ಅಂತ ಅವನು ಭಾವಿಸಿರುವಾಗ, ಅಭಿಪ್ರಾಯ ಯಾಕೆ ಬೇಕು?"

"ನನಗೆ ಗೊತ್ತಿಲ್ಲ. ಆದರೆ ಟರ್ಸ್‌ಟೀಗ್ ಏನಾದರೂ ಅವನ ತಲೇಲಿ ನಿನ್ನ ಬಗ್ಗೆ ಅನುಮಾನ ಬರುವ ಹಾಗೆ ಮಾಡಿರಬೇಕು."

–೬–

ಟರ್ಸ್‌ಟೀಗ್ ಇವನಲ್ಲಿ ನಂಬಿಕೆ ಕಳೆದುಕೊಳ್ಳುತ್ತಿದ್ದಂತೆ, ಮಾವ್ ಇವನ ವಿಚಾರದಲ್ಲಿ ತಣ್ಣಗಿದ್ದ. ಇವರಿಬ್ಬರ ಜಾಗ ತುಂಬಲು ಈಗ ಕ್ರಿಸ್ಟೀನ್ ಇದ್ದಳು. ಅವನಿಗೆ ಜೊತೆ ಕೊಡುತ್ತಿದ್ದಳು. ಬೆಳಿಗ್ಗೇನೇ ಸ್ಟುಡಿಯೋಗೆ ಬಂದುಬಿಡುತ್ತಿದ್ದಳು. ಅವನು ಅವನ ಕೆಲಸದಲ್ಲಿದ್ದಾಗ, ತಾನೂ ಜೊತೆಗೆ ತಂದಿದ್ದ ಹೆಣಿಗೆ ಬುಟ್ಟಿಯಿಂದ, ಹೆಣಿಗೆ ಸಾಮಾನು ತೆಗೆದು ಹೆಣೆಯುವುದರಲ್ಲಿ ಮಗ್ನಳಾಗಿ ಇರುತ್ತಿದ್ದಳು. ಅವಳ ಧ್ವನಿ ಕರ್ಕಶ, ಅವಳ ಭಾಷೆ ಅಷ್ಟೇ ಕೆಟ್ಟದ್ದಾಗಿತ್ತು. ಅವಳು ಮೆಲ್ಲಗೆ ಮಾತಾಡುತ್ತಿದ್ದುದರಿಂದ, ಅವನು ಕೆಲಸದ ಕಡೆ ಗಮನಕೊಟ್ಟು, ಮಾತನ್ನು ನಿರ್ಲಕ್ಷಿಸಲು ಸಾಧ್ಯವಾಗುತ್ತಿತ್ತು. ಹೆಚ್ಚು ಸಮಯವನ್ನು, ಸ್ಟೊವ್ ಬಳಿ ಕುಳಿತು, ಕಿಟಕಿಯಾಚೆ ನೋಡುತ್ತಾ, ಹುಟ್ಟಲಿರುವ

ಮಗುವಿಗಾಗಿ ಪುಟ್ಟ ಪುಟ್ಟದಾದ ಉಡುಪುಗಳನ್ನು ಹೆಣೆಯುವುದರಲ್ಲಿ ಕಳೆಯುತ್ತಿದ್ದಳು. ಅವಳೊಂದು ಕೊಳಕು ಮಾಡೆಲ್ ಆಗಿದ್ದಳು. ಆದರೆ ಕ್ರಮೇಣ ಸುಧಾರಿಸಿದಳು. ಮನೆಗೆ ಹೋಗುವ ಮೊದಲು ವಿನ್ಸೆಂಟ್‌ಗಾಗಿ ರಾತ್ರಿಯಡಿಗೆಯನ್ನು ಮಾಡಿಟ್ಟು ಹೋಗುವುದನ್ನು ಅಭ್ಯಾಸ ಮಾಡಿಕೊಂಡಳು.

"ಅದಕ್ಕೆಲ್ಲ ತಲೆ ಕೆಡಿಸಿಕೋಬೇಡ ಸಿಯೆನ್" – ಎಂದು ಹೇಳಿದ.

"ನನಗೇನೂ ಇದು ಕಷ್ಟವಾಗುವುದಿಲ್ಲ. ನೀನು ಮಾಡುವುದಕ್ಕಿಂತ ಚೆನ್ನಾಗಿಯೇ ಮಾಡ್ತೇನೆ."

"ಹಾಗಾದರೆ ನೀನೂ ನನ್ನ ಜೊತೆ ಊಟಕ್ಕಿರಬೇಕು."

"ಖಂಡಿತ. ಅಮ್ಮ ಮಕ್ಕಳನ್ನು ನೋಡ್ಕೊಳ್ತಾಳೆ. ನನಗೆ ಇಲ್ಲಿ ಇರೋಕೆ ಇಷ್ಟಾನೇ!"

ಪ್ರತಿದಿನಾ ವಿನ್ಸೆಂಟ್ ಅವಳಿಗೊಂದು ಫ್ರ್ಯಾಂಕ್ ಕೊಡುತ್ತಿದ್ದ. ಇದು ತನ್ನ ಸಾಮರ್ಥ್ಯಕ್ಕೆ ಮೀರಿ ನೀಡುತ್ತಿರುವುದೆಂದು ಅವನಿಗೆ ಗೊತ್ತಿತ್ತು. ಆದರೆ ಅವಳ ಸಹವಾಸ ಅವನಿಗೆ ಇಷ್ಟವಾಗುತ್ತಿತ್ತು. ಸದ್ಯ ಬಟ್ಟೆ ಒಗೆಯುವ ಕೆಲಸದಿಂದ ಅವಳನ್ನು ಬಿಡುಗಡೆ ಮಾಡಲು ಸಾಧ್ಯವಾದದ್ದು ಅವನಿಗೆ ಹೆಚ್ಚಿನ ಸಂತೋಷಕೊಟ್ಟಿತ್ತು. ಕೆಲವು ಸಲ ಮಧ್ಯಾಹ್ನ ಊಟವಾಗಲಾದರೂ, ಸ್ಕೆಚ್ ಮಾಡುವುದನ್ನು ನಿಲ್ಲಿಸಿ ಹೋಗಬೇಕಾಗಿದ್ದಾಗ, ತಡರಾತ್ರಿವರೆಗೂ ಅವಳು ಅವನಿಗೆ ಮಾಡೆಲ್ ಆಗಿ ಕೂರುತ್ತಿದ್ದಳು. ಬೆಳಿಗ್ಗೆ ಏಳುತ್ತಿದ್ದಂತೆ ಕಾಫಿಯ ಪರಿಮಳ, ಸ್ಟೋವ್ ಕಡೆ ಬಾಗಿ ಕೆಲಸ ಮಾಡುತ್ತಿರುವ ಹೆಣ್ಣಿನ ದೃಶ್ಯ – ಅವನಿಗೆ ಸ್ವರ್ಗಸುಖದ ಅನುಭವವನ್ನು ನೀಡಿತ್ತು. ಜೀವನದಲ್ಲಿ ಮೊಟ್ಟಮೊದಲ ಬಾರಿಗೆ, ತನ್ನ ಬಗ್ಗೆ ಕೇರ್ ತೆಗೆದುಕೊಳ್ಳುವವರನ್ನು ಕಂಡಿದ್ದ. ಹೀಗೆ ಯಾರೋ ಒಬ್ಬರ ರಕ್ಷಣೆಯಲ್ಲಿ, ಕಾಳಜಿಯಲ್ಲಿ ಇರುವುದು ಅವನಿಗೆ ಹಾಯೆನಿಸಿತ್ತು.

ಕೆಲವು ಸಲ ಅಗತ್ಯ ಇಲ್ಲದಿದ್ದರೂ, ಅಲ್ಲಿಂದ ಹೋಗುವ ಮನಸ್ಸಾಗದೆ, "ವಿನ್ಸೆಂಟ್ ಇವತ್ತು ಇಲ್ಲಿಯೇ ಇದ್ದುಬಿಡ್ತೇನೆ...... ಆಗಬಹುದಲ್ಲ?" ಎಂದು ಕೇಳುತ್ತಿದ್ದಳು.

"ಖಂಡಿತ ಸಿಯೆನ್. ನಿನಗೆ ಇರಬೇಕೂಂತ ಅನಿಸಿದಾಗಲೆಲ್ಲ, ಧಾರಾಳವಾಗಿ ಇದ್ದು ಬಿಡು. ನಿನಗೂ ಗೊತ್ತು ನಿನ್ನ ಸ್ನೇಹ, ಜೊತೆ ನನಗೂ ಇಷ್ಟಾಂತ!"

ವಿನ್ಸೆಂಟ್ ತಾನಾಗಿ ಅವಳಿಗೆ ಏನೂ ಕೆಲಸ ಹೇಳದಿದ್ದರೂ ಅವಳೇ ಮುಂದಾಗಿ ಅವನ ಬಟ್ಟೆ ಒಗೆಯುವುದು, ಹೊಲಿಯುವುದು, ಅವನಿಗಾಗಿ ಮಾರ್ಕೆಟ್‌ಗೆ ಹೋಗಿ ಬೇಕಾದ ಸಾಮಾನು ತರುವುದು ಇತ್ಯಾದಿ ಕೆಲಸಗಳನ್ನು ರೂಢಿ ಮಾಡಿಕೊಂಡಿದ್ದಳು.

"ನೀವು ಗಂಡಸರಿದ್ದೀರಲ್ಲ, ನಿಮಗೇನೂ ಗೊತ್ತಾಗೋದೇ ಇಲ್ಲ. ಮಾರ್ಕೆಟ್‌ಗೆ ಹೋದರೆ, ಸುಲಭವಾಗಿ ಮೋಸಹೋಗೀರಿ. ಅದಕ್ಕೇ ಮನೆಯಲ್ಲಿ ಒಂದು ಹೆಣ್ಣು ಇರಬೇಕೂನ್ನೋದು."

ಅವಳು ಅಂತಹ ಒಳ್ಳೆಯ ರೀತಿಯ ಮನೆಯೊಡತಿಯೇನೂ ಆಗಿರಲಿಲ್ಲ. ಅಮ್ಮನ ಮನೆಯಲ್ಲಿ ಸೋಮಾರಿಯಾಗಿ ಬಿದ್ದುಕೊಂಡಿದ್ದುದು ಚೆನ್ನಾಗಿ ಅಭ್ಯಾಸವಾಗಿತ್ತು. ಅದರಿಂದಾಗಿ, ಮನೆಯನ್ನು ಶುಚಿಯಾಗಿ, ಒಂದು ಕ್ರಮಬದ್ಧ ರೀತಿಯಲ್ಲಿ ಇಟ್ಟುಕೊಳ್ಳುವ

ಅಭ್ಯಾಸವೇ ಅವಳಿಗಿರಲಿಲ್ಲ. ಆದರೆ ಇಲ್ಲಿ ಇದ್ದಕ್ಕಿದ್ದಂತೆ ಅದೆಲ್ಲಿಂದಲೋ ಸ್ಫೂರ್ತಿ, ಪ್ರಚೋದನೆ ದೊರೆತು ಪ್ರತಿಯೊಂದು ಕೆಲಸವನ್ನೂ ಆಸಕ್ತಿಯಿಂದ ಮಾಡುತ್ತಿದ್ದಳು. ಮಾಡುವುದರಲ್ಲಿ ಸುಖವನ್ನೂ ಕಂಡುಕೊಂಡಿದ್ದಳು. ತನಗೆ ಪ್ರಿಯವಾದ ವ್ಯಕ್ತಿಗಾಗಿ ಏನು ಬೇಕಾದರೂ ಮಾಡಲು ಸಿದ್ಧವಾಗಿದ್ದಳು. ಅವಳ ಈ ಪ್ರವೃತ್ತಿ ವಿನ್ಸೆಂಟ್‌ಗೂ ಸಂತೋಷಕೊಟ್ಟಿತ್ತು. ಅವಳಿಗೆ ಒಂದಾದರೂ ಕಟು ಮಾತನ್ನು ಆಡಬೇಕೆಂಬ ಆಲೋಚನೆಯೂ ಅವನಿಗಿರಲಿಲ್ಲ. ಎಷ್ಟೇ ಕೆಲಸ ಮಾಡಿದರೂ ಈಗ ಅವಳ ಮುಖದಲ್ಲಿ ದಣಿವು ಕಾಣಿಸುತ್ತಿರಲಿಲ್ಲ. ಅವಳ ಧ್ವನಿಯಲ್ಲಿನ ಕರ್ಕಶತೆ ಸ್ವಲ್ಪ ಕಡಿಮೆಯಾಗಿತ್ತು. ಅವಳ ಬಾಯಿಂದ ಬರುತ್ತಿದ್ದ ಕೆಟ್ಟಕೆಟ್ಟ ಮಾತು, ಅಶ್ಲೀಲ ಮಾತುಗಳು ಬರುವುದೂ ನಿಂತಿತ್ತು. ಆದರೆ ಭಾವನೆಗಳನ್ನು ಹತ್ತಿಕ್ಕಿಕೊಂಡಿರಲು ಮಾತ್ರ ಸಾಧ್ಯವಾಗಿರಲಿಲ್ಲ. ಏನಾದರೂ ಅವಳ ಮನಸ್ಸಿಗೆ ನೋವಾಗುವಂತಹ, ಬೇಸರವಾಗುವಂತಹ ಸಂದರ್ಭ ಬಂದರೆ ಮಾತ್ರ ಸುಮ್ಮನೆ ಇರುತ್ತಿರಲಿಲ್ಲ. ಉದ್ವೇಗಕ್ಕೆ ಒಳಗಾಗಿ ಬಾಯಿಗೆ ಬಂದ ಬೈಗುಳನ್ನೆಲ್ಲ ಹೊರಚೆಲ್ಲಿ ಬಿಡುತ್ತಿದ್ದಳು. ಎಂತಹ ಮಾತುಗಳೆಂದರೆ ತಾನು ಶಾಲೆಯಲ್ಲಿ ಓದುವ ದಿನಗಳಿಂದ ಹಿಡಿದು ಈಗಿನವರೆಗೂ ವಿನ್ಸೆಂಟ್ ಕೇಳಿದ್ದಿರಲಿಲ್ಲ.

ಅವಳು ಬೈಯ್ಯುತ್ತಿದ್ದ ಕ್ಷಣಗಳಲ್ಲಿ ಕ್ರಿಸ್ಟೀನ್‌ನಲ್ಲಿ ತನ್ನದೇ ವ್ಯಂಗ್ಯ ರೂಪವನ್ನು ಕಾಣುತ್ತಿದ್ದ ವಿನ್ಸೆಂಟ್. ಅವನು ಏನೂ ಮಾತಾಡದೆ, ಪಕ್ಕದಲ್ಲಿ ಸದ್ದಿಲ್ಲದೆ ಕುಳಿತು ಬಿಡುತ್ತಿದ್ದ. ಎದ್ದ ಬಿರುಗಾಳಿ ತಣ್ಣಗಾಗುವವರೆಗೂ ಕಾಯುತ್ತಿದ್ದ. ಒಮ್ಮೊಮ್ಮೆ ಕ್ರಿಸ್ಟೀನ್ ಕೂಡಾ ಇಷ್ಟೇ ಸಹನೆಯಿಂದ ಇರುತ್ತಿದ್ದಳು. ಅವನು ಡ್ರಾಯಿಂಗ್ ಮಾಡುವಾಗ ತಪ್ಪಾಗಿ ಹೋದರೆ, ಇಲ್ಲವೆ ಮಾಡೆಲ್ ಸರಿಯಾಗಿ ಭಂಗಿಗಳನ್ನು ನೀಡದಿದ್ದರೆ, ವಿನ್ಸೆಂಟ್ ಹುಚ್ಚನಂತೆ ರೇಗಾಡುತ್ತಿದ್ದ. ಅವನ ರೇಗಾಟ, ಕೂಗಾಟಗಳಿಗೆ ಛಾವಣಿಯೇ ಕುಸಿದು ಬೀಳುವಂತಾದರೂ ಕ್ರಿಸ್ಟೀನ್ ಸಹಿಸಿಕೊಳ್ಳುತ್ತಿದ್ದಳು. ಅವನು ಎಷ್ಟೇ ಮಾತಾಡಲಿ, ಏನೇ ಮಾತಾಡಲಿ, ಪ್ರತಿಮಾತಾಡುತ್ತಿರಲಿಲ್ಲ; ತಡೆಯುತ್ತಲೂ ಇರಲಿಲ್ಲ. ಸ್ವಲ್ಪ ಹೊತ್ತಿನ ನಂತರ ಎಲ್ಲವೂ ಶಾಂತವಾಗುತ್ತಿತ್ತು. ಅದೃಷ್ಟವಶಾತ್ ಇಂತಹ ಸಂದರ್ಭಗಳಲ್ಲಿ, ಅವರಿಬ್ಬರಲ್ಲಿ ಯಾರೊಬ್ಬರೂ ಸಿಟ್ಟಾಗುತ್ತಿರಲಿಲ್ಲ.

ಅವಳ ದೇಹದ ರೇಖೆಗಳ ಸಂಪೂರ್ಣ ಪರಿಚಯವಾಗುವವರೆಗೂ ಪದೇ ಪದೇ ಅವಳನ್ನು ಸ್ಕೆಚ್‌ಮಾಡಿದ. ಮುಂದೆ ನಿಜವಾದ ಪ್ರಯೋಗಗಳ ಕಡಗೆ ಮನಸ್ಸಿಟ್ಟ. ಒಲೆಯ ಸಮೀಪದಲ್ಲಿ ಮರದ ಬೊಡ್ಡೆಯೊಂದರ ಮೇಲೆ ಕ್ರಿಸ್ಟೀನ್‌ಳನ್ನು ನಗ್ನಳಾಗಿ ಕೂರಿಸಿದ. ಮರದ ಬೊಡ್ಡೆಗೆ ಜೀವಕೊಟ್ಟ, ಜೀವಂತ ಮರದ ಕಲ್ಪನೆ ಬರುವ ಹಾಗೆ, ಮತ್ತು ಔಟ್‌ಡೋರ್ ದೃಶ್ಯದಂತೆ ಸೃಷ್ಟಿಸಿದ. ವಾಸ್ತವವಾಗಿ ಕಾಣಿಸಬೇಕೆಂದು ಬೊಡ್ಡೆಯಲ್ಲಿ ಎಲೆಗಳು ಚಿಗುರೊಡೆದಂತೆ ಬರೆದ. ಆ ಚಿತ್ರದಲ್ಲಿ ಹೆಣ್ಣೊಬ್ಬಳು, ಬೊಡ್ಡೆಯ ಮೇಲೆ ಕುಳಿತು, ಕೈಗಳನ್ನು ಮೊಣಕಾಲುಗಳ ಮೇಲೆ ಮುಖವನ್ನು ಕೈಗಳೆರಡರ ನಡುವೆ ಬಾಗಿಸಿದ್ದಳು. ಅವಳ ದುಂಡನೆಯ ಮೊಲೆಗಳು ಜಾರಿದ್ದು ನಡುವೆ ಒಂದು ಸಣ್ಣನೆಯ ಗೆರೆ ಕಾಣಿಸುತ್ತಿತ್ತು. ಪಾದಗಳು ನೆಲದ ಮೇಲೆ ಇದ್ದವು. ಅದಕ್ಕೆ 'ದುಃಖ' (ಸಾರೋ) ಎಂದು ಹೆಸರಿಟ್ಟ, ಜೀವನದ ಸತ್ವವೇ ಸಂಪೂರ್ಣವಾಗಿ ಸೋರಿ ಹೋಗಿದ್ದ ಹೆಣ್ಣೊಬ್ಬಳ

ಚಿತ್ರವಾಗಿತ್ತು. ಅದರ ಕೆಳಗೆ ಮಿಷೆಲೆಟ್ ಬರಹದ ಸಾಲೊಂದನ್ನು ಬರೆದ.

ಈ ಪ್ರಯೋಗ ಸುಮಾರು ಒಂದು ವಾರ ಮುಂದುವರೆಯಿತು. ಅವನಲ್ಲಿದ್ದ ಹಣವೆಲ್ಲ ಕರಗಿ ಹೋಗಿತ್ತು. ಕೇವಲ ಹತ್ತು ಫ್ರ್ಯಾಂಕ್ ಮಾತ್ರವೇ ಉಳಿದಿತ್ತು. ಅದಷ್ಟರಿಂದಲೇ ಮಾರ್ಚ್ ಮೊದಲ ತಾರೀಖಿನ ವರೆಗೆ ದಿನ ಕಳೆಯಬೇಕಿತ್ತು. ಒಂದು ಎರಡು ಮೂರು ದಿನಕ್ಕೆ ಆಗುವಷ್ಟು ಕಪ್ಪು ಬ್ರೆಡ್ ಮನೆಯಲ್ಲಿತ್ತು. ಮಾಡೆಲ್ ಇರಿಸಿಕೊಂಡು ಕೆಲಸ ಮಾಡುವುದನ್ನು ಸ್ವಲ್ಪ ಕಾಲ ನಿಲ್ಲಿಸಿದರೆ, ಹೇಗೋ ನಡೆಯಬಹುದು ಎನ್ನಿಸಿ. ಅವಳಿಗೆ ''ಸಿಯೆನ್, ಮುಂದಿನ ಫಸ್ಟ್ ತಾರೀಖಿನವರೆಗೆ, ನಿನ್ನ ಅಗತ್ಯವಿರಲಾರದು" ಎಂದು ತಿಳಿಸಿದ.

"ಯಾಕೆ? ಏನಾಯ್ತು?"

"ನನ್ನ ಹತ್ತಿರ ಇನ್ನು ದುಡ್ಡಿಲ್ಲ."

"ಅಂದ್ರೆ?" ನನಗೆ ಕೊಡೋದಕ್ಕೆ?"

"ಹೌದು."

"ನನಗೆ ಮಾಡೋಕೆ ಬೇರೇನೂ ಕೆಲಸ ಇಲ್ಲ. ನಾನು ಹೇಗೋ ಬರ್ತೀನಿ."

"ನಿನಗೆ ದುಡ್ಡು ಬೇಕಾಗುತ್ತೆ, ಸಿಯೆನ್."

"ಸ್ವಲ್ಪ ಹಣ ಹೇಗಾದರೂ ಸಿಗುತ್ತೆ."

"ಇಡೀ ದಿನ ಇಲ್ಲಿಯೇ ಕಳೆದರೆ, ಬಟ್ಟೆ ತೊಳೆಯೋ ಕೆಲಸ ಹೇಗಾಗುತ್ತೆ?"

"ಬಿಡು. ಅದರ ಬಗ್ಗೆ ನಿನಗೆ ಯೋಚನೆ ಬೇಡ. ನಾನು ಹೇಗೋ ಸಂಪಾದಿಸ್ತೀನಿ."

ಅವನ ಬಳಿ ಇದ್ದ ಬ್ರೆಡ್ ಮುಗಿಯುವ ತನಕ ಮೂರು ದಿವಸ ಅವಳನ್ನು ಬರಲು ಬಿಟ್ಟ. ಸಿಯೆನ್‌ಗೆ ತಾನು ಅಂಕಲ್ ಮನೆಗೆ, ಆ್ಯಮ್‌ಸ್ಟರ್ ಡ್ಯಾಮ್‌ಗೆ ಹೋಗುವುದಾಗಿಯೂ, ಬಂದ ಮೇಲೆ, ಅವಳ ಮನೆಗೆ ಬರುವುದಾಗಿಯೂ ತಿಳಿಸಿದ. ಮತ್ತೆ ಮೂರುದಿನ ತನ್ನ ಸ್ಟುಡಿಯೋದಲ್ಲೇ ಉಳಿದುಕೊಂಡು, ಕಾಪಿ ಮಾಡುವ ಕೆಲಸದಲ್ಲಿ ತೊಡಗಿದ. ಬರೀ ನೀರನ್ನು ಕುಡಿದೇ ದಿನ ಕಳೆದ. ಮೂರನೇದಿನ ಮಧ್ಯಾಹ್ನ, ಟೀ ಮತ್ತು ಕೇಕ್ ಸಿಗಬಹುದೆಂಬ ನಿರೀಕ್ಷೆಯಲ್ಲಿ ಡಿಬಾಕ್‌ನ ಮನೆಗೆ ಹೋದ.

ಇವನು ಹೋದಾಗ ಡಿಬಾಕ್ ಈಸಲ್ ಮುಂದಿದ್ದ. ನೋಡಿದ ಕೂಡಲೇ, "ಹಲೋ ವಿನ್ಸೆಂಟ್, ಬಾ ಕುಳಿತುಕೋ. ಊಟದ ವೇಳೆ ಆಗುವವರೆಗೂ ನಾನು ಈ ಕೆಲಸ ಮಾಡ್ತಿರ್ತೇನೆ. ನಿನಗೆ ಬೇಸರವಾದರೆ ಆ ಟೇಬಲ್ ಮೇಲೆ ಮ್ಯಾಗ್‌ಜೀನ್ಸ್ ಇವೆ. ಓದ್ತಿರು. ಸಂಕೋಚ ಬೇಡ."

ಟೀ ಬಗ್ಗೆ ಒಂದು ಮಾತೂ ಇಲ್ಲ.

ಅವನಿಗೆ ಗೊತ್ತು. ಮಾವ್ ತನ್ನನ್ನು ಭೇಟಿ ಆಗೊಲ್ಲ. ಜೆಟ್‌ಳ ಬಳಿ ಕೇಳೋದು ಅವಮಾನ. ಬೇಕಾದರೆ ಉಪವಾಸದಿಂದ ಸಾಯಲೂ ಸಿದ್ಧನಾದ. ಇನ್ನು ಟರ್ಸ್‌ಟೀಗ್, ತನ್ನ ಬಗ್ಗೆ ಮಾವ್ ಹತ್ತಿರ ಕೆಟ್ಟದಾಗಿ ಚಾಡಿ ಹೇಳಿದ್ದಾನೆ. ಅಂಥವನ ಹತ್ತಿರ ಏನೂ

ಕೇಳಲೇ ಬಾರದೆಂದುಕೊಂಡ. ತಾನು ಮಾಡುವ ಕೆಲಸದ ಹೊರತು, ಬೇರೆ ರೀತಿಯಿಂದ ಹಣ ಸಂಪಾದನೆ ಮಾಡುವುದು ಅವನಿಗೆ ಗೊತ್ತಿರಲಿಲ್ಲ. ಈಗ ಅವನನ್ನು ಜ್ವರ ಹಿಡಿಯಿತು. ಹಾಸಿಗೆ ಹಿಡಿದು ಮಲಗಿದ. ಹಣಕ್ಕಾಗಿ ಏನೂ ಮಾಡಲು ಸಾಧ್ಯವಿಲ್ಲದಿದ್ದರೂ, ಏನಾದರೂ ಪವಾಡ ನಡೆದು ಥಿಯೋನಿಂದ ಹಣ ಬರಬಹುದು ಎಂದುಕೊಂಡ. ಆದರೆ ಥಿಯೋಗೆ ಒಂದನೇ ತಾರೀಖಿಗೆ ಮೊದಲು ಸಂಬಳ ಬರಲಿಲ್ಲ.

ಐದನೇ ದಿನ, ಕ್ರಿಸ್ಟೀನ್, ಒಂದು ಮಧ್ಯಾಹ್ನ, ಬಾಗಿಲೂ ತಟ್ಟದೆ ನೇರವಾಗಿ ಒಳಗೆ ಬಂದಳು. ವಿನ್ಸೆಂಟ್ ನಿದ್ದೆ ಮಾಡುತ್ತಿದ್ದ. ಅವಳು ಅವನತ್ತ ಬಾಗಿದಳು. ಮುಖದ ಮೇಲಿನ ಗೆರೆಗಳನ್ನು ಗಮನಿಸಿದಳು. ಮುಖ ಬಿಳಿಚಿಕೊಂಡಿತ್ತು; ತುಟಿಗಳು ಒಣಗಿದ್ದವು. ಮೃದುವಾಗಿ ಹಣೆಮುಟ್ಟಿ ನೋಡಿದಳು. ಜ್ವರ ಬಂದಿದ್ದು ಅವಳಿಗೆ ಅರ್ಥವಾಯಿತು. ಮನೆಯಲ್ಲಿ ಒಂದು ಚೂರು ಬ್ರೆಡ್ಡಾಗಲೀ, ಒಂದು ಕಾಫಿಬೀಜವಾಗಲಿ ಇಲ್ಲದ್ದನ್ನು ಗಮನಿಸಿದಳು. ಕೂಡಲೇ ಹೊರಗೆ ಹೊರಟಳು.

ಒಂದು ಗಂಟೆಯ ನಂತರ, ವಿನ್ಸೆಂಟ್‌ಗೆ ಅಮ್ಮನ ಕನಸುಬಿತ್ತು. ಅವಳು ಎಟ್ಟೆನ್‌ನಲ್ಲಿ ತನಗೆ ಪ್ರಿಯವಾದ ತಿಂಡಿಯನ್ನು ಮಾಡುತ್ತಿದ್ದುದನ್ನು ಕನಸು ಕಂಡ. ಕನಸಿನಿಂದ ಹೊರಬಂದು ಎಚ್ಚರಗೊಂಡು ನೋಡಿದಾಗ, ಕ್ರಿಸ್ಟೀನ್, ಸ್ಟೊವ್ ಮೇಲಿನ ಪಾತ್ರೆಗಳಲ್ಲಿ ಏನನ್ನೋ ಬೆರಸುತ್ತಿದ್ದಳು.

"ಸಿಯೆನ್" – ಅವನು ಕರೆದ.

ಅವನ ಹಾಸಿಗೆಯ ಬಳಿ ಹೋಗಿ ತನ್ನ ತಣ್ಣನೆಯ ಕೈಗಳನ್ನು ಅವನ ಕೆನ್ನೆಯ ಮೇಲೆ ಇರಿಸಿದಳು. ಗಡ್ಡ ಬೆಂಕಿಯಂತೆ ಸುಡುತ್ತಿತ್ತು. "ಗರ್ವ, ಅಭಿಮಾನಗಳು ಇನ್ನು ಮುಂದೆ ಬೇಡ. ಜೊತೆಗೆ ಸುಳ್ಳುಗಳನ್ನು ಹೇಳುವುದನ್ನು ನಿಲ್ಲಿಸು. ನಾವು ಬಡವರಾಗಿದ್ದೀವಿ ನಿಜ. ಆದರೆ ಈ ಸ್ಥಿತಿಗೆ ನಾವು ಕಾರಣರಲ್ಲ. ಅದು ನಮ್ಮ ತಪ್ಪಲ್ಲ. ಪರಸ್ಪರ ಒಬ್ಬರಿಗೊಬ್ಬರು ನಾವು ಸಹಾಯಮಾಡಬೇಕು. ವೈನ್ ಸೆಲ್ಲರ್‌ನಲ್ಲಿ ಮೊದಲ ಬಾರಿ ಭೇಟಿಯಾದಾಗ ನೀನು ನನಗೆ ಸಹಾಯ ಮಾಡಲಿಲ್ಲವೇ?"

"ಸಿಯೆನ್"

"ಈಗ ನೀನಲ್ಲಿ ಸುಮ್ಮನೆ ಮಲಗು. ಮನೆಗೆ ಹೋಗಿ, ಆಲೂಗಡ್ಡೆ, ಬೀನ್ಸ್ ತಂದಿದ್ದೀನಿ. ಇನ್ನೇನು ರೆಡಿಯಾಗುತ್ತೆ."

ಬೆಂದ ಆಲೂಗಡ್ಡೆಯನ್ನು ಹಿಚುಕಿದಳು. ಜೊತೆಗೆ ಅದರ ಮೇಲೆ ಹಸಿರು ಬೀನ್ಸ್ ಇರಿಸಿದಳು. ಪ್ಲೇಟನ್ನು ಕೈಲಿ ಹಿಡಿದುಬಂದು ಅವನ ಹಾಸಿಗೆಯಲ್ಲಿ ಕುಳಿತು, ಅವನಿಗೆ ತಿನ್ನಿಸಲು ತೊಡಗಿದಳು.

"ನಿನ್ನ ಹತ್ತಿರ ದುಡ್ಡು ಇರಲಿಲ್ಲಾಂದ್ರೆ, ದಿನಾ ಯಾಕೆ ನನಗೆ ಕೊಡ್ತಿದ್ದೆ? ನೀನು ಹಸಿದುಕೊಂಡು ಇರೋದು ಒಳ್ಳೇದಲ್ಲ."

ಅವನೊಬ್ಬನೇ ಆಗಿದ್ದರೆ, ಎಷ್ಟು ದಿನ ಬೇಕಾದರೂ ಹೀಗೇ ಇರ್ತಿದ್ದ. ಆದರೆ ಹೀಗೆ ಅನಿರೀಕ್ಷಿತವಾಗಿ ಕನಿಕರ ತೋರಿಸುವವರು ಎದುರಾದಾಗ, ಅವನೆಲ್ಲ ನಿರ್ಧಾರ ತುಂಡಾಗುತ್ತಿತ್ತು. ಟರ್ಸ್‌ಟೀಗ್‌ನನ್ನು ಕಾಣಲು ನಿರ್ಧರಿಸಿದ. ಕ್ರಿಸ್ಟೀನ್ ಅವನ ಷರ್ಟ್ ಒಗೆದಳು. ಆದರೆ ಐರನ್ ಮಾಡೋಕೆ ಏನೂ ಇರಲಿಲ್ಲ. ಮಾರನೇ ದಿನ ಬೆಳಿಗ್ಗೆ ಅವಳು ಅವನಿಗೆ ಸ್ವಲ್ಪ ಬ್ರೆಡ್ಡು, ಒಂದು ಚೂರು ಕಾಫಿ ಕೊಟ್ಟಳು. ಪ್ಲಾಟ್ಸ್‌ನತ್ತ ಹೆಜ್ಜೆ ಹಾಕಿದ. ಅವನ ಒಂದು ಬೂಟು ಹರಿದಿದ್ದು, ಹಿಮ್ಮಡಿ ಹೊರಗೆ ಕಾಣಿಸುತ್ತಿತ್ತು. ಅವನ ಟ್ರೌಷರ್ಸ್ ಕೊಳಕಾಗಿತ್ತು. ಥಿಯೋನ ಕೋಟು ಅವನಿಗೆ ಚಿಕ್ಕದಾಗಿತ್ತು. ಯಾವುದೋ ಒಂದು ಹಳೆಯ ಟೈ ಧರಿಸಿದ್ದ. ಆದರೆ ಅವನು ಹಾಕಿದ್ದ ಹ್ಯಾಟ್ ಮಾತ್ರ, ಅದೆಲ್ಲಿ ಸಂಪಾದಿಸಿದ್ದನೋ, ತುಂಬಾ ಚೆನ್ನಾಗಿತ್ತು.

ರೈನ್ ರೈಲ್ವೆ ಹಳಿಗಳ ಗುಂಟ ನಡೆದ, ಷೆವಿನಿಂಜೆನ್ ಕಡೆಗೆ ಹೊರಡುವ ಸ್ಟೀಮ್ ಟ್ರ್ಯಾಮ್ಸ್‌ಗಳನ್ನು ಹಾದು ಪ್ಲಾಟ್ಸ್ ಪಟ್ಟಣವನ್ನು ಪ್ರವೇಶಿಸಿದ. ಸೂರ್ಯನ ಬಿಸಿಲು ಅಷ್ಟು ಪ್ರಖರವಾಗಿಲ್ಲದಿದ್ದರೂ, ಅವನ ಬಲಹೀನತೆಯಿಂದಾಗಿ ಸ್ವಲ್ಪ ಕಷ್ಟವೆನಿಸಿತು. ಪ್ಲೀನ್‌ನಲ್ಲಿ, ಒಂದು ಅಂಗಡಿಯ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ಗಮನಿಸಿದ. ಹೇಗ್‌ನ ಜನಕ್ಕೆ ಹೇಗೆ ಕಾಣಿಸಿದ್ದನೋ, ಹಾಗೆಯೇ ಈಗಲೂ ಕಾಣಿಸುತ್ತಿದ್ದ. ಕೊಳಕಾಗಿ, ನಾಡಾಡಿಯಾಗಿ, ದಿಕ್ಕು ದೆಶೆ ಇಲ್ಲದೆ, ಯಾರಿಗೂ ಬೇಡವಾದವನಾಗಿ, ರೋಗಿಷ್ಠನಾಗಿ, ದುರ್ಬಲನಾಗಿ ಕಾಣಿಸುತ್ತಿದ್ದ.

ಶ್ರೀಮಂತರಿಗೆ ಮಾತ್ರ ಸಾಧ್ಯವಾಗುವ ಅಂಗಡಿಗಳ ಬೀದಿ. ವಿನ್ಸೆಂಟ್‌ಗೆ ಆ ಅಂಗಡಿಗಳಿದ್ದ ತ್ರಿಕೋಣಾಕಾರದ ರಸ್ತೆಗೆ ಪ್ರವೇಶಿಸುವುದಕ್ಕೇ ಹೆದರಿಕೆ ಎನಿಸಿತು. ತನಗೂ ಪ್ಲಾಟ್ಸ್‌ಗೂ ಇದ್ದ ಕೋಟಿ ಕೋಟಿ ಮೈಲಿಗಳ ಅಂತರವೇನೆಂದು ಇಲ್ಲಿಯವರೆಗೂ ಅವನ ಅರಿವಿಗೆ ಬಂದಿರಲಿಲ್ಲ.

ಗೂಪಿಲ್ಸ್‌ನಲ್ಲಿದ್ದ ಕ್ಲರ್ಕ್‌ಗಳು ಧೂಳು ಹೊಡೆಯುತ್ತಿದ್ದರು. ಅವರೆಲ್ಲರೂ ವಿಚಿತ್ರ ಕುತೂಹಲದಿಂದ ಅವನನ್ನೇ ದಿಟ್ಟಿಸಿ ನೋಡಿದರು. ಈ ಮನುಷ್ಯನ ಕುಟುಂಬದವರು ಯೂರೋಪಿನ ಕಲಾ ಜಗತ್ತನ್ನೇ ನಿಯಂತ್ರಣದಲ್ಲಿಟ್ಟುಕೊಂಡಿರುವಾಗ, ಇವನೇಕೆ ಇಂಥ ದರಿದ್ರ ಸ್ಥಿತಿಯಲ್ಲಿದ್ದಾನೆ? ಎನ್ನುವುದೇ ಅವರಿಗೆ ಅರ್ಥವಾಗದ ಸಂಗತಿಯಾಗಿತ್ತು.

ಟರ್ಸ್‌ಟೀಗ್ ಮಹಡಿ ಮೇಲಿನ ತನ್ನ ಆಫೀಸಿನಲ್ಲಿದ್ದ. ತನಗೆ ಬಂದಿದ್ದ ಪತ್ರಗಳನ್ನೆಲ್ಲ ಬಿಡಿಸಿ ಪರಿಶೀಲಿಸುತ್ತಿದ್ದ. ವಿನ್ಸೆಂಟ್ ಬಂದು ನಿಂತದ್ದು ಅವನ ಗಮನಕ್ಕೆ ಬಂದಿತ್ತು. ಅವನ ಆಕಾರ, ಕೆಂಪುಗಡ್ಡ, ಹಸಿರು-ನೀಲಿ ಕಣ್ಣುಗಳು ತೆಳುವಾಗುತ್ತಿದ್ದ ಕೂದಲು ಎಲ್ಲವೂ ಕಣ್ಮುಂದೆ ಸುಳಿಯಿತು. ಆದರೂ ಅವನನ್ನು ಮಾತಾಡಿಸಲಿಲ್ಲ. ಅವನು ಹೇಗಿದ್ದಾನೆ, ಹೇಗಿರಬಹುದು ಎಂಬುದೊಂದೂ ಅವನಿಗೆ ಬೇಕಿರಲಿಲ್ಲ.

"ಅಂಗಡಿಗೆ ಬಂದಿರುವ ಮೊಟ್ಟಮೊದಲ ಗಿರಾಕಿ ನೀನು ವಿನ್ಸೆಂಟ್? ಏನಾದರೂ ಬೇಕಿದೆಯೇ?"

ವಿನ್ಸೆಂಟ್ ತನ್ನ ಕಷ್ಟ ಹೇಳಿಕೊಂಡ.

"ನಿನಗೆ ಕಳಿಸುತ್ತಿದ್ದ ಹಣಾನ ಏನು ಮಾಡಿದೆ?"

"ಖರ್ಚು ಮಾಡಿದೆ."

"ಬೇಕಾಬಿಟ್ಟಿ ಖರ್ಚು ಮಾಡಿದರೆ, ನನ್ನಿಂದ ಏನು ಮಾಡಲೂ ಸಾಧ್ಯವಿಲ್ಲ. ತಿಂಗಳಲ್ಲಿ ಮೂವತ್ತು ದಿನ ಇರುತ್ತೆ. ಸ್ವಲ್ಪ ನೋಡಿಕೊಂಡು, ಸರಿಯಾಗಿ ಅಗತ್ಯಕ್ಕೆ ತಕ್ಕಂತೆ ಖರ್ಚು ಮಾಡುವುದನ್ನು ಕಲಿಯಬೇಕು."

"ತುಂಬ ಹಣ ಮಾಡೆಲ್ ಮೇಲೆ ಖರ್ಚು ಮಾಡಿದ್ದೇನೆ ಹೊರತು. ಬೇರೆ ಯಾವುದಕ್ಕೂ ಅಲ್ಲ."

"ಹಾಗಿದ್ದಾಗ, ಮಾಡೆಲ್‌ಗಳನ್ನು ಬಾಡಿಗೆಗೆ ಕರೆಯಬಾರದಿತ್ತು. ಸ್ವಲ್ಪ ಮಿತದಲ್ಲಿ, ಕಡಿಮೆ ಖರ್ಚಿನಲ್ಲಿ ಕೆಲಸ ಮಾಡಬಹುದಾಗಿತ್ತು."

"ಮಾಡೆಲ್ ಇಲ್ಲದೆ ಕೆಲಸ ಮಾಡೋದೂಂದ್ರೆ ಮನುಷ್ಯ ಆಕೃತಿಯನ್ನು ಪೈಂಟ್ ಮಾಡಿದವನ ವಿನಾಶವೇ ಸರಿ."

"ಮನುಷ್ಯ ಆಕೃತಿಗಳನ್ನು ಪೈಂಟ್ ಮಾಡೋದೇ ಬೇಡ. ಹಸುಗಳು, ಕುರಿಗಳು ಮಾಡಿದರೆ ಆಯಿತು. ಅವುಗಳಿಗೆ ಕಾಸು-ಗೀಸು ಕೊಡಬೇಕಾಗಿಲ್ಲ."

"ಹಸು, ಕುರಿ ಇತ್ಯಾದಿ ಪ್ರಾಣಿಗಳನ್ನು ಮಾಡುವುದು ನನಗೆ ಸಾಧ್ಯವೇ ಇಲ್ಲ. ನನಗೆ ಮಾಡಬೇಕೂಂತ ಅನಿಸದಿದ್ದರೆ ನಾನು ಮಾಡೋದೇ ಇಲ್ಲ."

"ಮನುಷ್ಯರನ್ನೇ ಸ್ಕೆಚ್ ಮಾಡ್ತಾ ಇರಬೇಕಾದ್ದಿರಲಿಲ್ಲ. ಆ ಸ್ಕೆಚಸ್ ಮಾರಾಟ ಆಗೋದೇ ಇಲ್ಲ. ನೀನು ವಾಟರ್‌ಕಲರ್ಸ್‌ನ್ನೇ ಮಾಡಬೇಕಾಗುತ್ತೆ. ಅದರ ಹೊರತು ಬೇರೆ ಮಾಡೋದೇ ಬೇಡ."

"ವಾಟರ್ ಕಲರ್ಸ್ ನನ್ನ ಮೀಡಿಯಮ್ ಅಲ್ಲ."

"ನಿನಗೆ ವಾಟರ್ ಕಲರ್ಸ್ ಹಿಡಿಸೋದಿಲ್ಲ, ಮೀಡಿಯಮ್ ಮಾಡ್ತೀರೋ ರೀತಿ ನಿನಗೆ ನೋವನ್ನು ಮರೆಸೋಕೆ ನಾರ್ಕೋಟಿಕ್ ಆಗಿ ಕೆಲಸಮಾಡ್ತಿದೆ."

ಈ ಮಾತಿಗೆ ವಿನ್ಸೆಂಟ್‌ನಲ್ಲಿ ಉತ್ತರವಿರಲಿಲ್ಲ. ಮೌನವಾಗಿದ್ದ. "ಡಿ ಬಾಕ್ ಮಾಡೆಲ್ಸ್‌ನ ಬಳಸ್ಕೊಳ್ಳೊಲ್ಲ. ಆದರೂ ಎಷ್ಟೊಂದು ಹಣ ಸಂಪಾದನೆ ಮಾಡಿ ಶ್ರೀಮಂತನಾಗಿದ್ದಾನೆ. ಅವನ ಕ್ಯಾನ್‌ವಾಸ್‌ಗಳು ಅದ್ಭುತವಾಗಿದೇಂದ್ರೆ, ನೀನೂ ಒಪ್ಪಿಕೊಳ್ತೀಯ. ಅವನ ಕ್ಯಾನ್‌ವಾಸ್‌ಗಳಿಗೆ ಬೆಲೆ ಹೆಚ್ಚುತ್ತಲೇ ಇದೆ. ನಿನ್ನಲ್ಲೂ ಅವನ ಮನೋಧರ್ಮ, ದೃಷ್ಟಿ, ಅವನ ಕೃತಿಗಳಲ್ಲಿನ ಮೋಹಕತೆ ಬರಬೇಕೂ ಅನ್ನೋದು ನನ್ನಾಸೆ. ಆದರೆ ಅದು ನಿನ್ನಲ್ಲಿ ಕಾಣೋಕೆ ಸಾಧ್ಯವಾಗ್ತಿಲ್ಲ ವಿನ್ಸೆಂಟ್. ನಿನ್ನ ಕಲಾಕೃತಿಗಳಲ್ಲಿ ಆಕರ್ಷಕತೆ ಇಲ್ಲ; ಅವು ತೀರಾ ಬಾಲಿಶ ಎನಿಸುತ್ತದೆ. ನೀನು ಹಾಗೆ ನೋಡಿದರೆ ಆರ್ಟಿಸ್ಟೇ ಅಲ್ಲ."

ಐದು ದಿನಗಳಿಂದ ಉಪವಾಸವಿದ್ದುದರಿಂದ ಹೊಟ್ಟೆಯಲ್ಲಿ ಸಂಕಟ ಹೆಚ್ಚಾಯಿತು. ಕಾಲು, ಕೀಲುಗಳಲ್ಲಿ ದುರ್ಬಲತೆ ಕಾಣಿಸಿಕೊಂಡಿತು. ಸೋತು ಹೋಗಿ ಇಟಾಲಿಯನ್ ಕುರ್ಚಿಯೊಂದರಲ್ಲಿ ಕುಸಿದು ಕುಳಿತ. ಮಾತಾಡಲು ಅವನಲ್ಲಿ ಶಕ್ತಿಯೇ ಉಡುಗಿ ಹೋಗಿತ್ತು.

ಒಂದು ಕ್ಷಣದ ನಂತರ ಕೇಳಿದ.–

"ಹಾಗೆ ಯಾಕೆ ಮಾತಾಡ್ತೀರಿ ಮಿಜ್ನಹೀರ್?"

ಟರ್ಸ್‌ಟೀಗ್ ಶುಭ್ರವಾದ ಕರ್ಚೀಫನ್ನು ಹೊರ ತೆಗೆದು ಮುಖ, ಮೂಗು, ಗಡ್ಡ ಒರೆಸಿಕೊಳ್ಳುತ್ತಾ ಹೇಳಿದ. "ಯಾಕೇಂದ್ರೆ ನಾನು ನಿನಗೆ, ನಿನ್ನ ಕುಟುಂಬಕ್ಕೆ ಋಣಿಯಾಗಿದ್ದೀನಿ. ನಿನಗೆ ಸತ್ಯ ತಿಳಿದಿರಬೇಕು. ವಿನ್ಸೆಂಟ್ ಈಗಲೂ ಕಾಲ ಮಿಂಚಿಲ್ಲ. ಮನಸ್ಸು ಮಾಡಿದರೆ ನೀನು ಸಾಧಿಸಬಹುದು. ಆರ್ಟಿಸ್ಟ್ ಆಗೋದು ನಿನ್ನ ಹಣೇಲಿ ಬರೆದಿಲ್ಲ. ಜೀವನಕ್ಕೊಂದು ದಾರಿ ಮಾಡ್ಕೋಬೇಕು. ಪೈಂಟರ್ಸ್ ವಿಚಾರದಲ್ಲಿ ನಾನೆಂದೂ ತಪ್ಪು ಮಾಡೊಲ್ಲ."

"ಹೌದು. ನನಗೆ ಅದು ಗೊತ್ತು."

"ನನ್ನಲ್ಲಿ ಇನ್ನೊಂದು ತೊಂದರೆ ಏನು ಗೊತ್ತೇ?..... ಬಹಳ ತಡವಾಗಿ ಪೈಂಟಿಂಗ್ಸ್‌ಗೆ ಬಂದೆ. ಇನ್ನೂ ಚಿಕ್ಕವನಾಗಿದ್ದಾಗಲೇ ಶುರು ಮಾಡಿದ್ದರೆ, ಬಹುಶಃ ಇಷ್ಟು ಹೊತ್ತಿಗೆ ಸ್ವಲ್ಪ ಮಟ್ಟಿಗಾದರೂ ಮುಂದುವರೀತಿದ್ದೆ. ಆದರೆ ಈಗ....? ವಯಸ್ಸು ಮೂವತ್ತಾಗಿದೆ. ನಿನ್ನ ವಯಸ್ಸಿಗೆ ನಾನು.....! ನಿನ್ನಲ್ಲಿ ಮೂಲಭೂತವಾಗಿ ಪ್ರತಿಭೇನೇ ಇಲ್ಲಾಂದ್ರೆ, ಹೇಗೆ ತಾನೇ ಸಾಧಿಸಬಲ್ಲೆ? ಇನ್ನೂ ಒಂದು,..... ಥಿಯೋ ನಿನಗಿಂತ ಚಿಕ್ಕವನು. ಪಾಪ ಅವನಿಂದ ಯಾವಾಗಲೂ ಹಣವನ್ನು ಹೇಗೆ ತಾನೇ ನಿನಗೆ ತಗೊಳ್ಳೊ ಮನಸ್ಸಾಗುತ್ತೆ?"

"ಮಾವ್ ಹೇಳಿದ್ದಾನೆ. ಏನಂತ ಗೊತ್ತಾ? ಒಂದು ಸಲ ಪೈಂಟ್ ಮಾಡೋಕೆ ಕೈ ಹಚ್ಚಿದರೆ ಸಾಕು, ನೀನೊಬ್ಬ ಪೈಂಟರ್ ಅಂತ!"

"ಮಾವ್ ಹಾಗೆ ಹೇಳೋಕೆ ಕಾರಣ ಇದೆ. ಅವನು ನಿನ್ನ ಕಸಿನ್. ನಿನ್ನ ಬಗ್ಗೆ ಸ್ವಲ್ಪ ಸಹಾನುಭೂತಿ. ಆದರೆ ನಾನು ನಿನ್ನ ಬಗ್ಗೆ ತೋರುವ ಕಾಳಜಿ, ಕರುಣೆಗಳು ಅವನದಕ್ಕಿಂತ ಉತ್ತಮ. ಜೀವನ ಪೂರ್ತಿ ಹಾಳೋಗೋಕೆ ಮೊದಲೇ ಈ ಹುಚ್ಚು ಬಿಟ್ಟು ಬಿಡು. ನನ್ನ ಮಾತು ಕೇಳು. ಒಂದಲ್ಲ ಒಂದು ದಿನ ನನಗೆ ಧನ್ಯವಾದ ಹೇಳೋಕೆ ಬಂದೇ ಬರ್ತೀಯ!"

"ನಿಜ್ನಹೀರ್ ಟರ್ಸ್‌ಟೀಗ್ ಐದು ದಿನದಿಂದ, ಒಂದು ಚೂರು ಬ್ರೆಡ್ ಕೊಂಡುಕೊಳ್ಳೊಕೂ ಕಾಸಿಲ್ದೆ ಇದ್ದೇನೆ; ನಾನು ಒಬ್ಬನೇ ಆಗಿದ್ದರೆ ಒಂದು ಸೆಂಟಿಮನ್ನೂ ಕೇಳ್ತಿರಲಿಲ್ಲ. ಆದರೆ ನನ್ನ ಜೊತೆ ನನಗೆ ಮಾಡೆಲ್ ಆಗಿ ಕೆಲಸ ಮಾಡ್ತಿರೋ ಬಡ ಹೆಣ್ಣು ಮಗಳೊಬ್ಬಳು ಇದ್ದಾಳೆ. ಅವಳಿಗಾಗಿ ಬೇಕಾಗಿದೆ. ಥಿಯೋನಿಂದ ಹಣ ಬರುವವರೆಗೆ ನಿಮ್ಮಿಂದ ಒಂದಿಷ್ಟು ಹಣ ಬೇಕಾಗಿದೆ. ನಾನು ಹಣ ಬಂದ ಕೂಡಲೇ ವಾಪಸ್ ಕೊಟ್ಟು ಬಿಡ್ತೇನೆ."

ಟರ್ಸ್‌ಟೀಗ್ ಎದ್ದು ಕಿಟಕಿಯಾಚೆಯಿಂದ, ಕೊಳದಲ್ಲಿ ಆಡುತ್ತಿದ್ದ ಹಂಸಗಳನ್ನು ನೋಡುತ್ತಿದ್ದ. ವಿನ್ಸೆಂಟ್ ಹೇಗ್‌ಗೆ ಬಂದದ್ದಾದರೂ ಯಾಕೆ? ಆ್ಯಮ್‌ಸ್ಟರ್ ಡ್ಯಾಮ್, ರೋಟೆರ್ ಡ್ಯಾಮ್, ಬ್ರಸೆಲ್ಸ್ ಪ್ಯಾರಿಸ್ ಎಲ್ಲಾ ಕಡೆ ಅವನ ಅಂಕಲ್‌ಗಳ ದೊಡ್ಡ ದೊಡ್ಡ ಕಲಾಕೃತಿಗಳ ಅಂಗಡಿಗಳಿವೆ. ಅಲ್ಲೆಲ್ಲಾದರೂ ಅವನು ಹೋಗಿ ಇರಬಹುದಾಗಿತ್ತು.

"ನಾನೊಂದು ಹತ್ತು ಗಿಲ್ಡರ್‌ಗಳನ್ನು ಕೊಟ್ಟರೆ ತುಂಬ ಉಪಕಾರ ಮಾಡ್ದಂಗೆ ಅಂತ ನಿನಗೆ ಅನಿಸುತ್ತೆ. ಆದರೆ ನಾನು ಕೊಡೊಲ್ಲ ಅಂದ್ರೆ ಉಪಕಾರ ಅಂತ ಅನಿಸೊಲ್ಲ ಹೌದಲ್ಲ!" ಎಂದು ತನ್ನ ಕೈಗಳೆರಡನ್ನು ತನ್ನ ಕೋಟಿನ ಹಿಂಭಾಗಕ್ಕೆ ಇರಿಸಿಕೊಂಡ.

ಸಿಯೆನ್ ಆಲೂಗಡ್ಡೆ ಕೊಳ್ಳೋಕೆ ಎಷ್ಟು ಕಷ್ಟ ಪಟ್ಟಿದ್ದಾಳೆ ಅನ್ನೋದು ವಿನ್ಸೆಂಟ್‌ಗೆ ಗೊತ್ತು, ಅಂಥವಳನ್ನು ಹಸಿವಿನಿಂದ ಸಾಯಲು ಬಿಡಬೇಕೆ!"

"ಮಿಜ್ನಹೀರ್, ನಿಮ್ಮ ಆಲೋಚನೆ ಸರಿ ಇರಬಹುದು. ನಾನು ಆರ್ಟಿಸ್ಟ್ ಆಗೋ ಸಾಮಾರ್ಥ್ಯಾನೂ ಇಲ್ಲ. ನನ್ನಂಥವನಿಗೆ ದುಡ್ಡುಕೊಟ್ಟು ಪ್ರೋತ್ಸಾಹಿಸೋದು ಬುದ್ಧಿವಂತಿಕೆ ಆಗಲಾರದು. ಆದಷ್ಟು ಬೇಗ ನಾನೊಂದು ದಾರಿ ಕಂಡುಕೊಂಡು, ನನ್ನ ಸ್ವಂತ ಸಂಪಾದನೆಯಲ್ಲಿ ಬದುಕಬೇಕು. ಆದರೆ ನಮ್ಮ ಹಳೆಯ ಸ್ನೇಹವನ್ನು ನೆನಪಿಸಿಕೊಂಡಾದರೂ ನನಗೊಂದು ಹತ್ತು ಗಿಲ್ಡರ್‌ಗಳ ಸಾಲವನ್ನು ಕೊಡಿ."

ಟರ್ಸ್‌ಟೀಗ್ ವ್ಯಾಲೆಟ್ ತೆಗೆದು, ಅದರೊಳಗಿಂದ ಹತ್ತು ಗಿಲ್ಡರ್ ನೋಟನ್ನು ಹುಡುಕಿ ವಿನ್ಸೆಂಟ್‌ಗೆ, ಒಂದು ಮಾತೂ ಆಡದೆ, ಕೊಟ್ಟ.

"ತುಂಬ ಉಪಕಾರ ಆಯ್ತು. ನಿಜವಾಗಿಯೂ ಇದು ನಿಮ್ಮ ಒಳ್ಳೆತನಕ್ಕೆ ಸಾಕ್ಷಿ."

ಅವನು ಹೊರಗೆ ಹೆಜ್ಜೆ ಹಾಕಿ, ಶ್ರೀಮಂತರ, ಶುಭ್ರವಾದ ಬೀದಿಗಳನ್ನು ಹಾದು ಹೋದ. ದೊಡ್ಡದೊಡ್ಡ ಮನೆಗಳು, ಎಲ್ಲ ಬಗೆಯ ಸೌಕರ್ಯಗಳು, ಇದ್ದಂತಹವು. ವಿನ್ಸೆಂಟ್ ತನ್ನಲ್ಲಿಯೇ ಹೇಳಿಕೊಂಡ. ಸ್ನೇಹಿತರು ಯಾವಾಗಲೂ ಸ್ನೇಹಿತರಾಗಿಯೇ ಇರಬಾರದು. ಆಗಾಗ ಜಗಳ ಆಡುತ್ತಲೂ ಇರಬೇಕು. ನಾನು ಆರು ತಿಂಗಳು ಮತ್ತೆ ಈ ಕಡೆ ತಲೆ ಹಾಕೊಲ್ಲ. ಟರ್ಸ್‌ಟೀಗ್‌ನ ನೋಡೋದೂ ಇಲ್ಲ; ಅವನ ಜೊತೆ ಮಾತೂ ಆಡೊಲ್ಲ; ನನ್ನ ಡ್ರಾಯಿಂಗ್ಸ್‌ನ ತೋರಿಸೋದು ಇಲ್ಲ."

ದಾರಿಯಲ್ಲಿ ಹಾಗೆಯೇ ಡಿ ಬಾಕ್‌ನನ್ನು ಕಾಣಲು ಹೋದ. ಅವನ ಕ್ಯಾನ್‌ವಾಸ್‌ಗಳಲ್ಲಿ ಇರುವ ಆಕರ್ಷಣೆ, ಅದಕ್ಕೆ ಅಷ್ಟೊಂದು ಬೆಲೆ ಬರೋಕೆ ಅದರಲ್ಲಿರೋ ವಿಶೇಷತೆ, ತನಗೆ ಸಾಧ್ಯವಾಗದ ಗುಣಗಳು ಅವುಗಳಲ್ಲಿ ಏನಿದೆ ಅನ್ನುವುದನ್ನು ಪರೀಕ್ಷೆ ಮಾಡಬೇಕೆಂದೇ ಬಂದಿದ್ದ. ಡಿ ಬಾಕ್ ಕುರ್ಚೀಲಿ ಕುಳಿತು ಕಾದಂಬರಿ ಓದುತ್ತಿದ್ದ.

"ಹಲೋ, ನನಗೆ ತಲೆ ಕೆಟ್ಟು ಹೋಗಿದೆ. ಏನೂ ಹೊಳೀತಾನೇ ಇಲ್ಲ. ಒಂದು ಗೆರೆ ಎಳೆಯೋಕೂ ನನ್ನಿಂದ ಸಾಧ್ಯವಾಗ್ತಿಲ್ಲ. ಒಂದು ಚೇರ್ ಎಳ್ಕೊಂಡು ಕೂತ್ಕೋ. ಏನಾದರೂ ತಮಾಶೆಯಾಗಿ ಮಾತಾಡು. ಸಿಗರೇಟ್‌ಗೆ ತುಂಬ ಬೇಗ ಆಯ್ತೇನೋ ಎನಿಸುತ್ತೆ. ಇತ್ತೀಚೆಗೆ ಏನಾದರೂ ಹೊಸ ಸುದ್ದಿ ಸಮಾಚಾರ ಕೇಳಿದ್ದೀಯೇನು?"

"ನಿನ್ನ ಕ್ಯಾನ್‌ವಾಸ್‌ಗಳನ್ನು ಮತ್ತೊಮ್ಮೆ ನೋಡಬೇಕೂಂತ ಅನ್ನಿಸ್ತಿದೆ. ತೋರಿಸ್ತೀ ಅಲ್ಲ? ನಿನ್ನ ಕ್ಯಾನ್‌ವಾಸ್‌ಗಳು ಮಾರಾಟ ಆಗುತ್ತೆ. ಆದರೆ ನನ್ನದು ಯಾಕೆ ಯಾರಿಗೂ ಬೇಡವಾಗುತ್ತೇಂತ ತಿಳಿದುಕೋ ಬೇಕಾಗಿದೆ."

ಸೋಮಾರಿತನದಿಂದ ಏಳುತ್ತ ಹೇಳಿದ– "ಪ್ರತಿಭೆ, ಗೆಳೆಯ ಪ್ರತಿಭೆ. ಇದು ದೈವದತ್ತ ಉಡುಗೊರೆ, ಇದ್ದರೆ ಇರುತ್ತೆ, ಇಲ್ಲಾಂದ್ರೆ ಇಲ್ಲ. ನನಗೆ ಇದೆಲ್ಲ ಹೇಗೆ ಅಂತ ಗೊತ್ತಿಲ್ಲ. ಹುಚ್ಚು ಹುಚ್ಚಾಗಿ ಪೈಂಟ್ ಮಾಡ್ತೀನಿ."

ಒಂದು ಅರ್ಧ ಡಜನ್ ಕ್ಯಾನ್‌ವಾಸ್‌ಗಳನ್ನು ಫ್ರೇಮ್‌ಗಳ ಜೊತೆಗೇ ತಂದ. ಇಬ್ಬರೂ ಹರಟೆ ಹೊಡೆಯುತ್ತಾ, ಅದರ ಬಗ್ಗೆ ಮಾತಾಡುತ್ತಿದ್ದರು. ವಿನ್ಸೆಂಟ್ ಒಂದು ಥರ ಉರಿವ ಕಣ್ಣುಗಳಿಂದ ನೋಡಿದ. "ನನ್ನವೇ ಚೆನ್ನಾಗಿವೆ. ಅವುಗಳಲ್ಲಿ ವಾಸ್ತವತೆ ಇದೆ. ಭಾವನೆ ಇದೆ. ಅವನು ಒಂದು ಬಾಕ್ಸ್ ಪೈಂಟ್‌ಗಳ ಮೂಲಕ ಹೇಳುವುದನ್ನು ನಾನು ಕೇವಲ ಒಂದು ಪೆನ್ಸಿಲ್ ಮೂಲಕ ಹೇಳ್ತೀನಿ.

ಅವನು ಹೇಳೋದು ಎಲ್ಲರಿಗೂ ಗೊತ್ತಾಗುವಂಥಾದ್ದು. ಅವನು ಮುಗಿಸಿದ ಮೇಲೆ ಹೇಳೋಕೆ ಏನೂ ಇರೋದಿಲ್ಲ. ಆದರೂ ಜನ ಯಾಕೆ ಅವನಿಗೆ ಅಷ್ಟೊಂದು ಬೆಲೆ ಕಡ್ತಾರೆ; ಹೊಗಳ್ತಾರೆ? ನನಗ್ಯಾಕೆ ಒಂದು ಚೂರು, ಬ್ರೆಡ್ಡು, ಕಾಫಿಗೂ ಗತಿಯಿಲ್ಲದಂತೆ ಮಾಡುತ್ತಾರೆ?"

"ಡಿ ಬಾಕ್ ಬೇಕಾದರೆ ತನ್ನ ವರ್ಚಸ್ಸು, ಹಣ ತನ್ನಲ್ಲೇ ಇರಿಸಿಕೊಳ್ಳಲಿ. ನನಗೆ ಕಷ್ಟ, ವಾಸ್ತವತೆಗಳೇ ಮುಖ್ಯ."

ವಿನ್ಸೆಂಟ್ ಬಂದಾಗ ಕ್ರಿಸ್ಟೀನ್ ಒದ್ದೆ ಬಟ್ಟೆಯಿಂದ ಸ್ಟುಡಿಯೋದ ಮರದ ನೆಲವನ್ನು ಒರೆಸುತ್ತಿದ್ದಳು. ಕಪ್ಪು ಕರ್ಚೀಫಿನಿಂದ ಕೂದಲನ್ನು ಕಟ್ಟಿಕೊಂಡಿದ್ದಳು. ಹಣೆಯ ಮೇಲೆ ಬೆವರಿನ ಹನಿಯೊಂದು ಹೊಳೆಯುತ್ತಿತ್ತು.

"ಹಣ ಸಿಕ್ತಾ?" ತಲೆಯೆತ್ತಿ ಅವನನ್ನು ವಿಚಾರಿಸಿದಳು.

"ಹೂಂ. ಹತ್ತು ಫ್ರ್ಯಾಂಕ್‌ಗಳು."

"ಶ್ರೀಮಂತ ಸ್ನೇಹಿತರು ಇರೋದು ಅದೃಷ್ಟ ಅಲ್ಲ?"

"ಹೌದು...... ತಗೋ, ನಿನಗೆ ಕೊಡಬೇಕಾಗಿದ್ದ ಆರು ಫ್ರ್ಯಾಂಕ್‌ಗಳು!"

"ಬೇಡ. ಈಗ ಸದ್ಯಕ್ಕೆ ಏನೂ ಕೊಡಬೇಡ. ನಿನ್ನ ತಮ್ಮ ದುಡ್ಡು ಕಳಿಸಿದ ಮೇಲೆ ಬೇಕಾದರೆ ಕೊಡುವಿಯಂತೆ! ನಾಲ್ಕು ಫ್ರ್ಯಾಂಕ್‌ಗಳಲ್ಲಿ ಹೇಗಾಗುತ್ತೆ? ಏನಾಗುತ್ತೆ?"

"ಪರವಾಗಿಲ್ಲ ಸಿಯೇನ್. ನಾನು ಹೇಗೋ ಮಾಡ್ಕೋತೀನಿ. ನಿನಗೆ ಹಣದ ಅವಶ್ಯಕತೆ ಇದೆ."

"ಒಂದು ಕೆಲಸ ಮಾಡೋಣ. ಏನು ಗೊತ್ತಾ? ನಿನ್ನ ತಮ್ಮನಿಂದ ಲೆಟರ್ ಬರೋವರೆಗೂ ನಾನು ಇಲ್ಲಿಯೇ ಇರ್ತೇನೆ. ಹತ್ತು ಫ್ರ್ಯಾಂಕ್ ನಮ್ಮಿಬ್ಬರಿಗೂ ಸೇರಿದ್ದು ಅಂದುಕೊಂಡು ಖರ್ಚು ಮಾಡೋಣ. ನಿನಗಿಂತ ನಾನು ಅಚ್ಚುಕಟ್ಟಾಗಿ, ಹೆಚ್ಚು ದಿನಕ್ಕೆ ಆಗುವ ಹಾಗೆ ಖರ್ಚು ಮಾಡ್ತೀನಿ."

"ನೀನು ಪೋಸ್ ಕೊಡಲು ಏನ್ಮಾಡ್ತೀಯ? ನಿನಗೆ ನಾನು ದುಡ್ಡು ಕೊಡೋಕೆ ಆಗೋದಿಲ್ಲ?"

"ನನಗೆ ಇರೋಕೆ, ಮಲಗೋಕೆ ಜಾಗ ಕೊಡ್ತಿದ್ದೀಯಲ್ಲ ಅಷ್ಟು ಸಾಕಾಗೊಲ್ವೆ? ಇಲ್ಲಿ ಇರೋಕೆ ನನಗಂತೂ ಬಹಳ ಖುಷಿ ಅನ್ಸತ್ತೆ. ಬೆಚ್ಚಗೆ ಇರಬಹುದು. ಈ ಸ್ಟುಡಿಯೋದಲ್ಲಿ, ಅಲ್ಲದೆ ಕೆಲಸಕ್ಕೆ ಹೋಗೋ ಅಗತ್ಯ ಇರೋದಿಲ್ಲ. ಅದರಿಂದ ನಾನು ಖಾಯಿಲೆ ಬೀಳುವ ಸಂಭವ ಕೂಡ ಇರೊಲ್ಲ."

ವಿನ್ಸೆಂಟ್ ಅವಳನ್ನು ತನ್ನ ಬಾಹುಗಳಲ್ಲಿ ತೆಗೆದುಕೊಂಡ. ಮೃದುವಾಗಿ ಅವಳ ಹಣೆ ಮೇಲಿನ ಕೂದಲನ್ನು ನೇವರಿಸಿದ.

"ಸಿಯೆನ್ ನೀನು ಒಂದೊಂದು ಸಲ ಏನೋ ಪವಾಡವನ್ನೇ ಮಾಡಿಬಿಡ್ತೀಯ. ದೇವರು ಇದ್ದಾನೆ ಅನ್ನೋ ನಂಬಿಕೆ ಬರೋ ಹಾಗೆ ಮಾಡ್ತೀಯ."

-೭-

ಒಂದು ವಾರದ ನಂತರ ವಿನ್ಸೆಂಟ್ ಮಾವ್‌ನನ್ನು ಕಾಣಲು ಅವನ ಸ್ಟುಡಿಯೋಗೆ ಹೋದ. ಮಾವ್ ಸ್ಟುಡಿಯೋ ಒಳಗೆ ಬರಲು ಅವಕಾಶ ಕೊಟ್ಟನಾದರೂ ಅವನು ಮಾಡುತ್ತಿದ್ದ ಷೆವೆನಿಂಜೆನ್ ಕ್ಯಾನ್‌ವಾಸ್ ಮೇಲೆ, ವಿನ್ಸೆಂಟ್ ಕಣ್ಣಿಗೆ ಬೀಳದಿರಲೆಂದು ಥಟ್ಟನೆ ಒಂದು ಬಟ್ಟೆ ಮುಚ್ಚಿದ.

"ನಿನಗೆ ಏನು ಬೇಕಾಗಿದೆ ವಿನ್ಸೆಂಟ್?" – ಏನೂ ಅರಿಯದವನಂತೆ ಕೇಳಿದ.

"ನಾನೊಂದಷ್ಟು ವಾಟರ್ ಕಲರ್ಸ್ ತಂದಿದ್ದೇನೆ. ನೀನೊಂದಿಷ್ಟು ಬಿಡುವು ಮಾಡಿಕೊಳ್ಳುವುದಾದರೆ....."

ಮಾವ್ ಪೈಂಟ್ ಬ್ರಷ್‌ಗಳನ್ನು ಕ್ಲೀನ್ ಮಾಡಿಕೊಳ್ಳುತ್ತಿದ್ದ. ಮೂರು ದಿನದಿಂದ ಅವನು ನಿದ್ದೆ ಮಾಡಿರಲೇ ಇಲ್ಲ, ಅಷ್ಟೇ ಅಲ್ಲ, ಮಲಗುವ ಕೋಣೆ ಕಡೆ ಮುಖ ಮಾಡಿರಲೂ ಇಲ್ಲ. ಮಧ್ಯೆ ಮಧ್ಯೆ ಒಂದು ಚೂರು ಪಾರು ನಿದ್ದೆ, ಅಲ್ಲೇ ಸೋಫಾ ಮೇಲೆ ಕೂತು ಮಾಡಿದ್ದೆಷ್ಟೋ, ಅಷ್ಟೆ! ಅದರಿಂದ ಅವನಿಗೆ ನಿದ್ದೆ ಆದ ಹಾಗೆ ಆಗಲಿಲ್ಲ.

"ವಿನ್ಸೆಂಟ್ ನಿನಗೆ ಏನಾದರೂ ತೋರಿಸೋಕೆ ನನಗೆ ಅದೇನೋ ಮೂಡೇ ಇರೊಲ್ಲ. ನಾನಂತೂ ಇತ್ತೀಚೆಗೆ ತುಂಬಾ ಸುಸ್ತಾಗಿದ್ದೇನೆ. ನೀನು ತಪ್ಪು ತಿಳೀದಿದ್ರೆ, ಬೇರೆ ಯಾವಾಗಲಾದರೂ, ಸರಿಯಾದ ಸಮಯಕ್ಕೆ ಕಾಯೋದು ಉತ್ತಮ."

"ಸಾರಿ, ಕಸಿನ್. ನಿನಗೆ ತೊಂದರೆ ಕೊಡಬೇಕು ಅನ್ನೋದು ನನ್ನ ಉದ್ದೇಶ ಅಲ್ಲ. ಬಹುಶಃ ನಾಳೆಯೇನಾದರೂ ಬರಬಹುದೇ?" – ಬಾಗಿಲ ಬಳಿಗೆ ಹೋಗುತ್ತಾ ಹೇಳಿದ.

ಮಾವ್ ಈಸಲ್ ಮೇಲಿನ ಬಟ್ಟೆಯನ್ನು ತೆಗೆಯುತ್ತಿದ್ದನೇ ಹೊರತು, ವಿನ್ಸೆಂಟ್ ಹೇಳಿದ್ದನ್ನು ಕೇಳಿಸಿಕೊಳ್ಳೋಕೂ ಹೋಗಲಿಲ್ಲ.

ಮರುದಿನ ಸಂಜೆ ವಿನ್ಸೆಂಟ್ ಮಾವ್‌ನ ಸ್ಟುಡಿಯೋ ಒಳಗೆ ಹೆಜ್ಜೆಯಿಟ್ಟಾಗ ವೀಸೆನ್‌ಬ್ರೂಕ್ ಅಲ್ಲಿ ಕುಳಿತಿದ್ದ. ಮಾವ್ ಸಾಯೋಷ್ಟು ದಣಿದಿದ್ದ. ವಿನ್ಸೆಂಟ್ ಬಂದಿದ್ದನ್ನು, ತಾನೂ ತನ್ನ ಗೆಳೆಯ ಮನರಂಜನೆಯಾಗಿ ಭಾವಿಸಿದರು.

"ವೀಸೆನ್ ಬ್ರೂಕ್, ನೋಡು ಅವನು ಹೀಗೆ ಕಾಣಿಸಿಕೊಳ್ಳೋದು" ಎಂದದ್ದೇ. ವಿನ್ಸೆಂಟ್ ಚಹರೆ ಇದ್ದ ರೀತಿಯನ್ನು ಅನುಕರಿಸಿ ತೋರಿಸಿದ. ತುಂಬ ಚೆನ್ನಾಗಿ ಅನುಕರಿಸಿದ್ದ. ವೀಸೆನ್ ಬ್ರೂಕ್‌ನ ತೀರಾ ಹತ್ತಿರ ಹೋಗಿ, ಅವನ ಕಡೆ ನೋಡುತ್ತಾ ಅರೆಮುಚ್ಚಿದ ಕಣ್ಣು ಮಾಡಿ, "ಅವನು ಮಾತಾಡೋದು ಹೀಗೆ– ಎಂದು ಒರಟೊರಟಾಗಿ, ಒಂಥರಾ ಒಮ್ಮೊಮ್ಮೆ ಹೆದರಿದವನಂತೆ, ವಿನ್ಸೆಂಟ್ ಮಾತಾಡುವ ರೀತಿಯನ್ನೇ ಅನುಕರಿಸಿ ತೋರಿಸಿದ. ವೀಸೆನ್ ಬ್ರೂಕ್ ಉತ್ಸಾಹದಿಂದ, ಅದ್ಭುತ! ಅದ್ಭುತ, ತುಂಬ ಫರ್‌ಪೆಕ್ಟ್" ಎಂದು ಗಟ್ಟಿಯಾಗಿ ನಗುತ್ತ ಹೇಳಿದ.

"ನಿನ್ನನ್ನು ಜನ ನೋಡೋದು ಹೀಗೆ ವಾನ್‌ಗೋ! ನೀನು ಎಷ್ಟು ಸುಂದರವಾಗಿದ್ದೆ ಗೊತ್ತಾ? ಮಾವ್ ಮತ್ತೊಂದು ಸಲ, ಆ ಗಲ್ಲ ಇರಿಸಿದ್ದ ರೀತಿ ಮತ್ತು ಗಡ್ಡ ಕೆರೆದುಕೊಂಡು ತೋರಿಸು, ನೋಡಿದವರು ಸುಸ್ತಾಗಿ ಬಿಡುತ್ತಾರೆ!"

ವಿನ್ಸೆಂಟ್‌ಗೆ ಆಶ್ಚರ್ಯವಾಯಿತು. ಒಂದು ಮೂಲೆಯಲ್ಲಿ ಕುಳಿತ. ತನ್ನ ಮಾತು ತನಗೇ ಕೇಳಿಸದಷ್ಟು ಮೆಲ್ಲಗೆ – "ನೀವೂ ಕೂಡಾ ಚಳಿ, ಗಾಳಿ, ಮಳೆಯಲ್ಲಿ ದಿಕ್ಕುದೆಶೆಯಿಲ್ಲದೆ, ಹಗಲು, ರಾತ್ರಿ ಹೊಟ್ಟೆ ಹಸಿವಿನಿಂದ ಕಂಗೆಟ್ಟು ಬೋರಿನೇಜ್, ಲಂಡನ್ ಬೀದಿಗಳಲ್ಲಿ ತಲೆ ಮೇಲೆ ಸೂರಿಲ್ಲದೆ, ಕೊರೆವ ಚಳಿಯಲ್ಲಿ ರಾತ್ರಿಗಳನ್ನು ಕಳೆದಿದ್ದರೆ. ನಿಮ್ಮ ಮುಖದಲ್ಲೂ ಇಂಥಾ ವಿಕಾರವಾದ ಗೆರೆಗಳು, ಕರ್ಕಶ ಕಂಠಗಳನ್ನು ಕಾಣುತ್ತಿದ್ದಿರಿ!"

ಒಂದೆರಡು ನಿಮಿಷಗಳ ನಂತರ ವೀಸೆನ್‌ಬ್ರೂಕ್ ಅಲ್ಲಿಂದೆದ್ದು ಹೋದ. ಅವನು ಹೋಗುತ್ತಿದ್ದಂತೆ ಮಾವ್ ಒಂದು ಕುರ್ಚಿಯಲ್ಲಿ ಧೊಪ್ಪನೆ ಕುಕ್ಕರಿಸಿದ. ವಿನ್ಸೆಂಟ್‌ನನ್ನು ಒಂದಿಷ್ಟು ಅನುಕರಿಸಿದ್ದೂ ಕೂಡಾ ಅವನಿಗೆ ದಣಿವನ್ನುಂಟು ಮಾಡಿತ್ತು. ವಿನ್ಸೆಂಟ್ ಮೂಲೆಯಲ್ಲಿ ನೆಟ್ಟಗೆ ನಿಂತೇ ಇದ್ದ; ಕಡೆಗೆ ಮಾವ್ ಅವನನ್ನು ಗಮನಿಸಿದ.

"ಓಹ್ ನೀನು ಇನ್ನೂ ಇಲ್ಲಿಯೇ ಇದ್ದೀಯ?"

ವಿನ್ಸೆಂಟ್, ಮಾವ್ ತನ್ನನ್ನು ಅನುಕರಿಸಿ ತೋರಿಸಿದ್ದ ರೀತಿಯಲ್ಲಿಯೇ ಮುಖಮಾಡಿ, "ಕಸಿನ್, ನಮ್ಮಿಬ್ಬರ ಮಧ್ಯೆ ಅಂಥಾದ್ದು ಏನಾಗಿದೆ? ನಾನು ಏನು ಮಾಡಿದ್ದೀನಿ ಅನ್ನೋದನ್ನಾದರೂ ಹೇಳು. ನನ್ನನ್ನು ಯಾಕೆ ಈ ರೀತಿ ಟ್ರೀಟ್ ಮಾಡ್ತೀ?"

ಮಾವ್ ಆಯಾಸದಿಂದ ಎದ್ದ. ಮುಂಗೂದಲನ್ನು ಹಿಂದಕ್ಕೆ ಸರಿಸಿದ.

"ನೀನು ಮಾಡ್ತಿರೋದು. ನನಗ್ಯಾಕೋ ಸರಿಯಿಲ್ಲ ಅಂತ ಅನ್ಸತ್ತೆ. ಇಷ್ಟು ಹೊತ್ತಿಗೆ ನಿನ್ನ ಕಾಲ ಮೇಲೆ ನೀನು ನಿಂತುಕೊಂಡು ಸಂಪಾದನೆ ಮಾಡಬೇಕಿತ್ತು. ವಾನ್‌ಗೋ ಫ್ಯಾಮಿಲಿ ನಾಚಿಕೊಳ್ಳುವಂತೆ ಮಾಡಬಾರದಾಗಿತ್ತು. ಅವರಿವರ ಬಳಿ ದುಡ್ಡಿಗೆ ಬೇಡೋದು ನಿನ್ನ ಕುಟುಂಬಕ್ಕೆ, ನಿನ್ನ ವಂಶಕ್ಕೇ ತೀರಾ ಅವಮಾನದ ಸಂಗತಿ."

"ಟರ್ಸ್‌ಟೀಗ್ ಏನಾದರೂ ನಿನ್ನ ಹತ್ತಿರ ಬಂದಿದ್ದನೇ?"

"ಇಲ್ಲ."

"ಹಾಗಾದರೆ, ನನಗೆ ಹೇಳಿಕೊಡೋಕೆ ನಿನಗೆ ಇಷ್ಟ ಇಲ್ಲಾಂತಾಯ್ತು."

"ಹೌದು."

"ಬಹಳ ಒಳ್ಳೇದು. ಬಾ ಷೇಕ್ ಹ್ಯಾಂಡ್ ಮಾಡು. ಪರಸ್ಪರ ನಮ್ಮಿಬ್ಬರ ಮನಸ್ಸಲ್ಲಿ ಯಾರೊಬ್ಬರ ಬಗ್ಗೆಯೂ ನಾನಿರಿಸಿಕೊಂಡಿರುವ ಕೃತಜ್ಞತೆ ಮೆಚ್ಚುಗೆಗಳು ಎಂದಿಗೂ ಬದಲಾಗುವುದಿಲ್ಲ."

ಮಾವ್ ಸುಮಾರು ಹೊತ್ತು ಮಾತಾಡಲಿಲ್ಲ. ನಂತರ ಹೇಳಿದ– ವಿನ್ಸೆಂಟ್, ನಾನು ಹೇಳಿದ್ದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ನನಗೆ ತುಂಬ ಆಯಾಸ ಆಗಿದೆ. ಮನಸ್ಸೂ ಸರಿಯಿಲ್ಲ. ನನಗೆ ಸಾಧ್ಯವಾದಷ್ಟೂ ನಿನಗೆ ಸಹಾಯ ಮಾಡ್ತೀನಿ. ಸ್ಕೆಚ್‌ಗಳನ್ನೇನಾದರೂ ತಂದಿದ್ದೀಯ ಹೇಗೆ?"

"ತಂದಿದ್ದೀನಿ. ಆದರೆ ಇದು ಸರಿಯಾದ ಸಮಯ ಅಲ್ವೇನೋ!....."

"ಪರವಾಗಿಲ್ಲ ತೋರಿಸು."

ಅವುಗಳನ್ನು ಸ್ವಲ್ಪ ಅಸಮಾಧಾನದಿಂದಲೇ ನೋಡಿದ. "ಇಲ್ಲ ಇವೆಲ್ಲಾ ಸರಿಯಾಗಿಯೇ ಇಲ್ಲ. ಇದಕ್ಕೆ ಮೊದಲು ಈ ರೀತಿ ಇಷ್ಟು ತಪ್ಪು ತಪ್ಪಾಗಿ ಇದ್ದುದನ್ನು ನೋಡಿಯೇ ಇರಲಿಲ್ಲ."

"ನಾನೊಂದು ಸಲ ಡ್ರಾ ಮಾಡಿದ್ದಾಗ, ನೀನೇ ಹೇಳಿದ್ದೆ, ನಾನೊಬ್ಬ ಪೈಂಟರ್ ಅಂತ."

"ನೀನು ಅದನ್ನು ತಪ್ಪಾಗಿ ಅರ್ಥಮಾಡಿಕೊಂಡಿದ್ದೀಯ. ನಾನು ಹೇಳಿದ್ದನ್ನು ಹೊಗಳಿಕೆ ಅಂತ ಭಾವಿಸಿದ್ದೀ. ನಿಜವಾಗಿಯೂ ಪೈಂಟಿಂಗ್ ಕಲಿಯಬೇಕೆಂದರೆ ಮತ್ತೆ ಮೊದಲಿಂದ ಶುರು ಮಾಡ್ಕೋಬೇಕು. ನೋಡು ಅಲ್ಲಿ ಮೂಲೆಯಲ್ಲಿ ಒಂದಷ್ಟು ಪೈಂಟಿಂಗ್ ಕಲಿಯೋಕೆ ಸಹಾಯ ಆಗಬಹುದಾದ ಸಾಮಾನುಗಳನ್ನು ಇರಿಸಿದ್ದೀನಿ. ಬೇಕಾದರೆ ತಗೋ."

ವಿನ್ಸೆಂಟ್, ಕಾಲೆಳೆದು ಕೊಳ್ಳುತ್ತಾ ಮಾವ್ ಹೇಳಿದ್ದ ಜಾಗಕ್ಕೆ ಹೋದ. ಅಲ್ಲೊಂದು ಪ್ಲಾಸ್ಟರ್ ಪಾದ ಇತ್ತು. ಅವನಿಗೆ ಅಲ್ಲಿಂದ ಒಂದು ಹೆಜ್ಜೆ ಕೂಡಾ ಚಲಿಸಲು ಆಗಲಿಲ್ಲ. ತನ್ನ ಜೇಬಲ್ಲಿ ಇದ್ದ ಡ್ರಾಯಿಂಗ್ ಪೇಪರ್ ತೆಗೆದು ಡ್ರಾ ಮಾಡಲು ಪ್ರಯತ್ನಿಸಿದ. ಆದರೆ ಅವನಿಂದ ಒಂದು ಗೆರೆ ಎಳೆಯಲೂ ಸಾಧ್ಯವಾಗಲಿಲ್ಲ. ಹಿಂತಿರುಗಿ ನೋಡಿದ. ಮಾವ್ ತನ್ನ ಈಸಲ್ ಮುಂದೆ ನಿಂತಿದ್ದ.

"ಕಸಿನ್ ಮಾವ್ ಹೇಗೆ ನಡೀತಿದೆ ಕೆಲಸ?" ಪುಟ್ಟದಾದ ದಿವಾನ್ ಮೇಲೆ ಧಂಗನೆ ಬಂದು ಕುಳಿತು, ಕೆಂಪಗಾಗಿದ್ದ ಕಣ್ಣು ಮುಚ್ಚಿಕೊಂಡು ಹೇಳಿದ– "ನಾನು ಮಾಡಿದ್ದ ಎಲ್ಲದಕ್ಕಿಂತ ಇದು ಅತ್ಯುತ್ತಮವಾಗಿದೇಂತ ಟರ್ಸ್‌ಟೀಗ್ ಹೇಳಿದ.

ಕೆಲ ನಿಮಿಷಗಳ ನಂತರ ವಿನ್ಸೆಂಟ್ ಹೇಳಿದ– ಅಂದ್ಮೇಲೆ ಬಂದಿದ್ದು ಟರ್ಸ್‌ಟೀಗ್!"

ಆದರೆ ಮಾವ್ ಆಗಲೇ ಗೊರಕೆ ಹೊಡೆಯುತ್ತಿದ್ದ ವಿನ್ಸೆಂಟ್‌ನ ಮಾತು ಕಿವಿಗೆ ಬಿದ್ದಿರಲಿಲ್ಲ.

ಸ್ವಲ್ಪ ಸಮಯ ಕಳೆದ ಮೇಲೆ ನೋವು ಕಡಿಮೆಯಾಗಿತ್ತು. ಸರಸರನೆ ಪ್ಲಾಸ್ಟರ್ ಪಾದದ ೭ ಡ್ರಾಯಿಂಗ್ಸ್‌ಗಳನ್ನು ಮಾಡಿದ್ದ. ದಿಢೀರನೆ ಮಾವ್, ತಾನು ನಿದ್ದೆಯೇ ಮಾಡಿಲ್ಲವೆಂಬಂತೆ ಛಂಗನೆ ಬೆಕ್ಕಿನಂತೆ ಎದ್ದು ವಿನ್ಸೆಂಟ್ ಕುಳಿತಿದ್ದ ಕಡೆ ಬಂದು "ಎಲ್ಲಿ ನೋಡೋಣ, ಏನು ಮಾಡಿದ್ದೀಯಾಂತ?" ವಿನ್ಸೆಂಟ್ ಮಾಡಿದ್ದ ಸ್ಕೆಚ್‌ಗಳನ್ನು ನೋಡಿದ. ಇಲ್ಲ!..... ಇಲ್ಲ..... ಒಂದೂ ಸರಿಯಿಲ್ಲ!"

ಎಲ್ಲ ಸ್ಕೆಚ್‌ಗಳನ್ನೂ ಚೂರುಚೂರಾಗಿ ಹರಿದೆಸೆದ. "ಅದೇ ಒರಟುತನ, ಬಾಲಿಶತನಗಳೇ ಕಾಣಿಸುತ್ತಿವೆ. ಪ್ಲಾಸ್ಟರ್ ಅಚ್ಚನ್ನು ನೋಡಿಯಾದರೂ ಸರಿಯಾಗಿ ಮಾಡಬಾರದೇ? ಆ ಗೆರೆಗಳನ್ನು ಸರಿಯಾಗಿ ಎಳೆದಿಲ್ಲ. ಒಂದು ಮಾದರಿ ಮುಂದಿರಿಸಿಕೊಂಡು ಅದನ್ನೇ ಸರಿಯಾಗಿ ನಕಲು ಮಾಡಲು ನಿನ್ನ ಕೈಯಲ್ಲಿ ಆಗುವುದಿಲ್ಲವೇನು? ಜೀವನದಲ್ಲಿ ಒಂದು ಬಾರಿಯಾದರೂ ಸರಿಯಾಗಿ ನಕಲು ಮಾಡಲು ನಿನ್ನಿಂದ ಸಾಧ್ಯವಾಗುವುದೇನು?"

"ಕಸಿನ್ ಮಾವ್ ನೀನೊಬ್ಬ ಅಕಾಡೆಮಿ ಮೇಷ್ಟ್ರ ಹಾಗೇನೇ ವರ್ತಿಸ್ತಿದ್ದೀಯ?"

"ನೀನೂ ಅಕಾಡೆಮಿಗಳಿಗೆ ಹೋಗಿದ್ದರೆ, ಇಷ್ಟು ಹೊತ್ತಿಗೆ ಡ್ರಾಯಿಂಗ್ ಮಾಡೋದನ್ನು ಕಲಿತಿರ್ತಿದ್ದೆ."

ಆ ಪಾದಾನ ಮತ್ತೊಮ್ಮೆ ಡ್ರಾ ಮಾಡು. ನೋಡು ಪರ್‌ಫೆಕ್ಟಾಗಿ ಮಾಡೋಕೆ ಆಗುತ್ತಾಂತ!"

ಮಾವ್ ಅಡಿಗೆ ಮನೆ ಕಡೆ ಹೊರಟ. ಊಟ ಮುಗಿಸಿ ಬಂದು ದೀಪದ ಬೆಳಕಿನಲ್ಲಿ ಕ್ಯಾನ್‌ವಾಸ್ ಮಾಡಲು ನಿಂತ. ರಾತ್ರಿ ಮುಗೀತಾ ಬಂದಿತ್ತು. ವಿನ್ಸೆಂಟ್ ಒಂದಾದ ಮೇಲೊಂದು 'ಪಾದ'ದ ಡ್ರಾಯಿಂಗ್ ಮಾಡುತ್ತಲೇ ಇದ್ದ. ಒಂದೊಂದು ಸಲ ಮಾಡಿದಾಗಲೂ ಅವನಿಗೆ ಆ ಪಾದದ ಮೇಲೆ ಸಿಟ್ಟು, ಅಸಮಾಧಾನ ಹೆಚ್ಚುತ್ತಿತ್ತು; ವಾಕರಿಕೆ ಬರುವಂತಾಗಿತ್ತು. ಬೆಳಗಾಗುವ ಹೊತ್ತಿಗೆ ಅವನ ಮುಂದೆ 'ಪಾದ'ದ ಎಷ್ಟೋ ಪ್ರತಿಗಳು ರಾಶಿ ಬಿದ್ದಿದ್ದವು. ಕೈಕಾಲು ಸುಂದು ಹಿಡಿದಿತ್ತು. ಮನಸ್ಸಿಗೆ ತೀರಾ ಬೇಸರ ಎನಿಸಿತ್ತು. ಮತ್ತೊಮ್ಮೆ ಮಾವ್ ಅದನ್ನು ಬಂದು ನೋಡಿದ. ಎಲ್ಲ ಪ್ರತಿಗಳನ್ನು ಮುದ್ದೆ ಮಾಡಿ ಎಸೆದ.

"ಏನೇನೂ ಚೆನ್ನಾಗಿಲ್ಲ. ಪ್ರಾಥಮಿಕ ನಿಯಮಗಳಲ್ಲಿ ಒಂದನ್ನೂ ಪಾಲಿಸುತ್ತಿಲ್ಲ. ಸರಿ ಈ ಪಾದ ಮನೆಗೆ ತಗೊಂಡು ಹೋಗಿ ಚೆನ್ನಾಗಿ ಅಭ್ಯಾಸ ಮಾಡಿ ಡ್ರಾ ಮಾಡು. ನಿನ್ನ ಕೈಯಲ್ಲಿ ಅದು ಸರಿಯಾಗಿ ಬರೋವರೆಗೆ ಮತ್ತೆ ಇಲ್ಲಿಗೆ ಬರಬೇಡ."

"ನಾನು ಬಂದ್ರೆ ನೋಡು!..... ನೆಗೆದು ಬಿದ್ದು ಹೋಗಲಿ ಈ ಪಾದ" ಅಂದದ್ದೇ ಅದನ್ನೆತ್ತಿ, ಸಾವಿರ ಚೂರುಗಳಾಗುವಷ್ಟು ರಭಸದಿಂದ ಕಲ್ಲಿದ್ದಲ ಡಬ್ಬದಲ್ಲಿ ಎಸೆದ. ಮತ್ತೊಮ್ಮೆ ಆ ಪ್ಲಾಸ್ಟರ್ ಬಗ್ಗೆ ಮಾತಾಡಬೇಡ. ಅದನ್ನು ಕಂಡರೇನೇ ನನಗೊಂದು

ಥರಾ ಹೇಸಿಗೆ! ಜೀವಂತ ವ್ಯಕ್ತಿ ಪ್ರಾಣಿಗಳ ಕೈಕಾಲುಗಳನ್ನು ಡ್ರಾ ಮಾಡೋಕೆ ಸಿಗುವವರೆಗೂ ಈ ಅಚ್ಚುಗಳು ನನಗೆ ಬೇಕಿಲ್ಲ."

"ನೀನು ಹಾಗೆ ಭಾವಿಸುವುದಾದರೆ ಸರಿ"– ತಣ್ಣಗೆ ನುಡಿದ ಮಾವ್.

"ಕಸಿನ್ ಮಾವ್ ನನಗೆ ನಿರ್ಜೀವ, ಶುಷ್ಕ ವಸ್ತುಗಳ ಮೂಲಕ ಕಲಿಯಬೇಕಾದ್ದಿಲ್ಲ. ಯಾರಿಂದಲೂ ಏನೂ ಹೇಳಿಸಿಕೊಳ್ಳಬೇಕಾದ್ದೂ ಇಲ್ಲ. ನನ್ನ ಮನಸ್ಸಿಗೆ, ಮನೋಧರ್ಮಕ್ಕೆ ತಕ್ಕಂತೆ, ನನಗೆ ಬೇಕಾದ್ದನ್ನು ಮಾಡ್ತೇನೆ. ವಸ್ತುಗಳು ನನ್ನ ದೃಷ್ಟಿಗೆ ಹೇಗೆ ಕಾಣುತ್ತವೋ ಹಾಗೆ ಮಾತ್ರವೇ ನಾನು ಡ್ರಾ ಮಾಡ್ತೇನೆ."

"ಸರಿ ಹಾಗಿದ್ದ ಮೇಲೆ, ನಿನ್ನಿಂದ ನನಗೆ ಆಗಬೇಕಾದ್ದು ಇನ್ನೇನೂ ಇಲ್ಲ" ಎಂದು ಡಾಕ್ಟರು, ಶವದೊಂದಿಗೆ ಮಾತನಾಡುವಂತೆ ಹೇಳಿದ.

ವಿನ್ಸೆಂಟ್ ಮಧ್ಯಾಹ್ನ ಎದ್ದಾಗ, ಸ್ಟುಡಿಯೋದಲ್ಲಿ ಕ್ರಿಸ್ಟೀನ್ ತನ್ನ ಹಿರಿಯ ಮಗ ಹೆರ್‌ಮನ್ ಜೊತೆ ಇದ್ದಳು. ಬಿಳಿಚಿಕೊಂಡಿದ್ದ ಮುಖದ ಹತ್ತುವರ್ಷದ ಹುಡುಗನ ಕಣ್ಣುಗಳು ಹಸಿರು ಬಣ್ಣದ್ದಾಗಿದ್ದವು. ಅವನದು ಪುಟ್ಟದಾದ, ಚೂಪಾದ ಗಲ್ಲ, ಅಷ್ಟಾಗಿ ಎದ್ದು ಕಾಣುವಂತಿರಲಿಲ್ಲ. ಅವನನ್ನು ಸುಮ್ಮನಿರಿಸಲು, ಕ್ರಿಸ್ಟೀನ್ ಅವನ ಕೈಗೆ ಪೇಪರ್ ಮತ್ತು ಪೆನ್ಸಿಲ್ ಕೊಟ್ಟಿದ್ದಳು. ವಿನ್ಸೆಂಟ್ ಅವನಿಗೆ ಹಸುವಿನ ಚಿತ್ರ ಬರೆಯುವುದನ್ನು ತಿಳಿಸಿಕೊಟ್ಟ, ಇಬ್ಬರೂ ಒಳ್ಳೆಯ ಸ್ನೇಹಿತರಾದರು. ಕ್ರಿಸ್ಟೀನ್, ಬ್ರೆಡ್ಡು, ಚೀಸ್‌ಗಳನ್ನು ತಂದಿರಿಸಿದಳು. ಮೂವರೂ ಒಟ್ಟಿಗೆ ಕುಳಿತು ಊಟ ಮಾಡಿದರು.

ವಿನ್ಸೆಂಟ್‌ಗೆ 'ಕೇ' ಮತ್ತು ಪುಟ್ಟ ಜ್ಯಾನ್ ನೆನಪಿಗೆ ಬಂದು, ಗಂಟಲು ಹಿಡಿದಂತಾಯಿತು.

"ವಿನ್ಸೆಂಟ್ ಇವತ್ತು ಯಾಕೋ ನನಗೆ ಹುಷಾರಿಲ್ಲ. ನನ್ನ ಬದಲಿಗೆ, ಹೆರ್‌ಮನ್ ನಿನಗೆ ಪೋಸ್ ಕೊಡ್ತಾನೆ."

"ಏನಾಗಿದೆ ಸಿಯೆನ್?"

"ನನಗೆ ಗೊತ್ತಿಲ್ಲ. ಒಳಗೆಲ್ಲ ಕಿವುಚಿದಂತಾಗಿದೆ."

"ನಿನ್ನ ಹಿಂದಿನ ಹೆರಿಗೆಗಳಲ್ಲಿ ಹೀಗೇ ಏನಾದರೂ ಆಗಿತ್ತೇನು?"

"ಸ್ವಲ್ಪ ಅಸ್ವಸ್ಥಳಾಗ್ತಿದ್ದೆ. ಆದರೆ ಈ ಥರ, ಇಷ್ಟು ಹಿಂಸೆ ಹಿಂದೆಂದೂ ಆದದ್ದಿಲ್ಲ."

"ಡಾಕ್ಟರ್ ಹತ್ತಿರ ಹೋಗೋದಿಲ್ವೇನು?"

"ಫ್ರೀವಾರ್ಡಲ್ಲಿ ಡಾಕ್ಟರನ್ನು ನೋಡೋಕೆ ಸಾಧ್ಯ ಇಲ್ಲ. ಸುಮ್ಮನೆ ಏನೋ ಒಂದಿಷ್ಟು ಔಷಧಿ ಕೊಡ್ತಾರೆ. ಅದರಿಂದೇನೂ ಉಪಯೋಗ ಇಲ್ಲ."

"ಲೇಡನ್‌ನಲ್ಲಿರೋ ಸ್ಟೇಟ್ ಆಸ್ಪತ್ರೆಗೆ ನೀನು ಹೋಗಲೇ ಬೇಕಾಗುತ್ತೆ."

"ನನಗೂ ಹಾಗೇ ಅನ್ಸತ್ತೆ."

"ಟ್ರೈನ್‌ನಲ್ಲಿ ಸ್ವಲ್ಪ ದೂರ ಮಾತ್ರ, ನಾನು ನಿನ್ನನ್ನು ನಾಳೆ ಅಲ್ಲಿಗೆ ಕರ್‍ಕೊಂಡು ಹೋಗ್ತೀನಿ. ಹಾಲೆಂಡ್‌ನವರೆಲ್ಲ ಅಲ್ಲಿಗೇ ಹೋಗೋದು."

"ಹೌದು. ಅದು ತುಂಬಾ ಚೆನ್ನಾಗಿದೆ ಅಂತ ಹೇಳ್ತಾರೆ." ಇಡೀ ದಿನ ಕ್ರಿಸ್ಟೀನ್ ಹಾಸಿಗೆ ಬಿಟ್ಟು ಏಳಲೇ ಇಲ್ಲ. ವಿನ್ಸೆಂಟ್ ಹೆರ್‌ಮನ್‌ನ್ನು ಕೂರಿಸಿ ಡ್ರಾಯಿಂಗ್ ಮಾಡಿದ. ಊಟದ ಸಮಯದಲ್ಲಿ ಹೆರ್‌ಮನ್‌ನನ್ನು ಕ್ರಿಸ್ಟೀನ್‌ಳ ತಾಯಿ ಬಳಿ ಬಿಟ್ಟುಬಂದ. ಮರುದಿವಸ ಬೆಳಿಗ್ಗೆಯೇ ಇಬ್ಬರೂ ಲೇಡನ್ ಕಡೆಗೆ ಟ್ರೈನ್ ಹತ್ತಿ ಹೊರಟರು.

"ತುಂಬಾನೇ ಆರೋಗ್ಯ ಕೆಟ್ಟಿದೆ." ಕ್ರಿಸ್ಟೀನ್‌ಳನ್ನು ಚೆನ್ನಾಗಿ ಪರೀಕ್ಷಿಸಿದ ಮೇಲೆ ಡಾಕ್ಟರ್ ತಿಳಿಸಿದ. ಅವಳನ್ನು ಹಲವು ಪ್ರಶ್ನೆ ಕೇಳಿದ. ಮಗು ಸರಿಯಾದ ಪೊಸಿಷನ್‌ನಲ್ಲಿ ಇಲ್ಲ ಎಂದು ತಿಳಿಸಿದ.

"ಇದಕ್ಕೆ ಏನಾದರೂ ಮಾಡೋಕೆ ಸಾಧ್ಯಾನಾ ಡಾಕ್ಟರೇ?"

"ಹೂಂ! ಆಪರೇಷನ್ ಮಾಡಬಹುದು."

"ಅದರಿಂದ ತುಂಬ ತೊಂದರೆ ಆಗುತ್ತಾ?"

"ಈಗೇನೂ ಆಗೊಲ್ಲ. ಫೋರ್‌ಸೆಪ್ಸ್‌ನಿಂದ ಮಗೂನ ತಿರುಗಿಸಬೇಕಾಗುತ್ತೆ. ಆದರೆ ಇದಕ್ಕೆ ಸ್ವಲ್ಪ ಖರ್ಚಾಗುತ್ತೆ. ಆಪರೇಷನ್‌ಗೇನೂ ಖರ್ಚಾಗೊಲ್ಲ; ಹಾಸ್ಪಿಟಲ್ ಚಾರ್ಜಸ್ ಅಂತ ಸ್ವಲ್ಪ ಹಣ ಖರ್ಚಾಗುತ್ತೆ ಅಷ್ಟೆ!" ಕ್ರಿಸ್ಟೀನ್ ಕಡೆ ತಿರುಗಿ, ಡಾಕ್ಟರ್,

"ಏನಾದರೂ ಸ್ವಲ್ಪ ದುಡ್ಡು ಉಳಿತಾಯ ಮಾಡಿದ್ದೀಯ ಹೇಗೆ?" ಎಂದು ವಿಚಾರಿಸಿದ.

"ಒಂದು ಫ್ರ್ಯಾಂಕೂ ಉಳಿದಿಲ್ಲ."

ಒಂದು ನಿಟ್ಟುಸಿರಿನ ನಂತರ ಡಾಕ್ಟರ್,

"ಇದೇ ಬಂದಿರೋದು ಸಮಸ್ಯೆ" ಎಂದು ತನ್ನಲ್ಲಿಯೇ ಹೇಳಿಕೊಂಡ.

"ಎಷ್ಟಾಗಬಹುದು ಡಾಕ್ಟರ್?" ವಿನ್ಸೆಂಟ್ ವಿಚಾರಿಸಿದ.

"ಒಂದು ಐವತ್ತು ಫ್ರ್ಯಾಂಕ್‌ಗಳಿಗಿಂತ ಹೆಚ್ಚಾಗಲಾರದು."

"ಇವಳು ಆಪರೇಷನ್ ಮಾಡಿಸಿಕೊಳ್ಳದಿದ್ದರೆ?"

"ಬದುಕುಳಿಯುವ ಸಾಧ್ಯತೆಯೇ ಇರಲಾರದು."

ವಿನ್ಸೆಂಟ್ ಒಂದೆರಡು ನಿಮಿಷ ಆಲೋಚನೆ ಮಾಡಿದ. ಅಂಕಲ್ ಕಾರ್ ಕೇಳಿದ್ದ ವಾಟರ್‌ಕಲರ್ಸ್ (ಜಲವರ್ಣ ಚಿತ್ರಗಳು)ಗಳಲ್ಲಿ ಸರಿಸುಮಾರು ಹನ್ನೆರಡೂ ಸಿದ್ಧವಾಗಿದ್ದವು. ಅದರಿಂದ ಮೂವತ್ತು ಫ್ರ್ಯಾಂಕುಗಳು ಬರುತ್ತವೆ. ಇನ್ನೊಂದು ಇಪ್ಪತ್ತು ಫ್ರ್ಯಾಂಕ್‌ಗಳನ್ನು ಥಿಯೋ ಕೊಡುವ ಏಪ್ರಿಲ್ ತಿಂಗಳ ಅಲೋಯೆನ್ಸ್‌ನಲ್ಲಿ ತೆಗೆದರೆ ಆಯ್ತು.

"ನಾನು ದುಡ್ಡಿಗೆ ವ್ಯವಸ್ಥೆ ಮಾಡ್ತೀನಿ ಡಾಕ್ಟರೇ."

"ಗುಡ್. ಶನಿವಾರ ಬೆಳಿಗ್ಗೆ ಅವಳನ್ನು ಕರೆದುಕೊಂಡು ಬಾ. ನಾನೇ ಖುದ್ದಾಗಿ ಆಪರೇಷನ್ ಮಾಡ್ತೀನಿ. ಇನ್ನೊಂದು ವಿಷಯ ನಿಮಗೆ ಹೇಳಲೇಬೇಕು. ನಿಮ್ಮಿಬ್ಬರ ಸಂಬಂಧ ಏನೂಂತ ನನಗೆ ಗೊತ್ತೂ ಇಲ್ಲ; ಗೊತ್ತು ಮಾಡಿಕೊಳ್ಳುವ ಇಚ್ಛೆಯೂ ನನಗಿಲ್ಲ. ಆದರೆ ಒಂದು ವಿಷಯದಲ್ಲಿ ಬಹಳ ಎಚ್ಚರಿಕೆ ತಗೋಬೇಕು. ಮತ್ತೆ

ಏನಾದರೂ ಅವಳು ಬೀದಿ ಬದುಕಿಗೆ ಬಿದ್ದರೆ, ಆರು ತಿಂಗಳ ಒಳಗಾಗಿ ಸಾಯೋದಂತೂ ಖಂಡಿತ.

"ಇಲ್ಲ ಡಾಕ್ಟರ್, ಮೊದಲಿನ ಜೀವನಕ್ಕೆ ಹಿಂತಿರುಗಲು ಬಿಡೋದಿಲ್ಲ. ನಾನು ಪ್ರಾಮಿಸ್ ಮಾಡಿ ಹೇಳ್ತಿದ್ದೀನಿ ನಿಮಗೆ.

"ತುಂಬಾ ಒಳ್ಳೇದು. ಹಾಗಾದರೆ ಶನಿವಾರ ಮತ್ತೆ ನೋಡೋಣ."

ಕೆಲ ದಿನಗಳ ನಂತರ ಟರ್ಸ್‌ಟೀಗ್ ಮತ್ತೆ ಆಗಮಿಸಿದ.

"ಓಹ್ ಇನ್ನೂ ಅದನ್ನೇ ಮಾಡ್ತಿದ್ದೀಯ" – ಹೇಳಿದ.

"ಹೌದು. ಕೆಲಸ ಮಾಡ್ತಾ ಇದ್ದೀನಿ."

"ನೀನು ಪೋಸ್ಟ್‌ನಲ್ಲಿ ಕಳಿಸಿಕೊಟ್ಟ ಹತ್ತು ಫ್ರ್ಯಾಂಕ್‌ಗಳು ನನಗೆ ಮುಟ್ಟಿದವು. ನೀನೇ ಖುದ್ದಾಗಿ ಬಂದು ಹಣ ವಾಪಸ್ ಮಾಡಿ, ಒಂದು ಥ್ಯಾಂಕ್ಸ್ ಹೇಳಬಹುದಾಗಿತ್ತು."

"ತುಂಬ ದೂರ ನಡೀಬೇಕಾಗಿತ್ತು."

"ನಿನಗೆ ದುಡ್ಡು ಬೇಕಾದಾಗ ದೂರ ಅಂತ ಅನಿಸಲಿಲ್ಲ, ಅಲ್ವಾ?"

ವಿನ್ಸೆಂಟ್ ಉತ್ತರ ಕೊಡಲಿಲ್ಲ.

"ನಿನ್ನ ಈ ನಡವಳಿಕೇನೇ ನಿನ್ನ ಬಗ್ಗೆ ನನಗೆ ಬೇಸರ ಬರುವ ಹಾಗೆ ಮಾಡೋದು. ಅದಕ್ಕೇ ನಿನ್ನಲ್ಲಿ ನನಗೆ ನಂಬಿಕೇನೇ ಇಲ್ಲ. ನಿನ್ನ ಪೈಂಟಿಂಗ್ಸೂ ನನಗೆ ಬೇಕಾಗಿಲ್ಲ."

ವಿನ್ಸೆಂಟ್ ಮೇಜಿನ ತುದೀಲಿ ಕುಳಿತು, ಮತ್ತೊಂದು ಕುಸ್ತಿಗೆ ರೆಡಿಯಾಗುತ್ತಿದ್ದ, "ನನಗೆ ಅನ್ಸತ್ತೆ, ನೀನು ಪೈಂಟಿಂಗ್ಸ್ ಕೊಂಡುಕೊಳ್ಳೋಕೂ, ವೈಯಕ್ತಿಕ ಜಗಳಕ್ಕೂ ಯಾವುದೇ ಸಂಬಂಧ ಇಲ್ಲಾಂತ!"..... ಆದರೆ ನನ್ನ ಕೆಲಸ ನೋಡಿಕೊಂಡು ಕೊಳ್ಳಬೇಕಾಗುತ್ತೆ. ವೈಯಕ್ತಿಕ ದ್ವೇಷ ನಿನ್ನ ಅಭಿಪ್ರಾಯದ, ತೀರ್ಮಾನದ ಮೇಲೆ ಪ್ರಭಾವ ಬೀರೋದು ಸರಿಯಲ್ಲ."

"ನೀ ಹೇಳೋದು ಖಂಡಿತ ಸರಿ ಅಂತ ನಾನೂ ಒಪ್ಕೊಳ್ತೇನೆ. ನೀನು ತುಂಬ ಒಳ್ಳೆಯ, ಮೋಹಕ ಕೃತಿಗಳನ್ನು ಮಾಡಿ ತೋರಿಸು. ಅವುಗಳನ್ನು ಕೊಳ್ಳೋಕೆ ನನಗೂ ಸಂತೋಷ ಆಗುತ್ತೆ."

"ಮಿಜ್ನಹೀರ್ ಟರ್ಸ್‌ಟೀಗ್, ಯಾವ ಕೃತಿಯಲ್ಲಿ ಕಲಾವಿದನ ವ್ಯಕ್ತಿತ್ವ, ಅವನ ಭಾವನೆಗಳು, ಅವನ ಅಂತರಾತ್ಮವೇ ಸೇರಿಕೊಂಡಿದೆಯೋ, ಅದು ಮಾರಾಟ ಆಗೊಲ್ಲ ಅನ್ನೋದಾಗಲೀ, ಆಕರ್ಷಕವಾಗಿರೋದಿಲ್ಲ ಅನ್ನೋದಾಗಲೀ ಸಾಧ್ಯವೇ ಇಲ್ಲ. ನೋಡಿದ ಕೂಡಲೇ ನೋಡಿದವರ ಮನಸೆಳೆಯುವಂತೆ ನನ್ನ ಚಿತ್ರಗಳು ಇರಬೇಕೂಂತ ನಾನು ಬಯಸುವುದೇ ಇಲ್ಲ."

ಟರ್ಸ್‌ಟೀಗ್, ಓವರ್‌ಕೋಟಿನ ಗುಂಡಿಗಳನ್ನೂ ಬಿಚ್ಚಲಿಲ್ಲ; ಗ್ಲೋವ್ಸ್‌ಗಳನ್ನೂ ತೆಗೆಯಲಿಲ್ಲ ತನ್ನೆರಡೂ ಕೈಗಳನ್ನು ವಾಕಿಂಗ್ ಸ್ಟಿಕ್‌ನ ಮೇಲೆ ಊರಿದ.

"ವಿನ್ಸೆಂಟ್, ನನಗೆ ಒಂದೊಂದು ಸಲ, ನಿನಗೆ ನಿನ್ನ ಕಲಾಕೃತಿಗಳನ್ನು ಮಾರೋದೇ ಇಷ್ಟ ಇಲ್ಲವೇನೋ ಎಂಬ ಅನುಮಾನ ಬರುತ್ತೆ. ಬೇರೆಯವರನ್ನು ಅವಲಂಬಿಸಿ ಬದುಕೋದೇ ಬದುಕೆಂದು ತಿಳಿದುಕೊಂಡಿರೋ ಹಾಗಿದೆ.

"ನನ್ನ ಡ್ರಾಯಿಂಗ್ ಮಾರಾಟ ಆಗೋದು ನನಗೂ ಸಂತೋಷವೇ. ಆದರೆ ನಿಜವಾದ ಕಲಾವಿದನಾದ ವೀಸೆನ್ ಬ್ರೂಕ್ ಹೇಳಿದ ಹಾಗೆ, ಯಾವುದು ಮಾರಾಟವಾಗದೆ ಹೋಗುತ್ತೋ ಅದರಲ್ಲಿಯೇ ನಿಜವಾದ ಕಲೆ ಇರುತ್ತೆ ಅನ್ನೋ ಕಾರಣಕ್ಕೆ, ಇನ್ನೂ ಹೆಚ್ಚು ಸಂತೋಷವಾಗುತ್ತೆ. ಅದು ನೈಜತೆಗೆ ತೀರಾ ಹತ್ತಿರವಿರುತ್ತೆ. ಅದನ್ನೇ, ಅಂಥಾದ್ದನ್ನೇ ನಾನು ಮಾಡೋಕೆ ಇಷ್ಟಪಡ್ತೀನಿ. ದುಡ್ಡು ಬದುಕಲು ಬೇಕು. ಅದಕ್ಕೆ ಜೀವನದಲ್ಲಿ ತುಂಬ ಮಹತ್ವವಿದೆ. ಆದರೂ ನಾನು ತುಂಬಾ ಗಂಭೀರವಾದ ಕಲಾಕೃತಿ ಮಾಡುವುದನ್ನೇ ಅತ್ಯಂತ ಮಹತ್ವದೆಂದು ಭಾವಿಸಿದ್ದೀನಿ.

"ಅಂತಹ ಭಾವನೆಗಳೆಲ್ಲ, ಡಿ ಬಾಕ್‌ನಂಥವರಿಗೆ ಸರಿ. ಆದರೆ ನಿನ್ನ ವಿಚಾರದಲ್ಲಿ ಅಂಥಾ ಭಾವನೆಗಳು ನಂಬಿಕೆಗಳು ಸಾಧ್ಯವಿಲ್ಲ."

"ಮೂಲಭೂತವಾದ ಕಲೆಯ ನಿಯಮಗಳಿಗೂ ಹಣಕ್ಕೂ ಯಾವುದೇ ಸಂಬಂಧ ಇಲ್ಲ."

ಟರ್ಸ್‌ಟೀಗ್ ಸ್ಟಿಕ್ಕನ್ನು ಅಡ್ಡಲಾಗಿ ಮೊಣಕಾಲುಗಳ ಮೇಲೆ ಇರಿಸಿ, ಕುರ್ಚಿಯಲ್ಲಿ ಹಿಂದಕ್ಕೆ ಒರಗಿದ.

"ನಿನ್ನ ತಂದೆತಾಯಿಗಳಿಂದ ಕಾಗದ ಬಂದಿತ್ತು. ನನ್ನ ಕೈಯಲ್ಲಿ ಸಾಧ್ಯವಾದಷ್ಟು ನಿನಗೆ ಸಹಾಯ ಮಾಡಲು ತಿಳಿಸಿದ್ದಾರೆ. ನಿನ್ನ ಪೈಂಟಿಂಗ್ಸ್‌ನ್ನು ನನ್ನ ಮನಸ್ಸಿಗೆ ವಿರುದ್ಧವಾಗಿ ಕೊಂಡುಕೊಳ್ಳೋಕೆ ಆಗದೆ ಹೋದರೂ, ಸ್ವಲ್ಪ ತಿಳಿವಳಿಕೆನಾದರೂ ಕೊಡ್ತೇನೆ. ಈ ಥರ ಚಿಂದಿ ಬಟ್ಟೆ ಉಟ್ಕೊಂಡು ಊರೆಲ್ಲ ಓಡಾಡಬೇಡ. ಒಳ್ಳೊಳ್ಳೆ ಬಟ್ಟೆ ಹಾಕ್ಕೋ, ಹೇಗ್‌ನಲ್ಲಿರುವ ದೊಡ್ಡ ದೊಡ್ಡವರ ಸ್ನೇಹ, ಸಹವಾಸದಲ್ಲಿರೋಕೆ ಪ್ರಯತ್ನಿಸು, ಕೂಲಿಕಾರರು, ತಿನ್ನೋಕೆ ಇಲ್ಲದಿರೋ ಭಿಕ್ಷುಕರ ಜೊತೆ ಓಡಾಡಬೇಡ. ಅದ್ಯಾಕೋ ಏನೋ, ನಿನಗೆ ಯಾವಾಗಲೂ, ಯಾರ್‍ಯಾರೋ ಕೆಲಸಕ್ಕೆ ಬಾರದ ಜನರ ಜೊತೆ, ಹೋಗಬಾರದ ಸ್ಥಳಗಳಲ್ಲೆಲ್ಲಾ ಹೋಗಿ ಅಡ್ಡಾಡುವುದೇ ಇಷ್ಟಾಂತ ಕಾಣುತ್ತೆ. ಈ ರೀತಿ ನಿನ್ನ ನಡವಳಿಕೆ ಇದ್ದರೆ, ನೀನು ಯಶಸ್ಸನ್ನು ಸಂಪಾದಿಸುವುದಾದರೂ ಹೇಗೆ? ಮೇಲೆ ಬರೋಕೆ ಸಾಧ್ಯ ಹೇಗೆ?"

ವಿನ್ಸೆಂಟ್ ಕುಳಿತಿದ್ದ ಟೇಬಲ್ ಮೇಲಿಂದ ಎದ್ದ. ಟರ್ಸ್‌ಟೀಗ್ ಬಳಿ ನಿಂತ. ಕಳೆದುಕೊಂಡ ಪ್ರೀತಿ, ವಿಶ್ವಾಸವನ್ನು ಯಾರಿಂದಲಾದರೂ ಮರಳಿ ಗಳಿಸಿಕೊಳ್ಳೋಕೆ, ಇದೇ ಸರಿಯಾದ ಅವಕಾಶ ಎಂದುಕೊಂಡು, ತನ್ನೊಳಗೇ ಯೋಚಿಸಿ, ಮೃದುವಾಗಿ, ವಿನಯವಾಗಿ ದನಿಯನ್ನು ಅಣಿಗೊಳಿಸಿಕೊಂಡು, "ಮಿಜ್ನಹೀರ್. ನನಗೆ ಸಹಾಯ ಮಾಡುವುದಕ್ಕೆ ಪ್ರಯತ್ನಪಡ್ತಿರೋದು, ನಿಮ್ಮ ಒಳ್ಳೆತನಕ್ಕೆ ಸಾಕ್ಷಿ. ನಾನೂ ಕೂಡಾ ಪ್ರಾಮಾಣಿಕವಾಗಿ, ನಿಮಗೆ ಉತ್ತರ ಕೊಡಬೇಕಂತ ಇಲ್ಲದಿರುವಾಗ ಮತ್ತು ಸಂಪಾದನೆಗೆ ಯಾವುದೇ ದಾರಿ ಇಲ್ಲದಿರುವಾಗ, ಹೇಗೆ ತಾನೇ ಒಳ್ಳೊಳ್ಳೆ ಬಟ್ಟೆ ಹಾಕಿಕೊಳ್ಳಲಿ?"

"ಗಲ್ಲಿ ಗಲ್ಲಿಗಳಲ್ಲಿ, ಮಾರುಕಟ್ಟೆಗಳಲ್ಲಿ, ಬಾರುಗಳಲ್ಲಿ, ವೈಟಿಂಗ್ ರೂಮುಗಳಲ್ಲಿ ಇರೋದರಲ್ಲಿ ಖುಷಿ ಸಿಗೋದು ಕಲಾವಿದರಿಗೆ ಮಾತ್ರ. ಅದೂ ಅಲ್ಲದೆ ಅವರಿಗೆ ಡ್ರಾ ಮಾಡೋಕೆ ನಿಜವಾಗಲೂ ಏನಾದರೂ ಸಿಗುತ್ತೇಂದ್ರೆ ಇಂಥ ಕಡೆಗಳಲ್ಲಿ ಮಾತ್ರ! ಆಕರ್ಷಕ ಮಹಿಳೆಯರ ವಿಲಾಸ ವೈಭವಗಳ ಪ್ರದರ್ಶನ ಆಗುವಂಥ ಟೀ ಪಾರ್ಟಿಗಳಲ್ಲಿ ಅಂಥದ್ದೇನೂ ಸಿಗೋದಿಲ್ಲ. ಕಲಾಕೃತಿಗಳಿಗೆ ಬೇಕಾದ ವಸ್ತುಗಳ ಹುಡುಕಾಟ, ಕೂಲಿಕಾರರ, ಕಾರ್ಮಿಕರ ಜೊತೆಯ ವಾಸ, ನಿಂತಲ್ಲಿಯೇ ಕಂಡಲ್ಲಿಯೇ ನಿಸರ್ಗವನ್ನು ಚಿತ್ರಿಸುವುದು– ಇದರಿಂದ ಮೂಡುವುದೆಲ್ಲ ನಾಜೂಕಾಗಿರುವುದಿಲ್ಲ; ಕೆಲವೊಮ್ಮೆ ಅಸಭ್ಯ, ಅಶ್ಲೀಲವೆಂತಲೂ ಕಾಣಿಸಬಹುದು. ಸೇಲ್ಸ್‌ಮನ್‌ನ ಡ್ರೆಸ್ಸಾಗಲೀ, ನಡವಳಿಕೆಯಾಗಲಿ ನನಗೆ ಬೇಕಾಗಿಲ್ಲ. ನನಗೇ ಅಲ್ಲ, ನಾಜೂಕಿನ ಹೆಣ್ಣುಗಳ ಜೊತೆಯಾಗಲೀ, ಶ್ರೀಮಂತರ ಜೊತೆಯಾಗಲೀ ಮಾತಾಡಬೇಕಾದ ಅಗತ್ಯ ಇಲ್ಲದಿರುವ, ಅವರಿಗೆ ಬಹಳ ಬೆಲೆಯುಳ್ಳ ಕಲಾಕೃತಿಗಳನ್ನು ಮಾರಿ ಹಣಗಳಿಸಬೇಕೆನ್ನುವ ಆಸೆ ಇಲ್ಲದಿರುವ ಯಾರೊಬ್ಬರಿಗೂ ಬೇಕಾಗುವುದಿಲ್ಲ.

"ನನ್ನ ಜಾಗ ಇರೋದೆ, ಗೀಸ್ಟ್‌ನ ಶ್ರಮಿಕರ ಜೊತೆ. ಹಿಂದೆಯೂ ಇವರೊಂದಿಗೆ ಇದ್ದೆ; ಈಗಲೂ ಇರುತ್ತೇನೆ ನನ್ನ ವಿಕಾರವಾದ ಮುಖ, ಕೊಳಕಾದ ಬಟ್ಟೆ ಆ ಪರಿಸರಕ್ಕೆ ಸರಿಯಾಗಿಯೇ ಹೊಂದುತ್ತೆ. ಜೊತೆಗೆ ಅಂಥ ಕಡೆ, ಕೆಲಸ ಮಾಡೋಕೂ ನನಗೆ ಸಂತೋಷ ಎನಿಸುತ್ತೆ. ನಾನೇನಾದರೂ ಒಳ್ಳೊಳ್ಳೆ ಬಟ್ಟೆ ಹಾಕಿಕೊಂಡಿದ್ದರೆ, ನಾನು ಸ್ಕೆಚ್ ಮಾಡಲು ನನಗೆ ಯಾರೂ ಮಾಡೆಲ್ ಆಗಿ ಬರಲ್ಲ. ಅವರು ಯಾರೂ ನನ್ನ ಹತ್ತಿರ ಸುಳಿಯೊಲ್ಲ. ನನ್ನನ್ನು ಕಂಡೇ ಹೆದರಿ ದೂರ ಸರಿಯುತ್ತಾರೆ. ನನ್ನ ಡ್ರಾಯಿಂಗ್‌ಗಳ ಉದ್ದೇಶ, ನೋಡಬೇಕಾದ, ಆದರೆ ನೋಡದ ವಸ್ತುಗಳನ್ನು ತೋರಿಸಿಕೊಡೋದು. ನನ್ನ ಕೆಲಸ ಆಗಬೇಕಾದರೆ, ಅಂದುಕೊಂಡದ್ದನ್ನು ಸಾಧಿಸಬೇಕಾದರೆ ಸಾಮಾಜಿಕ, ಪ್ರತಿಷ್ಠೆಯ ನಡವಳಿಕೆಯನ್ನು ಬದಿಗಿರಿಸುವುದಾಗಿದೆ. ಇದರಲ್ಲಿಯೇ ನ್ಯಾಯ ಇದೆ ಅಂತ ಅನಿಸುವುದಿಲ್ಲವೇ? ನಾನು ಡ್ರಾ ಮಾಡುವ ಜನರ ಜೊತೆ ಇದ್ದರೆ, ನನ್ನ ಅಂತಸ್ತಿಗೆ ಕಡಿಮೆಯಾಗುವುದೇನು? ಬಡವರು, ಕೂಲಿಕಾರರು ಮೊದಲಾದವರ ಮನೆಗಳಿಗೆ ಹೋದ ಮಾತ್ರಕ್ಕೆ ನಾನೇನಾದ್ರೂ ಕಳೆದುಕೊಳ್ತೇನೆಯೇ? ನಾನು ಅವರಲ್ಲಿಗೆ ಹೋಗೋದು. ಅವರನ್ನು ನನ್ನ ಸ್ಟುಡಿಯೋಗೆ ಬರಮಾಡಿಕೊಳ್ಳೋದು ನನ್ನ ವೃತ್ತಿಗೆ ಅನಿವಾರ್ಯವಾಗಿದೆ. ಆದರೆ ಅದೇ ನಿಮ್ಮ ದೃಷ್ಟೀಲಿ ನಾನು ಹಾಳಾಗೋಕೆ ಕಾರಣ."

"ನಿಜವಾಗಿಯೂ ನೀನು ತಲೆ ಹಿಡುಕನಾಗಿದ್ದೀಯ ವಿನ್ಸೆಂಟ್. ದೊಡ್ಡವರು ಹೇಳುವುದನ್ನು ನೀನು ಕೇಳೋಕೇ ಹೋಗೊಲ್ಲ. ಹಿಂದೆಯೂ ಏನೂ ಮಾಡಲಿಲ್ಲ; ಮುಂದೆಯೂ ಏನೂ ಮಾಡೊಲ್ಲ. ಮತ್ತೆ ಅದೇ ಕತೆ ಮುಂದುವರೆಯುತ್ತೆ."

"ಮಿಜ್ನಹೀರ್, ನನ್ನದು ಚಿತ್ರಕಾರನ, ಕಲಾವಿದನ ಕೈ. ಏನೇ ಆದರೂ ನೀವು ಎಷ್ಟೇ ಉಪದೇಶ ನೀಡಿದರೂ, ನನ್ನ ಕೈಗಳು 'ಡ್ರಾ' ಮಾಡುವುದನ್ನು ನಿಲ್ಲಿಸುವುದಿಲ್ಲ! ನಿಮ್ಮನ್ನು ಒಂದು ಮಾತು ಕೇಳ್ತೀನಿ..... ನಾನು ಡ್ರಾ ಮಾಡೋಕೆ ಶುರು

ಮಾಡಿದಾಗಿನಿಂದ, ಎಂದಾದರೂ ಹಿಂಜರಿದಿದ್ದೇನೆಯೇ? ಹಿಂದು ಮುಂದು ನೋಡಿದ್ದೇನೆಯೇ? ಎಂದಾದರೂ ಮಾಡುವುದನ್ನು ನಿಲ್ಲಿಸಿದ್ದೇನೆಯೇ? ಮುಂದುವರೆಸಿಕೊಂಡೇ ಹೋಗಿದ್ದೇನೆ. ಅಲ್ಲದೆ ಈ ಹೋರಾಟ ನಡೆಸುತ್ತಲೇ ಸಾಕಷ್ಟು ಗಟ್ಟಿಗೊಂಡಿದ್ದೇನೆ."

"ಇರಬಹುದು. ಆದರೆ ನೀನು ಹೋರಾಟ ಮುಂದುವರೆಸಿರುವುದು ಸೋಲಿನ ಕಡೆಗೆ."

ಅವನು ಎದ್ದ; ಗ್ಲೋವ್ಸ್‌ನ್ನು ಏರಿಸಿಕೊಂಡ. ಹ್ಯಾಟನ್ನು ತಲೆ ಮೇಲೆ ಇರಿಸಿಕೊಂಡ. "ನೋಡ್ತೀನಿ..... ನಾನು ಮತ್ತು ಮಾವ್ ಇಬ್ಬರೂ ಸೇರಿ, ಥಿಯೋ ಇನ್ನು ಮುಂದೆ ನಿನಗೆ ಹಣ ಕಳಿಸದ ಹಾಗೆ ನೋಡ್ಕೋಳ್ತೀವಿ. ಹೀಗೆ ಮಾಡಿದರೇನೆ ನೀನು ದಾರಿಗೆ ಬರೋದು."

ವಿನ್ಸೆಂಟ್‌ನ ಎದೆ ದಢ್ ಎಂದಿತು. ಥಿಯೋ ಕಡೆಯಿಂದ ತನ್ನ ಮೇಲೆ ಆಕ್ರಮಣ ನಡೆದರೆ, ತನ್ನ ಕತೆ ಮುಗಿದ ಹಾಗೇ!

"ಅರೆ....... ಇದನ್ನೆಲ್ಲ ಯಾಕೆ ಮಾಡೋಕೆ ಹೊರಟಿದ್ದೀರಿ?"

"ನಾನು ನಿಮಗೆ ಏನು ಅನ್ಯಾಯ ಮಾಡಿದ್ದೀನಿ, ಈ ರೀತಿ ನನ್ನನ್ನು ಹಾಳು ಮಾಡೋಕೆ ಹೊರಟಿದ್ದೀರಿ? ನಿಮ್ಮ ಅಭಿಪ್ರಾಯ ಒಪ್ಪಲಿಲ್ಲ ಅನ್ನೋ ಕಾರಣಕ್ಕೆ, ಪ್ರಾಮಾಣಿಕ ವ್ಯಕ್ತಿಯೊಬ್ಬನನ್ನು ಕೊಲೆಮಾಡೋಕೆ ಹೊರಟಿರೋದು ಯಾವ ನ್ಯಾಯ? ದಯವಿಟ್ಟು ನನ್ನನ್ನು ನನ್ನ ದಾರೀಲಿ ಹೋಗೋಕೆ ಬಿಡಿ. ಇನ್ನೆಂದೂ ನಿಮಗೆ ತೊಂದರೆ ಕೊಡೋಕೆ ಬರೋದಿಲ್ಲ ಅಂತ ಭರವಸೆ ಕೊಡ್ತೀನಿ. ಈ ಪ್ರಪಂಚದಲ್ಲಿ ನನಗಿರುವವನು ನನ್ನ ಥಿಯೋ ಮಾತ್ರ, ಅವನನ್ನೂ ಯಾಕೆ ನನ್ನಿಂದ ಕಿತ್ತುಕೊಳ್ತೀರಿ?"

"ಇದೆಲ್ಲ ನಿನ್ನ ಒಳ್ಳೇದಕ್ಕೇ ವಿನ್ಸೆಂಟ್"- ಎಂದು ಹೇಳುತ್ತಾ ಹೊರಗೆ ಹೊರಟ.

ಥಟ್ಟನೆ ಪರ್ಸನ್ನು ಹಿಡಿದುಕೊಂಡು ಪ್ಲಾಸ್ಟರ್ ಪಾದವನ್ನು ಕೊಳ್ಳಲು ಪಟ್ಟಣದ ಕಡೆಗೆ ಒಂದೇ ಓಟ ಕಿತ್ತ. ಅಲ್ಲಿಂದ ಮಾವ್ ಮನೆ ತಲುಪಿದ. ಬಾಗಿಲು ತಟ್ಟಿದಾಗ ಜೆಟ್ ಹೊರಗೆ ಬಂದು ಬಾಗಿಲು ತೆಗೆದಳು. ವಿನ್ಸೆಂಟ್‌ನನ್ನು ನೋಡಿ ಅಚ್ಚರಿಗೊಂಡಳು.

"ಆ್ಯಂಟನ್ ಮನೇಲಿಲ್ಲ. ಅವನಿಗಂತೂ ನಿನ್ನ ಮೇಲೆ ತುಂಬಾ ಸಿಟ್ಟಿದೆ. ಮತ್ತೆಂದೂ ನಿನ್ನನ್ನು ನೋಡೋದಿಲ್ಲ ಅಂತ ನಿರ್ಧಾರ ಮಾಡಿಬಿಟ್ಟಿದ್ದಾನೆ. ಓಹ್ ವಿನ್ಸೆಂಟ್, ಇದರಿಂದ ನನಗೆ ಎಷ್ಟು ಬೇಸರ ಆಗಿದೆ ಗೊತ್ತಾ?

ವಿನ್ಸೆಂಟ್ ಪ್ಲಾಸ್ಟರ್ ಪಾದವನ್ನು ಅವಳ ಕೈಯಲ್ಲಿ ಇರಿಸಿ, "ಇನ್ನು ಆ್ಯಂಟನ್‌ಗೆ ಕೊಟ್ಟು ಬಿಡು. ಹಾಗೆಯೇ ನಾನು ಕ್ಷಮೆ ಕೇಳಿದೆನೆಂದು ತಿಳಿಸು."

ಅವನು ತಿರುಗಿ ಹೊರಡಲಿದ್ದ, ಅಷ್ಟರಲ್ಲಿ ಜೆಟ್ ಅವನ ಭುಜದ ಮೇಲೆ ಕೈ ಇರಿಸಿದಳು.

"ಷೆವೆನಿಂಜೆನ್ ಕ್ಯಾನವಾಸ್ ಪೂರ್ತಿಯಾಗಿದೆ, ಒಂದ್ಸಲ ಅದನ್ನು ನೋಡ್ತೀಯೇನು?"

ಮಾವ್ ಮಾಡಿದ ಪೈಂಟಿಂಗ್ ಮುಂದೆ ಮೌನವಾಗಿ ನಿಂತ. ಬೀಚ್‌ನಲ್ಲಿ ಮೀನಿನ ದೋಣಿಯನ್ನು ಕಷ್ಟದಿಂದ ಎಳೆಯುತ್ತಿರುವ ಕುದುರೆಗಳ ದೃಶ್ಯ ನೋಡಿದ. ಅವನಿಗೆ ಅದರಲ್ಲಿನ ತಾತ್ವಿಕತೆ ಗ್ರಹಿಕೆಗೆ ಬಂತು. ನೋಡುತ್ತಿದ್ದಂತೆ ಕುದುರೆಗಳ ದೈನ್ಯ ಸ್ಥಿತಿ ಮನಸ್ಸಿಗೆ ಹೊಳೆಯಿತು. ಕುದುರೆಗಳು ಮೂಳೆ ಬಿಟ್ಟು ಕೊಂಡಿದ್ದವು. ಹೊಟ್ಟೆ ತುಂಬ ಊಟವೇ ಇರಲಿಲ್ಲ. ಕ್ರೂರವಾಗಿ ಹಿಂಸಿಸಲಾಗಿತ್ತು. ವಯಸ್ಸೂ ಆಗಿತ್ತು. ಕಪ್ಪು, ಬಿಳಿ, ಕಂದು ಬಣ್ಣದವುಗಳಾಗಿದ್ದವು. ನಿರ್ಭಾವುಕತೆಯಿಂದ, ಸಹನೆಯಿಂದ, ಅಸಹಾಯಕತೆಯಿಂದ, ಎಷ್ಟೇ ಕಷ್ಟವಾದರೂ ಮಾಡಲೇ ಬೇಕಾದ ಅನಿವಾರ್ಯತೆಯ ಭಾವದಿಂದ, ಹೊರೆ ಹೊರಲು, ಹೊತ್ತು ಸಾಗಿಸಲು ಸಿದ್ಧವಾಗಿ ನಿಂತಿದ್ದವು. ಎಳೆದೂ ಎಳೆದೂ ದಣಿದಿದ್ದವು. ಏದುಸಿರು ಬಿಡುತ್ತಿದ್ದವು. ಮೈಯೆಲ್ಲ ಬೆವರಿನಿಂದ ತೊಯ್ದಿತ್ತು. ಎಷ್ಟೋ ವರ್ಷಗಳಿಂದ ಹೀಗೆ ಮಾಡುತ್ತಲೇ ಬದುಕುತ್ತಲೇ ಬಂದಿದ್ದವು. ಬಂದದ್ದೆಲ್ಲವನ್ನೂ ವಿಚಲಿತವಾಗದೆ ಎದುರುಗೊಳ್ಳಲು ಸಿದ್ಧವಾಗಿದ್ದವು. ನಾಳೆ ಕಸಾಯಿ ಖಾನೆಗೆ ಹೋಗಬೇಕಾದರೂ ಇದೇ ಮನಸ್ಥಿತಿಯಲ್ಲಿ ಹೊರಡಲು ತಮ್ಮನ್ನು ಅಣಿಗೊಳಿಸಿಕೊಂಡಿದ್ದವು.

ಅಲ್ಲಿಂದ ಹೊರಟ. ಈ ಚಿತ್ರ ಅವನಿಗೆ ಕಟುವಾಸ್ತವದ ಪಾಠವನ್ನು, ಒಂದು ಕಾಣ್ಕೆಯನ್ನು ನೀಡಿತ್ತು. ಎಂಥ ವಿಚಿತ್ರ ವ್ಯಂಗ್ಯವೆಂದರೆ, ತನ್ನನ್ನು ನಿಕೃಷ್ಟವಾಗಿ ಕಂಡು ದೂರ ಇಡಲು ಪ್ರಯತ್ನಿಸಿದ ವ್ಯಕ್ತಿಯಿಂದ ಬರೆದ ಚಿತ್ರವೇ ಅವನಿಗೊಂದು ತತ್ವ ದರ್ಶನವನ್ನು, ಬದುಕಿಗೆ ಸಂಬಂಧಿಸಿದಂತೆ ಕಾಣಿಸಿತ್ತು. ಜೀವನವನ್ನು ನಿರ್ಲಿಪ್ತತೆಯೊಂದಿಗೆ ಸ್ವೀಕರಿಸುವುದನ್ನು ಕಲಿಸಿತ್ತು.

–೮–

ಕ್ರಿಸ್ಟೀನ್‌ಳ ಆಪರೇಷನ್ ಯಶಸ್ವಿಯಾಗಿತ್ತು. ಆದರೆ ಅದಕ್ಕೆ ಹಣ ಖರ್ಚಾಗಿತ್ತು. ಅಂಕಲ್ ಕಾರ್‌ಗೆ, ಆತ ಹೇಳಿದ್ದ ಹನ್ನೆರಡು ಡ್ರಾಯಿಂಗ್ಸ್‌ಗಳನ್ನು ಕಳಿಸಿಕೊಟ್ಟು, ಬರಬೇಕಾಗಿದ್ದ ಮೂವತ್ತು ಫ್ರ್ಯಾಂಕ್‌ಗಳಿಗಾಗಿ ಕಾಯುತ್ತಿದ್ದ. ತುಂಬಾ ದಿನ ಕಾದ. ಆ ಮೇಲೆ ನಿಧಾನವಾಗಿ ಯಾವಾಗಲೋ, ಆ ಹಣ ಬಂತು. ನಾಳೆ ಹೆರಿಗೆ ಮಾಡಬೇಕಾಗಿದ್ದುದು ಇದೇ ಡಾಕ್ಟರು ಆಗಿದ್ದುದರಿಂದ ಆತನನ್ನು ಚೆನ್ನಾಗಿ, ಒಳ್ಳೇ ರೀತಿಯಿಂದ ನೋಡಿಕೊಳ್ಳಬೇಕಿತ್ತು. ತನ್ನಲ್ಲಿ ಕಟ್ಟಕಡೆಯದಾಗಿ ಉಳಿದಿದ್ದ ಇಪ್ಪತ್ತು ಫ್ರ್ಯಾಂಕ್‌ಗಳನ್ನು ಮೊದಲೇ ಕಳಿಸಿಬಿಟ್ಟಿದ್ದ. ಮತ್ತೆ ಹಳೇ ಕತೇನೆ ಪುನರಾವರ್ತನೆಯಾಯಿತು. ಮೊದಮೊದಲಿಗೆ ಕಾಫಿ ಬ್ರೆಡ್ಡು, ಆಮೇಲೆ ಬರೀ ಬ್ರೆಡ್ಡು, ನಂತರ ಬರೀ ನೀರು – ಅಷ್ಟೇ! ಆಹಾರ ಇಲ್ಲದೆ ಇದ್ದಾಗ ಮಾಮೂಲಿನಂತೆ ನಿಶ್ಶಕ್ತಿ, ಜ್ವರ. ಕ್ರಿಸ್ಟೀನ್ ತನ್ನ ಮನೆಯಲ್ಲಿ ಊಟ ಮಾಡುತ್ತಿದ್ದಳು. ಆದರೆ ವಿನ್ಸೆಂಟ್‌ಗೂ ತಂದುಕೊಡುವಷ್ಟು ಆಹಾರ ಅವಳಲ್ಲಿರಲಿಲ್ಲ. ಅವನಲ್ಲಿದ್ದುದೆಲ್ಲ ತೀರಾ ಮುಗಿದು ಹೋದಮೇಲೆ, ಹೇಗೋ ಹಾಸಿಗೆ ಬಿಟ್ಟು ಎದ್ದು, ಕಷ್ಟ ಪಟ್ಟುಕೊಂಡು, ಕೊರೆಯುವ ಮಂಜಲ್ಲಿ ವೀಸೆನ್ ಬ್ರೂಕ್‌ನ ಸ್ಟುಡಿಯೋ ತಲುಪಿದ.

ವೀಸೆನ್ ಬ್ರೂರ್ಕ್‌ಗೆ ಬೇಕಾದಷ್ಟು ಹಣ ಇತ್ತಾದರೂ ಅವನು ಸರಳ ಜೀವನವನ್ನೇ ಇಷ್ಟಪಟ್ಟಿದ್ದ. ಅವನ ಸ್ಟುಡಿಯೋ ನಾಲ್ಕನೆ ಮಹಡಿಯಲ್ಲಿತ್ತು. ಉತ್ತರದಿಕ್ಕಿನಲ್ಲಿ ದೊಡ್ಡದಾದ ಬೆಳಕಿಂಡಿಯೊಂದಿತ್ತು. ಅವನು ಕೆಲಸ ಮಾಡುವ ಜಾಗದಲ್ಲಿ, ಏಕಾಗ್ರತೆಗೆ ಭಂಗ ಬರಿಸುವ ಯಾವ ವಸ್ತುವೂ ಇರಲಿಲ್ಲ. ಪುಸ್ತಕಗಳಾಗಲೀ, ಪತ್ರಿಕೆಗಳಾಗಲೀ, ಸೋಫಾ, ಕುರ್ಚಿಗಳಾಗಲೀ, ಗೋಡೆ ಮೇಲೆ ಸ್ಕೆಚ್‌ಗಳಾಗಲೀ, ಹೊರಗಡೆ ನೋಡಲು ಕಿಟಕಿಗಳಾಗಲೀ ಇರಲಿಲ್ಲ. ಅಲ್ಲಿದ್ದದ್ದೆಲ್ಲ ಅವನಿಗೆ ಅಗತ್ಯವಾದ ವಸ್ತುಗಳು ಮಾತ್ರ. ಯಾರಾದರೂ ಬಂದರೆ ಕುಳಿತುಕೊಳ್ಳಲು ಪ್ರತ್ಯೇಕವಾಗಿ ಒಂದು ಸ್ಟೂಲೂ ಇರಲಿಲ್ಲ. ಇದರಿಂದಾಗಿ ಜನ ಇಲ್ಲಿಗೆ ಬರುತ್ತಲೇ ಇರಲಿಲ್ಲ.

"ಓಹ್ ನೀನಾ?" ಕೈಲಿ ಹಿಡಿದಿದ್ದ ಬ್ರಷ್ಷನ್ನೂ ಕೆಳಗಿರಿಸದೆ ಉದ್ಗರಿಸಿದ. ತಾನು ಮಾತ್ರ ಬೇರೆಯವರ ಸ್ಟುಡಿಯೋಗಳಿಗೆ ನುಗ್ಗಿ ಅವರ ಕೆಲಸಕ್ಕೆ ಅಡ್ಡಿ ಮಾಡುತ್ತಿದ್ದನಾದರೂ, ತಾನು ಮಾತ್ರ ಯಾರಾದರೂ ಬಂದರೆ, ಬೋನಿನಲ್ಲಿ ಬಂದಿಯಾದ ಸಿಂಹ, ಯಾರಾದರೂ ಹೊರಗಿನಿಂದ ತೊಂದರೆ ಕೊಟ್ಟರೆ ಹೇಗೆ ಚಡಪಡಿಸುವುದೋ ಹಾಗೆ ಚಡಪಡಿಸುತ್ತಿದ್ದ.

ವಿನ್ಸೆಂಟ್ ತಾನು ಬಂದಿರುವ ಉದ್ದೇಶವನ್ನು ವಿವರಿಸಿದ. ವೀಸೆನ್‌ಬ್ರೂರ್ಕ್ "ಓಹ್ ಸಾರಿ ಇಲ್ಲಯ್ಯ ಆಗೋದಿಲ್ಲ. ನೀನು ಸರಿಯಾದವನ ಹತ್ತಿರ ಬಂದಿಲ್ಲ. ಒಂದು ಸೆಂಟೀಮ್ ಕೊಡೋದೂ ನನ್ನಿಂದ ಸಾಧ್ಯವಿಲ್ಲ."

"ನನಗೆ ಸಾಲವಾಗಿಯಾದರೂ ಕೊಡಲಾರೆಯಾ?"

"ಖಂಡಿತ ಕೊಡಬಲ್ಲೆ. ನನ್ನ ಪೈಂಟಿಂಗ್ಸ್ ಮಾರಾಟವಾಗೋದಿಲ್ಲ ಅನ್ನೋ ಹೆದರಿಕೆಯೇ ಇಲ್ಲ. ಯಾಕೆಂದರೆ ನಾನು ನಿನ್ನ ಹಾಗೆ ಅಪ್ರಬುದ್ಧ, ಬಾಲಿಶ ಕಲಾವಿದನಲ್ಲ. ನನ್ನ ಹತ್ತಿರ ಸಾಕಷ್ಟು ಹಣ ಇದೆ. ಮೂರು ತಲೆಮಾರಿಗೂ ಸಾಕಾಗುಷ್ಟು! ಅದೆಲ್ಲ ಬ್ಯಾಂಕಿನಲ್ಲಿದೆ."

"ಹಾಗಾದರೆ ಯಾಕೆ ಒಂದಿಪ್ಪತ್ತೈದು ಫ್ರ್ಯಾಂಕ್ ಕೊಡಬಾರದು! ನನಗೆ ತೀರಾ.... ತೀರಾ ಅಗತ್ಯ ಇದೆ. ಮನೇಲಿ ಹಳಸಿದ ಬ್ರೆಡ್ಡಿನ ಚೂರು ಕೂಡಾ ಇಲ್ಲ."

ವೀಸೆನ್ ಬ್ರೂರ್ಕ್ ಖುಷಿಯಿಂದ ಕೈಗಳನ್ನು ಉಜ್ಜುತ್ತ, ಹಾಗೇ ಆಗಬೇಕು! ನಿನಗೆ ತುಂಬಾ ಚೆನ್ನಾಗಿರುತ್ತೆ. ಇಷ್ಟಾದರೂ ನೀನು ಪೈಂಟರ್ ಆಗಿಯೇ ಉಳೀತಿ."

ವಿನ್ಸೆಂಟ್ ಖಾಲಿಯಾಗಿದ್ದ ಗೋಡೆಗೆ ಒರಗಿದ. ನಿಲ್ಲುವುದಕ್ಕೂ ಅವನಲ್ಲಿ ತ್ರಾಣವಿರಲಿಲ್ಲ.

"ಹಸಿದಿದ್ದರೆ ಚೆನ್ನಾಗಿರುತ್ತೆ ಅನ್ನೋದ್ರಲ್ಲಿ ಏನಿದೆ?"

"ಪ್ರಪಂಚದಲ್ಲಿ ಅದು ನಿನಗೆ ತುಂಬ ಒಳ್ಳೇದು. ನೀನು ನೋವು ಅನುಭವಿಸುತ್ತೀ."

"ನಾನು ನೋವು ಅನುಭವಿಸುವುದರಲ್ಲಿ ನಿನಗ್ಯಾಕೆ ಅಷ್ಟು ಆಸಕ್ತಿ?"

ವೀಸೆನ್ ಬ್ರೂರ್ಕ್ ಇದ್ದ ಒಂದೇ ಒಂದು ಸ್ಟೂಲಿನ ಮೇಲೆ ಕಾಲ ಮೇಲೆ ಕಾಲು ಹಾಕಿ ಕುಳಿತ. ಕೆಂಪು ಬಣ್ಣದಲ್ಲಿ ಅದ್ದಿದ್ದ ಬ್ರಷನ್ನು ವಿನ್ಸೆಂಟ್‌ನ ಕಡೆ ಗುರಿ ಮಾಡಿ

"ಯಾಕೇಂದ್ರೆ, ನೋವಿನಿಂದ ನೀನೊಬ್ಬ ನಿಜವಾದ ಕಲಾವಿದ ಆಗಿ ಹೊಮ್ಮುತ್ತೀ. ನಿನ್ನಲ್ಲಿ ನೋವು ಹೆಚ್ಚಿದಷ್ಟೂ ನೀನು ಹೆಮ್ಮೆ ಪಡಬೇಕು. ಇಂಥ ನೋವಿನ ನಡುವಿನಿಂದಲೇ ಮಹತ್ವದ ಕಲಾಕೃತಿಗಳು ಹುಟ್ಟುವುದು. ತುಂಬಿದ ಹೊಟ್ಟೆಗಿಂತ ಹಸಿದ ಹೊಟ್ಟೆ, ಖಾಲಿ ಹೊಟ್ಟೆ ಒಳ್ಳೇದು; ಸಂತೋಷಕ್ಕಿಂತ ಮುರಿದ ಮನಸ್ಸು ಒಳ್ಳೇದು – ವಿನ್ಸೆಂಟ್ ಇದನ್ನು ನೆನಪಿನಲ್ಲಿರಿಸಿಕೋ!"

"ಇಂಥ ಮಾತುಗಳೆಲ್ಲ ನಿಷ್ಪ್ರಯೋಜಕ ವೀಸೆನ್ ಬ್ರೂಕ್. ಅದೆಲ್ಲ ನಿನಗೂ ಗೊತ್ತಿದೆ."

"ನೋವು, ಸಂಕಟ, ದುಃಖಗಳ ಅನುಭವ ಇಲ್ಲದವನಿಗೆ ಪೈಂಟಿಂಗ್ ಮಾಡುವ ಅವಶ್ಯಕತೆಯೇ ಇರುವುದಿಲ್ಲ, ವಾನ್‌ಗೋ. ಸಂತೋಷ, ಸುಖ ಎಂಥವರಿಗೆ ಗೊತ್ತಾ? ಹಸುಗಳಿಗೆ, ವ್ಯಾಪಾರಸ್ಥರಿಗೆ. ಕಲಾವಿದರು ಬದುಕುವುದು ನೋವಿನಿಂದ. ನೀನು ಹಸಿದು ಕಂಗಾಲಾಗಿದ್ದರೆ, ನಿರಾಸೆ ಹೊಂದಿದವನಾಗಿದ್ದರೆ, ಅದು ನಿನ್ನ ಅದೃಷ್ಟ ಅಂತ ತಿಳಿದುಕೋ, ದೇವರು ನಿನ್ನ ಕಡೆಗಿದ್ದಾನೇಂತ ಭಾವಿಸು!"

"ಬಡತನ ಸಂಪೂರ್ಣವಾಗಿ ನಾಶಮಾಡುತ್ತೆ."

"ಯಾರನ್ನು? ದುರ್ಬಲರಾಗಿದ್ದವರನ್ನು ಮಾತ್ರ! ಧೈರ್ಯವಂತರನಲ್ಲ. ಬಡತನದಿಂದ ನೀನು ನಾಶವಾಗ್ತಿದ್ದೀಯ ಅನ್ನುವುದಾದರೆ, ನೀನೊಬ್ಬ ದುರ್ಬಲ ಮನಸ್ಸಿನವನು. ದುರ್ಬಲ ಮನಸ್ಸಿರಿಸಿಕೊಂಡಿರುವುದರಿಂದ, ಹಾಳಾಗುವುದನ್ನೇ ಒಪ್ಪಿಕೋ."

"ಅಂದ್ರೆ? ನೀನು ಎಳ್ಳಿನಷ್ಟು ಸಹಾಯವನ್ನೂ ಮಾಡುವುದಿಲ್ಲಾಂತಾಯ್ತು!"

"ಹೌದು. ಪ್ರಪಂಚದಲ್ಲಿ ನೀನೆಷ್ಟೇ ದೊಡ್ಡ ಕಲಾವಿದನಾಗಿದ್ದರೂ ನನ್ನ ನಿಲುವು ಇದೇ. ಕೇವಲ ಹಸಿವು, ಬಡತನಗಳಿಂದಲೇ ಕುಸಿದು ಹೋಗುವಷ್ಟು ಅಸಮರ್ಥನಾಗಿದ್ದರೆ, ಅಂಥವನನ್ನು ಉಳಿಸಿಕೊಳ್ಳುವುದರಲ್ಲಿ ಯಾವ ಅರ್ಥವೂ ಇಲ್ಲ. ಈ ಪ್ರಪಂಚದಲ್ಲಿ ನಿಜವಾದ ಕಲಾವಿದರನ್ನು, ಅವರು ಹೇಳಬೇಕೆಂದು ಬಯಸಿದ್ದನ್ನೆಲ್ಲ ಹೇಳಿ ಮುಗಿಸುವವರೆಗೂ, ದೈವಕ್ಕಾಗಲೀ, ದೆವ್ವಕ್ಕಾಗಲೀ, ಕೊಲ್ಲುವುದು ಸಾಧ್ಯವಾಗುವುದಿಲ್ಲ."

"ವೀಸೆನ್ ಬ್ರೂಕ್, ನಾನು ವರ್ಷಾನುಗಟ್ಟಲೆ ಅಸಾಧ್ಯವಾದ ನೋವನ್ನುಂಡಿದ್ದೇನೆ.' ಹೊಟ್ಟೆಗೆ ಹಿಟ್ಟಿಲ್ಲ; ತಲೆ ಮೇಲೆ ಸೂರಿಲ್ಲ. ಮಳೆ, ಗಾಳಿ ಚಳಿಯನ್ನೂ ಲೆಕ್ಕಿಸದೆ, ಸೋತು ಸುಣ್ಣವಾಗಿ, ಜ್ವರಪೀಡಿತನಾಗಿ, ಹೆಜ್ಜೆಯೂರಲೂ ಶಕ್ತಿಯಿಲ್ಲದೆ, ದರಿದ್ರ ಬದುಕನ್ನು ಬದುಕಿದ್ದೇನೆ. ನೀನು ಹೇಳುತ್ತಿರುವ ಇದನ್ನೆಲ್ಲ ಅನುಭವಿಸಿದ್ದೇನೆ. ಕಲಿತಿದ್ದೇನೆ. ಮತ್ತೆ ಕಲಿಯಬೇಕಾದ್ದೇನೂ ಇಲ್ಲ."

"ನೀನು ನೋವುಂಡಿರುವುದು ಕೇವಲ ಮೇಲುಪದರದಷ್ಟು ಮಾತ್ರ, ಅನುಭವದ ಪ್ರವೇಶ ದ್ವಾರದಲ್ಲಿ ಮಾತ್ರವೇ ನಿಂತಿದ್ದೀ. ನೋವೊಂದು ಮಾತ್ರವೇ ಅನಾದಿ ಅನಂತ, ಈ ಪ್ರಪಂಚದಲ್ಲಿ! ಆದ್ದರಿಂದ ಕೂಡಲೇ ಈಗ ಮನೆಕಡೆ ಓಡು. ಪೇಪರು, ಪೆನ್ಸಿಲ್

ತಗೊ, ಸ್ಕೆಚ್ ಮಾಡಲು ಶುರುಮಾಡು. ಹಸಿವು ಹೆಚ್ಚಾದಂತೆಲ್ಲಾ ನಿನ್ನ ಕಲೆ ಅದ್ಭುತವಾಗಿ ಅರಳುತ್ತದೆ."

"ಹೌದು. ಹಾಗೇನೇ ಆ ಸ್ಕೆಚ್‌ಗಳೆಲ್ಲಾ ತಿರಸ್ಕಾರಕ್ಕೂ ಒಳಗಾಗುತ್ತೆ!"

ವೀಸೆನ್ ಬ್ರೂಕ್ ಹೊಟ್ಟೆ ತುಂಬ ನಕ್ಕ. "ನಿಜ. ಅವುಗಳೆಲ್ಲ ತಿರಸ್ಕೃತವಾಗುತ್ತೆ; ಆಗ ಬೇಕು ಕೂಡಾ! ಅದೆಲ್ಲ ನಿನ್ನ ಒಳ್ಳೇದಕ್ಕೇ! ಅದರಿಂದ ನಿನಗೆ ಇನ್ನಷ್ಟು ಸಂಕಟ ಆಗುತ್ತೆ. ಮುಂದೆ ಮಾಡುವ ಕ್ಯಾನ್‌ವಾಸ್, ಮೊದಲಿನದಕ್ಕಿಂತ ಚೆನ್ನಾಗಿ ಬರುತ್ತೆ. ಇದೇ ರೀತಿ, ಉಪವಾಸ ಬೀಳುತ್ತ, ದುಃಖ, ನೋವು ಅನುಭವಿಸುತ್ತ ವರ್ಷಗಳೇ ಕಳೆದು ಹೋಗುತ್ತೆ. ಆ ಮೇಲೆ ನೋಡು ಯಾವುದೋ ಒಂದು ಸಮಯದಲ್ಲಿ ಮಾಸ್ಟರ್ ಪೀಸೊಂದು ಸಿದ್ಧವಾಗುತ್ತೆ. ಎಂಥ ಪೈಂಟಿಂಗ್ ಆಗಿರುತ್ತೇಂದ್ರೆ, ಜ್ಯಾನ್‌ಸ್ಟೀನ್‌ನ ಕಲಾಕೃತಿಯ ಪಕ್ಕದಲ್ಲಿಯೇ ತೂಗು ಹಾಕಬಹುದಾಗಿರುತ್ತೆ."

"ಜ್ಯಾನ್ ಸ್ಟೀನ್ ಯಾಕೆ,...... ವೀಸೆನ್ ಬ್ರೂಕ್‌ನ ಪಕ್ಕ.....ಇರಬಹುದು. ಈಗ ನಾನೇನಾದರೂ ನಿನಗೆ ದುಡ್ಡು ಕೊಟ್ಟರೆ, ಅಮರ ಕಲಾವಿದನೆನಿಸಿಕೊಳ್ಳುವ ಅವಕಾಶದಿಂದ ವಂಚಿಸಿದಂತಾಗುತ್ತದೆ."

"ನೀನು, ನಿನ್ನ ಅಮರತ್ವ! ಹಾಳಾಗಿ ಹೋಗಲಿ! ಈಗಲೇ ಇಲ್ಲಿಯೇ ಡ್ರಾ ಮಾಡಬೇಕೆನಿಸುತ್ತಿದೆ. ಆದರೆ ಹಸಿದ ಹೊಟ್ಟೆಯಲ್ಲಿ ಅಲ್ಲ!"

"ಅದೆಲ್ಲ ನಾನ್‌ಸೆನ್ಸ್. ಅಮೂಲ್ಯವಾದ ಕಲಾಕೃತಿಗಳೆಲ್ಲವೂ ಹಸಿದ ಹೊಟ್ಟೆ ಮೇಲೇ ಸೃಷ್ಟಿಯಾಗಿವೆ. ಹೊಟ್ಟೆ ತುಂಬಿದ್ದರೆ, ಮಾಡುವುದೆಲ್ಲ ತಪ್ಪತಪ್ಪಾಗಿರುತ್ತೆ."

"ಅದೇನೇ ಇರಲಿ. ನೀನು ತುಂಬ ಕಷ್ಟ ಪಟ್ಟಿದ್ದೀಯ ಅಂತ ನನಗೇನೂ ಅನಿಸ್ತಿಲ್ಲ."

"ಇರಬಹುದು. ನನಗೆ ಸೃಜನಶೀಲ ಪ್ರತಿಭೆಯಿದೆ. ಕಲ್ಪನೆಯಿಂದಲೇ ಹಸಿವಿನ ಪರದಾಟವನ್ನು, ನೋವಿನ ಹಿಂಸೆಯನ್ನೂ ಊಹಿಸಿಕೊಳ್ಳಬಲ್ಲೆ. ಅದಕ್ಕಾಗಿ ನಿಜವಾಗಿ ನಾನು ಉಪವಾಸ ಇರಬೇಕಾಗಿಲ್ಲ."

"ನೀನೊಬ್ಬ ಮಹಾ ಸುಳ್ಳುಗಾರ."

"ಖಂಡಿತ ಅಲ್ಲ ನನ್ನ ಕೆಲಸ, ಡಿ ಬಾಕ್‌ನ ಕೆಲಸದಂತೆ ತೀರಾ ಸಾಮಾನ್ಯ ಅಂತ ಅನಿಸಿದ್ದರೆ, ನನ್ನಲ್ಲಿರುವ ಹಣವನ್ನೆಲ್ಲ ಎಸೆದು ಬಿಸಾಡಿ, ನಾನೊಬ್ಬ ಅಲೆಮಾರಿಯಾಗಿರುತ್ತಿದ್ದೆ. ಆದರೆ ನನಗೆ ನೋವನ್ನು ಅದ್ಭುತವಾಗಿ ಊಹಿಸಿಕೊಂಡು ನೋವಿನ ಭ್ರಮೆಯನ್ನು ಸೃಷ್ಟಿಸುವ ಸಾಮರ್ಥ್ಯ ಅದು ಹೇಗೋ ಸಾಧ್ಯವಾಗಿದೆ. ಅದಕ್ಕೆಂದೇ ನಾನೊಬ್ಬ ಮಹಾನ್ ಕಲಾವಿದ ಎನಿಸಿಕೊಂಡಿರುವುದು."

"ನೀನೊಬ್ಬ ಮಹಾಮೋಸಗಾರ. ಸಾಕು ಸುಮ್ಮನಿರು. ನನಗೊಂದು ಇಪ್ಪತ್ತೈದು ಫ್ರ್ಯಾಂಕ್ ಕೊಟ್ಟು ಒಳ್ಳೆಯವನಾಗು."

"ಇಪ್ಪತ್ತೈದು ಸೆಂಟೀಮ್‌ಗಳನ್ನು ಕೊಡಲಾರೆ. ನಿಜವಾಗಲೂ ಹೇಳ್ತಾ ಇದ್ದೀನಿ. ನಿನಗೆ ಹಣ ಸಾಲವಾಗಿ ಕೊಟ್ಟು, ನಿನ್ನಲ್ಲಿನ ಸುಪ್ತ ಸಾಮರ್ಥ್ಯಕ್ಕೆ ಅವಮಾನ ಮಾಡಲಾರೆ.

ಒಂದಲ್ಲ ಒಂದು ದಿನ ಅದ್ಭುತವಾದ ಕಲಾಕೃತಿಯನ್ನು ನೀಡಬಲ್ಲೆ. ಆದರೆ ನಿನ್ನ ದಾರಿ, ನಿನ್ನ ಭವಿಷ್ಯವನ್ನು ನೀನೇ ರೂಪಿಸಿಕೊಳ್ಳಬೇಕಾಗುತ್ತೆ. ಮಾವ್‌ನ ಮನೆಯ ಡಸ್ಟ್‌ಬಿನ್‌ನಲ್ಲಿ ಪ್ಲಾಸ್ಟರ್‌ಪಾದವನ್ನು ನೋಡಿದಾಗಲೇ ನೀನು ಏನು ಅನ್ನುವುದು ನನಗೆ ಅರ್ಥವಾಯಿತು. ಸುಮ್ಮನೆ ಮನೆ ಕಡೆ ನಡಿ. ಇವತ್ತಿನ ಗಂಜಿಗಾಗಿ ನಾಳಿನ ಮೃಷ್ಟಾನ್ನವನ್ನು ಕಳೆದುಕೊಳ್ಳಬೇಡ."

ವಿನ್ಸೆಂಟ್, ವೀಸೆನ್ ಬ್ರೂಕ್ ಕಡೆ ನೋಡಿದ. ನಂತರ ಬಾಗಿಲಿನ ಕಡೆಗೆ ಹೆಜ್ಜೆ ಹಾಕಿದ.

"ಒಂದ್ನಿಮಿಷ ನಿಲ್ಲು" ವೀಸೆನ್ ಬ್ರೂಕ್ ಕೂಗಿ ಹೇಳಿದ.

"ಯಾಕೆ? ನೀನು ಹೇಡಿ. ಸಾಮರ್ಥ್ಯ ಇಲ್ಲದವನು ಅಂತೆಲ್ಲ ನನಗೆ ಇನ್ನೂ ಹೇಳಬೇಕಾಗಿದೆಯೇನು?" ಒರಟಾಗಿ ಪ್ರಶ್ನಿಸಿದ.

"ವಿನ್ಸೆಂಟ್ ನನ್ನನ್ನು ಅರ್ಥ ಮಾಡಿಕೋ. ನಾನೇನೂ ಕೊಡೋಕೆ ಮನಸ್ಸಿಲ್ಲದ ಜಿಪುಣ ಅಲ್ಲ. ಆದರೆ ನಾನು ಸಿದ್ಧಾಂತಗಳನ್ನು ನಂಬಿದವನು. ನೀನೊಬ್ಬ ಮೂರ್ಖ. ಪ್ರಯೋಜನ ಇಲ್ಲದವನು ಅಂತ ನಾನು ಭಾವಿಸಿದ್ದರೆ, ನಿನ್ನತ್ರ ಇಪ್ಪತ್ತೈದು ಫ್ರ್ಯಾಂಕ್ ಎಸೆದು ನಿನ್ನಿಂದ ಕೈ ತೊಳೆದುಕೊಳ್ಳಬಹುದಾಗಿತ್ತು. ಆದರೆ ನಿನ್ನ ಬಗ್ಗೆ ಗೌರವವಿದೆ; ಸಹಕಲಾವಿದನೆಂಬ ಭಾವನೆಯಿದೆ. ನಾನು ನಿನಗೆ ಏನೋ ಒಂದು ಕೊಡ್ತೀನಿ. ಎಷ್ಟು ಹಣ ಸುರಿದರೂ ಪ್ರಪಂಚದಲ್ಲಿ ಅದನ್ನು ಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಹೇಗ್‌ನಲ್ಲಿ ಮಾವ್‌ನನ್ನು ಬಿಟ್ಟರೆ ಬೇರೊಬ್ಬನಿರಲಾರ. ಇಲ್ಲಿ ಬಾ. ಬೆಳಕಿಂಡಿಯ ಪರದೆಯನ್ನು ಸರಿ ಮಾಡು. ಈಗ ಸರಿಯಿದೆ. ಈ ಪ್ರಯೋಗವನ್ನು ಗಮನಿಸು. ನಾನು ಕೆಲಸ ಮಾಡೋದು ಹೀಗೆ. ಅರೆ! ನೀನು ಬೆಳಕಿರೋ ಕಡೆ ನಿಂತುಕೊಂಡರೆ ಇದನ್ನು ಹೇಗೆ ಸರಿಯಾಗಿ ನೋಡೋಕಾಗುತ್ತೆ!"

ಒಂದು ಗಂಟೆಯ ನಂತರ ವಿನ್ಸೆಂಟ್‌ಗೆ ನಿರಾಳವೆನಿಸಿತು. ಈಗ ಮನಸ್ಸು ಹಗುರವಾಯಿತು. ಯಾವುದಾದರೂ ಕಲಾಶಾಲೆಯಲ್ಲಿ ಒಂದು ವರ್ಷ ಕಲಿಯಬಹುದಾದದ್ದನ್ನು, ಈಗ ಸ್ವಲ್ಪ ಹೊತ್ತಿನಲ್ಲಿಯೇ ಕಲಿತಿದ್ದ. ಹಸಿವು, ಜ್ವರ, ಜೇಬಿನಲ್ಲಿ ಸೆಂಟೀಮಾಗಲಿ ಇಲ್ಲದ ವಿಚಾರ- ಎಲ್ಲವುಗಳ ಪರಿವೆಯೇ ಇಲ್ಲದೆ ಸಾಕಷ್ಟು ದೂರ ಸವೆಸಿದ್ದ.

–೬–

ಕೆಲವು ದಿನಗಳ ನಂತರ, ವಿನ್ಸೆಂಟ್ ಮಾವ್‌ನನ್ನು ಕಾಣಲು ಡ್ಯೂನ್ಸ್‌ಗೆ ಹೋದ. ಅವನ ಜೊತೆ ಮತ್ತೆ ಸ್ನೇಹ ಕುದುರಿಸಿಕೊಳ್ಳಲು ಆಸೆಪಟ್ಟಿದ್ದರೂ, ಅಲ್ಲಿ ಅವನಿಗೆ ನಿರಾಶೆಯೇ ಕಾದಿತ್ತು.

"ಕಸಿನ್ ಮಾವ್, ನಿನ್ನ ಸ್ಟುಡಿಯೋದಲ್ಲಿ ಆದದ್ದಕ್ಕೆ ನಾನು ಕ್ಷಮೆ ಕೋರುತ್ತೇನೆ. ನನ್ನನ್ನು ಕ್ಷಮಿಸುವಿಯಲ್ಲ? ಯಾವಾಗಲಾದರೂ ಬಂದು ನನ್ನ ಡ್ರಾಯಿಂಗ್ಸ್ ನೋಡಿ, ಏನಾದರೂ ಹೇಳ್ತೀಯಲ್ಲ?"

"ನಾನು ನಿನ್ನನ್ನು ನೋಡೋಕೆ ಖಂಡಿತಾ ಬರೋದಿಲ್ಲ" – ನಿಷ್ಠುರವಾಗಿ, ಖಂಡಿತವಾಗಿ ಹೇಳಿಬಿಟ್ಟ.

"ನನ್ನಲ್ಲಿ ನಂಬಿಕೆಯನ್ನು ಪೂರ್ತಿಯಾಗಿ ಕಳೆದುಕೊಂಡು ಬಿಟ್ಟೆಯೇನು?"

"ಹೌದು. ನಿನ್ನದು ವಿಷಪೂರಿತ ವ್ಯಕ್ತಿತ್ವ"

"ನಾನು ಮಾಡಿದ ಯಾವ ಕೆಲಸ ಹಾಗಿತ್ತು ಅನ್ನೋದನ್ನು ಹೇಳಿದರೆ, ನಾನು ಸರಿಪಡಿಸಿಕೊಳ್ಳುತ್ತೇನೆ."

"ಇನ್ನು ಮುಂದೆ ನೀನು ಏನು ಮಾಡ್ತೀಯೋ ಅದರ ಬಗ್ಗೆ ನನಗೆ ಬೇಕಾಗಿಲ್ಲ."

"ನಾನು ಏನು ಮಾಡ್ತಿದ್ದೀನಿ! ತಿನ್ನೋದು, ಮಲಗೋದು ಮತ್ತು ಕಲಾವಿದನಾಗಿ ಕೆಲಸ ಮಾಡೋದು, ಇದರಲ್ಲಿ ಕೆಟ್ಟದ್ದಾಗಲೀ ವಿಷಪೂರಿತವಾದದ್ದಾಗಲಿ ಏನಿದೆ?"

"ನೀನು?..... ನೀನು? ನಿನ್ನನ್ನು ಕಲಾವಿದ ಅಂತ ತಿಳ್ಕೊಂಡಿದ್ದೀಯೇನು?"

"ಹೌದು."

"ದೇವರೇ! ಎಂಥ ಅಸಂಗತ! ನಿನ್ನ ಜೀವನದಲ್ಲಿ, ಇಲ್ಲೀವರೆಗೆ ಒಂದು ಡ್ರಾಯಿಂಗನ್ನಾಗಲೀ ಮಾರೋಕೆ ಸಾಧ್ಯವಾಯಿತೇನು?"

"ಅಂದರೆ, ಮಾರಾಟವಾಗುವ ಕೃತಿಗಳನ್ನು ರಚಿಸಿದರೆ ಮಾತ್ರ ಕಲಾವಿದ ಎನಿಸಿಕೊಳ್ತಾನೇನು? ನನ್ನ ದೃಷ್ಟಿಯಲ್ಲಿ ಹುಡುಕಾಟ ನಡೆಸುತ್ತಾ ಹೋಗುವ ಆದರೆ ಎಂದಿಗೂ ಸಿಗದೆ ನಿರಾಶೆಗೊಳ್ಳುತ್ತಲೇ ಇರುವವನೇ ಕಲಾವಿದ ಎಂದು ನಂಬಿದ್ದೆ; ನನಗೆ ಗೊತ್ತಿದೆ; ನನಗೆ ಸಿಕ್ಕಿದೆ ಎಂದು ಭಾವಿಸಿದ್ದಕ್ಕಿಂತ ಭಿನ್ನವಾದ್ದು ಎಂದು ತಿಳಿದಿದ್ದೆ. ಕಲಾವಿದ ಎಂದಾಗ, ಇನ್ನೂ ಹುಡುಕಾಟದಲ್ಲಿ ಇರುವವನು, ಹೋರಾಟ ನಡೆಸುತ್ತಿರುವವನು, ಆಂತರಿಕವಾಗಿ ಅದರಲ್ಲಿಯೇ ಮುಳುಗಿದವನು ಎನಿಸುತ್ತದೆ.

"ಖಂಡಿತವಾಗಿಯೂ ನೀನೊಬ್ಬ ಚರಿತ್ರೆ ಹೀನ"

"ನಿನ್ನ ಮನಸ್ಸಲ್ಲಿ ಏನೋ ಅನುಮಾನ ಇದೆ. ಯಾರು ಯಾರೋ ಏನೋ ಹೇಳಿರಬೇಕು. ನಿನ್ನಿಂದ ನಾನು ಅದನ್ನು ಮುಚ್ಚಿಡುತ್ತಿದ್ದೀನಿ ಅಂತ ನಿನಗೆ ಅನಿಸಿರಬೇಕು. ನಿನಗೇನು ಗೊತ್ತಿದೆ ನನ್ನ ಬಗ್ಗೆ? ಮುಕ್ತವಾಗಿ, ಬಾಯಿಬಿಟ್ಟು ಹೇಳು ಮಾವ್."

ಮಾವ್ ಈಸಲ್ ಬಳಿ ಹೋಗಿ ಪೈಂಟ್ ಹಾಕಲು ಆರಂಭಿಸಿದ. ವಿನ್ಸೆಂಟ್ ಅಲ್ಲಿಂದ ಹಿಂತಿರುಗಿದ.

ಅವನು ಭಾವಿಸಿದ್ದು ಸರಿ ಅನಿಸಿತು. ಹೇಗ್‌ನಲ್ಲಿ ಅವನ ಮತ್ತು ಕ್ರಿಸ್ಟೀನ್‌ಳ ನಡುವಿನ ಸಂಬಂಧದ ಬಗ್ಗೆ ಏನೇನೋ ವದಂತಿಗಳು ಹರಡಿದ್ದವು. ಡಿ ಬಾಕ್‌ನೇ ಈ ರಹಸ್ಯವನ್ನು ಮೊದಲಿಗೆ ಬಯಲು ಮಾಡಿದ್ದು, ವಿಚಿತ್ರವಾದ ರೀತಿಯಲ್ಲಿ, ತುಂಟು ನಗೆಯಲ್ಲಿ, ಕ್ರಿಸ್ಟೀನ್ ವಿನ್ಸೆಂಟ್‌ಗೆ ಪೋಸ್ ಕೊಡುತ್ತಿದ್ದಾಳೆ ಎಂದು ಸಾರಿದ್ದ.

"ಹಾಂ! ಹಾಂ. ವಾನ್‌ಗೋ, ಹೇಗ್‌ನಲ್ಲೆಲ್ಲ ನೀನು ಮಿಸ್ಟ್ರೆಸ್‌ನ್ನು ಇರಿಸಿಕೊಂಡಿದ್ದೀಯಾಂತ ಮಾತಾಡಿಕೊಳ್ತಿದ್ದಾರೆ. ನಾನು ವೀಸೆನ್ ಬ್ರೂಕ್ ಮತ್ತು

ಮಾವ್‌ರಿಂದ ಕೇಳಿದ್ದೆ. ನಿನ್ನ ಮೇಲೆ ಹರಿಹಾಯೋಕೆ ಇಡೀ ಹೇಗ್ ತುದಿಗಾಲ ಮೇಲೆ ನಿಂತಿದೆ!"

"ಓ ಇದೇನಾ ಸಮಾಚಾರ."

"ಮಾಡೆಲ್‌ಗಳ ಆಯ್ಕೆಯಲ್ಲಿ ಸ್ವಲ್ಪವಾದರೂ ವಿವೇಚನೆ ಇರಬೇಕು. ಇವಳೇನು ಈ ಊರಿನಲ್ಲಿ ಇರುವ ಮಾಡೆಲ್‌ಗಳಲ್ಲಿ ಒಬ್ಬಳೇನು? ಇಲ್ಲಿರುವ ಮಾಡೆಲ್‌ಗಳೆಲ್ಲ ನನಗೆ ಗೊತ್ತಿದೆ."

ಬೆಂಕಿಗೂಡಿನ ಪಕ್ಕದಲ್ಲಿ ಹೆಣೆಯುತ್ತ ಕುಳಿತಿದ್ದ ಕ್ರಿಸ್ಟೀನ್‌ಳನ್ನು ನೋಡಿದ. ಅವಳಲ್ಲಿ ಗೃಹಿಣಿಯ ಮೋಹಕ ಆಕರ್ಷಣೆಯಿತ್ತು. ಪುಟ್ಟದಾದ ಸ್ವೆಟರ್ ಅನ್ನು ಹೆಣೆಯುವುದರಲ್ಲಿ ಮಗ್ನಳಾಗಿದ್ದ ಅವಳನ್ನು ನೋಡಿದ ಡಿ ಬಾಕ್ ಕೈಲಿದ್ದ ಸಿಗರೇಟನ್ನು ಕೆಳಗೆ ಬೀಳಿಸಿ, ಎದ್ದುನಿಂತ.

"ದೇವರೇ!...... ಇವಳೇನೂ ನಿನ್ನ ಮಿಸ್ಟ್ರೆಸ್ಸು!?" – ಉದ್ವೇಗದೊಂದಿಗೆ ಕೇಳಿದ.

"ನನಗೆ ಮಿಸ್ಟ್ರೆಸ್ಸು ಗಿಸ್ಟ್ರೆಸ್ಸು ಯಾರೂ ಇಲ್ಲ. ಈ ಹೆಂಗಸನ್ನೇ ತಪ್ಪಾಗಿ ತಿಳಿದು, ಏನೇನೋ ಮಾತಾಡ್ತಿದ್ದಾರೆ."

ಡಿ ಬಾಕ್ ಇಲ್ಲದ ಬೆವರನ್ನು ಒರೆಸಿಕೊಂಡು, ಕ್ರಿಸ್ಟೀನ್‌ಳನ್ನು ಗಂಭೀರವಾಗಿ ಗಮನಿಸಿದ.

"ಇಂಥವಳ ಜೊತೆ ಮಲಗುವುದಕ್ಕೆ ನಿನ್ನ ಮನಸ್ಸು ಒಪ್ಪಿದ್ದು ಹೇಗೆ, ದೇವರೇ!"

"ಆ ಪ್ರಶ್ನೆಯಾಕೆ ಬೇಕು?"

"ಓಲ್ಡ್ ಚ್ಯಾಪ್! ಅವಳೊಬ್ಬಳು ಸೂಳೆ! ತೀರಾ ಕೆಳದರ್ಜೆಯ ಸೂಳೆ!.... ಏನು ಯೋಚನೆ ಮಾಡ್ತಿದ್ದೀಯ? ಟರ್ಸ್‌ಟೀಗ್ ಮತ್ತು ಮಾವ್ ಇದನ್ನು ನೋಡಿ ಗಾಬರಿ ಆಗಿದ್ದರಲ್ಲಿ ಆಶ್ಚರ್ಯವಿಲ್ಲ.... ನಿನಗೆ ಮಿಸ್ಟ್ರೆಸ್ ಬೇಕು ಎನಿಸಿದ್ದರೆ, ಚೆನ್ನಾಗಿ, ಡೀಸೆಂಟಾಗಿ ಇರುವ ಮಾಡೆಲ್‌ಗಳಲ್ಲಿ ಯಾರೆನ್ನಾದರೂ ಒಬ್ಬರನ್ನು ಆರಿಸಿಕೊಳ್ಳಬಹುದಾಗಿತ್ತಲ್ಲ. ಬೇಕಾದಷ್ಟು ಜನ ಸಿಕ್ತಾರೆ."

"ನಾನು ಮೊದಲೇ ಹೇಳಿಲ್ಲವೇ ಡಿ ಬಾಕ್. ಅವಳು ನನ್ನ ಮಿಸ್ಟ್ರೆಸ್ ಅಲ್ಲ ಅಂತ!"

"ಹಾಗಾದರೆ ಮತ್ತೇನು?"

"ನನ್ನ ಹೆಂಡತಿ!"

ಡಿ ಬಾಕ್ ತುಟಿ ಮುಚ್ಚಿಕೊಂಡ. ಕೇಳಿದ–

"ನಿನ್ನ ಹೆಂಡತಿ!"

"ಹೌದು ಅವಳನ್ನು ಮದುವೆ ಆಗಬೇಕೂಂತಿದ್ದೀನಿ."

"ದೇವರೆ! ದೇವರೇ!"

ಡಿಬಾಕ್ ಅವಳತ್ತ ಭಯಂಕರವಾದ್ದನ್ನು ನೋಡುವಂತೆ ನೋಡಿದ. ತಿರಸ್ಕಾರದ ನೋಟ ಬೀರಿದ. ಕೋಟನ್ನೂ ಹಾಕಿಕೊಳ್ಳದೆ ತಕ್ಷಣವೇ ಅಲ್ಲಿಂದ ಜಾರಿಕೊಂಡ.

"ನನ್ನ ಬಗ್ಗೆ ಏನು ಹೇಳ್ತಿದ್ದೆ?" – ಕ್ರಿಸ್ಟೀನ್ ಕೇಳಿದಳು.

ವಿನ್ಸೆಂಟ್ ಅವಳನ್ನು ಹಾದು, ಒಂದು ಕ್ಷಣ ಅವಳ ಕಡೆ ನೋಡಿ, ತಲೆ ಬಗ್ಗಿಸಿ, "ಡಿಬಾಕ್‌ಗೆ, ನೀನು ನನ್ನ ಹೆಂಡತಿಯಾಗಲಿದ್ದೀಯಾಂತ ಹೇಳಿದೆ."

ಕೈಗಳು ಚುರುಕ್ಕಾಗಿ ಕೆಲಸದಲ್ಲಿ ನಿರತವಾಗಿದ್ದರೂ ಅವಳು ಮಾತ್ರ ಮೌನವಾಗಿದ್ದಳು. ಒಣಗಿದ ತುಟಿಗಳನ್ನು ಒದ್ದೆ ಮಾಡಲು ನಾಲಿಗೆಯನ್ನು ಹೊರಚಾಚಿ ಸವರಿದಳು.

"ನಿಜವಾಗಿಯೂ ನನ್ನನ್ನು ಮದುವೆಯಾಗಲಿದ್ದೀಯ ವಿನ್ಸೆಂಟ್? ಮದುವೆ ಯಾಕೆ?"

"ಮದುವೆಯಾಗದೆ ನಿನ್ನನ್ನು ಒಂಟಿಯಾಗಿ ಬಿಡಬಹುದಾಗಿತ್ತು. ಆದರೆ ನನಗೆ ಕೌಟುಂಬಿಕ ಜೀವನದ ಸುಖದುಃಖಗಳ ಅನುಭವ ಬೇಕು. ನನ್ನ ಸ್ವಂತ ಅನುಭವದಿಂದ ನನ್ನ ಪೈಂಟಿಂಗ್ಸ್ ಮೂಡಬೇಕು. ಹಿಂದೆ ನಾನು ಒಬ್ಬ ಹೆಣ್ಣನ್ನು ಪ್ರೀತಿಸಿದ್ದೆ ಕ್ರಿಸ್ಟೀನ್. ಅವರ ಮನೆಗೆ ಹೋದಾಗ, ನನ್ನಿಂದ ಅವಳಿಗೆ ತುಂಬ ಬೇಸರ ಆಗಿದೆ ಅಂತ ಆರೋಪ ಮಾಡಿದರು. ನನ್ನ ಪ್ರೀತಿ ನಿಜವಾಗಿತ್ತು; ಪ್ರಾಮಾಣಿಕವಾದ್ದಾಗಿತ್ತು; ಗಾಢವಾಗಿತ್ತು ಕ್ರಿಸ್ಟೀನ್. ಅಲ್ಲಿಂದ ಬಂದು ಬಿಟ್ಟ ಮೇಲೆ, ಅದು ಸತ್ತು ಹೋಯಿತು. ಆದರೆ ನೀನು ಕಾಣಿಸಿಕೊಂಡ ಮೇಲೆ ಆ ಪ್ರೀತಿಗೆ ಮತ್ತೆ ಜೀವ ಬಂತು."

"ನನ್ನನ್ನು ಮದುವೆಯಾಗೋದು ಸಾಧ್ಯವಿಲ್ಲ. ನನ್ನ ಮಕ್ಕಳ ಗತಿಯೇನು? ನಿನ್ನ ತಮ್ಮ ನಿನಗೆ ಹಣ ಕಳಿಸೋದನ್ನೂ ನಿಲ್ಲಿಸಿ ಬಿಡಬಹುದು."

"ತಾಯಿಯಾಗಿರುವ ಹೆಣ್ಣಿನ ಬಗ್ಗೆ ನನಗೆ ತುಂಬ ಗೌರವ ಇದೆ ಕ್ರಿಸ್ಟೀನ್. ಹೆರ್‌ಮನ್ ಮತ್ತು ಹುಟ್ಟಲಿರುವ ಮಗು ನಮ್ಮ ಜೊತೆಗೆ ಇರಲಿ. ಉಳಿದವರು ನಿನ್ನ ತಾಯಿ ಬಳಿ ಇರಲಿ..... ಇನ್ನು ಥಿಯೋ..... ಅವನಿಗೆ ಸತ್ಯ ಏನೂಂತ ತಿಳಿಸಿ ಬರೆದರೆ, ನನ್ನ ಕೈ ಬಿಡೋದಿಲ್ಲ ಅನ್ನೋ ನಂಬಿಕೆ ನನಗಿದೆ."

ವಿನ್ಸೆಂಟ್ ಅವಳ ಕಾಲಿನ ಬಳಿ ನೆಲದ ಮೇಲೆ ಕುಳಿತ. ಕ್ರಿಸ್ಟೀನ್ ಮೊದಲಿಗಿಂತ ಚೆನ್ನಾಗಿ, ಸಂತೋಷವಾಗಿ ಕಾಣಿಸಿದಳು. ಕಣ್ಣುಗಳಲ್ಲಿ ಕವಿದಿದ್ದ ವಿಷಾದದ ಛಾಯೆ ಮರೆಯಾಗಿತ್ತು. ಅವಳಲ್ಲಿ ಜೀವನೋತ್ಸಾಹ ಮರುಕಳಿಸಿತ್ತು. ಪೋಸ್ ಕೊಡುವುದು ಈಗ ಅವಳಿಂದ ಸಾಧ್ಯವಾಗುತ್ತಿರಲಿಲ್ಲ. ಆದರೂ ಸಹಿಸಿಕೊಂಡು ಸಹಕರಿಸುತ್ತಿದ್ದಳು. ಮೊದಲ ಸಲ ಅವಳನ್ನು ಭೇಟಿಯಾದಾಗ, ಕೊಳಕು, ಖಾಯಿಲೆ ಒರಟುತನ ದುಃಖಗಳ ಮೂಟೆಯಂತಿದ್ದಳು. ಆದರೆ ಈಗ ಹೆಚ್ಚು ಮಾತನಾಡುವುದಿಲ್ಲ. ಆರೋಗ್ಯವೂ ಸುಧಾರಿಸಿದೆ. ಅವಳ ಮೊಗದಲ್ಲಿ ಮೂಡಿದ ಅಂದವನ್ನು ಗಮನಿಸುತ್ತಾ, ಮಿಷಲೆಟ್‌ಟನ ಕೆಲವು ಸಾಲುಗಳನ್ನು ನೆನಪಿಸಿಕೊಂಡ.

"ಸಿಯೆನ್ ನಾವು ಸ್ವಲ್ಪ ಮಿತವಾಗಿ ಖರ್ಚು ಮಾಡಿ ಸ್ವಲ್ಪ ಹಣ ಉಳಿತಾಯ ಮಾಡೋಣ. ಬಹುಶಃ ಮುಂದೆ, ನನ್ನ ಬಳಿ ಒಂದು ಬಿಡಿ ಸೆಂಟೀಮೂ ಇಲ್ಲದ ಪರಿಸ್ಥಿತಿ ಬಂದರೂ ಬರಬಹುದು. ನೀನು ಲೇಡನ್‌ಗೆ ಹೋಗುವವರೆಗೆ ನಿನಗೆ ಸಹಾಯ ಮಾಡಬಹುದೇನೋ. ಆದರೆ ನೀನು ಅಲ್ಲಿಂದ ಬಂದಾಗ ನನ್ನ ಪರಿಸ್ಥಿತಿ

ಹೇಗಿರುತ್ತೋ ಏನೋ! ಒಂದು ಬ್ರೆಡ್ಡಿನ ಚೂರೂ ಸಾಧ್ಯವಾಗದೆ ಹೋಗಿರಬಹುದು. ಆದರೂ ಏನೇ ಇದ್ದರೂ ನಿನ್ನ ಮತ್ತು ನಿನ್ನ ಮಗುವಿನೊಂದಿಗೆ ಹಂಚಿಕೊಳ್ಳುತ್ತೇನೆ."

ಕ್ರಿಸ್ಟೀನ್ ಕುರ್ಚಿಯಿಂದ ಇಳಿದು ಅವನ ಪಕ್ಕದಲ್ಲಿ, ಹೆಗಲ ಮೇಲೆ ತಲೆಯಿರಿಸಿ, ಎರಡೂ ಬಾಹುಗಳಿಂದ ಅವನನ್ನು ತಬ್ಬಿ ಹಿಡಿದಳು.

"ವಿನ್ಸೆಂಟ್ ನಿನ್ನ ಜೊತೆ ಇರೋಕೆ ಅವಕಾಶ ಕೊಡು. ಅಷ್ಟೇ ಸಾಕು. ಅದಕ್ಕಿಂತ ಹೆಚ್ಚಿಗೆ ಏನನ್ನೂ ಬಯಸುವುದಿಲ್ಲ. ಬರೀ ಬ್ರೆಡ್ಡು ಕಾಫಿ ಒಂದಿದ್ದರೂ ಸಾಕು. ನಾನು ಗೊಣಗುವುದಿಲ್ಲ. ನಿನ್ನನ್ನು ನಾನು ಪ್ರೀತಿಸುತ್ತೇನೆ ವಿನ್ಸೆಂಟ್. ನನ್ನ ಜೊತೆ ಇಷ್ಟು ಒಳ್ಳೆಯವನಾಗಿ ನಡೆದುಕೊಂಡ ಗಂಡಸು ನೀನೊಬ್ಬನೇ. ಬೇಡ ಅನ್ನಿಸಿದರೆ, ಮದುವೆಯಾಗಬೇಡ. ನಿನಗಾಗಿ ಪೋಸ್ (ಭಂಗಿ) ಕೊಡುತ್ತೇನೆ. ನೀ ಕೆಲಸ ಮುಂದುವರೆಸು. ನೀನೇ ಏನೇ ಹೇಳಿದರೂ ನಾನು ಮಾಡ್ತೇನೆ. ಆದರೆ ನಿನ್ನ ಜೊತೆ ಇರಬೇಡ ಅಂತ ಹೇಳಬೇಡ. ಮೊಟ್ಟಮೊದಲಬಾರಿಗೆ ಜೀವನದಲ್ಲಿ ಸುಖ, ಸಂತೋಷಗಳನ್ನು ಅನುಭವಿಸುತ್ತಿದ್ದೇನೆ. ನನಗೆ ಏನೇನೂ ಬೇಡ. ನಿನ್ನ ಹತ್ತಿರ ಏನಿದೆಯೋ ಅದನ್ನೇ ಹಂಚಿಕೊಂಡು ಸಂತೋಷವಾಗಿರ್ತ್ತೀನಿ."

ಅವಳ ಹೊಟ್ಟೆಯೊಳಗಿದ್ದ ಮಗುವಿನ ಸ್ಪರ್ಷದ ಬೆಚ್ಚನೆಯ ಅನುಭವವಾಯಿತು. ಮೃದುವಾಗಿ ಅವಳ ಮೊಗದ ಮೇಲೆ ಬೆರಳಾಡಿಸಿದ. ಕಲೆಗಳಿದ್ದಲೆಲ್ಲಾ ಮುತ್ತುಗಳನ್ನಿಟ್ಟು, ಕೂದಲನ್ನು ಹಿಂದಕ್ಕೆ ಇಳಿಬಿಟ್ಟು, ಮೃದುವಾಗಿ ನೇವರಿಸಿದ. ಅವಳೂ ಕೂಡಾ ತನ್ನ ಕೆನ್ನೆಗಳಿಂದ ಅವನ ಗಡ್ಡವನ್ನು ಉಜ್ಜಿದಳು.

"ನಿಜವಾಗಲೂ ನನ್ನನ್ನು ಪ್ರೀತಿಸುತ್ತೀಯೇನು ಕ್ರಿಸ್ಟೀನ್?"

"ಹೌದು ವಿನ್ಸೆಂಟ್. ಖಂಡಿತ ಪ್ರೀತಿಸುತ್ತೇನೆ."

"ಒಬ್ಬರಿಂದ ಪ್ರೀತಿಸಿಕೊಳ್ಳುವುದರಲ್ಲಿ ಎಷ್ಟು ಸುಖ ಇದೆ! ಪ್ರಪಂಚ ಏನು ಬೇಕಾದರೂ ಹೇಳಿಕೊಳ್ಳಲಿ!"

"ಪ್ರಪಂಚ ನೆಗೆದು ಬೀಳಲಿ." – ಕ್ರಿಸ್ಟೀನ್ ಪ್ರತಿಕ್ರಿಯಿಸಿದಳು.

"ನಾನೊಬ್ಬ ಕಾರ್ಮಿಕನಂತೆ ಇರುತ್ತೇನೆ. ನಾವಿಬ್ಬರೂ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡಿದ್ದೇವೆ. ಆದ್ದರಿಂದ ನಮ್ಮಿಬ್ಬರಲ್ಲಿ ಯಾರು ಏನೇ ಹೇಳಿದರೂ ತಪ್ಪು ತಿಳಿದುಕೊಳ್ಳುವುದಿಲ್ಲ. ಸಮಾಜದಲ್ಲಿ ಗುರುತಿಸಿಕೊಳ್ಳುವುದಕ್ಕೆ ಯಾವುದೇ ಮುಖವಾಡಗಳು ಬೇಡ. ನಾನು ಯಾವಾಗಲೋ ನನ್ನವರಿಂದ ಸಮಾಜ ಬಾಹಿರನಾಗಿಬಿಟ್ಟಿದ್ದೇನೆ. ನನಗೆ ತಿನ್ನೋಕೆ ಇಲ್ಲದಿದ್ದರೂ ಸರಿ. ಇಲ್ಲ, ಇಷ್ಟೇ ನನ್ನ ಪಾಲಿಗೆ ಎಂದು ಮರುಗುವಂತಾದರೂ ಸರಿ. ನಿನ್ನನ್ನು ಮದುವೆಯಾಗದೆ ಮಾತ್ರ ಇರಲಾರೆ."

ಇಬ್ಬರೂ ಒಬ್ಬರನ್ನೊಬ್ಬರು ಹೆಣೆದುಕೊಂಡು ಸ್ಟೋವ್‌ನ ಬೆಂಕಿಯ ಬೆಳಕಲ್ಲಿ ನಿರಾಳವಾಗಿ ಕುಳಿತರು. ಪೋಸ್ಟ್‌ಮ್ಯಾನ್ ಪ್ರವೇಶದಿಂದ ಥಟ್ಟನೆ ಭಾವನಾಲೋಕದಿಂದ

ವಾಸ್ತವಕ್ಕೆ ಬಿದ್ದರು. ವಿನ್ಸೆಂಟ್‌ಗೆ ಆ್ಯಮ್‌ಸ್ಟರ್ ಡ್ಯಾಮ್‌ನಿಂದ ಬಂದಿದ್ದ ಪತ್ರವನ್ನು ನೀಡಿದ, ಪೋಸ್ಟ್‌ಮ್ಯಾನ್. ಆ ಪತ್ರದಲ್ಲಿ, ಹೀಗಿತ್ತು:-

ವಿನ್ಸೆಂಟ್,

ನಿನ್ನ ಚರಿತ್ರಹೀನ ಬದುಕಿನ ಬಗ್ಗೆ ಕೇಳಿದೆ. ನಾನು ನಿನಗೆ ಆರು ಡ್ರಾಯಿಂಗ್ಸ್‌ನ ನೀಡಿದ್ದ ಆದೇಶವನ್ನು ಕ್ಯಾನ್ಸೆಲ್ ಮಾಡುತ್ತಿದ್ದೇನೆ. ಇನ್ನು ಮುಂದೆ ನಿನ್ನ ಕೆಲಸದಲ್ಲಿ ನನಗೆ ಯಾವುದೇ ಆಸಕ್ತಿಯಿಲ್ಲ.

ಸಿ.ಎಮ್.ವಾನ್‌ಗೋ.

ಇನ್ನು ಮುಂದೆ ವಿನ್ಸೆಂಟ್‌ನ ಹಣೆಬರಹ ಕೇವಲ ಥಿಯೋನನ್ನು ಅವಲಂಬಿಸಿತ್ತು. ಥಿಯೋಗೆ ತನ್ನ ಮತ್ತು ಕ್ರಿಸ್ಟೀನ್‌ಳ ಸಂಬಂಧವನ್ನು ಸ್ಪಷ್ಟವಾಗಿ ವಿವರಿಸಿ ಹೇಳದಿದ್ದರೆ, ತನ್ನ ಕತೆ ಮುಗಿದ ಹಾಗೆಯೇ. ಅವನಿಗೆ ಈಗ ತಿಳಿದಿರೋದೆ ಸತ್ಯ ಎಂದು ನಂಬಿದರೆ, ಅವನು ಕಳುಹಿಸುವ ನೂರು ಫ್ರ್ಯಾಂಕ್‌ಗಳನ್ನು ನಿಲ್ಲಿಸಿದರೂ ತಪ್ಪಿಲ್ಲ. ದಿನದಿನಕ್ಕೆ ಅವನ ಪರಿಸ್ಥಿತಿ ಹದಗೆಡುತ್ತಲೇ ಇದೆ. ಡ್ರಾಯಿಂಗ್‌ಗೆ ಬೇಕಾದ ವಸ್ತುಗಳನ್ನು, ಬಣ್ಣಗಳನ್ನು ಕೊಳ್ಳುವುದು ಅವನ ಕೈಗೆ ಎಟುಕುವುದೇ ಅಸಾಧ್ಯ.

ಥಿಯೋ ಅವನು ಮಾಡಿದ್ದು ಸರಿಯಿಲ್ಲವೆಂದು ಹೇಳಿದನೇ ಹೊರತಾಗಿ, ದೂಷಿಸಲಿಲ್ಲ. ಚೆನ್ನಾಗಿ ಬುದ್ಧಿ ಹೇಳಿದ.

ತಾನು ಹೇಳಿದಂತೆ ಕೇಳದಿದ್ದರೆ, ಹಣ ನಿಲ್ಲಿಸಿಬಿಡುತ್ತೇನೆ ಎನ್ನುವ ಸೂಚನೆ ಎಲ್ಲಿಯೂ ಕಾಣಲಿಲ್ಲ. ಅವನ ರೀತಿ ಥಿಯೋಗೆ ಅಸಮಾಧಾನ ಉಂಟು ಮಾಡಿದ್ದರೂ, ಎಂದಿನಂತೆಯೇ ಹಣ ಕಳಿಸುವುದಾಗಿ ಭರವಸೆ ನೀಡಿದ್ದ,

ಮೇ ತಿಂಗಳ ಆರಂಭದ ದಿನಗಳು. ಲೇಡನ್ ಆಸ್ಪತ್ರೆಯ ಡಾಕ್ಟರ್, ಕ್ರಿಸ್ಟೀನ್‌ಳಿಗೆ ಜೂನ್ ತಿಂಗಳಲ್ಲಿ ಹೆರಿಗೆಯಾಗಬಹುದೆಂದು ಹೇಳಿದ್ದರು. ಹೆರಿಗೆ ಆಗುವವರೆಗೆ ಮತ್ತು ಹೆರಿಗೆ ನಂತರವೂ ಕ್ರಿಸ್ಟೀನ್ ತನ್ನ ಜೊತೆ ಇರುವುದು ಸರಿಯಲ್ಲ ಎನಿಸಿ, ಅಲ್ಲಿವರೆಗೆ ಷೆಂಕ್‌ವೆಗ್ ಮನೆಯನ್ನು ಬಾಡಿಗೆಗೆ ಬಿಡುವುದೆಂದು ಯೋಚಿಸಿದ. ಕ್ರಿಸ್ಟೀನ್‌ಳಂತೂ ಹೆಚ್ಚು ಕಡಿಮೆ ಸ್ಟುಡಿಯೋದಲ್ಲೇ ಇದ್ದುಬಿಡುತ್ತಿದ್ದಳು. ಅವಳ ಸಾಮಾನೆಲ್ಲ ತಾಯಿ ಮನೆಯಲ್ಲಿ ಇತ್ತು. ಅವಳು ಸುಧಾರಿಸಿಕೊಂಡು ಚೆನ್ನಾಗಿ ಆದ ಮೇಲೆ ಅಧಿಕೃತವಾಗಿ ಅವಳೊಂದಿಗೆ ಮದುವೆ ಆಗಬೇಕಿತ್ತು.

ಕ್ರಿಸ್ಟೀನ್‌ಳ ಹೆರಿಗೆಗೆಂದು ಅವಳನ್ನು ಕರೆದುಕೊಂಡು ವಿನ್ಸೆಂಟ್ ಲೇಡನ್‌ಗೆ ಹೋದ. ರಾತ್ರಿ ಒಂದು ಗಂಟೆವರೆಗೆ ಹೆರಿಗೆ ಆಗಲೇ ಇಲ್ಲ. ಫೋರ್‌ಸೆಪ್ಸ್ ಹಾಕಿ ಮಗೂನ ತೆಗೀಬೇಕಾಯಿತು. ಅದೃಷ್ಟಕ್ಕೆ ಮಗೂಗೆ ಏನೂ ಆಗಲಿಲ್ಲ. ಕ್ರಿಸ್ಟೀನ್ ಹೆರಿಗೆ ನೋವನ್ನು ವಿಪರೀತ ಅನುಭವಿಸಿದಳಾದರೂ ವಿನ್ಸೆಂಟ್‌ನನ್ನು ಕಾಣುತ್ತಿದ್ದಂತೆ ನೋವನ್ನು ಮರೆತಳು.

“ಆದಷ್ಟು ಬೇಗ ಡ್ರಾಯಿಂಗ್ ಕೆಲಸ ಶುರುಮಾಡೋಣ. ವಿನ್ಸೆಂಟ್ ಭಾವುಕನಾಗಿ ಕಣ್ಣಲ್ಲಿ ನೀರು ತುಂಬಿಕೊಂಡು ಅವಳನ್ನು ಮತ್ತು ಮಗುವನ್ನು ನೋಡುತ್ತಾ ನಿಂತ.

ಮಗುವಿನ ತಂದೆ ಯಾರಾದರೇನು? ಅವಳು ಮಾತ್ರ ನನ್ನ ಹೆಂಡತಿ. ಹೃದಯದಲ್ಲಿ ಒಂದು ಥರಾ ನೋವು ಇದ್ದರೂ ಅವನಿಗೆ ಸಂತೋಷವೆನಿಸಿತು.

ಷೆಂಕ್‌ವೇಗ್ ಮನೆಗೆ ಬಂದಾಗ, ಮನೆ ಮುಂದೆ ಮನೆಯ ಮಾಲಿಕ ಮತ್ತು ಟಿಂಬರ್‌ಯಾರ್ಡಿನ ಮಾಲಿಕ ಇಬ್ಬರೂ ನಿಂತಿದ್ದರು.

"ಮಿಜ್ನಹೀರ್ ವಾನ್‌ಗೋ, ಆ ಇನ್ನೊಂದು ಮನೇನ ಯಾಕೆ ತಗೋಬಾರದು? ಕೇವಲ ಎಂಟು ಫ್ರ್ಯಾಂಕ್ ಬಾಡಿಗೆ ಅಷ್ಟೇ! ಎಲ್ಲಾ ಕ್ಲೀನ್ ಮಾಡಿಸಿ, ನೀನು ಹೇಳುವಂತಹ ವಾಲ್ ಪೇಪರ್ ಹಾಕಿಸಿ ಕೊಡ್ತೇನೆ."

"ಈಗಲೇ ಆಗೊಲ್ಲ. ನನ್ನ ಹೆಂಡತಿ ಮನೆಗೆ ಬಂದ ಮೇಲೆ ಬೇಕಾದರೆ ಆ ಮನೆ ತಗೊಳ್ಳೋ ವಿಚಾರ ಮಾಡೋಣ. ನನ್ನ ತಮ್ಮನಿಗೆ ಮೊದಲು ಬರೆದು ತಿಳಿಸಬೇಕು."

"ನೀನು ತಗೊಳ್ಳದೆ ಇದ್ದರೂ ಪರವಾಗಿಲ್ಲ. ವಾಲ್ ಪೇಪರ್‌ನ, ಚೆನ್ನಾಗಿರೋದನ್ನು ಆರಿಸಿಕೊಡು. ಅದನ್ನೆಲ್ಲ ಹಾಕಿಸಿ ಬಿಡ್ತೇನೆ."

ಈಗಿರೋ ಮನೆ ಪಕ್ಕದಲ್ಲಿದ್ದ ಮನೆ ಬಗ್ಗೆ, ಥಿಯೋ ಕೇಳಿಸಿಕೊಳ್ಳುತ್ತಲೇ ಇದ್ದ. ಅದು ಸಾಕಷ್ಟು ದೊಡ್ಡದಾಗಿತ್ತು. ಸ್ಟುಡಿಯೋ, ಮನೆ– ಎಲ್ಲಾ ಒಂದೇ ಕಡೆ ಮಾಡಿಕೊಳ್ಳಲು ಸಾಧ್ಯವಿತ್ತು. ವಾಸದ ಕೋಣೆ ಅಡಿಗೆಮನೆ, ರೂಮು, ಹಳೆ ಸಾಮಾನು ಇಡೋಕೆ ಜಾಗ, ಎಲ್ಲಾ ಇತ್ತು ಈಗ ಕೊಡುತ್ತಿರುವ ಬಾಡಿಗೆಗಿಂತ ನಾಲ್ಕು ಫ್ರ್ಯಾಂಕ್ ಮಾತ್ರವೇ ಕೊಡಬೇಕಾಗಿದೆ. ಇನ್ನೇನು ಕ್ರಿಸ್ಟೀನಳೂ ಬರ್ತಾಳೆ. ಅವಳ ಜೊತೆ ಹೆರ್‌ಮನ್, ಪುಟ್ಟ ಮಗು ಎಲ್ಲರೂ ಬರ್ತಾರೆ. ಜಾಗಾನೂ ಬೇಕಾಗುತ್ತೆ. ಥಿಯೋಗೆ ಸಂಬಳದಲ್ಲಿ ಬಡ್ತಿ ಸಿಕ್ಕಿತ್ತು. ಆದ್ದರಿಂದ ವಿನ್ಸೆಂಟ್ ಕೂಡಾ ಸ್ವಲ್ಪ ಹೆಚ್ಚಿಗೆ ಹಣ ಪಡೆಯಲು ಸಾಧ್ಯ. ಥಿಯೋನಿಂದ, ನೂರೈವತ್ತು ಫ್ರ್ಯಾಂಕ್‌ಗಳು ಇನ್ನು ಮುಂದೆ ಕಳಿಸುವ ಭರವಸೆ ಸಿಕ್ಕಿತು. ಇನ್ನೇನು ಒಂದು ವಾರದಲ್ಲಿ ಕ್ರಿಸ್ಟೀನ್ ವಾಪಸ್ ಬರ್ತಾಳೆ. ಅವಳು ಬರುವ ಹೊತ್ತಿಗೆ, ಅವಳಿಗೆ ಬೆಚ್ಚನೆಯ ಗೂಡೊಂದನ್ನು ನೀಡಬೇಕೆಂದು ಹಾತೊರೆಯುತ್ತಿದ್ದ. ಮನೆ ಮಾಲಿಕ ಇಬ್ಬರು ಆಳುಗಳನ್ನು ಕಳಿಸಿ ಸಾಮಾನು ಸಾಗಿಸಲು ಸಹಾಯ ಮಾಡಿದ. ಕ್ರಿಸ್ಟೀನ್‌ಳ ತಾಯಿಯೂ ಬಂದು ಸಾಮಾನನ್ನೆಲ್ಲಾ ಒಪ್ಪ ಓರಣವಾಗಿ ಜೋಡಿಸಿಕೊಟ್ಟಳು.

## –೧೦–

ಹೊಸ ಸ್ಟುಡಿಯೋ ತುಂಬಾ ಚೆನ್ನಾಗಿ ಕಾಣಿಸುತ್ತಿತ್ತು. ಬೂದು ಮತ್ತು ಕಂದು ಬಣ್ಣ ಮಿಶ್ರಿತ ವಾಲ್ ಪೇಪರ್‌ನಿಂದ ಗೋಡೆಗಳು ಅಲಂಕೃತಗೊಂಡಿದ್ದವು. ಚೆನ್ನಾಗಿ ಪಾಲಿಶ್ ಆಗಿ ಹೊಳೆ ಹೊಳೆಯುತ್ತಿದ್ದ ವುಡನ್ ಫ್ಲೋರ್. ಒಂದು ಕಡೆಗೆ ಟೇಬಲ್. ಮತ್ತೊಂದು ಕಡೆ ಈಸಲ್. ಗೋಡೆಗಳ ಮೇಲೆ ವಿನ್ಸೆಂಟ್‌ನ ಕಲಾಕೃತಿಗಳು ರಂಜಿಸಿದ್ದವು. ಕ್ರಿಸ್ಟೀನ್‌ಳ ತಾಯಿ ಕಿಟಕಿಗಳಿಗೆ ಬಿಳಿಯ ಮಸ್ಲಿನ್ ಪರದೆಗಳನ್ನು ಇಳಿಬಿಟ್ಟಳು. ಸ್ಟುಡಿಯೋಗೆ ಸೇರಿದಂತೆ ಇದ್ದ ಕೋಣೆಯಲ್ಲಿ ವಿನ್ಸೆಂಟ್ ತನ್ನ ಡ್ರಾಯಿಂಗ್ ಬೋರ್ಡುಗಳು,

ಪೋರ್ಟ್‌ಫೋಲಿಯೋ, ವುಡ್‌ಕಟ್ಸ್ ಎಲ್ಲವನ್ನೂ ಇರಿಸಿದ್ದ. ರಾಶಿ ಬಿದ್ದಿದ್ದವು. ವಾಸದ ಕೋಣೆಯಲ್ಲಿ ಒಂದು ಟೇಬಲ್ಲು, ಕಿಚನ್ ಚೇರುಗಳು, ಒಂದು ಸ್ಟೊವ್ ಮತ್ತು ಕಿಟಕಿಗೆ ಸೇರಿದಂತೆ, ಕ್ರಿಸ್ಟೀನ್‌ಗಾಗಿ ಒಂದು ಕುರ್ಚಿ ಇತ್ತು. ಅದರ ಪಕ್ಕದಲ್ಲಿ ಹಸಿರು ಬಣ್ಣದ ಹೊದಿಕೆಯಿದ್ದ ಮಗುವಿನ ತೊಟ್ಟಿಲೊಂದಿತ್ತು. ಸಮೀಪದಲ್ಲಿಯೇ ರ್‍ಯಾಮ್‌ಬ್ರಾಂಟ್‌ನ ಕೆತ್ತನೆಯ ಚಿತ್ರವೊಂದಿತ್ತು. ಅದರಲ್ಲಿ ತೊಟ್ಟಿಲಿನ ಬಳಿ ಇಬ್ಬರು ಹೆಂಗಸರು ನಿಂತಿದ್ದರು. ಒಬ್ಬಳು ಬೈಬಲನ್ನು ಕ್ಯಾಂಡಲ್‌ನ ಬೆಳಕಿನಲ್ಲಿ ಓದುತ್ತಿದ್ದಳು.

ಅಡಿಗೆ ಮನೆಗೆ ಅಗತ್ಯವಾದ ಎಲ್ಲ ಸಾಮಾನನ್ನೂ ತಂದ. ಕ್ರಿಸ್ಟೀನ್ ಬರುತ್ತಲೇ ಹತ್ತು ನಿಮಿಷದಲ್ಲಿ ಅಡಿಗೆ ತಯಾರಾಗುವಂತಹ ರೀತಿಯಲ್ಲಿ ವ್ಯವಸ್ಥೆ ಮಾಡಿದ್ದ. ಚಮಚೆ, ಚಾಕು, ಪಾತ್ರೆ, ಪರಡಿ, ಊಟದ ತಟ್ಟೆ ಎಲ್ಲವನ್ನೂ ತಂದಿರಿಸಿದ್ದ. ಥಿಯೋ ಬಂದಾಗ, ತಮಗೆ ಯಾವುದೇ ಕೊರತೆಯಿಲ್ಲ ಎನ್ನುವಂತಿರಬೇಕೆಂದು ಭಾವಿಸಿದ್ದ. ಅಟ್ಟದ ಮೇಲೆ ತನಗೆ ಮತ್ತು ತನ್ನ ಹೆಂಡತಿಗೆಂದು ದೊಡ್ಡದೊಂದು ಹಾಸಿಗೆ ಇರಿಸಿದ್ದ. ಹಳೆಯ ಹಾಸಿಗೆಯನ್ನೇ ಹೆರಮನ್‌ಗೆಂದು ಸಿದ್ಧಪಡಿಸಿದ. ಹುಲ್ಲು ಅದೂ ಇದು ತುಂಬಿ ಒಳ್ಳೆಯ ಹಾಸಿಗೆಯನ್ನು ಮಾಡಿದ.

ಕ್ರಿಸ್ಟೀನ್, ಹಾಸ್ಪಿಟಲ್‌ನಿಂದ ಹೊರಡುವಾಗ ಡಾಕ್ಟರ್, ನರ್ಸ್, ಹೆಡ್‌ನರ್ಸ್ ಎಲ್ಲರಿಂದ ಬೀಳ್ಕೊಂಡಳು. ಮನೆಗೆ ಬರುವ ಸಂಭ್ರಮ! ಆದರೆ ವಿನ್ಸೆಂಟ್, ಹೊಸ ಮನೆಯ ವಿಚಾರವನ್ನೇನೂ ಹೇಳಿರಲಿಲ್ಲ. ಕ್ರಿಸ್ಟೀನ್‌ಳ ಸಂತೋಷಕ್ಕೆ ಎಣೆಯಿಲ್ಲದಂತಾಯಿತು. ಮನೆತುಂಬ ಓಡಾಡಿದಳು. ಅಲ್ಲಿನ ಪ್ರತಿಯೊಂದು ವಸ್ತುವನ್ನೂ, ತೊಟ್ಟಿಲನ್ನೂ ಮುಟ್ಟಿಮುಟ್ಟಿ ಸಂಭ್ರಮಿಸಿದಳು. ಅವಳಂತೂ ಸಂತೋಷಾತಿರೇಕದ ಉತ್ತುಂಗದಲ್ಲಿದ್ದಳು.

ಪ್ರೊಫೆಸರ್ ಒಂದು ಥರಾ ತಮಾಶೆ ವ್ಯಕ್ತಿ. ಆತ ಕೇಳಿದ – "ಏನಮ್ಮ ನೀನು ಜಿನ್, ಬಿಟ್ಟರ್ಸ್, ಸಿಗಾರ್ಸ್ ಎಲ್ಲಾ ತಗೋತಿಯೇನು?" ನಾನು ಹೇಳಿದೆ –"ಹೌದು." "ಹಾಗಾದರೆ, ಅದನ್ನೆಲ್ಲ ಬಿಟ್ಟುಬಿಡಬೇಕಾದ ಅಗತ್ಯ ಇಲ್ಲ. ಧೈರ್ಯವಾಗಿ ತಗೋಬಹುದು. ಆದರೆ ವಿನಿಗರ್, ಪೆಪ್ಪರ್, ಮಸ್ಟರ್ಡ್ ಇದನ್ನೆಲ್ಲ ತಗೋಬಾರದು. ವಾರಕ್ಕೊಮ್ಮೆಯಾದರೂ ಮಾಂಸ ತಿನ್ನಬೇಕು" ಅಂತ ಹೇಳಿದ.

ಬೆಡ್‌ರೂಮಂತೂ ಹಡಗಿನಲ್ಲಿ ಮರದ ಹಲಗೆಗಳಿಂದ ಮಾಡಿದ ಕೋಣೆಯಂತಿತ್ತು. ಪ್ರತಿದಿನ, ವಿನ್ಸೆಂಟ್ ಕಬ್ಬಿಣದ ತೊಟ್ಟಿಲನ್ನು ರಾತ್ರಿ ಮೇಲಕ್ಕೆ ಎತ್ತಿಕೊಂಡು ಹೋಗುತ್ತಿದ್ದ. ಬೆಳಗಿನ ಹೊತ್ತು ವಾಸದ ಕೋಣೆಗೆ ಇಳಿಸಿಕೊಂಡು ಬರುತ್ತಿದ್ದ. ಕ್ರಿಸ್ಟೀನ್‌ಗೆ ಇನ್ನೂ ಕೆಲಸ ಮಾಡುವುದಕ್ಕೆ ಆಗುತ್ತಿರಲಿಲ್ಲ. ಮನೆಕೆಲಸ, ಅಡಿಗೆ ಕೆಲಸ, ಹಾಸಿಗೆ ಸರಿಮಾಡೋದು, ಸ್ಟೊವ್ ಹಚ್ಚೋದು ಬೆಂಕಿಗೂಡನ್ನು ಸರಿಯಾಗಿರಿಸಿಕೊಳ್ಳೋದು, ಕ್ಲೀನ್ ಮಾಡೋದು– ಹೀಗೆ ಎಷ್ಟೋ ಕೆಲಸಗಳು ಅವನ ಹೆಗಲ ಮೇಲಿತ್ತು. ಆದರೂ ಎಷ್ಟೋ ವರ್ಷಗಳ ಸಂಬಂಧವೆಂಬಂತೆ ಬಹಳ ಖುಷಿಯಲ್ಲಿದ್ದೇ ಮಾಡುತ್ತಿದ್ದ. ಆಪರೇಷನ್ ಮಾಡಿದ್ದರಿಂದ ಕ್ರಿಸ್ಟೀನ್‌ಗೆ ತುಂಬ ಕಷ್ಟ ಎನಿಸಿದರೂ, ಹೊಸ ಜೀವನೋತ್ಸಾಹವನ್ನು ತುಂಬಿಕೊಂಡಿದ್ದಳು.

ವಿನ್ಸೆಂಟ್ ಬಹಳ ಗೆಲುವಾಗಿದ್ದ. ಮನಸ್ಸಿನಲ್ಲಿ ಉತ್ಸಾಹ ತುಂಬಿಕೊಂಡು ಕೆಲಸಕ್ಕೆ ಅಣಿಯಾದ. ಮನೆಯಲ್ಲಿ, ಪ್ರೀತಿಸುವ ಮಂದಿ – ಸದ್ದು ಗದ್ದಲ – ಓಡಾಟ– ಜೊತೆಗೆ ಬೆಚ್ಚಗಿರಿಸಿಕೊಳ್ಳಲು ಬೆಂಕಿಗೂಡು – ಇದೆಲ್ಲವೂ ಅವನಿಗೆ ಹಿತವೆನಿಸಿತು. ಕ್ರಿಸ್ಟೀನ್ ಅವನಿಗೆ ಧೈರ್ಯ ತುಂಬುತ್ತಿದ್ದಳು. ಸಾಕಷ್ಟು ಪ್ರೋತ್ಸಾಹ ಕೊಡುತ್ತಿದ್ದಳು; ಹುರಿದುಂಬಿಸುತ್ತಿದ್ದಳು. ಇದೆಲ್ಲವೂ ದೊರೆತಾಗ, ಥಿಯೋ ಕೈಬಿಡದೆ ತನಗೆ ಹಣದ ಸಹಾಯ ಮುಂದುವರೆಸಿದರೆ ತಾನು ಒಬ್ಬ ಒಳ್ಳೆಯ ಪೈಂಟರ್ ಆಗುವುದರಲ್ಲಿ ಅನುಮಾನವೇ ಇಲ್ಲ ಎಂದುಕೊಂಡ.

ಬೋರಿನೇಜ್‌ನಲ್ಲಿ ದೇವರಿಗಾಗಿ ದುಡಿದ. ಆದರೆ ಇಲ್ಲಿ ಇನ್ನೊಂದು ಬಗೆಯ ದೇವರು!– ಹೇಳಬೇಕೆಂದರೆ ಒಬ್ಬ ಶ್ರಮಜೀವಿ, ಉತ್ತ ಭೂಮಿಯಲ್ಲಿ ಮೂಡಿದ ಮಣ್ಣಿನ ಗೆರೆಗಳು; ಒಂದಿಷ್ಟು ಮರಳು; ಸಮುದ್ರ, ಆಕಾಶ – ಇವೆಲ್ಲ ಗಂಭೀರವಾದ ವಿಷಯಗಳು. ಆದರೂ ತುಂಬಾ ಸುಂದರ. ಅವುಗಳಲ್ಲಿ ಅಡಗಿರುವ ಕಾವ್ಯವನ್ನು ನನ್ನ ಕಲಾಕೃತಿಗಳಲ್ಲಿ ಮೂಡಿಸಲು ಜೀವನವನ್ನೇ ಮುಡಿಪಾಗಿಟ್ಟರೂ ಸಾರ್ಥಕವೆನಿಸುತ್ತದೆ.

ಒಂದು ಮಧ್ಯಾಹ್ನ ಡೂನ್ಸ್‌ನಿಂದ ಹಿಂತಿರುಗಿ ಬಂದಾಗ ಟರ್ಸ್‌ಟೀಗ್ ಷೆಂಕ್‌ವೆಗ್ ಮನೆ ಮುಂದೆ ನಿಂತಿದ್ದನ್ನು ನೋಡಿದ.

"ನಿನ್ನ ನೋಡಿ ತುಂಬಾ ಸಂತೋಷ ಆಯ್ತು ವಿನ್ಸೆಂಟ್. ನೀನು ಹೇಗಿದ್ದೀಯಾಂತ ನೋಡಿ ಹೋಗೋಣವೆಂದು ಬಂದೆ" – ಎಂದು ಟರ್ಸ್‌ಟೀಗ್ ಮಾತನಾಡಿಸಿದ.

ವಿನ್ಸೆಂಟ್‌ಗೆ, ಟರ್ಸ್‌ಟೀಗ್ ಮಹಡಿ ಹತ್ತಿ ಹೋದರೆ, ವಿಷಯ ತಿಳಿದು ದೊಡ್ಡ ರಾದ್ಧಾಂತ ಮಾಡಿಬಿಡಬಹುದೆಂಬ ಭಯ ಉಂಟಾಯಿತು. ಧೈರ್ಯ ತಂದುಕೊಳ್ಳೋಕೆ, ಅವನನ್ನು ಬೀದಿಯಲ್ಲಿ ನಿಲ್ಲಿಸಿಕೊಂಡೇ ಸ್ವಲ್ಪಹೊತ್ತು ಮಾತನಾಡಿಸಿದ. ಟರ್ಸ್‌ಟೀಗ್ ಸ್ನೇಹದಿಂದ, ಗೆಲುವಿನಿಂದಲೇ ಮಾತನಾಡಿಸಿದ. ಆದರೂ ವಿನ್ಸೆಂಟ್‌ಗೆ ಒಳಗೊಳಗೇ ಭೀತಿಯ ಚಳಿ!

ಇಬ್ಬರೂ ಒಳಗೆ ಪ್ರವೇಶಿಸಿದಾಗ, ಕ್ರಿಸ್ಟೀನ್ ಬೆತ್ತದ ಕುರ್ಚಿಯಲ್ಲಿ ಕುಳಿತು ಮಗುವನ್ನು ಆಡಿಸುತ್ತಿದ್ದಳು. ಸ್ಟೋವ್ ಸಮೀಪದಲ್ಲಿ ಕುಳಿತು ಹೆರ್‌ಮನ್ ಆಡುತ್ತಿದ್ದ. ಟರ್ಸ್‌ಟೀಗ್ ಅವರನ್ನೇ ಸಾಕಷ್ಟು ಹೊತ್ತು ಗಮನಿಸಿದ. ಇಂಗ್ಲಿಷಿನಲ್ಲಿ ವಿನ್ಸೆಂಟ್‌ನನ್ನು ಮಾತನಾಡಿಸಿದ.

"ಆ ಹೆಂಗಸು, ಮಗು...... ಇದೆಲ್ಲ ಏನು?"

"ಕ್ರಿಸ್ಟೀನ್ ನನ್ನ ಹೆಂಡತಿ. ಮಗು ನಮ್ಮದು."

"ಅವಳನ್ನು ನಿಜವಾಗಿಯೂ ಮದುವೆಯಾಗಿದ್ದೀಯ?"

"ನಿಮ್ಮ ಅರ್ಥದಲ್ಲಿ ವಿಧಿವತ್ತಾಗಿ ಅನ್ನುವುದಾದರೆ..... ಇನ್ನೂ ಇಲ್ಲ."

"ಒಬ್ಬ ಹೆಂಗಸು...... ಮಕ್ಕಳು. ಅದೂ.... ಇಂಥವರ ಜೊತೆ ಇರೋಕಾದರೂ ನಿನಗೆ ಹೇಗೆ ಸಾಧ್ಯವಾಯಿತು?"

"ಗಂಡಸರು ಸಾಮಾನ್ಯವಾಗಿ ಮದುವೆ ಆಗ್ತಾರೆ, ಹೌದಲ್ಲ?"

"ಆದರೆ ನಿನ್ನ ಹತ್ತಿರ ದುಡ್ಡೆಲ್ಲಿದೆ? ನಿನ್ನ ತಮ್ಮ ನಿನಗೆ ಸಹಾಯ ಮಾಡ್ತಿದ್ದಾನೆ."

"ಇಲ್ಲ. ನನಗೆ ಸಂಬಳ ಕೊಡ್ತಿದ್ದಾನೆ. ನಾನು ಮಾಡೋದೆಲ್ಲ ಅವನದೇ. ಒಂದಲ್ಲ ಒಂದು ದಿನ ಅವನ ದುಡ್ಡು ಅವನಿಗೆ ವಾಪಸ್ ಬರುತ್ತೆ."

"ನಿನಗೇನು ಹುಚ್ಚು ಹಿಡಿದಿದೆಯೇ ವಿನ್ಸೆಂಟ್? ಇಂಥಾ ಮಾತೆಲ್ಲ ಬರೋದು ತಲೆ ಸರಿ ಇಲ್ಲದವರಿಂದ ಮಾತ್ರ ಸಾಧ್ಯ."

"ಮಿಜ್ನಹೀರ್, ಡ್ರಾಯಿಂಗ್‌ನಷ್ಟೇ ಮನುಷ್ಯನ ಸ್ವಭಾವ, ನಡವಳಿಕೆ ಕೂಡ ಮುಖ್ಯ. ನಾವು ನೋಡುವ ರೀತಿಯಿಂದ, ನಮ್ಮ ದೃಷ್ಟಿ, ಅಭಿಪ್ರಾಯಗಳು ಬದಲಾಗುತ್ತವೆ. ವಸ್ತುವಿನಲ್ಲಿ ಏನೂ ಇರೊಲ್ಲ; ಇರೋದೆಲ್ಲ ನೋಡುವವರ ಕಣ್ಣಲ್ಲಿ."

"ನಾನು ನಿಮ್ಮ ತಂದೆಗೆ, ಇಲ್ಲಿ ನಡೀತಿರೋದಲ್ಲಿ ಬರೆದು ತಿಳಿಸ್ತೀನಿ."

"ನೀವು ಸಿಟ್ಟಾಗಿ ಬರೆಯೋ ಲೆಟರ್, ಅವರಿಗೆ ತಲುಪಿದರೆ ಸುಮ್ಮನೆ ನಗೆಪಾಟಲಿಗೆ ಗುರಿಯಾಗ್ತೀರಿ? ನಾನೇ ಅವರನ್ನು ಇಲ್ಲಿಗೆ ಬರ್ೋಕೆ ಹೇಳ್ತೀನಿ. ಅದೂ ನನ್ನದೇ ಖರ್ಚಿನಲ್ಲಿ!"

"ಅಂದ್ರೆ! ನೀನೇ ಬರೀಬೇಕೂಂತ ಇದ್ದೀಯ ಹೇಗೆ?"

"ಅದನ್ನು ಕೇಳಲೇ ಬೇಕಾಗಿಲ್ಲ. ನಾನೇ ಬರೀತಿದ್ದೀನಿ. ಆದರೆ ಈಗ ಸಂದರ್ಭ ಸರಿಯಿಲ್ಲ. ತಂದೆಯನ್ನ ನೂನೆನ್ ವಿಕಾರೇಜ್‌ಗೆ ಕಳಿಸಲಾಗುತ್ತಿದೆ. ಅಲ್ಲದೆ ನನ್ನ ಹೆಂಡತಿಯ ಆರೋಗ್ಯ ಕೂಡ ತುಂಬ ಸೂಕ್ಷ್ಮವಾಗಿದೆ. ಏನಾದರೂ ಉದ್ವೇಗಕ್ಕೆ ದಾರಿಯಾದರೆ, ಅವಳ ಸಾವು ನಿಶ್ಚಿತ."

"ಆಯ್ತು. ನಾನು ಬರೆಯೋದಿಲ್ಲ. ಆದರೆ, ತನಗೆ ತಾನೇ ಹೋಗಿ ನೀರಲ್ಲಿ ಮುಳುಗಿ ಸಾಯಲು ಬಯಸುವ ಹುಚ್ಚನಂತೆ ಇದ್ದೀಯ!"

"ನಿಮ್ಮ ಮನಸ್ಸು, ಭಾವನೆಗಳು ನನಗೆ ಅರ್ಥವಾಗುತ್ತೆ. ಅದಕ್ಕೇ ನಾನು ನಿಮ್ಮ ಮೇಲೆ ಸಿಟ್ಟಾಗೋದಿಲ್ಲ. ಆದರೆ ನಮ್ಮಿಬ್ಬರ ನಡುವೆ ನಡೆಯುತ್ತಿರುವ ಮಾತುಕತೆ ಯಾಕೋ ಸರಿಯಾಗಿದೆ ಅಂತ ಅನಿಸೊಲ್ಲ."

ಟರ್ಸ್‌ಟೀಗ್ ದಿಗ್ಭ್ರಾಂತನಾಗಿ ಸುಮ್ಮನೆ ಮಾತಿಲ್ಲದೆ ಅಲ್ಲಿಂದ ಹೊರಟ. ತನ್ನ ಬಗ್ಗೆ ಹೊರಗಿನ ಪ್ರಪಂಚಕ್ಕೆ ಮೊದಲು ಪ್ರಚಾರ ಮಾಡಿದ್ದು ವೀಸೆನ್‌ಬ್ರೂಕ್. ಒಂದು ಮಧ್ಯಾಹ್ನ ಸುಮ್ಮನೆ ಹಾಗೆ ಮಾಡೋಕೆ ಬೇರೇನೂ ಕೆಲಸ ಇಲ್ಲದೆ, ವಿನ್ಸೆಂಟ್ ಇನ್ನೂ ಬದುಕಿದ್ದಾನೋ, ಇಲ್ಲವೋ – ಎಂದು ನೋಡೋಕೆ ಬಂದ.

"ಹಲೋ, ಪರವಾಗಿಲ್ಲ. ನೀನು ಕೇಳಿದ ಇಪ್ಪತ್ತೈದು ಫ್ರ್ಯಾಂಕ್‌ಗಳು ಇಲ್ಲದೆಯೇ ಹೇಗೋ ನಿಭಾಯಿಸಿ ಬಿಟ್ಟೆಯಲ್ಲ!"

"ಹೌದು."

"ನಾನು ನಿನಗೆ ಪ್ರೋತ್ಸಾಹ ಕೊಟ್ಟು ಸಹಾಯ ಮಾಡದೆ ಇದ್ದದ್ದರಿಂದ ನಿನಗೆ ಈಗ ಸಂತೋಷ ಆಗಿರಬೇಕಲ್ಲ?"

"'ಮಾವ್ ಮನೆಯಲ್ಲಿ ಆ ದಿನ ರಾತ್ರಿ ನಾನು ಹೇಳಿದ್ದೆನಲ್ಲ...... 'ಹಾಳುಬಿದ್ದು ಹೋಗು' ಅಂತ! ಈಗಲೂ ಅದನ್ನೇ ಹೇಳ್ತಿದ್ದೀನಿ."

"ಇದೇ ರೀತಿ ನೀನು ಮುಂದುವರೆದರೆ, ಮತ್ತೊಬ್ಬ ವೀಸೆನ್‌ಬ್ರೂಕ್ ಆಗ್ತೀಯ. ನಿನ್ನಲ್ಲಿ ಸ್ವತಂತ್ರ ಮನುಷ್ಯನಾಗಿ ರೂಪುಗೊಳ್ಳುವ ಸತ್ವ ಇದೆ. ನಿನ್ನ ಹೆಂಡತಿಗೆ ನನ್ನ ಪರಿಚಯ ಮಾಡಿಸುವುದಿಲ್ಲವೇನು? ಅವಳನ್ನು ಕಾಣುವ ಅದೃಷ್ಟ ನನಗಿರಲಿಲ್ಲ."

"ವೀಸೆನ್‌ಬ್ರೂಕ್, ನನ್ನನ್ನು ಎಷ್ಟು ಬೇಕಾದರೂ ಹಿಯಾಳಿಸು. ಆದರೆ ಅವಳನ್ನು ಅವಳ ಪಾಡಿಗೆ ಬಿಟ್ಟುಬಿಡು. ಅವಳ ತಂಟೆಗೆ ಹೋಗಬೇಡ."

ಕ್ರಿಸ್ಟೀನ್ ತೊಟ್ಟಿಲು ತೂಗುತ್ತಿದ್ದಳು. ತನ್ನನ್ನೂ ಲೇವಡಿ ಮಾಡಲಾಗುತ್ತಿದೆ. ಅನ್ನುವುದು, ಅವಳಿಗೆ ಅರ್ಥವಾಯಿತು. ಮುಖದ ಮೇಲೆ ನೋವನ್ನು ತಂದುಕೊಂಡು ವಿನ್ಸೆಂಟನತ್ತ ನೋಡಿದಳು. ವಿನ್ಸೆಂಟ್ ಹೋಗಿ ತಾಯಿ, ಮಗುವಿಗೆ ಅಡ್ಡಲಾಗಿ ನಿಂತ. ವೀಸೆನ್ ಬ್ರೂಕ್, ಮೂರೂ ಜನರನ್ನು ಒಟ್ಟಿಗೆ ನೋಡಿದ. ಹಿಂದೆ ರ್‍ಯಾಮ್‌ಬ್ರಾಂಟ್‌ನ ಎಚ್ಚಿಂಗ್ ಅನ್ನೂ ನೋಡಿದ.

"ಪರವಾಗಿಲ್ಲ. ಅವರನ್ನು ರಕ್ಷಿಸಬೇಕೂಂತ ಇದ್ದೀಯ. 'ಪವಿತ್ರ ಕುಟುಂಬ'!"

ವಿನ್ಸೆಂಟ್ ವೀಸೆನ್‌ಬ್ರೂಕ್‌ನ ಮುಗಿಸಿಬಿಡುವಷ್ಟು ರೋಷದಿಂದ ಎದ್ದ. ಆದರೆ ಅವನು ಅಷ್ಟು ಹೊತ್ತಿಗೆ ಸುರಕ್ಷಿತವಾಗಿ ಬಾಗಿಲು ದಾಟಿ ಹೊರಟುಬಿಟ್ಟಿದ್ದ. ರ್‍ಯಾಮ್‌ಬ್ರಾಂಟ್‌ನ ಚಿತ್ರಕೃತಿ ಪಕ್ಕದಲ್ಲಿ ಒಂದು ಸಣ್ಣ ಕನ್ನಡಿ ಇತ್ತು. ಆ ಕನ್ನಡಿಯಲ್ಲಿ ಮೂವರ ಪ್ರತಿಫಲನ ನೋಡಿದ. ಯಾವುದೋ ಒಂದು ದರಿದ್ರ ಕ್ಷಣದಲ್ಲಿ, ಸ್ಪಷ್ಟವಾಗಿ, ವಿನ್ಸೆಂಟ್ ಬ್ರೂಕ್‌ನ ಕಣ್ಣುಗಳಿಂದ ನೋಡಿದ..... ಸೂಳೆಗೆ ಹುಟ್ಟಿದ ಮಗು...... ಸೂಳೆ..... ಭಿಕ್ಷುಕ.

"ಅವನು ಏನೆಂದ?"

"ಪವಿತ್ರ ಕುಟುಂಬ."

"ಅಂದ್ರೇನು?"

"ಮೇರಿ, ಜೋಸೆಪ್, ಜೀಸಸ್."

ಅವಳ ಕಣ್ಣು ತುಂಬಿ ಬಂತು. ಮಗುವಿನ ಬಟ್ಟೆಗಳ ಮಧ್ಯೆ ಮುಖ ಹುದುಗಿಸಿದಳು. ವಿನ್ಸೆಂಟ್ ಹೋಗಿ ಅವಳ ಪಕ್ಕದಲ್ಲಿ ಕುಳಿತು ಸಮಾಧಾನ ಮಾಡತೊಡಗಿದ. ಸಂಜೆ ಆಗುವುದರಲ್ಲಿತ್ತು. ಮತ್ತೊಮ್ಮೆ ವಿನ್ಸೆಂಟ್ ತನ್ನನ್ನು ಪ್ರತ್ಯೇಕಿಸಿಕೊಂಡು ಕನ್ನಡಿಯಲ್ಲಿನ ಮೂವರನ್ನೂ ನೋಡಿದ. ಈ ಬಾರಿ ತನ್ನ ಅಂತಃ ಚಕ್ಷುಗಳಿಂದ ನೋಡಿದ.

"ಅಳಬೇಡ ಸಿಯೆನ್, ತಲೆ ಎತ್ತಿ ಕಣ್ಣೊರೆಸಿಕೋ......."

"ವೀಸೆನ್‌ಬ್ರೂಕ್ ಹೇಳಿದ್ದು ಸರಿಯೇ!"

## -೧೧-

ವಿನ್ಸೆಂಟ್ ಷೆವ್‌ನೆಂಜೆನ್ ಮತ್ತು ಆಯಿಲ್ ಪೈಂಟಿಂಗ್ (ತೈಲವರ್ಣ ಚಿತ್ರಗಳು)ಗಳ ಬಗ್ಗೆ ಶೋಧ ನಡೆಸಿದ. ಷೆವೆನಿಂಜೆನ್ ಉತ್ತರಸಮುದ್ರದ ಮೇಲೆ ಎರಡು ಮರಳು ದಿಬ್ಬಗಳ ನಡುವಿನ ಕಣಿವೆಯಲ್ಲಿರುವ ಒಂದು ಪುಟ್ಟ ಹಳ್ಳಿ. ದಂಡೆಯ ಮೇಲೆ

ಮೀನುಗಾರರೂ ಮೀನುಹಿಡಿಯುವ ದೋಣಿಗಳು, ಹಾಯಿಪಟಗಳೊಂದಿಗೆ ಸಾಲುಗಟ್ಟಿ ನಿಂತಿದ್ದವು. ಹಿಡಿದ ಮೀನುಗಳನ್ನು ತುಂಬಿಕೊಂಡು ಹೋಗಲು ಕೆಂಪುಚಕ್ರಗಳ ನೀಲಿ ಗಾಡಿಗಳು ಸಿದ್ಧವಾಗಿದ್ದವು. ಬೆಸ್ತರ ಹೆಂಗಸರು ತಲೆ ಮೇಲೆ, ಮುಂದುಗಡೆ ಎರಡು ಚಿನ್ನದ ಪಿನ್ನುಗಳೊಂದಿಗೆ ಟೋಪಿಗಳನ್ನಿರಿಸಿಕೊಂಡಿದ್ದರು. ಮನೆ ಮಂದಿ ಬರುವ ದೋಣಿಗಳನ್ನು ಬರಮಾಡಿಕೊಳ್ಳಲು ಅಣಿಯಾಗಿ ನಿಂತಿದ್ದರು. ಬೂದು ಬಣ್ಣದ ಸಮುದ್ರದ ದಂಡೆಯಲ್ಲಿ ಬಿಳಿಟೋಪಿಧಾರರು. ಹಸಿರು ಬಣ್ಣದ ಕಾಂತಿ, ಮಸುಕು ನೀಲಿಗೆ ತಿರುಗುತ್ತಿತ್ತು. ಆಕಾಶದಲ್ಲಿ ವಿವಿಧ ವಿನ್ಯಾಸಗಳಲ್ಲಿ ಕಂಗೊಳಿಸಿದ್ದ ಮೋಡಗಳು. ಷೆವೆನಿಂಜೆನ್‌ನಲ್ಲಿ ಜನ ದುಡಿಯುತ್ತಿದ್ದರು. ಇಲ್ಲಿನ ವಾತಾವರಣ. ಪೂರ್ತಿ ದೇಶೀಯವಾಗಿತ್ತು. ಮಣ್ಣು, ಸಮುದ್ರ, ಜನ ಎಲ್ಲವೂ ದೇಶೀಯ!

ವಿನ್ಸೆಂಟ್, ನೋಡಿದ ಕೂಡಲೇ ಆಕರ್ಷಕವೆನಿಸುವ ಜಲವರ್ಣಗಳಲ್ಲಿ ಬೀದಿ ದೃಶ್ಯಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ರಚಿಸಿದ. ಈ ಮಾಧ್ಯಮ ಅವನಿಗೆ ತೃಪ್ತಿ ನೀಡಿತ್ತು. ಆದರೆ ಜಲವರ್ಣಗಳಲ್ಲಿ ಅವನು ಹೇಳಬೇಕೆಂದು ಬಯಸುವ ಭಾವಗಳನ್ನು ಮೂಡಿಸಲು ಸಾಧ್ಯವಾಗುತ್ತಿರಲಿಲ್ಲ. ತೈಲವರ್ಣಗಳಲ್ಲಿ ಮಾಡುವುದಕ್ಕೆ ಇಷ್ಟವಾದರೂ ಅವನಿಗೆ ಭಯ. ಎಷ್ಟೋ ಮಂದಿ ಕಲಾವಿದರು. ಆರಂಭದಲ್ಲಿಯೇ ತೈಲವರ್ಣಗಳ ಕಡೆಗೆ ಒಲಿದು ಸೋತಿದ್ದರು.

ಇದೇ ಸಮಯದಲ್ಲಿ ಥಿಯೋ ಆಗಮಿಸಿದ. ಇಪ್ಪತ್ತಾರು ವಯಸ್ಸಿನ ಥಿಯೋ ಈಗಾಗಲೇ ಆರ್ಟ್‌ಡೀಲರ್ ಆಗಿ ಸಾಕಷ್ಟು ಖ್ಯಾತಿ ಪಡೆದಿದ್ದ. ಗೂಪಿಲ್ ಅಂಡ್ ಕಂಪನಿ ಸಂಸ್ಥೆ ಈಗ ಪಾರಿಸ್‌ನಲ್ಲಿದ್ದ ಬೊಸೋಡ್ ಮತ್ತು ವಾಲಡಾನ್ ಸಂಸ್ಥೆಗೆ (ಲೇ ಮೆಸ್ಯೂ) ಮಾರಾಟ ಆಗಿತ್ತು. ಥಿಯೋನನ್ನು ಅಲ್ಲಿಯೇ, ಮೊದಲಿದ್ದ ಸ್ಥಾನದಲ್ಲಿಯೇ ಉಳಿಸಿಕೊಳ್ಳಲಾಗಿತ್ತಾದರೂ, ವ್ಯಾಪಾರ ಮೊದಲಿದ್ದ ಹಾಗೆ ಇರಲಿಲ್ಲ. ಕಲಾಕೃತಿಗಳನ್ನು, ಅವು ಗುಣದಲ್ಲಿ ಹೇಗೇ ಇದ್ದರೂ ಬಾಯಿಗೆ ಬಂದ ಬೆಲೆಗೆ ಮಾರುತ್ತಿದ್ದರು. ಸಾಕಷ್ಟು ಹೆಸರಿದ್ದ ಕಲಾವಿದರಿಗೇ ಪ್ರೋತ್ಸಾಹ ದೊರೆಯುತ್ತಿತ್ತು. ಯುವ ಕಲಾವಿದರಿಗೆ ಎಷ್ಟೇ ಚೆನ್ನಾಗಿದ್ದರೂ ಅವಕಾಶವೇ ಸಿಗುತ್ತಿರಲಿಲ್ಲ. ಬರ್ತ್‌ಮೋರಿಸಾಟ್, ಮಾನೆಟ್, ಪಿಸಾರೋ, ಸಿಸ್‌ಲಿ, ರೆನ್ವಾರ್, ಸೆಝಾನೆ, ಡೆಗಾಸ್, ಗಿಲ್‌ಮೌನನ್, ಗಾಗಿನ್, ತುಲೋಸ್ ಲಾಟ್ರೆಕ್, ಸಿನಾಕ್ ಮೊದಲಾದ ಕಲಾವಿದರು ಸಾಂಪ್ರದಾಯಿಕವಾದುದಕ್ಕಿಂತ ಭಿನ್ನವಾದ್ದನ್ನು ಹೇಳಲು ಪ್ರಯತ್ನಿಸುತ್ತಿದ್ದರು. ಹೇಳಿದ್ದನ್ನೇ ಹೇಳುತ್ತಿದ್ದ ಅಕಾಡೆಮಿಷಿಯನ್ನರೂ ಬೊಗೆರೋ ಮೊದಲಾದವರೇ ಮತ್ತೆ ಮತ್ತೆ ಪುರಸ್ಕೃತರಾಗುತ್ತಿದ್ದರು. ಯುವಕಲಾವಿದರು ಹೇಳುವುದನ್ನು ಕೇಳಿಸಿಕೊಳ್ಳುವ ಮನಃಸ್ಥಿತಿಯೇ ಅವರಿಗಿರಲಿಲ್ಲ. ಥಿಯೋಗೆ ಯುವ ಕಲಾವಿದರನ್ನು ಪ್ರೋತ್ಸಾಹಿಸಬೇಕು. ಅವರನ್ನು ಮುಂದಕ್ಕೆ ತರಬೇಕು ಎಂದೆಲ್ಲ ತುಡಿತವಿದ್ದರೂ ಈ ಹೊಸ ಸಂಸ್ಥೆಯ ಆಡಳಿತ ಮಂಡಳಿಯವರು ಕೇಳಿಸಿಕೊಳ್ಳುವುದಿರಲಿ. ಹೊಸಬರನ್ನು ಹುಚ್ಚರು, ಬಾಲಿಶರು, ಚಿತ್ರಕಲೆಯ ಅ ಆ ಇ ಈ ಕೂಡಾ ಗೊತ್ತಿಲ್ಲದವರು ಎಂದೆಲ್ಲಾ ನಿಕೃಷ್ಟವಾಗಿ ಮಾತನಾಡುತ್ತಿದ್ದರು. ಇಷ್ಟಾದರೂ ಥಿಯೋ ಕಂಪೆನಿಯ ಮಾಲಿಕರ ಮನವೊಲಿಸಲು, ಯುವ ಕಲಾವಿದರ ಕೃತಿಗಳನ್ನು ಪ್ರದರ್ಶಿಸಲು

ಅವಕಾಶಕೊಡಿಸಲು, ಸಾರ್ವಜನಿಕರಿಗೆ, ಇವರ ಕೃತಿಗಳ ಬಗ್ಗೆ ತಿಳಿವಳಿಕೆ ನೀಡಲು ಪ್ರಯತ್ನಿಸುತ್ತಲೇ ಇದ್ದ. ಥಿಯೋ ಮಾತ್ರ ಅವರನ್ನು ಮುಂದಿನ ದಿನಗಳ ಮಹಾನ್ ಕಲಾವಿದರೆಂದೇ ಭಾವಿಸಿದ್ದ. ಇಬ್ಬರೂ ಅಣ್ಣತಮ್ಮಂದಿರು ಮಾತಿನಲ್ಲಿ ಮುಳುಗಿದ್ದಾಗ ಕ್ರಿಸ್ಟೀನ್ ಮೇಲಿದ್ದಳು. ಪರಸ್ಪರ ಕುಶಲೋಪಚಾರ ಮುಗಿಯುತ್ತಿದ್ದಂತೆ, ಥಿಯೋ ವಿನ್ಸೆಂಟ್‌ಗೆ ಹೇಳಿದ – ನಾನು ಹೇಗ್‌ಗೆ ಬಂದ ಉದ್ದೇಶ ಮುಖ್ಯವಾಗಿ, ಇಂಥ ಹೆಂಗಸಿನ ಸಹವಾಸದಿಂದ ದೂರ ಇರು ಅಂತ ಹೇಳೋದಾಗಿತ್ತು. ಇಷ್ಟಕ್ಕೂ ಅವಳು ಹೇಗಿದ್ದಾಳೆ?"

"ನಮ್ಮ ಜುಂಡರ್ಟ್‌ನಲ್ಲಿ ಲೀನ್ ವರ್ಮನ್ ಅಂತ ಒಬ್ಬಳು ವಯಸ್ಸಾದ ನರ್ಸ್ ಇದ್ದಳು. ನಿನಗೂ ನೆನಪು ಇರಬಹುದು."

"ಹೂಂ."

"ಸಿಯೆನ್ ಆ ಥರದ ಹೆಣ್ಣು, ಬೀದಿ ಬದುಕಿನ ಸಾಮಾನ್ಯ ಹೆಣ್ಣು! ಆದರೂ ನನಗೆ ಮಾತ್ರ ಅವಳು ತುಂಬಾ ಬೇಕಾದವಳು. ಅವಳ ಮೊದಲಿನ ಬದುಕು ಎಂಥಾದ್ದೇ ಇರಲಿ, ಅವಳನ್ನು ಪ್ರೀತಿಸುವುದರಲ್ಲಿ, ಅವಳಿಂದ ಪ್ರೀತಿಸಿಕೊಳ್ಳುವುದರಲ್ಲಿ ನನಗೆ ಎಂಥಾದ್ದೋ ಸುಖ ಇದೆ ಅನಿಸುತ್ತೆ. ಇವತ್ತು ನಾನು ಈ ಸ್ಥಿತೀಲಿ, ಇನ್ನೂ ಬದುಕಿರೋಕೆ ಸಾಧ್ಯ ಆಗಿದೆ ಅನ್ನುವುದಾದರೆ, ಅದು ಅವಳಿಂದ. ಕಲಾವಿದನ ಎಲ್ಲ ಬಗೆಯ ನೋವುಗಳೂ ಕಷ್ಟಗಳೂ ಅವಳನ್ನು ವಿಚಲಿತಗೊಳಿಸುವುದಿಲ್ಲ. ಎಲ್ಲವನ್ನೂ ಸಹಿಸಿಕೊಂಡು ಸಂತೋಷದಿಂದಲೇ ನನಗೆ ಪೋಸುಗಳನ್ನು ನೀಡುತ್ತಾಳೆ. ಹಾಗೆ ನೋಡಿದರೆ, ಕೇಳನ್ನು ಮದುವೆಯಾಗದೆ ಇವಳ ಜೊತೆಯಲ್ಲಿ ಇರುತ್ತಲೇ ದೊಡ್ಡ ಚಿತ್ರಕಲಾವಿದನಾಗಬಲ್ಲೆ ಎನಿಸುತ್ತದೆ."

ಥಿಯೋ ಸ್ಟುಡಿಯೋದಲ್ಲೆಲ್ಲಾ ಓಡಾಡಿದ. ನಂತರ ವಾಟರ್‌ಕಲರ್ಸ್ ಗಮನಿಸುತ್ತಾ "ನನಗೊಂದು ಅರ್ಥವಾಗೋದಿಲ್ಲ. ಎಲ್ಲಾ ಬಿಟ್ಟು ಇಂಥ ಹೆಣ್ಣಿನ ಸಹವಾಸಕ್ಕೆ ಹೇಗೆ ಬಿದ್ದೆ? ಕೇಳನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದೆಯಲ್ಲ."

"ಥಿಯೋ ನಾನು ಇವಳೊಂದಿಗೆ ಒಮ್ಮೆಗೇ ಪ್ರೀತಿಗೆ ಬೀಳಲಿಲ್ಲ. 'ಕೇ' ನನ್ನನ್ನು ಬೇಡಾಂತ ತಿರಸ್ಕರಿಸಿದ ಮಾತ್ರಕ್ಕೆ ಮನುಷ್ಯ ಭಾವನೆಗಳೆಲ್ಲವನ್ನೂ ಸಾಯಿಸಬೇಕೇನು? ಇಲ್ಲಿ ನೀನಿಲ್ಲಿಗೆ ಬಂದಾಗ ನಾನು ನಿರುತ್ಸಾಹ, ವಿಷಾದದಲ್ಲಿ ಇರುವುದು ಕಾಣಿಸಬಾರದೆಂದಿದ್ದೆ. ಈಗ ಹೊಸ ಸ್ಟುಡಿಯೋಗೆ ಬಂದಿದ್ದೀ. ನನ್ನದೊಂದು ಕುಟುಂಬ ಅಂತ ಇದೆ. ಬರೀ ನಿರ್ಜೀವ ಸ್ಟುಡಿಯೋ ಅಲ್ಲ. ಇಲ್ಲಿ ಜೀವನೋತ್ಸಾಹ ತುಂಬಿದೆ. ನನ್ನದು ಎನ್ನುವ ಭಾವವಿದೆ. ತೊಟ್ಟಿಲು, ಮಡದಿ, ಪ್ರೀತಿ ಎಲ್ಲವೂ ಸಾಧ್ಯವಾಗಿದೆ. ನಾನು ಮಾಡುವ, ಅದೂ ಕುಟುಂಬ ಕುರಿತಾಗಿ ಮಾಡುವ ಡ್ರಾಯಿಂಗ್ಸ್ ಕೇವಲ ಕಲ್ಪನೆಯಿಂದ ಮೂಡುವಂಥಾದ್ದಲ್ಲ. ನೈಜ ಅನುಭವದಿಂದ ಅವು ಮೈತಳೆಯುತ್ತವೆ. ಹಾಗೆ ಅಭಿವ್ಯಕ್ತವಾಗಬೇಕೆಂಬುದೇ ನನ್ನ ವಾಂಛೆಯಾಗಿತ್ತು."

"ವಿನ್ಸೆಂಟ್ ನಾನು ಎಂದಿಗೂ ಅಂತಸ್ತಿನ ನಡುವೆ ತಾರತಮ್ಯಗಳನ್ನು ಪರಿಗಣಿಸುವುದಿಲ್ಲ. ಆದರೆ ನೀನು ಹೀಗೆ ಇವಳೊಂದಿಗೆ ಇರುವುದು ನಿನಗೆ ಸರಿ ಅಂತ....?"

ವಿನ್ಸೆಂಟ್ ಮಧ್ಯೆ ಬಾಯಿ ಹಾಕಿ ಹೇಳಿದ – ಅವಳ ಜೊತೆ ಇದ್ದುದರಿಂದ ನನ್ನ ಸ್ಥಾನಕ್ಕೇನೂ ಕಡಿಮೆ ಆಗಿಲ್ಲ. ವಾಸ್ತವವಾಗಿ ನನ್ನ ಕಲೆಯ ಸೃಷ್ಟಿ ಸಾಮಾನ್ಯ ಜನರ ಹೃದಯಗಳಲ್ಲಿದೆ. ಅತಿಸಾಮಾನ್ಯರ ಬದುಕುಗಳೊಂದಿಗೆ ಹೆಣೆದುಕೊಂಡು, ಅವರ ಪ್ರೀತಿ, ನೋವು ನಲಿವುಗಳ ಅನುಭವದೊಂದಿಗೇ ನಾನು ಮುಂದುವರಿಯಲು ಬಯಸುತ್ತೇನೆ."

"ನೀನು ಹೇಳುವ ಈ ಎಲ್ಲ ವಿಚಾರಗಳಿಗೆ ನನ್ನ ವಿರೋಧವೇನೂ ಇಲ್ಲ...... ಆದರೆ 'ಮದುವೆ' ಅನ್ನುವುದರ ಅಗತ್ಯ ಇದೆಯೇನು?" ಎನ್ನುತ್ತಾ ವಿನ್ಸೆಂಟ್‌ನತ್ತ ನೋಡುತ್ತಾ ನಿಂತ.

"ಯಾಕೇಂದ್ರೆ, ನಾನು ಮದುವೆಯಾಗುತ್ತೇನೆಂದು ಮಾತು ಕೊಟ್ಟಿದ್ದೆ. ಅಲ್ಲದೆ ನೀನಾಗಲೀ ಬೇರೆಯಾರೇ ಆಗಲಿ, ಅವಳನ್ನು ಮಿಸ್ಟ್ರೆಸ್ ಎಂದು ಗುರುತಿಸುವುದು ನನಗೆ ಇಷ್ಟವಿಲ್ಲ. ಜೊತೆಗೆ, ಮುಂದಾಗುವ ಪರಿಣಾಮಗಳ ಬಗ್ಗೆ ಯೋಚನೆ ಮಾಡದೆ ಅವಿವೇಕದಿಂದ, ಇಂಥವಳ ಜೊತೆ ಅನೈತಿಕ ಸಂಬಂಧ ಇರಿಸಿಕೊಂಡಿದ್ದೇನೆ ಅಂತ ಯಾರೂ ತಿಳಿಯಬಾರದು. ಎರಡು ಕಾರಣಗಳಿಗಾಗಿ 'ಮದುವೆ' ಬೇಕೆನ್ನುತ್ತೇನೆ. ಒಂದು ನಾನು ಅವಳಿಗೆ ಭಾಷೆ ಕೊಟ್ಟಿದ್ದಕ್ಕಾಗಿ. ಎರಡನೆಯದು ಮದುವೆಯಿಂದ ನಾವಿಬ್ಬರೂ, ಪರಸ್ಪರ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡು, ಒಬ್ಬರ ಕಷ್ಟಕ್ಕೆ ಮತ್ತೊಬ್ಬರು ನಿಲ್ಲಲು, ನಮ್ಮ ನಮ್ಮ ನಡುವೆ ಕಷ್ಟಸುಖಗಳನ್ನು ಹಂಚಿಕೊಳ್ಳಲು ಸಾಧ್ಯವಾಗುತ್ತೆ, ಎನ್ನುವ ಕಾರಣಕ್ಕಾಗಿ."

"ಸಿವಿಲ್ ವ್ಯಾರೇಜ್ ಮಾಡಿಕೊಳ್ಳುವ ಮೊದಲು ಸ್ವಲ್ಪ ಕಾಯುವುದಕ್ಕೆ ಸಾಧ್ಯವಾಗುತ್ತೇನು?"

"ಥಿಯೋ, ನಾವಿಬ್ಬರೂ ಸ್ವಲ್ಪ ಕಾಯಬೇಕು ಎಂದು ನೀನು ಬಯಸುವುದಾದರೆ ಆಗಬಹುದು. ನನ್ನ ಕೃತಿಗಳು ಮಾರಾಟವಾಗಿ ಸ್ವಂತ ಸಂಪಾದನೆ ಗಳಿಸುವವರೆಗೆ, ನಾನು ಸಾಕಷ್ಟು ಬೆಳೆದು, ನೀನು ಕಳಿಸುವ ಹಣ ಇನ್ನು ಮುಂದೆ ಬೇಕಾಗುವುದಿಲ್ಲ ಅಂತ ಅನಿಸುವವರೆಗೆ, ನಾನೇ ನನ್ನ ಕಾಲ ಮೇಲೆ ಸ್ವತಂತ್ರವಾಗಿ ನಿಲ್ಲುವವರೆಗೂ, ಬೇಕಾದರೆ ಮದುವೆಯನ್ನು ಮುಂದೂಡುತ್ತೇವೆ. ನಾನು ಸ್ವಲ್ಪ ಸ್ವಲ್ಪ ಸಂಪಾದನೆ ಶುರುಮಾಡಿದ ಹಾಗೆ, ನೀನು ಕಳಿಸುವ ಹಣದಲ್ಲಿ ಕಡಿಮೆ ಮಾಡ್ತಾ ಹೋಗು. ಕಡೆಗೆ ನಿನ್ನಿಂದ ನನಗೆ ಒಂದಿಷ್ಟೂ ಹಣ ಬೇಕಾಗುವುದಿಲ್ಲ ಅನಿಸಿದಾಗ ಮದುವೆ ಬಗ್ಗೆ ಮಾತಾಡೋಣ ಆಯ್ತಲ್ಲ?"

"ಈಗ ನೋಡು ಬುದ್ಧಿವಂತನ ಥರ ಮಾತಾಡ್ತಿದ್ದೀ."

"ಥಿಯೋ, ನೋಡು. ಅವಳು ಬರ್ತಿದ್ದಾಳೆ. ನಿನ್ನ ದಮ್ಮಯ್ಯಾಂತೀನಿ. ಅವಳನ್ನು ಮಾತಾಡಿಸುವಾಗ, ನನ್ನ ಹೆಂಡತಿ, ಮಗುವಿನ ತಾಯಿ ಅನ್ನುವ ಭಾವನೆಯನ್ನು ಮರೆಯಬೇಡ. ನಿಜವಾಗಿಯೂ ಅವಳು ನನ್ನ ಹೆಂಡತಿ, ಮಗುವಿನ ತಾಯಿಯೇ!"

ಕ್ರಿಸ್ಟೀನ್ ಇಳಿದು ಬಂದಳು. ತುಂಬಾ ನೀಟಾದ ಕಪ್ಪು ಉಡುಪನ್ನು ತೊಟ್ಟಿದ್ದಳು. ಕೂದಲನ್ನು ಹಿಂದಕ್ಕೆ ಬಾಚಿದ್ದಳು. ಮುಖದ ಮೇಲಿದ್ದ ಕಲೆಗಳೆಲ್ಲ ಮರೆಯಾಗಿ, ಬಣ್ಣ ಬಂದಿತ್ತು. ನೋಡಲು ಈಗ ಮುದ್ದಾಗಿ ಗೃಹಿಣಿಯಾಗಿ ಕಾಣಿಸುತ್ತಿದ್ದಳು. ಅವಳಲ್ಲೀಗ ಸ್ಥಿತಿವಂತಿಕೆ, ಆತ್ಮವಿಶ್ವಾಸಗಳು ಒಡೆದೆದ್ದು ಕಾಣಿಸಿದವು. ಥಿಯೋನ ಕೈ ಕುಲುಕಿದಳು. ಚಹವನ್ನು ಮಾಡಲೇ ಎಂದು ವಿಚಾರಿಸಿದಳು. ರಾತ್ರಿ ಊಟಕ್ಕೆ ಇಲ್ಲಿಗೇ ಬರಬೇಕೆಂದು ಕೇಳಿಕೊಂಡಳು. ಕಿಟಕಿಯ ಬಳಿಯಲ್ಲಿನ ತನ್ನ ಕುರ್ಚಿಯಲ್ಲಿ ಹೋಗಿ ಕುಳಿತು. ಹೊಲಿಗೆ ಮಾಡುತ್ತಲೇ ತೊಟ್ಟಿಲನ್ನು ಮಧ್ಯೆ ಮಧ್ಯೆ ತೂಗುತ್ತಲೂ ಇದ್ದಳು. ವಿನ್ಸೆಂಟ್ ಅಂತೂ ಬಹಳ ಗೆಲುವಿನಿಂದ ಸ್ಟುಡಿಯೋ ತುಂಬಾ ಓಡಾಡಿ, ಇದ್ದಿಲಿನಿಂದ ಮಾಡಿದ್ದ, ವಾಟರ್ ಕಲರ್ಸ್‌ಗಳಿಂದ ಮಾಡಿದ್ದ ಚಿತ್ರಗಳನ್ನು ಥಿಯೋಗೆ ತೋರಿಸುತ್ತಿದ್ದ. ಥಿಯೋ ತಾನು ಎಷ್ಟರ ಮಟ್ಟಿಗೆ ಮುಂದುವರಿದಿದ್ದೇನೆ ಎನ್ನುವುದನ್ನು ನೋಡಲಿ ಎಂಬುದು ವಿನ್ಸೆಂಟ್‌ನ ಆಸೆ!

ವಿನ್ಸೆಂಟ್ ಒಂದಲ್ಲ ಒಂದು ದಿನ ಮಹಾನ ಚಿತ್ರಕಾರನಾಗುತ್ತಾನೆಂದು, ಥಿಯೋ ಬಲವಾಗಿ ನಂಬಿದ್ದನಾದರೂ ಅವನು ಮಾಡಿದ್ದ ಡ್ರಾಯಿಂಗ್ಸ್‌ಗಳೆಲ್ಲ ಚೆನ್ನಾಗಿವೆ ಎಂದು ಮಾತ್ರ ಹೇಳದವನಾಗಿದ್ದ. ಥಿಯೋ ಕಲೆಯ, ಕಲಾಕೃತಿಗಳ ವಿಮರ್ಶೆ ಮಾಡುವುದರಲ್ಲಿ ಬಹಳ ನುರಿತವನಾಗಿದ್ದರೂ, ತನ್ನ ಸೋದರನ ವಿಚಾರದಲ್ಲಿ ಯಾವುದೇ ತೀರ್ಮಾನಕ್ಕೆ ತಲುಪಲು ಮಾತ್ರ ಅವನಿಂದಾಗಿರಲಿಲ್ಲ. ಅವನ ದೃಷ್ಟಿಯಲ್ಲಿ ವಿನ್ಸೆಂಟ್ ಇನ್ನೂ ಬೆಳೆಯ ಬೇಕಾಗಿದ್ದವನಾಗಿದ್ದನೇ ಹೊರತು ಬೆಳೆದ ಕಲಾವಿದನಾಗಿರಲಿಲ್ಲ.

ವಿನ್ಸೆಂಟ್ ತಾನು ಮಾಡಿದ ಎಲ್ಲ ಪೈಂಟಿಂಗ್ಸ್‌ಗಳನ್ನೂ ಪ್ರಯೋಗಗಳನ್ನು ತೋರಿಸಿದ ಮೇಲೆ ಮತ್ತು ವಿನ್ಸೆಂಟ್ ಆಯಿಲ್ ಪೈಂಟಿಂಗ್ಸ್ ಬಗ್ಗೆ ತನ್ನಭಿಲಾಷೆ ತೋಡಿಕೊಂಡ ಮೇಲೆ ಥಿಯೋ ಹೇಳಿದ– "ಆಯಿಲ್ ಕಲರ್ಸ್‌ನಲ್ಲಿ ಕೆಲಸ ಮಾಡಬೇಕೂನ್ನೋ ನಿನ್ನಾಸೆ ಆಗಿದ್ದರೆ ಶುರು ಮಾಡಿಕೋ, ಯಾತಕ್ಕೋಸ್ಕರ ಇನ್ನೂ ಕಾಯ್ತಾ ಇದ್ದೀ?"

"ನಾನು ಮಾಡುವ ಡ್ರಾಯಿಂಗ್ಸ್ ಚೆನ್ನಾಗಿದೆ ಅಂತ ಭರವಸೆ ಮೂಡುವವರೆಗೆ..... ಮಾವ್ ಮತ್ತು ಟರ್ಸ್‌ಟೀಗ್ ನನ್ನಿಂದ ಅವು ಸಾಧ್ಯವಿಲ್ಲ ಅಂತ ಹೇಳ್ತಾರೆ.".... ಆದರೆ ವೀಸೆನ್‌ಬ್ರೂಕ್ ಹೇಳ್ತಾನೆ....." ನೀನು ಮಾಡು. ನೀನು ಮಾಡಬೇಕಾದ್ದನ್ನು ನೀನೇ ತೀರ್ಮಾನಿಸಬೇಕು. ಆಳವಾದ ಬಣ್ಣಗಳಲ್ಲಿ ಹೇಳಬೇಕೂಂತ ಅನ್ನಿಸಿದರೆ, ಆದಷ್ಟು ಬೇಗ ಅದರ ಕಡೆ ಮನಸ್ಸು ಮಾಡು ಅಂತಾನೆ.... ಆದರೆ ಥಿಯೋ... ಅದಕ್ಕೆ ಆಗುವ ಖರ್ಚು! ...... ಆ ಬಣ್ಣದ ಟ್ಯೂಬುಗಳಿಗೆ ಚಿನ್ನದ ಬೆಲೇನೇ ತೆರಬೇಕಾಗುತ್ತೆ."

"ನಾಳೆ ಬೆಳಿಗ್ಗೆ, ನನ್ನನ್ನು ನನ್ನ ಹೋಟೆಲ್‌ನಲ್ಲಿ ಬಂದು ಕಾಣು. ಎಷ್ಟು ಬೇಗ ನೀನು ಆಯಿಲ್ ಕ್ಯಾನ್‌ವಾಸ್‌ಗಳನ್ನು ನನಗೆ ಕಳಿಸಿಕೊಡ್ತೀಯೋ, ಅಷ್ಟು ಬೇಗ ನಾನು ಅದರ ಮೇಲೆ ಹಾಕುವ ಹಣ ನನಗೆ ವಾಪಸ್ ಬರುತ್ತೆ."

ಊಟದ ಹೊತ್ತಲ್ಲಿ ಕ್ರಿಸ್ಟೀನ್ ಮತ್ತು ಥಿಯೋ ತುಂಬ ಸಲುಗೆಯಿಂದಲೇ ಮಾತನಾಡಿದರು. ಥಿಯೋ ಹೊರಟಾಗ ವಿನ್ಸೆಂಟ್‌ಗೆ ಹೇಳಿದ, ಅದೂ ಫ್ರೆಂಚ್‌ನಲ್ಲಿ.

"ಒಳ್ಳೆಯವಳು. ತುಂಬಾನೇ ಚೆನ್ನಾಗಿ ಮಾತಾಡ್ತಾಳೆ. ಹೀಗಿರ್ತಾಳೇಂತ ನಾನು ಊಹಿಸಿಯೇ ಇರಲಿಲ್ಲ!"

ಇಬ್ಬರು ಸೋದರರೂ, ಒಬ್ಬರಿಗೊಬ್ಬರು ತದ್ವಿರುದ್ಧ. ನಡೆಯುವಾಗಲೂ ಅದೇ ಭಿನ್ನತೆ. ವ್ಯಾಜನ್‌ಸ್ಟ್ರಾಟ್‌ನಲ್ಲಿ ಬೆಳಿಗ್ಗೆ ಇಬ್ಬರೂ ನಡೆಯುತ್ತಿದ್ದರು. ತಮ್ಮ ಥಿಯೋ ಸುಶಿಕ್ಷಿತ. ಅವನ ಉಡುಗೆ ತೊಡುಗೆಯೂ ಹಾಗೆ ಟ್ರಿಮ್! ಪಾಲಿಶ್ ಆದ ಬೂಟುಗಳು, ಗಂಜಿ ಹಾಕಿ ಇಸ್ತ್ರಿ ಮಾಡಿದ್ದ ಷರ್ಟು, ಪ್ಯಾಂಟು, ಕಪ್ಪು ಬೌಲರ್ ಹ್ಯಾಟ್ ತಲೆ ಮೇಲೆ, ಟ್ರಿಮ್ಮಾಗಿ ಕತ್ತರಿಸಿದ ಕಂದು ಬಣ್ಣದ ಗಡ್ಡ. ನಡಿಗೆಯಲ್ಲೂ ಗತ್ತು ಗಾಂಭೀರ್ಯ ಸಮಾಂತರದ ಹೆಜ್ಜೆಗಳು; ಆದರೆ ವಿನ್ಸೆಂಟನದು ಇದಕ್ಕೆ ತದ್ವಿರುದ್ಧ ಹರಿದುಹೋದ ಹಳೆ ಬೂಟು, ಅಲ್ಲಲ್ಲಿ ಪ್ಯಾಚ್ ಹಾಕಿದ ಪ್ಯಾಂಟು, ಬಿಗಿಯಾದ ಕೋಟು, ಟೈ ಇಲ್ಲ; ವಿಚಿತ್ರ ವಾದ, ರೈತರು ಧರಿಸುತ್ತಿದ್ದ ಹ್ಯಾಟು. ಎಲ್ಲಾ ಎಡ್ದಾದಿಡ್ಡಿ ಬೆಳೆದು ಹರಡಿದ್ದ ಗಡ್ಡ. ದಾಪುಗಾಲು ಮಾತಿನ ರಭಸಕ್ಕೆ ಮಾರುದ್ದಕ್ಕೆ ಹಿಂದೆ ಮುಂದೆ ಬೀಸುತ್ತಿದ್ದ ಕೈಗಳು.

ಇಬ್ಬರೂ ಹೇಗೆ ಕಾಣುತ್ತಿದ್ದರೆಂಬ ಪ್ರಜ್ಞೆ ಇರಲಿಲ್ಲ.

ಥಿಯೋ ವಿನ್ಸೆಂಟ್‌ನನ್ನು ಗೂಪಿಲ್ಸ್‌ಗೆ ಕರೆದೊಯ್ದು ಅವನಿಗೆ ಬೇಕಾಗಿದ್ದ ಪೈಂಟ್ ಬ್ರಷ್‌ಗಳು, ಬಣ್ಣದ ಟ್ಯೂಬುಗಳು, ಕ್ಯಾನ್‌ವಾಸ್ ಎಲ್ಲವನ್ನೂ ಕೊಡಿಸಿದ. ಟರ್ಸ್‌ಟೀಗ್‌ಗೆ ಥಿಯೋನನ್ನು ಕಂಡರೆ ಮೆಚ್ಚುಗೆ ಮತ್ತು ಗೌರವ. ವಿನ್ಸೆಂಟ್ ಕೂಡಾ ಹಾಗಾಗಬೇಕೆಂಬುದು ಅವನ ಬಯಕೆಯಾಗಿತ್ತು. ಅವನನ್ನೂ ಥಿಯೋನಂತೆಯೇ ಪ್ರೀತಿಸಬೇಕು. ಅರ್ಥಮಾಡಿಕೊಳ್ಳಬೇಕು ಎಂದೇ ಅವನು ಹಾರೈಸುತ್ತಿದ್ದ. ಅವರು ಅಲ್ಲಿಗೆ ಬಂದ ಉದ್ದೇಶ ತಿಳಿದ ಮೇಲೆ ತಾನೇ ಖುದ್ದಾಗಿ ಅವರಿಗೆ ಬೇಕಾದ್ದನೆಲ್ಲಾ ಆರಿಸಿ ಕೊಟ್ಟು, ವಿನ್ಸೆಂಟ್‌ಗೆ ಬೇರೆ ಬೇರೆ ಪಿಗ್‌ಮೆಂಟ್ಸ್‌ಗಳ ಬಗೆ ತಿಳಿವಳಿಕೆ ನೀಡಿದ. ಥಿಯೋ ಮತ್ತು ವಿನ್ಸೆಂಟ್ ಸುಮಾರು ಆರು ಕಿಲೋಮೀಟರ್ ದೂರವನ್ನು ನಡೆದೇ ಕ್ರಮಿಸಿ ಷೆವೆನಿಂಜೆನ್ ತಲುಪಿದರು. ಮೀನು ದೋಣಿಯೊಂದು ಆಗತಾನೇ ಬಂತು. ಅಲ್ಲೊಂದು ಕಡೆ ವ್ಯಕ್ತಿಯೊಬ್ಬ ಮರದ ಷೆಡ್ಡಿನಲ್ಲಿ ಕುಳಿತು ಗಮನಿಸುತ್ತಿದ್ದ. ದೋಣಿ ಕಣ್ಣಿಗೆ ಬಿದ್ದ ಕೂಡಲೇ ದೊಡ್ಡ ಬಾವುಟವೊಂದನ್ನು ಹಿಡಿದು ಆ ವ್ಯಕ್ತಿ ಪ್ರತ್ಯಕ್ಷನಾದ. ಅವನ ಹಿಂದೆ ಒಂದು ಗುಂಪು ಮಕ್ಕಳಿದ್ದರು. ಕೆಲ ಕ್ಷಣಗಳ ನಂತರ ಹಿಡಿದಿದ್ದ ಬಾವುಟವನ್ನು ಬೀಸಿ ತೋರಿಸಿದ. ವಯಸ್ಸಾಗಿದ್ದ ಕುದುರೆಯ ಮೇಲೇರಿ ಕುಳಿತಿದ್ದ ವ್ಯಕ್ತಿ ಕಾಣಿಸಿಕೊಂಡು ದೋಣಿ ಕಟ್ಟಲು ಬೇಕಾಗಿದ್ದ ಗೂಟವನ್ನು ತರಲು ಹೋದ. ದೋಣಿಯಲ್ಲಿದ್ದವರನ್ನು ಬರಮಾಡಿಕೊಳ್ಳಲು, ಗಂಡಸರು, ಹೆಂಗಸರು, ಮಕ್ಕಳ ಗುಂಪೊಂದು ಆ ಮರಳಿನ ದಿಣ್ಣೆಯ ಬಳಿಗೆ, ಊರೊಳಗಿಂದ ಬಂದು ಸೇರಿದರು. ದೋಣಿ ತೀರಾ ಹತ್ತಿರ ಬಂದಾಗ, ಕುದುರೆ ಮೇಲಿನ ವ್ಯಕ್ತಿ ನೀರೊಳಗಿಂದ ಗೂಟವನ್ನು ತಂದ. ಬೆಸ್ತರೆಲ್ಲ ತೀರ ತಲುಪಿದರು. ಅವರು ಬರುತ್ತಿದ್ದಂತೆ ಸಂತೋಷ ಉತ್ಸಾಹಗಳಿಂದ ಬರಮಾಡಿಕೊಳ್ಳಲಾಯಿತು. ಎಲ್ಲ ತೀರ ತಲುಪಿದ ಮೇಲೇ ಕುದುರೆಗಳು ದೋಣಿಗಳನ್ನು

ಎಳೆದವು. ಅಲ್ಲಿದ್ದವರೆಲ್ಲರೂ ತಮ್ಮ ತಮ್ಮ ಮನೆಗಳತ್ತ ಹೆಜ್ಜೆಹಾಕಿದರು. ಅವರ ಹಿಂದೆ ಕುದುರೆ ಮೇಲಿದ್ದ ವ್ಯಕ್ತಿಯೂ ಸಾಗಿದ.

"ಇಂಥಾದ್ದನ್ನೇ ನಾನು ಬಣ್ಣಗಳಲ್ಲಿ ಮಾಡಬೇಕು ಅಂತ ಬಯಸೋದು" ವಿನ್ಸೆಂಟ್ ತಿಳಿಸಿದ.

"ನೀನು ನಿನಗೆ ಸಮಾಧಾನ ಆಗುವ ಹಾಗೆ ಕ್ಯಾನ್‌ವಾಸ್ ಪೂರ್ತಿ ಮಾಡಿದ ಮೇಲೆ ನನಗೆ ಕಳಿಸಿಕೊಡು. ಪ್ಯಾರಿಸ್‌ನಲ್ಲಿ ಬಹುಶಃ ಅದಕ್ಕೆ ಒಳ್ಳೆ ಗಿರಾಕಿ ಸಿಕ್ಕಿದರೂ ಸಿಕ್ಕಬಹುದು."

"ಓಹ್ ಥಿಯೋ! ಹೌದು! ಹೌದು! ನೀನು ನನ್ನ ಕೃತಿಗಳನ್ನು ಮಾರಾಟಮಾಡಲೇ ಬೇಕು."

-೧೨-

ಥಿಯೋ ಹೊರಟು ಹೋದ ಮೇಲೆ, ವಿನ್ಸೆಂಟ್ ತೈಲವರ್ಣಗಳ ಪೈಂಟಿಂಗ್ ಪ್ರಯೋಗ ಆರಂಭಿಸಿದ. ಮೊದಲಿಗೆ, ದುಂಡಗೆ ಬೆಳೆದಿದ್ದ ಕುರುಚಲು ಗಿಡಗಳ ಸಾಲುಗಳನ್ನು, (ಸಿಂಡರ್‌ಪಾತ್) ನಯವಾದ ರಸ್ತೆಯನ್ನು, ತರಕಾರಿ ಮಾರುಕಟ್ಟೆಯನ್ನು, ವ್ಯಕ್ತಿಯೊಬ್ಬ ಆಲೂಗಡ್ಡೆಗಳನ್ನು ಆರಿಸಿಕೊಳ್ಳುತ್ತಿದ್ದುದನ್ನೂ ಸೇರಿಸಿ, ಡ್ರಾ ಮಾಡಿದ. ಬಿಳಿ ಮರಳಿನ ಪ್ರದೇಶ. ಅಲ್ಲಲ್ಲಿ ಅಗೆಯಲಾಗಿತ್ತು, ಆದರೂ ಒಣಗಿದ ಕಾಂಡಗಳು, ಮಧ್ಯೆ ಮಧ್ಯೆ ಹಸುರಿನ ಕಳೆಗಿಡಗಳು ಬೆಳೆದಿದ್ದವು. ದೂರದಲ್ಲಿ ಹಸಿರುಮರಗಳು ಮತ್ತು ಕೆಲವು ಛಾವಣಿಗಳು, ಇದೆಲ್ಲವನ್ನೂ ಕ್ಯಾನ್‌ವಾಸ್‌ನಲ್ಲಿ ಇಳಿಸಿದ ಮೇಲೆ, ಅದನ್ನು ಸ್ಟುಡಿಯೋನಲ್ಲಿ ಈಸಲ್‌ಗೆ ಏರಿಸಿ ನೋಡಿದ. ದಿಗ್ಭ್ರಾಂತನಾದ. ನೋಡಿದವರ್‍ಯಾರಿಗೂ ಇದು ತನ್ನ ಮೊದಲ ಪ್ರಯತ್ನವೆಂದರೆ ನಂಬಲೂ ಸಾಧ್ಯವಿರಲಿಲ್ಲ. ಪೈಂಟಿಂಗ್‌ನ ಬೆನ್ನೆಲುಬಾದ ಡ್ರಾಯಿಂಗ್, ಪೈಂಟಿಂಗ್ ಎಲ್ಲವೂ ಒಟ್ಟಿಗೆ ಆ ದೃಶ್ಯಕ್ಕೆ ಅತ್ಯಂತ ಸಹಕಾರಿಯಾಗಿ ವರ್ತಿಸುತ್ತಿದ್ದವು. ಅಷ್ಟೊಂದು ಸೂಕ್ಷ್ಮತೆ, ನಿಷ್ಕೃಷ್ಟತೆಗಳಿದ್ದವು. ತಾನೇ ತನ್ನ ಕೆಲಸದಿಂದ ಅಚ್ಚರಿಗೊಂಡಿದ್ದ. ಖಂಡಿತವಾಗಿ ಮೊದಲ ಪ್ರಯತ್ನದಲ್ಲಿ ಸೋಲುವೆನೆಂದೇ ಭಾವಿಸಿದ್ದ.

ಮುಂದೆ ಅವನು ಕಾಡುಗಳಲ್ಲಿನ ಇಳಿಜಾರು ರಸ್ತೆ, ಅದರ ಉದ್ದಕ್ಕೂ ಮಣ್ಣು, ಧೂಳಿನಿಂದ ತುಂಬಿದ ಬೀಚ್ ಮರದ ಎಲೆಗಳಿಂದ ತುಂಬಿದ್ದಂತೆ, ಅದು ತೆಳು ಮತ್ತು ದಟ್ಟ ಕಂದು ಬಣ್ಣದಿಂದ ಕೂಡಿದ್ದಂತೆ, ಅಲ್ಲಲ್ಲಿ ಮರಗಳಿಂದ ಗೆರೆಗೆರೆಯಾಗಿ ನೆರಳು ಬಿದ್ದಿರುವಂತೆ, ಮತ್ತೆ ಕೆಲವಡೆ ಅದು ಕಾಣದಿರುವಂತೆ – ದೃಶ್ಯದಲ್ಲಿ ಎಲ್ಲವೂ ಸಮಾನುಪಾತ, ಆದರೆ ಅತ್ಯಂತ ನೈಜತೆಯೊಂದಿಗೆ ಬಿಂಬಿಸಲು ಪ್ರಯತ್ನಿಸಿದ. ಪೈಂಟಿಂಗ್‌ನಲ್ಲಿ ನೆರಳು–ಬೆಳಕುಗಳ ಅಗತ್ಯ ಎಲ್ಲೆಲ್ಲಿ ಹೇಗೆ, ಎಷ್ಟೆಷ್ಟು ಬೇಕಾಗಬಹುದೆಂಬುದನ್ನು ಅರಿತ. ಕತ್ತಲಲ್ಲೂ ಎಷ್ಟು ಬೆಳಕು ಇರಲು ಸಾಧ್ಯವೆಂಬುದನ್ನು ಗ್ರಹಿಸಿದ. ಕಲಾಕೃತಿಯಲ್ಲೂ ಬೆಳಕು, ಸೂಕ್ಷ್ಮತೆ, ವರ್ಣಗಳ ಸಮೃದ್ಧಿ ಹೇಗೆ ಉಳಿಸಿಕೊಳ್ಳಬೇಕೆಂಬುದನ್ನೂ ಅರಿತ.

ಆ ಇಳಿಜಾರು ಭೂಮಿ, ಶರತ್ಕಾಲದ ಸಂಜೆಯ ಸೂರ್ಯನ ಬೆಳಕಲ್ಲಿ ಕೆಂಪು, ಕಂದು ಮಿಶ್ರಿತ ಕಂಬಳಿಯಂತೆ ಕಾಣಿಸುತ್ತಿತ್ತು. ಅಲ್ಲಿ ಬೆಳೆದಿದ್ದ ಬರ್ಚ್‌ಗಿಡಗಳ ಮೇಲೆ ಒಂದು ಪಕ್ಕದಲ್ಲಿ ಬೆಳಕು ಬಿದ್ದಿತ್ತು. ಮತ್ತೊಂದು ಕಡೆ ಹೊಳೆವ ಹಸಿರು ಕಾಣಿಸುತ್ತಿತ್ತು. ನೆರಳಿನ ಕಡೆಗಿದ್ದ ಕಾಂಡಗಳು ದಟ್ಟ ಹಸಿರಿನಿಂದ ಕಂಗೊಳಿಸಿದ್ದವು. ಸಸಿಗಳ ಹಿಂಭಾಗ ಮತ್ತು ಕಂದು ಕೆಂಪು ಮಣ್ಣಿನ ಹಿಂಭಾಗದಲ್ಲಿ ನೀಲಿ ಮತ್ತು ಬೂದುಬಣ್ಣ ಮಿಶ್ರಿತ ಆಕಾಶ ಹೊಳೆಯುತ್ತಿತ್ತು. ಅದಕ್ಕೆ ಎದುರಾಗಿ, ಹಸಿರು ಅಂಚು, ಪುಟ್ಟ ಪುಟ್ಟದಾಗಿ ಹೆಣೆದುಕೊಂಡಿದ್ದ ಹಳದಿ ಎಲೆಗಳ ಕಾಂಡಗಳು ಇದ್ದವು. ಕಪ್ಪು ನೆರಳಿನ ಆಕೃತಿಗಳ ಗುಂಪಿನಂತೆ, ಕಟ್ಟಿಗೆ ಆಯುವ ಕೆಲವು ಆಕೃತಿಗಳು ಕಾಡುಗಳಲ್ಲಿ ಅಲ್ಲಲ್ಲಿ ಓಡಾಡುತ್ತಿದ್ದವು. ಅವುಗಳಲ್ಲಿ ಬಿಳಿ ಟೋಪಿ ಧರಿಸಿದ್ದ ಹೆಣ್ಣೊಬ್ಬಳು ಒಣಗಿದ ಕೊಂಬೆಯೊಂದನ್ನು ಎಟುಕಿಸಿಕೊಳ್ಳಲು ಪ್ರಯತ್ನಿಸುತ್ತ ನಿಂತಿದ್ದಳು. ಮರದ ಕೆಳಗೆ ಬೆಳೆದ ಕುರುಚಲು ಗಿಡಗಳ ಮಧ್ಯದಲ್ಲಿ ವ್ಯಕ್ತಿಯೊಬ್ಬನ ನೆರಳು ಕಾಣಿಸುತ್ತಿತ್ತು. ನೆರಳಿನ ಆಕಾರ ದೊಡ್ಡದಾಗಿತ್ತು.

ಪೈಂಟ್ ಮಾಡುತ್ತಲೇ, ತನ್ನೊಳಗೆ ಹೇಳಿಕೊಂಡ – ಮಾಗಿಯ ಕಾಲದ ಸಂಜೆಯನ್ನು ಅದರ ಎಲ್ಲ ವೈಚಿತ್ರ್ಯದೊಂದಿಗೆ, ಸೂಕ್ಷ್ಮತೆಯೊಂದಿಗೆ ಯಥಾವತ್ತಾಗಿ ಇದರಲ್ಲಿ ಹಿಡಿದಿಡುವ ವರೆಗೆ, ಇಲ್ಲಿಂದ ಹೋಗಲೇ ಬಾರದು." ಇನ್ನೇನು ಸಂಜೆ ಬಾಡುವುದರಲ್ಲಿತ್ತು. ಆದಷ್ಟು ಬೇಗ ಕೆಲಸ ಪೂರ್ತಿಯಾಗಬೇಕು. ಕೆಲವು ಬಣ್ಣದ ಸ್ಟ್ರೋಕ್‌ಗಳಿಂದ ಆಕೃತಿಗಳನ್ನು ಮೂಡಿಸಿದ. ಎಳೆಯ ಕಾಂಡಗಳೂ ಮಣ್ಣಲ್ಲಿದ್ದಷ್ಟು ಆಳಕ್ಕೆ ಇಳಿದಿವೆಯೆಂಬುದು ಅದೇ ಸಮಯದಲ್ಲಿ ಅವನ ಗಮನಕ್ಕೆ ಬಂತು. ಅದನ್ನೂ ಪೈಂಟ್ ಮಾಡಲು ಪ್ರಯತ್ನಿಸಿದ. ಆದರೆ ಅವನ ಪ್ರಯತ್ನ ಯಶಸ್ವಿಯಾಗಲಿಲ್ಲ. ಕತ್ತಲಾಗುತ್ತ ಬಂದಿತ್ತು. ಜೇಡಿಮಣ್ಣಿನಲ್ಲಿ ಬ್ರಷ್ ಸ್ಟ್ರೋಕುಗಳು ಕೆಲಸ ಮಾಡಿರಲಿಲ್ಲ. ಯಾವುದೋ ಒಂದು ಅವನಿಗೇ ಅರಿವಿಲ್ಲದ ಅಂತಃ ಪ್ರಜ್ಞೆಯಿಂದ, ಬ್ರಷ್ ಅನ್ನು ಆಚೆಗೆ ಎಸೆದ. ಬಣ್ಣದ ಟ್ಯೂಬುಗಳನ್ನು ಕ್ಯಾನ್‌ವಾಸ್‌ನಲ್ಲಿದ್ದ ಮರದ ಬೇರುಗಳು, ಕಾಂಡಗಳ ಮೇಲೆ ಹಿಂಡಿದ. ಮತ್ತೊಂದು ಬ್ರಷ್ ತೆಗೆದುಕೊಂಡು, ಗಾಢವಾದ ಬಣ್ಣಗಳನ್ನು, ಹ್ಯಾಂಡಲ್‌ನಿಂದ ಮಾದರಿಗಳನ್ನಾಗಿ ಮಾಡಿ ನಿಲ್ಲಿಸಿದ. ಈಗ ಅವು ಜೇಡಿಮಣ್ಣಿನ ಒಳಗೆ ಇಳಿದು ಗಟ್ಟಿಯಾಗಿ ನಿಂತಿವೆ. "ಹಾಂ! ಅಬ್ಬ ಈಗ ಸರಿ ಹೋಯಿತು. ನಾನು ಹೇಳಬೇಕೆಂದುಕೊಂಡಿದ್ದನ್ನು ಹೇಳಿದ್ದೇನೆ!"

ವೀಸನ್‌ಬ್ರೂಕ್ ಆ ದಿನ ಸಂಜೆ ಬಂದ. "ಬಾ ಮಲ್‌ಕ್ರೀಗೆ ಹೋಗೋಣ. ಅಲ್ಲಿ ಟ್ಯಾಬುಲೋ, ಷರಾಡ್‌ಗಳಿವೆ."

ಹಿಂದಿನ ದಿನಗಳನ್ನು ಮರೆತಿರಲಿಲ್ಲ. "ಸಾರಿ, ನಾನು ನನ್ನ ಹೆಂಡತೀನ ಬಿಟ್ಟು ಬರೋದಿಲ್ಲ."

ವೀಸೆನ್‌ಬ್ರೂಕ್ ಕ್ರಿಸ್ಟೀನ್ ಇದ್ದಲ್ಲಿಗೆ ಹೋಗಿ, ಅವಳ ಕೈ ಚುಂಬಿಸಿದ. ಮಗುವಿನ ಜೊತೆ ಒಳ್ಳೆಯ ಲಹರಿಯಿಂದ ಆಟವಾಡಿದ. ಹಿಂದೆ ಅವರ ಬಗ್ಗೆ ಏನು ಹೇಳಿದ್ದ ಅನ್ನುವುದನ್ನು ಆ ಕ್ಷಣ ಮರೆತೇ ಹೋಗಿದ್ದ.

"ಎಲ್ಲಿ ವಿನ್ಸೆಂಟ್, ನಿನ್ನ ಸ್ಕೆಚ್‌ಗಳನ್ನು ತೋರಿಸು."

ವಿನ್ಸೆಂಟ್ ಸಂತೋಷದಿಂದಲೇ ಒಪ್ಪಿಕೊಂಡು, ತೋರಿಸಿದ. ಅವನು ತೋರಿಸಿದ ಸ್ಕೆಚ್‌ಗಳಲ್ಲಿ, 'ಸೋಮವಾರದ ಸಂತೆ' ಆರಿಸಿಕೊಂಡ. ಇನ್ನೊಂದು ಸೂಪ್‌ಕಿಚನ್ ಮುಂದೆ (ಸಾಲಿನಲ್ಲಿ) ಕಾಯುತ್ತಾ ನಿಂತಿರುವ ಸಾಲು; ಮತ್ತೊಂದು ಹುಚ್ಚರ ಆಶ್ರಮದಲ್ಲಿ ಮೂರು ಮಂದಿ; ಇದರ ಜೊತೆಗೆ ಇನ್ನೊಂದು ಗೂಟದಿಂದ ಮೇಲಕ್ಕೆದ್ದ ಮೀನು ಹಿಡಿಯುವ ದೋಣಿ. ಐದನೆಯದು ಗಾಳಿ, ಮಳೆಯ ಸಮಯದಲ್ಲಿ ಮಣ್ಣಿನ ದಿಬ್ಬಗಳ ನಡುವೆ ಮಾಡಿದ್ದ ಡ್ರಾಯಿಂಗ್.

"ಇವೆಲ್ಲ ಮಾರಾಟಕ್ಕಿವೆಯೇನು? ನಾನು ಕೊಳ್ಳಲು ಬಯಸುತ್ತೇನೆ."

"ಏನಪ್ಪಾ, ನಿನ್ನ ತಮಾಷೆಗಳಲ್ಲಿ ಇದೂ ಒಂದೇನು?"

"ಪೈಂಟಿಂಗ್ ವಿಚಾರದಲ್ಲಿ ನಾನೆಂದೂ ತಮಾಶೆ ಮಾಡೊಲ್ಲ."

"ಈ ನಿನ್ನ ಪ್ರಯೋಗಗಳು ತುಂಬ ಚೆನ್ನಾಗಿವೆ. ಎಷ್ಟು ಕೊಡಲಿ ಹೇಳು."

"ನೀನೇ ಹೇಳು" ಯಾವುದೇ ಕ್ಷಣದಲ್ಲಿಯಾದರೂ ತನ್ನನ್ನು ಲೇವಡಿ ಮಾಡಬಹುದೆಂಬ ಅಳುಕಿನಲ್ಲಿ ಹೇಳಿದ.

"ಆಯ್ತು. ಒಂದೊಂದಕ್ಕೆ ಐದು ಫ್ರ್ಯಾಂಕ್. ಒಟ್ಟು ಐದಕ್ಕೆ ಇಪ್ಪತ್ತೈದು ಫ್ರ್ಯಾಂಕ್."

"ಅಯ್ಯಯ್ಯೋ ಅದು ತುಂಬ ಜಾಸ್ತಿ. ನನ್ನ ಅಂಕಲ್ ಒಂದೊಂದಕ್ಕೆ ಎರಡೂವರೆ ಫ್ರ್ಯಾಂಕ್ ಮಾತ್ರ ಎಂದಿದ್ದ.

"ನಿನಗೆ ಮೋಸ ಮಾಡಿದ್ದಾನೆ. ಎಲ್ಲ ಆರ್ಟ್ ಡೀಲರ್ಸ್ ಮಾಡೋದು ಹೀಗೇನೇ. ಒಂದು ದಿನ ಇವೇ ಐದು ಸಾವಿರ ಫ್ರ್ಯಾಂಕ್‌ಗೆ ಮಾರಾಟ ಆಗುತ್ತೆ. ಏನು ಹೇಳ್ತೀಯ? ಒಪ್ಪಿಗೆ ತಾನೇ?"

"ವೀಸೆನ್‌ಬ್ರೂಕ್, ಒಂದೊಂದು ಸಲ ದೇವರಾಗ್ತೀಯ. ಮತ್ತೊಂದು ಸಲ ದೆವ್ವವಾಗ್ತೀಯ!"

"ಅದು ಹಾಗೆ ವೈವಿಧ್ಯಕ್ಕಾಗಿ, ನನ್ನ ಗೆಳೆಯರಿಗೆ ನನ್ನಿಂದ ಬೇಜಾರಾಗದಿರಲಿ ಅಂತ ಹೀಗೆ ನಡ್ಕೊಳ್ತೀನಿ."

ಅವನು ಪಾಕೆಟ್ ತೆಗೆದು ವಿನ್ಸೆಂಟ್‌ಗೆ ಇಪ್ಪತ್ತೆರಡು ಫ್ರ್ಯಾಂಕ್‌ಗಳನ್ನು ನೀಡಿದ.

"ಈಗ ನಡಿ ನನ್ನ ಜೊತೆ ಪುಲ್‌ಕ್ರೀಗೆ ಹೋಗೋಣ ನಿನಗೆ ಸ್ವಲ್ಪನಾದರೂ ಮನರಂಜನೆಬೇಕಾಗುತ್ತೆ. ಟೋನಿ ಆಫರ್‌ಮನ್ಸ್‌ನ ಪ್ರಹಸನ ಪ್ರದರ್ಶನವಿದೆ. ನಗೋದಕ್ಕೆ ಒಳ್ಳೇ ಅವಕಾಶ ಸಿಗುತ್ತೆ."

ವಿನ್ಸೆಂಟ್ ಅವನ ಜೊತೆ ಹೋದ. ಕ್ಲಬ್‌ನಲ್ಲಿ ಜನ ತುಂಬಿದ್ದರು. ಅಗ್ಗದ, ಘಾಟಿನ ಟೊಬ್ಯಾಕೋ ಸೇವಿಸುತ್ತಿದ್ದರು. ಮೊದಲ ಟ್ಯಾಬುಲೋ ನಿಕೊಲಾಸ್ ಮೇಸ್‌ನ 'ದಿ ಸ್ಟೇಬಲ್ ಅಟ್ ಬೆತ್ಲೆಹೆಮ್" ಬಣ್ಣಗಳು ಮತ್ತು ಅವುಗಳ ಛಾಯೆ ಚೆನ್ನಾಗಿದ್ದರೂ ಅಭಿವ್ಯಕ್ತಿಯಲ್ಲಿ ಅಷ್ಟೊಂದು ಜೀವಂತಿಕೆ ಇರಲಿಲ್ಲ. ಮತ್ತೊಂದು ರ್ಯಾಮ್‌ಬ್ರಾಂಟ್‌ನ 'ಐಸಾಕ್ ಬ್ಲೆಸ್ಸಿಂಗ್ ಜ್ಯಾಕೋಬ್' ತನ್ನ ಉಪಾಯ ಫಲಿಸುವುದೋ ಇಲ್ಲವೋ

ಎಂದು ನೋಡುತ್ತಿದ್ದ ರೆಬೆಕ್ಕಾ' ಅದ್ಭುತ ಕಲಾಕೃತಿಯಾಗಿತ್ತು. ಯಾಕೋ ಅವನಿಗೆ ಉಸಿರುಕಟ್ಟಿದಂತಾಗಿ ನಾಟಕ ಶುರುವಾಗುವುದಕ್ಕೆ ಮೊದಲೇ ಅಲ್ಲಿಂದ ಮನೆಕಡೆ ಹೊರಟುಬಿಟ್ಟ. ದಾರಿಯಲ್ಲಿ, ತಾನು ಬರೆಯಬೇಕೆಂದಿದ್ದ ಲೆಟರ್‌ನ ಸಾಲುಗಳನ್ನು ಯೋಚಿಸುತ್ತಿದ್ದ.

ತಂದೆಗೆ ಕ್ರಿಸ್ಟೀನ್‌ಳ ಕತೆಯನ್ನೆಲ್ಲ ವಿವರಿಸಿದ್ದ. ವೀಸೆನ್‌ಬ್ರೂಕ್‌ನಿಂದ ಪಡೆದಿದ್ದ ಇಪ್ಪತ್ತೈದು ಫ್ರ್ಯಾಂಕ್‌ಗಳನ್ನು ಜೊತೆಗೆ ಇರಿಸಿದ. ಥಿಯೋ ಅತಿಥಿಯಾಗಿ ಹೇಗ್‌ನ ತನ್ನ ಮನೆಗೆ ಬರಬೇಕೆಂದು ಹೇಳಿದಂತೆ ತಿಳಿಸಲು ಕೋರಿದ್ದ.

ಒಂದು ವಾರದ ನಂತರ ತಂದೆ ಬಂದರು. ಅವರ ಕಣ್ಣಿನ ಕಾಂತಿ ಕಡಿಮೆಯಾಗಿತ್ತು. ಬೇಗ ಬೇಗ ಹೆಜ್ಜೆ ಹಾಕಲು ಆಗುತ್ತಿರಲಿಲ್ಲ. ಹೋದ ಬಾರಿ ಎಲ್ಲರೂ ಒಟ್ಟಿಗೆ ಇದ್ದರು. ಥಿಯೋಡೋರಸ್ ತನ್ನ ಹಿರಿಯಮಗನನ್ನು ಮನೆಯಿಂದ ಹೊರಗೆ ಹಾಕಿದ್ದ. ಮಧ್ಯೆ ಮಧ್ಯೆ ಸ್ನೇಹ ತುಂಬಿದ ಪತ್ರಗಳ ವಿನಿಮಯ ನಡೆದಿತ್ತು. ತಂದೆ ತಾಯಿ ಇಬ್ಬರೂ ವಿನ್ಸೆಂಟ್‌ಗಾಗಿ ಬಟ್ಟೆ ಬರೆ, ಸಿಗರೇಟು, ಮನೆಯಲ್ಲಿ ಮಾಡಿದ ಕೇಕು, ಜೊತೆಗೆ ಹತ್ತತ್ತು ಫ್ರ್ಯಾಂಕು. ಕ್ರಿಸ್ಟೀನ್‌ಳ ವಿಚಾರದಲ್ಲಿ ಏನು ಯೋಚಿಸಬಹುದೆಂದು ವಿನ್ಸೆಂಟ್ ಊಹಿಸಲಾರದವನಾಗಿದ್ದ. ಕೆಲವು ಸಲ ಗಂಡಸರು ಅರ್ಥಮಾಡಿಕೊಳ್ತಾರೆ. ಆದರೆ ಕೆಲವೊಮ್ಮೆ ಏನೂ ಅರ್ಥವಾಗದೆ ಕ್ರೂರವಾಗಿ ನಡೆದುಕೊಳ್ತಾರೆ.

ತೊಟ್ಟಿಲ ಮುಂದೆ ನಿಂತುಕೊಂಡು, ನಿರ್ಲಕ್ಷ್ಯವನ್ನು ತೋರುವುದಾಗಲೀ, ಆಕ್ಷೇಪಗಳನ್ನೆತ್ತುವುದಾಗಲೀ, ತಂದೆ ಮಾಡುವುದಿಲ್ಲವೆನಿಸಿತ್ತು. ತೊಟ್ಟಿಲ ಮುಂದೆ ನಿಂತ ಮೇಲೆ ಮುಗೀತು. ಭಾವನೆಗಳನ್ನು ಸುಲಭವಾಗಿ ಬಿಟ್ಟುಕೊಡಲಾಗುವುದಿಲ್ಲ. ಕ್ರಿಸ್ಟೀನ್‌ಳ ಹಿಂದಿನ ಬದುಕು ಏನೇ ಆಗಿದ್ದಿರಲಿ, ತಂದೆ ಕ್ಷಮಿಸುತ್ತಾರೆ, ಕ್ಷಮಿಸಲೇ ಬೇಕಾಗುತ್ತದೆ.

ಥಿಯೋಡೋರಸ್‌ನ ಕಂಕುಳಡಿಯಲ್ಲಿ ಒಂದು ದೊಡ್ಡ ಪ್ಯಾಕೆಟ್ ಇತ್ತು. ವಿನ್ಸೆಂಟ್ ಅದನ್ನು ಬಿಚ್ಚಿದ. ಅದರಲ್ಲಿ ಕ್ರಿಸ್ಟೀನ್‌ಳಿಗಾಗಿ ಒಂದು ಬೆಚ್ಚನೆಯ ಕೋಟಿತ್ತು. ಎಲ್ಲ ಸರಿಹೋಗಿದೆ ಎನಿಸಿತು. ಕ್ರಿಸ್ಟೀನ್ ಮೇಲೆ ಹೋದ ನಂತರ ಥಿಯೋಡೋರಸ್ ಮತ್ತು ವಿನ್ಸೆಂಟ್ ಸ್ಟುಡಿಯೋದಲ್ಲಿ ಕುಳಿತರು.

"ವಿನ್ಸೆಂಟ್, ಒಂದು ವಿಷಯ ನೀನು ಲೆಟರ್‌ನಲ್ಲಿ ಹೇಳ್ಲಿಲ್ಲ. ಮಗು ನಿನ್ನದೇ ಏನು?"

"ಇಲ್ಲಿ ನಾನು ಅವಳನ್ನು ಭೇಟಿಯಾದಾಗ ಮಗು ಹೊಟ್ಟೆಯಲ್ಲಿತ್ತು."

"ಆ ಮಗುವಿಗೆ ತಂದೆ ಎಲ್ಲಿ?"

"ಅವಳನ್ನು ಬಿಟ್ಟು ಬಿಟ್ಟಿದ್ದ."– ಮಗುವಿನ ವಿಷಯವಾಗಿ ಎಲ್ಲ ಹೇಳಬೇಕಾದ ಅಗತ್ಯ ಇಲ್ಲ ಎಂದುಕೊಂಡ.

"ನೀನು ಅವಳನ್ನು ಮದುವೆ ಆಗ್ತೀ ತಾನೇ? ಮದುವೆ ಇಲ್ಲದೆ ಹೀಗೆ ಜೊತೆಗೆ ಇರೋದು ಸರಿ ಅಲ್ಲ."

"ಹೌದು ಡ್ಯಾಡ್. ನೀವು ಹೇಳೋದು ಸರಿ. ವಿಧಿವತ್ತಾಗಿ ಮದುವೆಯಾಗಬೇಕೆಂದಿದ್ದೇನೆ. ಆದರೆ ಥಿಯೋ ನಾನು ನನ್ನ ಡ್ರಾಯಿಂಗ್‌ಗಳಿಂದ ನೂರೈವತ್ತು ಫ್ರ್ಯಾಂಕ್‌ಗಳನ್ನು ಸಂಪಾದನೆ ಮಾಡುವ ಸಾಮರ್ಥ್ಯ ಬರುವ ತನಕ ಕಾಯುವುದಕ್ಕೆ ಹೇಳಿದ್ದಾನೆ.

ಥಿಯೋಡೋರಸ್ ಒಮ್ಮೆ ನಿಟ್ಟುಸಿರೆಳೆದು "ಹೌದು ಅದೇ ಸರಿ ಅನ್ಸತ್ತೆ. ವಿನ್ಸೆಂಟ್ ನಿನ್ನ ಅಮ್ಮ ಕೂಡ ಒಂದು ಸಲ ನೀನು ಮನೆಗೆ ಬಂದು ಹೋಗಬೇಕೆಂದು ಹೇಳಿದ್ದಾಳೆ. ನಾನೂ ಹೇಳ್ತಿದ್ದೀನಿ. ನ್ಯೂನೆನ್‌ಗೆ ನೀನು ಬರಬೇಕು. ನಿನಗೆ ಅದು ಹಿಡಿಸುತ್ತೆ. ಬ್ರಬಾಂಟ್‌ನ ಎಲ್ಲ ಹಳ್ಳಿಗಳಿಗಿಂತ ಇದು ತುಂಬಾ ಚೆನ್ನಾಗಿದೆ. ಅಲ್ಲಿ ಎಸ್ಕಿಮೋಗಳ ಇಗ್ಲೂ ರೀತಿಯಲ್ಲಿ ಪುಟ್ಟದೊಂದು ಚರ್ಚಿದೆ. ನೂರಕ್ಕಿಂತ ಕಡಿಮೆ ಜನಮಾತ್ರ ಕೂತ್ಕೊಳ್ಳೋಕೆ ಸಾಧ್ಯ. ಇನ್ನೊಂದು ಗೊತ್ತಾ ವಿನ್ಸೆಂಟ್! ಪಾದ್ರಿಯ ಮನೆಯ ಸುತ್ತ ಮುಳ್ಳು ಪೊದೆಗಳ ಬೇಲಿಯಿದೆ. ಚರ್ಚ್ ಹಿಂದುಗಡೆ ಹೂಗಳಿಂದ ತುಂಬಿದ ಪ್ರದೇಶ ಇದೆ; ಮರಳಿನ ದಿಬ್ಬಗಳಿವೆ. ಹಳೆಯ ಮರದ ಶಿಲುಬೆಗಳಿವೆ."

"ಏನು ಮರದ ಶಿಲುಬೆಗಳೇ? ಬೆಳ್ಳಗಿವೆಯೇನು?"

"ಹೌದು. ಹೆಸರುಗಳು ಮಾತ್ರ ಕಪ್ಪಗಿವೆ. ಆದರೆ ಮಳೆಯಿಂದ ಸ್ವಲ್ಪ ಸ್ವಲ್ಪ ಅಳಿಸಿಹೋಗಿವೆ."

"ಚರ್ಚ್ ಮೇಲು ಭಾಗದಲ್ಲಿ ಒಂದು ಸುಂದರವಾದ ಗೋಪುರ ಇದೆಯೇನು?"

"ಹೌದು. ತುಂಬ ತೆಳುವಾದ, ಸೂಕ್ಷ್ಮವಾದ ಗೋಪುರ ಇದೆ. ಅದಂತೂ ಗಗನ ಚುಂಬಿಯಾಗಿದೆ. ಒಂದೊಂದು ಸಲ, ಅದು ದೇವರ ಬಳಿಗೂ ತಲುಪಿದೆಯೇನೋ ಎನಿಸುತ್ತೆ."

"ಸಮಾಧಿಯ ಮೇಲೆ ತೆಳುವಾಗಿ ನೆರಳನ್ನು ಬೀಳಿಸಿರಬೇಕಲ್ಲ!" ವಿನ್ಸೆಂಟ್‌ನ ಕಣ್ಣುಗಳಲ್ಲಿ ಸಂತೋಷ ಕಾಣಿಸಿತು.

"ನಾನು ಅದನ್ನು ಪೈಂಟ್ ಮಾಡಬೇಕು."

"ಅಷ್ಟೇ ಅಲ್ಲ. ಅಲ್ಲಿನ ಪ್ರದೇಶದಲ್ಲಿ ಉದ್ದಕ್ಕೂ ಪೈನ್ ಕಾಡುಗಳಿವೆ; ರೈತರು ಭೂಮಿಯನ್ನು ಅಗೆಯುತ್ತಿರುವಾಗ, ನೀನೊಮ್ಮೆ ಅಲ್ಲಿಗೆ ಬರಲೇಬೇಕು."

"ಹೌದು. ನ್ಯೂನೆನ್‌ಗೆ ಬಂದು ನೋಡಲೇ ಬೇಕು. ಚರ್ಚು, ಗೋಪುರ, ಹೊಲಗಳು, ರೈತರು – ಅವೆಲ್ಲ ಬ್ರಬಾಂಟ್ ಅನ್ನು ನೆನಪಿಸುತ್ತವೆ.

ಥಿಯೋಡೋರಸ್ ಊರಿಗೆ ಹಿಂತಿರುಗಿ ಬಂದು, ವಿನ್ಸೆಂಟ್ ತಾವು ಭಾವಿಸಿದಷ್ಟು ಕೆಟ್ಟ ಸ್ಥಿತಿಯಲ್ಲಿ ಇಲ್ಲವೆಂದು ತಿಳಿಸಿದ. ವಿನ್ಸೆಂಟ್ ಈಗ ಹಗಲುರಾತ್ರಿ ತನ್ನ ಕೆಲಸದಲ್ಲಿ ಬಿಡುವಿಲ್ಲದಂತೆ ಮುಳುಗಿದ. ಮಿಲ್ಲೆಟ್‌ನನ್ನು ಪದೇಪದೇ ಓದುತ್ತಿದ್ದ; ನೆನಪಿಸಿಕೊಳ್ಳುತ್ತಿದ್ದ. ಕಲೆ ಹೋರಾಟವಿಲ್ಲದೆ ಕೈಗೆ ದಕ್ಕುವುದಿಲ್ಲ. ಕಲೆಯಿಲ್ಲದ ಬದುಕಿಗೆ ಅರ್ಥವೇ ಇಲ್ಲ. ಥಿಯೋಗೆ ವಿನ್ಸೆಂಟ್‌ನಲ್ಲಿ ನಂಬಿಕೆ ಇತ್ತು. ತಂದೆ ತಾಯಿಗಳು ಕ್ರಿಸ್ಟೀನ್‌ಳನ್ನು ಒಪ್ಪಿಕೊಂಡರು. ಈಗ ಹೇಗ್‌ನಲ್ಲಿ ಯಾರೂ ಅವನ ವಿಚಾರದಲ್ಲಿ ತಲೆಹಾಕಲಿಲ್ಲ. ಆದ್ದರಿಂದ ನೆಮ್ಮದಿಯ ಮನಸ್ಸಿನಿಂದ ತನ್ನ ಕೆಲಸದಲ್ಲಿ ತೊಡಗಿದ.

ಮರಗೆಲಸದ ಕಾರ್ಖಾನೆ ಮಾಲಿಕ ತನ್ನಲ್ಲಿ ಕೆಲಸ ಸಿಗದಿದ್ದ ಕೆಲಸಗಾರರನ್ನು ವಿನ್ಸೆಂಟ್ ಬಳಿಗೆ ಮಾಡೆಲ್‌ಗಳಾಗಿ ಕೆಲಸ ಮಾಡಲು ಕಳಿಸಿಕೊಡುತ್ತಿದ್ದ. ಅವನು ಮಾಡಬೇಕಾಗಿದ್ದಷ್ಟು ಪೋರ್ಟ್‌ಫೋಲಿಯೋಗಳು ಮುಗಿದ ಮೇಲೆ ಸ್ಟೌವ್ ಬದಿಯಲ್ಲಿನ ತೊಟ್ಟಿಲನ್ನು ಹತ್ತೆಂಟು ಬಾರಿ ಡ್ರಾ ಮಾಡಿದ. ಮಾಗಿ ಮಳೆ ಬಂದ ಮೇಲೆ ಹೊರಾಂಗಣದ ಚಿತ್ರಗಳನ್ನು ಬಿಡಿಸಲು ಮುಂದಾದ. ಬಣ್ಣಗಳ ಪರಿಣಾಮಗಳನ್ನು ಅಧ್ಯಯನ ಮಾಡಿದ. ನಿಜವಾದ ವರ್ಣಕಾರ ನಿಸರ್ಗದಲ್ಲಿನ ಬಣ್ಣಗಳನ್ನು ನೋಡಿದ ಕೂಡಲೇ ಗ್ರಹಿಸುತ್ತಾನೆ, ವಿಶ್ಲೇಷಿಸುತ್ತಾನೆ ಎಂಬುದನ್ನು ಅರಿತ.

ವಿನ್ಸೆಂಟ್ ಆಕೃತಿಗಳನ್ನೇ ಬರೆಯಲಿ, ದೃಶ್ಯಗಳನ್ನೇ ಬರೆಯಲಿ, ಕಾಲ್ಪನಿಕ ಭಾವನೆಗಳನ್ನು ತುಂಬುತ್ತಿರಲಿಲ್ಲ. ನೋವು, ದುಃಖಗಳನ್ನು ವಾಸ್ತವಾನುಭವಗಳಿಂದ ಮೂಡಿಸುತ್ತಿದ್ದ. ಜನ ತನ್ನ ಕೃತಿಗಳನ್ನು ನೋಡಿದಾಗ ಅವುಗಳಲ್ಲಿ ಆಳವಾದ ಭಾವನೆಗಳಿವೆ; ಮೃದುವಾದ ಭಾವನೆಗಳಿವೆ' ಎಂದುಕೊಳ್ಳಬೇಕೆನ್ನುತ್ತಿದ್ದ. ಅವನಿಗೆ ಗೊತ್ತು, ಸಮಾಜದ ದೃಷ್ಟಿಯಲ್ಲಿ ತಾನೊಬ್ಬ ಹುಚ್ಚ. ಯಾರೊಂದಿಗೂ ಹೊಂದಿಕೆಯಾಗದವ, ಮೂರು ಕಾಸಿಗೂ ಪ್ರಯೋಜನವಿಲ್ಲದವ. ಆದರೆ ಕಲೆಯ ಮೂಲಕ ತಾನು, ಅಂದರೆ ಹುಚ್ಚ – ಇವನ ಮನಸ್ಸಿನಲ್ಲಿ, ಆಂತರ್ಯದಲ್ಲಿ ಏನಿದೆ ಅನ್ನುವುದನ್ನು ತೋರಿಸಬೇಕೆಂದುಕೊಂಡ. ಅವನು ಕಲೆಯನ್ನು, ಅಂದರೆ ಡ್ರಾಯಿಂಗ್ಸು, ಪೈಂಟಿಂಗ್ಸು ಎಲ್ಲವನ್ನೂ ಬಡವರ ಗುಡಿಸಲುಗಳಲ್ಲಿ, ಕೊಳಕು ಮೂಲೆಗಳಲ್ಲಿ ಕಾಣುತ್ತಿದ್ದ. ಪೈಂಟಿಂಗ್‌ನಲ್ಲಿ ಹೆಚ್ಚು ಹೆಚ್ಚು ಮಗ್ನನಾದಂತೆ, ಬೇರೆ ಯಾವುದರ ಕಡೆಯೂ ಗಮನ ಹರಿಯಲಿಲ್ಲ. ಮಾಡುತ್ತ ಮಾಡುತ್ತಲೇ ಬದುಕಿನ ದೃಶ್ಯಾತ್ಮಕ ಗುಣಗಳನ್ನು ಗ್ರಹಿಸಿದ. ನಿರಂತರ ಮಗ್ನತೆ, ಅವಿಶ್ರಾಂತ ಕ್ರಿಯಾಶೀಲತೆಗಳಿಂದ ಮಾತ್ರ ಕಲೆ ಸಾಧ್ಯ.

ಅವನಿಗಿದ್ದ ಒಂದೇ ಒಂದು ತೊಂದರೆಯೆಂದರೆ, ಆಯಿಲ್ ಪೈಂಟ್ಸ್ ಬೆಲೆ ಬಹಳ ದುಬಾರಿ. ಅಲ್ಲದೆ ಅವನು ಪೈಂಟಿಂಗ್ ದಪ್ಪಕ್ಕೆ ಹಚ್ಚುತ್ತಿದ್ದ. ಟ್ಯೂಬ್ ಹಿಂಡಿಬಿಡುತ್ತಿದ್ದ. ಕ್ಯಾನ್‌ವಾಸ್ ಮೇಲೆ ಬಣ್ಣಗಳು ಮುದ್ದೆ ಮುದ್ದೆಯಾಗಿರುತ್ತಿದ್ದವು. ಅವನು ಪೈಂಟ್ ಮಾಡುತ್ತಿದ್ದ ವೇಗಕ್ಕೆ, ಕ್ಯಾನ್‌ವಾಸಿನ ಬಿಲ್ಲು ಬಹಳ ದುಬಾರಿಯಾಗಿ ಬಿಡುತ್ತಿತ್ತು. ಮಾವ್ ಎರಡು ತಿಂಗಳಲ್ಲಿ ಮುಗಿಸುತ್ತಿದ್ದ ಕ್ಯಾನ್‌ವಾಸನ್ನು ವಿನ್ಸೆಂಟ್ ಒಂದೇ ಸಲಕ್ಕೆ ಮುಗಿಸಿ ಬಿಡುತ್ತಿದ್ದ. ತೆಳುವಾಗಿ ಪೈಂಟ್ ಮಾಡುವುದು ಅವನ ಜಾಯಮಾನದಲ್ಲೇ ಇರಲಿಲ್ಲ. ನಿಧಾನವಾಗಿ, ನಿರಾಳವಾಗಿ ಮಾಡುವುದಂತೂ ಕಲ್ಪನೆಗೂ ಸಾಧ್ಯವಿರಲಿಲ್ಲ. ಆದ್ದರಿಂದಲೇ ಇರುವ ಹಣವೆಲ್ಲ ಕರಗಿ ಹೋಗುತ್ತಿತ್ತು. ಅವನ ಸ್ಟುಡಿಯೋ ಕಲಾಕೃತಿಗಳಿಂದ ತುಂಬಿ ಹೋಗುತ್ತಿತ್ತು. ಥಿಯೋ ಕಂತುಗಳಲ್ಲಿ ಹಣ ಕಳಿಸುತ್ತಿದ್ದ. ಹಣ ಬಂದ ಮರುಕ್ಷಣವೇ ಓಡಿ ಹೋಗಿ ಅವನಿಗೆ ಬೇಕಾಗಿದ್ದ ಎಲ್ಲ ಬಣ್ಣಗಳನ್ನು ಕೊಂಡು, ಗಬಗಬನೆ ಒಂದೆರಡು ದಿನದಲ್ಲಿ, ಬಣ್ಣಗಳೆಲ್ಲವನ್ನೂ ಖಾಲಿ ಮಾಡಿ ಬಿಡುತ್ತಿದ್ದ. ಮೂರು, ನಾಲ್ಕು ದಿನಗಳ ನಂತರ, ಅವನ ಸಮಸ್ಯೆಗಳು ಮತ್ತೆ ಪ್ರಾರಂಭವಾಗುತ್ತಿದ್ದವು.

ಮಗುವಿಗೆ ಎಷ್ಟೊಂದು ವಸ್ತುಗಳು ಬೇಕಾಗುವುದೆಂದು ಗಮನಿಸಿದಾಗ, ಅವನು ಆಶ್ಚರ್ಯಗೊಂಡ. ಕ್ರಿಸ್ಟೀನ್‌ಗೆ ಔಷಧಿಗಳು, ಹೊಸಬಟ್ಟೆಗಳು, ವಿಶೇಷವಾದ ಆಹಾರ ಪದಾರ್ಥಗಳು, ಹೆರ್‌ಮನ್‌ಗೆ ಪುಸ್ತಕಗಳು, ಶಾಲೆಯ ಫೀಸು ಹೀಗೆ ಎಷ್ಟೆಷ್ಟೋ! ಸಾಲದ್ದಕ್ಕೆ ಮನೆಖರ್ಚು– ಗಾಭರಿಗೊಳಿಸುತ್ತಿತ್ತು. ಅದೊಂದು ಹಳ್ಳದಂತೆ, ತುಂಬಿದಷ್ಟೂ ತುಂಬಿಸಿಕೊಂಡು ಖಾಲಿಯಾಗುತ್ತಿತ್ತು. ಪಾತ್ರೆ ಪರಡಿ, ಖುರ್ಚಿ, ಮೇಜು, ಕ್ಯಾಂಡಲ್‌ಗಳು, ಪರದೆಗಳು, ಹಾಸಿಗೆ ವಸ್ತುಗಳು – ಒಂದೇ ಎರಡೇ? ಐವತ್ತು ಫ್ರ್ಯಾಂಕುಗಳಲ್ಲಿ ಇವೆಲ್ಲದರ ಜೊತೆಗೆ ಪೈಂಟಿಂಗ್‌ಗೆ ಬೇಕಾದ ಸಾಮಗ್ರಿಯನ್ನೂ ಕೊಂಡು ನಿಭಾಯಿಸುವುದು ದುಸ್ಸಾಧ್ಯವೆನಿಸುತ್ತಿತ್ತು.

"ನೀನೊಬ್ಬ ಕೂಲಿ ಥರ ಕೆಲಸ ಮುಗಿದ ತಕ್ಷಣ ಹೆಂಡದಂಗಡಿ ಕಡೆ ಓಡಿ ಹೋಗುವವನ ಹಾಗೆ. ದುಡ್ಡು ಬಂದ ತಕ್ಷಣ ಓಡಿ ಹೋಗ್ತೀಯಲ್ಲ" ಎಂದು ಥಿಯೋ ಕಳಿಸಿದ್ದ ಐವತ್ತು ಫ್ರ್ಯಾಂಕ್‌ಗಳನ್ನು ಕವರಿನಿಂದ ತೆಗೆದುಕೊಳ್ಳುತ್ತಿರುವಾಗ, ವಿನ್ಸೆಂಟ್‌ಗೆ ಒಂದು ಸಲ ಕ್ರಿಸ್ಟೀನ್ ಹೇಳಿದ್ದಳು.

ವಿನ್ಸೆಂಟ್ ಕಾರ್ಪೆಂಟರ್‌ಗೆ ಹೇಳಿ, ಮರಳು ದಿಬ್ಬಗಳ ಮೇಲೂ ಗಟ್ಟಿಯಾಗಿ ನಿಲ್ಲಬಲ್ಲ ರೀತಿಯಲ್ಲಿ, ತನಗೆ ಬೇಕಾದ ಹಾಗೆ ಒಂದು ಸ್ಟ್ಯಾಂಡ್ ಮಾಡಿಸಿಕೊಂಡ. ಷೆವೆನಿಂಜೆನ್, ಸಮುದ್ರ, ದಂಡೆಗಳು, ಬೆಸ್ತರು, ಗಾಡಿಗಳು, ದೋಣಿಗಳು, ಕುದುರೆಗಳು, ಆಕಾಶ – ಎಲ್ಲವೂ ವಿನ್ಸೆಂಟ್‌ನನ್ನು ಸೆಳೆಯುತ್ತಿದ್ದವು. ಮಾಗಿಯ ಚಳಿ ತೀವ್ರವಾಯಿತು. ಕಲಾವಿದರೆಲ್ಲ ತಮ್ಮ ತಮ್ಮ ಸ್ಟುಡಿಯೋಗಳಲ್ಲಿ ಬೆಚ್ಚಗೆ ಉಳಿದರು. ಆದರೆ ವಿನ್ಸೆಂಟ್ ಮಳೆ, ಗಾಳಿ, ಮಂಜು, ಬಿರುಗಾಳಿಗಳಲ್ಲೂ ಹೊರಗೆ ಹೊರಟ. ಹೊರಗೆ ಎಷ್ಟೇ ಪ್ರತಿಕೂಲ ಪರಿಸ್ಥಿತಿ ಇದ್ದರೂ, ಪೈಂಟ್ ಮಾಡುತ್ತಿದ್ದ. ಆದರೆ ಪೈಂಟ್ ಇನ್ನೂ ಹಸಿಯಾಗಿರುತ್ತಿದ್ದುದರಿಂದ ಮಣ್ಣು, ಉಪ್ಪು ನೀರಿನ ಎರಚಲು ಅದರ ಮೇಲೆ ಬೀಳುತ್ತಿತ್ತು. ಮಳೆಯಲ್ಲಿ ತೊಯ್ದು ಹೋಗುತ್ತಿದ್ದ; ಚಳಿಗಾಳಿಗೆ ನಡುಗುತ್ತಿದ್ದ; ಮರಳು, ಧೂಳು, ಕಣ್ಣು ಮೂಗುಗಳಲ್ಲಿ ತುಂಬಿಕೊಳ್ಳುತ್ತಿದ್ದವು. ಆದರೆ ಇವನಿಗೆ ಅದಾವುದರ ಪರಿವೆಯೂ ಇರಲಿಲ್ಲ. ಏನೇ ಆದರೂ, ಸಾವೊಂದರಿಂದಲ್ಲದೆ ನಿಲ್ಲುವ ಸೂಚನೆಯೇ ಇರಲಿಲ್ಲ.

ಒಂದು ರಾತ್ರಿ ಕ್ರಿಸ್ಟೀನ್‌ಗೆ, ವಿನ್ಸೆಂಟ್ ತನ್ನ ಕ್ಯಾನ್‌ವಾಸನ್ನು ತೋರಿಸಿದ. ಅವಳು ನೋಡಿದ್ದೇ– ವಿನ್ಸೆಂಟ್ ಇಷ್ಟು ರಿಯಲ್ ಆಗಿ ಕಾಣುವಂತೆ ಹೇಗೆ ಮಾಡಿದೆ?" ಎಂದು ಕೇಳಿದಳು.

ಈ ಪ್ರಶ್ನೆಗೆ ವಿನ್ಸೆಂಟ್, ಪ್ರಶ್ನೆ ಕೇಳುತ್ತಿರುವವಳು ಅಕ್ಷರಜ್ಞಾನವೇ ಇಲ್ಲದ ಒಬ್ಬ ಸಾಮಾನ್ಯ ಬೀದಿ ಹೆಣ್ಣು ಎಂಬುದನ್ನು ಮರೆತು, ತಾನು ವೀಸೆನ್‌ಬ್ರೂಕ್ ಅಥವಾ ಮಾವ್‌ನ ಜೊತೆ ಮಾತಾಡುತ್ತಿದ್ದೇನೆಂಬ ಭ್ರಮೆಯಲ್ಲಿ.

"ಅದು ಹೇಗೆ ಅನ್ನೋದು ನನಗೂ ಗೊತ್ತಿಲ್ಲ. ನಾನು ಸುಮ್ಮನೆ ನನಗಿಷ್ಟವಾದ ಜಾಗದಲ್ಲಿ, ಒಂದು ಬಿಳಿ ಬೋರ್ಡ್ ಮುಂದೆ ಕುಳಿತುಕೊಂಡು, "ಇದು ಏನಾದರೂ ವಿಶೇಷವಾದ್ದಾಗಿ ರೂಪಾಂತರವಾಗಬೇಕು" ಎಂದು ನನಗೆ ನಾನೇ ಹೇಳಿಕೊಳ್ಳುತ್ತೇನೆ.

ಎಷ್ಟೋ ಹೊತ್ತು ಕುಳಿತು, ಕೆಲಸ ಮಾಡುತ್ತೇನೆ. ಅತೃಪ್ತ ಮನಸ್ಸಿನಿಂದ ಹಿಂತಿರುಗುತ್ತೇನೆ. ಅದನ್ನು ನನ್ನ ಕೋಣೆಯಲ್ಲಿ ಇಟ್ಟುಬಿಡುತ್ತೇನೆ. ಸ್ವಲ್ಪ ವಿಶ್ರಾಂತಿ ತೆಗೆದುಕೊಂಡ ಮೇಲೆ ಭಯದಿಂದಲೇ ಮತ್ತೊಮ್ಮೆ ನಾನು ಮಾಡಿದ್ದನ್ನು ಹೊರಗೆ ತೆಗೆದು ನೋಡುತ್ತೇನೆ. ನನ್ನ ಕಲ್ಪನೆಯಲ್ಲಿ ಮೂಡಿ ನಿಂತಿರುವ ಚಿತ್ರದ ನೆನಪಾಗುತ್ತದೆ. ಆಗ ಇದು ನನಗಿನ್ನೂ ಸಮಾಧಾನವಾಗುವುದಿಲ್ಲ. ಯಾಕೆಂದರೆ ನಾನು ಏನೇ ಚೆನ್ನಾಗಿ ಮಾಡಿದರೂ ಅದು ಮೂಲದ ಪ್ರತಿಬಿಂಬವಷ್ಟೆ! ನಿಸರ್ಗ ನನ್ನ ಜೊತೆ ಏನೋ ಹೇಳುತ್ತದೆ, ಏನನ್ನೋ ಹೇಳಿರುತ್ತದೆ, ಅದನ್ನೇ ನಾನು ಷಾರ್ಟ್‌ಹ್ಯಾಂಡ್‌ನಲ್ಲಿ ಇಳಿಸಿರುತ್ತೇನೆ. ಇದರಲ್ಲಿ ಅನೇಕ ಲೋಪಗಳು ಇರಬಹುದು. ಸರಿಯಾದ ಪದಗಳು ಸಿಗದಿರಬಹುದು; ಮಧ್ಯೆಮಧ್ಯೆ ಏನೋ ಬಿಟ್ಟೂ ಹೋಗಿರಬಹುದು. ಆದರೂ ಅದರಲ್ಲಿ ಕಾಡುಗಳು, ಬೀಚ್ ಮರಗಳು, ಮನುಷ್ಯಾಕೃತಿಗಳು ಹೇಳಿರುವ ಏನಾದರೂ ಕೆಲವು ಇದ್ದೇ ಇರುತ್ತವೆ. ಅರ್ಥವಾಯ್ತಾ?"

"ಇಲ್ಲ."

-೧೩-

ಅವನು ಏನು ಮಾಡುತ್ತಿದ್ದಾನೆಂಬುದನ್ನು, ಕ್ರಿಸ್ಟೀನ್ ಪೂರ್ತಿಯಾಗಿ ಗ್ರಹಿಸಲು ಆಗಿರಲಿಲ್ಲ. ಅವನು ಮಾಡುತ್ತಿದ್ದ ಪೈಂಟಿಂಗ್ ಅನ್ನು ಅವನಿಗೆ ಹತ್ತಿಕೊಂಡಿದ್ದ ಚಟ ಎಂದೇ ಭಾವಿಸಿದ್ದಳು. ಪೈಂಟಿಂಗ್ ಎಂಬ ಒಂದು ಬಂಡೆ ಮೇಲೆ ಅವನ ಬದುಕು ನೆಲೆನಿಂತಿತ್ತು. ಆದರೆ ಅವಳೆಂದೂ ಅವನ ಅಭ್ಯಾಸ ಅಥವಾ ಚಟವನ್ನು ವಿರೋಧಿಸಿರಲಿಲ್ಲ. ಅವನ ಕೆಲಸದಲ್ಲಿನ ನಿಧಾನ ಪ್ರಗತಿ, ಕೆಲಸದ ನೋವಿನ ಅಭಿವ್ಯಕ್ತಿ, ಇವುಗಳಲ್ಲಿ ಅವಳು ಎಲ್ಲೋ ಮರೆಯಾಗುತ್ತಿದ್ದಳು, ಸಾಮಾನ್ಯ ಕೌಟುಂಬಿಕ ಬದುಕಿನ ಆಪ್ತ ಸಂಗಾತಿಯಾಗಿ ಇರಲು ಮಾತ್ರವೇ ಅವಳಿಂದ ಸಾಧ್ಯವಾಗುತ್ತಿತ್ತು. ವಿನ್ಸೆಂಟ್‌ಗೆ ಕೌಟುಂಬಿಕ ಬದುಕಿನಲ್ಲಿ ಮುಳುಗಿರುವುದು ಸಾಧ್ಯವಿರಲಿಲ್ಲ. ಒಂದಿಷ್ಟು ಹೊತ್ತು ಮಾತ್ರ ಮೀಸಲಾಗಿಸಲು ಅವನಿಂದ ಸಾಧ್ಯವಾಯಿತು. ತನ್ನ ಅನುಭವಗಳಿಗೆ ಮಾತುಕೊಡಬೇಕೆಂದು ಬಯಸಿದಾಗ ಥಿಯೋಗೆ ಬರೆಯುತ್ತಿದ್ದ. ತನ್ನ ಸಂತೋಷ, ಸಂಭ್ರಮ, ಯಶಸ್ಸು, ನೋವು, ತಾನು ಮಾಡಿದ ಕೃತಿಗಳು ತಾನು ಕಂಡ ದೃಶ್ಯಗಳು, ತನ್ನ ಮೇಲಾದ ಪರಿಣಾಮಗಳು – ಎಲ್ಲವನ್ನೂ ವಿಸ್ತಾರವಾಗಿ ಬರೆಯುತ್ತಿದ್ದ. ಬೇರೆಯವರ ಅಭಿವ್ಯಕ್ತಿಯನ್ನು ಶಬ್ದಗಳ ಮೂಲಕ ಹೇಗಿರುತ್ತದೆಂಬುದನ್ನು ತಿಳಿದುಕೊಳ್ಳಲು ಕಾದಂಬರಿಗಳನ್ನು ಓದಲು ಶುರು ಮಾಡಿದ. ಫ್ರೆಂಚ್, ಇಂಗ್ಲಿಷ್, ಡಚ್, ಜರ್ಮನ್ ಎಲ್ಲ ಭಾಷೆಗಳಲ್ಲಿಯೂ ಓದಿದ. ಅವನ ಜೊತೆ ಕ್ರಿಸ್ಟೀನ್‌ಗೆ ಸಿಕ್ಕಿದ್ದು ಬಹಳ ಸ್ವಲ್ಪ. ಅವನಿಗೆ ಈ ಅಲ್ಪ ಸಮಯವೇ ಹೆಂಡತಿಯಾಗಿ ಸ್ವೀಕರಿಸಿದ ಬಗ್ಗೆಯಾಗಲೀ, ತನ್ನೊಂದಿಗೆ ಬೌದ್ಧಿಕ ವಿಚಾರಗಳನ್ನು ಹಂಚಿಕೊಳ್ಳಲು ಅಸಮರ್ಥಳು ಎಂಬ ಕಾರಣಕ್ಕಾಗಲೀ, ಅವನೆಂದೂ ವ್ಯಥೆ ಪಡಲಿಲ್ಲ.

ಬೇಸಿಗೆ ಮತ್ತು ಮಾಗಿಯ ತಿಂಗಳುಗಳಲ್ಲಿ ಬೆಳಗಾಗುತ್ತಿದ್ದಂತೆ ಮನೆಯಿಂದ ಹೊರಟು ತಡ ಸಂಜೆಯ ನಂತರ ಮರಳ ದಿಣ್ಣೆಗಳನ್ನು ಹಾದು ಮನೆಗೆ

ಹಿಂತಿರುಗುತ್ತಿದ್ದುದರಿಂದ, ಕ್ರಿಸ್ಟೀನ್ ಮತ್ತು ವಿನ್ಸೆಂಟ್‌ರ ಸಂಬಂಧಗಳಲ್ಲಿ ಯಾವುದೇ ಸಮಸ್ಯೆ ಇರಲಿಲ್ಲ. ಆದರೆ ಭಯಂಕರ ಚಳಿಗಾಳಿ, ಮಂಜಿನ ಮಳೆಯ ಕಾರಣದಿಂದ ದಿನವೆಲ್ಲ ಮನೆಯಲ್ಲಿಯೇ ಕುಳಿತು ಕೆಲಸ ಮಾಡಬೇಕಾಗಿ ಬಂದಾಗ ಅವರಿಬ್ಬರ ನಡುವೆ ಸಮಸ್ಯೆ ತಲೆ ಹಾಕಿತು.

ಈಗ ವಿನ್ಸೆಂಟ್ ಮತ್ತೆ ಡ್ರಾಯಿಂಗ್‌ಗಳ ಕಡೆ ತಿರುಗಿದ. ಪೈಂಟ್ಸ್‌ಗಾಗಿ ಖರ್ಚಾಗುತ್ತಿದ್ದ ಹಣ ಉಳಿಯಿತು. ಆದರೆ ಮಾಡೆಲ್ಸ್ ಆಗಿ ಬರುತ್ತಿದ್ದವರನ್ನು ಸಾಕುವುದು ಬಿಳಿ ಆನೆ ಸಾಕಿದಂತಾಯಿತು. ಅತ್ಯಲ್ಪ ಸಂಭಾವನೆಗಾಗಿ ದುಡಿಯಲು ಸಿದ್ಧವಾಗುತ್ತಿದ್ದವರೂ ಮಾಡೆಲ್ ಆಗಿ ಪೋಸ್ ಕೊಡಲು ದುಬಾರಿ ಹಣ ಕೇಳುತ್ತಿದ್ದರು. ಹುಚ್ಚರ ಆಶ್ರಯಧಾಮದಲ್ಲಿ ಸ್ಕೆಚ್ ಮಾಡಲು ಪರವಾನಗಿ ಕೇಳಿದಾಗ, ಅಧಿಕಾರಿಗಳು ಸಾಧ್ಯವಿಲ್ಲವೆಂದು ನಿರಾಕರಿಸಿದರು. ಅಲ್ಲದೆ ಹೊಸದಾಗಿ ಒಂದೆರಡು ಮಹಡಿಗಳನ್ನು ನಿರ್ಮಿಸುತ್ತಿದ್ದರು. ಆದ್ದರಿಂದ ನಿಯಮಿತವಾಗಿ ಅಲ್ಲಿಗೆ ಹೋಗಲು ಆಗಲಿಲ್ಲವಾದರೂ, ನಿಶ್ಚಿತ ದಿನಗಳಂದು, ಹೋಗಿ ಭೇಟಿಯಾಗಿ ಬರುತ್ತಿದ್ದ.

ಅವನ ಭರವಸೆಯೆಲ್ಲ ಕ್ರಿಸ್ಟೀನ್‌ಳನ್ನು ಅವಲಂಬಿಸಿತ್ತು. ಅವಳ ಆರೋಗ್ಯ ಪೂರ್ತಿಯಾಗಿ ಸುಧಾರಿಸಿ, ಮೊದಲಿನಂತೆ ಆದ ಮೇಲೆ ತನಗೆ ಪೋಸು ಕೊಡಲು ಸಾಧ್ಯವಾಗುತ್ತದೆಂದು ನಂಬಿದ್ದ. ಆದರೆ ಕ್ರಿಸ್ಟೀನ್‌ಳ ಆಲೋಚನೆಗಳೇ ಬೇರೆಯಾಗಿದ್ದವು. ಮೊದಮೊದಲು, ಸ್ವಲ್ಪ ತಡೆದುಕೋ, ನಾನಿನ್ನೂ ಸುಧಾರಿಸಿಲ್ಲ' ಎನ್ನುತ್ತಿದ್ದಳು. ಎಲ್ಲ ಆದ ಮೇಲೆ, ತನಗೆ ಬಿಡುವೇ ಇಲ್ಲವೆಂಬಂತೆ ತೋರಿಸಿಕೊಂಡಳು. ಮತ್ತೊಮ್ಮೆ – 'ವಿನ್ಸೆಂಟ್, ನನಗೆ ಮೊದಲಿದ್ದ ಹಾಗೆ ಇರೋಕೆ ಆಗೊಲ್ಲ. ಮಗೂನ ನೋಡ್ಕೋಬೇಕು" – ಎಂದೆಲ್ಲ ಸಬೂಬು ಹೇಳಿ ತಪ್ಪಿಸಿಕೊಳ್ಳುತ್ತಿದ್ದಳು.

ವಿನ್ಸೆಂಟ್ ಅವಳಿಗಾಗಿ ಬೆಳಿಗ್ಗೆ ಐದುಗಂಟೆಗೇ ಎದ್ದು, ಮನೆ ಕೆಲಸಗಳಲ್ಲಿ ಸಹಾಯ ಮಾಡುತ್ತಿದ್ದ. ಇದರಿಂದಾಗಿ, ದಿನದಲ್ಲಿ ತನಗೆ ಪೋಸ್ ಕೊಡಲು ಬಿಡುವು ಸಿಗುವುದೆಂದು ಭಾವಿಸಿದ್ದ. ಆದರೆ ಅವಳು – ಇನ್ನು ಮುಂದೆ ನಾನು ನಿನಗೆ ಮಾಡೆಲ್ ಆಗಲು ಸಾಧ್ಯವಿಲ್ಲ. ನಾನೀಗ ನಿನ್ನ ಹೆಂಡತಿ" ಎಂದು ಪ್ರತಿಭಟಿಸಿದಳು.

"ಸಿಯೆನ್ ನೀನು ನನಗೆ ಪೋಸ್ ಕೊಡಲೇ ಬೇಕು. ಮಾಡೆಲ್‌ಗಳಿಗೆ ಕೊಡುವುದಕ್ಕೆ ನನ್ನಲ್ಲಿ ಹಣ ಇಲ್ಲ. ನೀನು ಇಲ್ಲಿ ಇರುವುದೂ ಇದೇ ಕಾರಣದಿಂದ."

ಕ್ರಿಸ್ಟೀನ್ ಭಯಂಕರವಾಗಿ ಸಿಟ್ಟಾದಳು. ಮೊದಲ ಸಲ ಭೇಟಿಯಾದಾಗ ಹೇಗಿದ್ದಳೋ ಹಾಗಾದಳು. "ಇದಕ್ಕೋಸ್ಕರವೇ ಹಾಗಾದರೆ ನನ್ನನ್ನು ಕರೆದುಕೊಂಡಿದ್ದು? ಬಿಟ್ಟಿಯಾಗಿ ಮಾಡೆಲ್ ಕೆಲಸ ಮಾಡಿಸಿಕೊಳ್ಳುವ ಉದ್ದೇಶದಿಂದ ನಿನ್ನ ಮನೇಲಿ ಜಾಗಕೊಟ್ಟಿದ್ದೀಯಾಂತ ಆಯ್ತು. ನಾನು ಬಿಟ್ಟಿ ಚಾಕರಿ ಮಾಡುವ ಗುಲಾಮಳು ಅಂತ ತಿಳ್ಕೊಂಡಿದ್ದೀಯ, ಹೇಗೆ? ನಾನು ನಿನಗೆ ಪೋಸ್ ಕೊಡದಿದ್ದರೆ, ಮತ್ತೆ ಮನೆಯಿಂದ ಹೊರಗೆ ಹಾಕ್ತೀಯ!"

"ಇದೆಲ್ಲ ನಿನ್ನಮ್ಮನ ಕಡೆಯಿಂದ ಬಂದದ್ದು. ನೀನು ನೀನಾಗಿ ಈ ಥರ ಬಹುಶಃ ಯೋಚನೆ ಮಾಡಿರಲಿಲ್ಲ."

"ಇರಬಹುದು. ಆದರೆ ಅದೆಲ್ಲ ನಿಜ ತಾನೇ?"

"ಸಿಯೆನ್ ನೀನು ಅಲ್ಲಿಗೆ ಹೋಗೋದನ್ನು ಬಿಡು."

"ಯಾಕೆ? ನನ್ನ ಅಮ್ಮನ ಮೇಲೆ ನನಗೆ ಪ್ರೀತಿ ಇರಬಾರದೇನು?"

"ನಮ್ಮಿಬ್ಬರ ಸಂಬಂಧ ಹಾಳಾಗುತ್ತೆ. ಮತ್ತೆ ನೀನು ಅವರ ದಾರಿಗೇ ಬೀಳಬೇಕಾಗುತ್ತೆ. ಆಗ ನಮ್ಮ ಮದುವೆ ವಿಚಾರ ಏನಾಗುತ್ತೆ?"

"ನಮಗೆ ತಿನ್ನೋಕೆ ಮನೇಲಿ ಏನೂ ಇಲ್ಲದೆ ಹೋದಾಗ, ಅಲ್ಲಿಗೆ ಹೋಗೋದಕ್ಕೆ ನೀನೇ ಅಲ್ವೆ ಹೇಳಿದ್ದು? ಇನ್ನಷ್ಟು ದುಡ್ಡು ಸಂಪಾದನೆ ಮಾಡು, ಆಗ ನಾನು ಹೋಗೊಲ್ಲ."

ಹೇಗೋ ಕಡೆಗೆ ಪೋಸ್ ಕೊಡಲು ಒಪ್ಪಿಸಿದಾಗ, ಅವಳು ಸರಿಯಾಗಿ ಕೊಡುತ್ತಲೇ ಇರಲಿಲ್ಲ. ಏನೆಲ್ಲ ತಪ್ಪು ಮಾಡುತ್ತಿದ್ದಳು. ವರ್ಷದ ಹಿಂದೆ ಮಾಡಿದ್ದ ತಪ್ಪುಗಳನ್ನೆಲ್ಲ ನಿವಾರಿಸಿಕೊಳ್ಳಲು ಮಾಡುತ್ತಿದ್ದ ಪ್ರಯತ್ನಗಳೆಲ್ಲ ನಿಷ್ಪ್ರಯೋಜಕವಾದವು. ವಕ್ರವಕ್ರವಾಗಿ ಭಂಗಿಗಳನ್ನು ನೀಡುವುದು, ನಿಂತಾಗ ಚಡಪಡಿಸುವುದು, ಅವನು ಹೇಳುವುದಕ್ಕಿಂತ, ಬೇರೆಯಾದ ಭಂಗಿಗಳನ್ನು ಪ್ರದರ್ಶಿಸುವುದು, ಇತ್ಯಾದಿಗಳನ್ನು ಉದ್ದೇಶ ಪೂರ್ವಕವಾಗಿಯೇ ಮಾಡುತ್ತಿದ್ದಳು. ಹೀಗೆ ಮಾಡುವುದರಿಂದ ಅವನು ಬೇಸತ್ತು, ಮತ್ತೊಮ್ಮೆ ತನ್ನನ್ನು ಕರೆಯುವುದಿಲ್ಲ ಎನ್ನುವ ಲೆಕ್ಕಾಚಾರ. ಅವಳು ಬಯಸಿದಂತೆಯೇ, ಮುಂದೆಂದೂ ಅವಳನ್ನು ಮಾಡೆಲ್ ಆಗಿರಲು ಕರೆಯಲಿಲ್ಲ. ಹೊರಗಡೆಯಿಂದ ಬರುವ ಮಾಡೆಲ್‌ಗಳಿಗಾಗಿ ಹೆಚ್ಚಿನ ಹಣ ಖರ್ಚಾಗುತ್ತಿತ್ತು. ಜೊತೆಗೆ ಉಪವಾಸ ಬೀಳುವ ಸಜಂದರ್ಭಗಳೂ ಹೆಚ್ಚಾದವು. ಇದೇ ಕಾರಣಕ್ಕೆ, ಕ್ರಿಸ್ಟೀನ್ ಅಮ್ಮನ ಮನೆಯಲ್ಲಿಯೇ ಹೆಚ್ಚಿಗೆ ಸಮಯ ಕಳೆಯಬೇಕಾಗುತ್ತಿತ್ತು. ಪ್ರತಿಸಲ ಅಮ್ಮನ ಮನೆಯಿಂದ ಬಂದಾಗಲೂ ಅವಳಲ್ಲಿ ಸ್ವಲ್ಪ ಬದಲಾವಣೆ ಕಾಣುತ್ತಿತ್ತು. ಅವನೊಂದು ವಿಷವರ್ತುಲದಲ್ಲಿ ಸಿಲುಕಿಕೊಂಡಿದ್ದ. ತನ್ನಲ್ಲಿ ಇದ್ದ ಹಣವನ್ನೆಲ್ಲ ಮನೆ ಖರ್ಚಿಗೆಂದು ಖಾಲಿ ಮಾಡಿದರೆ, ಕ್ರಿಸ್ಟೀನ್ ಮನೆಯಲ್ಲಿಯೇ ಉಳಿದುಕೊಳ್ಳುವುದರಿಂದ ಸಂಬಂಧಗಳಲ್ಲಿ ತೊಡಕು ಉದ್ಭವಿಸದೆ ಇರಬಹುದು. ಆದರೆ ಇದರಿಂದ, ಹಣವಿಲ್ಲದೆ ತನ್ನ ಕೆಲಸ ನಿಂತು ಹೋಗುತ್ತದೆ. ಅವಳನ್ನು ಉಳಿಸಿಕೊಳ್ಳುವುದಕ್ಕಾಗಿ, ತಾನು ಸಾಯಬೇಕೇ? ಅವಳು ಅಮ್ಮನ ಮನೆಗೆ ಹೋಗದಿದ್ದರೆ, ಮಕ್ಕಳು, ಅವಳು ಉಪವಾಸದಿಂದ ಸಾಯಬೇಕಾಗುತ್ತದೆ; ಹೋಗದೆ ಉಳಿದರೆ, ತನ್ನ ಮನೆ ಒಡೆದು ಚೂರಾಗುತ್ತದೆ. ಅವನು ಈ ಪರಿಸ್ಥಿತೀಲಿ ಏನು ಮಾಡಬೇಕು?

ಖಾಯಿಲೆಯಿಂದ ನರಳುತ್ತಿದ್ದ ಕ್ರಿಸ್ಟೀನ್; ಆಸ್ಪತ್ರೆಯಲ್ಲಿ ಹೆರಿಗೆಗೆಂದು ಸೇರಿ ಚಿಕಿತ್ಸೆ ಪಡೆಯುತ್ತಿದ್ದ ಕ್ರಿಸ್ಟೀನ್, ಒಂದು ಥರಾ ಹೆಣ್ಣು. ಯಾರಿಗೂ ಬೇಡವಾಗಿ ಬೀದೀಲಿ ಬಿದ್ದು, ಸಾವಿನ ಅಂಚಿನಲ್ಲಿದ್ದು ನರಳಿದವಳು! ಒಂದು ಪ್ರೀತಿಯ ಮಾತಿಗೆ ಹಂಬಲಿಸಿದವಳು; ಪ್ರಪಂಚದಲ್ಲಿನ ಎಲ್ಲ ಬಗೆಯ ನೋವನ್ನು ಅನುಭವಿಸಿದವಳು. ಒಂದು ಕ್ಷಣದ ಸಹಾನುಭೂತಿ, ಅನುಕಂಪ; ಪ್ರೀತಿಗಳಿಗಾಗಿ ಏನೆಲ್ಲವನ್ನೂ ಮಾಡಲು ಸಿದ್ಧವಾಗಿ, ತುಂಬು ವಾಗ್ದಾನಗಳನ್ನು ಮಾಡಿದವಳು! ಆದರೆ ಒಂದು ಸಲ,

ಚೇತರಿಸಿಕೊಂಡ ಮೇಲೆ, ಬಯಸಿದ್ದೆಲ್ಲ ಬಂದಾದ ಮೇಲೆ, ಬೆಚ್ಚನೆಯ ಮನೆ, ಒಳ್ಳೆ ಆಹಾರ, ಔಷಧೋಪಚಾರ, ಎಲ್ಲಕ್ಕಿಂತ ಹೆಚ್ಚಾಗಿ ಪ್ರೀತಿಸುವ ವ್ಯಕ್ತಿ ದೊರೆತದ್ದೇ, ಅವಳ ರೀತಿಯೇ ಬದಲಾಯಿತು! ಅವಳು ಬೇರೆಯೇ ಹೆಣ್ಣಾದಳು!! ನೋವಿನ ನೆನಪುಗಳು ಮರೆಯಾದವು. ಒಳ್ಳೆಯ ಹೆಂಡತಿ, ಒಳ್ಳೆಯ ಗೃಹಿಣಿಯಾಗಿರುತ್ತೇನೆಂಬ ಭರವಸೆಯೂ ಕರಗಿ ಹೋಯಿತು. ನಿಧಾನವಾಗಿ ಅವಳಲ್ಲಿ ಹಳೆಯ ಚಾಳಿ ಇಣುಕುತ್ತಿತ್ತು. ಅಲ್ಲಿ ಇಲ್ಲಿ ಅಲೆಯುತ್ತಾ, ಕೊಳಕು ಕೊಳಕಾದ ಬಟ್ಟೆಯಲ್ಲಿ ಕಾಣಿಸಿಕೊಳ್ಳುತ್ತಾ, ಹೆಂಡದಂಗಡಿಗಳಲ್ಲಿ ಕಂಡಕಂಡ ಗಂಡಸರೊಂದಿಗೆ ಹೆಂಡ, ಸಿಗರೇಟುಗಳಲ್ಲಿ ಮೈಮರೆಯುತ್ತಾ, ಹದಿನಾಲ್ಕು ವರ್ಷಗಳ ಹಿಂದಿನ ಬದುಕು, ಕೇವಲ ಒಂದು ವರ್ಷದ ಪ್ರೀತಿ, ಸ್ನೇಹಗಳ ಬದುಕನ್ನು ಕಬಳಿಸಿಬಿಟ್ಟಿತು. ತಿರಸ್ಕೃತ, ಅಸಹ್ಯ ಬದುಕಿನ ಲಕ್ಷಣಗಳು ಅವಳಲ್ಲಿ ಕಾಣಿಸಿಕೊಳ್ಳತೊಡಗಿತು. ಮೊದಮೊದಲಿಗೆ, ವಿನ್ಸೆಂಟ್ ಗಮನಿಸಿರಲಿಲ್ಲವಾದರೂ ಕ್ರಮೇಣ ಈ ಬದಲಾವಣೆ ಅವನ ಅರಿವಿಗೆ ಬರತೊಡಗಿತು.

ಇದೇ ಸಮಯದಲ್ಲಿ, ಹೊಸ ವರ್ಷದ ಆರಂಭದಲ್ಲಿ ವಿನ್ಸೆಂಟ್‌ಗೆ ಥಿಯೋನಿಂದ ಒಂದು ಕಾಗದ ಬಂತು. ಅದರ ವಿಷಯ ಓದಿದಾಗ ವಿಚಿತ್ರವೆನಿಸಿತು. ಪ್ಯಾರಿಸ್‌ನ ಬೀದಿಯೊಂದರಲ್ಲಿ, ಖಾಯಿಲೆಯಿಂದ ನರಳುತ್ತಿದ್ದ, ತೀರಾ ದೀನ ಸ್ಥಿತಿಯಲ್ಲಿದ್ದ ಒಂಟಿ ಹೆಣ್ಣೊಬ್ಬಳು ಸಿಕ್ಕಿದಳು. ಅವಳ ಪಾದದಲ್ಲಿ ಏನೋ ಘಾಯ ಆಗಿತ್ತು. ಕೆಲಸ ಮಾಡಲೂ ಅವಳಿಂದ ಸಾಧ್ಯವಾಗಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಆಕೆ ಆತ್ಮಹತ್ಯೆಗೆ ಪ್ರಯತ್ನಿಸಿದ್ದಳು. ವಿನ್ಸೆಂಟ್‌ನಿಂದ ಥಿಯೋ ಪಾಠ ಕಲಿತಿದ್ದ. ಥಿಯೋ ಅವನನ್ನೇ ಗುರುವಾಗಿ ಭಾವಿಸಿ, ಅವನ ಹೆಜ್ಜೆ ಜಾಡಿನಲ್ಲಿ ನಡೆದಿದ್ದ. ತನ್ನ ಹಳೆಯ ಸ್ನೇಹಿತನೊಬ್ಬನ ಮನೆಯಲ್ಲಿ ಅವಳಿಗೆ ಆಶ್ರಯ ಕಲ್ಪಿಸಿದ್ದ. ಡಾಕ್ಟರೊಬ್ಬರನ್ನು ಕರೆಸಿ ಅವಳಿಗೆ ಚಿಕಿತ್ಸೆಕೊಡಿಸಿ, ತಾನೇ ಮೆಡಿಕಲ್ ಬಿಲ್ಲುಗಳ ಹಣ ಪಾವತಿ ಮಾಡಿದ್ದ. ಕಾಗದದಲ್ಲಿ ಅವಳನ್ನು ತನ್ನ ಪೇಷೆಂಟ್ ಎಂದು ಕರೆದಿದ್ದ.

"ವಿನ್ಸೆಂಟ್ ನಾನು, ಆ ನನ್ನ ಪೇಷೆಂಟನ್ನು ಮದುವೆಯಾಗಬೇಕೇ? ಹೇಗೆ? ಅವಳ ಸೇವೆ ಮಾಡಲು ಅದೊಂದು ಒಳ್ಳೆಯ ಮಾರ್ಗವಾಗಬಹುದೇ? ಕಾನೂನು ಬದ್ಧವಾಗಿ ಮದುವೆಯಾಗಬೇಕೇ? ಜೀವನದಲ್ಲಿ ಅವಳು ಬಹಳ ನೊಂದಿದ್ದಾಳೆ. ತಾನು ಪ್ರೀತಿಸಿದ ಗಂಡಸು ಅವಳನ್ನು ಕೈಬಿಟ್ಟಿದ್ದಾನೆ, ಅವಳನ್ನು ಬದುಕಿಸಿ ಉಳಿಸಲು ನಾನು ಏನು ಮಾಡಬೇಕು?" ಎಂದು ವಿನ್ಸೆಂಟ್‌ನ ಸಲಹೆ ಕೇಳಿದ್ದ.

ವಿನ್ಸೆಂಟ್‌ನ ಮನಸ್ಸು ದ್ರವಿಸಿತು. ಸಹಾನುಭೂತಿಯನ್ನು ತಿಳಿಸಿದ. ದಿನದಿಂದ ದಿನಕ್ಕೆ ಕ್ರಿಸ್ಟೀನ್ ದೊಡ್ಡ ಸಮಸ್ಯೆಯಾಗುತ್ತಿದ್ದಳು, ತಿನ್ನೋಕೆ ಬ್ರೆಡ್ಡು, ಕಾಫಿ ಮಾತ್ರವೇ ಇದ್ದಾಗಲೆಲ್ಲ ಗೊಣಗುತ್ತಿದ್ದಳು. ಮಾಡೆಲ್‌ಗಳ ಮೇಲೆ ಖರ್ಚು ಮಾಡುವುದನ್ನು ಬಿಟ್ಟು ಮನೆ ಖರ್ಚಿಗೆ ಹೆಚ್ಚಿಗೆ ಹಣ ಕೊಡಬೇಕೆಂದು ಹಟ ಮಾಡುತ್ತಿದ್ದಳು. ಹೊಸಬಟ್ಟೆ ಕೊಳ್ಳಲು ಆಗದೆ ಹೋದಾಗ ಹಳೆಬಟ್ಟೆಯನ್ನು ಶುಭ್ರಮಾಡುವ ಗೋಜಿಗೆ ಹೋಗದೆ, ಮತ್ತೂ ಕೊಳೆಯಾಗಲು ಬಿಡುತ್ತಿದ್ದಳು. ಇತ್ತೀಚೆಗಂತೂ ವಿನ್ಸೆಂಟ್‌ನ ಬಟ್ಟೆಯನ್ನು

ಒಗೆಯುತ್ತಲೇ ಇರಲಿಲ್ಲ. ಅವನ ಬಟ್ಟೆ ಹರಿದಿದ್ದರೆ ಅದನ್ನು ಸರಿ ಮಾಡುವ ಗೋಜಿಗೇ ಹೋಗುತ್ತಿರಲಿಲ್ಲ. ತಾಯಿಯ ಚಾಡಿ ಮಾತುಗಳು ಮತ್ತು ಅವಳ ಪ್ರಭಾವ ಹೆಚ್ಚಾಗುತ್ತಿತ್ತು. ವಿನ್ಸೆಂಟ್ ಅವಳಿಂದ ದೂರ ಹೋಗಲಿ ಇಲ್ಲವೆ ಅವಳನ್ನು ಮನೆಯಿಂದ ಹೊರಗೆ ಹಾಕಲಿ' ಎಂದು ಮಗಳಿಗೆ ಚೆನ್ನಾಗಿ ಬೋಧನೆ ಮಾಡಿ ಕಳಿಸುತ್ತಿದ್ದಳು. ಈಗ ಶಾಶ್ವತ ಸಂಬಂಧದಿಂದ ಯಾವುದೇ ಪ್ರಯೋಜನವಿರಲಿಲ್ಲ. ಅಂಥಾದ್ದರಲ್ಲಿ ತಾತ್ಕಾಲಿಕ ಸಂಬಂಧ ಯಾಕೆ ಮುಂದುವರೆಯಬೇಕು?

ಥಿಯೋಗೆ ಅವಳನ್ನು (ಪೇಷೆಂಟ್) ಮದುವೆಯಾಗಲು ಸೂಚಿಸಬಹುದೇ? ಕಾನೂನುಬದ್ಧ ವಿವಾಹದಿಂದ ಇಂತಹ ಹೆಂಗಸರನ್ನು ರಕ್ಷಿಸಲು ಸಾಧ್ಯವೇ? ಇಲ್ಲವೆ ಅವರಿಗೆ ಒಂದು ಸೂರು ಕಲ್ಪಿಸಿ, ಒಳ್ಳೆಯ ಆಹಾರ ಕೊಟ್ಟು, ಆರೋಗ್ಯ ಸುಧಾರಿಸುವಂತೆ ಮಾಡಿ, ಕರುಣೆ ತೋರಿ ಮತ್ತೆ ಬದುಕನ್ನು ಪ್ರೀತಿಸುವಂತೆ ಮಾಡಬೇಕೆ?

"ಸ್ವಲ್ಪ ತಡೆ" – ಥಿಯೋಗೆ ಎಚ್ಚರಿಸಿ ಬರೆದ. "ಅವಳಿಗೆ ಮಾಡಬಹುದಾದ ಸಹಾಯವನ್ನೆಲ್ಲ ಮಾಡು. ಇದೊಂದು ಪವಿತ್ರವಾದ, ಯೋಗ್ಯವಾದ ಕೆಲಸ. ಆದರೆ ಮದುವೆ ಗಿದುವೆ ಅದೆಲ್ಲದರಿಂದ ಏನೂ ಪ್ರಯೋಜನ ಆಗಲಾರದು. ನಿಮ್ಮಿಬ್ಬರ ನಡುವೆ ಪ್ರೀತಿ ಬೆಳೆದಾಗ 'ಮದುವೆ' ಸರಿ ಹೋಗಬಹುದು. ಆದರೆ ಈಗ ಸದ್ಯಕ್ಕೆ ಅವಳು ಚೇತರಿಸಿಕೊಳ್ಳುವುದರ ಕಡೆ ಗಮನಹರಿಸು."

ಥಿಯೋ ಮೂರು ಕಂತುಗಳಲ್ಲಿ ತಿಂಗಳಿಗೆ ನೂರೈವತ್ತು ಫ್ರ್ಯಾಂಕ್‌ಗಳನ್ನು ಕಳಿಸುತ್ತಿದ್ದ. ಕ್ರಿಸ್ಟೀನ್ ಮನೆ ಕಡೆ ನಿರ್ಲಕ್ಷ್ಯ ವಹಿಸಿದಳು. ಮೊದಲಿನಂತೆ ಈಗ ದುಡ್ಡು ಮನೆ ನಿರ್ವಹಣೆಗೆ ಸಾಕಾಗುತ್ತಿರಲಿಲ್ಲ. ವಿನ್ಸೆಂಟ್‌ಗೆ ಮಾಡೆಲ್‌ಗಳ ಹಸಿವು. ಎಷ್ಟೆಷ್ಟು ಪ್ರಯೋಗಗಳನ್ನು ಮಾಡಿದರೆ, ಅಷ್ಟಷ್ಟು ಅವನ ಕ್ಯಾನ್‌ವಾಸುಗಳು ಉತ್ತಮವಾಗಬಲ್ಲವು ಎನ್ನುವುದು ಅವನ ಆಲೋಚನೆ. ಮನೆಗೆ ಖರ್ಚಾಗುವ ಒಂದೊಂದು ಫ್ರ್ಯಾಂಕೂ, ಅವನ ಮನಸ್ಸಿಗೆ ನೋವುಂಟು ಮಾಡುತ್ತಿತ್ತು. ಕ್ರಿಸ್ಟೀನ್, ವಿನ್ಸೆಂಟ್ ಕಲೆ, ಪೈಂಟ್ ಮಾಡೆಲ್ ಅಂತ ಖರ್ಚು ಮಾಡುವ ಒಂದೊಂದು ಫ್ರ್ಯಾಂಕಿಗೂ ಸಿಡಿಮಿಡಿಗೊಳ್ಳುತ್ತಿದ್ದಳು. ಅವಳಿಗೆ ಮನೆಯ ಚಿಂತೆ! ವಿನ್ಸೆಂಟ್‌ಗೆ ಕಲೆಯ ಚಿಂತೆ. ನಾಲ್ಕು ಜನರ ಪೋಷಣೆಗೆ ಬರುತ್ತಿದ್ದ ಹಣ ಸಾಕಾಗುತ್ತಿರಲಿಲ್ಲ. ಇದರಿಂದಾಗಿ ಎಲ್ಲ ಕಡೆ ಸಾಲ! ಮನೆ ಮಾಲಿಕನಿಗೆ, ದಿನಸಿ ಅಂಗಡಿಗೆ, ಬೂಟು ಮಾಡುವವನಿಗೆ, ಬ್ರೆಡ್ ಅಂಗಡಿಯವನಿಗೆ ವರ್ಣ ವ್ಯಾಪಾರಿಗೆ – ಹೀಗೆ ಎಲ್ಲರಲ್ಲಿಯೂ ಸಾಲ!! ಸಾಲದೆಂಬಂತೆ ಥಿಯೋ ಕಳಿಸುತ್ತಿದ್ದ ಹಣದಲ್ಲಿ ಸ್ವಲ್ಪ ಖೋತಾ. ವಿನ್ಸೆಂಟ್ ಅವನನ್ನು ಬೇಡುತ್ತಾ ಪತ್ರಬರೆದ. "೨೦ನೇ ತಾರೀಖಿಗೆ ಸ್ವಲ್ಪ ಮುಂಚೆ ಕಳಿಸಿದರೆ, ತುಂಬಾ ಒಳ್ಳೆಯದೆಂದು ತಿಳಿಸಿದ. ಮನೇಲಿ ಒಂದೆರಡು ಮಾತ್ರ ಕಾಗದದ ಹಾಳೆಗಳು, ಒಂದು ತುಂಡು ಕ್ರೇಯಾನ್ ಉಳಿದಿದೆ. ಮಾಡೆಲ್‌ಗೆ ಕೊಡುವುದಕ್ಕಾಗಲೀ, ಊಟಕ್ಕಾಗಲೀ, ನನ್ನ ಬಳಿ ಒಂದು ಫ್ರ್ಯಾಂಕ್ ಕೂಡಾ ಉಳಿದಿಲ್ಲ." ತಿಂಗಳಲ್ಲಿ ಮೂರು ಮೂರು ಬಾರಿ ಈ ರೀತಿ ಕಾಗದ ಬರೆಯುತ್ತಿದ್ದ. ಐವತ್ತು ಫ್ರ್ಯಾಂಕ್‌ಗಳು ತಲುಪುತ್ತಿದ್ದಂತೆ, ಕೊಡಬೇಕಾಗದವರಿಗೆ ಕೊಟ್ಟು ಬಿಟ್ಟಿದ್ದರಿಂದ ಮುಂದೆ ಹತ್ತು ದಿನಗಳಿಗೆ ಅವನಲ್ಲಿ ಯಾವುದಕ್ಕೂ ಕಾಸೇ ಇರಲಿಲ್ಲ.

ಥಿಯೋನ ಪೇಷೆಂಟ್‌ಗೆ ಪಾದದಲ್ಲಿ ಟ್ಯೂಮರ್ ಆಗಿತ್ತು. ಅದನ್ನು ಆಪರೇಷನ್ ಮಾಡಿಸಲು ಒಳ್ಳೆಯ ಆಸ್ಪತ್ರೆಗೆ ಕರೆದೊಯ್ದ. ಅದೇ ಸಮಯದಲ್ಲಿ, ನ್ಯೂನೆನ್‌ನಲ್ಲಿ ತನ್ನ ಮನೆಗೂ ದುಡ್ಡು ಕಳಿಸಬೇಕಿತ್ತು. ತಂದೆಗೆ ಬರುತ್ತಿದ್ದ ವರಮಾನ ಮನೆ ನಿರ್ವಹಣೆಗೆ ಸಾಕಾಗುತ್ತಿರಲಿಲ್ಲ. ಥಿಯೋ ಮನೆ, ಪೇಷೆಂಟ್, ವಿನ್ಸೆಂಟು, ಅವನ ಕುಟುಂಬ – ಹೀಗೆ ಎಲ್ಲರನ್ನೂ ನೋಡಿಕೊಳ್ಳುತ್ತಿದ್ದ. ಹೆಗಲ ಮೇಲೆ ದೊಡ್ಡ ಜವಾಬ್ದಾರಿ. ಕಡೇ ಸೆಂಟೀಮ್‌ವರೆಗೂ ಖರ್ಚಾಗಿ ಹೋಗುತ್ತಿತ್ತು. ಇಂಥಾದ್ದರಲ್ಲಿ ವಿನ್ಸೆಂಟ್‌ಗೆ ಹೆಚ್ಚಿಗೆ ಹಣ ಕಳಿಸಲು ಸಾಧ್ಯವಾಗುತ್ತಿರಲಿಲ್ಲ.

ಮಾರ್ಚ್ ತಿಂಗಳ ಮೊದಲಿಗೇ, ವಿನ್ಸೆಂಟ್ ಬಳಿ ಹರಿದು ಹೋಗಿದ್ದ ಒಂದು ಫ್ರ್ಯಾಂಕ್‌ನ ನೋಟಿತ್ತು. ಅದನ್ನು ಯಾವ ಅಂಗಡಿಯವನೂ ತೆಗೆದುಕೊಳ್ಳಲು ಸಿದ್ಧನಿರಲಿಲ್ಲ. ಮನೆಯಲ್ಲಿ ಊಟಕ್ಕೆ ಒಂದಗಳೂ ಇರಲಿಲ್ಲ. ಥಿಯೋನಿಂದ ಹಣ ಬರಬೇಕಿದ್ದರೆ ಇನ್ನೂ ಒಂಬತ್ತು ದಿನ ಕಾಯಬೇಕಿತ್ತು. ಆದರೆ ಅಷ್ಟು ದಿನ ಕ್ರಿಸ್ಟೀನ್‌ಳನ್ನು ಅಮ್ಮನ ಮನೆಯಲ್ಲಿ ಇರಿಸುವುದಕ್ಕೆ ಅವನಿಗೆ ಹೆದರಿಕೆಯಾಗಿತ್ತು.

"ಸಿಯೆನ್, ಮಕ್ಕಳನ್ನು ಉಪವಾಸ ಕೆಡವೋದು ಸರಿಯಿಲ್ಲ. ಅವರನ್ನು ಅಮ್ಮನ ಮನೇಲಿ ಬಿಟ್ಟು ಬಾ. ಥಿಯೋನಿಂದ ಹಣ ಬರುವವರೆಗೆ ಅಲ್ಲಿಯೇ ಇರಲಿ."

ಇಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡರು. ಇಬ್ಬರ ಮನಸ್ಸಿನಲ್ಲಿಯೂ ಇದೇ ವಿಚಾರ ಹೊಳೆದಿತ್ತಾದರೂ ಹೇಳುವ ಧೈರ್ಯವಿರಲಿಲ್ಲ.

"ಆಯ್ತು. ಹಾಗೆ ಮಾಡೋದೇ ಸರಿ ಅನ್ಸತ್ತೆ."

ಅಂಗಡಿಯವನು ಕನಿಕರಿಸಿ, ಹರಿದ ನೋಟಿಗೆ ಒಂದೆರಡು ಕಪ್ಪು ಬ್ರೆಡ್ಡಿನ ಚೂರುಗಳು, ಒಂದಿಷ್ಟು ಕಾಫಿ ನೀಡಿದ. ಅವನು ಸಾಲದ ಮೇಲೆ ಮಾಡೆಲ್‌ಗಳನ್ನು ಕರೆತಂದ. ಅವನಲ್ಲಿ ಭಯ ಹೆಚ್ಚಾಯಿತು. ಮಾಡುತ್ತಿದ್ದ ಕೆಲಸವೂ ಸರಿಯಾಗಲಿಲ್ಲ. ತನ್ನನ್ನು ಉಪವಾಸಕ್ಕೊಡ್ಡಿಕೊಂಡಿದ್ದ. ನಿರಂತರ ಆರ್ಥಿಕ ಮುಗ್ಗಟ್ಟಿನಿಂದಾಗಿ ಅವನ ಆರೋಗ್ಯ ಕೆಡುತ್ತಿತ್ತು. ಕೆಲಸ ಮಾಡದೆ ಇರುವುದು ಅವನಿಂದ ಸಾಧ್ಯವಾಗುತ್ತಿರಲಿಲ್ಲ. ಒಂದೊಂದು ಗಂಟೆಯೂ ಅವನು ಸೋಲುತ್ತಿದ್ದುದನ್ನು ಸ್ಪಷ್ಟವಾಗಿ ತೋರಿತು.

ಒಂಬತ್ತು ದಿನಗಳ ಕೊನೆಯಲ್ಲಿ ಅಂದರೆ ಹತ್ತನೇ ದಿನ ಥಿಯೋನ ಕಾಗದ ಮತ್ತು ಐವತ್ತು ಫ್ರ್ಯಾಂಕ್‌ಗಳು ಬಂದವು. ಅವನ ಪೇಷೆಂಟ್ ಈಗ ಸುಧಾರಿಸಿದ್ದಳು. ಅವಳನ್ನು ಒಂದು ಖಾಸಗಿ ಮನೆಯಲ್ಲಿ ಇರಿಸಿದ್ದ. ಅವನಿಗೂ ಹಣದ ಮುಗ್ಗಟ್ಟು ಹೆಚ್ಚುತ್ತಲೇ ಇತ್ತು. ಅವನೂ ದಿಕ್ಕು ತೋಚದವನಂತಾಗಿದ್ದ. ವಿನ್ಸೆಂಟ್‌ಗೆ ಬರೆದ, "ಬಹುಶಃ ಇನ್ನು ಮುಂದೆ ಹಣ ಕಳಿಸಲು ಸಾಧ್ಯವಾಗದೆ ಹೋಗಬಹುದು."

ಈ ಒಂದು ವಾಕ್ಯ ವಿನ್ಸೆಂಟ್‌ನನ್ನು ಪಾತಾಳಕ್ಕೆ ಇಳಿಸಿಬಿಟ್ಟಿತು. ನಿಜವಾಗಿಯೂ ಥಿಯೋ ಇನ್ನುಮುಂದೆ ಹಣ ಕಳಿಸಲು ಸಾಧ್ಯವಾಗುವುದಿಲ್ಲ ಎಂದಷ್ಟೇ ಹೇಳಿದ್ದರೆ, ಅಂಥ ಸಮಸ್ಯೆಯೇನೂ ಆಗುವುದಿಲ್ಲ. ಆದರೆ ಅವನು ಆ ರೀತಿ ಬರೆಯುವುದರ ಅರ್ಥ?....... ತಾನು ಪ್ರತಿದಿನಾ ಕಳಿಸುತ್ತಿದ್ದ ಸ್ಕೆಚ್‌ಗಳನ್ನು ನೋಡಿ ಬಹುಶಃ 'ತನ್ನಲ್ಲಿ

ಇನ್ನೂ ಯಾವುದೇ ಪ್ರತಿಭೆಯಿಲ್ಲ. ಮುಂದೆ ಅವನಿಂದ ಯಾವುದೇ ನಿರೀಕ್ಷೆ ಸಾಧ್ಯವಿಲ್ಲ- ಎನ್ನುವ ಅರ್ಥವೇ?'

ಇಡೀ ರಾತ್ರಿ ಎಚ್ಚರವಾಗಿಯೇ ಇದ್ದ. ಒಂದಾದ ಮೇಲೊಂದು ಕಾಗದಗಳನ್ನು ಬರೆದ. ಅವನು ಬರೆದದ್ದನ್ನು ವಿವರಿಸಲು ಕೇಳಿದ. ತಾನೇ ತನ್ನ ಕಾಲ ಮೇಲೆ ನಿಲ್ಲಲು ಯಾವುದಾದರೂ ದಾರಿ ತೋರಿಸಲು ಕೋರಿದ. ಆದರೆ ಅವನು ಯಾವುದಕ್ಕೂ ಉತ್ತರಿಸಲಿಲ್ಲ.

-೧೪-

ಕ್ರಿಸ್ಟೀನ್‌ಳನ್ನು ಕರೆಯಲು ಅವಳ ಮನೆಗೆ ಹೋದ. ಅಲ್ಲಿ ಅವಳು ತನ್ನ ತಾಯಿ, ಸೋದರನ ಮಿಸ್ಟ್ರೆಸ್ಸು ಮತ್ತು ಅಪರಿಚಿತ ವ್ಯಕ್ತಿ - ಇವರೊಂದಿಗೆ ಕುಳಿತು ಕಪ್ಪು ಸಿಗಾರ್ ಸೇದುತ್ತಿದ್ದಳು. ಷೆಂಕ್‌ವಾಗ್‌ಗೆ ಮರಳಿ ಬರಲು ಇಷ್ಟವಿಲ್ಲವೆಂಬಂತೆ ಕಾಣಿಸಿಕೊಂಡಳು.

ತಾಯಿ ಮನೆಯಲ್ಲಿ ಒಂಬತ್ತು ದಿನ ಇರುತ್ತಿದ್ದಂತೆ, ಅವಳಲ್ಲಿ ಮೊದಲಿನ ಹಳೇ ಚಟಗಳೆಲ್ಲ ಮತ್ತೆ ಮೈಗೂಡಿದಂತೆ ಕಾಣಿಸಿತು.

"ನನಗೆ ಸಿಗಾರ್ ಸೇದಲು ಇಷ್ಟವಾದರೆ ಸೇದಬಹುದು. ಅದನ್ನು ತಡೆಯಲು ನಿನಗೆ ಯಾವ ಹಕ್ಕೂ ಇಲ್ಲ. ಆಸ್ಪತ್ರೆ ಡಾಕ್ಟರೇ ಹೇಳಿದ್ದಾರೆ, - ಸಿಗಾರ್ ಬೇಕಾದರೂ ಸೇದಬಹುದು; ಬಿಟ್ಟರ್ಸ್ ಬೇಕಾದರೂ ಕುಡೀಬಹುದೂಂತ!"

"ಹೌದು! ಎಷ್ಟು?.... ಔಷಧಿ ಥರ..... ನಿನ್ನ ಹಸಿವು ಹೆಚ್ಚಿಸಲು."

ವಿಕಟವಾಗಿ ನಕ್ಕಳು. ಔಷಧಿ!..... ಏನಂದೆ?...... ನೀನು..... ನೀನು!......" ಅವಳಾಡಿದ ಮಾತು ಎಷ್ಟು ಅಸಹ್ಯವಾಗಿತ್ತೆಂದರೆ, ಅಂಥಾದ್ದನ್ನು ತಮ್ಮಿಬ್ಬರ ಪರಿಚಯವಾದಾಗಿನಿಂದ ಒಮ್ಮೆಯೂ ಬಳಸಿರಲಿಲ್ಲ!

ವಿನ್ಸೆಂಟ್‌ಗೆ ತಲೆ ಚಿಟ್ಟು ಹಿಡಿಯಿತು. ತಾಳ್ಮೆಯಿಂದಿರಲು ಅವನಿಂದ ಇನ್ನು ಸಾಧ್ಯವಿರಲಿಲ್ಲ. ಅವನೂ ಕೂಡಾ ಕ್ರೋಧಾವೇಶದಿಂದ ಮಾತನಾಡಿದ. ಕ್ರಿಸ್ಟೀನ್ ಕೂಡಾ ಅವನದೇ ದಾರಿಯಲ್ಲಿ ಮುಂದುವರೆದಳು. "ಇನ್ನು ಮುಂದೆ ನೀನು ನನ್ನನ್ನು ನೋಡಿಕೊಳ್ಳಬೇಕಾಗಿಲ್ಲ.... ನನಗೆ ತಿನ್ನೋಕೆ ಊಟಕೊಡೊ ಯೋಗ್ಯತೆಯಿಲ್ಲ.... ಬೇಕಾದರೆ ಹೆಚ್ಚಿಗೆ ಸಂಪಾದನೆ ಮಾಡು.... ದುಡಿಯೋಕೆ ಆಗದೆ ಇರೋನೂ ಎಂಥ ಗಂಡಸು ನೀನು?" ಎಂದು ಅಬ್ಬರಿಸಿದಳು.

ಚಳಿಗಾಲ ಮುಗಿದು ವಸಂತಾಗಮನವಾಯಿತು. ವಿನ್ಸೆಂಟ್‌ನ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿತು. ಸಾಲಗಳು ಹೆಚ್ಚಾದವು. ಹೊಟ್ಟೆಗೆ ಸರಿಯಾದ ಊಟವಿಲ್ಲದ್ದರಿಂದ, ಬಾಯಿಗೆ ತುತ್ತು ರುಚಿಸುತ್ತಿರಲಿಲ್ಲ. ಹೊಟ್ಟೆ ಸಂಕಟ, ಹಲ್ಲಿನ ನೋವಿಗೆ ದಾರಿ ಮಾಡಿತು. ಸಹಿಸಲು ಅಸಾಧ್ಯವಾದ ನೋವು. ಈ ನೋವು ಕಿವಿಗೂ ವ್ಯಾಪಿಸಿತು. ನೋವಿನಿಂದ ಯಮಯಾತನೆ ಅನುಭವಿಸಿದ.

ಕ್ರಿಸ್ಟೀನ್‌ಳ ತಾಯಿ, ಮನೆಗೆ ಬರಲು ಪ್ರಾರಂಭಿಸಿದ್ದಳು. ಯಾವಾಗಲೂ ಕುಡಿಯೋದು, ಸಿಗರೇಟು ಸೇದೋದು! ಕ್ರಿಸ್ಟೀನ್ ಮದುವೆಯಿಂದ ಸುಖವಾಗಿ ಇರ್‍ತಾಳೆ ಅನ್ನುವ ವಿಚಾರದಲ್ಲಿ ಅವಳಿಗೆ ಈಗ ನಂಬಿಕೆ ಇರಲಿಲ್ಲ. ಒಂದು ಸಲ ವಿನ್ಸೆಂಟ್ ಒಳಗೆ ಬರುತ್ತಿದ್ದಂತೆ, ಕ್ರಿಸ್ಟೀನ್‌ಳ ಸೋದರ ಒಳಗಿದ್ದ. ಆದರೆ ಅವನು ಒಳಗೆ ಹೆಜ್ಜೆ ಇಡುತ್ತಿದ್ದಂತೆ ಅವನು ಅಲ್ಲಿಂದ ಮೆಲ್ಲಗೆ ನುಣುಚಿಕೊಂಡ.

"ಅವನು ಯಾಕೆ ಇಲ್ಲಿಗೆ ಬಂದಿದ್ದ? ಅವನಿಗೆ ನಿನ್ನಿಂದ ಏನಾಗಬೇಕಿತ್ತಂತೆ?"

"ನೀನು ನನ್ನನ್ನು ಹೊರಗೆ ಹಾಕ್ತೀಯಾಂತ ಹೇಳ್ತಿದ್ದ."

"ಸಿಯೆನ್, ನೀನು ಇಲ್ಲಿ ಎಷ್ಟು ಕಾಲ ಇರಬೇಕೂಂತ ಆಸೆ ಪಡ್ತೀಯೋ, ಅಲ್ಲಿವರೆಗೆ ನಾನು ಅಂತಹ ಕೆಲಸ ಮಾಡೋಕೆ ಹೋಗೊಲ್ಲ."

"ತಿನ್ನೋಕೆ ಗತಿ ಇಲ್ಲದೆ ಇಲ್ಲಿ ಸಾಯೋಕಿಂತ ಬಂದು ಬಿಡೋದು ಒಳ್ಳೇದೂಂತ ಅಮ್ಮ ಹೇಳ್ತಿರ್‍ತಾಳೆ."

"ಎಲ್ಲಿಗೆ ಹೋಗಿರ್‍ತೀಯ?"

"ಎಲ್ಲಿಗೇನು? ಮನೆಗೆ!"

"ಮಕ್ಕಳನ್ನೂ ಆ ಮನೆಗೆ ಕರ್‍ಕೊಂಡು ಹೋಗ್ತೀಯೇನು?"

"ಇಲ್ಲಿದ್ದು ಉಪವಾಸ ಬೀಳೋಕಿಂತ ಅಲ್ಲಿರೋದೇವಾಸಿ ಅಲ್ವಾ? ನಾನೂ ಏನಾದರೂ ಕೆಲಸ ಮಾಡಿ ಸಂಪಾದನೆ ಮಾಡ್ತೀನಿ."

"ಏನು ಕೆಲಸ ಮಾಡ್ತೀಯ?"

"ಏನಾದರೂ ಸರಿ....."

"ಧೋಬಿ ಘಾಟಲ್ಲಿ, ಅಗಸರ ಕೆಲಸ ಮಾಡ್ತೀ ಏನು."

"ಮಾಡಬಹುದು!"

ಅವನಿಗೆ ಅವಳು ಸುಳ್ಳು ಹೇಳ್ತಿದ್ದಾಳೆ ಅಂತ ಗೊತ್ತಾಯಿತು.

"ಓಹೋ..... ಹಾಗಾದರೆ, ಅವರೆಲ್ಲ ಆ ಕೆಲಸಕ್ಕೆ ನಿನ್ನನ್ನು ಬಲವಂತ ಮಾಡ್ತಿದ್ದಾರೆ ಅನ್ನು!"

"ಅದು ಅಂಥ ಕೆಟ್ಟ ಕೆಲಸ ಏನೂ ಅಲ್ವಲ್ಲ. ಒಂದಿಷ್ಟು ಹಣ ಗಳಿಸಬಹುದು."

"ಸಿಯೆನ್, ನಾನು ಹೇಳೋದನ್ನು ಸ್ವಲ್ಪ ಕೇಳು. ಆ ಮನೆಗೆ ಹೋದರೆ, ನಿನ್ನ ಕತೆ ಮುಗಿದ ಹಾಗೆ. ಮತ್ತೆ ನೀನು ಬೀದಿ ಬದುಕಿಗೆ ಇಳೀತಿ. ಡಾಕ್ಟರು ಹೇಳಿದ್ದು ನೆನಪಿಲ್ಲವೇ? ಮತ್ತೊಮ್ಮೆ ನೀನು ನಿನ್ನ ಹಳೇ ವೃತ್ತಿಗೆ ಇಳಿದರೆ, ಸಾಯೋದಂತೂ ಖಂಡಿತ, ಅಂತ!"

"ಅದರಿಂದ ನಾನೇನೂ ಸಾಯೋದಿಲ್ಲ. ಈಗ ಚೆನ್ನಾಗಿಯೇ ಇದ್ದೀನಿ."

"ಚೆನ್ನಾಗೇನೋ ಇದ್ದೀಯ. ಇದಕ್ಕೆ ಕಾರಣ, ಸಂಯಮದಿಂದ ಬದುಕಿದೆ. ಆದರೆ ಮೊದಲಿನ ಬದುಕಿಗೆ ಮತ್ತೆ ಹೋದರೆ......!"

"ಅಯ್ಯೋ ದೇವರೆ! ನೀನಾಗಿ ಕಳಿಸದ ಹೊರತು ನಾನ್ಯಾಕೆ ಹೋಗಲಿ?"

ಅವನು, ಅವಳು ಕುಳಿತುಕೊಳ್ಳುತ್ತಿದ್ದ, ಕುರ್ಚಿಯ ಕೈಮೇಲೆ ಕುಳಿತು, ಕೈಯನ್ನು ಅವಳ ಭುಜದ ಮೇಲಿರಿಸಿದ. ಕೂದಲು ಬಾಚಿರಲಿಲ್ಲ. "ಸಿಯೆನ್ ನನ್ನನ್ನು ನಂಬು. ಎಂದಿಗೂ ನಾನು ನಿನ್ನ ಕೈ ಬಿಡೋದಿಲ್ಲ. ಎಲ್ಲಿವರೆಗೆ ನೀನು ಇದ್ದುದರಲ್ಲಿ ಸಂತೃಪ್ತಿಯಿಂದ ಇರುತ್ತೀಯೋ ಅಲ್ಲೀವರೆಗೆ ನಾನು ನಿನ್ನ ಜೊತೆ ಬಿಡೊಲ್ಲ. ಆದರೆ ನೀನು ನಿನ್ನ ಅಮ್ಮನ ಮನೆಯಿಂದ ದೂರ ಇರು. ಅಲ್ಲಿಗೆ ಎಂದೂ ಹೋಗಬೇಡ. ಹೋದರೆ ನಿನ್ನನ್ನು ಖಂಡಿತ ಹಾಳುಮಾಡುತ್ತಾರೆ. ನೀನು ಇನ್ನು ಮುಂದೆ ಅವರನ್ನು ನೋಡೋದಿಲ್ಲ ಅಂತ ಮಾತುಕೊಡು."

"ಮಾತು ಕೊಡ್ತೀನಿ."

ಎರಡು ದಿನಗಳ ನಂತರ, ವಿನ್ಸೆಂಟ್ ಸ್ಕೆಚಿಂಗ್ ಕೆಲಸದಿಂದ ಹಿಂತಿರುಗಿದಾಗ, ಸ್ಟುಡಿಯೋ ಖಾಲಿ ಇತ್ತು. ರಾತ್ರಿ ಅಡಿಗೇನೂ ಮಾಡಿರಲಿಲ್ಲ. ಕ್ರಿಸ್ಟೀನ್ ಮತ್ತೆ ಅಮ್ಮನ ಮನೆಯಲ್ಲಿ, ಅಮ್ಮನ ಜೊತೆ ಕುಡೀತಾ ಕೂತಿದ್ದಳು.

ಮನೆಗೆ ಹಿಂತಿರುಗಿ ಬಂದಾಗ, ಅವಳು – "ನಾನು ಮೊದಲೇ ಹೇಳಿರಲಿಲ್ಲವೇ, ನನಗೆ ನನ್ನ ಅಮ್ಮನನ್ನು ಕಂಡರೆ ಇಷ್ಟ ಅಂತ! ಅವಳನ್ನು ನೋಡಬೇಕೂಂತ ಅನಿಸಿದಾಗೆಲ್ಲ ಹೋಗ್ತೇನೆ. ನಾನೇನೂ ನಿನಗೆ ಸ್ವಂತ ಅಲ್ಲ. ನನಗಿಷ್ಟ ಬಂದ ಹಾಗೆ ಮಾಡ್ತೀನಿ."

ಮತ್ತೆ ಅವಳಲ್ಲಿ ಎಲ್ಲ ಹಳೆ ಚಾಳಿಗಳು ಬಂದು ಮುತ್ತಿದವು. ವಿನ್ಸೆಂಟ್ ಅವಳಿಗೆ ಅವಳ ತಪ್ಪುಗಳನ್ನು ತೋರಿಸಿಕೊಟ್ಟು, ತನ್ನಿಂದ ದೂರ ಆಗ್ತಿದ್ದಾಳೆ ಅನ್ನುವುದನ್ನು ತಿಳಿಸುವುದಕ್ಕೆ ಪ್ರಯತ್ನಿಸಿದರೆ, "ನನಗೂ ಎಲ್ಲ ಗೊತ್ತಾಗಿದೆ. ನಾನು ನಿನ್ನ ಜೊತೆ ಇರೋದು ನಿನಗೇ ಇಷ್ಟವಿಲ್ಲ." ಮನೆ ಎಷ್ಟೊಂದು ಗಲೀಜಾಗಿದೆ, ಸರಿಯಾಗಿ ಕ್ಲೀನ್ ಮಾಡುತ್ತಿಲ್ಲವೆಂದು ಹೇಳಿದರೆ, ಥಟ್ಟನೆ ಅವಳು – "ಹೌದೌದು. ಮೊದಲಿನಿಂದಲೂ ನಾನು ಸೋಮಾರಿ. ಕೆಲಸಕ್ಕೆ ಬಾರದವಳು. ನಾನು ಹಾಗೇ ಇರೋದು. ಬದಲಾಗೋದಕ್ಕೆ ನನ್ನಿಂದ ಸಾಧ್ಯವಿಲ್ಲ" ಎನ್ನುತ್ತಿದ್ದಳು. ಅವಳ ನಡತೆಯಲ್ಲಿನ ದೋಷಗಳನ್ನು ತಿಳಿಸಿ ಹೇಳಿದರೆ, ಹೌದು ನಾನು ಜಾತಿಬಿಟ್ಟವಳು, ನೀತಿಗೆಟ್ಟವಳು, ನಿಜ. ಯಾವುದಾದರೂ ಕೆರೇಲೋ ನದೀಲೋ ಬಿದ್ದು ಸಾಯ್ತೇನೆ!"

ಈಗ ಕ್ರಿಸ್ಟೀನ್‌ಳ ಅಮ್ಮ ದಿನಾ ಬರುತ್ತಿದ್ದಳು. ವಿನ್ಸೆಂಟ್‌ನಿಂದ ಕ್ರಿಸ್ಟೀನ್‌ಳನ್ನು ದೂರ ಮಾಡುತ್ತಿದ್ದಳು. ಮನೆ ಅರಾಜಕವಾಯಿತು. ಊಟಕ್ಕೆ ಒಂದು ಕ್ರಮ ಇರಲಿಲ್ಲ. ಹೆರ್‌ಮನ್ ಕೊಳಕು ಬಟ್ಟೆಯಲ್ಲಿ ಅಲೆದಾಡುತ್ತಿದ್ದ. ಶಾಲೆಗೂ ಸರಿಯಾಗಿ ಹೋಗುತ್ತಿರಲಿಲ್ಲ. ಕ್ರಿಸ್ಟೀನ್ ಕುಡಿಯೋದು, ಸಿಗಾರ್ ಸೇದೋದು ಹೆಚ್ಚಾಯಿತು. ಇದಕ್ಕೆಲ್ಲ ಹಣ ಅವಳಿಗೆ ಎಲ್ಲಿಂದ ಬರುತ್ತೆ ಅನ್ನುವುದನ್ನು ವಿನ್ಸೆಂಟ್‌ಗೆ ಹೇಳಿರಲಿಲ್ಲ.

ಬೇಸಿಗೆ ಕಾಲ ಬಂತು. ವಿನ್ಸೆಂಟ್ ಪೈಂಟ್ ಮಾಡಲು ಹೊರಗೆ ಹೊರಟ. ಇದರಿಂದ ಅವನಿಗೆ ಪೈಂಟ್ಸ್, ದೊಡ್ಡ ದೊಡ್ಡ ಫ್ರೇಮುಗಳು, ಈಸಲ್‌ಗಳು,

ಕ್ಯಾನ್‌ವಾಸುಗಳು ಬ್ರಷ್ಷುಗಳು ಹೆಚ್ಚಿಗೆ ಬೇಕಾಯಿತು. ಥಿಯೋ ತನ್ನ 'ಪೇಷೆಂಟ್' ಸುಧಾರಿಸಿದ್ದಾಳೆ ಆದರೆ ಸಂಬಂಧಗಳಲ್ಲಿ ಸಮಸ್ಯೆಯಾಗಿದೆ ಎಂದು ತಿಳಿಸಿ ಬರೆದಿದ್ದ. ಈಗ ಚೆನ್ನಾಗಿ ಆಗಿದ್ದಾಳೆ. ಅವಳನ್ನು ಈಗ ಏನು ಮಾಡಬೇಕು?

ತನ್ನ ವೈಯಕ್ತಿಕ ಬದುಕಿನ ಸಮಸ್ಯೆಗಳನ್ನೆಲ್ಲ ಮರೆತು ಪೈಂಟಿಂಗ್ ಮುಂದುವರೆಸಿದ. ಮನೆ ಮುರಿದು ಬೀಳುತ್ತಿದೆ ಎನ್ನುವುದು ಅವನಿಗೆ ತಿಳಿಯುತ್ತಿತ್ತು. ಕ್ರಿಸ್ಟೀನ್‌ಳು ಮತ್ತೆ ತನ್ನ ಕೊಳಕು ಬದುಕಿನ ಸೆರೆಯಾಗಿದ್ದಾಳೆ ಎನಿಸಿತು. ತನ್ನ ಕೆಲಸದಲ್ಲಿ ಬೆಳಿಗ್ಗೆ ಹೊರಟಾಗ, ತನ್ನ ಕ್ಯಾನ್‌ವಾಸ್ ಅದ್ಭುತವಾಗಿ ಇರುತ್ತದೆ ಎಂಬ ಭರವಸೆಯ ಉತ್ಸಾಹದಲ್ಲಿ ಇರುತ್ತಿದ್ದ. ಆದರೆ ಸಂಜೆ ಹಿಂತಿರುಗಿದಾಗ, ತಾನು ಇನ್ನೂ ಸಾಧನೆಯಲ್ಲಿ ಬಹಳ ದೂರ 'ಉಳಿದಿದ್ದೇನೆ' ಎಂದುಕೊಳ್ಳುತ್ತಿದ್ದ. ಅವನ ಸಂತೋಷಕ್ಕೆ ಇದ್ದ ಒಂದೇ ದಾರಿ ಎಂದರೆ ಅಂತೂನ್. ಆ ಮಗು ಉತ್ಸಾಹ, ಜೀವಂತಿಕೆಗಳ ಚಿಲುಮೆಯಾಗಿತ್ತು. ಸಿಕ್ಕಿದ್ದೆಲ್ಲವನ್ನೂ ಬಾಯಿಗಿರಿಸಿ ನಗುತ್ತಿದ್ದ. ಕೇಕೆ ಹಾಕುತ್ತಿದ್ದ. ಒಂದೊಂದು ಸಲ ಅವನು ಸ್ಟುಡಿಯೋದ ಒಂದು ಮೂಲೆಯಲ್ಲಿ, ವಿನ್ಸೆಂಟ್‌ನ ಜೊತೆಯಾಗಿ ಕೂರುತ್ತಿದ್ದ. ವಿನ್ಸೆಂಟ್‌ನ ಡ್ರಾಯಿಂಗ್‌ಗಳನ್ನು ನೋಡಿ ಸಂಭ್ರಮದಿಂದ ಕೂಗುತ್ತಿದ್ದ, ನಂತರ ಗೋಡೆಗಳ ಮೇಲಿನ ಸ್ಕೆಚ್‌ಗಳನ್ನು ಸುಮ್ಮನೆ ಸದ್ದಿಲ್ಲದೆ ನೋಡುತ್ತಾ ಕುಳಿತಿರುತ್ತಿದ್ದ, ಮುದ್ದಾದ ಮಗುವಾಗಿ ಬೆಳೆಯುತ್ತಿದ್ದ. ಕ್ರಿಸ್ಟೀನ್ ಅವನ ಬಗ್ಗೆ ಹೆಚ್ಚು ಹೆಚ್ಚು ನಿರ್ಲಕ್ಷ್ಯ ತೋರಿದಂತೆ, ವಿನ್ಸೆಂಟ್ ಆ ಮಗುವಿಗೆ ಇನ್ನಷ್ಟು ಹತ್ತಿರವಾಗುತ್ತಿದ್ದ. ಹೆಚ್ಚು ಹೆಚ್ಚು ಪ್ರೀತಿಸುತ್ತಿದ್ದ. ಅಂತೂನ್‌ನಲ್ಲಿ, ಹೋದ ಚಳಿಗಾಲದ ದಿನಗಳಲ್ಲಿನ ತನ್ನ ಕೆಲಸಕ್ಕಾಗಿ, ದೊರೆತ ಫಲ, ಸಾರ್ಥಕತೆಗಳನ್ನು ಕಾಣುತ್ತಿದ್ದ.

ವೀಸೆನ್‌ಬ್ರೂಕ್ ಒಮ್ಮೆ ಮಾತ್ರ ಬಂದಿದ್ದ. ಹೋದ ವರುಷದಲ್ಲಿ ಹಿಂದೆ ಮಾಡಿದ್ದ ಕೆಲಸ ಸ್ಕೆಚ್‌ಗಳನ್ನು ತೋರಿಸಿದ. ಅವುಗಳ ಬಗ್ಗೆ ಅವನಿಗೆ ಸ್ವಲ್ಪವೂ ಸಮಾಧಾನವಿರಲಿಲ್ಲ.

"ಹಾಗೆಲ್ಲ ಬೇಸರ ಪಟ್ಟುಕೊಳ್ಳಬೇಡ. ಒಂದಷ್ಟು ವರ್ಷ ಕಳೆದ ಮೇಲೆ ಅವುಗಳನ್ನು ನೋಡಿದಾಗ ನಿನಗೇ ಗೊತ್ತಾಗುತ್ತೆ, ಅವುಗಳಲ್ಲಿ ಎಷ್ಟೊಂದು ಪ್ರಾಮಾಣಿಕತೆ, ಹೃದಯ ಸ್ಪರ್ಶಿತನ ಇದೆ ಅನ್ನೋದು! ಸುಮ್ಮನೆ ನಿನ್ನ ಪಾಡಿಗೆ ನೀನು ಮಾಡ್ತಾ ಹೋಗು. ಯಾವುದೇ ಕಾರಣಕ್ಕೂ ನಿಲ್ಲಿಸಬೇಡ."

ಆದರೆ, ಅವನ ಮುಖದ ಮೇಲೆ ಬಿದ್ದ ಗುದ್ದಿನಿಂದ ಸ್ವಲ್ಪ ಕೆಲಸ ನಿಲ್ಲಿಸಬೇಕಾಯಿತು. ಒಂದು ದಿನ, ಲ್ಯಾಂಪ್ ರಿಪೇರಿ ಮಾಡಿಸಲೆಂದು ಪಿಂಗಾಣಿ ಸಾಮಾನಿನ ಅಂಗಡಿಯವನ ಬಳಿಗೆ ಹೋದ. ಅಂಗಡಿಯವನು ಕೆಲವು ಹೊಸ ಪಾತ್ರೆಗಳನ್ನು ತೆಗೆದುಕೊಂಡು ಹೋಗಲು ಹೇಳಿದ.

"ನನ್ನ ಹತ್ತಿರ ಈಗ ಅವುಗಳನ್ನು ಕೊಳ್ಳೋದಕ್ಕೆ ಹಣ ಇಲ್ಲ" ಎಂದ.

"ಪರವಾಗಿಲ್ಲ. ಅಷ್ಟೇನು ಅರ್ಜೆಂಟಾಗಿ ಕೊಡಬೇಕಾಗಿಲ್ಲ. ನಿನ್ನ ಹತ್ತಿರ ಹಣ ಇದ್ದಾಗ ತಂದುಕೊಡು" – ಎಂದ.

ಎರಡು ತಿಂಗಳ ನಂತರ ಸ್ಟುಡಿಯೋ ಬಾಗಿಲನ್ನು ಒದ್ದುಕೊಂಡು ದಢಿಯ ಮನುಷ್ಯನೊಬ್ಬ ಪ್ರವೇಶಿಸಿದ.

"ಯಾಕೆ ನನಗೆ ಸುಳ್ಳು ಹೇಳಿದೆ? ನನ್ನ ಹತ್ತಿರ ಸಾಮಾನು ತಗೊಂಡು, ನನಗೆ ಕೊಡೋಕೆ ನಿನ್ನ ಹತ್ತಿರ ದುಡ್ಡಿಲ್ಲ. ಆದರೆ ನನ್ನ ಪಕ್ಕದಂಗಡಿಯವನಿಗೆ ಕೊಡೋಕೆ ಮಾತ್ರ ನಿನ್ನ ಹತ್ತಿರ ದುಡ್ಡಿದೆ ಅಲ್ಲ!"

"ಆ ಸಮಯದಲ್ಲಿ ಖಂಡಿತ ನನ್ನ ಹತ್ತಿರ ಹಣ ಇರಲಿಲ್ಲ. ನನಗೆ ಹಣ ಬಂದ ತಕ್ಷಣವೇ ನಿನಗೆ ಕೊಟ್ಟು ಬಿಡುತ್ತೇನೆ."

"ಸುಳ್ಳು! ಈಗ ತಾನೇ ನನ್ನ ಪಕ್ಕದಂಗಡಿಯ ಷೂಮೇಕರ್‌ಗೆ ಕೊಟ್ಟಿದ್ದೀಯ!"

"ನೋಡು ನನಗೆ ಕೆಲಸ ಮಾಡಬೇಕಿದೆ. ಸುಮ್ಮನೆ ತೊಂದರೆ ಮಾಡದೆ ಇಲ್ಲಿಂದಾಚೆ ಹೋಗು. ದುಡ್ಡು ಬಂದ ಕೂಡಲೇ ಕೊಡ್ತೇನೆ..... ಈಗ ಹೋಗಾಚೆ!"

"ನೀನು ದುಡ್ಡು ಕೊಡೋವರೆಗೂ ನಾನು ಇಲ್ಲಿಂದ ಕದಲೋದಿಲ್ಲ."

ವಿನ್ಸೆಂಟ್ ಆ ಮನುಷ್ಯನನ್ನು ಮೂತಿ ಮುಖ ನೋಡದೆ ಹೊರಗೆ ದಬ್ಬಿದ.

ವ್ಯಾಪಾರಿ ಕೂಡಾ ಅದೇ ಸಮಯಕ್ಕಾಗಿ ಕಾಯುತ್ತಿದ್ದ.

ತನ್ನ ಮೈಮೇಲೆ ವಿನ್ಸೆಂಟ್‌ನ ಕೈ ಬಿದ್ದಿದ್ದೇ, ತಾನೂ ಕೂಡಾ ಮುಷ್ಟಿ ಬಿಗಿದು ಜೋರಾಗಿ ವಿನ್ಸೆಂಟ್‌ನ ಮುಖದ ಮೇಲೆ ಗುದ್ದುಕೊಟ್ಟ. ವಿನ್ಸೆಂಟ್ ಹೋಗಿ ಗೋಡೆಗೆ ಒಡೆದುಕೊಂಡ. ಮತ್ತೊಮ್ಮೆ ವಿನ್ಸೆಂಟ್‌ನನ್ನು ಬಲವಾಗಿ ಗುದ್ದಿ ನೆಲದ ಮೇಲೆ ಬೀಳಿಸಿ, ಮರುಮಾತಿಲ್ಲದೆ ಹೊರಗೆ ಹೋದ.

ಕ್ರಿಸ್ಟೀನ್ ತಾಯಿ ಮನೆಯಲ್ಲಿದ್ದಳು. ಅಂತೂನ್ ತೆವಳುತ್ತಾ ಬಂದು, ಅಳುತ್ತಾ ವಿನ್ಸೆಂಟ್‌ನ ಮುಖದ ಮೇಲೆ ಕೈಯಾಡಿಸಿದ. ಕೆಲವು ಕ್ಷಣಗಳ ನಂತರ ವಿನ್ಸೆಂಟ್‌ಗೆ ಪ್ರಜ್ಞೆ ಬಂದು, ಹೇಗೋ ಕಷ್ಟಪಟ್ಟು ಎಳೆದುಕೊಂಡು ಮೆಟ್ಟಿಲೇರಿ, ಅಟ್ಟ ತಲುಪಿ ಮಲಗಿದ.

ಗುದ್ದುಗಳಿಂದ ಅವನ ಮುಖಕ್ಕೇನೂ ಗಾಯಗಳು ಆಗಿರಲಿಲ್ಲ. ಅವನಿಗೆ ನೋವೂ ಕಾಣಿಸಲಿಲ್ಲ. ನೆಲದ ಮೇಲೆ ಬಿದ್ದಾಗಲೂ ಅವನಿಗೆ ಏನೂ ಎನಿಸಿರಲಿಲ್ಲ. ಆದರೆ ಒಳಗೆ ಏನೋ ಆಗಿ, ಮನಸ್ಸು ಚೂರು ಚೂರಾಗಿ ಸೋಲನ್ನು ಅನುಭವಿಸಿದ.

ಕ್ರಿಸ್ಟೀನ್ ಹಿಂತಿರುಗಿ ಬಂದಳು. ಮಹಡಿ ಮೇಲೆ ಹೋದಳು. ನೋಡಿದಳು – ವಿನ್ಸೆಂಟ್ ಹಾಸಿಗೆ ಪಕ್ಕದಲ್ಲಿ ಬಿದ್ದುಕೊಂಡಿದ್ದ. ಅವನ ತಲೆ ಮತ್ತು ತೋಳುಗಳು ಮಂಚದಿಂದ ಇಳಿಬಿದ್ದಿದ್ದವು. ಅವನನ್ನು ನೋಡಿ ಆಶ್ಚರ್ಯವಾಯಿತು. ಮನೇಲಿ ದುಡ್ಡೂ ಇರಲಿಲ್ಲ; ಊಟಕ್ಕೂ ಏನೂ ಇರಲಿಲ್ಲ. ಆದರೂ ಈ ಮನುಷ್ಯ ಹೇಗೆ ತಾನೇ ಜೀವಂತವಾಗಿ ಇರಬಲ್ಲ?– ಎಂದು ಯೋಚಿಸಿದಳು.

"ಏನಾಯ್ತು ವಿನ್ಸೆಂಟ್?" – ವಿಚಾರಿಸಿದಳು.

ಎಷ್ಟೋ ಹೊತ್ತಿನ ನಂತರ ಅವನಿಗೆ ತಲೆ ಎತ್ತಿ ದಿಂಬಿನ ಮೇಲೆ ಇರಿಸಲು ಸಾಧ್ಯವಾಯಿತು. "ಸಿಯೆನ್, ನನಗೆ ಅನ್ಸತ್ತೆ– ನಾವು ಹೇಗ್‌ನಿಂದ ಹೊರಡಬೇಕು."

"ಹೌದು – ನನಗೂ ಗೊತ್ತು."

“ಇಲ್ಲಿಂದ ಹೊರಡಲೇ ಬೇಕು. ಎಲ್ಲಾದರೂ, ಯಾವುದಾದರೂ ಊರಿಗೆ. ಎಲ್ಲಿ ಖರ್ಚು ಹೆಚ್ಚಾಗಿರುವುದಿಲ್ಲವೋ ಅಲ್ಲಿಗೆ. ಬಹುಶಃ ಡ್ರೆನ್ತ್ ಆಗಬಹುದು ಅನ್ಸತ್ತೆ. ಅಲ್ಲಿ ಜೀವನ ಅಷ್ಟೊಂದು ಕಷ್ಟವಾಗಲಾರದು.”

“ಏನು ನಾನೂ ನಿನ್ನ ಜೊತೆ ಬರಬೇಕೆ? ಅಬ್ಬ! ಅದೊಂದು ದರಿದ್ರ ಊರು. ನಿನ್ನ ಹತ್ತಿರ ಹಣ ಇಲ್ಲದೆ, ತಿನ್ನೋಕೆ ತಿಂಡಿ ಇಲ್ಲದೆ, ನಾನೇನು ಮಾಡಬೇಕು?”

“ಗೊತ್ತಿಲ್ಲ ಸಿಯೆನ್. ತಿನ್ನೋಕೆ ಸಿಗುತ್ತೋ ಇಲ್ಲವೋ.”

“ನಿನಗೆ ಬರೋ ನೂರೈವತ್ತು ಫ್ರ್ಯಾಂಕ್‌ಗಳನ್ನು ಮನೆ ಖರ್ಚಿಗೇ ಕೊಡ್ತೇನೆ. ಪೈಂಟಿಂಗ್ ಅದೂ ಇದೂಂತ ಖರ್ಚು ಮಾಡೋದಿಲ್ಲಾಂತ ಮಾತು ಕೊಡ್ತೀಯೇನು?”

“ಇಲ್ಲ ಸಿಯೆನ್. ಅದು ಮಾತ್ರ ಸಾಧ್ಯ ಇಲ್ಲ. ನನ್ನ ಜೀವನದಲ್ಲಿ ಅವೇ ಮುಖ್ಯ.”

“ನಿನಗಿರಬಹುದು.”

“ನಿನಗಲ್ಲ! ಹೌದು ನಿನಗ್ಯಾಕೆ ಮುಖ್ಯ ಆಗಬೇಕು?”

“ವಿನ್ಸೆಂಟ್ ನಾನೂ ಬದುಕಬೇಕಲ್ಲವೇ? ಊಟ ಮಾಡದೆ ಬದುಕೋದು ಹೇಗೆ?”

“ಮತ್ತು ನಾನು? ಪೈಂಟಿಂಗ್ ಇಲ್ಲದೆ ನನಗೆ ಬದುಕೋಕೆ ಆಗೊಲ್ಲವಲ್ಲ!”

“ಅದು ಸರಿ. ನಿನ್ನ ಹಣ. ನಿನಗೆ ಆದ್ಯತೆ..... ಅದೆಲ್ಲ ಅರ್ಥ ಆಗುತ್ತೆ. ನಿನ್ನ ಹತ್ತಿರ ಕೆಲವು ಸೆಂಟೀಮ್‌ಗಳು ಇವೆಯೇನು. ರೈನ್ ಸ್ಟೇಷನ್ ಬಳಿಯ ವೈನ್ ಕೆಫೆಗೆ ಸ್ವಲ್ಪ ಹೋಗಿ ಬರೋಣ.”

ಆ ಜಾಗದಲ್ಲೆಲ್ಲಾ ಹುಳಿ ಹೆಂಡದ ವಾಸನೆ ತುಂಬಿತ್ತು. ಮಧ್ಯಾಹ್ನ ದಾಟಿ ಹೋಗಿತ್ತು. ಆದರೂ ದೀಪಗಳನ್ನು ಹಚ್ಚಿರಲಿಲ್ಲ. ಮೊದಲ ಸಲ ತಾವಿಬ್ಬರೂ ಎದುರು ಬದುರಾಗಿ ಕುಳಿತಿದ್ದ ಟೇಬಲ್ ಖಾಲಿ ಇತ್ತು. ಕ್ರಿಸ್ಟೀನ್ ಅವನನ್ನು ಅಲ್ಲಿಗೆ ಕರೆದೊಯ್ದಳು. ವೈನ್ ಬಟ್ಟಲ ಜೊತೆ ಆಟಿಗೆಯಂತೆ ಆಡಿದಳು. ವಿನ್ಸೆಂಟ್‌ಗೆ, ಅವಳು ಮೊದಲ ಸಲ ಇದೇ ರೀತಿ ಕೈ ಬೆರಳುಗಳನ್ನು ಆಡಿಸಿದಾಗ, ಅದನ್ನು ಮೆಚ್ಚಿಕೊಂಡಿದ್ದುದು ನೆನಪಾಯಿತು.

“ನೀನು ನನ್ನನ್ನು ಬಿಟ್ಟು ಬಿಡ್ತೀಯಾಂತ ಅವರು ಹೇಳಿದ್ದರು..... ಅದು ನನಗೂ ಗೊತ್ತಿತ್ತು.”

“ನಿನ್ನನ್ನು ಬಿಡೋಕೆ ನನಗೆ ಇಷ್ಟ ಇಲ್ಲ ಸಿಯೆನ್.”

“ಬಿಡೋದೂಂತ ನನ್ನ ಅರ್ಥ ಅಲ್ಲ. ನನ್ನನ್ನು ಬಿಡೋಕೆ ಕಾರಣವೇ ಇಲ್ಲ. ಒಳ್ಳೇದನ್ನೆ ನನಗೆ ಮಾಡಿದೆಯೇ ಹೊರತು, ಬೇರೇನನ್ನೂ, ಕೆಟ್ಟದ್ದನ್ನು ಮಾಡಿಲ್ಲವಲ್ಲ!”

“ಈಗಲೂ ನನ್ನೊಂದಿಗೆ ನನ್ನ ಕಷ್ಟ-ಸುಖ ಹಂಚಿಕೊಳ್ಳೋಕೆ ರೆಡಿಯಾಗಿದ್ದರೆ, ಡ್ರೆನ್ತ್‌ಗೆ ನನ್ನ ಜೊತೆ ಬಾ.”

ಯಾವುದೇ ಭಾವುಕತೆಗೆ ಒಳಗಾಗದೆ, ತಲೆಯಾಡಿಸುತ್ತ, ಹೇಳಿದಳು – “ನಮ್ಮಿಬ್ಬರಿಗೆ ಸಾಕಾಗೋದಕ್ಕೆ ಏನೂ ಇಲ್ಲವಲ್ಲ.”

"ನನ್ನನ್ನು ಅರ್ಥಮಾಡಿಕೊಳ್ತೀಯ ಅಲ್ವಾ? ನನ್ನ ಹತ್ತಿರ ಹೆಚ್ಚಾಗಿದ್ದರೆ, ನಿನಗೆ ಏನು ಕೊಡೋಕೂ ನಾನು ರೆಡಿ. ಆದರೆ ನಿನ್ನನ್ನು ನೋಡಿಕೊಳ್ಳಬೇಕೇ, ನನ್ನ ಕೆಲಸ ನೋಡಿಕೊಳ್ಳಬೇಕೇ- ಎನ್ನುವುದರಲ್ಲಿ ಯಾವುದನ್ನಾದರೂ ಒಂದನ್ನು ಆರಿಸಿಕೊಳ್ಳಬೇಕಾಗುತ್ತೆ."

ಅವಳು ತನ್ನ ಕೈಯನ್ನು ವಿನ್ಸೆಂಟ್‌ನ ಕೈ ಮೇಲೆ ಇರಿಸಿದಳು. ಅವಳ ಒರಟಾದ ಚರ್ಮದ ಸ್ಪರ್ಷದ ಅನುಭವವಾಯಿತು. "ನೀನು ನನಗೆ ಮಾಡಬಹುದಾಗಿದ್ದನ್ನೆಲ್ಲಾ ಮಾಡಿದ್ದೀಯ. ಇದಕ್ಕಾಗಿ ನೀನು ಬೇಸರ ಪಡಬೇಕಾದ್ದಿಲ್ಲ. ಏನೋ ಎಲ್ಲಾ ಒಂದು ಕಾಲ.... ಇಬ್ಬರೂ ಜೊತೆಗೆ ಇದ್ದೆವು."

"ನಾವಿಬ್ಬರೂ ಜೊತೆಗೇ ಇರಬೇಕೂಂತ ನಿನಗೆ ಅನ್ನಿಸಿದರೆ, ಇದರಿಂದ ನಿನಗೆ ಸಂತೋಷ ಸಿಗುತ್ತೆ ಅನ್ನುವುದಾದರೆ, ನಿನ್ನನ್ನು ಮದುವೆಯಾಗಿ ಜೊತೆಗೆ ಕರೆದುಕೊಂಡು ಹೋಗ್ತೀನಿ."

"ಇಲ್ಲ, ಇಲ್ಲ. ನಾನು ನನ್ನ ಅಮ್ಮನಿಗೆ ಸೇರಿದವಳು. ನಮ್ಮ ನಮ್ಮ ಬದುಕುಗಳು ನಮ್ಮದು. ಎಲ್ಲ ಸರಿ ಹೋಗುತ್ತೆ. ಹೇಗಿದ್ದರೂ ನನ್ನ ಬ್ರದರ್ ಅವನ ಹುಡುಗಿ ಮತ್ತು ನನಗಾಗಿ ಬೇರೊಂದು ಮನೆ ತೋಗೋತಿದಾನೆ."

ವಿನ್ಸೆಂಟ್ ಕಹಿ ಹೆಂಡವನ್ನು ಖಾಲಿ ಮಾಡಿದ.

"ಸಿಯೆನ್ ನಾನು ನಿನಗೆ ಸಹಾಯ ಮಾಡಲು ಪ್ರಯತ್ನ ಪಟ್ಟೆ, ನಿನ್ನನ್ನು ಪ್ರೀತಿಸಿದೆ. ನಿನಗೆ ಅಗತ್ಯವಾದ ಆದರೆ ನನ್ನಲ್ಲಿದ್ದ ಕರುಣೆಯನ್ನೆಲ್ಲ ಧಾರೆ ಎರೆದೆ. ಈಗ ನಿನ್ನಿಂದ ನನಗೊಂದು, ಒಂದೇ ಒಂದು ಸಹಾಯ ಆಗಬೇಕಿದೆ."

"ಏನು?" ಮನಃಪೂರ್ತಿಯಾಗಿ ಕೇಳಿದಳು.

"ಮತ್ತೆ ನೀನು ಹಾದರಕ್ಕೆ ಇಳಿಯಬೇಡ. ಅದು ನಿನ್ನನ್ನು ಕೊಲ್ಲುತ್ತದೆ. ಅಂತೂನ್‌ಗಾಗಿಯಾದರೂ, ಆ ಬದುಕಿನತ್ತ ಸುಳಿಯಬೇಡ."

"ಇನ್ನೊಂದು ಗ್ಲಾಸು ವೈನ್‌ಗಾಗಿ ದುಡ್ಡೇನಾದರೂ ಉಳಿದಿದೆಯೇನು?"

"ಹೂಂ"

ಒಂದೇ ಗುಟುಕಿಗೆ ಅರ್ಧ ಗ್ಲಾಸ್ ಖಾಲಿ ಮಾಡಿದಳು.

"ವಿನ್ಸೆಂಟ್ ನನಗೆ ಗೊತ್ತು. ನನ್ನಿಂದ ಜೀವ ನಡೆಸೋಕೆ ಸಾಕಾಗುವಷ್ಟು ಹಣ ಸಂಪಾದನೆ ಮಾಡೋಕೆ ಆಗೋದಿಲ್ಲ. ಎಲ್ಲ ಮಕ್ಕಳನ್ನು ಸಾಕಲು ಹಣ ಬೇಕು. ಅದಕ್ಕಾಗಿ ನಾನು ಬೀದಿ ಜೀವನಕ್ಕೆ ಇಳಿಯಲೇ ಬೇಕಾಗುತ್ತೆ...... ನನಗಾಗಿ ಇಷ್ಟಪಟ್ಟು ಅಲ್ಲ; ಅವರಿಗಾಗಿ."

"ನಿನಗೆ ಸಾಕಾಗುವಷ್ಟು ಸಂಪಾದನೆಯಾಗುವ ಕೆಲಸ ಸಿಕ್ಕಿದರೆ, ಹೋಗೋದಿಲ್ಲ ಅಂತ ಮಾತು ಕೊಡ್ತಿಯೇನು?"

"ಖಂಡಿತ, ಪ್ರಮಾಣ ಮಾಡಿ ಹೇಳ್ತೇನೆ."

"ಪ್ರತಿ ತಿಂಗಳೂ ನಿನಗೆ ಹಣ ಕಳಿಸ್ತೇನೆ. ಮಗುವಿಗಾಗಿ ಯಾವಾಗಲೂ ಕಳಿಸಿಕೊಡ್ತೇನೆ. ಮಗುವಿಗೆ ಒಂದು ಅವಕಾಶ ಕೊಡು."

"ಬೇರೆಯವರಂತೆಯೇ, ಅವನೂ ಚೆನ್ನಾಗಿಯೇ ಇರ್ತಾನೆ, ಬಿಡು."

ವಿನ್ಸೆಂಟ್, ಥಿಯೋಗೆ ತಾನು ಹೇಗ್ ಬಿಡುತ್ತಿರುವುದರ ಬಗ್ಗೆ, ಕ್ರಿಸ್ಟೀನ್‌ಳಿಂದ ದೂರ ಇರುತ್ತಿರುವುದರ ಬಗ್ಗೆ ಬರೆದು ತಿಳಿಸಿದ. ಥಿಯೋನಿಂದ ನೂರು ಫ್ರ್ಯಾಂಕ್‌ಗಳು ಮತ್ತು ಮೆಚ್ಚಿಗೆಯ ಮಾತು, ಮರುಟಪಾಲಿನಿಂದಲೇ ತಲುಪಿತು. ಥಿಯೋ ತನ್ನ 'ಪೇಷೆಂಟ್' ರಾತ್ರೋರಾತ್ರಿ ಪರಾರಿಯಾಗಿರುವುದನ್ನೂ ಅವಳು ಚೆನ್ನಾಗಿ, ಆರೋಗ್ಯವಾಗಿ ಇದ್ದಾಳೆಂಬುದನ್ನೂ ವಿನ್ಸೆಂಟ್‌ಗೆ ತಿಳಿಸಿ ಬರೆದ, 'ತಮ್ಮಿಬ್ಬರ ನಡುವಿನ ಸಂಬಂಧ ಯಾವ ರೀತಿಯದೋ, ತಿಳಿಯಲಿಲ್ಲ. ಇದ್ದುದೆಲ್ಲವನ್ನೂ ತೆಗೆದು ಗಂಟುಕಟ್ಟಿಕೊಂಡು, ಅವಳ ವಿಳಾಸವನ್ನೂ ನೀಡದೆ ಹೊರಟು ಹೋಗಿದ್ದಾಳೆ. ಒಂದು ರೀತಿಯಿಂದ ಹೀಗೆ ಆದದ್ದು ಒಳ್ಳೆಯದೇ ಆಯಿತು. ಈಗ ನಾವಿಬ್ಬರೂ ಬಂಧನ ಮುಕ್ತರು."

ವಿನ್ಸೆಂಟ್ ಫರ್ನಿಚರ್ ಎಲ್ಲವನ್ನೂ ಮೇಲಿನ ಕೋಣೆಯಲ್ಲಿ ರಾಶಿ ಹಾಕಿದ. ಯಾವಾಗಲಾದರೂ ಒಮ್ಮೆ ಹೇಗ್‌ಗೆ ಬರಬೇಕು ಎಂದುಕೊಂಡ. ಅವನು ಡ್ರೆನ್ತ್‌ಗೆ ಹೊರಡುವ ಮುನ್ನಾ ದಿನ ನ್ಯೂನೆನ್‌ನಿಂದ ಒಂದು ಕಾಗದ ಮತ್ತು ಪ್ಯಾಕೇಜೊಂದು ಅವನಿಗೆ ತಲುಪಿದವು. ಆ ಪ್ಯಾಕೇಜಿನಲ್ಲಿ ಒಂದಷ್ಟು ಟೊಬ್ಯಾಕೋ ಮತ್ತು ಅಮ್ಮ ಕಳಿಸಿದ್ದ ಚೀಸ್ ಕೇಕ್ ಇತ್ತು.

"ಚರ್ಚ್‌ಯಾರ್ಡ್‌ನಲ್ಲಿ ಇರುವ ಶಿಲುಬೆಯನ್ನು ಪೈಂಟ್ ಮಾಡಲು ಯಾವಾಗ ಬರುತ್ತಿದ್ದೀಯ" ಎಂದು ತಂದೆ ಕಾಗದದಲ್ಲಿ ಕೇಳಿದ್ದರು.

ಅವನಿಗೂ ಮನೆಗೆ ಹೋಗಬೇಕು ಎನಿಸಿತ್ತು. ಹಸಿವಿನಿಂದ ಕಂಗಾಲಾಗಿದ್ದ; ಮೈಯಲ್ಲಿ ಹುಷಾರಿರಲಿಲ್ಲ. ದಣಿವು, ಅಧೈರ್ಯ..... ಹೋಗಿ ಒಂದೆರಡು ವಾರ ಅಮ್ಮನ ಆರೈಕೆಯಲ್ಲಿ ಸುಧಾರಿಸಿಕೊಳ್ಳಬೇಕು ಎಂದುಕೊಂಡ. ಬ್ರಬಾಂಟ್‌ನ ಹಳ್ಳಿಗಳ ಸೌಂದರ್ಯ. ಅಲ್ಲಿನ ಪ್ರಶಾಂತತೆ, ಮರಳ ದಿಬ್ಬಗಳು, ಹೊಲಗಳಲ್ಲಿ ದುಡಿಯುವ ರೈತರು – ನೆನಪಾಗುತ್ತಿದ್ದಂತೆ ಅವನ ಮನಸ್ಸಿಗೆ ಹಿತವೆನಿಸಿತು.

ಕ್ರಿಸ್ಟೀನ್ ಮತ್ತು ಇಬ್ಬರು ಮಕ್ಕಳು ವಿನ್ಸೆಂಟ್ ಜೊತೆ ಸ್ಟೇಷನ್ ತಲುಪಿದರು. ಪ್ಲಾಟ್‌ಫಾರಂ ಮೇಲೆ ಸುಮ್ಮನೆ ನಿಂತಿದ್ದರು. ಮಾತು ಹೊರಡುತ್ತಿರಲಿಲ್ಲ. ಟ್ರೈನ್ ಬಂತು. ವಿನ್ಸೆಂಟ್ ಹತ್ತಿ ಕುಳಿತ. ಕ್ರಿಸ್ಟೀನ್ ಮಗುವನ್ನು ಕಂಕುಳಲ್ಲಿ ಇರಿಸಿಕೊಂಡು, ಹೆರ್‌ಮನ್‌ನನ್ನು ಕೈಯಿಂದ ಹಿಡಿದುಕೊಂಡಿದ್ದಳು. ಕಣ್ಣಿಂದ ಮರೆಯಾಗುವವರೆಗೂ ಟ್ರೈನ್‌ನ ಕಿಟಕಿಯಿಂದ, ವಿನ್ಸೆಂಟ್ ಅವರನ್ನು ದಿಟ್ಟಿಸುತ್ತಲೇ ಇದ್ದ. ಕ್ರಿಸ್ಟೀನ್, ಮಕ್ಕಳು ಎಲ್ಲರೂ ಎಂದೆಂದಿಗೂ ಇಲ್ಲದಂತೆ ಸ್ಟೇಷನ್‌ನ ಆ ಕತ್ತಲಲ್ಲಿ ಮರೆಯಾದರು.

□□

# ಭಾಗ - ನಾಲ್ಕು

## ಪ್ರೀತಿ ಕೊಡುವುದಷ್ಟೇ ಮುಖ್ಯ, ಪಡೆಯುವುದಲ್ಲ

-೧-

ನ್ಯೂನೆನ್‌ನಲ್ಲಿದ್ದ ಪಾದ್ರಿ ಮನೆ ಎರಡಂತಸ್ತಿನದಾಗಿತ್ತು. ಸುಣ್ಣ ಬಳಿದಿದ್ದ ಕಲ್ಲು ಕಟ್ಟಡ ಅದಾಗಿತ್ತು. ಅದರ ಹಿಂಭಾಗದಲ್ಲಿ ವಿಶಾಲವಾದ ಉದ್ಯಾನವಿತ್ತು. ಹೂಗಿಡಗಳು, ಎಲ್ಮ್ ಮರಗಳು, ಪೋಲಾರ್ಡ್ ಓಕ್ ಮರಗಳು, ಲಂಟಾನ ಮಾದರಿ ಪೊದೆಗಳು, ಒಂದು ಕೆರೆ - ಹೀಗೆ ಅದು ಸಮೃದ್ಧವಾಗಿ ನೋಡುವವರ ಕಣ್ಮನಗಳನ್ನು ಸೆಳೆಯುವಂತಿದ್ದವು. ನ್ಯೂನೆನ್‌ನ ಜನಸಂಖ್ಯೆ ಎರಡುಸಾವಿರದ ಆರುನೂರು ಇದ್ದರೂ ಅದರಲ್ಲಿ ಕೇವಲ ಒಂದು ನೂರು ಮಂದಿ ಮಾತ್ರವೇ ಪ್ರಾಟಸ್ಟೆಂಟ್‌ಗಳಾಗಿದ್ದರು. ಥಿಯೋಡೋರಸ್‌ನದು, ಒಂದು ಪುಟ್ಟದಾದ ಚರ್ಚಾಗಿತ್ತು. ನ್ಯೂನೆನ್, ಎಟ್ಟೆನ್‌ನಿಂದ ಸ್ವಲ್ಪವೇ ದೂರವಿತ್ತು. ನ್ಯೂನೆನ್ ಹಾಗೆ ನೋಡಿದರೆ, ಕೇವಲ ಒಂದಷ್ಟು ಮನೆಗಳ ಗುಂಪಾಗಿತ್ತು. ರಸ್ತೆಯ ಎರಡೂ ಬದಿಗಳಲ್ಲಿ ಇವು ನೆಲೆಸಿದ್ದವು. ಈ ಮನೆಗಳ ನಡುವಿನ ರಸ್ತೆ, ಆ ಜಿಲ್ಲೆಯ ರಾಜಧಾನಿ ಇಂಥೋವೆನ್‌ನಿಂದ ಆರಂಭವಾಗಿತ್ತು. ಅಲ್ಲಲ್ಲಿ ಎದ್ದಿದ್ದ ಮನೆಗಳಲ್ಲಿ ನೇಕಾರರು, ರೈತರು ವಾಸವಾಗಿದ್ದರು. ಇಲ್ಲಿನ ಜನ ದೈವಭಕ್ತರು, ನೀತಿವಂತರು, ಕಷ್ಟಜೀವಿಗಳಾಗಿದ್ದುದೇ ಅಲ್ಲದೆ ತಮ್ಮ ಪೂರ್ವಿಕರು, ಹಿರಿಯರು ನಡೆದು ಬಂದ ಹಾದಿಯಲ್ಲಿ, ಸಂಪ್ರದಾಯ, ಪರಂಪರೆಗಳಲ್ಲಿ ಶ್ರದ್ಧೆ ಇರಿಸಿಕೊಂಡು ಬದುಕುತ್ತಿದ್ದರು.

ಪಾದ್ರಿ ಮನೆಯ ಮುಂದೆ ಬಾಗಿಲಿನ ಮೇಲೆ ಕಪ್ಪು ಕಬ್ಬಿಣದ ಸಂಖ್ಯೆಗಳಲ್ಲಿ 'ಎ' ೧೭೬೪ ಎಂದಿತ್ತು. ಪ್ರವೇಶ ದ್ವಾರ ರಸ್ತೆಯ ಕಡೆಗಿತ್ತು. ಬಾಗಿಲಿನಿಂದ ಒಳಗೆ ಹೋದರೆ ದೊಡ್ಡದಾದ ಒಂದು ಪಡಸಾಲೆ, ಈ ಪಡಸಾಲೆ ಎರಡು ಭಾಗಗಳಲ್ಲಿ ಹಂಚಿಕೊಂಡಿತ್ತು. ಎಡಗಡೆಗೆ ಊಟದ ಮನೆ, ಅಡಿಗೆ ಮನೆಗಳಿದ್ದವು. ಅಲ್ಲಿಂದ ಮೆಟ್ಟಿಲು ಹತ್ತಿ ಹೋದರೆ ಎರಡು ಮಲಗುವ ಕೋಣೆಗಳಿದ್ದವು. ಒಂದು ಕೋಣೆಯಲ್ಲಿ ವಿನ್ಸೆಂಟ್ ಮತ್ತು ತಮ್ಮ, ಕಾರ್ ಇರುತ್ತಿದ್ದರು. ಬೆಳಿಗ್ಗೆ ಎದ್ದಾಗ ತನ್ನ ತಂದೆ ಹೇಳಿದ್ದ ಸಪೂರವಾದ ಚರ್ಚ್‌ಗೋಪುರದ ಮೇಲೆ ಸೂರ್ಯನ ಕಿರಣಗಳು ಬಿದ್ದಿರುವುದನ್ನು ನೋಡಿದನು. ಅಲ್ಲಿಯೇ ಇದ್ದ ಕೊಳದ ಮೇಲೆ ನೀಲಿ ಛಾಯೆ ಕಾಣಿಸಿತು. ಸಂಜೆ ಸೂರ್ಯಾಸ್ತದ ಸಮಯದಲ್ಲಿ ಬಣ್ಣಗಳು ಬೆಳಿಗ್ಗೆಗಿಂತ ಗಾಢವಾಗಿದ್ದವು. ಕಿಟಕಿಯ ಬಳಿಯಲ್ಲಿ ಕುರ್ಚಿಯೊಂದನ್ನೆಳೆದುಕೊಂಡು ಬಣ್ಣಗಳ ರಮ್ಯ ವಿಲಾಸವನ್ನು ಗಮನಿಸುತ್ತಿದ್ದ.

ಕೊಳದಲ್ಲಿನ ನೀರಿನ ಮೇಲೆ ದಟ್ಟವಾದ ತೈಲ ಚಾದರವನ್ನು ಹಾಸಿದಂತಿತ್ತು. ಸಂಜೆ ಸರಿಯುತ್ತಿದ್ದಂತೆ ಬಣ್ಣ ಕರಗಿ ಹೋಗುತ್ತಿತ್ತು.

ವಿನ್ಸೆಂಟ್ ತಂದೆ ತಾಯಿಯರನ್ನು ಅತಿಯಾಗಿ ಪ್ರೀತಿಸುತ್ತಿದ್ದ. ಹಾಗೆಯೇ ಅವರೂ ಇವನನ್ನು ಗಾಢವಾಗಿ ಮುದ್ದಿಸುತ್ತಿದ್ದರು. ಮೂವರೂ ತಮ್ಮ ನಡುವಿನ ಪ್ರೀತಿ, ಸಂಬಂಧಗಳನ್ನು ಹಾಳಾಗದಂತೆ ಉಳಿಸಿಕೊಳ್ಳಬೇಕೆಂದು ಶತಪ್ರಯತ್ನ ಮಾಡುತ್ತಿದ್ದರು. ವಿನ್ಸೆಂಟ್ ಚೆನ್ನಾಗಿ ತಿನ್ನುತ್ತಿದ್ದ; ಹಾಗೆಯೇ ಚೆನ್ನಾಗಿ ನಿದ್ದೆ ಮಾಡುತ್ತಿದ್ದ. ಕೆಲವೊಮ್ಮೆ ಸುತ್ತಲ ಬಯಲು ಪ್ರದೇಶದಲ್ಲೆಲ್ಲಾ ಅಡ್ಡಾಡುತ್ತಿದ್ದ. ಮನೆಯಲ್ಲಿ ಎಲ್ಲರೊಂದಿಗೂ ಮಾತಾಡುತ್ತಿದ್ದ; ಪೈಂಟಿಂಗ್ ಮಾಡುತ್ತಿದ್ದ. ಮನೆಯಲ್ಲಿ ಪ್ರತಿಯೊಬ್ಬರೂ ಅವನ ಬಗ್ಗೆ ಹೆಚ್ಚಿನ ರೀತಿ ನಡೆದುಕೊಳ್ಳುತ್ತಿದ್ದ. ಆದರೆ ಯಾರೇ ಮಾತಾಡುವಾಗಲೂ ಸ್ವಲ್ಪ ಎಚ್ಚರದೊಂದಿಗೆ ಮಾತಾಡಬೇಕೆಂದುಕೊಳ್ಳುತ್ತಿದ್ದರು. ಏನೋ ಮಾತಾಡಿ ಸಂಬಂಧ ಸೌಹಾರ್ದತೆಯನ್ನು ಕಳೆದುಕೊಳ್ಳಬಾರದೆಂಬುದೇ, ಎಚ್ಚರದ ಹಿಂದಿನ ಉದ್ದೇಶವಾಗಿತ್ತು. ಅವನ ಆರೋಗ್ಯ ಸರಿಹೋಗುವವರೆಗೆ, ಈ ಹೊಂದಾಣಿಕೆಗೆ ಭಂಗ ಬಂದಿರಲಿಲ್ಲ. ಒಂದೇ ಕೋಣೆಯಲ್ಲಿ, ತನ್ನಂತೆ ಆಲೋಚಿಸಲಾಗದವರೊಂದಿಗೆ ಇರುವುದರಲ್ಲಿ ಅವನಿಗೆ ಏನೋ ಕಸಿವಿಸಿ. ತಂದೆ ಬಂದು, "ರೆವರೆಂಡ್ ಟೆನ್ ಕೇಟ್ ಅನುವಾದ ಮಾಡಿರುವ ಗಯಟೆಯ 'ಫಾಸ್ಟ್' ಓದುತ್ತೇನೆ" ಎಂದಾಗ ವಿನ್ಸೆಂಟ್‌ಗೆ ಓಕರಿಕೆ ಬರುವಂತಾಯಿತು.

ಒಂದು ಹದಿನೈದು ದಿನದ ರಜೆಯಲ್ಲಿ ಇಲ್ಲಿಗೆ ಬಂದಿದ್ದ. ಬ್ರಬಾಂಟ್ ಕಂಡರೆ ಅವನಿಗೆ ಎಲ್ಲಿಲ್ಲದ ಪ್ರೀತಿ. ಇದ್ದು ಹೋಗಬೇಕೆನ್ನುವ ತುಡಿತ. ಇಲ್ಲಿ ಬರಬೇಕು, ಕಣ್ಣಿಗೆ ಕಾಣುವ ಸುಂದರವಾದ ನಿಸರ್ಗ ದೃಶ್ಯಗಳನ್ನು ಚಿತ್ರಿಸಬೇಕು. ಈ ಊರಿನ ಜೊತೆಯಲ್ಲಿ ಸಂವೇದನಾತ್ಮಕವಾಗಿ ಮಿಡಿಯಬೇಕು. ಇಲ್ಲಿನ ಸೌಂದರ್ಯವನ್ನು ಕಣ್ಮನಗಳಲ್ಲಿ ಇಳಿಸಿಕೊಳ್ಳಬೇಕು, ಗ್ರಾಮೀಣ ಬದುಕನ್ನು ಚಿತ್ರಿಸಬೇಕು ಎನ್ನುವ ಭಾವನೆ ಬಿಟ್ಟರೆ, ಅವನಿಗೆ ಮತ್ಯಾವುದರಲ್ಲಿಯೂ ಆಸಕ್ತಿಯಿರಲಿಲ್ಲ. ಫಾದರ್ ಮಿಲ್ಲೆಟ್‌ನಂತೆ ಗ್ರಾಮಜೀವನ ಜೀವಿಸಬೇಕು; ಅರ್ಥಮಾಡಿಕೊಳ್ಳಬೇಕು; ರೈತರ ಪೈಂಟಿಂಗ್ಸ್ ಮಾಡಬೇಕು. ಕೆಲವರು ಗ್ರಾಮ ಜೀವನದಿಂದ ದೂರವಾಗಿ ಪಟ್ಟಣಗಳಲ್ಲಿ ನೆಲೆಸಿದ್ದರೂ, ಅವರ ಮನಸ್ಸಿನಲ್ಲಿ ಗ್ರಾಮ ಬದುಕಿನ ನೆನಪುಗಳು ಅಚ್ಚಳಿಯದೆ ಉಳಿದಿರುತ್ತವೆ. ಜೀವನದುದ್ದಕ್ಕೂ ತಮ್ಮ ಹುಟ್ಟೂರಿನ ಸುಂದರ ಪರಿಸರ, ಹೊಲಗಳು, ರೈತರು ಮುಂತಾದವುಗಳಿಗಾಗಿ ತುಡಿಯುತ್ತಲೇ ಇರುತ್ತಾರೆ ಎನ್ನುವುದು ವಿನ್ಸೆಂಟ್‌ನ ಬಲವಾದ ನಂಬಿಕೆಯಾಗಿತ್ತು.

ಯಾವಾಗಲೂ ಅವನು ಮನಸ್ಸಿನಲ್ಲಿ ಬ್ರಬಾಂಟ್‌ಗೆ ಹಿಂತಿರುಗಿ ಬಂದು ಇಲ್ಲಿಯೇ ಖಾಯಂ ಆಗಿ ನೆಲೆಸಿಬಿಡುತ್ತೇನೆ ಎಂದುಕೊಂಡಿದ್ದ. ಆದರೆ ತಾನಿಲ್ಲಿ ಬಂದು ಇರುವುದು ತಂದೆತಾಯಿಗಳಿಗೆ ಇಷ್ಟವಿಲ್ಲದ ಪಕ್ಷದಲ್ಲಿ, ತನ್ನಾಸೆ ಸಾಧ್ಯವಾಗುವುದಿಲ್ಲ.

"ಬಾಗಿಲು ಮುಚ್ಚಿರಬೇಕು ಇಲ್ಲ ತೆಗೆದಿರಬೇಕು. ಯಾವುದಾದರೂ ಒಂದು ಒಪ್ಪಂದಕ್ಕೆ ಬರಬೇಕಾಗಿದೆ." ವಿನ್ಸೆಂಟ್ ತಂದೆಗೆ ಹೇಳಿದ.

"ಹೌದು ವಿನ್ಸೆಂಟ್ ನನಗೂ ಅದೇ ಬೇಕಾಗಿದೆ. ಪರವಾಗಿಲ್ಲ ಪೈಂಟಿಂಗ್‌ನಲ್ಲಿ ಒಂದಷ್ಟು ಸಾಧನೆ ಕಾಣ್ತಿದೆ. ನನಗೆ ಸಂತೋಷ ಆಗಿದೆ."

"ಮುಕ್ತವಾಗಿ ಒಂದು ಮಾತು ಹೇಳಿ. ನಾವೆಲ್ಲ ಒಟ್ಟಿಗೆ ನೆಮ್ಮದಿಯಿಂದ ಇರೋಕೆ ಆಗುತ್ತಾ? ನಾನು ನಿಮ್ಮ ಜೊತೆ ಇರಬಹುದಾ ಹೇಗೆ?"

"ಖಂಡಿತ."

"ಎಷ್ಟು ದಿವಸ?"

"ನಿನಗೆ ಎಷ್ಟು ದಿವಸ ಇರಬೇಕೂಂತ ಅನಿಸುತ್ತೋ ಅಷ್ಟು ದಿವಸ ಇರಬಹುದು. ಇದು ನಿನ್ನ ಮನೆ. ನೀನು ಇರಬೇಕಾಗಿರೋದು ನಮ್ಮ ಜೊತೆ."

"ಹೊಂದಾಣಿಕೆ ಆಗದಿದ್ದರೆ?"

"ಅದಕ್ಕಾಗಿ ಬೇಜಾರು ಮಾಡಿಕೊಳ್ಳಬಾರದು. ಆದಷ್ಟು ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡು ಸುಮ್ಮನೆ ಇದ್ದುಬಿಡಬೇಕು."

"ನಾನು ಸ್ಟುಡಿಯೋ ವಿಚಾರದಲ್ಲಿ ಏನು ಮಾಡಬೇಕು? ಮನೆಯಲ್ಲಿ ಕೆಲಸ ಮಾಡೋದು ನಿಮಗೆ ಇಷ್ಟವಾಗೊಲ್ಲ."

"ನಾನೂ ಅದರ ಬಗ್ಗೆ ಯೋಚನೆ ಮಾಡ್ತಿದ್ದೀನಿ. ತೋಟದಲ್ಲಿ ವಾಷ್‌ಹೌಸ್ (ಬಟ್ಟೆ ಒಗೆಯುವ ಮನೆ) ಇದೆಯಲ್ಲ ಅದನ್ನೇ ಉಪಯೋಗಿಸಿಕೊಳ್ಳಬಹುದಲ್ಲ. ಪೂರ್ತಿಯಾಗಿ ನೀನೇ ಇಟ್ಕೋ. ಅಲ್ಲಿಗೆ ಯಾರೂ ಬರೋದಿಲ್ಲ. ನಿನಗೆ ತೊಂದರೇನೂ ಆಗೋದಿಲ್ಲ."

ವಾಷ್‌ಹೌಸ್ ಅಡಿಗೆ ಮನೆಯ ಹಿಂದಕ್ಕೇ ಇತ್ತಾದರೂ ಎರಡರ ನಡುವೆ ಸಂಬಂಧ ಇರಲಿಲ್ಲ. ಕೊಠಡಿಯ ಒಂದು ಭಾಗ ಅದಾಗಿತ್ತು. ಮೇಲೊಂದು ಕಿಟಕಿ. ಅದು ತೋಟದ ಕಡೆಗೆ ತೆರೆದುಕೊಂಡಿತ್ತು. ನೆಲ ಮಾತ್ರ ಮಣ್ಣಿನದಾಗಿತ್ತು. ಚಳಿಗಾಲದಲ್ಲಿ ಸದಾ ತೇವದಿಂದ ಕೂಡಿರುತ್ತಿತ್ತು.

"ಅಲ್ಲೊಂದು ಬೆಂಕಿಗೂಡು ಹಾಕೋಣ. ನೆಲವನ್ನೆಲ್ಲ ಚೆನ್ನಾಗಿ ಒಣಗಿಸಿ, ನೆಲದ ಮೇಲೆ ಮರದ ಹಲಗೆಗಳನ್ನು ಹಾಸಿ ಬಿಡೋಣ. ಆಗ ನಿನಗೆ ಅದು ಗಮ್ಮತ್ತಾಗಿರುತ್ತೆ. ಏನಂತೀಯ?"

ವಿನ್ಸೆಂಟ್ ಸುತ್ತಲೂ ನೋಡಿದ. ಅದೊಂದು ತೀರಾ ಸಾಮಾನ್ಯವಾದ ಕೋಣೆ, ಬಂಜರು ಪ್ರದೇಶದಲ್ಲಿ ಎದ್ದು ನಿಂತಿರುವ ರೈತರ ಮನೆಯಂತೆ ಇತ್ತು. ನಿಜವಾಗಿಯೂ ಅದನ್ನು ಗ್ರಾಮೀಣ ಸ್ಟುಡಿಯೋ ಆಗಿ ಪರಿವರ್ತಿಸಬಹುದಾಗಿತ್ತು.

"ನಿನಗೆ ಆ ಕಿಟಕಿ, ಬಹಳ ಚಿಕ್ಕದಾಯಿತು ಅಂತ ಅನಿಸಿದರೆ, ನನ್ನ ಹತ್ತಿರ ಸ್ವಲ್ಪ ಹಣ ಇದೆ. ಅದನ್ನು ದೊಡ್ಡದು ಮಾಡಿಸೋಣ" ಎಂದ ಥಿಯೋಡೋರಸ್.

"ಬೇಡ ಬೇಡ. ಈಗ ಅದು ಇರುವ ಹಾಗೇ ಸರಿಯಾಗಿದೆ. ಮಾಡೆಲ್‌ನ ಮನೆಯಲ್ಲಿಯೇ ಕೆಲಸ ಮಾಡುವಾಗ, ಎಷ್ಟು ಬೆಳಕು ಅವನ ಮೇಲೆ, ಬೀಳುತ್ತೋ, ಇಲ್ಲಿಯೂ ಅಷ್ಟೇ ಬೆಳಕು ಬೀಳುತ್ತೆ."

ಮೈಯೆಲ್ಲ ತೂತುಗಳಿದ್ದ ಜರಡಿ ತರದ ಬ್ಯಾರಲ್ಲೊಂದನ್ನು ತಂದು ಅದನ್ನೇ ಬೆಂಕಿಗೂಡು ಮಾಡಿ, ಬೆಂಕಿ ತುಂಬಿಸಿದರು. ಕೋಣೆಯ ಮೇಲುಭಾಗ, ಗೋಡೆಗಳು, ನೆಲ ಎಲ್ಲ ಚೆನ್ನಾಗಿ ಒಣಗಿದವು. ನೆಲಗಟ್ಟಿಯಾಗಿತ್ತು. ಆಗ ಅದರ ಮೇಲೆ ಮರದ ಹಲಗೆಗಳನ್ನು ಹಾಸಿದರು. ವಿನ್ಸೆಂಟ್ ತನ್ನೆಲ್ಲ ವಸ್ತುಗಳನ್ನು ತಂದ. ಟೇಬಲ್ಲು, ಹಾಸಿಗೆ, ಮಂಚ, ಈಸಲ್, ಕುರ್ಚಿಗಳು ತಮ್ಮ ತಮ್ಮ ಸ್ಥಾನಗಳನ್ನು ಅಲಂಕರಿಸಿದವು. ಅಡಿಗೆ ಮನೆ ಪಕ್ಕದಲ್ಲಿನ ಬಿಳಿಸುಣ್ಣ ಬಳಿದಿದ್ದ ಗೋಡೆ ಮೇಲೆ ಬ್ರಷ್‌ನಿಂದ GOGH ಬರೆದು, ಡಚ್ ಮಿಲ್ಲೆಟ್ ಆಗಲು ಸಿದ್ಧನಾದ.

-೨-

ನ್ಯೂನೆನ್‌ನಲ್ಲಿ ಇದ್ದ ಹೆಚ್ಚಿನ ಮಂದಿ ನೇಕಾರರಾಗಿದ್ದರು. ಒಂದೆರಡು ಕೋಣೆಗಳಿದ್ದ ಪುಟ್ಟ ಪುಟ್ಟ ಹುಲ್ಲುಹಾಸಿದ ಗುಡಿಸಲುಗಳು. ನೆಲ ಜೇಡಿಮಣ್ಣಿನಿಂದಾಗಿತ್ತು. ಅಲ್ಲಲ್ಲಿ ನೆಲದಲ್ಲಿ ಏರುತಗ್ಗುಗಳಿದ್ದವು. ಗುಡಿಸಲಿನಲ್ಲಿ ಒಂದು ಜಾಗದಲ್ಲಿ ಕೇವಲ ಒಂದು ಕಿರಣರೇಖೆಯ ಪ್ರವೇಶಕ್ಕಷ್ಟೇ ಸಾಧ್ಯವಾಗುವ ಒಂದು ಕಿಟಕಿಯಿತ್ತು. ಗೋಡೆಗಳಲ್ಲಿ ಚತುರಾಕಾರದ ಗೂಡುಗಳಿದ್ದುವು. ನೆಲದಿಂದ ಮೂರು ಅಡಿ ಮೇಲೆ ಇದ್ದ ಈ ಗೂಡುಗಳಲ್ಲಿ ಹಾಸಿಗೆಗಳನ್ನು ಇರಿಸಲಾಗಿತ್ತು; ಒಂದು ಮೇಜು, ಕೆಲವು ಕುರ್ಚಿಗಳು, ಒಂದು ಸ್ಟೋವ್, ಜೊತೆಗೆ ಒಂದು ಬೀರು ಇದ್ದು, ಇದರಲ್ಲಿ ಪಿಂಗಾಣಿ ಪಾತ್ರೆಗಳು, ತಟ್ಟೆಗಳು ಇಡಲಾಗಿತ್ತು. ವಾಸದ ಕೋಣೆಗೆ ಸೇರಿದಂತೆ ಮತ್ತೊಂದು ಕೋಣೆಯಿದ್ದು, ಇದರಲ್ಲಿ ಅರ್ಧದಷ್ಟು ಜಾಗವನ್ನು ಮಗ್ಗದ ಯಂತ್ರ ಆಕ್ರಮಿಸಿಕೊಂಡಿತ್ತು.

ನೇಕಾರ ಒಂದು ವಾರದಲ್ಲಿ ಕಡಿಮೆಯೆಂದರೆ ಅರವತ್ತು ಗಜಗಳಷ್ಟು ಬಟ್ಟೆಯನ್ನು ನೇಯುತ್ತಿದ್ದ. ಅವನು ನೇಯ್ಗೆಯಲ್ಲಿ ತೊಡಗಿದ್ದರೆ, ಹೆಂಗಸೊಬ್ಬಳು ಎಳೆಗಳನ್ನು ಎಳೆದೆಳೆದು ಕೊಡುತ್ತಿದ್ದಳು. ಅವನು ನೇಯ್ದ ಆ ಬಟ್ಟೆಯ ತುಂಡಿನಿಂದ, ವಾರಕ್ಕೆ ನಾಲ್ಕೂವರೆ ಫ್ರ್ಯಾಂಕ್ ಲಾಭ ಪಡೆಯುತ್ತಿದ್ದ. ಬಟ್ಟೆ ತಯಾರಕನ ಬಳಿ ತೆಗೆದುಕೊಂಡು ಹೋದಾಗ, ಇನ್ನೊಂದೆರಡು ವಾರದವರೆಗೆ ಬಹುಶಃ ಬಟ್ಟೆಯು ಬೇಕಾಗುವುದಿಲ್ಲವೆಂದ. ಇಲ್ಲಿನ ಈ ಜನ ಬೋರಿನೇಜ್‌ನ ಗಣಿ ಕಾರ್ಮಿಕರಿಗಿಂತ ವಿಭಿನ್ನವಾಗಿ ಕಾಣಿಸಿದರು. ವಿನ್ಸೆಂಟ್ ಅದನ್ನು ಗುರುತಿಸಿದ. ಶಾಂತ ಚಿತ್ತರೂ, ನೆಮ್ಮದಿಯುಳ್ಳವರೂ, ಯಾವುದೇ ತಂಟೆ ತಕರಾರಿಗೆ ಹೋಗದವರು, ತಮ್ಮ ಪಾಡಿಗೆ ತಾವು ಸಾಧು ಪ್ರಾಣಿಗಳಂತೆ ಬದುಕುತ್ತಿರುವವರಂತೆನಿಸಿದರು. ವಿನ್ಸೆಂಟ್ ಅವರೊಂದಿಗೆ ಅತ್ಯಲ್ಪ ಅವಧಿಯಲ್ಲಿಯೇ ಸ್ನೇಹ ಬೆಳೆಸಿಕೊಂಡ. ಸರಳವಾಗಿ ಬದುಕುವುದನ್ನು ಅಭ್ಯಾಸಮಾಡಿಕೊಂಡಿದ್ದರು. ಆಲೂಗಡ್ಡೆ, ಕಾಫಿ ಯಾವಾಗಲೋ ಅಪರೂಪಕ್ಕೆ ಬಯಸುವ ಹಂದಿಮಾಂಸ ಕೊಳ್ಳಲು ಎಷ್ಟು ಹಣದ ಅಗತ್ಯವಿರುತ್ತೋ ಅಷ್ಟು ಸಂಪಾದನೆಯಾದರೆ ಸಾಕೆಂಬ ನಿಲುವಿನಿಂದ ಇದ್ದರು. ವಿನ್ಸೆಂಟ್ ಪೈಂಟಿಂಗ್ ಮಾಡುವುದಕ್ಕೆ ಅವರ ವಿರೋಧ ಇರಲಿಲ್ಲ. ಅವನು ಪೈಂಟಿಂಗ್ ಮಾಡುತ್ತಿದ್ದರೆ ತಮ್ಮ ಪಾಡಿಗೆ ತಾವು ತಮ್ಮ ಕೆಲಸದಲ್ಲಿ ಮಗ್ನರಾಗಿರುತ್ತಿದ್ದರು. ವಿನ್ಸೆಂಟ್ ಅಲ್ಲಿಗೆ ಹೋದಾಗಲೆಲ್ಲ ಮಕ್ಕಳಿಗೆಂದು ಒಂದಷ್ಟು ಚಾಕ್‌ಲೇಟ್‌ಗಳನ್ನೋ, ದೊಡ್ಡವರಿಗೆಂದು ತಂಬಾಕಿನ ಚೀಲವನ್ನೋ ಕೊಂಡುಯ್ಯುತ್ತಿದ್ದ.

೧೭೩೦ ಎಂದು ಕೆತ್ತಿದ್ದ ಪುರಾತನವಾದ ಓಕ್‌ಮರದಿಂದ ಮಾಡಿದ್ದ ಮಗ್ಗವನ್ನು ನೋಡಿದ. ಅದರ ಬಳಿ ಕಿಟಕಿಯ ಮುಂಭಾಗದಲ್ಲಿ ಮಗುವೊಂದು ಕುರ್ಚಿಯಲ್ಲಿ ಕುಳಿತು, ಹಿಂದಕ್ಕೂ ಮುಂದಕ್ಕೂ ಸರಿಯುವ ಲಾಳದ ಕ್ರಿಯೆಯನ್ನು ಗಂಭೀರವಾಗಿ ಗಮನಿಸುತ್ತಿದ್ದ. ಜೇಡಿಮಣ್ಣಿನ ನೆಲ ತೀರಾ ಅಧ್ವಾನವಾಗಿತ್ತು. ಆದರೆ ಅದರಲ್ಲಿಯೇ ವಿನ್ಸೆಂಟ್ ಶಾಂತಿ, ಸೌಂದರ್ಯಗಳನ್ನು ಗುರುತಿಸಿದ. ಅದನ್ನೇ ತನ್ನ ಕ್ಯಾನ್‌ವಾಸ್‌ನಲ್ಲಿ ಇಳಿಸುವ ಪ್ರಯತ್ನ ಮಾಡಿದ.

ಬೆಳಿಗ್ಗೆ ಬೇಗನೆ ಎದ್ದು ಹೋದವನು ದಿನವನ್ನೆಲ್ಲ ಹೊಲ, ಗದ್ದೆ, ಬಯಲುಗಳಲ್ಲಿ ಇಲ್ಲವೆ ರೈತರ, ನೇಕಾರರ ಗುಡಿಸಲುಗಳಲ್ಲಿ, ಕಳೆದ. ಆ ಜನರೊಂದಿಗೆ ಇದ್ದಾಗ ಆತ್ಮೀಯರೊಂದಿಗೆ ಇದ್ದಂತೆ ಭಾವಿಸಿದ. ಹಿಂದೆ ಅವನು ಗಣಿಕಾರ್ಮಿಕರ, ರೈತರ, ಗುಣಿ ಅಗೆಯುವವರ ಜೊತೆ ಬೆಂಕಿಕಾಯಿಸಿಕೊಳ್ಳುತ್ತಾ ಕಳೆದ ದಿನಗಳು ವ್ಯರ್ಥವೆನಿಸಲಿಲ್ಲ. ರೈತರ ಬದುಕನ್ನು ದಿನಗಟ್ಟಲೆ ಕುಳಿತು ಬಹಳ ಹತ್ತಿರದಿಂದ ಗಮನಿಸಿದ್ದ. ಅವರ ಬದುಕಿನಲ್ಲಿ ಎಷ್ಟು ತನ್ಮಯನಾಗಿರುತ್ತಿದ್ದನೆಂದರೆ, ಅವನಿಗೆ ಬೇರೆ ಯಾವುದರ ಪರಿವೆಯೂ ಇಲ್ಲದಂತಾಗುತ್ತಿತ್ತು.

ಈಗ ಮತ್ತೆ ಅವನು ತನ್ನ ಪ್ರೀತಿಯ ಫಿಗರ್ ಡ್ರಾಯಿಂಗ್ ಮತ್ತು ಕಲರ್‌ಗಳತ್ತ ತಿರುಗಿದ. ಅರೆಮಾಗಿದ ಧಾನ್ಯಗಳು ಹೊಂಬಣ್ಣದಲ್ಲಿದ್ದು, ಆಕಾಶದಲ್ಲಿ ವ್ಯಾಪಿಸಿದ್ದ ಕೋಬಾಲ್ಟ್ ಬಣ್ಣದ ಜೊತೆಗೆ ಅದ್ಭುತ ಕಾಂಟ್ರಾಸ್ಟ್ ಪರಿಣಾಮವನ್ನು ಉಂಟುಮಾಡಿತ್ತು. ಇದರ ಹಿನ್ನೆಲೆಗೆ ಅಷ್ಟಾಗಿ ನಯ ನಾಜೂಕಿಲ್ಲದ ಆದರೆ ಕಂಚಿನ ಬಣ್ಣದ ಮುಖ, ತೋಳುಗಳು, ಒರಟೊರಟಾದ, ಧೂಳಿನಿಂದ ಕೂಡಿದ್ದ ನೀಲಿಬಣ್ಣದ ಉಡುಪಿನಲ್ಲಿದ್ದು, ಗ್ರಾಮೀಣ ಸೌಂದರ್ಯವನ್ನು ಅತ್ಯಂತ ಸಹಜ ರೀತಿಯಲ್ಲಿ ಬಿಂಬಿಸುತ್ತಿದ್ದ ಹೆಂಗಸರ ಆಕೃತಿಗಳಿದ್ದವು.

ಈಸಲ್ ಹೆಗಲಿಗೇರಿಸಿಕೊಂಡು, ಕ್ಯಾನ್‌ವಾಸ್‌ಗಳ ಸುರುಳಿಯನ್ನು ಕಂಕುಳಲ್ಲಿ ಇರಿಸಿಕೊಂಡು ವೇಗವಾಗಿ ದಾಪುಗಾಲು ಹಾಕುತ್ತ ಮುಖ್ಯ ಬೀದಿಗೆ ಬಂದಾಗ, ಕಿಟಕಿಗಳ ಪರದೆಗಳ ನಡುವಿನಿಂದ, ವಿಚಿತ್ರವಾಗಿ ನೋಡುತ್ತಿದ್ದ ಹೆಂಗಸರು ಗಮನಕ್ಕೆ ಬಂದರು. 'ಬಾಗಿಲು ಮುಚ್ಚಿರಬೇಕು, ಇಲ್ಲ ಪೂರ್ತಿ ತೆರೆದಿರಬೇಕು' ಎನ್ನುವ ಮಾತು ಸುಳ್ಳು ಎನಿಸಿತು. ಅದರಲ್ಲೂ ಮನೆಯಲ್ಲಿ ಇರುವವರೊಂದಿಗೆ ತನ್ನ ಸಂಬಂಧಗಳ ಬಗ್ಗೆ ಯೋಚಿಸಿದಾಗ! ಅವನ ಸೋದರಿ ಅವನನ್ನು ಕಂಡರೆ ಒಂದು ಥರಾ ಅಸಹ್ಯ ಪಟ್ಟುಕೊಳ್ಳುತ್ತಿದ್ದಳು. ಇವನ ಹುಚ್ಚು, ವಿಚಿತ್ರ ನಡತೆಯಿಂದಾಗಿ, ನ್ಯೂನೆನ್‌ನಲ್ಲಿ ತನ್ನ ಮದುವೆಯ ಸಾಧ್ಯತೆಗಳು ತಪ್ಪಿಹೋಗುತ್ತವೆ ಎಂದು ಭಾವಿಸಿದ್ದಳು. ವಿಲ್ಲೆಮಿಯೆನ್ ಇವನನ್ನು ಇಷ್ಟಪಟ್ಟರೂ, ಇವನ ಜೊತೆ ತಲೆ ಚಿಟ್ಟು ಹಿಡಿಸುತ್ತೆ ಎಂದುಕೊಂಡಿದ್ದಳು. ನಂತರ ಕಡೆಯಲ್ಲಿ ತನ್ನ ಸೋದರ ಕಾರ್‌ನೊಂದಿಗೆ ಸ್ನೇಹದಿಂದಿರಲು ಮಾತ್ರ ಸಾಧ್ಯವಾಯಿತು.

ವಿನ್ಸೆಂಟ್, ಎಲ್ಲರೂ ಟೇಬಲ್ ಬಳಿ ಕುಳಿತು ಊಟ ಮಾಡುತ್ತಿದ್ದರೆ, ವಿನ್ಸೆಂಟ್ ಊಟದ ತಟ್ಟೆಯನ್ನು ತೊಡೆಯ ಮೇಲಿರಿಸಿಕೊಂಡು, ಯಾವುದೋ ಒಂದು

ಮೂಲೆಯಲ್ಲಿ ಕುಳಿತಿದ್ದ. ಅವನ ಮುಂದೆ ಕುರ್ಚಿ ಮೇಲೆ ತನ್ನ ಸ್ಕೆಚ್‌ಗಳನ್ನೆಲ್ಲ ಹರಡಿಕೊಂಡಿದ್ದು ಅವುಗಳನ್ನು ಗಂಭೀರವಾಗಿ ಪರೀಕ್ಷಿಸುತ್ತಿದ್ದ. ಸ್ಕೆಚ್ ಸರಿಯಿಲ್ಲವೆನಿಸಿದಾಗ ಅದನ್ನು ಎತ್ತಿಕೊಂಡು ಚೂರುಚೂರಾಗಿ ಹರಿದು ಎಸೆಯುತ್ತಿದ್ದ. ಮನೆಯಲ್ಲಿ ಯಾರೂ ಅವನನ್ನು ಹೆಚ್ಚಾಗಿ ಮಾತಾಡಿಸುತ್ತಿರಲಿಲ್ಲ. ಯಾವಾಗಲಾದರೂ ಅಪರೂಪಕ್ಕೆ ಯಾರಾದರೂ ಲೇಖಕನ ಬಗ್ಗೆ ಚರ್ಚೆ ಬಂದಾಗ, ಎಲ್ಲೋ ಒಮ್ಮೊಮ್ಮೆ ಒಂದೆರಡು ಮಾತಾಡುತ್ತಿದ್ದ. ತನ್ನ ಜೊತೆ ಮಾತಾಡುವ ಅವಕಾಶ ಅವರಿಗೆ ಎಷ್ಟು ಕಡಿಮೆಯಾದರೆ ಅಷ್ಟೂ ಅವರಿಗೆ ಒಳ್ಳೆಯದೆನಿಸುತ್ತದೆ ಎಂಬುದನ್ನು ಅವರ ರೀತಿಯಿಂದ ಗಮನಿಸಿದ.

–೩–

ಸರಿಸುಮಾರು ಒಂದು ತಿಂಗಳವರೆಗೆ ವಿನ್ಸೆಂಟ್ ಹೊಲಗಳಲ್ಲಿ ಪೈಂಟಿಂಗ್ ಮುಂದುವರೆಸಿದ ಸಂದರ್ಭದಲ್ಲಿ, ಅವನಿಗೆ ವಿಚಿತ್ರ ಅನುಭವಗಳಾದವು. ನ್ಯೂನೆನ್‌ನ ಮಂದಿ ತನ್ನನ್ನು ಗಮನಿಸುತ್ತಿದ್ದಾರೆ; ಹಿಂಬಾಲಿಸುತ್ತಿದ್ದಾರೆ ಎನಿಸಿತು. ಮೊದಲು ಕೆಲವೊಂದು ದಿನ ಇದರ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳಲಿಲ್ಲವಾದರೂ, ಯಾರದೋ ಕಣ್ಣೆರಡು ತನ್ನನ್ನೇ ಹಿಂಬಾಲಿಸುತ್ತಿವೆ ಎಂಬ ಭಾವನೆಯನ್ನು ತಳ್ಳಿಹಾಕಲು ಅವನಿಂದ ಸಾಧ್ಯವಾಗಲಿಲ್ಲ. ಅನೇಕ ಸಲ ಹೊಲಗಳಲ್ಲಿ ತನ್ನ ಕಡೆಗಣ್ಣಿಂದ ಗಮನಿಸಲು ಪ್ರಯತ್ನಿಸಿದ. ಆದರೆ ಯಾರೂ ಕಣ್ಣಿಗೆ ಬೀಳಲಿಲ್ಲ. ಒಂದೇ ಒಂದು ಸಲ ಅವನಿಗೆ ಹೆಂಗಸಿನ ಸ್ಕರ್ಟ್ ಭಾಗಶಃ ಕಾಣಿಸಿತು. ಹಿಂಬಾಲಿಸಲು ಪ್ರಯತ್ನಿಸಿದ, ಆದರೆ ಸಾಧ್ಯವಾಗಲಿಲ್ಲ. ಮತ್ತೊಂದು ಸಲ ಅವನು ನೇಕಾರನೊಬ್ಬನ ಮನೆಯಿಂದ ರಸ್ತೆಯ ಕಡೆಗೆ ಬರುತ್ತಿರುವಾಗ, ಯಾರೋ ಓಡಿ ಹೋದ ಹಾಗಾಯಿತು. ಮತ್ತೊಮ್ಮೆ ಕಾಡುಗಳಲ್ಲಿ ಈಸಲ್ ನಿಲ್ಲಿಸಿ, ಹತ್ತಿರದ ಕೊಳದಲ್ಲಿ ನೀರು ಕುಡಿಯಲೆಂದು ಹೋಗಿ, ಹಿಂತಿರುಗಿದಾಗ, ಕ್ಯಾನ್‌ವಾಸ್ ಹಸಿ ಬಣ್ಣಗಳ ಮೇಲೆ ಬೆರಳಿನ ಗುರುತು ಇದ್ದುದನ್ನು ಗಮನಿಸಿದ.

ಯಾರು ತನ್ನನ್ನು ಹಿಂಬಾಲಿಸುತ್ತಿದ್ದಾರೆಂಬುದನ್ನು ಪತ್ತೆ ಹಚ್ಚಲು, ಅವನಿಗೆ ಸುಮಾರು ಎರಡುವಾರ ಹಿಡಿಯಿತು. ಅವನು 'ಪಿಟ್‌ಡಿಗ್ಗರ್ಸ್' (ಕುಳಿ ಅಗೆಯಯುವವರು) ಮೇಲೆ ಕೆಲಸ ಮಾಡುತ್ತಿದ್ದಾಗ, ಅಲ್ಲಿಂದ ಸ್ವಲ್ಪದೂರದಲ್ಲಿ ನಿಂತಿದ್ದ ಹಳೆಯ ವ್ಯಾಗನ್ ,ಮುಂದೆ ಹೆಣ್ಣೊಬ್ಬಳು ನಿಂತು ಅವನ ಕೆಲಸವನ್ನು ಗಮನಿಸುತ್ತಿದ್ದಳು. ಅದನ್ನು ಗಮನಿಸಿದ ವಿನ್ಸೆಂಟ್ ಕೂಡಲೇ ಈಸಲ್ ಮತ್ತು ಕ್ಯಾನ್‌ವಾಸ್‌ಗಳನ್ನೆತ್ತಿಕೊಂಡು ಮನೆಯತ್ತ ಹೊರಡುವವನಂತೆ ತೋರಿಸಿಕೊಂಡ. ಅವನಿಗಿಂತ ವೇಗವಾಗಿ ಆ ಹೆಣ್ಣು ಮುಂದೋಡಿದಳು. ಅವಳಿಗೆ ಯಾವುದೇ ಅನುಮಾನ ಬಾರದಂತೆ ಅವನೂ ಅವಳನ್ನು ಹಿಂಬಾಲಿಸಿದ. ಕಡೆಗೆ ಅವಳು ಪಾದ್ರಿ ಮನೆಯ ಪಕ್ಕಕ್ಕೆ ಹೊರಳಿದ್ದನ್ನು ಗಮನಿಸಿದ.

"ನಮ್ಮ ಮನೆ ಪಕ್ಕದಲ್ಲಿ ಯಾರಿದ್ದಾರೆ ಅಮ್ಮ?" ಎಂದು, ರಾತ್ರಿ ಎಲ್ಲರೂ ಊಟಕ್ಕೆ ಕುಳಿತಿದ್ದಾಗ, ಕೇಳಿದ.

"ಬೆಜೆಮನ್ ಕುಟುಂಬ."

"ಅವರು ಯಾರು?"

"ಅವರ ಬಗ್ಗೆ ನಮಗೆ ಅಷ್ಟಾಗಿ ಏನೂ ಗೊತ್ತಿಲ್ಲ. ಐದು ಜನ ಹೆಣ್ಣು ಮಕ್ಕಳು, ತಾಯಿ ಇದ್ದಾರೆ. ಕೆಲವು ದಿನಗಳ ಹಿಂದೆ ತಂದೆ ತೀರಿಕೊಂಡಿದ್ದಾರೆ."

"ಅವರು ಹೇಗಿದ್ದಾರೆ?"

"ಹೇಗೇಂತ ಹೇಳೋದು ಕಷ್ಟ. ಆದರೆ ಅವರು ಗುಟ್ಟಾಗಿರ್ತಾರೆ. ಹೆಚ್ಚಿಗೆ ಕಾಣಿಸಿಕೊಳ್ಳೋದಿಲ್ಲ."

"ಅವರು ಕ್ಯಾಥೋಲಿಕ್ಸೇನು?"

"ಇಲ್ಲ. ಪ್ರಾಟೆಸ್ಟೆಂಟರು. ತಂದೆ 'ಡೊಮಿನಿ' ಆಗಿದ್ದರಂತೆ."

"ಮದುವೆ ಆಗದಿರುವ ಹುಡುಗಿಯೇನಾದರೂ ಇದ್ದಾಳೆಯೇ?"

"ಯಾರಿಗೂ ಮದುವೆಯಾಗಿಲ್ಲ. ಯಾಕೆ ಅದನ್ನೆಲ್ಲ ಕೇಳ್ತಾ ಇದ್ದೀಯ?"

"ಯಾಕೂ ಇಲ್ಲ. ಏನೋ ಕುತೂಹಲ, ಅಷ್ಟೆ! ಮನೇಲಿ ಯಾರು ನೋಡ್ಕೋತಾರೆ?"

"ಯಾರೂ ಇಲ್ಲ. ನೋಡೋಕೆ ಶ್ರೀಮಂತರ ಹಾಗೆ ಕಾಣ್ತಾರೆ."

"ನಿನಗೆ ಯಾವುದಾದರೂ ಹುಡುಗಿ ಹೆಸರಾದರೂ ಗೊತ್ತಿದೆಯೇನು?"

"ಇಲ್ಲ" – ವಿನ್ಸೆಂಟ್‌ನ ತಾಯಿ ಅವನತ್ತ ವಿಚಿತ್ರವಾಗಿ ನೋಡುತ್ತಾ, ಉತ್ತರಿಸಿದಳು.

ಮಾರನೇ ದಿನ, ಹಿಂದಿನ ದಿನ ಹೋಗಿದ್ದ ಜಾಗಕ್ಕೇ ಹೋದ. ರೈತರ ಆಕೃತಿಗಳನ್ನು, ಮಾಗಿದ ಧಾನ್ಯ, ಇಲ್ಲವೆ ಬೀಚ್ ಪೊದೆಗಳಲ್ಲಿನ ಎಲೆಗಳ ಹಿನ್ನೆಲೆಯಲ್ಲಿ ನೀಲಿಬಣ್ಣದಲ್ಲಿ ಹಿಡಿಯಬೇಕೆಂದಿದ್ದ. ಅವರು ಸಾಮಾನ್ಯವಾಗಿ ತಾವೇ ನೇಯ್ದಿದ್ದ ಒರಟಾದ, ಒಂದು ಥರಾ ಕಪ್ಪು ಅಥವಾ ನೀಲಿ ಬಣ್ಣದ ಬಟ್ಟೆಗಳನ್ನು ಹಾಕಿಕೊಂಡಿದ್ದರು. ಈ ಬಣ್ಣಗಳು ಗಾಳಿ ಮತ್ತು ಬದಲಾಗುವ ವಾತಾವರಣದಿಂದ ಮಾಸಿ ಹೋಗಿ ಒಂದು ರೀತಿಯ ಹದವಾದ, ತೆಳುವಾದ ಬಣ್ಣಕ್ಕೆ ತಿರುಗಿ, ನೈಜವಾದ ಮೈ ಬಣ್ಣದಂತೆ ಕಾಣಿಸುತ್ತಿತ್ತು.

ಬೆಳಿಗ್ಗೆ ಸ್ವಲ್ಪ ಹೊತ್ತು ಕಳೆದ ನಂತರ. ಮತ್ತೆ ಆ ಹೆಂಗಸು ತನ್ನ ಹಿಂದೆ ಇದ್ದುದು ಅರಿವಿಗೆ ಬಂತು. ತನ್ನ ಕಡೆಗಣ್ಣಿಂದ, ಅವಳ ಸ್ಕರ್ಟ್‌ನ ದೃಶ್ಯವನ್ನು ಸೆರೆ ಹಿಡಿದ.

"ಹೇಗಾದರೂ ಇವತ್ತು ಅವಳನ್ನು ಹಿಡಿದೇ ಹಿಡೀತೇನೆ..... ನಾನು ಮಾಡ್ತಿರೋ ಕೆಲಸವನ್ನು ಮಧ್ಯೆ ನಿಲ್ಲಿಸಬೇಕಾಗಿ ಬಂದರೂ ಸರಿಯೆ!" – ಎಂದು ತನಗೆ ತಾನೇ ಹೇಳಿಕೊಂಡ.

ಅವನು ಆದಷ್ಟೂ ಬಿರುಸಿನ ವೇಗದಲ್ಲಿ, ತಾನು ಕಂಡ ದೃಶ್ಯವನ್ನು, ಗ್ರಹಿಕೆಗೆ ಬಂದ ಅನುಭವವನ್ನು ಸೆರೆಹಿಡಿಯುವ ಅಭ್ಯಾಸಕ್ಕೆ ಒಳಗಾಗಿದ್ದ. ತನ್ನ ಮನಸ್ಸಿನ ಮೇಲೆ ಭಾವ ತೀವ್ರತೆಯೊಂದಿಗೆ ಅಚ್ಚಳಿಯದೆ ಮೂಡಿಸಿದ ದೃಶ್ಯವನ್ನು ಆ ಕ್ಷಣದಲ್ಲಿಯೇ ಸೆರೆ ಹಿಡಿಯಬೇಕೆನ್ನುವ ತುಡಿತದಿಂದಾಗಿ, ಅವನ ಪೈಂಟಿಂಗ್‌ಗೆ ಅನೂಹ್ಯ ವೇಗ

ಲಭಿಸಿತ್ತು. ಅವನ ಭಾವನೆಯಲ್ಲಿ ಡಚ್ ಗ್ರೇಟ್ ಮಾಸ್ಟರ್‌ಗಳೆಲ್ಲ ಹಾಗೆಯೇ ಮಾಡುತ್ತಿದ್ದರು. ಒಂದೇ ಒಂದು ಸ್ಟ್ರೋಕ್‌ನಿಂದ ಇಡೀ ದೃಶ್ಯವನ್ನು ಅದರ ಎಲ್ಲ ಭಾವ ಸ್ಥಿತಿಗಳೊಂದಿಗೆ ಸೆರೆ ಹಿಡಿದು ಬಿಡುತ್ತಿದ್ದರು. ಮಾಡಿದ, ಮೂಡಿದ ಕಲಾಕೃತಿಗೆ ಮರು'ಸ್ಪರ್ಶ' ವೆಂಬುದೇ ಇರುತ್ತಿರಲಿಲ್ಲ. ಮೊದಲ ಬಾರಿಗೇ, ಯಾವುದೇ ಪರಿಷ್ಕಾರವಿಲ್ಲದೆ ಅದ್ಭುತ ಕಲಾಕೃತಿಗಳಾಗಿ ಮೈತಳೆಯುತ್ತಿದ್ದವು. ಇಂಥ ಆಲೋಚನೆಗಳೊಂದಿಗೆ ಹೊರಟು, ತಾನೂ ಅದೇ ರೀತಿಯಲ್ಲಿ ಮುಂದುವರೆದ. ತಾನು ನೋಡಿದ್ದರ ಬಗ್ಗೆ ಅನಿಸಿದ್ದನ್ನು ಆ ಕೂಡಲೇ ಅದರ ಎಲ್ಲ ಸೂಕ್ಷ್ಮತೆಗಳೊಂದಿಗೆ ಹಿಡಿದಿಡುತ್ತಿದ್ದ.

ಅವನು ತನ್ನ ಸೃಜನಾತ್ಮಕ ಭಾವಾವೇಶದಲ್ಲಿ, ಆ ಹೆಂಗಸಿನ ಬಗ್ಗೆ ಮರೆತೇ ಹೋದ. ಒಂದು ಗಂಟೆಯ ನಂತರ ಮತ್ತೊಮ್ಮೆ ತಿರುಗಿ ನೋಡಿದಾಗ ಅವಳು ಅಲ್ಲಿ ಕಾಣಿಸಲಿಲ್ಲವಾದರೂ ವ್ಯಾಗನ್‌ನ ಹಿಂದೆ ಇದ್ದುದನ್ನು ನಂತರ ಗಮನಿಸಿದ. ಆ ಕೂಡಲೇ ಓಡಿ ಹೋಗಿ ಅವಳನ್ನು ಹಿಡಿದುಕೊಳ್ಳಬೇಕೆಂದುಕೊಂಡರೂ, ತಾನು ಮಾಡುತ್ತಿದ್ದ ಕೆಲಸ ಬಿಟ್ಟು ಹೋಗಲು ಮನಸ್ಸಾಗಲಿಲ್ಲ. ಸ್ವಲ್ಪ ಹೊತ್ತಿನ ನಂತರ ನೋಡಿದಾಗ ಅವನಿಗೆ ಆಶ್ಚರ್ಯವೆನಿಸುವಂತೆ ವ್ಯಾಗನ್‌ನ ಮುಂಭಾಗದಲ್ಲಿಯೇ ಬಂದು ನಿಂತಿದ್ದಳು. ಒಂದೇ ಸಮನೆ ಅವನು ಮಾಡುತ್ತಿದ್ದ ಕೆಲಸವನ್ನು ಗಮನಿಸುತ್ತಿದ್ದಳು. ಮೊಟ್ಟಮೊದಲ ಬಾರಿಗೆ ಈ ರೀತಿ ಬಹಿರಂಗವಾಗಿ ಕಾಣಿಸಿಕೊಂಡಿದ್ದಳು.

ಒಂದೇ ಸಮನೆ ಉತ್ಕಟಾವಸ್ಥೆಯಲ್ಲಿ ಕೆಲಸದಲ್ಲಿ ಮೈಮರೆತಿದ್ದ. ಅವನು ಕೆಲಸದಲ್ಲಿ ಹೆಚ್ಚು ಹೆಚ್ಚು ಗಂಭೀರವಾಗಿ ತೊಡಗಿಸಿಕೊಳ್ಳುತ್ತಿದ್ದಂತೆ, ಅವಳು ಹತ್ತಿರ ಹತ್ತಿರ ಬರತೊಡಗಿದ್ದಳು. ಅವನ ಎಲ್ಲ ಭಾವನೆಗಳು ಕ್ಯಾನ್‌ವಾಸನ್ನು ಆವರಿಸಿಕೊಳ್ಳುತ್ತಿದ್ದಂತೆ ಅವಳ ಕಣ್ಣುಗಳೂ ಅದರ ಮೇಲೆ ಕೀಲಿಸಿ ಹೋದವು. ಅವನು ಸರಿಯಾಗಿ ಬೆಳಕನ್ನು ಹಿಡಿಯಲು ಈಸಲನ್ನು ಸ್ವಲ್ಪ ಮಟ್ಟಿಗೆ ತಿರುಗಿಸಿದಾಗ, ಅವಳು ತನ್ನ ಮತ್ತು ವ್ಯಾಗನ್ ನಡುವೆ, ಒಂದಷ್ಟು ದೂರದಲ್ಲಿ ನಿಂತಿದ್ದಳು. ಯಾವುದೋ ಭ್ರಾಮಕಲೋಕದಲ್ಲಿ ಮುಳುಗಿ ನಿದ್ರಾವಸ್ಥೆಯಲ್ಲಿ ನಡೆಯುತ್ತಿದ್ದಂತೆನಿಸಿತು. ಒಂದೊಂದೇ ಹೆಜ್ಜೆಯಿರಿಸುತ್ತಾ, ಹೆದರಿಕೆ, ಸಂಕೋಚಗಳಿಂದ, ಹಿಂದಕ್ಕೆ ಮುಂದಕ್ಕೆ ಹೋಗುತ್ತಾ, ಕಡೆಗೆ ಯಾವುದೋ ಅಗೋಚರದ ಪ್ರಚೋದನೆಯಿಂದ ಅವನಿಗೆ ತೀರಾ ಸಮೀಪ ಬಂದಳು. ಅವನಿಗೆ, ಅವಳು ತನ್ನ ಬೆನ್ನ ಹಿಂದೆ ಇರುವುದರ ಅನುಭವವಾಯಿತು. ಸರ್ರನೆ ತಿರುಗಿ ಅವಳ ಕಣ್ಣಲ್ಲಿ ಕಣ್ಣಿಟ್ಟ, ಆ ಕಣ್ಣುಗಳಲ್ಲಿ ಒಮ್ಮೆಲೇ ಭಯ, ಕಾತರಗಳು ಬಿಂಬಿಸಿದವು. ಅವಳಲ್ಲಿ ಹತ್ತಿಕ್ಕಲಾಗದ ಭಾವನೆಗಳು ಸಿಡಿದೇಳುತ್ತಿದ್ದವು. ಅವಳು ವಿನ್ಸೆಂಟ್‌ನ ಕಡೆ ನೋಡದೆ ಕ್ಯಾನ್‌ವಾಸನ್ನೇ ಬೆರಗುಗಣ್ಣಿಂದ ನೋಡುತ್ತಿದ್ದಳು. ವಿನ್ಸೆಂಟ್, ಅವಳು ಮಾತಾಡಲೆಂದು ಎದುರುನೋಡಿದ. ಆದರೆ ಅವಳು ಮೌನವಾಗಿಯೇ ಇದ್ದಳು.

ಅವನು ಮತ್ತೆ ತನ್ನ ಕೆಲಸದತ್ತ ಹಿಂತಿರುಗಿ, ಒಂದೇ ಏಟಿಗೆ ಮುಗಿಸಿಬಿಟ್ಟ. ಆ ಹೆಂಗಸು ಅಲ್ಲಿಂದ ಸರಿಯಲಿಲ್ಲ. ಅವಳ ಡ್ರೆಸ್ಸು ತನ್ನ ಕೋಟಿಗೆ ತಗಲುತ್ತಿದ್ದುದನ್ನು ಗಮನಿಸಿದ.

ಅಪರಾಹ್ನದ ಸಮಯ. ಆ ಹೆಂಗಸು ಆ ಪ್ರದೇಶದಲ್ಲಿ ಸುಮಾರು ಹೊತ್ತು ನಿಂತೇ ಇದ್ದಳು. ವಿನ್ಸೆಂಟ್ ದಣಿದು ಹೋಗಿದ್ದ. ಸೃಜನಶೀಲತೆಯ ಆವೇಶದಲ್ಲಿ, ತನ್ನ ಶಕ್ತಿಗೂ ಮೀರಿ ಕೆಲಸಮಾಡಿದ್ದ. ಎದ್ದು ಆ ಹೆಂಗಸಿನತ್ತ ತಿರುಗಿದ.

ಅವಳ ಗಂಟಲು, ತುಟಿಗಳು ಒಣಗಿದವು. ಎಂಜಲಿನಿಂದ ತುಟಿಗಳನ್ನು ಒದ್ದೆ ಮಾಡಲು ಪ್ರಯತ್ನಿಸಿದಳು. ಆದರೆ ತೇವಾಂಶವೇ ಅವಳಲ್ಲಿ ಇಲ್ಲದಂತಾಗಿತ್ತು. ಉಸಿರಾಟವೂ ಕಷ್ಟವೆನಿಸಿತು. ಮಾತಾಡಲು ಪ್ರಯತ್ನಿಸುತ್ತಿದ್ದಳಾದರೂ, ಸಾಧ್ಯವಾಗಲೇ ಇಲ್ಲ.

"ನಾನು ವಿನ್ಸೆಂಟ್ ವಾನ್‌ಗೋ, ನಿಮ್ಮ ಪಕ್ಕದ ಮನೆಯವನು...... ಬಹುಶಃ ಗೊತ್ತಾಗಿರಬೇಕು ಅಂದ್ಕೊಳ್ತೇನೆ."

"ಹೌದು" – ಪಿಸುಗುಟ್ಟಿದಂತೆ ಹೇಳಿದಳು.

"ಬೆಜೆಮನ್ ಸೋದರಿಯರಲ್ಲಿ ನೀನು ಯಾರು?"

ಸ್ವಲ್ಪ ವಿಚಲಿತಳಾದಳು. ನಂತರ ಅವನ ಕೈ ಹಿಡಿದುಕೊಂಡು ಸಮಾಧಾನ ಸ್ಥಿತಿಗೆ ಬಂದಳು. ಮತ್ತೆ ತುಟಿಯನ್ನು ಒದ್ದೆ ಮಾಡಿಕೊಳ್ಳಲು ಪ್ರಯತ್ನಿಸಿದಳು. ಮಾತಾಡಲು ಎಷ್ಟೋ ಸಲ ಬಾಯಿ ತೆರೆದಳಾದರೂ ಮಾತು ಹೊರಡಲಿಲ್ಲ.

"ಮಾರ್‌ಗಾಟ್" ಕಡೆಗೂ ಯಶಸ್ವಿಯಾದಳು."

"ಮಾರ್‌ಗಾಟ್ ಬೆಜೆಮೆನ್ ನೀನು ಯಾಕೆ ನನ್ನನ್ನು ಹಿಂಬಾಲಿಸುತ್ತಿರುವಿ?"

"ಎಷ್ಟೋ ವಾರಗಳಿಂದ ನಾನು ಗಮನಿಸುತ್ತಲೇ ಇದ್ದೀನಿ."

ಅವಳಿಂದ ಒಂದು ಚೀತ್ಕಾರ ಹೊರಬಿತ್ತು. ಬೀಳುತ್ತಿರುವೆನೆಂಬ ಭಯದಿಂದ ಗಟ್ಟಿಯಾಗಿ ಅವನ ತೋಳನ್ನು ಹಿಡಿದುಕೊಂಡಳು. ಆದರೂ ಪ್ರಜ್ಞೆತಪ್ಪಿ ಕೆಳಗೆ ಬಿದ್ದಳು.

ವಿನ್ಸೆಂಟ್ ಮೊಳಕಾಲೂರಿ ಕುಳಿತು, ಅವಳ ತಲೆಯ ಕೆಳಗಡೆ ತನ್ನ ಕೈಗಳನ್ನು ಆಧಾರವಾಗಿ ಇರಿಸಿದ. ಮುಖದ ಮೇಲೆ ಬಿದ್ದಿದ್ದ ಕೂದಲನ್ನು ಹಿಂದಕ್ಕೆ ಸರಿಸಿದ. ಮುಳುಗುತ್ತಿದ್ದ ಸೂರ್ಯನ ಕೆಂಪು ಎಲ್ಲೆಡೆಯೂ ಚೆಲ್ಲಿತ್ತು. ರೈತರು ತಮ್ಮ ದಣಿದ ಕಾಲುಗಳನ್ನು ಮನೆಯತ್ತ ತಿರುಗಿಸಿದರು. ವಿನ್ಸೆಂಟ್ ಮತ್ತು ಮಾರ್ಗಾಟ್ ಇಬ್ಬರೇ ಉಳಿದಿದ್ದರು. ಸೂಕ್ಷ್ಮವಾಗಿ ಅವಳನ್ನು ಗಮನಿಸಿದ. ನೋಡಲು ಅವಳು ಅಷ್ಟೇನೂ ಸುಂದರವಾಗಿರಲಿಲ್ಲ. ಮೂವತ್ತರ ಪ್ರಾಯದಲ್ಲಿದ್ದಿರಬೇಕೆನಿಸಿತು. ಕಣ್ಣಿನ ಕೆಳಗೆ ಗೆರೆಗಳು ಕಾಣಿಸಿದವು. ಚರ್ಮ ಸುಕ್ಕುಗಟ್ಟುವ ಸ್ಥಿತಿಯಲ್ಲಿತ್ತು.

ಫ್ಲಾಸ್ಕ್‌ನಲ್ಲಿ ಸ್ವಲ್ಪ ನೀರಿತ್ತು. ಬಣ್ಣ ಒರೆಸಲೆಂದು ಇರಿಸಿಕೊಂಡಿದ್ದ ತುಂಡು ಬಟ್ಟೆಯನ್ನು ಒದ್ದೆಮಾಡಿ ಅವಳ ಮುಖವನ್ನು ಒರೆಸಿದ. ಎಚ್ಚರ ಬಂದು ತಟ್ಟನೆ ಕಣ್ಣು ತೆರೆದಳು. ನೋಡಿದ. ಕಣ್ಣುಗಳು ಸುಂದರವಾಗಿದ್ದವು. ಗಾಢ ಕಂದು ಬಣ್ಣ. ಆದರೆ ಮೋಹಕವಾಗಿದ್ದವು. ಒಂದಷ್ಟು ನೀರನ್ನು ಕೈಯಲ್ಲಿ ತೆಗೆದುಕೊಂಡು ಅವಳ ಮುಖದ ಮೇಲೆ ಸಿಂಪಡಿಸಿದ. ಅವಳ ದೇಹ ನಡುಗುತ್ತಿತ್ತು.

"ಮಾರ್ಗ್ರಾಟ್ ಈಗ ಹೇಗನ್ನಿಸುತ್ತೆ?"

ಒಂದರೆ ಕ್ಷಣ, ಅವನ ಹಸಿರು-ನೀಲಿ ಕಣ್ಣುಗಳನ್ನೇ ನೋಡುತ್ತಾ ಇದ್ದಳು. ಆ ಕಣ್ಣುಗಳಲ್ಲಿ ದಯೆ, ಸಹಾನುಭೂತಿ, ಅರ್ಥ ಮಾಡಿಕೊಳ್ಳುವ ಶಕ್ತಿ ಇರುವುದನ್ನು ಗುರುತಿಸಿದಳು.

ನಂತರ ಇದ್ದಕ್ಕಿದ್ದಂತೆ ಅವಳು ತನ್ನೆರಡೂ ತೋಳುಗಳಿಂದ ಅವನ ಕತ್ತನ್ನು ಬಳಸಿ ಬಿಕ್ಕಿ ಬಿಕ್ಕಿ ಅಳುವುದಕ್ಕೆ ಮೊದಲು ಮಾಡಿದಳು. ತನ್ನ ತುಟಿಗಳನ್ನು ಅವನ ಗಡ್ಡದ ಮೇಲೆ ಒತ್ತಿದಳು.

-೪-

ಮರುದಿನ, ಹಳ್ಳಿಯಿಂದ ಸ್ವಲ್ಪದೂರದಲ್ಲಿ ಒಂದು ನಿಶ್ಚಿತ ಜಾಗದಲ್ಲಿ ಇಬ್ಬರೂ ಭೇಟಿಯಾದರು. ಅವಳು ಆಕರ್ಷಕವಾದ ಬಿಳಿಯ ಕೇಂಬ್ರಿಕ್ ಉಡುಪನ್ನು ಧರಿಸಿದ್ದಳು. ಕೈಯಲ್ಲಿ ಸಮ್ಮರ್‌ಹ್ಯಾಟ್ ಹಿಡಿದಿದ್ದಳು. ಅವನ ಎದುರಿನಲ್ಲಿ ಈಗಲೂ ಸ್ವಲ್ಪ ಭಯ ಎನಿಸಿದರೂ ನೆನ್ನೆಗಿಂತ ಪರವಾಗಿರಲಿಲ್ಲ. ಅವಳು ಬರುತಿದ್ದುದನ್ನು ನೋಡಿ ಪ್ಯಾಲೆಟ್ ಅನ್ನು ಕೆಳಗಿಟ್ಟ. ಕೇಯಲ್ಲಿ ಕಂಡಿದ್ದ ಸೌಮ್ಯ ಸೌಂದರ್ಯದ ಒಂದಂಶವೂ ಅವಳಲ್ಲಿ ಕಾಣದಿದ್ದರೂ, ಕ್ರಿಸ್ಟೀನ್‌ಗೆ ಹೋಲಿಸಿದಲ್ಲಿ, ಸುಂದರಿಯೆಂದೇ ಹೇಳಬೇಕು.

ತಾನು ಕುಳಿತಿದ್ದ ಸ್ಟೂಲಿನಿಂದ ಎದ್ದ. ಆದರೆ ಏನು ಮಾಡಬೇಕೆಂದು ತೋಚಲಿಲ್ಲ. ಅವನಿಗೆ ಒಳ್ಳೊಳ್ಳೆ ಡ್ರೆಸ್ ಹಾಕಿಕೊಂಡವರಿಗಿಂತ, ಕೇವಲ ಜಾಕೆಟ್ ಮತ್ತು ಪೆಟ್ಟಿಕೋಟ್‌ಗಳಲ್ಲಿ ಇದ್ದವರ ಬಗ್ಗೆಯೇ ಆಸಕ್ತಿ. ಶ್ರೀಮಂತ, ವರಿಷ್ಠ ಡಚ್ ಮಹಿಳೆಯರು, ಪೈಂಟಿಂಗ್ ಮಾಡಲು ಅನರ್ಹರು. ಅವರೆಂದೂ ಅವನನ್ನು ಆಕರ್ಷಿಸಿರಲಿಲ್ಲ ಪೈಂಟಿಂಗ್ ಮಾಡಲು. ಅವನ ಪೈಂಟಿಂಗ್‌ಗಳಲ್ಲಿ ಸಾಮಾನ್ಯ, ಕೂಲಿ ಮಾಡುವ, ಸೇವಕಿಯರಾಗಿರುವ ಹೆಣ್ಣು ಮಕ್ಕಳಿಗೇ ಅವಕಾಶ.

ಮಾರ್ಗ್ರಾಟ್ ಅವನ ಮೇಲೆ ಒರಗಿದಳು; ಅವನನ್ನು ಮುದ್ದಿಸಿದಳು. ಬಿಗಿಯಾಗಿ ಅಪ್ಪಿ ಹಿಡಿದಳು. ಎಷ್ಟೋ ಕಾಲದಿಂದ ಪ್ರೀತಿಸಿದವರಂತೆ ನಡೆದುಕೊಂಡರೂ ಒಂದು ಕ್ಷಣ ಕಂಪಿಸಿದಳು. ವಿನ್ಸೆಂಟ್ ತನ್ನ ಕೋಟನ್ನೇ ಅವಳಿಗೆ ಕುಳಿತುಕೊಳ್ಳಲೆಂದು ನೆಲದ ಮೇಲೆ ಹಾಸಿದ. ತಾನು ಸ್ಟೂಲ್ ಮೇಲೆ ಕುಳಿತ. ಮಾರ್ಗ್ರಾಟ್ ಅವನ ಮೊಣಕಾಲಿನ ಮೇಲೆ ಒರಗಿ ತಲೆ ಎತ್ತಿ ಅವನ ಕಡೆ ದಿಟ್ಟಿಸಿದಳು. ಅವಳ ನೋಟದಲ್ಲಿ, ಮುಖಭಾವದಲ್ಲಿ, ಇಲ್ಲಿಯವರೆಗೂ ಯಾವ ಹೆಣ್ಣಿನ ಕಣ್ಣಲ್ಲಿ ಕಾಣದ ಭಾವಗಳನ್ನು ಗಮನಿಸಿದ.

"ವಿನ್ಸೆಂಟ್" ಸುಮ್ಮನೆ ಹೆಸರಿನ ಉಚ್ಚಾರಣೆಯಲ್ಲಿ ದೊರೆಯುವ ಸಂತೋಷಕ್ಕಾಗಿ, ಕರೆದಳು.

"ಹೇಳು ಮಾರ್ಗ್ರಾಟ್" ಅವನಿಗೆ ಏನು ಮಾಡಬೇಕು, ಏನು ಹೇಳಬೇಕು ಎಂಬುದೇ ಹೊಳೆಯಲಿಲ್ಲ.

"ರಾತ್ರಿಯೆಲ್ಲ ನನ್ನ ಬಗ್ಗೆ ಕೆಟ್ಟದಾಗಿ ಯೋಚ್ನೆಮಾಡ್ತಿದ್ದೆಯ."

"ಕೆಟ್ಟದ್ದೇ? ಇಲ್ಲ. ನಾನ್ಯಾಕೆ ಕೆಟ್ಟದ್ದು ಯೋಚಿಸಲಿ?"

"ವಿನ್ಸೆಂಟ್ ನಾನು ಹೇಳೋದನ್ನು ನಿನಗೆ ನಂಬುವುದು ಕಷ್ಟವಾಗಬಹುದು. ಆದರೂ ನಿಜವಾಗಿ ಹೇಳ್ತಿದ್ದೀನಿ.

ಗಂಡಸರಿಗೆ ಮುತ್ತು ಕೊಟ್ಟದ್ದು ಮೊಟ್ಟಮೊದಲ ಬಾರಿಗೆ, ನಿನಗೆ ನೆನ್ನೆ ಮುತ್ತು ಕೊಟ್ಟಾಗಲೇ.

"ಆದರೆ ಯಾಕೆ? ಇದಕ್ಕೆ ಮೊದಲು ಯಾರನ್ನೂ ಪ್ರೀತಿಸಲಿಲ್ಲವೇನು?"

"ಇಲ್ಲ."

"ಅಯ್ಯೋ ಎಂಥಾ ದುರ್ದೈವ!"

"ನಾನು ಹೇಳಿದ್ದು ನಿಜ ಅಲ್ವಾ?" ಒಂದು ಕ್ಷಣ ಮೌನವಾಗಿದ್ದು ಕೇಳಿದಳು. "ನೀನು ಬೇರೆ ಹೆಂಗಸರನ್ನು ಪ್ರೀತಿಸಿದ್ದೀಯ. ಹೌದಲ್ಲಾ?"

"ಹೌದು."

"ತುಂಬಾ ಹೆಂಗಸರನ್ನು?"

"ಇಲ್ಲ. ತುಂಬಾ ಇಲ್ಲ. ಕೇವಲ ಮೂವರನ್ನು."

'ಅವರೆಲ್ಲ ನಿನ್ನನ್ನು ಪ್ರೀತಿಸಿದರೇನು?"

"ಇಲ್ಲ ಮಾರ್ಗಾಟ್, ಅವರು ಪ್ರೀತಿಸಲಿಲ್ಲ."

"ಪ್ರೀತಿಸಿರಬಹುದು."

"ಇಲ್ಲ. ಅಂತಹ ಅದೃಷ್ಟ ನನಗಿಲ್ಲ."

ಮಾರ್ಗಾಟ್ ಇನ್ನಷ್ಟು ಮುಂದೆ ಸರಿದು ತನ್ನ ತೋಳನ್ನು ಅವನ ತೊಡೆಯ ಮೇಲಿರಿಸಿದಳು. ತನ್ನ ಬೆರಳುಗಳನ್ನು ಅವನ ಮುಖದ ಮೇಲೆ ಆಡಿಸಿದಳು. ಆ ಬೆರಳುಗಳು ಅವನ ಹಣೆ, ಮೂಗು, ಕಣ್ಣು, ಬಾಯಿ, ಗದ್ದ ಇವುಗಳ ಮೇಲೆಲ್ಲಾ ಅಡ್ಡಾಡಿದವು. ವಿಚಿತ್ರವಾದ ಕಂಪನ ಉಂಟಾಗಿ ಬೆರಳುಗಳನ್ನು ಹಿಂದಕ್ಕೆ ಎಳೆದುಕೊಂಡಳು.

"ನೀನು ಎಷ್ಟು ಗಟ್ಟಿ ಇದ್ದೀಯ. ನಿನ್ನ ಮೈ, ಮುಖ, ತೋಳು- ಎಲ್ಲವೂ. ನಿನ್ನಂಥ ಬಲಿಷ್ಠ ಗಂಡಸನ್ನು ಹಿಂದೆಂದೂ ನೋಡಿಯೇ ಇಲ್ಲ."

ಅವನು ಎರಡು ಕೈಗಳಲ್ಲಿ ಅವಳ ಮುಖವನ್ನು ಇರಿಸಿಕೊಂಡ. ಪ್ರೀತಿ, ಭಾವುಕತೆಗಳು ಮೂಡಿ ಹಿತವಾದ ಅನುಭವವಾಯಿತು.

"ನನ್ನ ಬಗ್ಗೆ ಸ್ವಲ್ಪವಾದರೂ ಪ್ರೀತಿ?" ಕುತೂಹಲದಿಂದ ಕೇಳಿದಳು.

"ಹೂಂ!"

"ನನಗೊಂದು ಮುತ್ತು ಕೊಡುವಿಯಾ?"

ಅವನು ಅವಳಿಗೆ ಮುತ್ತುಕೊಟ್ಟ.

"ವಿನ್ಸೆಂಟ್, ದಯವಿಟ್ಟು ತಪ್ಪಾಗಿ ತಿಳಿಯಬೇಡ. ನನಗೆ ತಡೆದುಕೊಳ್ಳಲು ಆಗಲಿಲ್ಲ. ನಿನ್ನ ಪ್ರೀತಿಗೆ ಬಿದ್ದೆ. ನಿನ್ನಿಂದ..... ನಿನ್ನಿಂದ ದೂರ ಇರಲು ಸಾಧ್ಯವಾಗಲಿಲ್ಲ.

"ನಿಜವಾಗಿಯೂ ನನ್ನ ಮೇಲೆ ಪ್ರೀತಿ ಉಂಟಾಯ್ತಾ? ನಿಜವಾಗಿಯೂ?...... ಆದರೆ ಯಾಕೆ?"

ಮತ್ತೆ ಅವನ ಮೇಲೆ ಒರಗಿ, ಅವನ ಬಾಯಿ ಮೇಲೆ ಮುತ್ತೊಂದನ್ನು ಒತ್ತಿ "ಇದಕ್ಕೆ!" – ಎಂದಳು.

ಇಬ್ಬರೂ, ರೈತರ ಸಮಾಧಿಗಳಿದ್ದ ಜಾಗದಿಂದ ಸ್ವಲ್ಪ ದೂರದಲ್ಲಿ, ಮಾತಿಲ್ಲದೆ, ಕುಳಿತರು. ಶತಶತಮಾನಗಳಿಂದ ರೈತರು ಬದುಕಿದ್ದಾಗ ದುಡಿದು ಕೆಲಸ ಮಾಡಿದ್ದ ಹೊಲ ಗದ್ದೆಗಳಲ್ಲಿಯೇ, ಸತ್ತ ಮೇಲೆ ಸಮಾಧಿ ಮಾಡುವ ಪರಿಪಾಠ ನಡೆದುಕೊಂಡು ಬಂದಿತ್ತು. ವಿನ್ಸೆಂಟ್ ಸಾವಿನ ಸರಳತೆಯನ್ನು, ಸಹಜ, ಸ್ವಾಭಾವಿಕ ಎನ್ನುವುದನ್ನು ತನ್ನ ಕ್ಯಾನ್‌ವಾಸ್ ಮೂಲಕ ಹೇಳಲು ಬಯಸಿದ್ದ.

ಮಾಗಿಯಲ್ಲಿ ಎಲೆ ಉದುರುವುದು, ಭೂಮಿಯಲ್ಲಿ ಒಂದಿಷ್ಟು ಜಾಗಗಳನ್ನು ಅಗೆಯುವುದು ಎಷ್ಟು ಸಹಜವೋ ಸಾವೂ ಕೂಡಾ ಅಷ್ಟೆ ಸಹಜ.

"ವಿನ್ಸೆಂಟ್ ನನ್ನ ಬಗ್ಗೆ ನಿನಗೆ ಏನಾದರೂ ತಿಳಿದಿದೆಯೇನು?" ಮೆದುವ್ವಾಗಿ ಕೇಳಿದಳು.

"ತೀರಾ ಸ್ವಲ್ಪ."

"ಯಾರಾದರೂ.... ಏನಾದರೂ...... ನನ್ನ ವಯಸ್ಸಿನ ಬಗ್ಗೆ?"

"ಇಲ್ಲ."

"ಪರವಾಗಿಲ್ಲ. ನಾನೇ ಹೇಳ್ತೀನಿ. ನನಗೆ ಮೂವತ್ತೊಂಬತ್ತು ವರ್ಷ. ಇನ್ನು ಕೆಲವು ತಿಂಗಳಲ್ಲಿ ನಲವತ್ತಾಗುತ್ತೆ. ಐದು ವರ್ಷಗಳಿಂದ ನನ್ನಲ್ಲಿ ನಾನೇ ಏನಂತ ಹೇಳಿಕೊಳ್ತಿದ್ದೀನಿ, ಗೊತ್ತೆ?..... ಮೂವತ್ತರ ದಶಕ ಮುಗಿಯುವುದರಲ್ಲಿ, ಯಾರನ್ನಾದರೂ ನಾನು ಪ್ರೀತಿಸಲಿಲ್ಲವೆಂದಾದರೆ, ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ" ಎಂದು.

"ಪ್ರೀತಿಸುವುದು ಬಹಳ ಸುಲಭ ಮಾರ್ಗ್ರಾಟ್."

"ನಿನಗೆ ಹಾಗೆ ಅನಿಸುತ್ತೇನು?"

"ಹೌದು. ಆದರೆ ಪ್ರೀತಿಸಿಕೊಳ್ಳುವುದು ಬಹಳ ಕಷ್ಟ."

"ಇಲ್ಲ. ನ್ಯೂನೆನ್‌ನಲ್ಲಿ ಪ್ರೀತಿಸುವುದೂ ಸಾಧ್ಯವಿಲ್ಲ. ಇಪ್ಪತ್ತು ವರ್ಷಗಳಿಂದಲೂ, ಪ್ರೀತಿಸುವುದಕ್ಕೆ ನನಗೆ ಒಬ್ಬರೂ ಸಿಗಲಿಲ್ಲ. ಪ್ರೀತಿಸಲು ಬೇಕಾದಂಥ ವ್ಯಕ್ತಿಯ ಹುಡುಕಾಟದಲ್ಲಿಯೇ ಇದ್ದೇನೆ. ಆದರೆ ಎಂದಿಗೂ ಫಲ ಸಿಗಲಿಲ್ಲ."

"ಎಂದಿಗೂ?"

ಅವಳು ಆ ಕಡೆ ನೋಟ ಬೀರಿದಳು. "ಒಂದೇ ಒಂದು ಸಲ.... ನಾನಿನ್ನೂ ಹುಡುಗಿಯಾಗಿದ್ದಾಗ.... ಒಬ್ಬ ಹುಡುಗನನ್ನು ಇಷ್ಟೆ ಪಟ್ಟಿದ್ದೆ."

"ಆಮೇಲೆ?"

"ಆಮೇಲೇನು...... ಅವನು ಕ್ಯಾಥೋಲಿಕ್. ಅವರು ಅವನನ್ನು ಓಡಿಸಿಬಿಟ್ಟರು."

"ಅವರು ಅಂದ್ರೆ?"

"ನನ್ನಮ್ಮ ನನ್ನ ಅಕ್ಕ ತಂಗಿಯರು."

ಮಣ್ಣಿನ ಮೇಲೆ ಮಂಡಿಯೂರಿ ಎದ್ದಳು. ಅವಳ ಶುಭ್ರವಾಗಿದ್ದ ಉಡುಪೆಲ್ಲಾ ಕೊಳೆಯಾಯಿತು. ತನ್ನ ಮೊಣಕೈಗಳನ್ನು ಅವನ ತೊಡೆಯ ಮೇಲಿರಿಸಿ, ತನ್ನ ಕೈಗಳ ನಡುವೆ ಮುಖವನ್ನಿರಿಸಿಕೊಂಡಳು. ಅವನ ಮಂಡಿಗಳು ಅವಳ ಪಕ್ಕಗಳನ್ನು ಸ್ಪರ್ಶಿಸಿದವು.

"ಪ್ರೀತಿಯಿಲ್ಲದ ಮೇಲೆ ಹೆಂಗಸಿನ ಬದುಕು ವ್ಯರ್ಥ, ವಿನ್ಸೆಂಟ್."

"ನನಗೆ ಗೊತ್ತು."

"ಪ್ರತಿ ದಿನ ಎದ್ದಾಗಲೂ" ಇವತ್ತು ಖಂಡಿತ, ನನ್ನ ಪ್ರೀತಿಗೆ ಒಬ್ಬರು ಯಾರಾದರೂ ಸಿಗುತ್ತಾರೆ; ಎಲ್ಲ ಹೆಂಗಸರಿಗೂ ಪ್ರೀತಿಸಲು ಗಂಡಸರು ಸಿಗುವಾಗ ನನಗೆ ಯಾಕೆ ಸಿಗುವುದಿಲ್ಲ" ಎಂದು ನನ್ನೊಳಗೆ ನಾನೇ ತರ್ಕೈಸಿಕೊಳ್ಳುತ್ತಿದ್ದೆ. "ಸರಿ, ರಾತ್ರಿಯ ಆಗಮನ. ಒಂಟಿಯಾಗಿರುತ್ತಿದ್ದೆ; ದುಃಖಿಸುತ್ತಿದ್ದೆ..... ಹೀಗೇ ಕೊನೆಯಿಲ್ಲದ ಶೂನ್ಯ ದಿನಗಳನ್ನು ಕಳೆದಿದ್ದೇನೆ, ವಿನ್ಸೆಂಟ್! ಮನೆಯಲ್ಲಿ ಮಾಡುವುದಕ್ಕೆ ಕೆಲಸವಿಲ್ಲ. ಮನೆತುಂಬ ಕೆಲಸದವರಿದ್ದಾರೆ. ಒಂದೊಂದು ಕ್ಷಣವೂ ಪ್ರೀತಿಗಾಗಿ ಹಂಬಲಿಸುತ್ತಿದ್ದೆ.

ಪ್ರತಿಯೊಂದು ದಿನ ರಾತ್ರಿಯಲ್ಲಿ ''ಹೀಗೆ ಹತಾಶೆ, ನಿರಾಶೆ. ಅರ್ಥ ಶೂನ್ಯತೆಯೊಂದಿಗೆ ಬದುಕುವುದಕ್ಕಿಂತ ಸಾಯಬಾರದೇಕೆ?– ಎಂದುಕೊಳ್ಳುತ್ತಿದ್ದೆ. ಆದರೂ ಎದೆಗೆಡದೆ, ಭರವಸೆಗಳನ್ನು ಕೊಟ್ಟುಕೊಳ್ಳುತ್ತಾ "ಇಲ್ಲ.... ಒಂದಲ್ಲ ಒಂದು ದಿನ ಒಬ್ಬರು ಬಂದೇ ಬರುತ್ತಾರೆ..... ನನ್ನ ಪ್ರೀತಿಯನ್ನು ಸ್ವೀಕರಿಸುತ್ತಾರೆ ಎಂದು ಸಮಾಧಾನ ತಂದುಕೊಂಡೆ. ನನ್ನ ಎಷ್ಟೋ ಹುಟ್ಟು ಹಬ್ಬಗಳು..... ಮೂವತ್ತೇಳು.... ಮೂವತ್ತೆಂಟು.... ಮೂವತ್ತೊಂಬತ್ತು. ಯಾರನ್ನಾದರೂ ಪ್ರೀತಿಸದೆ, ನಲ್ವತ್ತರ ಹುಟ್ಟು ಹಬ್ಬವನ್ನು ಎದುರಿಸುವ ಧೈರ್ಯ ನನಗಿರಲಿಲ್ಲ...... ಆಗ ನೋಡು, ನೀನು ಬಂದೆ. ಅಬ್ಬ! ಕಡೆಗೂ, ನಾನೂ ಪ್ರೀತಿಸಿದೆ, ವಿನ್ಸೆಂಟ್!"

ಗೆಲುವಿನ ಸಂಭ್ರಮದ ಉದ್ಗಾರ ಅದಾಗಿತ್ತು. ತನ್ನ ಬಾಯನ್ನು ಮುದ್ದಿಸಲು ಅವನ ಮುಂದೆ ಒಡ್ಡಿದಳು. ಅವನು ಅವಳ ಮೃದುವಾದ ಕೂದಲನ್ನು ಕಿವಿಯ ಮೇಲಿಂದ ಪಕ್ಕಕ್ಕೆ ಸರಿಸಿದ. ತನ್ನ ಕೈಗಳಿಂದ ಕತ್ತನ್ನು ಬಳಸಿ, ಮೇಲಿಂದ ಮೇಲೆ ಅವನ ಮುಖಕ್ಕೆ ಮುತ್ತಿಟ್ಟಳು. ಅವನು ಸ್ಟೂಲಿನ ಮೇಲೆ ಕುಳಿತಿದ್ದ. ಪ್ಯಾಲೆಟ್ ಪಕ್ಕದಲ್ಲಿ ಬಿದ್ದಿತ್ತು. ಸಮಾಧಿಗಳು ಅವನ ಕಣ್ಣ ಮುಂದಿದ್ದವು. ಆ ಹೆಣ್ಣನ್ನು ಬಿಗಿಯಾಗಿ ಅಪ್ಪಿ, ತೀವ್ರವಾದ ಭಾವೋದ್ವಿಗ್ನ ಸ್ಥಿತಿಯಲ್ಲಿದ್ದ. ಮೊಟ್ಟ ಮೊದಲ ಬಾರಿಗೆ ಹೆಣ್ಣಿನ ಮಾದಕ, ಭಾವೋತ್ಕಟ ಪ್ರೀತಿಯ ಸ್ಪರ್ಶಾನುಭಾವದ ಸವಿಯ ಮಹಾಪೂರದಲ್ಲಿ ಕೊಚ್ಚಿಹೋಗುತ್ತಿದ್ದಾಗಲೂ ಒಂದು ಕ್ಷಣ ಕಂಪಿಸಿದ; ತಾವಿದ್ದದ್ದು ಪವಿತ್ರವಾದ ಜಾಗ!

ಮಾರ್ಗಾಟ್ ಅವನೆರಡೂ ಕಾಲುಗಳ ನಡುವೆ ತಲೆಯಿರಿಸಿ ನೆಲದ ಮೇಲೆ ಕುಳಿತಳು. ಅವಳ ಕೆನ್ನೆ, ಕಣ್ಣುಗಳಲ್ಲಿ ಕೆಂಪು, ಕಾಂತಿಗಳು ಇಣುಕಿದವು. ಕಷ್ಟದಿಂದ

ಉಸಿರಾಡುತ್ತಿದ್ದಳು. ಪ್ರೀತಿಯ ತೂರ್ಯಾವಸ್ಥೆಯಲ್ಲಿ ಅವಳು ಮೂವತ್ತರ ಹರೆಯದವಳಂತೆ ಕಾಣಿಸಿದಳು. ವಿನ್ಸೆಂಟ್ ನಿರ್ಭಾವುಕನಾಗಿದ್ದ. ತನ್ನ ಬೆರಳನ್ನು, ಅವಳ ಮುಖದ ಮೃದುವಾದ ಚರ್ಮದ ಮೇಲೆ ಆಡಿಸಿದ. ಅವಳು ಮತ್ತೊಮ್ಮೆ ಅವನನ್ನು ಬಿಗಿದಪ್ಪಿದಳು. ಅವನ ಕೈಗಳ ಮೇಲೆ ಮುತ್ತಿನ ಮಳೆಗರೆದಳು. ತನ್ನ ಹಸ್ತಗಳಿಂದ, ಬಿಸಿಯೇರಿದ್ದ ಕೆನ್ನೆಗಳನ್ನು ಒತ್ತಿ ಹಿಡಿದುಕೊಂಡಳು. ಸ್ವಲ್ಪ ಹೊತ್ತಿನ ನಂತರ ಹೇಳಿದಳು.

"ನನಗೆ ಗೊತ್ತು. ನೀನು ನನ್ನನ್ನು ಪ್ರೀತಿಸುವುದಿಲ್ಲ...... ಅದನ್ನು ನಿರೀಕ್ಷಿಸುವುದೂ ಸರಿಯಲ್ಲ. ನಾನು ದೇವರನ್ನು, ಬೇಡಿದ್ದು, 'ಪ್ರೀತಿಸಲು ಅವಕಾಶ ಕೊಡು' ಎಂದಷ್ಟೇ! ಪ್ರೀತಿಸುವುದಕ್ಕೆ ಯಾರಾದರೂ ದೊರೆತಾರೆಂಬುದನ್ನು ಕನಸು ಮನಸ್ಸಿನಲ್ಲಿಯೂ ಊಹಿಸಿರಲಿಲ್ಲ. ವಿನ್ಸೆಂಟ್, ಪ್ರೀತಿಸುವುದಷ್ಟೇ ಮುಖ್ಯ...... ಪ್ರೀತಿಸಿಕೊಳ್ಳುವುದಲ್ಲ?.... ಏನಂತೀಯ?"

ವಿನ್ಸೆಂಟ್‌ಗೆ ಉರ್ಸುಲಾ ಮತ್ತು ಕೇ ನೆನಪಾದರು

"ಹೌದು." ಎಂದ.

ಅವನ ಮಂಡಿಗಳನ್ನು ಉಜ್ಜುತ್ತಲೇ, ತಲೆಯೆತ್ತಿ ಆಕಾಶದತ್ತ ನೋಡಿದಳು.

"ನಿನ್ನ ಜೊತೆ ಬರೋಕೆ ನನಗೆ ಅವಕಾಶ ಕೊಡ್ತೀಯ? ನಂಜೊತೆ ಮಾತಾಡಲು ನಿನಗೆ ಇಷ್ಟವಿಲ್ಲದಿದ್ದರೂ ಪರವಾಗಿಲ್ಲ, ನೀನು ಮಾಡುವ ಕೆಲಸವನ್ನು ನೋಡುತ್ತಿರುತ್ತೇನೆ. ನಾನೇನೂ ಮಾತಾಡುವುದಿಲ್ಲ. ನಿನಗೆ ತೊಂದರೆ ಕೊಡುವುದಿಲ್ಲ."

"ಮಾರ್ಗ್‌ಟ್, ನನಗೊಂದು ಮಾತು ಹೇಳು. ನಿನಗೆ ನ್ಯೂನೆನ್‌ನಲ್ಲಿ ಗಂಡಸರು ಯಾರೂ ಸಿಗದೆ ಹೋದರೆ, ಬೇರೆ ಕಡೆಗೆ ನೀನೇಕೆ ಹೋಗಲಿಲ್ಲ. ನಿನ್ನಲ್ಲಿ ಬೇರೆ ಬೇರೆ ಊರುಗಳಿಗೆ ಹೋಗಲು ಹಣವಿರಲಿಲ್ಲವೇನು?"

"ಹಣ?.... ಓ..... ಬೇಕಾದಷ್ಟಿದೆ. ನನ್ನಜ್ಜ ನನ್ನ ಸಂಪಾದನೆಗೆ ಒಳ್ಳೆ ದಾರಿ ಮಾಡಿಕೊಟ್ಟಿದ್ದಾನೆ."

"ಹಾಗಿದ್ದರೆ, ನೀನು ಆ್ಯಮ್‌ಸ್ಟರ್‌ಡ್ಯಾಮ್ ಅಥವಾ ಹೇಗ್‌ಗೆ ಹೋಗಬಹುದಿತ್ತಲ್ಲ! ಅಲ್ಲೆಲ್ಲ ಎಂಥೆಂಥ ಗಂಡಸರು ಸಿಕ್ತಿದ್ರು."

"ಆದರೆ ಅವರು ಹೋಗೋಕೆ ಬಿಡಲಿಲ್ಲ."

"ನಿನ್ನ ಅಕ್ಕ ತಂಗಿಯರೂ ಯಾರು ಮದುವೆ ಆಗಿಲ್ಲವೇನು?"

"ಇಲ್ಲ ಡಿಯರ್ ಎಲ್ಲರೂ ಕುಮಾರಿಯರೇ."

ಅವನಿಗೆ ಸಂಕಟವಾಯಿತು. ಮೊದಲ ಬಾರಿಗೆ ಹೆಣ್ಣೊಬ್ಬಳು ತನ್ನನ್ನು 'ಡಿಯರ್' ಎಂದು ಸಂಬೋಧಿಸಿದ್ದಳು. ಪ್ರೀತಿಸಿದರೂ ಪ್ರೀತಿಸಿಕೊಳ್ಳಲಾಗದ ಸ್ಥಿತಿ ಎಷ್ಟು ಭಯಾನಕ ಎಂಬುದನ್ನು ಅನುಭವದಿಂದ ಅರಿತಿದ್ದ. ನಿರ್ಮಲ ಮನಸ್ಸಿನಿಂದ ಪ್ರೀತಿಸುವ ಹೆಣ್ಣಿನ ಪ್ರೀತಿಯನ್ನು ಅವನೆಂದೂ ಸಂದೇಹದ ದೃಷ್ಟಿಯಿಂದ ನೋಡಿರಲಿಲ್ಲ. ಮಾರ್ಗ್‌ಟ್

ತನ್ನನ್ನು ಪ್ರೀತಿಸಿದ್ದು ಕೇವಲ ಆಕಸ್ಮಿಕವಾದ್ದರಿಂದ ಅದರಲ್ಲಿ ತನ್ನ ಪಾತ್ರವೇನೂ ಇಲ್ಲವೆಂದು ಭಾವಿಸಿದ್ದ. ಆದರೆ ಅವಳು ಉಚ್ಚರಿಸಿದ, ಆ ಒಂದೇ ಒಂದು ಶಬ್ದ.... ಪ್ರೀತಿಯಿಂದ ಹೊಮ್ಮಿದ ಶಬ್ದ ಅವನ ಮನಸ್ಥಿತಿಯನ್ನೇ ಬದಲಾಯಿಸಿ ಬಿಟ್ಟಿತು. ಅವಳನ್ನು ಬರಸೆಳೆದು ಬಿಗಿದಪ್ಪಿಕೊಂಡ.

"ವಿನ್ಸೆಂಟ್. ವಿನ್ಸೆಂಟ್.... ನಾನು ನಿನ್ನನ್ನು ಎಷ್ಟು ಪ್ರೀತಿಸುತ್ತೇನೆಂದರೆ...."

"ಅಬ್ಬ ಇದನ್ನು ಕೇಳುವುದೆಂದರೆ.... ನನ್ನನ್ನು ಅಷ್ಟೊಂದು....."

"ಇಷ್ಟು ವರ್ಷಗಳು ನನಗೆ ಯಾರನ್ನೂ ಪ್ರೀತಿಸಲಾಗದಿದ್ದುದಕ್ಕೆ, ಈಗ ನನಗೇನೂ ಪಶ್ಚಾತ್ತಾಪವಿಲ್ಲ. ನಾನು ಕಾದಿದ್ದೂ ಸಾರ್ಥಕವಾಗಿ, ನೀನು ಸಿಕ್ಕಿದೆ. ನಿನ್ನನ್ನು ಪ್ರೀತಿಸುತ್ತಿರುವಷ್ಟು, ಪ್ರೀತಿಸಲು ಸಾಧ್ಯವಾಗಬಹುದೆಂಬುದನ್ನು ಕನಸಲ್ಲೂ ಊಹಿಸಿರಲಿಲ್ಲ."

"ಮಾರ್ಗ್ರಾಟ್, ನಾನೂ ನಿನ್ನನ್ನು ಅಷ್ಟೇ ಪ್ರೀತಿಸುತ್ತೇನೆ."

ಅವನಿಂದ ಬಿಡಿಸಿಕೊಂಡು ದೂರ ಸರಿದಳು. "ಅದನ್ನೆಲ್ಲ ಹೇಳಬೇಡ ವಿನ್ಸೆಂಟ್. ಸ್ವಲ್ಪ ದಿನ್ನ ಕಳೆದ ಮೇಲೆ ಬಹುಶಃ ನಿನಗೆ ನನ್ನನ್ನು ಪ್ರೀತಿಸಲು ಸಾಧ್ಯವಾಗಬಹುದು. ಆದರೆ ಈಗ ಸದ್ಯಕ್ಕೆ ನಿನ್ನನ್ನು ಪ್ರೀತಿಸಲು ಬಿಡು."

ಅವನ ಅಪ್ಪುಗೆಯಿಂದ ತೋಳುಗಳನ್ನು ಹಿಂದಕ್ಕೆಳೆದುಕೊಂಡು, ಕೋಟನ್ನು ಒಂದು ಕಡೆ ಇರಿಸಿ, ತಾನೊಂದು ಪಕ್ಕಕ್ಕೆ ಕುಳಿತಳು.

"ವಿನ್ಸೆಂಟ್ ನಿನ್ನ ಕೆಲಸಕ್ಕೆ ನನ್ನಿಂದ ತೊಂದರೆ ಆಗಬಾರದು. ಹೋಗು, ನಿನ್ನ ಕೆಲಸದ ಕಡೆ ಗಮನ ಕೊಡು. ನೀನು ಪೈಂಟ್ ಮಾಡುವುದನ್ನು ನೋಡುವುದು ನನಗೆ ತುಂಬ ಇಷ್ಟ."

–೫–

ಸರಿಸುಮಾರು ಪ್ರತಿದಿನ ಮಾರ್ಗ್ರಾಟ್, ವಿನ್ಸೆಂಟ್ ಜೊತೆಗೆ ಹೋಗುತ್ತಿದ್ದಳು. ಒಂದೊಂದು ಸಲ ವಿನ್ಸೆಂಟ್, ತಾನು ಸೇರಬೇಕಾದ ಸ್ಥಳಕ್ಕೆ ಹತ್ತು ಹದಿನೈದು ಕಿಲೋಮೀಟರ್ ದೂರವಾದರೂ ನಡೆದು ಹೋಗುತ್ತಿದ್ದ. ಇದರಿಂದಾಗಿ ಅವರು ನಿಶ್ಚಿತ ಸ್ಥಳ ತಲುಪುವಷ್ಟರಲ್ಲಿ ತೀರಾ ದಣಿದು ಸೋತು ಹೋಗಿರುತ್ತಿದ್ದರು. ಆದರೂ ಮಾರ್ಗ್ರಾಟ್ ಚಕಾರವೆತ್ತುತ್ತಿರಲಿಲ್ಲ. ಮಾರ್ಗ್ರಾಟ್‌ಳಲ್ಲಿ ಅದ್ಭುತವಾದ ಬದಲಾವಣೆ ಕಾಣಿಸಿತು. ಮೊದಲಿದ್ದುದಕ್ಕಿಂತ ಪೂರ್ತಿಯಾಗಿ ರೂಪಾಂತರಗೊಂಡಳು. ಸಾಕಷ್ಟು ದೈಹಿಕ ಬದಲಾವಣೆಗಳಾಗಿದ್ದವು. ಕೂದಲು ಕೆಂಚು ಬಣ್ಣ ಪಡೆದಿತ್ತು. ಒಣಗಿರುತ್ತಿದ್ದ ತುಟಿ ಕೆಂಪು ಪಡೆದಿತ್ತು. ಸುಕ್ಕುಸುಕ್ಕಾಗಿ ಒಣಗಿರುತ್ತಿದ್ದ ಚರ್ಮ ಕಾಂತಿಯುಕ್ತವಾಯಿತು. ಕಣ್ಣಲ್ಲಿ ಹೊಳಪು ಮೈಯಲ್ಲಿ ಕಸುವು ಕಾಣಿಸಿತು. ಒಟ್ಟಲ್ಲಿ ಬತ್ತಿದಂತಿದ್ದ ದೇಹ ಭಾಗಗಳೆಲ್ಲ ತುಂಬಿಕೊಂಡು ರಸವತ್ತಾಯಿತು. ಪ್ರೀತಿ ಅವಳ ಮೈಗೆ, ಮನಸ್ಸಿಗೆ, ಬದುಕಿಗೆ ವಸಂತದ ಉಲ್ಲಾಸವನ್ನು ತಂದು ತುಂಬಿತ್ತು. ಜೊತೆಗೆ ಈಗ ಅವಳಿಗೆ ಆಗಾಗ ಪ್ರೀತಿಯ ಮಧುಪಾನವೂ ಲಭ್ಯವಾಗುತ್ತಿತ್ತು. ಅವನಿಗಾಗಿ ರುಚಿರುಚಿಯಾದ

ತಿಂಡಿಗಳನ್ನು ತರುತ್ತಿದ್ದಳು. ಅವನು ಮೆಚ್ಚಿ ಹೊಗಳಿದ್ದ ಪ್ರಿಂಟ್‌ಗಳನ್ನು ಪ್ಯಾರಿಸ್‌ನಿಂದ ತರಿಸಿಕೊಟ್ಟಳು. ಅವನು ಪೈಂಟಿಂಗ್‌ನಲ್ಲಿ ಮುಳುಗಿದ್ದಾಗ, ಅವಳೆಂದೂ ಮಧ್ಯೆ ಪ್ರವೇಶಿಸುತ್ತಿರಲಿಲ್ಲ; ಕೆಲಸಕ್ಕೆ ಅಡ್ಡಿ ಮಾಡುತ್ತಿರಲಿಲ್ಲ. ಸುಮ್ಮನೆ ಸದ್ದಿಲ್ಲದೆ ಅವನ ಪಕ್ಕದಲ್ಲಿ ಕುಳಿತಿರುತ್ತಿದ್ದಳು. ಅವನು ತನ್ನೆಲ್ಲ ಭಾವೋತ್ಕಟತೆಯನ್ನು ಕ್ಯಾನ್‌ವಾಸ್ ಮೇಲೆ ಸುರಿಯುತ್ತಿದ್ದರೆ, ಅವಳು ಅದೇ ಉತ್ಕಟತೆಯೊಂದಿಗೆ ಅವನು ಮಾಡುತ್ತಿದ್ದ ಕೆಲಸವನ್ನು ನೋಡುತ್ತಿದ್ದಳು. ಪೈಂಟಿಂಗ್ ಬಗ್ಗೆ ಮಾರ್ಗಾಟ್‌ಗೆ ಏನೂ ತಿಳಿದಿರಲಿಲ್ಲ. ಆದರೂ ಅವಳಲ್ಲಿದ್ದ ಸೂಕ್ಷ್ಮ ಗ್ರಹಿಕೆಯ ಸಾಮರ್ಥ್ಯ, ಸರಿತಪ್ಪುಗಳನ್ನು ಗುರುತಿಸಿ, ಸರಿಯಾದ ಸಮಯದಲ್ಲಿ ಅದನ್ನು ತಿಳಿದು ಹೇಳುವ ಜಾಣ್ಮೆ ವಿನ್ಸೆಂಟ್‌ನ ಅರಿವಿಗೆ ಬಂದಿತ್ತು. ಗೊತ್ತಿಲ್ಲದೆಂಯೂ ಪೈಂಟಿಂಗ್‌ಗೆ ಸಂಬಂಧಿಸಿದ್ದೆಲ್ಲವನ್ನೂ ಅರ್ಥಮಾಡಿಕೊಂಡಿದ್ದಳು.

"ಒಂದು ಹತ್ತು ವರ್ಷಗಳ ಹಿಂದೆ ಇವಳ ಪರಿಚಯ ಆಗಿದ್ದಿದ್ದರೆ?" – ಎಂದು ತನ್ನಲ್ಲೇ ಹೇಳಿಕೊಂಡ.

ಒಂದು ದಿನ ಅವಳು ವಿನ್ಸೆಂಟ್‌ನನ್ನು ಪ್ರಶ್ನಿಸಿದಳು – ನೀನು ಆರಿಸಿಕೊಳ್ಳುವ ಜಾಗ, ದೃಶ್ಯ ನಿನ್ನ ಕ್ಯಾನ್‌ವಾಸ್ ಮೇಲೆ ಸರಿಯಾಗಿ ಮೂಡುತ್ತೆ ಅನ್ನುವುದು ನಿನಗೆ ಇಷ್ಟು ಖಚಿತವಾಗಿ ಹೇಗೆ ತಿಳಿಯುತ್ತೆ?"

ಒಂದು ಕ್ಷಣ ಯೋಚಿಸಿದ ನಂತರ ವಿನ್ಸೆಂಟ್ ಹೇಳಿದ. "ನಾನು ಕ್ರಿಯಾಶೀಲನಾಗಿ ಇರಬೇಕಾದರೆ, ಸೋಲುಗಳಿಗೆ ಹೆದರಬಾರದು. ಖಾಲಿಯಾದ ಕ್ಯಾನ್‌ವಾಸ್ ನನ್ನತ್ತ ಮೂರ್ಖನೆನ್ನುವಂತೆ ದೃಷ್ಟಿ ಬೀರುತ್ತೆ. ಕೂಡಲೇ ನಾನು ಅದರ ಮೇಲೆ ಏನನ್ನಾದರೂ ಇಳಿಸಿಬಿಡುತ್ತೇನೆ."

"ಅದಂತೂ ನಿಜ. ನೀನು ಕ್ಯಾನ್‌ವಾಸ್ ಮಾಡುವ ವೇಗದ ಬಗ್ಗೆ ಎರಡು ಮಾತಿಲ್ಲ."

"ಹಾಗೆ ನಾನು ಮಾಡಲೇ ಬೇಕು. ಇಲ್ಲವಾದರೆ ಕ್ಯಾನ್‌ವಾಸ್ – ನೀನೊಬ್ಬ ಮೂರ್ಖ. ನಿನ್ನಿಂದ ಏನೂ ಸಾಧ್ಯವಿಲ್ಲ ಎಂದು ಅಣಕಿಸಿದಂತಾಗುತ್ತದೆ!"

"ಅಂದರೆ? ಇದನ್ನು ಒಂದು ಸವಾಲಿನಂತೆ ತೆಗೆದುಕೊಳ್ಳುತ್ತೀ!"

"ಹೌದು. ಸರಿಯಾಗಿ ಹೇಳಿದೆ. ಖಾಲಿಯಾದ ಕ್ಯಾನ್‌ವಾಸ್ ಭಾವೋತ್ಕಟನಾದ ಪೈಂಟರ್‌ನನ್ನು ಕಂಡರೆ ಹೆದರುತ್ತೆ, ಯಾಕೇಂದ್ರೆ 'ನಿನ್ನ ಕೈಯಲ್ಲಿ ಸಾಧ್ಯವಿಲ್ಲ' ಎನ್ನುವ ಮೂದಲಿಕೆಗೆ ಸರಿಯಾದ ಉತ್ತರ ಸಿಕ್ಕೇ ಸಿಗುತ್ತೆ. ಅವನು ಕೊಟ್ಟೇ ಕೊಡ್ತಾನೆ ಅನ್ನೋ ಸತ್ಯ ಅದಕ್ಕೆ ಗೊತ್ತಾಗಿ ಬಿಟ್ಟಿರುತ್ತೆ. ಬದುಕೂ ಕೂಡಾ ಒಂದು ರೀತಿಯಲ್ಲಿ ಈ ಖಾಲಿ ಕ್ಯಾನ್‌ವಾಸ್‌ನಂತೆಯೇ ಶೂನ್ಯ, ನಿರುತ್ಸಾಹದಾಯಕ."

"ಹೌದಲ್ಲ?"

"ಆದರೆ ನಂಬಿಕೆ, ಸಾಮರ್ಥ್ಯಗಳಿರುವ ಮನುಷ್ಯ ಆ ಖಾಲಿತನಕ್ಕೆ, ಶೂನ್ಯಕ್ಕೆ ಹೆದರುವುದಿಲ್ಲ. ಮುಂದಕ್ಕೆ ಹೆಜ್ಜೆ ಇಡುತ್ತಾನೆ. ಕ್ರಿಯಾಶೀಲನಾಗುತ್ತಾನೆ. ತನಗೆ ತಾನೇ

ಬೆಳೆಯುತ್ತಾನೆ; ಸೃಷ್ಟಿಗೆ ಮುಂದಾಗುತ್ತಾನೆ. ಆಗ ಬದುಕಿನ ಕ್ಯಾನ್‌ವಾಸ್ ಖಾಲಿ ಇರುವುದಿಲ್ಲ. ಸಮೃದ್ಧ ಜೀವನ ಸೌಂದರ್ಯ ಅದರಲ್ಲಿ ಅರಳಿರುತ್ತದೆ."

ಮಾರ್ಗಾಟ್‌ಳ ಪ್ರೀತಿ ಅವನಿಗೆ ಸಂತೋಷ ಕೊಟ್ಟಿತ್ತು. ಎಂದೂ ಅವನನ್ನು ಟೀಕಿಸಲಿಲ್ಲ. ಅವನು ಮಾಡಿದ್ದೆಲ್ಲವೂ ಅವಳಿಗೆ ಸರಿ ಎನಿಸುತ್ತಿತ್ತು. ಅವನು ಒರಟಾಗಿ ನಡೆದುಕೊಳ್ಳುತ್ತಾನೆ; ಅವನ ಧ್ವನಿ ಕರ್ಕಶವಾಗಿದೆ; ಅವನ ಮುಖದಲ್ಲಿ ಗೆರೆಗಳಿವೆ ಎಂದಾಗಲೀ, ಅವನು ಸಾಕಷ್ಟು ಸಂಪಾದನೆ ಮಾಡುತ್ತಿಲ್ಲ ಎಂದಾಗಲೀ, ಪೈಂಟಿಂಗ್ ಒಂದನ್ನು ಬಿಟ್ಟು ಬೇರೆ ಏನಾದರೂ ಮಾಡಲಿ ಎಂದು ಆದೇಶಿಸುವುದಾಗಲೀ, ಅವಳು ಟೀಕಿಸಲಿಲ್ಲ. ಜಬರ್ದಸ್ತ್ ಮಾಡಲಿಲ್ಲ. ಮನೆಗೆ ಹಿಂತಿರುಗುವಾಗ ಸಾಕಷ್ಟು ಸಂಜೆಗತ್ತಲಾಗಿರುತ್ತಿತ್ತು. ಒಬ್ಬರಿಗೊಬ್ಬರು ಒತ್ತಿಕೊಂಡು, ವಿನ್ಸೆಂಟ್ ಅವಳ ಸೊಂಟದ ಸುತ್ತ ತೋಳನ್ನಿರಿಸಿ, ನೆಮ್ಮದಿಯಾಗಿ ಮಾತಾಡುತ್ತಾ ನಡೆಯುತ್ತಿದ್ದರು. ಅವನು ಮೆದುವಾಗಿ, ಮೃದುವಾಗಿ ತನ್ನೆಲ್ಲ ವಿಷಯಗಳನ್ನು ತಿಳಿಸುತ್ತಿದ್ದ. ತಾನೇನೇನು ಮಾಡಿದ್ದೆ ಪೈಂಟಿಂಗನ್ನು ಆರಿಸಿಕೊಂಡದ್ದೇಕೆ, ರೈತರು, ಕಾರ್ಮಿಕರು, ಇವರನ್ನೇ ಏಕೆ ಚಿತ್ರಿಸುತ್ತೇನೆ ಎಂದೆಲ್ಲ ವಿವರಣೆ ನೀಡುತ್ತಿದ್ದ. ತಾನು ಮಾಡಿದ ರೈತ ಹುಡುಗಿ, ಧೂಳು ಕವಿದ ಪೆಟ್ಟಿಕೋಟು ಮೇಲುವಸ್ತ್ರದಲ್ಲಿ, ಶ್ರೀಮಂತ ಹುಡುಗಿಯರಿಗಿಂತ ಯಾಕೆ ಹೆಚ್ಚು, ಸುಂದರಿಯಾಗಿ ಕಾಣುತ್ತಾಳೆ ಎನ್ನುವುದನ್ನೂ ಅರ್ಥಮಾಡಿಸಿದ. ಅವಳು ಮಾತ್ರ ಮರು ಮಾತಿಲ್ಲದೆ, ಒಂದಾದರೂ ಪ್ರಶ್ನೆಯಿಲ್ಲದೆ,. ಅವನು ಹೇಳಿದ್ದೆಲ್ಲವನ್ನೂ ಒಪ್ಪಿಕೊಂಡಳು. ಅವನು ಏನೇ ಆಗಿರಲಿ, ಅವನು ಅವನೇ! ಅವಳು ಮಾತ್ರ ನಿಸ್ಪೃಹತೆಯಿಂದ, ಪರಿಪೂರ್ಣತೆಯೊಂದಿಗೆ ಪ್ರೀತಿಸಿದಳು.

ವಿನ್ಸೆಂಟ್‌ಗೆ ಈ ಹೊಸ ಸಂಬಂಧ, ಪರಿಸ್ಥಿತಿಗೆ ಹೊಂದಿಕೊಳ್ಳುವುದು ಸ್ವಲ್ಪ ಕಷ್ಟವೆನಿಸಿತು. ಪ್ರತಿದಿನವೂ ತಮ್ಮಿಬ್ಬರ ಸಂಬಂಧ ಮುರಿದುಬೀಳಲೆಂದು ಕಾಯುತ್ತಿದ್ದ. ಮಾರ್ಗಾಟ್ ತನ್ನ ವಿಚಾರದಲ್ಲಿ ಅಸಮಾಧಾನಗೊಂಡು ಕ್ರೂರವಾಗಿ, ನಿಷ್ಠುರವಾಗಿ ನಡೆದುಕೊಳ್ಳಲಿ, ತನ್ನ ಸೋಲುಗಳತ್ತ ಬೊಟ್ಟು ಮಾಡಿ ಟೀಕಿಸಲಿ – ಎಂದು ಕಾಯುತ್ತಿದ್ದ. ಆದರೆ ಬೇಸಿಗೆ ಹೆಚ್ಚುತ್ತಿದ್ದಂತೆ, ಅವಳ ಪ್ರೀತಿ ಮತ್ತೂ ಗಾಢವಾಯಿತು. ಅಂತಹ ಪ್ರೀತಿಯ ನಿಲುವು ಒಬ್ಬ ಪ್ರಬುದ್ಧ ಹೆಣ್ಣಿನಿಂದ ಮಾತ್ರವೇ ಸಾಧ್ಯವೆಂಬಂತಿತ್ತು. ಅವಳು ತನ್ನ ವಿರುದ್ಧ ನಿಲ್ಲಲಿಲ್ಲವೆಂದು ಅರಿವಾದಾಗ, ತಾನೇ ತನ್ನ ಬಗ್ಗೆ, ತನ್ನ ನಡತೆ, ಅಸಮರ್ಥತೆಗಳ ಬಗ್ಗೆ ರೆಕ್ಕೆ ಪುಕ್ಕ ಹಚ್ಚಿ, ಅವಳು ಅಸಹ್ಯಪಟ್ಟುಕೊಳ್ಳಲೆಂದು ಒತ್ತಿ ಒತ್ತಿ ವಿವರಿಸಿದರೂ, ಫಲ ಸಿಗಲಿಲ್ಲ. ಬದಲಾಗಿ ಅವಳು ಅವನ ಸೋಲುಗಳನ್ನು ಸೋಲುಗಳೆಂದೇ ಭಾವಿಸಲಿಲ್ಲ. ಅವನಿಂದ ಸಹಜವಾಗಿ ನಡೆದದ್ದೆಂದು ಭಾವಿಸಿದಳು.

ಆ್ಯಮ್‌ಸ್ಟರ್ ಡ್ಯಾಮ್, ಬೋರಿನೇಜ್‌ನಲ್ಲಿ ನಡೆದ ಕತೆಗಳನ್ನೆಲ್ಲ ವಿವರಿಸಿ – "ಇವೆಲ್ಲವೂ ಖಂಡಿತ ನನ್ನ ಸೋಲುಗಳೇ ಅಲ್ಲವೇ?" ಎಂದ. "ಅಲ್ಲಿ ಮಾಡಿದ್ದೆಲ್ಲವೂ ಮಾಡಬಾರದ ಸಂಗತಿಗಳೇ! – ಹೌದಲ್ಲ?"

ಅವಳು ಸುಮ್ಮನೆ ಮುಗುಳ್ನಕ್ಕಳು – "ರಾಜನಾದವನೆಂದೂ ತಪ್ಪು ಮಾಡುವುದಿಲ್ಲ."

ಅವನು ಅವಳನ್ನು ಮುದ್ದಿಸಿದ.

ಮತ್ತೊಂದು ದಿನ ಅವಳು ವಿನ್ಸೆಂಟ್ ಜೊತೆ ಮಾತಾಡುವಾಗ ಹೇಳಿದಳು. "ವಿನ್ಸೆಂಟ್, ನನ್ನಮ್ಮ ನಿನ್ನನ್ನು ಕೆಟ್ಟವನೆಂದು ಹೇಳುತ್ತಾಳೆ. ಹೇಗ್‌ನಲ್ಲಿ ನೀನು ಯಾವಳೋ ಸೂಳೆ ಜೊತೆಗೆ ಇದ್ದೆಯಂತೆ! ಆದರೆ ನಾನು, ಇದೆಲ್ಲ ಬರೀ ಕಟ್ಟು ಕಥೆ! ಸುಳ್ಳು ಸುದ್ದಿ ಎಂದು ತಿಳಿಸಿದೆ."

ವಿನ್ಸೆಂಟ್ ಕ್ರಿಸ್ಟೀನ್‌ಳ ಕತೆಯನ್ನು ಹೇಳಿದ. ಮಾರ್ಗಾಟ್, ಪ್ರೀತಿಗೆ ಮೊದಲಿದ್ದ ವಿಷಾದ ಭಾವದೊಂದಿಗೆ ಅದನ್ನು ಕೇಳಿಸಿಕೊಂಡಳು.

"ವಿನ್ಸೆಂಟ್ ನಿನ್ನಲ್ಲಿ ಸ್ವಲ್ಪಮಟ್ಟಿಗೆ ಕ್ರಿಸ್ತನನ್ನು ಕಾಣುತ್ತೇನೆ. ನನ್ನ ತಂದೆ ಇದ್ದಿದ್ದರೆ, ಖಂಡಿತ ಇದನ್ನೇ ಹೇಳುತ್ತಿದ್ದ ಅನಿಸುತ್ತೆ."

"ಎರಡು ವರ್ಷ ಸೂಳೆಯ ಜೊತೆ ಸಂಸಾರ ಮಾಡಿದೆ ಅಂತ ಹೇಳಿದ ಮೇಲೂ ನಿನಗೆ ನನ್ನ ಬಗ್ಗೆ ಇದನ್ನೇ ಹೇಳಬೇಕೂಂತ ಅನಿಸುತ್ತಾ?"

"ಅವಳು ಸೂಳೆಯಲ್ಲ. ನಿನ್ನ ಹೆಂಡತಿ. ಅವಳನ್ನು ಉಳಿಸುವ ಪ್ರಯತ್ನದಲ್ಲಿ ಸೋತದ್ದು ನಿನ್ನ ತಪ್ಪಲ್ಲ. ಹಾಗೆಯೇ ಬೊರೈನ್‌ರನ್ನೂ! ಒಬ್ಬ ಮನುಷ್ಯನಿಂದ ತೀರಾ ಸ್ವಲ್ಪ ಮಾತ್ರವೇ ಸುಧಾರಣೆ ಮಾಡೋಕೆ ಸಾಧ್ಯ. ಎಲ್ಲವನ್ನೂ ಎಲ್ಲರನ್ನೂ ಮಾಡಲು ಸಾಧ್ಯವಿಲ್ಲ."

"ಕ್ರಿಸ್ಟೀನ್ ನನ್ನ ಹೆಂಡತಿ ಆಗಿದ್ದದ್ದು ವಾಸ್ತವ. ನಾನು ಇನ್ನೂ ಯುವಕನಾಗಿದ್ದಾಗ, ನನ್ನ ಸೋದರ ಥಿಯೋಗೆ ಹೇಳಿದ್ದೆ– "ನನಗೆ ಒಳ್ಳೆ ಹೆಂಡತಿ ಸಿಗದೆ ಹೋದಾಗ, ಕೆಟ್ಟವಳನ್ನೇ ಹೆಂಡತಿಯಾಗಿ ಮಾಡಿಕೊಳ್ತೇನೆ. ಹೆಂಡತೀನೇ ಇಲ್ಲದೆ ಇರುವುದಕ್ಕಿಂತ ಕೆಟ್ಟ ಹೆಂಡತಿಯನ್ನಾದರೂ ಹೊಂದಿರುವುದು ಮೇಲಲ್ಲವೇ?"

ಇಬ್ಬರ ನಡುವೆ ಗಂಭೀರ ಮೌನ ಕವಿದಿತ್ತು. ಅವರಿಬ್ಬರ ಮಧ್ಯೆ ಮದುವೆ ಪ್ರಸ್ತಾಪ ಬಂದಿರಲಿಲ್ಲ.

"ಕ್ರಿಸ್ಟೀನ್‌ಗೆ ಸಂಬಂಧಪಟ್ಟಂತೆ, ಒಂದು ವಿಷಯದಲ್ಲಿ ನನಗೆ ದುಃಖವಾಗುತ್ತೆ. ಅವಳಿಗೆ ಸಿಕ್ಕಿದ ಆ ಎರಡು ವರ್ಷದ ಪ್ರೀತಿ ನನಗೆ ಸಿಗಲಿಲ್ಲವಲ್ಲ! ಎಂದು ವಿಷಾದಿಸುತ್ತೇನೆ."

ಅವಳಿಂದ ಬಿಡಿಸಿಕೊಳ್ಳುವುದಾಗಲೀ, ಅವಳ ಪ್ರೀತಿಯನ್ನು ನಿರಾಕರಿಸುವುದಾಗಲೀ ಸಾಧ್ಯವಿಲ್ಲ ಎನಿಸಿದಾಗ, ಪ್ರಯತ್ನಗಳನ್ನು ಕೈಬಿಟ್ಟು ಅವಳ ಪ್ರೀತಿಯನ್ನು ಒಪ್ಪಿಕೊಂಡ.

"ಮಾರ್ಗಾಟ್, ಆಗೋದೆಲ್ಲ, ಆಕಸ್ಮಿಕಗಳನ್ನು, ಅದೃಷ್ಟವನ್ನು, ಅರ್ಥ, ಅಪಾರ್ಥಗಳನ್ನು ಆಧರಿಸಿರುತ್ತವೆ. ಅವುಗಳಿಗೆ ನಿಶ್ಚಿತ ಕಾರಣಗಳು ಇರುವುದಿಲ್ಲ. ವಯಸ್ಸಾದಂತೆ, ನನಗೆ ಗಂಭೀರ ಅರ್ಥಗಳು, ಉದ್ದೇಶಗಳು ಕಾಣಿಸುತ್ತವೆ. ಆದರೆ ದುರಾದೃಷ್ಟವೆಂದರೆ, ಇಂಥವುಗಳು ಬೇಗ ಹೊಳೆಯುವುದಿಲ್ಲ. ಜ್ಞಾನೋದಯವಾಗಲು ಬಹಳ ಕಾಲ ಕಾಯುವಂತಾಗುತ್ತದೆ."

"ಅದೇ ನಾನು ನಿನ್ನ ಪ್ರೀತಿಗೆ ಕಾದಿದ್ದಂತೆ!"

ನೇಕಾರನ ಮನೆಯ ತಗ್ಗಾದ ಬಾಗಿಲ ಬಳಿ ಹೋದರು. ವಿನ್ಸೆಂಟ್ ಪ್ರೀತಿಯಿಂದ ಅವಳ ಕೈ ಅಮುಕಿದ. ಮುಗುಳ್ನಗೆಯ ಮುಗುಳನ್ನು ಚೆಲ್ಲಿದಳು. ಅದರಿಂದ ಕರಗಿಹೋದ ವಿನ್ಸೆಂಟ್, ವಿಧಿ ಯಾಕೆ ತನ್ನನ್ನು ಇಷ್ಟು ಕಾಲ ಇಂತಹ ಪ್ರೀತಿಯಿಂದ ವಂಚಿಸಿತು! – ಎಂದು ಆಶ್ಚರ್ಯ ಪಟ್ಟ. ಹುಲ್ಲಿನ ಗುಡಿಸಲನ್ನು ಪ್ರವೇಶಿಸಿದರು. ಬೇಸಿಗೆ ಮಾಗಿಯತ್ತ ಸರಿಯುತ್ತಿತ್ತು. ಬೇಗ ಸಂಜೆಯಾಗುತ್ತಿತ್ತು. ಒಳಗೆ ಮಗ್ಗದ ಮೇಲುಗಡೆಯಲ್ಲಿ ಒಂದು ತೂಗುದೀಪವಿತ್ತು. ಕೆಂಪು ವಸ್ತ್ರವನ್ನು ನೇಯಲಾಗುತ್ತಿತ್ತು. ನೇಕಾರ ದಂಪತಿಗಳು ಎಳೆಗಳನ್ನು ಸರಿಪಡಿಸುತ್ತಿದ್ದರು. ಕಪ್ಪನೆಯ ಆಕೃತಿಗಳು ಬೆಳಕಿಗೆ ಅಭಿಮುಖವಾಗಿ ಬಾಗಿದ್ದವು; ಬಣ್ಣದ ವಸ್ತ್ರಕ್ಕೆ ಎದುರಾಗಿ ನಿಂತಿದ್ದವು. ಇವು ಮಗ್ಗದ ಕೆಲವು ಭಾಗಗಳ ಮೇಲೆ ನೆರಳನ್ನು ಚೆಲ್ಲಿದ್ದವು. ಮಾರ್ಗ್‌ರಟ್ ಮತ್ತು ವಿನ್ಸೆಂಟ್ ಪರಸ್ಪರ ನಕ್ಕರು. ತನ್ನ ನಗೆಯ ಮೂಲಕ ವಿನ್ಸೆಂಟ್ ಅವಳಿಗೆ, ಅಸಹ್ಯ, ಕೊಳಕಾದ ಎಡೆಗಳಲ್ಲಿಯೂ ಸುಪ್ತವಾಗಿರಬಹುದಾದ ಸೌಂದರ್ಯವನ್ನು ಗ್ರಹಿಸಲು ಸೂಚಿಸುತ್ತಿದ್ದ.

ನವೆಂಬರ್ ತಿಂಗಳ ಹೊತ್ತಿಗೆ, ಮತ್ತು ಇನ್ನು ಸ್ವಲ್ಪ ದಿನಕ್ಕೆ ಎಲೆಗಳೆಲ್ಲ ಉದುರಿ ಮರಗಳು ಬೋಳಾಗಿ ಬಿಡುತ್ತವೆ. ಈಗ ನ್ಯೂನೆನ್‌ನಲ್ಲಿ, ಎಲ್ಲರ ಬಾಯಲ್ಲೂ ವಿನ್ಸೆಂಟ್ ಮತ್ತು ಮಾರ್ಗ್‌ರಟ್‌ರ ಸುದ್ದಿಯೇ! ಗ್ರಾಮದಲ್ಲಿದ್ದವರೆಲ್ಲ ಮಾರ್ಗ್‌ರಟಳನ್ನು ಇಷ್ಟಪಡುತ್ತಿದ್ದರು. ಆದರೆ ವಿನ್ಸೆಂಟ್ ಬಗ್ಗೆ ಯಾಕೋ ಅನುಮಾನ, ಭಯ! ಮಾರ್ಗ್‌ರಟ್ ಅವರೆಲ್ಲರಿಗೂ ತಮ್ಮಿಬ್ಬರ ನಡುವಿನದು ಬರೀ ಸ್ನೇಹ, ಹೀಗಿರುವಾಗ ಅವನ ಜೊತೆ ಹೊಲ ಗದ್ದೆ, ಬಯಲುಗಳಲ್ಲಿ ಓಡಾಡುವುದರಿಂದ ಏನು ತೊಂದರೆಯಾಗಲು ಸಾಧ್ಯ? ಬೆಜೆಮನ್ ಮನೆಯವರು ವಿನ್ಸೆಂಟ್‌ನನ್ನು ಚಂಚಲ ಸ್ವಭಾವದವನೆಂದೂ, ಯಾವ ಸಮಯದಲ್ಲಿಯಾದರೂ ಕೈ ಕೊಡಬಲ್ಲನೆಂದು ಭಾವಿಸಿದ್ದರು. ಆದರೆ ಊರಿನವರು ಹೆದರಿದಂತೆ, ಹೆದರಲಿಲ್ಲ. ವಿಚಿತ್ರ ಸ್ವಭಾವದ ವಿನ್ಸೆಂಟ್ ವಾನ್‌ಗೋನಿಂದ ಒಳ್ಳೆಯದೇನೂ ಆಗುವುದಿಲ್ಲ. ಈಗಿನಿಂದಲೇ ಮಗಳನ್ನು ಅವನಿಂದ ದೂರ ಇಡದಿದ್ದಲ್ಲಿ, ಮುಂದೆ ಪಶ್ಚಾತ್ತಾಪ ಪಡಬೇಕಾಗುತ್ತದೆ ಎನ್ನುವುದು ಊರಿನವರ ಅಭಿಪ್ರಾಯವಾಗಿತ್ತು.

ಊರಿನ ಜನ ತನ್ನನ್ನೇಕೆ ದ್ವೇಷಿಸುತ್ತಾರೆ ಅನ್ನುವುದು ವಿನ್ಸೆಂಟ್‌ಗೆ ಅರ್ಥವಾಗಲಿಲ್ಲ. ಅವನು ಯಾರ ಮಧ್ಯೆಯೂ ಪ್ರವೇಶ ಮಾಡಿರಲಿಲ್ಲ. ಯಾರಿಗೂ ಹಾನಿ ಮಾಡಿರಲಿಲ್ಲ. ಈ ಸಣ್ಣ ಗ್ರಾಮದಲ್ಲಿ ತನ್ನ ಬಗ್ಗೆ ಎಂತಹ ಕಲ್ಪನೆ ಇದೆ ಅನ್ನುವುದು ಅವನಿಗೆ ಅರ್ಥಮಾಡಿಕೊಳ್ಳಲು ಆಗಿರಲಿಲ್ಲ. ನೂರು ವರ್ಷಗಳಾಗಿದ್ದರೂ ಅಲ್ಲಿನ ಜನರ ನಡವಳಿಕೆ, ಸಂಪ್ರದಾಯ, ಆಲೋಚನೆಗಳಲ್ಲಿ ಯಾವುದೇ ವ್ಯತ್ಯಾಸ ಆಗಿರಲಿಲ್ಲ. ಕೊನೆಗೆ ಅವನಿಗೆ ತಿಳೀತು. ಅವನನ್ನು ಒಬ್ಬ ಸೋಮಾರಿ ಅಂತ ಜನ ತಿಳಿದಿದ್ದಾರೆ ಅನ್ನೋ ವಿಷಯ ಗೊತ್ತಾದ ಮೇಲೆ, ತನ್ನ ವಿಚಾರಗಳಂತೆ ಅವರನ್ನು ಬದಲಾಯಿಸುವ ಭರವಸೆಯನ್ನೇ ಕೈ ಬಿಟ್ಟ.

ಒಂದು ದಿನ ಇವನು ಹೊರಟಿದ್ದಾಗ, ಒಂದು ಸಣ್ಣ ಅಂಗಡಿ ಮಾಲಿಕ, ವ್ಯಾನ್‌ಡ್ರೆನ್ ಬೀಕ್ ಕರೆದು ಮಾತನಾಡಿಸಿದ.

"ಮಾಗಿ ಬಂತು, ಹವಾಗುಣ ಹಿತವಾಗಿದೆ ಅಲ್ಲ."

"ಹೌದು."

"ಏನು ಕೆಲಸಕ್ಕೆ ಹೊರಟಿದ್ದೀಯ?"

ವಿನ್ಸೆಂಟ್ ಬೆನ್ನಿಗೆ ಭಾರವಾಗಿದ್ದ ಈಸಲ್‌ನ ಪೊಸಿಷನ್ ಬದಲಾಯಿಸಿ ಹೇಳಿದ – ಹೌದು, ಪೊದೆಗಳ ಬನಕ್ಕೆ ಹೊರಟಿದ್ದೀನಿ."

"ನಾನು ಕೇಳಿದ್ದು ಕೆಲಸ. ನಿಜವಾದ ಕೆಲಸ ಇಡೀ ವರ್ಷ ಮಾಡುವಂಥಾದ್ದು."

"ಪೈಂಟಿಂಗ್ ಮಾಡೋದೇ ನನ್ನ ಕೆಲಸ, ವೃತ್ತಿ."

"ನನ್ನ ದೃಷ್ಟೀಲಿ, ಯಾವುದಕ್ಕೆ ದುಡ್ಡು ಅಥವಾ ಸಂಬಳ ಸಿಗುತ್ತೋ, ಅದೇ ಕೆಲಸ."

"ಮಿಜ್ನಹೀರ್ ವ್ಯಾನ್‌ಡೆಕ್, ಫೀಲ್ಡ್ಸ್‌ಗೆ ಹೋಗೋದೆ ನನ್ನ ಕೆಲಸ ನೀನು ಸರಕು ಮಾರಾಟ ಮಾಡೋ ಹಾಗೆ, ನನ್ನದೂ!"

"ಹೌದು. ನಾನು ಸರಕು ಮಾರಾಟ ಮಾಡ್ತೀನಿ!"

"ನೀನು ಮಾಡುವುದನ್ನು ಹಾಗೆಯೇ ಮಾರಾಟ ಮಾಡ್ತೀಯೇನು?"

ಆ ಊರಿನಲ್ಲಿದ್ದ ಪ್ರತಿಯೊಬ್ಬರೂ ಇದೇ ಪ್ರಶ್ನೆಯನ್ನು ಕೇಳಿದ್ದರು. ಅವನಿಗೆ ಕೇಳಿ ಕೇಳಿ ವಾಕರಿಕೆ ಬಂದಿತ್ತು.

"ಕೆಲವೊಮ್ಮೆ ನಾನು ಮಾರಾಟ ಮಾಡ್ತೇನೆ. ನನ್ನ ತಮ್ಮ ಆರ್ಟ್ ಡೀಲರ್. ಅವನು ಕೊಂಡುಕೊಳ್ತಾನೆ."

"ನೀನು ಕೆಲಸಕ್ಕೆ ಹೋಗಬೇಕು ಮಿಜ್ನಹೀರ್. ಈ ರೀತಿ ಸೋಮಾರಿಯಾಗಿ ಅಲೆದಾಡೋದು ಒಳ್ಳೆಯದಲ್ಲ. ವಯಸ್ಸಾಗಿ ಬಿಡುತ್ತೆ. ಆದರೆ ಅವನ ಹತ್ತಿರ ಏನೂ ಇರೋದಿಲ್ಲ."

"ಸೋಮಾರಿ!..... ಸ್ವಾಮಿ ನೀವು ಅಂಗಡಿಯಲ್ಲಿ ಎಷ್ಟು ಹೊತ್ತು ಇದ್ದು ಕೆಲಸ ಮಾಡ್ತೀರೋ, ಅದರ ಎರಡರಷ್ಟು ಸಮಯವನ್ನು ನನ್ನ ಕೆಲಸದಲ್ಲಿ ಕಳೀತೀನಿ."

"ಏನಪ್ಪಾ, ನೀನು ಮಾಡೋದನ್ನು ಕೆಲಸ ಅಂತ ಕರೀತಾರೇನು? ಸುಮ್ಮನೆ ಕೂತು ಕೊಳ್ಳೋದು, ಏನೇನೋ ಕೈಯಾಡಿಸೋದು. ಅದೆಲ್ಲ ಮಕ್ಕಳಾಟ. ಒಂದು ಅಂಗಡಿ ಹಾಕ್ಕೋ; ಇಲ್ಲ ಉಳುಮೆ ಮಾಡು. ಆಗ ಅದು ಕೆಲಸ ಅಂತ ಕರೆಸಿಕೊಳ್ಳುತ್ತೆ. ಗಂಡಸಾದವನು ಮಾಡಬೇಕಾಗಿರುವುದು ಇಂಥಾದ್ದನ್ನೇ! ಈಗಾಗಲೇ ವಯಸ್ಸಾಗಿದೆ. ವ್ಯರ್ಥವಾಗಿ ಕಾಲಹರಣ ಮಾಡಬೇಡ."

ಡಿಯೆನ್‌ವ್ಯಾನ್ ಡೆನ್ ಆಡಿದ ಮಾತು, ಊರಿನ ಜನರ ಅಭಿಪ್ರಾಯವೇ ಆಗಿತ್ತು, ಗ್ರಾಮ ಪ್ರದೇಶದ ಜನರ ದೃಷ್ಟಿಯಲ್ಲಿ 'ಆರ್ಟಿಸ್ಟ್ – ವರ್ಕ್' ಅನ್ನುವುದು ತದ್ವಿರುದ್ಧ. ಅವು ಬೇರೆ ಬೇರೆ. ಆದ್ದರಿಂದ ಜನರಾಡುವ ಮಾತಿಗೆ ಕಿವಿಗೊಡಲಿಲ್ಲ. ಆದಷ್ಟೂ ತಾನು ಓಡಾಡುವಾಗ ಅವರ ಕಣ್ಣು ತಪ್ಪಿಸುತ್ತಿದ್ದ. ಅವರ ಅಪನಂಬಿಕೆ, ಅವಿಶ್ವಾಸಗಳು ತಾರಸ್ಥಿತಿಯಲ್ಲಿದ್ದಾಗ ಒಂದು ಆಕಸ್ಮಿಕ ಸಂಭವಿಸಿ, ತನ್ನಲ್ಲಿ ನಂಬಿಕೆ, ವಿಶ್ವಾಸಗಳನ್ನು ಮೂಡಿಸಿದವು.

ಹೆಲ್ಮಾಂಡ್‌ನಲ್ಲಿ, ಟ್ರೈನ್ ಇಳಿಯುವಾಗ, ಅನ್ನಾ ಕಾರ್ನೇಲಿಯಾ ಕಾಲು ಮುರಿದುಕೊಂಡಳು. ಕೂಡಲೇ ಆಸ್ಪತ್ರೆಗೆ ಕರೆದುಕೊಂಡು ಹೋದರು. ಡಾಕ್ಟರು ಮನೆಯವರಿಗೆ ತಿಳಿಸಲಿಲ್ಲವಾದರೂ, ಅವಳ ಪ್ರಾಣಾಪಾಯದ ಬಗ್ಗೆ ಹೆದರಿದ್ದ. ವಿನ್ಸೆಂಟ್ ತನ್ನೆಲ್ಲ ಕೆಲಸಗಳನ್ನು ಬಿಟ್ಟು, ಬೋರಿನೇಜ್‌ನ ಅನುಭವದಿಂದ ಪಳಗಿದ್ದುದರಿಂದ ತಾಯಿಗೆ ಒಳ್ಳೆಯ ಶುಶ್ರೂಕನಾದ. ಡಾಕ್ಟರ್ ಅವನು ನೋಡಿಕೊಳ್ಳುತ್ತಿದ್ದ ರೀತಿ, ಮಾಡುತ್ತಿದ್ದ ಸೇವೆಗಳನ್ನು ಗಮನಿಸಿ, "ಹೆಂಗಸಿಗಿಂತ ನೀನೇ ವಾಸಿ. ನಿನ್ನ ತಾಯಿ ಒಳ್ಳೆಯವರ ಕೈಗಳಲ್ಲಿ ಸುಭದ್ರವಾಗಿದ್ದಾಳೆ" ಎಂದಿದ್ದ.

ನ್ಯೂನೆನ್‌ನ ಜನ ಬೇಸರವಾದಾಗ ಎಷ್ಟು ಕಟುವಾಗಿ ಟೀಕಿಸುತ್ತಿದ್ದರೋ, ಆಪತ್ಕಾಲದಲ್ಲಿ ಅಷ್ಟೇ ಮೃದುವಾಗಿ ಮಾತನಾಡುತ್ತಿದ್ದರು; ಸಹಾನುಭೂತಿ ತೋರುತ್ತಿದ್ದರು. ಕಾರ್ನೇಲಿಯಾಳನ್ನು ವಿಚಾರಿಸಲು ಪಾದ್ರಿಯ ಮನೆಗೆ ಭೇಟಿ ಕೊಡುತ್ತಿದ್ದರು. ಬರುವಾಗ ರುಚಿಕರವಾದ ತಿಂಡಿಗಳನ್ನೋ, ಪುಸ್ತಕಗಳನ್ನೋ ತಂದು ಕೊಡುತ್ತಿದ್ದರು; ಸಮಾಧಾನದ ಮಾತುಗಳನ್ನಾಡುತ್ತಿದ್ದರು. ಬರುವವರೆಲ್ಲ ವಿನ್ಸೆಂಟ್‌ನ ಶುಶ್ರೂಷೆಯ ಪರಿಯನ್ನು ಗಮನಿಸಿದರು. ರೋಗಿಯನ್ನು ಕದಲಿಸದೆಯೇ ಹಾಸಿಗೆ ಮೇಲಿನ ಬಟ್ಟೆಯನ್ನು ಬದಲಾಯಿಸುತ್ತಿದ್ದ. ಅವಳ ಕಾಲಿನ ಬ್ಯಾಂಡೇಜ್ ಸರಿಪಡಿಸುತ್ತಿದ್ದ. ಎರಡು ವಾರಗಳು ಕಳೆಯುತ್ತಿದ್ದಂತೆ, ವಿನ್ಸೆಂಟ್ ಬಗೆಗಿದ್ದ ಅಭಿಪ್ರಾಯವೇ ತಾರುಮಾರಾಯಿತು. ವಿನ್ಸೆಂಟ್‌ನನ್ನು ಅಚ್ಚರಿ ಕಣ್ಣುಗಳಿಂದ ನೋಡುತ್ತಾ, ಅವನ ಸೇವೆಯನ್ನು ಕೊಂಡಾಡುತ್ತಿದ್ದರು. ಅಲ್ಲದೆ ಹಾಸಿಗೆ ಹುಣ್ಣುಗಳು ಆಗದಂತೆ ರೋಗಿಯನ್ನು ಹೇಗೆ ರಕ್ಷಿಸಬಹುದು, ರೋಗಿಗೆ ಯಾವಾಗ ಎಂಥಂಥ ಆಹಾರ ಕೊಡಬಹುದು; ರೋಗಿಯ ಕೋಣೆಯನ್ನು ಹೇಗೆ ಬೆಚ್ಚಗೆ ಇರಿಸಬಹುದು ಎಂಬುದರ ಬಗ್ಗೆ ಅವನೊಂದಿಗೆ ಚರ್ಚೆ ಮಾಡಿ ತಿಳಿದುಕೊಂಡರು. ಅವನೊಂದಿಗೆ ಮಾತಾಡಿ ಅವನನ್ನು ಅರ್ಥಮಾಡಿಕೊಂಡರು. ಅವನೂ ಒಬ್ಬ ಮನುಷ್ಯ ಎಂದು ಪರಿಗಣಿಸಿದರು. ತಾಯಿಗೆ ಸ್ವಲ್ಪ ವಾಸಿ ಆದ ಮೇಲೆ ಬಿಡುವಾದಾಗ, ಮಧ್ಯೆ ಮಧ್ಯೆ ಸ್ವಲ್ಪ ಹೊತ್ತು ಪೈಂಟಿಂಗ್ ಕೆಲಸಕ್ಕೆ ಹೊರಡುತ್ತಿದ್ದ. ಈಗ ಅವನು ಕಣ್ಣಿಗೆ ಬೀಳುತ್ತಿದ್ದಂತೆ ಊರಿನ ಮಂದಿ ಮುಗುಳ್ನಗೆಯೊಂದಿಗೆ ಅವನನ್ನು ಮಾತಾಡಿಸುತ್ತಿದ್ದರು; ಯೋಗ ಕ್ಷೇಮ ವಿಚಾರಿಸುತ್ತಿದ್ದರು. ಪ್ರೀತಿಯಿಂದ ಹೆಸರಿಡಿದು ಕೂಗುತ್ತಿದ್ದರು. ಪರದೆಗಳನ್ನೆತ್ತಿ ಕಳ್ಳ ನೋಟದಿಂದ ಅವನನ್ನು ನೋಡಬೇಕಾದ ಅಗತ್ಯ ಈಗಿರಲಿಲ್ಲ.

ಎಲ್ಲ ಹೊತ್ತಿನಲ್ಲೂ ಮಾರ್ಗಾಟ್ ಅವನ ಜೊತೆ ಇರುತ್ತಿದ್ದಳು. ಅವನ ಮೃದುತ್ವದ ಬಗ್ಗೆ ಅಚ್ಚರಿಗೊಳ್ಳದೆ ಇದ್ದವಳೆಂದರೆ, ಅವಳೊಬ್ಬಳೇ, ರೋಗಿಯ ಕೋಣೆಯಲ್ಲಿ, ಒಂದು ದಿನ ಅವರಿಬ್ಬರೂ ಪಿಸುಮಾತಾಡುತ್ತಿದ್ದರು. "ಮನುಷ್ಯನ ದೇಹದ ಬಗೆಗಿನ ಅರಿವೇ ಅನೇಕ ವಿಷಯಗಳಿಗೆ ಹಣದ ಅಗತ್ಯವಿದೆ. ಜಾನ್ ಮಾರ್ಷಲ್ ಬರೆದಿರುವ "ಅನಾಟಮಿ ಫಾರ್ ಆರ್ಟಿಸ್ಟ್ಸ್' ಎಂಬ ಪುಸ್ತಕ ಇದೆ. ಆದರೆ ಅದರ ಬೆಲೆ ಬಹಳ ದುಬಾರಿ."

"ಅದನ್ನು ಕೊಂಡುಕೊಳ್ಳೋಕೆ ನಿನ್ನ ಹತ್ತಿರ ಹಣ ಇಲ್ಲವೇನು?"

"ಇಲ್ಲ. ನನ್ನ ಪೈಂಟಿಂಗ್ಸ್ ಯಾವುದಾದರೂ ಮಾರಾಟವಾದರೆ ಮಾತ್ರ, ಕೊಳ್ಳೋಕೆ ಸಾಧ್ಯ."

"ವಿನ್ಸೆಂಟ್, ನಿನಗೆ ಸ್ವಲ್ಪ ಹಣ ಸಾಲ ಕೊಡುವುದಕ್ಕೆ ಅವಕಾಶ ಸಿಕ್ಕರೆ, ನನಗೆ ತುಂಬಾ ಸಂತೋಷ ಆಗುತ್ತೆ. ನಿನಗೇ ಗೊತ್ತು, ನನಗೆ ರೆಗ್ಯುಲರ್ ಆಗಿಬರುವ ಆದಾಯ ಇದೆ. ಆದರೆ ಖರ್ಚು ಮಾಡೋಕೇ ದಾರಿ ಇಲ್ಲ."

"ಹೀಗೆ ಹೇಳೋದು ನಿನ್ನ ಒಳ್ಳೆತನ. ಆದರೆ ತಗೊಳ್ಳೋದು ನನಗೆ ಸರಿ ಅನ್ಸಲ್ಲ."

ಅವಳು ಮತ್ತೆ ಒತ್ತಾಯ ಮಾಡಲಿಲ್ಲ. ಒಂದೊಂದು ವಾರ ಕಳೆದ ಮೇಲೆ ಅವಳು ವಿನ್ಸೆಂಟ್ ಕೈಗೆ ಹೇಗ್‌ನಿಂದ ಬಂದಿದ್ದ ಒಂದು ಪ್ಯಾಕೇಜ್ ಕೊಟ್ಟಳು.

"ಏನಿದು?" – ವಿನ್ಸೆಂಟ್ ಕೇಳಿದ.

"ಬಿಚ್ಚಿ ನೋಡು."

ಬಿಚ್ಚಿದಾಗ, ಒಂದು ಸಣ್ಣ ಚೀಟಿಯನ್ನು ಲಗತ್ತಿಸಿರುವುದು ಕಾಣಿಸಿತು. ಆ ಪ್ಯಾಕೇಜಿನಲ್ಲಿ ಮಾರ್ಷಲ್‌ನ ಪುಸ್ತಕ ಇತ್ತು. ಆ ಚೀಟಿಯಲ್ಲಿ ಹುಟ್ಟುಹಬ್ಬದ ಶುಭಾಶಯವೆಂದು ಬರೆಯಲಾಗಿತ್ತು.

"ಇದು ನನ್ನ ಹುಟ್ಟುಹಬ್ಬ ಅಲ್ಲ" ಉದ್ಗಾರ ತೆಗೆದ.

"ಹೌದು. ನಿನ್ನ ಹುಟ್ಟುಹಬ್ಬ ಅಲ್ಲ; ಆದರೆ ಇದು ನನ್ನ ಹುಟ್ಟುಹಬ್ಬ! ನಲವತ್ತನೇ ಹುಟ್ಟುಹಬ್ಬ. ನೀನು ನನಗೆ ಬದುಕನ್ನು ಉಡುಗೊರೆಯಾಗಿ ಕೊಟ್ಟೆ. ಒಳ್ಳೆ ಹುಡುಗನಂತೆ, ಏನೂ ಹೇಳದೆ ಸುಮ್ಮನೆ ಇದನ್ನು ತೆಗೆದಿರಿಸಿಕೋ. ಇವತ್ತು ನನಗೆ ತುಂಬಾ ಸಂತೋಷ ಆಗಿದೆ. ನೀನೂ ಕೂಡಾ ಸಂತೋಷವಾಗಿರಬೇಕು."

ಅವರಿಬ್ಬರೂ ಗಾರ್ಡನ್‌ನಲ್ಲಿದ್ದ ಸ್ಟುಡಿಯೋದಲ್ಲಿದ್ದರು. ಯಾರೂ ಸುತ್ತಮುತ್ತ ಇರಲಿಲ್ಲ. ವಿಲ್ಲೆಮಿಯೆನ್ ತಾಯಿ ಜೊತೆಗೆ ಮನೆಯಲ್ಲಿದ್ದಳು. ಏರು ಮಧ್ಯಾಹ್ನದ ಸಮಯ. ಬಿಳಿಸುಣ್ಣದ ಗೋಡೆ ಮೇಲೆ ಒಂದಿಷ್ಟು ಬೆಳಕು ಬಿದ್ದಿತ್ತು. ವಿನ್ಸೆಂಟ್ ಪುಸ್ತಕದ ಮೇಲೆ ಮೃದುವಾಗಿ ಬೆರಳಾಡಿಸಿದ. ಥಿಯೋ ನಂತರ, ಸಂತೋಷದಿಂದ ತನಗೆ ಸಹಾಯ ಮಾಡಲು ಮುಂದಾದ ಮೊದಲ ವ್ಯಕ್ತಿ ಅವಳಾಗಿದ್ದಳು. ಪುಸ್ತಕವನ್ನು ಮಂಚದ ಮೇಲೆ ಎಸೆದು ಅವಳನ್ನು ಸೆಳೆದುಕೊಂಡು, ತೋಳುಗಳಿಂದ ಬಿಗಿಯಾಗಿ ಅಪ್ಪಿ ಹಿಡಿದ. ಅವನ ಪ್ರೀತಿಯಿಂದ ಹೊಲ, ಗದ್ದೆಗಳಲ್ಲಿ ಅಡ್ಡಾಡುವಾಗ ಇಷ್ಟೊಂದು ಪ್ರೀತಿ ಮಾಡಲು ಆಗಿರಲಿಲ್ಲ. ಯಾರಾದರೂ ನೋಡಿ ಬಿಟ್ಟರೆ ಎನ್ನುವ ಭಯವೂ ಇತ್ತು. ಮಾರ್ಗ್‌ರ್ಟ್, ತನ್ನನ್ನು ಪ್ರೀತಿಸಲು ವಿನ್ಸೆಂಟ್‌ಗೆ ಒಪ್ಪಿಸಿಕೊಳ್ಳುವಾಗ, ಹೃದಯ ಪೂರ್ವಕವಾಗಿ, ಸರ್ವ ಸಮರ್ಪಣೆಯ ಭಾವದೊಂದಿಗೆ ಒಪ್ಪಿಸಿಕೊಳ್ಳುತ್ತಿದ್ದಳು. ಕ್ರಿಸ್ಟೀನ್‌ಳಿಂದ ದೂರವಾಗಿ ಐದು ತಿಂಗಳಾಗಿತ್ತು. ಪೂರ್ತಿಯಾಗಿ ಇಂತಹ ಪ್ರೀತಿಯನ್ನು ನಂಬಲೂ ಹೆದರುತ್ತಿದ್ದ. ಆದ್ದರಿಂದಲೇ ಎಚ್ಚರದಿಂದ ಇರುತ್ತಿದ್ದ. ತನ್ನಿಂದ ಮಾರ್ಗ್‌ರ್ಟ್‌ಳಿಗಾಗಲೀ, ಅವಳ ಪ್ರೀತಿಗಾಗಲಿ ನೋವಾಗಬಾರದೆಂದು ಬಯಸುತ್ತಿದ್ದ.

ಅವಳ ಕಂದು ಬಣ್ಣದ ಕಣ್ಣುಗಳಲ್ಲಿ ಕಣ್ಣಿಟ್ಟು ಮುತ್ತುಕೊಟ್ಟ. ಅವಳು ಅವನತ್ತ ಮುಗುಳ್ನತೆ ಬೀರಿದಳು. ಅವನ ಮುತ್ತನ್ನು ಸ್ವೀಕರಿಸಲು ತುಟಿ ಬಿಡಿಸಿದಳು. ಮನಸು, ದೇಹಗಳು ಒಂದೆಂಬಂತೆ, ಬಿಗಿಯಾಗಿ ಒಬ್ಬರನ್ನೊಬ್ಬರು ಅಪ್ಪಿ ಹಿಡಿದರು. ಹಾಸಿಗೆ ಒಂದೆರಡು ಹೆಜ್ಜೆ ದೂರದಲ್ಲಷ್ಟೇ ಇತ್ತು. ಇಬ್ಬರೂ ಕುಳಿತರು. ಬಿಗಿದುಕೊಂಡ ಅಪ್ಪುಗೆಯಲ್ಲಿ, ಪ್ರೀತಿ ರಹಿತವಾಗಿ, ಬರಡಾಗಿ ಇದ್ದ ಹಿಂದಿನ ತಮ್ಮ ಬದುಕನ್ನು ಪೂರ್ತಿಯಾಗಿ ಮರೆತರು.

ಸೂರ್ಯ ಮುಳುಗಿದ. ಗೋಡೆಯ ಮೇಲಿನ ಬೆಳಕು ಮರೆಯಾಯಿತು. ಸಂಜೆಯ ಎಳೆಗತ್ತಲು ಕೋಣೆಯನ್ನು ತುಂಬಿತು. ಮಾರ್ಗ್ರಾಟ್, ವಿನ್ಸೆಂಟ್‌ನ ಮುಖದ ಮೇಲೆ ಬೆರಳಾಡಿಸಿದಳು. ಪ್ರೀತಿಯ ಉತ್ಕಟತೆ, ಉಸಿರಾಟದ ಸದ್ದಿನಲ್ಲಿ ಕಾಣಿಸುತ್ತಿತ್ತು. ವಿನ್ಸೆಂಟ್‌ಗೆ ತಾನು ಅಧಃ ಪಾತಾಳಕ್ಕೆ ಇಳಿಯುತ್ತಿದ್ದೇನೆ.... ಅಲ್ಲಿಂದ ಮೇಲೆ ಬರಲು ನನಗಿರುವುದು ಒಂದೇ ಒಂದು ದಾರಿ – ಎಂದೆನಿಸಿತು. ಕೂಡಲೆ ಅವಳ ಬಿಗಿಯಪ್ಪುಗೆಯಿಂದ ಬಿಡಿಸಿಕೊಂಡು, ಅವಳನ್ನು ದೂರ ತಳ್ಳಿ, ಥಟ್ಟನೆ ಎದ್ದು ನಿಂತ. ಈಸಲ್ ಬಳಿಗೆ ಹೋಗಿ ಅದಕ್ಕಿದ್ದ ಕಾಗದವನ್ನು ಎಳೆದು ಮುದ್ದೆ ಮಾಡಿ ಎಸೆದ. ಅಕೇಸಿಯಾ ಮರಗಳ ಮೇಲಿಂದ ಮ್ಯಾಗ್‌ಪೈಗಳ ಕೂಗು, ಮನೆಗೆ ಮರಳುತ್ತಿದ್ದ ಹಸುಗಳ ಕೊರಳಿನ ಗಂಟೆಗಳ ಸದ್ದು ಹೊರತು, ಬೇರೆ ಯಾವುದೇ ಸದ್ದು ಕೇಳಿಸುತ್ತಿರಲಿಲ್ಲ. ಒಂದು ಕ್ಷಣದ ನಂತರ ಮಾರ್ಗ್ರಾಟ್ ಮೆಲ್ಲನೆ ಹೇಳಿದಳು.

"ಡಿಯರ್, ನೀನು ಬಯಸಿದರೆ, ಮುಂದುವರೆಸು."

"ಯಾಕೆ?" ಹಿಂತಿರುಗಿ ನೋಡದೆ ಉತ್ತರಿಸಿದ.

"ಯಾಕೇಂದ್ರೆ, ನಿನ್ನನ್ನು ಪ್ರೀತಿಸುತ್ತಿದ್ದೇನೆ."

"ಆದ್ರೂ ಅದು ಸರಿಯಲ್ಲ."

"ವಿನ್ಸೆಂಟ್ ಇದಕ್ಕೂ ಮೊದಲೇ ಹೇಳಿದ್ದೆ. ರಾಜ ತಪ್ಪು ಮಾಡೋಕೆ ಸಾಧ್ಯವೇ ಇಲ್ಲ, ಅಂತ!"

ಕೆಳಗೆ ಮಂಡಿಯೂರಿ ಕುಳಿತ. ಅವಳ ತಲೆಹಾಸಿಗೆ ಮೇಲಿತ್ತು. ಅವನು ಅವಳ ಮುಖವನ್ನು ಗಮನಿಸಿದ. ಒಂದು ಮುತ್ತು ಕೊಟ್ಟ. ನಂತರ ಅವಳ ಬಾಯಿ, ಕಣ್ಣು, ಮೂಗು, ತುಟಿ, ನುಣುಪಾದ ಚರ್ಮ– ಹೀಗೆ ಎಲ್ಲ ಕಡೆಗಳಲ್ಲಿ ಮುತ್ತುಗಳನ್ನು ಬಿತ್ತಿದ. ಈಗ ಅವಳ ವಯಸ್ಸು ಹತ್ತು ವರುಷ ಹಿಂದೆ ಸರಿದಿದೆ ಎನಿಸಿತು. ಮತ್ತೊಮ್ಮೆ ನೋಡಿದ. ಮತ್ತೂ ಹತ್ತು ವರ್ಷ ಕಡಿಮೆಯಾಗಿ ಇಪ್ಪತ್ತರ ಹರಯದವಳಂತೆ ಕಾಣಿಸಿದಳು.

"ನಾನೂ ನಿನ್ನನ್ನು ಪ್ರೀತಿಸುತ್ತಿದ್ದೇನೆ ಮಾರ್ಗ್ರಾಟ್ ಮೊದಲು ನನಗೆ ಗೊತ್ತಿರಲಿಲ್ಲ. ಈಗ ಅರ್ಥವಾಗಿದೆ."

"ಇದನ್ನು ಹೇಳೋಕೆ ನೀನು ಎಷ್ಟು ಒಳ್ಳೆಯವನು ಡಿಯರ್" ಅವಳ ದನಿ ಇಂಪಾಗಿ, ಮೃದುವಾಗಿ ಇತ್ತು. ..... ನನಗೆ ಗೊತ್ತು, ನನ್ನ ಮೇಲೆ ನಿನಗೆ ಸ್ವಲ್ಪ ಪ್ರೀತಿ

ಇದೆ. ಆದರೆ ನಾನು ನಿನ್ನನ್ನು ಪೂರ್ತಿಯಾಗಿ ಪ್ರೀತಿಸ್ತೇನೆ. ಇದರಿಂದ ನನಗೆ ತೃಪ್ತಿ ಸಿಗುತ್ತೆ."

ಅವನು ಮಾರ್ಗಾಟ್‌ಳನ್ನು, ಉರ್ಸುಲಾ, ಕೇ, ಕ್ರಿಸ್ಟೀನ್ – ಇವರುಗಳನ್ನು ಪ್ರೀತಿಸಿದಷ್ಟು ಗಾಢವಾಗಿ ಪ್ರೀತಿಸಲಿಲ್ಲ. ಆದರೂ ಇವಳ ಬಗ್ಗೆ ಏನೋ ಒಂದು ಬಗೆಯ ಮೃದು ಧೋರಣೆ ಅಷ್ಟೆ. ತನ್ನ ತೋಳುಗಳ ನಡುವೆ ಮುಗ್ಧಳಾಗಿ ಮಲಗಿರುವ ಇವಳನ್ನು ಕಂಡು ಕನಿಕರವೆನಿಸಿತು. ತನ್ನೆಲ್ಲ ಪ್ರೀತಿಯನ್ನು ತನಗೆ ಧಾರೆ ಎರೆದಿದ್ದಾಳೆ. ಆದರೆ ತನಗೆ? ಸ್ವಲ್ಪ ಮಾತ್ರವೇ ಕೊಡಲು ಸಾಧ್ಯವಾಗಿದೆ. ಅವನಿಗೆ ಗೊತ್ತು. ಉತ್ಕಟವಾದ ಪ್ರೀತಿಗೆ ಪ್ರತಿಯಾಗಿ ಉತ್ಕಟವಾದ ಪ್ರೀತಿ ದೊರೆಯದಿದ್ದರೆ ಎಷ್ಟು ಹಿಂಸೆಯಾಗುತ್ತದೆಂಬುದನ್ನು ತನ್ನ ಅನುಭವದಿಂದ ಬಲ್ಲವನಾಗಿದ್ದ. ಮಾರ್ಗಾಟ್‌ಳ ಉತ್ಕರ್ಷಸ್ಥಿತಿಯ ಪ್ರೀತಿಯನ್ನು ಅನುಭವಿಸಿದ್ದನಾದರೂ, ಮನದ ಮೂಲೆಯಲ್ಲೆಲ್ಲೋ ಒಂದು ಕಡೆ, ಮಾತಿನಲ್ಲಿ ವಿವರಿಸಲಾಗದ ನಿರಾಸಕ್ತಿ ಇದ್ದುದು ಅವನ ಅರಿವಿಗೆ ಬಂದಿತ್ತು. ಹಲಗೆಗಳ ನೆಲದ ಮೇಲೆ ಮಂಡಿಯೂರಿ, ತನ್ನೆರಡು ಕೈಗಳನ್ನು, ಆ ಹೆಣ್ಣಿನ ತಲೆಯಡಿ ಇರಿಸಿ, ಉರ್ಸುಲಾ ಮತ್ತು 'ಕೇ'ಳನ್ನು ತಾನು ಇದೇ ಉತ್ಕಟತೆಯೊಂದಿಗೆ ಪ್ರೀತಿಸಿದ್ದನ್ನು ನೆನಪುಮಾಡಿಕೊಂಡ. ಅವರಿಬ್ಬರೂ ತನ್ನನ್ನು ತಿರಸ್ಕರಿಸಲು ಇರಬಹುದಾದ ಕಾರಣ ಈಗ ಅವನಿಗೆ ಅರ್ಥವಾಗಿತ್ತು.

"ಮಾರ್ಗಾಟ್, ನನ್ನದು ಬಡವನ ಬದುಕು. ನೀನು ಅದನ್ನು ಹಂಚಿಕೊಳ್ಳುವುದಾದರೆ ನನಗೆ ಸಂತೋಷವಾಗುತ್ತದೆ."

"ನಿನ್ನೊಂದಿಗೆ ಹಂಚಿಕೊಳ್ಳಲು ಸಿದ್ಧವಾಗಿದ್ದೇನೆ, ಡಿಯರ್."

"ನಾವು ಇಲ್ಲೇ ನ್ಯೂನೆನ್‌ನಲ್ಲಿ ಇರಬಹುದು. ಮದುವೆಯಾದ ಮೇಲೆ ನೀನು ದೂರಗೀರ ಹೋಗಬೇಕೂಂತ ಯೋಚಿಸಿದ್ದೀಯ ಹೇಗೆ?"

ಅವನು ತೋಳುಗಳಿಗೆ ಪ್ರೀತಿಯಿಂದ ಮುಖವನ್ನು ಉಜ್ಜುತ್ತಾ ಹೇಳಿದಳು – "ರೂತ್ ಹೇಳಿದ್ದೇನು? ನೀನು ಎಲ್ಲಿಗೆ ಹೋದರೆ, ನಾನೂ ಅಲ್ಲಿಗೆ! ಎಂದಲ್ಲವೇ?"

–೬–

ಮಾರನೇ ದಿನ ತಮ್ಮಿಬ್ಬರ ವಿಷಯ ಎರಡೂ ಕುಟುಂಬಗಳಿಗೆ ತಿಳಿಸಿದಾಗ ಎದ್ದ ಬಿರುಗಾಳಿಯನ್ನು ಹೇಗೆ ತಡೆದುಕೊಳ್ಳಬೇಕೆಂದು ಮೊದಲೇ ಆಲೋಚಿಸಿರಲಿಲ್ಲ. ವಾನ್‌ಗೋ ಕುಟುಂಬಕ್ಕೆ ಅಭ್ಯಂತರವಿರಲು ಒಂದೇ ಒಂದು ಕಾರಣವೆಂದರೆ, ಥಿಯೋ ಕಳಿಸುವ ಹಣದಿಂದ ಬದುಕುತ್ತಿರುವ ವಿನ್ಸೆಂಟ್ ಮದುವೆಯಾದರೆ, ಹೆಂಡತಿಯನ್ನು ಹೇಗೆ ಕಾಪಾಡುತ್ತಾನೆ ಎಂಬುದು.

"ವಿನ್ಸೆಂಟ್, ಮೊದಲಿಗೆ ಸಂಪಾದನೆ ಮಾಡಿ ನೆಟ್ಟಗೆ ಬದುಕುವುದನ್ನು ಕಲಿ. ಆಮೇಲೆ ಬೇಕಾದರೆ ಮದುವೆ ಯೋಚನೆ ಮಾಡುವಿಯಂತೆ" ಎಂದು ತಂದೆ ಹೇಳಿದರು.

"ನಾನು ಮಾಡುತ್ತಿರುವ ಕೆಲಸ ಇನ್ನಷ್ಟು ಕಷ್ಟಪಟ್ಟು ಮಾಡಿದ್ದೇ ಆದರೆ, ನನಗೆ ದುಡ್ಡು ಬರಬೇಕಾದ ಸಮಯಕ್ಕೆ ಬಂದೇ ಬರುತ್ತೆ. ನನ್ನ ಬದುಕೂ ನೇರ ಆಗುತ್ತೆ."

''ಹಾಗಾದರೆ, ದುಡ್ಡು ಬರುವ ಸಮಯದವರೆಗೆ ಕಾದು ಆಮೇಲೆ ಮದುವೆಯಾಗು."

ಪಾದ್ರಿ ಮನೆಯಲ್ಲಿ ನಡೆದ ಗಲಾಟೆ, ಮಾರ್ಗಾಟ್ ಮನೆಯಲ್ಲಿ ಹೆಂಗಸರ ನಡುವೆ ನಡೆಯುತ್ತಿದ್ದ ಗಲಾಟೆ ಎದುರಿನಲ್ಲಿ ಏನೇನೂ ಆಗಿರಲಿಲ್ಲ. ಐದು ಜನ ಹೆಣ್ಣು ಮಕ್ಕಳನ್ನು ಮದುವೆಯಾಗದೆ ಮನೇಲಿ ಇರಿಸಿಕೊಂಡು ಪ್ರಪಂಚವನ್ನು ಎದುರಿಸುವುದು ಸುಲಭವಾಗಿರಲಿಲ್ಲ. ಒಬ್ಬಳು ಮದುವೆಯಾಗಿ ಹೋದರೆ, ಅದೂ ಈ ರೀತಿಯಲ್ಲಿ ಉಳಿದ ನಾಲ್ಕು ಹೆಣ್ಣುಮಕ್ಕಳ ಬದುಕು ಅಸಹನೀಯವಾಗುತ್ತದೆ. ಅದಕ್ಕೇ ಒಬ್ಬಳ ಸುಖಕ್ಕೆ ನಾಲ್ಕು ಜನ ಹೆಣ್ಣುಮಕ್ಕಳನ್ನು ದುಃಖಕ್ಕೆ ಈಡುಮಾಡುವುದಾಗಲೀ, ಬಲಿ ಕೊಡುವುದಾಗಲೀ ಸಾಧ್ಯವಾಗದ ಕೆಲಸವಾಗಿತ್ತು.

ಆದಿನ ಮಾರ್ಗಾಟ್ ವಿನ್ಸೆಂಟ್ ಜೊತೆ ಹೋಗಲಿಲ್ಲ. ಆದರೆ ಮಧ್ಯಾಹ್ನದ ಮೇಲೆ ಅವನ ಸ್ಟುಡಿಯೋಗೆ ಹೋದಳು. ಕಣ್ಣುಗಳು ಊದಿಕೊಂಡಿದ್ದವು; ಈಗ ನಲ್ವತ್ತು ದಾಟಿದ ಹೆಣ್ಣಂತೆ ಕಂಡಳು. ಅಸಹಾಯಕತೆಯ ಸ್ಥಿತಿಯಲ್ಲಿ ಅವನನ್ನು ಗಟ್ಟಿಯಾಗಿ ಆಲಂಗಿಸಿದಳು.

"ಇಡೀ ದಿನ ಅವರೆಲ್ಲ ನಿನ್ನನ್ನು ಬೈಬಾರದ ಮಾತುಗಳಿಂದ ಬೈದರು. ಅಷ್ಟೆಲ್ಲಾ ಬೈಗಳಿಗೆ ಪಾತ್ರನಾಗಿಯೂ ಒಬ್ಬ ಮನುಷ್ಯ ಬದುಕಲಿಕ್ಕೆ ಸಾಧ್ಯವಿದೆ ಅನ್ನುವುದು ನಾನು ಊಹಿಸಿಯೇ ಇರಲಿಲ್ಲ."

"ಅಂಥದ್ದೆಲ್ಲಾ ಕೇಳಬೇಕಾಗಿ ಬರುತ್ತೆ ಅನ್ನುವುದನ್ನು ನಿರೀಕ್ಷಿಸಿರಬೇಕು."

"ನಿರೀಕ್ಷಿಸಿದ್ದೆ. ಆದರೆ ಇಷ್ಟು ಅಸಹ್ಯವಾಗಿ, ಭಯಂಕರವಾಗಿ ಬೈಯ್ಯಬಹುದು ಅಂತ ಊಹಿಸಿರಲಿಲ್ಲ."

ತನ್ನ ತೋಳುಗಳನ್ನು ಮೃದುವಾಗಿ ಬಳಸಿ, ಕೆನ್ನೆಗೆ ಮುತ್ತುಕೊಟ್ಟ. "ಅವರ ವಿಚಾರ ಬಿಟ್ಟು ಬಿಡು. ನಾನು ನೋಡಿಕೊಳ್ತೇನೆ. ರಾತ್ರಿ ಊಟ ಆದ ಮೇಲೆ ನಿಮ್ಮ ಮನೆಗೆ ಬರ್ತೇನೆ. ಅವರಿಗೆ ತಿಳಿಸಿ ಹೇಳ್ತೇನೆ. ಒಪ್ಪಿಸಲು ಪ್ರಯತ್ನಿಸ್ತೇನೆ. ನಾನು ಅವರು ತಿಳಿದುಕೊಂಡಿರುವಷ್ಟು ಕೆಟ್ಟ ಮನುಷ್ಯ ಅಲ್ಲ ಅನ್ನುವುದನ್ನು ತಿಳಿಸಿ ಹೇಳಲು ಪ್ರಯತ್ನ ಮಾಡ್ತೇನೆ."

ಬೆಜೆಮನ್ ಮನೆ ಒಳಗೆ ಹೆಜ್ಜೆ ಇರಿಸುತ್ತಿದ್ದಂತೆಯೇ ಅಪರಿಚಿತರ, ಗೊತ್ತಿಲ್ಲದ ಜಾಗದಲ್ಲಿ ಇದ್ದೇನೆ ಎನ್ನುವುದು ಅವನಿಗೆ ತಿಳಿದಿತ್ತು. ಕೇವಲ ಆರು ಜನ ಹೆಂಗಸರಿಂದಲೇ ತುಂಬಿದ್ದ ಆ ಮನೆಯ ಪರಿಸರ ಏನೋ ವಿಚಿತ್ರ ಎನಿಸಿತು. ಯಾವ ಗಂಡು ಧ್ವನಿಯೂ ಅಲ್ಲಿ ಆ ವಿಚಿತ್ರ ಪರಿಸರವನ್ನು ಕದಡಿದಂತೆ ಕಾಣಿಸಲಿಲ್ಲ.

ಅವನನ್ನು ನಡುಮನೆಗೆ ಕರೆದೊಯ್ದರು. ಅದು ತಣ್ಣಗೆ, ಒಂದು ಬಗೆಯ ಕಿಮುಟು ವಾಸನೆಯಿಂದ ಕೂಡಿತ್ತು. ತುಂಬ ದಿನಗಳಿಂದ ಇಲ್ಲಿ ಯಾರೂ

ವಾಸವಾಗಿದ್ದಂತೆ ಕಾಣಲಿಲ್ಲ. ವಿನ್ಸೆಂಟ್ ನಾಲ್ಕೂ ಜನರ ಹೆಸರನ್ನು ತಿಳಿದಿದ್ದನಾದರೂ ಯಾರು ಯಾರು ಎನ್ನುವುದನ್ನು ಹೆಸರಿನಿಂದ ಗುರುತಿಸಲಾಗಿರಲಿಲ್ಲ. ಎಲ್ಲರೂ ಮಾರ್ಗ್ಗಾಟ್‌ಳ ಪ್ರತಿಬಿಂಬಗಳಂತೆ ತೋರಿದರು. ಮನೆ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ದೊಡ್ಡವಳು ವಿಚಾರಣೆಯ ಹೊಣೆ ಹೊತ್ತಿದ್ದಳು.

"ನೀನು ಮಾರ್ಗ್ಗಾಟ್‌ಳನ್ನು ಮದುವೆಯಾಗಬೇಕೂಂತ ಇದ್ದೀಯಂತೆ, ಅಂತ ಮಾರ್ಗ್ಗಾಟ್ ಹೇಳಿದಳು. ಆದರೆ ಹೇಗ್‌ನಲ್ಲಿರೋ ನಿನ್ನ ಹೆಂಡತಿಗೆ ಏನಾಯಿತು? ಅವಳೆಲ್ಲಿ?"

ವಿನ್ಸೆಂಟ್ ಕ್ರಿಸ್ಟೀನ್ ಬಗ್ಗೆ ವಿವರಿಸಿದ. ಕೋಣೆಯಲ್ಲಿ ಚಳಿ ಇನ್ನೂ ಹೆಚ್ಚಾದಂತೆನಿಸಿತು.

"ಮಿಜ್ನಹೀರ್ ವಾನ್‌ಗೋ ಈಗ ನಿನ್ನ ವಯಸ್ಸೆಷ್ಟು?"

"ಮೂವತ್ತೊಂದು."

"ಮಾರ್ಗ್ಗಾಟ್ ತನ್ನ ವಯಸ್ಸು ಎಷ್ಟೂಂತ......"

"ನನಗೆ ಗೊತ್ತು."

"ನೀನು ಎಷ್ಟು ಸಂಪಾದನೆ ಮಾಡ್ತಿದ್ದೀಯಾಂತ ಕೇಳಬಹುದೇನು?"

"ತಿಂಗಳಿಗೆ ನೂರೈವತ್ತು ಫ್ರ್ಯಾಂಕ್ ಸಿಗುತ್ತೆ."

"ಅದನ್ನು ಯಾವ ರೀತಿ ಸಂಪಾದನೆ ಮಾಡ್ತಿದ್ದೀ?"

"ನನ್ನ ತಮ್ಮ ನನಗೆ ಕಳಿಸಿಕೊಡ್ತಾನೆ."

"ಅಂದರೆ ಅವನು ನಿನಗೆ ಸಹಾಯ ಮಾಡ್ತಾನೆ."

"ಇಲ್ಲ. ಅದನ್ನು ತಿಂಗಳ ಸಂಬಳವಾಗಿ ಕೊಡ್ತಾನೆ. ಬದಲಾಗಿ ನಾನು ಪೈಂಟ್ ಮಾಡಿದ್ದೆಲ್ಲವನ್ನು ಅವನಿಗೆ ಕಳಿಸ್ತೇನೆ."

"ಎಷ್ಟನ್ನು ಅವನು ಮಾರಾಟ ಮಾಡ್ತಾನೆ?"

"ಸರಿಯಾಗಿ ಹೇಳೋಕೆ ಆಗೊಲ್ಲ."

"ಆದರೆ ನಾನು ಹೇಳ್ತೀನಿ. ನಿನ್ನ ತಂದೆ ಹೇಳಿದ್ರು ನೀನು ಇಲ್ಲೀವರೆಗೆ ಒಂದು ಪೈಂಟಿಂಗನ್ನೂ ಮಾರಿಲ್ಲವಂತೆ."

"ಅವನು ಸ್ವಲ್ಪ ಸಮಯದ ನಂತರ ಮಾರ್ತಾನೆ. ಯಾಕೆಂದರೆ ಈಗ ಅದಕ್ಕೆ ಬರುವ ಬೆಲೆಗಿಂತ ಹೆಚ್ಚು ಪಟ್ಟು ಬೆಲೆ ಬರತ್ತಂತೆ!"

"ಬಿಡು ಅದು ಅಂತ ಸಮಸ್ಯೆ ಅಲ್ಲ. ಈಗ ವಿಷಯಕ್ಕೆ ಬರೋಣ."

ಈ ಹಿರಿಯ ಸೋದರಿಯ ನಿಷ್ಠುರ ಸ್ವಭಾವ, ನೋಡಲು ಸುಂದರವಲ್ಲದ ಮುಖಗಳ ಬಗ್ಗೆ ಆಲೋಚಿಸಿದ. ಸಹಾನುಭೂತಿ ಬಹುಶಃ ಸಾಧ್ಯವಿರಲಾರದು."

"ನಿನಗೆ ಸಂಪಾದನೆಯ ಮಾರ್ಗವೆ ಇಲ್ಲವೆಂದ ಮೇಲೆ ಹೆಂಡತಿಯನ್ನು ಹೇಗೆ ಪೋಷಿಸುತ್ತೀ?"

"ನನ್ನ ತಮ್ಮ ನನ್ನ ಮೇಲೆ ನೂರೈವತ್ತು ಫ್ರ್ಯಾಂಕ್ ಉಡಾಯಿಸುತ್ತಾನೆ. ಅದು ಅವನಿಗೆ ಸಂಬಂಧಿಸಿದ್ದು. ಆದರೆ ಆ ಹಣ ನನಗೆ ಬರ್ತಾ ಇರೋದು ಸಂಬಳದ ಅರ್ಥದಲ್ಲಿ. ಅದನ್ನು ಗಳಿಸುವುದಕ್ಕೆ ನಾನು ತುಂಬಾ ಕಷ್ಟಪಡ್ತೀನಿ. ಸ್ವಲ್ಪ ಜಾಗರೂಕತೆಯಿಂದ ಖರ್ಚು ಮಾಡಿದರೆ, ಇಬ್ಬರ ಜೀವನಕ್ಕೆ ಬೇಕಾದಷ್ಟು ಆಗುತ್ತೆ!"

"ಹಾಗೆ ಮಾಡಬೇಕಾದ ಅಗತ್ಯ ಇಲ್ಲ. ನನ್ನನ್ನು ನಾನು ಪೋಷಿಸಿಕೊಳ್ಳೋಕೆ ನನ್ನಲ್ಲಿ ಸಾಕಷ್ಟು ಹಣ ಇದೆ" – ಗಟ್ಟಿಯಾಗಿ ಕಿರುಚಿ ಹೇಳಿದಳು.

"ಬಾಯ್ಮುಚ್ಚು ಮಾರ್ಗ್ರಾಟ್" – ಗದ್ದರಿಸಿ ಹೇಳಿದಳು ಅಕ್ಕ.

"ಮಾರ್ಗ್ರಾಟ್ ನೆನಪಿರಲಿ! ಮನೆ ಹೆಸರನ್ನು ಕೆಡಿಸುವುದಕ್ಕೆ ಪ್ರಯತ್ನ ಪಟ್ಟರೆ, ಯಾವುದೇ ಕ್ಷಣದಲ್ಲಿಯಾದರೂ ನಿನಗೆ ಬರುವ ಹಣವನ್ನು ತಡೆದು ನಿಲ್ಲಿಸಬಲ್ಲೆ."

ವಿನ್ಸೆಂಟ್ ಮುಗುಳ್ನಕ್ಕ – ನನ್ನನ್ನು ಮದುವೆಯಾಗುವುದರಿಂದ ಮನೆಗೆ ಕೆಟ್ಟ ಹೆಸರು ಬರುತ್ತೇನು?" ಪ್ರಶ್ನಿಸಿದ.

"ಮಿಜ್ನಹೀರ್ ವಾನ್‌ಗೋ, ದುರಾದೃಷ್ಟದ ಸಂಗತಿ ಎಂದರೆ, ನಿನ್ನ ಬಗ್ಗೆ ಹೆಚ್ಚಾಗಿ ನಮಗೇನೂ ಗೊತ್ತಿಲ್ಲ ಎಷ್ಟು ಸಮಯದಿಂದ ಪೈಂಟಿಂಗ್‌ನಲ್ಲಿ ತೊಡಗಿಸಿಕೊಂಡಿದ್ದೀ?"

"ಮೂರು ವರ್ಷ."

"ಆದರೂ ಇನ್ನೂ ನಿನಗೆ ಸಾಧಿಸಲು ಆಗಿಲ್ಲ."

"ಇನ್ನೂ ಎಷ್ಟು ದಿನ ಬೇಕಾಗಬಹುದು, ಯಶಸ್ವಿಯಾಗಲು?"

"ಗೊತ್ತಿಲ್ಲ."

"ಪೈಂಟಿಂಗ್ ಮಾಡೋಕೆ ಮೊದಲು ಏನು ಕೆಲಸ ಮಾಡ್ಕೊಂಡಿದ್ದೆ?"

"ಆರ್ಟ್‌ಡೀಲರ್, ಟೀಚರ್, ಪುಸ್ತಕ ವ್ಯಾಪಾರಿ, ಧಾರ್ಮಿಕ ಕಾರ್ಯಕರ್ತ, ತತ್ವಶಾಸ್ತ್ರ ವಿದ್ಯಾರ್ಥಿ ಇತ್ಯಾದಿ."

"ಎಲ್ಲ ರಈತಿಯಲ್ಲೂ ಸೋತೇನ್ನು!"

"ಇಲ್ಲ ನಾನೇ ಬೇಡವೆಂದು ಬಿಟ್ಟು ಬಂದೆ."

"ಯಾಕೆ?"

"ಅವು ನನಗೆ ಹಿಡಿಸಲಿಲ್ಲ."

"ಪೈಂಟಿಂಗ್ ಬಿಟ್ಟು ಬಿಡೋಕೆ ಎಷ್ಟು ಸಮಯಬೇಕು?"

"ಹಾಗೆಂದೂ ಬಿಡುವ ಮನಸ್ಸು ಮಾಡೋದೇ ಇಲ್ಲ ಅವನು!" ಎಂದು ಥಟ್ಟನೆ, ಗಟ್ಟಿಯಾಗಿ ಹೇಳಿದಳು ಮಾರ್ಗ್ರಾಟ್.

"ಮಿಜ್ನಹೀರ್ ವಾನ್‌ಗೋ, ನೀನು ಅವಳನ್ನು ಮದುವೆಯಾಗುವ ಕಲ್ಪನೆಯಲ್ಲಿದ್ದೀಯ. ನೀನು ಯಾತಕ್ಕೂ ಬಾರದವನಾಗಿದ್ದೀಯ. ನಿನ್ನದಾಗಿ ಒಂದು ಫ್ರ್ಯಾಂಕ್ ಕೂಡಾ ಇಲ್ಲ. ಅಥವಾ ಸಂಪಾದನೆಗೆ ದಾರಿಯೂ ಇಲ್ಲ. ಜೊತೆಗೆ ನೀನು

ಯಾವ ಕೆಲಸದಲ್ಲಿಯೂ ಖಾಯಂ ಆಗಿ ಉಳಿಯುವಂಥವನಲ್ಲ. ಅಂಥಾದ್ದರಲ್ಲಿ ನನ್ನ ತಂಗಿಯನ್ನು ನಿನಗೆ ಮದುವೆ ಮಾಡಿಕೊಡಲು ಹೇಗೆ ತಾನೇ ಧೈರ್ಯ ಬರುತ್ತೆ?"

ವಿನ್ಸೆಂಟ್ ಪೈಪ್ ಕೈಗೆತ್ತಿಕೊಂಡು ಮತ್ತೆ ಒಳಗಿರಿಸಿಕೊಂಡ.

"ಮಾರ್ಗಾಟ್ ನನ್ನನ್ನು ಪ್ರೀತಿಸುತ್ತಿದ್ದಾಳೆ. ನಾನು ಅವಳನ್ನು ಪ್ರೀತಿಸುತ್ತಿದ್ದೇನೆ. ಅವಳನ್ನು ಸಂತೋಷವಾಗಿರಿಸುತ್ತೇನೆ. ಇಲ್ಲಿ ಒಂದೆರಡು ವರ್ಷ ಇದ್ದು, ನಂತರ ಬೇರೆ ದೇಶಕ್ಕೆ ಹೋಗ್ತೇನೆ. ಅವಳಿಗೆ ಪ್ರೀತಿ, ಕರುಣೆಗಳು ಮಾತ್ರವೇ ಸದಾ ದೊರೆಯುತ್ತೆ ಅಂತ ಭರವಸೆ ಕೊಡ್ತೀನಿ."

"ಇಲ್ಲ, ಅವಳನ್ನು ಬಿಟ್ಟು ಹೋಗ್ತೀಯ." ಕೀರಲು ಧ್ವನಿಯಲ್ಲಿ ಉಳಿದ ಸೋದರಿಯರು ಹೇಳಿದರು.

"ಅವಳಿಂದ ಬೇಸರ ಆದ ಮೇಲೆ, ಅವಳನ್ನು ಬಿಟ್ಟು, ಹೇಗ್‌ನಲ್ಲಿ ಇದ್ದಳಲ್ಲ, ಅಂಥ ಯಾವಳಾದರೂ ಹೆಂಗಸಿನ ಹಿಂದೆ ಹೋಗ್ಬಿಡ್ತೀಯ!"

"ಅವಳ ಹಣಕ್ಕೋಸ್ಕರ, ಅವಳನ್ನು ಮದುವೆಯಾಗಬೇಕೂಂತಿದ್ದೀಯ" ಮತ್ತೊಬ್ಬಳು ಹೇಳಿದಳು.

"ಆದರೆ ಹಣ ನಿನಗೆ ಸಿಗೊಲ್ಲ!..... ನನ್ನ ಅಮ್ಮ ಅದು ಬರದೆ ಇರೋ ಹಾಗೆ ಮಾಡ್ತಾಳೆ" ಮೂರನೆಯವಳು ಹೇಳಿದಳು.

ಮಾರ್ಗಾಟ್‌ಳ ಕಣ್ಣು ಹನಿಯಿತು. ಇನ್ನು ಅಲ್ಲಿ ಕೂತು ಕೆಲಸಕ್ಕೆ ಬಾರದ ಪ್ರಶ್ನೆಗಳನ್ನು ಕೇಳೋದು ವ್ಯರ್ಥ ಅಂತ ಅನ್ನಿಸಿ ಅಲ್ಲಿಂದೆದ್ದ. ಏನಿಲ್ಲ ಸುಮ್ಮನೆ ಮಾರ್ಗಾಟಳನ್ನು ಮದುವೆಯಾಗಿ ಪ್ಯಾರಿಸ್‌ಗೆ ಹೊರಟುಬಿಡೋದೆ ಸರಿ ಅನಿಸಿತು. ಬ್ರಬಾಂಟ್‌ನಿಂದ ಕೂಡಲೇ ಹೋಗುವುದು ಅವನಿಗೆ ಇಷ್ಟವಿರಲಿಲ್ಲ. ಇನ್ನೂ ಇಲ್ಲಿ ಮಾಡಬೇಕಾಗಿದ್ದ ಕೆಲಸ ಮುಗಿದಿರಲಿಲ್ಲ. ಆದರೆ ಭಾವನೆಗಳೇ ಇಲ್ಲದ ಆ ದುಷ್ಟಹೆಂಗಸರ ನಡುವೆ ಮಾರ್ಗಾಟ್‌ಳನ್ನು ಬಿಟ್ಟು ಹೋಗಲು ಹೆದರಿಕೆಯಾಯಿತು.

ಮಾರ್ಗಾಟ್‌ಳ ದುಃಖ ಹೆಚ್ಚಾಯಿತು. ನೋವಿನಲ್ಲಿಯೇ ದಿನ ಕಳೆದಳು. ವಿನ್ಸೆಂಟ್ ಚಳಿಗಾಲ ಬರುತ್ತಿದ್ದ ಹಾಗೆ ಸ್ಟುಡಿಯೊ ಒಳಗಿದ್ದೇ ಕೆಲಸ ಮುಂದುವರೆಸಿದ. ಮಾರ್ಗಾಟ್‌ಳನ್ನು ಹೊರಗೇ ಬಿಡುತ್ತಿರಲಿಲ್ಲ. ಬೆಳಿಗ್ಗೆ ಎದ್ದಾಗಿನಿಂದ ಹಿಡಿದು ರಾತ್ರಿ ಮಲಗುವವರೆಗೆ, ಬೆಳಿಗ್ಗೆ ಎದ್ದಾಗಿನಿಂದ ಹಿಡಿದು ರಾತ್ರಿ ಮಲಗುವವರೆಗೆ, ವಿನ್ಸೆಂಟ್‌ನ ಬಗ್ಗೆ ಕೆಟ್ಟ ಕೆಟ್ಟ ಮಾತುಗಳನ್ನು ಕೇಳಲೇ ಬೇಕಾದ ವಿವಶತೆಗೆ ದೂಡಿದ್ದರು.....

ಮನೆಯವರ ಜೊತೆ ನಲ್ವತ್ತು ವರ್ಷದಿಂದ ಬದುಕಿದ್ದಾಳೆ. ವಿನ್ಸೆಂಟ್‌ನ ಪರಿಚಯ ಆದದ್ದು ಮೊನ್ನೆ ಮೊನ್ನೆ! ಆದರೂ ತನ್ನ ಅಕ್ಕ ತಂಗಿಯರ ಬಗ್ಗೆ ಅಸಹ್ಯ ಪಟ್ಟುಕೊಂಡಳು; ದ್ವೇಷಿಸಿದಳು. ತನ್ನ ಬದುಕನ್ನೇ ಹಾಳು ಮಾಡಿದರೆಂದು ರೇಗಾಡಿದಳು. ಆದರೆ ದ್ವೇಷವೂ ಅರ್ಥವಾಗದ ಒಂದು ಪ್ರೀತಿಯ ಅಸ್ಪಷ್ಟ ರೂಪವೇ ಆಗಿರುತ್ತದೆ. ಕೆಲವೊಮ್ಮೆ ಅದರಲ್ಲಿ ಕರ್ತವ್ಯ ಪ್ರಜ್ಞೆ ಜಾಗ್ರತವಾಗುತ್ತದೆ.

"ನೀನು ನನ್ನ ಜೊತೆ ಯಾಕೆ ಬರೊಲ್ಲ? ಇಲ್ಲ ಇಲ್ಲಿಯೇ ಅವರೆದುರೇ ಯಾಕೆ ಮದುವೆಯಾಗೋಕೆ ಒಪ್ಪುವುದಿಲ್ಲ? ನನಗಂತೂ ನಿನ್ನ ಮನಸೇ ಅರ್ಥ ಆಗ್ತಿಲ್ಲ."

"ಅವರು ಬಿಡುವುದಿಲ್ಲ."

"ನಿನ್ನಮ್ಮ?"

"ನನ್ನ ಸೋದರಿಯರು ಹೇಳೋ ಮಾತಿಗೆ ಅಷ್ಟೊಂದು ಬೆಲೆ!"

"ನಾನು ನಿನಗೆ ಹೇಳಿದ್ದು ನೆನಪಿರಬೇಕಲ್ಲ?.... ನಾನು ಹುಡುಗಿಯಾಗಿದ್ದಾಗ ಒಬ್ಬ ಹುಡುಗನನ್ನು ತುಂಬಾ ಪ್ರೀತಿಸಿದ್ದೆ?"

"ಹೌದು."

"ಅದನ್ನು ತಪ್ಪಿಸಿದರು ನನ್ನ ಸೋದರಿಯರು. ಯಾಕೇಂತ ಗೊತ್ತಾಗಲಿಲ್ಲ. ಜೀವನದ ಉದ್ದಕ್ಕೂ ಬಯಸಿದ್ದೆಲ್ಲವನ್ನೂ ಹೀಗೆ ತಪ್ಪಿಸುತ್ತಾ ಬಂದಿದ್ದಾರೆ. ನೆಂಟರ ಮನೆಗೆ ಹೋಗೋದಕ್ಕೆ ಬಿಡ್ತಿರಲಿಲ್ಲ; ಓದಬೇಕೂಂತ ಆಸೆ ಪಟ್ಟರೆ, ಮನೇಲಿ ಪುಸ್ತಕ ತರೋಕೇ ಬಿಡಲಿಲ್ಲ. ಪ್ರತಿಸಲವೂ ಯಾರನ್ನಾದರೂ ಗಂಡಸರನ್ನು ಮನೆಗೆ ಆಹ್ವಾನಿಸಿದರೆ. ಹೋದ ಮೇಲೆ ಆತನನ್ನು ಬೈದೂ ಬೈದೂ ಚಿಂದಿಮಾಡಿ ಹಾಕಿಬಿಡುತ್ತಿದ್ದರು. ಮತ್ತೆಂದೂ ಗಂಡಸೊಬ್ಬನನ್ನು ನೋಡುವ ಸಾಹಸಕ್ಕೆ ಹೋಗುವ ಹಾಗಿರಲಿಲ್ಲ. ಜೀವನದಲ್ಲಿ ಏನಾದರೂ ಆಗಬೇಕು ಎಂದು ನರ್ಸಾಗಲು ಯೋಚಿಸದೆ; ಓದಲು, ಸಂಗೀತ ಕಲಿಯಲು ಯೋಚಿಸಿದೆ.... ಆದರೆ...... ಅದೊಂದೂ ಆಗಲು ಸಾಧ್ಯವಾಗಲಿಲ್ಲ. ಯಾವುದಕ್ಕೂ ಬಿಡುತ್ತಿರಲಿಲ್ಲ. ಅವರು ಏನು ಮಾಡಿದರೆ ಅದನ್ನೇ ಮಾಡಬೇಕು. ಹೇಗೆ ಹೇಳಿದರೆ ಹಾಗೇ ಹೇಳಬೇಕು. ಅವರು ಏನು ಯೋಚಿಸಿದರೆ ಅದನ್ನೇ ಯೋಚಿಸಬೇಕು. ಅವರಂತೆಯೇ ಬದುಕಬೇಕು."

"ಈಗ?"

"ಈಗೇನು? ನಿನ್ನನ್ನು ಮದುವೆಯಾಗಲು ಬಿಡೊಲ್ಲ."

ಹೊಸದಾಗಿ ಪಡೆದುಕೊಂಡಿದ್ದ ಜೀವನೋತ್ಸಾಹ, ಸೋರಿ ಹೋಗಿತ್ತು. ಅವಳ ಧ್ವನಿ, ನಡೆ, ನುಡಿಯಿಂದ ಗುರುತಿಸಬಹುದಾಗಿತು. ಮುಖ, ತುಟಿಗಳು ಬಾಡಿದ್ದವು. ಚರ್ಮದಲ್ಲಿ ಸುಕ್ಕುಗಳು ಕಾಣಿಸಿದವು. ಕಣ್ಣಿನ ಕೆಳಗೆ ಕಪ್ಪು ಗೆರೆಗಳು ಮೂಡಿದ್ದವು.

"ನೀನೇನೂ ಯೋಚನೆ ಮಾಡಬೇಡ ಮಾರ್ಗ್ರಾಟ್. ನಾವು ಮದುವೆಯಾಗೋಣ, ಅಷ್ಟೇ? ನನ್ನ ತಮ್ಮ ನನ್ನನ್ನು ಪ್ಯಾರಿಸ್‌ಗೆ ಬಂದು ಬಿಡು ಅಂತ ಪದೇ ಪದೇ ಹೇಳ್ತಿದ್ದ. ನಾವು ಅಲ್ಲಿಗೆ ಹೋಗಿ ಬಿಡೋಣ."

ಅವಳು ಉತ್ತರಿಸಲಿಲ್ಲ. ಹೋಗಿ ಹಾಸಿಗೆ ತುದೀಲಿ ಕುಳಿತು ನೆಲವನ್ನು ನೋಡುತ್ತಿದ್ದಳು. ಸ್ವಲ್ಪ ಪಕ್ಕಕ್ಕೆ ತಿರುಗಿದಳು. ಅವನು ಅವಳ ಪಕ್ಕಕ್ಕೆ ಬಂದು ಕುಳಿತು. ಅವಳ ಕೈಯನ್ನು ಹಿಡಿದುಕೊಂಡ.

"ಅವರ ಒಪ್ಪಿಗೆ ಇಲ್ಲದೆ ನನ್ನನ್ನು ಮದುವೆಯಾಗಲು ಹೆದರಿಕೆಯೇನು?"

"ಇಲ್ಲ..... ನಾನು ಆತ್ಮಹತ್ಯೆ ಮಾಡಿಕೊಳ್ತೇನೆ. ನಿನ್ನಿಂದ ನನ್ನನ್ನು ಬೇರೆ ಮಾಡಿದರೆ, ನಾನು ಬದುಕಿ ಇರೋದಿಲ್ಲ. ನನಗೆ ನೀನಿಲ್ಲದೆ ಒಂದು ಕ್ಷಣವೂ ಬದುಕಿರಲು ಸಾಧ್ಯವಿಲ್ಲ..... ಸಾಯ್ತೇನೆ..... ಅಷ್ಟೇ!"

"ಅವರಿಗೆ ಗೊತ್ತಾಗಬೇಕಾದ್ದಿಲ್ಲ. ಮೊದಲು ಮದುವೆ ಮಾಡಿಕೊಳ್ಳೋಣ. ಆಮೇಲೆ ಹೇಳೋಣ."

"ಅವರಿಗೆ ವಿರುದ್ಧ ಹೋಗೋಕೆ ನನ್ನ ಕೈಲಿ ಆಗೊಲ್ಲ."

"ಅವರ ಜೊತೆ ಜಗಳ ಮಾಡಬೇಡ. ಮದುವೆ ಆಗಿ ಬಿಡು. ಅಲ್ಲಿಗೆ ಮುಗೀತು!"

"ಅಲ್ಲಿಗೆ ಮುಗಿಯೊಲ್ಲ. ಮೊದಲಾಗುತ್ತೆ. ನನ್ನ ಅಕ್ಕತಂಗಿಯರ ವಿಚಾರ ನಿನಗೆ ಗೊತ್ತಿಲ್ಲ."

"ಗೊತ್ತು ಮಾಡಿಕೊಳ್ಳೊ ಆಸೇನೂ ನನಗಿಲ್ಲ. ಈ ರಾತ್ರಿ ಮತ್ತೊಮ್ಮೆ ಬಂದು ಪ್ರಯತ್ನ ಮಾಡ್ತೀನಿ."

ಅವನಿಗೆ ಗೊತ್ತಿತ್ತು. ತನ್ನ ಪ್ರಯತ್ನಕ್ಕೆ ಫಲ ಸಿಗೊಲ್ಲ, ಅಂತ. ಈಗ ನಡುಮನೆ, ಅಲ್ಲಿನ ಚಳಿ ಎಲ್ಲ ಮರೆತು ಹೋಗಿತ್ತು.

"ಮಿಜ್ನಹೀರ್, ಅದನ್ನೆಲ್ಲ ಕೇಳಿದ್ದಾಗಿದೆ. ಅವೆಲ್ಲದರಿಂದ ನಮಗೆ ಸಮಾಧಾನಾನೂ ಆಗೋದಿಲ್ಲ; ಪ್ರಭಾವಿತರೂ ಆಗೋದಿಲ್ಲ. ಈ ವಿಷಯದಲ್ಲಿ ನಿರ್ಧಾರ ತಗೊಂಡಾಗಿದೆ. ಮಾರ್ಗ್‌ಟ್ ಸಂತೋಷವಾಗಿರಬೇಕು ಅನ್ನೋದು ನಮ್ಮಾಸೆ, ಅವಳು ತನ್ನ ಬದುಕನ್ನು ಹೀಗೆ ಹಾಳು ಮಾಡಿಕೊಳ್ಳೋಕೆ ನಾವು ಬಿಡೋದಿಲ್ಲ. ನಾವಂತೂ ನಿರ್ಧಾರ ಮಾಡಿದ್ದಾಗಿದೆ. ನೋಡೋಣ, ಎರಡು ವರ್ಷಗಳ ನಂತರ ಇನ್ನೂ ಅವಳನ್ನು ಮದುವೆ ಆಗಬೇಕೂಂತ ಆಸೆ ಪಡೋದಾದರೆ, ಆಗ ಬಹುಶಃ ನಮ್ಮ ಅಭಿಪ್ರಾಯವನ್ನು ವಾಪಸ್ ಪಡೀತೇವೆ."

"ಎರಡು ವರ್ಷ!" ವಿನ್ಸೆಂಟ್ ಆಶ್ಚರ್ಯದಿಂದ ಉದ್ಗರಿಸಿದ.

"ಎರಡು ವರ್ಷದಲ್ಲಿ, ನಾನಿಲ್ಲಿ ಇರೋದೇ ಇಲ್ಲ" ಮಾರ್ಗ್‌ಟ್ ಉತ್ತರಿಸಿದಳು.

"ಎಲ್ಲಿರ್ತೀಯ?"

"ಸತ್ತಿರ್ತೀನಿ...... ಅವನನ್ನು ಮದುವೆಯಾಗಲು ಬಿಡದಿದ್ದರೆ ನಾನು ಸಾಯ್ತೀನಿ."

ಅಬ್ಬರದ ಮಾತುಗಳು ಕೇಳಿಸಿದವು.

"ಎಷ್ಟು ಧೈರ್ಯ ನಿನಗೆ. ಹೀಗೆಲ್ಲ ಮಾತಾಡೋಕೆ!"

"ಅವನ ಕೆಟ್ಟ ಪ್ರಭಾವ ಇವಳ ಮೇಲೆ ಎಷ್ಟಾಗಿದೆ ನೋಡು!"

ವಿನ್ಸೆಂಟ್ ಅಲ್ಲಿಂದ ತಪ್ಪಿಸಿಕೊಂಡ. ಹೇಳೋಕೆ ಇನ್ನೇನೂ ಉಳಿದಿರಲಿಲ್ಲ.

ಮನೆಯವರ ದಬ್ಬಾಳಿಕೆಯಿಂದ ನಲುಗಿದ ಮಾರ್ಗ್‌ಟ್ ಪೂರ್ತಿಯಾಗಿ ಕುಸಿದು ಹೋದಳು. ಮಾನಸಿಕ ಧೈರ್ಯ, ದೈಹಿಕ ಶಕ್ತಿಗಳು ಉಡುಗಿದವು. ಆರೋಗ್ಯ ಹದಗೆಟ್ಟಿತು. ಉತ್ಸಾಹವೂ ಕರಗಿ ಹೋಯಿತು. ದಿನೇ ದಿನೇ, ಕೃಶವಾಗುತ್ತಾ, ಇತ್ತೀಚೆಗೆ ಗಳಿಸಿಕೊಂಡಿದ್ದ

ಸಂತೋಷದಿಂದ ಹಿಂದಕ್ಕೆ ಸರಿದಿದ್ದ ವಯಸ್ಸು, ಮತ್ತೆ ಮುಂದೋಡಿ, ಮುಪ್ಪಿನ ಲಕ್ಷಣಗಳು ಕಾಣಿಸಿಕೊಂಡವು. ದುಃಖ, ವಿಷಾದಗಳಿಂದ ತುಂಬಿದ ಕಣ್ಣು, ಕಾಂತಿಯನ್ನು ಕಳೆದುಕೊಂಡಿತ್ತು. ಮುಖದಲ್ಲಿ ಮುಪ್ಪಿನ ಗೆರೆಗಳು ಅಲ್ಲಲ್ಲಿ ಎದ್ದು ಕಾಣಿಸಿದವು.

ಅವಳ ಬಗೆಗೆ ತಳೆದಿದ್ದ ಪ್ರೀತಿಯೂ ಅವಳ ಸೌಂದರ್ಯದೊಂದಿಗೆ ಬತ್ತಿ ಹೋಯಿತು. ವಾಸ್ತವವಾಗಿ ವಿನ್ಸೆಂಟ್ ಅವಳನ್ನು ಪ್ರೀತಿಸಿಯೂ ಇರಲಿಲ್ಲ. ಮದುವೆ ಆಗಬೇಕೂ ಎಂದುಕೊಂಡಿರಲಿಲ್ಲ. ಈಗ ಇನ್ನೂ ಬೇಕೆನಿಸಲಿಲ್ಲ. ಅವಳನ್ನು ಪ್ರೀತಿಸುವಲ್ಲಿ ದುಡುಕಿ ಅನಾಹುತ ಸೃಷ್ಟಿ ಮಾಡಿದ್ದಕ್ಕಾಗಿ ತನ್ನನ್ನು ತಾನೇ ಹಳಿದುಕೊಂಡ; ತನ್ನಲ್ಲಿ ತಾನೇ ನಾಚಿದ. ತನ್ನ ಪ್ರೀತಿಯನ್ನು ಈ ಮಟ್ಟಕ್ಕೆ ಅದೂ ನಿಜವಾದ ಭಾವನೆಗಳೆಂದು ಅರ್ಥಮಾಡಿಕೊಂಡಿದ್ದಾಳೆಯೇ ಎಂಬುದು ಮಾತ್ರ ತಿಳಿದಿರಲಿಲ್ಲ.

"ಅವರಿಗಿಂತ ಹೆಚ್ಚಾಗಿ ನನ್ನನ್ನು ಪ್ರೀತಿಸುತ್ತಿರುವಿಯಾ ಮಾರ್ಗರೆಟ್?" ಎಂದು, ಒಮ್ಮೆ ಮನೆಯವರಿಂದ ಕಣ್ತಪ್ಪಿಸಿ, ವಿನ್ಸೆಂಟ್‌ನ ಸ್ಟುಡಿಯೋಗೆ ಬಂದಾಗ ಪ್ರಶ್ನಿಸಿದ್ದ.

ದಿಗ್ಭ್ರಮಿತಳಂತೆ, ಅವನತ್ತ ನೋಡುತ್ತಾ,

"ಓಹ್ ವಿನ್ಸೆಂಟ್!" ಎಂದಳು.

"ಹಾಗಾದರೆ ನನ್ನನ್ನು ಬಿಟ್ಟುಕೊಡೋಕೆ, ಯಾಕೆ ಒಪ್ಪಿಕೊಳ್ತಾ ಇದ್ದೀಯ?"

ಆಯಾಸಗೊಂಡ ಮಗುವಿನಂತೆ ಅವನ ತೋಳುಗಳ ಆಸರೆಯನ್ನು ಪಡೆದಳು. ಧ್ವನಿ ಕ್ಷೀಣವಾಗಿತ್ತು.

"ನಾನು ನಿನ್ನನ್ನು ಪ್ರೀತಿಸುವಷ್ಟೇ ನೀನೂ ನನ್ನನ್ನು ಪ್ರೀತಿಸುತ್ತಿದ್ದೀಯ ಎನಿಸಿದ್ದರೆ, ಜಗತ್ತನ್ನೇ ಎದುರಿಸಲು ಸಿದ್ಧಳಾಗುತ್ತಿದ್ದೆ. ಆದರೆ ನನ್ನ ಪ್ರೀತಿ ನಿನಗೆ ಕೇವಲ ಸ್ವಲ್ಪ..... ಅವರಿಗೆ ಅದೆಷ್ಟೋ!"

"ಮಾರ್ಗಾಟ್ ನೀನು ತಪ್ಪು ತಿಳಿದಿದ್ದೀಯ. ನಿನ್ನನ್ನು ನಾನು ಪ್ರೀತಿಸುತ್ತಿದ್ದೇನೆ...."

ಅವಳು ಬೆರಳನ್ನು ಅವನ ತುಟಿಯ ಮೇಲಿಟ್ಟು,

"ಇಲ್ಲ ಡಿಯರ್, ಪ್ರೀತಿ ಮಾಡಬೇಕು ಎಂದುಕೊಳ್ಳುತ್ತೀಯ...... ಆದರೆ ಅದು ನಿನ್ನಿಂದ ಸಾಧ್ಯವಾಗುತ್ತಿಲ್ಲ...... ಅದಕ್ಕಾಗಿ ಬೇಜಾರು ಮಾಡ್ಕೋ ಬೇಡ. ನಿನ್ನನ್ನು ಅತಿಯಾಗಿ ಪ್ರೀತಿಸುವವಳು ನಾನಾಗಬೇಕು, ಅಷ್ಟೇ!"

"ಅವರಿಂದ ದೂರ ಬಂದು, ನೀನೇ ಸ್ವತಂತ್ರವಾಗಿ ಬದುಕಬಾರದೇಕೆ?"

"ನಿನಗೆ ಶಕ್ತಿ ಇದೆ. ಎದುರಿಸಬಲ್ಲೆ...... ಆದರೆ ನನಗೆ ನಲವತ್ತರ ಪ್ರಾಯ...... ನಾನು ಹುಟ್ಟಿದ್ದು ಇಲ್ಲಿ....... ನ್ಯೂನೆನ್‌ನಲ್ಲಿ. ಇಂಥೋವನ್ ದಾಟಿ ಹೋದವಳಲ್ಲ ನಾನು. ನಿನಗೆ ಗೊತ್ತಾಗೊಲ್ವೆ? ನಾನು ಎಂದೂ ಯಾರಿಂದಲೂ, ನನ್ನ ಜೀವನದಲ್ಲಿ ಸಂಬಂಧಗಳನ್ನು ಮುರಿದುಕೊಂಡು ಹೋದವಳಲ್ಲ."

"ಓ ಹಾಗೋ."

"ವಿನ್ಸೆಂಟ್, ನಿನಗೇನಾದರೂ ಬೇಕು ಎನಿಸಿದ್ದರೆ, ನನ್ನ ಶಕ್ತಿಮೀರಿ ಹೋರಾಡುತ್ತೇನೆ. ಆದರೆ ಇಲ್ಲಿ...... ನನಗೆ ಬೇಕಾದ್ದು...... ಅದೂ ಬಹಳ ತಡವಾಗಿ..... ನನ್ನ ಜೀವನ ಇಷ್ಟು ಹೊತ್ತಿಗೆ ಮುಗಿದಿರಬೇಕು....."

ಧ್ವನಿ ಉಡುಗಿತು. ಅವಳ ಮಾತು ಪಿಸುಮಾತಾಗಿತ್ತು. ಮೆಲ್ಲನೆ ಅವನು ಅವಳ ಗಲ್ಲವನ್ನು ಮೇಲೆತ್ತಿ, ಕಣ್ಣಲ್ಲಿ ಕಣ್ಣಿಟ್ಟ. ಕಣ್ಣು ಒದ್ದೆಯಾಗಿದ್ದವು.

"ನನ್ನ ಪ್ರೀತಿಯ ಹುಡುಗಿ. ಮಾರ್ಗ್ರಾಟ್, ಕಡೆ ತನಕ ನಾವಿಬ್ಬರೂ ಒಟ್ಟಿಗೆ ಬದುಕಬಹುದು.... ನೀನು ಒಪ್ಪುವುದಾದರೆ! ನೀನು ಮಾಡಬೇಕಾದ್ದು ಇಷ್ಟೆ..... ಎಲ್ಲ ಮಲಗಿರುವಾಗ ನಿನ್ನ ಬಟ್ಟೆ ಬರೆ ಗಂಟು ಕಟ್ಟಿ ಕಿಟಕಿಯಿಂದ ನನ್ನ ಕಡೆ ಕೊಟ್ಟು ಬಿಡು. ಇಂಥೋವನ್‌ಗೆ ಹೋಗಿ, ಅಲ್ಲಿಂದ ಪ್ಯಾರಿಸ್ ಟ್ರೈನ್ ಹತ್ತಿ ಬಿಡೋಣ."

"ಹಾಗಾಗೊಲ್ಲ ವಿನ್ಸೆಂಟ್. ಅವರೆಲ್ಲ ನನ್ನ ಅಸ್ತಿತ್ವದ ಭಾಗ, ನಾನು ಅವರ ಅಸ್ತಿತ್ವದ ಭಾಗ. ಆದರೆ ಕಡೇಲಿ, ನನ್ನ ದಾರಿ ನನ್ನದು."

"ನೀನು ಹೀಗೆ ದುಃಖ ಪಡೋದು, ನನ್ನಿಂದ ನೋಡೋಕೆ ಆಗೊಲ್ಲ."

ಅವಳು ಅವನತ್ತ ಮುಖ ತಿರುಗಿಸಿದಳು. ಕಂಬನಿ ಮರೆಯಾಗಿತ್ತು. ನಕ್ಕಳು.

"ಇಲ್ಲ ವಿನ್ಸೆಂಟ್, ನಾನು ಸಂತೋಷವಾಗಿಯೇ ಇದ್ದೇನೆ. ನಾನು ಬಯಸಿದ್ದು ನನಗೆ ಸಿಕ್ಕಿದೆ. ನಿನ್ನನ್ನು ಪ್ರೀತಿಸಿದ್ದೇ ಒಂದು ಅದ್ಭುತ ಅನುಭವ."

ಅವಳ ತುಟಿಗೆ ಮುತ್ತಿಟ್ಟ. ಕಂಬನಿಯಿಂದ ತೊಯ್ದಿದ್ದ ತುಟಿಗಳು, ವಿನ್ಸೆಂಟ್‌ನ ನಾಲಿಗೆಗೆ ಉಪ್ಪಿನ ರುಚಿ ನೀಡಿದವು.

"ಮಂಜು ಬೀಳೋದು ನಿಂತಿದೆ. ನಾಳೆಯಿಂದ ಸ್ಕೆಚ್ ಮಾಡಲು ಫೀಲ್ಡ್ ಕಡೆ ಹೋಗ್ತೀಯ ಹೇಗೆ!"

"ಬಹುಶಃ ಹೋಗಬಹುದು."

"ಎಲ್ಲಿರ್ತೀಯ? ಮಧ್ಯಾಹ್ನ, ಆದರೆ, ಅಲ್ಲಿಗೆ ಬರ್ತೇನೆ."

ಮಾರನೆ ದಿನ ತುಂಬ ಹೊತ್ತು ಕೆಲಸ ಮಾಡಿದ. ತಲೆ ಮೇಲೆ ಉಣ್ಣೆ ಟೋಪಿ. ಕತ್ತಿನ ಸುತ್ತ ಮಫ್ಲರ್. ಆಕಾಶ ಹೊಂಬಣ್ಣದಿಂದ ಕೂಡಿತ್ತು. ದೂರದ ಗುಡಿಸಲುಗಳ ಕಿಟಕಿಗಳು ಕಾಣಿಸುತ್ತಿದ್ದವು.

ಮಾರ್ಗ್ರಾಟ್ ಹೊಲ, ಬಯಲುಗಳನ್ನು ದಾಟುತ್ತಾ ಬಂದಳು. ಮೊದಲನೆ ಸಲ ಭೇಟಿಯಾದಾಗ, ತೊಟ್ಟಿದ್ದ ಬಿಳಿ ಉಡುಪನ್ನೇ ಈಗಲೂ ಧರಿಸಿದ್ದಳು. ಅವಳ ಕೆನ್ನೆಯಲ್ಲಿ ಸ್ವಲ್ಪ ಬಣ್ಣ ಬಂದಂತೆನಿಸಿತು. ಮತ್ತೆ ಪ್ರಾಯದ ಸೌಂದರ್ಯ ಮರುಕಳಿಸಿದಂತೆ ಕಾಣಿಸಿತು. ಕೈಯಲ್ಲಿ ಒಂದು ಬುಟ್ಟಿ ಹಿಡಿದಿದ್ದಳು.

ಅವನ ಕತ್ತನ್ನು ತೋಳುಗಳಿಂದ ಬಳಸಿ ಅಪ್ಪಿದಳು. ಅವಳ ಹೃದಯ ಬಡಿತವನ್ನು ಫೀಲ್ ಮಾಡಿದ. ಅವಳ ಕಣ್ಣುಗಳತ್ತ ನೋಡಿದ. ದುಃಖ, ವಿಷಾದಗಳು ಮರೆಯಾಗಿದ್ದವು.

"ಏನಿದು? ಮನೇಲಿ ಏನಾದರೂ ನಡೀತಾ?"

"ಇಲ್ಲ.... ಇಲ್ಲ.... ಹಾಗೆ.... ಸಂತೋಷವಾಗಿರಬೇಕು ಅಂದುಕೊಂಡೆ, ಇದ್ದೀನಿ! ಅಷ್ಟೇ!"

"ಇಂಥ ಲೈಟ್ ಕಲರ್ ಬಟ್ಟೆಯಲ್ಲಿ ಯಾಕೆ ಬಂದೆ?"

ಒಂದು ಕ್ಷಣ ಮೌನವಾಗಿದ್ದಳು. ನಂತರ ಹೇಳಿದಳು.

"ವಿನ್ಸೆಂಟ್, ನೀನೆಷ್ಟೇ ದೂರ ಹೋಗಿರು, ಒಂದು ಮಾತ್ರ ನೆನಪಿರಲಿ."

"ಏನದು ಮಾರ್ಗ್ಗಾಟ್?"

"ನಾನು ನಿನ್ನನ್ನು ಪ್ರೀತಿಸಿದ್ದೆ –ಅನ್ನೋದು! ಪ್ರಪಂಚದಲ್ಲಿ ಯಾವ ಹೆಣ್ಣಿಗೂ ಸಾಧ್ಯವಾಗದಷ್ಟು ಹೆಚ್ಚಿಗೆ ಪ್ರೀತಿಸಿದ್ದು ನಾನು! ಇದನ್ನು ನೆನಪಿನಲ್ಲಿರಿಸಿಕೋ."

"ಯಾಕೆ ಇಷ್ಟೊಂದು ನಡುಗುತ್ತಿರುವಿ?"

"ಏನಿಲ್ಲ. ನನ್ನನ್ನು ತಡೆದು ಹಿಡಿದಿದ್ದರು. ಅದಕ್ಕೆ ಸ್ವಲ್ಪ ತಡವಾಯಿತು. ನಿನ್ನ ಕೆಲಸ ಮುಗೀತಾ ಬಂತೇನು?"

"ಇನ್ನೊಂದು ಸ್ವಲ್ಪ ಇದೆ."

"ಸರಿ ಹಾಗಾದರೆ, ನೀನು ಕೆಲಸ ಮಾಡ್ತಿರು. ನಾನು ನಿನ್ನ ಹಿಂದೆ ಕೂತಿರ್ತೇನೆ. ಹಿಂದೆ ಮಾಡ್ತಿದ್ದೆನಲ್ಲ, ಹಾಗೆ! ನಾನು ತೊಂದರೆ ಕೊಡೊಲ್ಲ..... ನಾನು ಪ್ರೀತಿ ಮಾಡೋಕೆ ಅವಕಾಶ ಕೊಡು, ಅಷ್ಟೇ!"

"ಆಯ್ತು, ಮಾರ್ಗ್ಗಾಟ್" ಇದಕ್ಕಿಂತ ಹೆಚ್ಚಿಗೆ ಏನೂ ಹೇಳಲಾರದವನಾಗಿದ್ದ.

"ಹಾಗಾದರೆ ಹೋಗು. ನಿನ್ನ ಕೆಲಸ ನೀನು ನೋಡ್ಕೋ. ಬೇಗ ಮುಗಿಸು. ಇಬ್ಬರೂ ಒಟ್ಟಿಗೆ ಮನೆ ಕಡೆ ಹೋಗೋಣ. ಮತ್ತೆ ಚಳಿಯಿಂದ ನಡುಗಿದಳು. "ವಿನ್ಸೆಂಟ್ ಕೆಲಸ ಶುರು ಮಾಡೋಕೆ ಮೊದಲು ಒಂದು ಮುತ್ತು ಕೊಡು..... ಅದೇ ಆ ದಿನ.... ನಿನ್ನ ಸ್ಟುಡಿಯೋದಲ್ಲಿ..... ನಾವಿಬ್ಬರೂ ಒಬ್ಬರೊಬ್ಬರ ತೋಳತೆಕ್ಕೆಯಲ್ಲಿ ಇದ್ದೆವಲ್ಲ..... ಆಗ....."

ಮೃದುವಾಗಿ ಅವಳನ್ನು ಮುದ್ದಿಸಿದ. ಅವಳು ಅವನ ಹಿಂದೆ ಕುಳಿತಳು. ಸೂರ್ಯ ಮುಳುಗಿದ. ಇಡೀ ಪ್ರದೇಶವನ್ನು ಸಂಜೆ ಆವರಿಸಿತು. ಹಳ್ಳಿಯ ಆ ಪ್ರಶಾಂತತೆ ಅವರಿಬ್ಬರನ್ನೂ ಕವಿಯಿತು.

ಬಾಟಲಿನ ಸದ್ದಾಯಿತು. ಮಾರ್ಗ್ಗಾಟ್ ಚೀರುತ್ತಾ ಎದ್ದುನಿಂತಳು. ನಂತರ ಭಾವೋದ್ರೇಕದ ತೀವ್ರತೆಯಿಂದ ನೆಲದ ಮೇಲೆ ಕುಸಿದಳು. ವಿನ್ಸೆಂಟ್ ತಕ್ಷಣವೇ ಜಿಗಿದು ಅವಳ ಮುಂದೆ ಬಂದ. ಅವಳ ಕಣ್ಣು ಮುಚ್ಚಿತ್ತು. ಮೊಗದ ಮೇಲೆ ಒಂದು ಬಗೆಯ ತಿರಸ್ಕಾರದ ನಗೆ ಕಾಣಿಸಿತು. ಒಂದೇ ಸಮನೆ ಕಂಪಿಸತೊಡಗಿದಳು. ಅವಳ ದೇಹ ಸೆಡೆತುಕೊಂಡಂತಾಗಿ ಹಿಂದಕ್ಕೆ ಬಿದ್ದಳು. ಕೈಗಳು ನಿಶ್ಚಲವಾಗಿ ಹರಡಿಕೊಂಡಿದ್ದವು. ವಿನ್ಸೆಂಟ್ ಬಾಟಲು ಬಿದ್ದಿದ್ದ ಕಡೆ ನೋಡಿದ. ಮಂಜಿನಲ್ಲಿ ಬಿದ್ದಿತ್ತು. ಬಾಟಲಿನ ಬಾಯಿಯ ಹತ್ತಿರ ಬಿಳಿ ಬಣ್ಣದ ದ್ರವ ಒಂದಿಷ್ಟು ಕಾಣಿಸಿತು. ಆದರೆ ಅದರಲ್ಲಿ ವಾಸನೆಯೇನೂ ಇರಲಿಲ್ಲ.

ಮಾರ್ಗಾಟ್‌ಳನ್ನು ಎತ್ತಿ ತೋಳಲ್ಲಿ ಇರಿಸಿಕೊಂಡು ಬಯಲಿನ ಕಡೆ ಹುಚ್ಚನಂತೆ ಓಡಿದ. ನ್ಯೂನೆನ್‌ನಿಂದ ಒಂದು ಕಿಲೋಮೀಟರ್ ದೂರದಲ್ಲಿದ್ದ ಊರು ಸೇರುವುದಕ್ಕೆ ಮೊದಲೇ ಎಲ್ಲಿ ಪ್ರಾಣ ಹೋಗುತ್ತೋ ಎಂದು ಹೆದರಿದ. ರಾತ್ರಿ ಊಟದ ಸಮಯವಾಗಿತ್ತಾದರೂ ಇನ್ನೂ ಜನ ತಮ್ಮ ಮನೆ ಬಾಗಿಲುಗಳ ಮುಂದೆ ಕುಳಿತಿದ್ದರು. ವಿನ್ಸೆಂಟ್ ಊರೊಳಗೆ ಬಂದನಾದರೂ ಬೆಜೆಮೆನ್‌ರ ಮನೆಗೆ ತಲುಪಬೇಕಾದರೆ ಇನ್ನೂ ಸಾಕಷ್ಟು ದೂರ ನಡೆಯಬೇಕಿತ್ತು. ಅವಳನ್ನು ತೋಳುಗಳಲ್ಲಿ ಮಲಗಿಸಿಕೊಂಡೆ ಓಡಿ ಓಡಿಬಂದ. ಕಡೆಗೂ ಬೆಜೆಮೆನ್‌ರ ಮನೆ ತಲುಪಿದ. ಜೋರಾಗಿ ಬಾಗಿಲನ್ನು ಒದ್ದು ಒಳಗೆ ಪ್ರವೇಶಿಸಿ, ನಡುಮನೆ ಸೋಫಾದ ಮೇಲೆ ಅವಳನ್ನು ಮಲಗಿಸಿದ. ತಾಯಿ ಮತ್ತು ಸೋದರಿಯರು ಓಡೋಡಿ ಬಂದರು.

"ಮಾರ್ಗಾಟ್ ವಿಷ ತಗೊಂಡಿದ್ದಾಳೆ. ಹೋಗಿ ಡಾಕ್ಟರನ್ನು ಕರೆದುಕೊಂಡು ಬರ್ತೇನೆ!"

ಓಡಿ ಹೋಗಿ, ಊಟಕ್ಕೆ ಕುಳಿತಿದ್ದ ಹಳ್ಳಿ ಡಾಕ್ಟರನ್ನು ಎಳೆದು ತಂದ.

"ವಿಷ ತಗೊಂಡಿರೋದು ಖಾತ್ರೀನಾ?" ವೈದ್ಯ ಕೇಳಿದ.

"ಹಾಗೇ ಅನ್ನಿಸಿತು."

"ನೀನು ಅವಳನ್ನು ಮನೆಗೆ ತಂದಾಗ ಇನ್ನೂ ಬದುಕಿದ್ದಳೇನು?"

"ಹೌದು."

ದಿವಾನ್ ಮೇಲೆ ಮಲಗಿಸಿದ್ದಾಗ, ಮಾರ್ಗಾಟ್ ಇನ್ನೂ ಮುಲಗುತ್ತಿದ್ದಳು. ಡಾಕ್ಟರ್ ಅವಳ ಮೇಲೆ ಬಾಗಿ ನೋಡಿದ.

"ವಿಷ ಸರಿ. ಆದರೆ ಅದರ ಜೊತೆ ನೋವನ್ನು ಮರೆಸುವ ಮತ್ತೇನನ್ನೋ ತೆಗೆದುಕೊಂಡಿದ್ದಾಳೆ. ನೋಡಿದರೆ ಲಾಡ್‌ನವ್ ಇದ್ದ ಹಾಗೆ ಇದೆ. ಅವಳಿಗೆ ಗೊತ್ತಿಲ್ಲದೆಯೇ ಅದು ವಿಷಹಾರಿಯಾಗಿ ಕೆಲಸ ಮಾಡಿದೆ."

"ಹಾಗಾದರೆ ಅವಳು ಬದುಕುತ್ತಾಳೆಯೇ ಡಾಕ್ಟರ್?"

"ಬದುಕುಳಿಯಬಹುದಾದ ಅವಕಾಶವೇನೋ ಇದೆ. ಆದಷ್ಟು ಬೇಗ ಅವಳನ್ನು ಉಟ್ರೆಕ್‌ಗೆ ಕರೆದುಕೊಂಡು ಹೋಗಬೇಕು. ಅವಳನ್ನು ಆಬ್ಸರ್‌ವೇಷನ್‌ನಲ್ಲಿ ಇಟ್ಟಿರಬೇಕಾಗುತ್ತೆ."

"ಉಟ್ರೆಕ್‌ನಲ್ಲಿ ಯಾವ ಆಸ್ಪತ್ರೆ ಚೆನ್ನಾಗಿರುತ್ತೆ?"

"ಆಸ್ಪತ್ರೆ ಬೇಡಾಂತ ಅನ್ಸತ್ತೆ. ಸದ್ಯಕ್ಕೆ ಅವಳನ್ನು ಆರೋಗ್ಯ ಸುಧಾರಣಾ ಕೇಂದ್ರಕ್ಕೆ ಕರೆದುಕೊಂಡು ಹೋಗಬೇಕು. ನನಗೆ ಒಳ್ಳೆ ಜಾಗ ಗೊತ್ತಿದೆ. ನಿಮ್ಮ ಗಾಡಿಗೆ ಹೇಳಿಕಳಿಸಿ. ಇಂಧೋವಿನ್‌ನಿಂದ ಹೊರಡುವ ಕಡೆಯ ಟ್ರೈನ್ ಹಿಡಿಯಬೇಕಾಗುತ್ತೆ.

ವಿನ್ಸೆಂಟ್ ಕತ್ತಲ ಮೂಲೆಯೊಂದರಲ್ಲಿ ಮೌನವಾಗಿ ನಿಂತಿದ್ದ. ಮನೆ ಮುಂದೆ ಗಾಡಿ ಬಂತು. ಡಾಕ್ಟರ್ ಮಾರ್ಗಾಟ್‌ಳನ್ನು ಒಂದು ಕಂಬಳಿಯಲ್ಲಿ ಸುತ್ತಿ ಹೊರಗೆ ತಂದ. ಅವನ ಮನೆಯವರು ಪಾದ್ರಿಯ ಮನೆಯ ಮುಂದೆ ನಿಂತಿದ್ದರು.

ಮಾರ್ಗ್ರಾಟ್‌ಳನ್ನು ಎತ್ತಿಕೊಂಡು ಬಂದಾಗ ನೀರವ ಮೌನ ಕವಿದಿತ್ತು. ಅವಳನ್ನು ಗಾಡಿಯಲ್ಲಿ ಇರಿಸಿದ. ಹೆಂಗಸರು ಒಳಗೆ ಕುಳಿತರು. ಅದರ ಪಕ್ಕದಲ್ಲಿ ವಿನ್ಸೆಂಟ್ ನಿಂತಿದ್ದ. ಡಾಕ್ಟರ್ ಲಗಾಮು ಕೈಲಿ ಹಿಡಿದ. ಮಾರ್ಗ್ರಾಟ್‌ಳ ತಾಯಿ ವಿನ್ಸೆಂಟ್ ಕಡೆ ತಿರುಗಿ ಗಟ್ಟಿಯಾಗಿ "ನೀನೇ ಮಾಡಿದ್ದು. ನನ್ನ ಮಗಳನ್ನು ಕೊಂದವನು ನೀನೇ" ಎಂದು ಚೀರಿದಳು.

ನೆರೆದಿದ್ದ ಗುಂಪು ವಿನ್ಸೆಂಟ್‌ನತ್ತ ನೋಡಿತು. ಡಾಕ್ಟರ್ ಚಾಟಿ ಬೀಸಿದ. ಗಾಡಿ ರಸ್ತೆ ದಾಟಿ ಮರೆಯಾಯಿತು.

–೭–

ಅವನ ತಾಯಿ ಕಾಲು ಮುರಿದುಕೊಳ್ಳುವ ಮುಂಚೆ ಊರಿನವರು ಅವನನ್ನು ಗಮನಿಸುತ್ತಲೇ ಇರಲಿಲ್ಲ. ಅವನ ಬಗ್ಗೆ ಸ್ನೇಹ, ವಿಶ್ವಾಸಗಳಿರಲಿಲ್ಲ. ಅವನ ರೀತಿಯೇ ಯಾರಿಗೂ ಅರ್ಥವಾಗಿರಲಿಲ್ಲ. ಹಾಗಂತ ಅವರೇನೂ ಪೂರ್ತಿಯಾಗಿ ದ್ವೇಷಿಸುತ್ತಿರಲಿಲ್ಲ. ಆದರೆ ಈಗ ಅವನನ್ನು ಕಂಡರೆ ಸಿಟ್ಟಾಗುತ್ತಿದ್ದರು. ಅತಿಯಾಗಿ ದ್ವೇಷಿಸುತ್ತಿದ್ದರು. ಅವನು ಮಾತಾಡಲು ಪ್ರಯತ್ನಿಸಿದರೂ ಬೆನ್ನು ತಿರುಗಿಸಿ ಹೊರಟು ಹೋಗುತ್ತಿದ್ದರು. ಯಾರೂ ಮಾತಾಡುವವರಿಲ್ಲದೆ, ನೋಡುವವರಿಲ್ಲದೆ, ಒಂದು ರೀತಿಯಲ್ಲಿ ಅವನು ಅಸ್ಪೃಶ್ಯನಾಗಿದ್ದ.

ಅವನು ಇದನ್ನೆಲ್ಲ ಹೆಚ್ಚಿಗೆ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ನೇಕಾರರು, ರೈತರು ಇನ್ನೂ, ಅವನ ಬಗ್ಗೆ ಸ್ನೇಹದಿಂದಲೇ ಇದ್ದರು. ಆದರೆ ಜನ ಚರ್ಚಿಗೆ ಬರುವುದನ್ನು ನಿಲ್ಲಿಸಿದಾಗ, ಪರಿಸ್ಥಿತಿಯ ಗಂಭೀರತೆ ಅರಿವಾಗಿ, ಅಲ್ಲಿಂದ ಹೊರಟುಬಿಡಬೇಕೆಂದುಕೊಂಡ.

ಬ್ರಬಾಂಟ್ ಬಿಟ್ಟು ಹೋಗಿ, ತಂದೆ ತಾಯಿ ನೆಮ್ಮದಿಯಿಂದ ಇರಲು ಅವಕಾಶ ಮಾಡಿಕೊಡುವುದೊಂದೇ ದಾರಿ ಎಂದು ತಿಳಿದಿದ್ದರೂ ಹೋಗುವುದಾದರೂ ಎಲ್ಲಿಗೆ? ಜೀವನ ಪರ್ಯಂತ, ಇಲ್ಲಿಯೇ, ತನ್ನ ಹುಟ್ಟೂರಿನಲ್ಲಿಯೇ ಇರಬೇಕು. ಇಲ್ಲಿನ ನೇಕಾರರು, ರೈತರು, ಗ್ರಾಮೀಣ ಸೌಂದರ್ಯದ ರೈತ ಹುಡುಗಿಯರು ಇವರೇ ಇವನ ಕಲೆಯ ಭಾಗವಾಗಿದ್ದರು. ಚಳಿಗಾಲದ ಕೊರೆವ ಮಂಜು, ಮಾಗಿಯ ಹಣ್ಣೆಲೆಗಳು, ಬೇಸಿಗೆಯಲ್ಲಿ ಫಸಲಿಗೆ ಬಂದ ಹೊಲದಲ್ಲಿನ ತೆನೆಗಳು, ವಸಂತದಲ್ಲಿ ಹುಲುಸಾಗಿ ಬೆಳೆದ ಮರಗಿಡ, ಹುಲ್ಲುಗಾವಲುಗಳು, ತಲೆ ಮೇಲೆ ವಿಶಾಲವಾದ ಆಕಾಶ, ಚಳಿಗಾಲದಲ್ಲಿ ಬೆಚ್ಚಗಿಡುವ ಬೆಂಕಿಯ ಸಾಮೀಪ್ಯ – ಎಲ್ಲವೂ ಅಲ್ಲಿನ ಅವನ ಬದುಕಿನ, ಅಸ್ತಿತ್ವದ ಅನನ್ಯ ಭಾಗವಾಗಿತ್ತು. ಅದು ಎಂದೆಂದಿಗೂ ತನಗೆ, ತನ್ನೊಡನಾಟಕ್ಕೆ ಇರಲೇಬೇಕೆಂದುಕೊಂಡಿದ್ದ.

ಮಿಲ್ಲೆಟ್‌ನ ಕಥಾಪುರುಷ ಆಂಜೆಲೆಸ್ ಮಾತ್ರವೇ ದೈವಿಕವಾದುದನ್ನು ಸೃಷ್ಟಿಮಾಡಬಲ್ಲವನಾಗಿದ್ದ. ಕೃಷಿಕರ ಬದುಕಿನಲ್ಲಿ ಮಾತ್ರವೇ ಸತ್ಯ – ವಾಸ್ತವತೆಗಳನ್ನು

ಗುರುತಿಸಿದ್ದ. ಕ್ಯಾನ್‌ವಾಸನ್ನು ಹೊತ್ತು, ಅಲೆದಾಡಬೇಕಾದಾಗ, ಅವನ ಕಷ್ಟ ಸಾಮಾನ್ಯವಾಗಿರಲಿಲ್ಲ. ಕ್ರಿಮಿಕೀಟಗಳನ್ನು ಹೊಸಕಿ ಹಾಕಬೇಕಿತ್ತು. ಧೂಳು ಮರಳು ಕ್ಯಾನ್‌ವಾಸ್‌ಗೆ ಮೆತ್ತಿಕೊಂಡಿದ್ದುದನ್ನು ಕೆರೆಕೆರೆದು ತೆಗೆಯಬೇಕಿತ್ತು. ಆದರೆ ಹಿಂತಿರುಗಿಬಂದಾಗ ಅವನಿಗೆ ತಿಳಿಯುತ್ತಿತ್ತು, ತಾನು ಸರಳತೆಯ ಮೂಲಕ ಸತ್ಯ-ವಾಸ್ತವತೆಗಳಿಗೆ ಹತ್ತಿರವಾಗಿದ್ದೇನೆ ಎಂದು. ಅವನ ಕೃತಿಗಳಲ್ಲಿ ಹೊಮ್ಮುವ ಹಂದಿಮಾಂಸದ, ಹೊಗೆಯ, ಬೇಯುವ ಆಲೂಗಡ್ಡೆಯಿಂದ ಹೊಮ್ಮುವ ಉಗಿಯ ವಾಸನೆ ಅನಾರೋಗ್ಯಕರವಲ್ಲ. ಸಗಣಿ ವಾಸನೆ, ನಿಜವಾದ ಸಗಣಿಯಾಗಿತ್ತು. ಹೊಲಗಳಲ್ಲಿ ಪಕ್ವವಾದ ತೆನೆಗಳು ಆರೋಗ್ಯಕರವಾದ್ದು.

ತನ್ನ ಸಮಸ್ಯೆಯನ್ನು ಅತ್ಯಂತ ಸರಳವಾಗಿ, ಸುಲಭವಾಗಿ ಪರಿಹರಿಸಿಕೊಂಡ. ಮನೆಯಿಂದ ಸ್ವಲ್ಪ ದೂರದಲ್ಲಿ ಒಂದು ಕ್ಯಾಥೋಲಿಕ್ ಚರ್ಚ್ ಇತ್ತು. ಅದರ ಪಕ್ಕದಲ್ಲಿ ಒಂದು ಮನೆಯಿತ್ತು. ಅದು ಒಂದು ರೀತಿಯಲ್ಲಿ ವಸತಿಗೃಹವಾಗಿತ್ತು. ಅದರ ಮಾಲಿಕ ಜೊಹಾನ್ನಸ್ ಟೈಲರ್ ಆಗಿದ್ದ. ಚರ್ಚ್‌ನ ನಿರ್ವಹಣೆ ಬಿಟ್ಟ ಮೇಲೆ, ಟೈಲರ್ ಕೆಲಸ ಮಾಡುತ್ತಿದ್ದ. ಅವನ ಹೆಂಡತಿ ಆಡ್ರಿಯಾನ ತುಂಬ ಒಳ್ಳೇ ಹೆಂಗಸು. ವಿನ್ಸೆಂಟ್‌ಗೆ ಎರಡು ಕೋಣೆ ಬಿಟ್ಟುಕೊಟ್ಟಳು. ಈ ಕೆಲಸದಿಂದ ಅವಳಿಗೆ ಸಂತೋಷವೇ ಆಗಿತ್ತು. ಊರಿನ ಜನವೆಲ್ಲ ಸಹಾಯ ಮಾಡದೆ ಅವನಿಗೆ ಬೆನ್ನು ತಿರುಗಿಸಿದ್ದರು. ಅಸಹಾಯಕನಾಗಿ ಬಂದಿದ್ದವನಿಗೆ ಸ್ವಲ್ಪ ನೆರವಾಗುವುದು ಅವಳಿಗೆ ತೃಪ್ತಿಕರವೆನಿಸಿತ್ತು.

ಷಾ ಫ್ರಾತ್‌ನ ಮನೆಯ ಮಧ್ಯಭಾಗದಲ್ಲಿ ಪಡಸಾಲೆಯಿದ್ದು, ಅದರ ಬಲಗಡೆಗೆ ಮನೆಯವರಿಗೆಂದು ಕೋಣೆಗಳಿದ್ದವು. ಎಡಗಡೆ ಒಂದು ದಿವಾನ್‌ಖಾನೆಯಿದ್ದು ಅದು ರಸ್ತೆ ಕಡೆಗೆ ಮುಖಮಾಡಿತ್ತು. ಹಿಂದುಗಡೆ ಒಂದು ಸಣ್ಣಕೋಣೆಯಿತ್ತು. ದಿವಾನ್‌ಖಾನೆ ವಿನ್ಸೆಂಟ್‌ನ ಸ್ಟುಡಿಯೋ ಆಗಿ ಮಾರ್ಪಟ್ಟಿತು. ಅದರ ಹಿಂದಿನದು ಸ್ಟೋರ್ ರೂಮ್ ಆಯಿತು. ಅವನು ಅಟ್ಟದ ಮೇಲೆ ಮಲಗುತ್ತಿದ್ದ. ಅದರಲ್ಲಿ ಅರ್ಧಭಾಗ, ಬಟ್ಟೆ ಒಣಗಿ ಹಾಕಲು ಬಿಡಲಾಗಿತ್ತು. ಉಳಿದದ್ದರಲ್ಲಿ ಎತ್ತರವಾಗಿ ಹಾಸಿಗೆಯೊಂದಿತ್ತು. ಜೊತೆಗೆ ಒಂದು ಕುರ್ಚಿಯೂ ಇತ್ತು. ಹಾಸಿಗೆ ಮೇಲೆ ಮಲಗುತ್ತಾ, ಟೊಬ್ಯಾಕೋ ಸೇವಿಸುತ್ತಾ, ಕತ್ತಲಲ್ಲಿ ಕರಗಿ ಹೋಗುವ ಬೆಳಕನ್ನು ನೋಡುತ್ತಾ ರಾತ್ರಿ ಕಳೆಯುತ್ತಿದ್ದ.

ಸ್ಟುಡಿಯೋದಲ್ಲಿ ತಾನು ಮಾಡಿ ಇರಿಸಿಕೊಂಡಿದ್ದ ಪಿಕ್ಚರ್‌ಗಳೆಲ್ಲವನ್ನೂ ತೂಗುಹಾಕಿದ. ಗಂಡಸರು, ಹೆಂಗಸರು, ವಿಚಿತ್ರ ಆಕಾರ, ಭಂಗಿಗಳಲ್ಲಿ ಇದ್ದವರು. ನೇಕಾರರು, ಕೃಷಿಕರು, ದವಡೆಯ ಎಲುಬುಗಳು ಹೊರ ಚಾಚಿಕೊಂಡಿದ್ದವರು. ಮೂಗು ಮೇಲಕ್ಕೆ ಹೊರಳಿದಂತಿದ್ದವರು – ಹೀಗೆ ವೈವಿಧ್ಯಮಯ ಮಾನವಾಕೃತಿಗಳು, ಭಾವಚಿತ್ರಗಳು...... ಒಂದು ರಾಶಿ ಸಂಗ್ರಹವನ್ನು ಎಲ್ಲೆಲ್ಲಿ ಯಾವುದನ್ನು ಹೇಗೆ ಇರಿಸಬೇಕೋ ಇರಿಸಿದ. ಅಲ್ಲಿದ್ದ ನೇಕಾರರ, ಕೃಷಿಕರ ಜೊತೆ ಸ್ನೇಹ ಮಾಡಿಕೊಂಡ. ತನ್ನ ತಮ್ಮ ಕಾರ್‌ನ ಜೊತೆಗೂ ಸ್ನೇಹದಿಂದಿದ್ದ. ಅವನ ಸಹಾಯದಿಂದ ಒಂದು

ಕಪಾಟನ್ನು ಸಿದ್ಧಪಡಿಸಿದ. ಅದರಲ್ಲಿ ಹಲವು ಬಗೆಯ ಗಿಡಗಳು, ಪಕ್ಷಿಯ ಗೂಡುಗಳು ಮೊದಲಾದವುಗಳನ್ನು ಹೊಲ, ಗದ್ದೆ, ಕುರುಚಲು ಪ್ರದೇಶಗಳಿಂದ ಸಂಗ್ರಹಿಸಿ ತಂದು ಇರಿಸಿದ. ಅಷ್ಟೇ ಅಲ್ಲದೆ ಹಳ್ಳಿಯ ಬದುಕಿಗೆ ಸಂಬಂಧಪಟ್ಟ, ನೇಗಿಲು, ಚರಕಗಳು, ಉಪಕರಣಗಳು, ಗುದ್ದಲಿ, ಸನಿಕೆ, ಪಿಕಾಸಿ ಇತ್ಯಾದಿಗಳನ್ನು, ಹಳೆಯ ಕಾಲದ ಟೋಪಿಗಳನ್ನು, ಹ್ಯಾಟುಗಳನ್ನು, ಮರದ ಬೂಟುಗಳನ್ನು ತಂದು ತಂದು ಒಂದು ಮೂಲೆಯಲ್ಲಿ ತುರುಕಿ ಇರಿಸಿದ.

ಅವನು ತನ್ನ ಕೆಲಸಕ್ಕೆ ಕುಳಿತ. ಬಣ್ಣಗಳ ಜೊತೆ ಹಲವು ಪ್ರಯೋಗಗಳನ್ನು ಮಾಡಿ, ಹೊಸ ಹೊಸದಾದ 'ವರ್ಣಛಾಯೆ'ಗಳನ್ನು ಸೃಷ್ಟಿಸಿಕೊಂಡ. ನಿಸರ್ಗದ ದೃಶ್ಯಗಳು, ಬಣ್ಣಗಳು ಯಥಾವತ್ತಾಗಿ ಕಾಣುವ ಹಾಗೆ, ವೈವಿಧ್ಯಮಯ ಬಣ್ಣಗಳ ಮಿಶ್ರಣವನ್ನು ತಯಾರಿಸಿಕೊಂಡ. ಯಾವ ಯಾವ ಬಣ್ಣಗಳನ್ನು ಬೆರೆಸಿದರೆ ತನಗೆ ಬೇಕಾದ ಹಳದಿ, ಸೃಷ್ಟಿಯಾಗುತ್ತದೆಂಬುದನ್ನು ಕಂಡುಕೊಂಡ.

ಜೊತೆಗೆ ಒಂಟಿತನದ ಬೇಸರದ ಭಯಂಕರತೆಯನ್ನು ಅನುಭವಿಸಿದ.

ಮಾರ್ಚ್ ತಿಂಗಳಲ್ಲಿ, ಒಮ್ಮೆ ಅವನ ತಂದೆ ಖಾಯಿಲೆಯಿಂದ ಹಾಸಿಗೆ ಹಿಡಿದಿದ್ದ. ಪ್ಯಾರಿಷ್‌ನ ನಿವಾಸಿಯನ್ನು ಮಾತನಾಡಿಸಲು ಹೋಗಿದ್ದಾಗ ಆಕಸ್ಮಿಕವಾಗಿ ಜಾರಿಬಿದ್ದು, ಪ್ರಾಣ ನೀಗಿದ್ದ. ಅನ್ನಾಗೆ ವಿಷಯ ತಿಳಿದು ಅಲ್ಲಿಗೆ ಹೋಗುವಷ್ಟರಲ್ಲಿಯೇ ಉಸಿರು ನಿಂತಿತ್ತು. ಹಳೆಯ ಚರ್ಚಿನ ಹಿಂಭಾಗದಲ್ಲಿ ಅವನ ಸಮಾಧಿ ಮಾಡಲಾಯಿತು. ಅಂತ್ಯ ಸಂಸ್ಕಾರಗಳಿಗಾಗಿ ಥಿಯೋ ಕೂಡಾ ಬಂದಿದ್ದ. ಆ ರಾತ್ರಿ ಎಲ್ಲರೂ ವಿನ್ಸೆಂಟ್‌ನ ಸ್ಟುಡಿಯೋದಲ್ಲಿ ಸೇರಿ, ಕುಟುಂಬದ ವಿಷಯಗಳನ್ನು ಚರ್ಚಿಸಿದರು. ನಂತರ ತಾವು ಮಾಡಬೇಕಾದ ಕೆಲಸಗಳ ಬಗ್ಗೆ ಯೋಚಿಸಿದರು.

"ನನಗೆ ತಿಂಗಳಿಗೆ ಸಾವಿರ ಫ್ರ್ಯಾಂಕ್ ಸಂಬಳದ ಮೇಲೆ ಕೆಲಸಕ್ಕೆ ಆಹ್ವಾನ ಬಂದಿದೆ. ಗೂಪಿಲ್ಸ್ ತೊರೆದು ಅಲ್ಲಿಗೆ ಹೋಗಬೇಕಾಗುತ್ತದೆ." ಥಿಯೋ ತಿಳಿಸಿದ.

"ಅದನ್ನು ಒಪ್ಪಿಕೊಳ್ತಿದ್ದೀಯ?"

"ಬಹುಶಃ ಇಲ್ಲ. ಅವರದೆಲ್ಲ ಕೇವಲ ವ್ಯಾಪಾರಿ ಮನೋಭಾವ."

"ನೀನು ನನಗೆ ಬರೆದಿದ್ದೆ..... ಗೂಪಿಲ್ಸ್......?"

"ಹೌದು. ಲೆ ಮೆಷ್ಯೂರ್ಸ್ ಗೂ ಒಳ್ಳೇ ಲಾಭ ಬರ್ತಿದೆ. ಅಲ್ಲಿ ಹನ್ನೆರಡು ವರ್ಷಗಳಿಂದ ಕೆಲಸ ಮಾಡ್ತಿದ್ದೀನಿ. ಈಗ ಒಂಪ್ಸು ಹೆಚ್ಚಿಗೆ ಸಂಬಳ ಬರುತ್ತೆ ಅನ್ನೋ ಕಾರಣಕ್ಕೆ, ಅಲ್ಲಿಗೆ ಹೋಗೋದು ಸರಿ ಅಲ್ಲ ಅನ್ಸತ್ತೆ. ಇವತ್ತಲ್ಲ ನಾಳೆ. ಯಾವತ್ತೋ ಒಂದು ದಿನ ನನ್ನನ್ನು ಯಾವುದಾದರೂ ಶಾಖೆಯ ಮುಖ್ಯಾಧಿಕಾರಿಯಾಗಿ ಪ್ರಮೋಷನ್ ಕೊಟ್ಟರೂ ಕೊಡಬಹುದು. ಅವರು ಹಾಗೆ ಮಾಡಿದರೆ, ನಾನು ಇಂಪ್ರೆಷನಿಷ್ಟರ ಕೃತಿಗಳನ್ನು ಮಾರ್ಕೆಟಿಂಗ್ ಮಾಡೋಣಾಂತ ಇದ್ದೀನಿ."

"ಇಂಪ್ರೆಷನಿಷ್ಟರ?.... ಅವರ ಹೆಸರುಗಳನ್ನು ಎಲ್ಲೋ ಓದಿದ್ದೀನಿ. ಯಾರ್‍ಯಾರು ಇದ್ದಾರೆ?"

"ಓ ಪ್ಯಾರಿಸಿನಲ್ಲೆಲ್ಲ ಕಡೆ ಯುವ ಇಂಪ್ರೆಷನಿಷ್ಟರಿದ್ದಾರೆ, ಬೇಕಾದಷ್ಟು ಮಂದಿ! ಎಡುವರ್ಡ್, ಮಾನೆಟ್, ಡೆಗಾಸ್, ರೆನ್ವಾರ್, ಕ್ಲಾಡ್ ಮೊನೆಟ್, ಸಿಸ್ಲಿ, ಕೂರ್ಬೆಟ, ಲಾಟ್ರೆಕ್, ಗಾಗಿನ್, ಷೆಜಾನ್‌ಷೆನ್ನೆ, ಸ್ಯುರಾತ್."

"ಅವರಿಗೆ ಆ ಹೆಸರು ಎಲ್ಲಿಂದ ಬಂತು?"

"೧೮೭೪ರಲ್ಲಿ ನಾದಾರ್‌ನಲ್ಲಿ, ಮೊನೆಟ್ ತನ್ನ ಒಂದು ಕ್ಯಾನ್‌ವಾಸನ್ನು ಪ್ರದರ್ಶಿಸಿ, ಅದನ್ನು ಇಂಪ್ರೆಷನ್, – 'ಸೂಲೀಲ್ ಲೆವಾಂತ್' ಎಂದು ಹೆಸರಿಸಿದ್ದ. ಆಗ ಲೂಯಿ ಲೆರಾಯ್ ಎನ್ನುವ ಪತ್ರಕರ್ತ 'ಎಕ್ಸಿಬಿಷನ್' ಬಗ್ಗೆ ಬರೆಯುತ್ತಾ 'ಇಂಪ್ರೆಷನಿಷ್ಟರ ಎಕ್ಸಿಬಿಷನ್' ಎಂದು ಬರೆದ. ಅಲ್ಲಿಂದ ಅದೇ ಹೆಸರು ಮುಂದುವರೆಯಿತು.

"ಗಾಢ ಬಣ್ಣಗಳನ್ನು ಬಳಸುತ್ತಾರೇನು?"

"ಇಲ್ಲ. ಅವರು ಗಾಢ ಬಣ್ಣಗಳನ್ನು ಇಷ್ಟ ಪಡುವುದಿಲ್ಲ. ತೆಳುವಾದ ಬಣ್ಣಗಳನ್ನೇ ಅವರು ನೆಚ್ಚಿಕೊಂಡಿರುವುದು."

"ಹಾಗಿದ್ದ ಮೇಲೆ ಅಂಥವರ ಜೊತೆ ಕೆಲಸ ಮಾಡೋಕೆ ಆಗೊಲ್ಲ. ಬಣ್ಣಗಳ ಬಳಕೆಯಲ್ಲಿ ಬದಲಾವಣೆ ತರಬೇಕು ಅನ್ನುವುದು ನನ್ನಾಸೆ! ಗಾಢ ಬಣ್ಣಗಳು ನನಗೆ ಇಷ್ಟ ಆಗೊಲ್ಲ."

"ನೀನು ಪ್ಯಾರಿಸ್‌ಗೆ ಬಾ. ಆಗ ನೀನು ನಿನ್ನ ವಿಚಾರವನ್ನೇ ಬದಲಾಯಿಸ್ತೀಯ."

"ಬಹುಶಃ ಇರಬಹುದು, ಯಾರದಾದರೂ ಮಾರಾಟ ಆಗ್ತಿದೆಯೇನು?"

"ಡ್ಯುರಾಂಡ್–ರೂಯೆಲ್, ಮಾನೆಟ್– ಯಾವಾಗಲೋ ಒಮ್ಮೊಮ್ಮೆ ಮಾರಾಟ ಆಗ್ತಾರೆ."

"ಹಾಗಾದರೆ ಅವರ ಜೀವನೋಪಾಯ?"

"ದೇವರಿಗೇ ಗೊತ್ತು. ಬಹುಶಃ ತಮ್ಮ ಜಾಣತನದಿಂದ ಹೇಗೋ ಜೀವನ ಕಳೀತಾರೆ. ರೂಸೋ ಮಕ್ಕಳಿಗೆ ವಾಯಿಲಿನ್ ಹೇಳಿಕೊಡ್ತಾನೆ, ಗಾಗಿನ್ ಸ್ಟಾಕ್ ಎಕ್ಸ್‌ಚೇಂಜ್‌ನ ತನ್ನ ಹಳೆ ಗೆಳೆಯರಿಂದ ಸಾಲ ತಗೋತಾನೆ; ಸ್ಯೂರಾತ್‌ಗೆ ಅವನ ಅಮ್ಮ ಸಹಾಯ ಮಾಡ್ತಾಳೆ; ಸೆಝಾನ್ನೆಗೆ ಅಪ್ಪನ ಸಹಾಯ ಇದೆ. ಉಳಿದವರು ಹೇಗೆ ಮಾಡ್ತಾರೋ ನನಗೆ ಗೊತ್ತಿಲ್ಲ."

"ಥಿಯೋ ನಿನಗೆ ಅವರೆಲ್ಲರ ಪರಿಚಯ ಇದೆಯಾ?"

"ನಿಧಾನವಾಗಿ ಪರಿಚಯ ಮಾಡಿಕೊಳ್ತಿದ್ದೀನಿ. ಲೆಮೆಷೂರ್ಸ್ ಗೆ, ಅಂಥವರ ಕಲಾಕೃತಿಗಳ ಪ್ರದರ್ಶನಕ್ಕೆ ಸ್ವಲ್ಪ ಅವಕಾಶ ಕೊಡಿ ಅಂತ ಕೇಳ್ತಾ ಇದ್ದೀನಿ. ಆದರೆ ಅವರು ಮಾತ್ರ 'ಇಂಪ್ರೆಷನಿಷ್ಟ' ಕಲಾಕೃತಿಗಳಿಗೆ ಒಂದಂಗುಲ ಜಾಗವನ್ನೂ ಕೊಡಲು ಸಿದ್ಧರಿಲ್ಲ."

"ಯಾಕೋ ನನಗೆ ಅಂಥವರನ್ನು ಭೇಟಿಯಾಗಲೇ ಬೇಕಾದ ಅಗತ್ಯ ಇದೆ ಅನ್ಸತ್ತೆ. ಆದರೆ ಥಿಯೋ ಬೇರೆ ಪೈಂಟರ್ಸ್‌ಗಳ ಪ್ರಭಾವ ನನ್ನ ಮೇಲೆ ಆಗುವ ಹಾಗೆ ಮಾತ್ರ ಮಾಡಬೇಡ."

ಥಿಯೋ ಸ್ಟುಡಿಯೋದ ಮುಂದಿನ ಕಿಟಕಿಯ ಬಳಿ ಹೋಗಿ, ಆ ಮನೆಗೂ, ರಸ್ತೆಗೂ ನಡುವೆ ಇದ್ದ ಹುಲುಸಾಗಿ ಹುಲ್ಲು ಬೆಳೆದಿದ್ದ ಜಾಗವನ್ನು ನೋಡಿದ.

"ಹಾಗಾದರೆ ನೀನು ನನ್ನ ಜೊತೆ ಪ್ಯಾರಿಸ್‌ಗೆ ಬಂದು ಬಿಡು. ಖಂಡಿತ ಅಲ್ಲಿ ನಿನಗೆ ಒಳ್ಳೆ ಅವಕಾಶಗಳು ಸಿಗುತ್ತವೆ; ಮೇಲೆ ಬರ್ತೀ!"

"ಇಲ್ಲಿ ಇನ್ನೂ ಒಂದು ಸ್ವಲ್ಪ ಕೆಲಸ ಬಾಕಿ ಇದೆ. ಅದನ್ನು ಮೊದಲು ಮುಗಿಸಬೇಕು."

"ಸರಿ. ನೀನು ಇಲ್ಲಿಯೇ ಇರುವುದಾದರೆ, ನಿನ್ನಂಥವರ ಜೊತೇನೇ ಸ್ನೇಹ ಬೆಳೆಸಬಹುದು."

"ಅದು ನಿಜ. ಥಿಯೋ ನನಗೆ ಒಂದು ವಿಷಯ ಅರ್ಥ ಆಗೊಲ್ಲ. ಇಲ್ಲೀವರೆಗೆ ನನ್ನೊಂದು ಪೈಂಟಿಂಗನ್ನೂ ಮಾರಲಿಲ್ಲ. ಬಹುಶಃ ಪ್ರಯತ್ನವನ್ನೇ ಮಾಡಲಿಲ್ಲ. ಈಗಲಾದರೂ ಮಾಡ್ತಿದ್ದೀಯ?"

"ಇಲ್ಲ."

"ಯಾಕೆ?"

"ನಾನು ನಿನ್ನ ಪೈಂಟಿಂಗ್ಸ್‌ನ್ನು ಪರಿಣತರಿಗೆ, ಕಲಾವಿಮರ್ಶಕ ಸಾಮರ್ಥ್ಯ ಇರುವವರಿಗೆ ತೋರಿಸಿದ್ದೀನಿ. ಅವರು....."

"ಓಹ್. ಈ ಕಲಾವಿಮರ್ಶಕರು!.... ಅವರಲ್ಲಿನ ದೋಷ, ದೌರ್ಬಲ್ಯಗಳು ನನಗೆ ಗೊತ್ತಿದೆ. ಅಂತಃ ಸಾಮರ್ಥ್ಯ, ಪ್ರತಿಭೆಗಳಿಂದ ಮೂಡುವ ಸಹಜ ಕಲೆಯನ್ನು ಅರ್ಥಮಾಡಿಕೊಳ್ಳುವ, ಗ್ರಹಿಸುವ ಶಕ್ತಿ ಅವರಲ್ಲಿ ಇಲ್ಲ!.. ನನಗೆ ಅವರ ವಿಷಯ ಚೆನ್ನಾಗಿ ಗೊತ್ತು."

"ಅದನ್ನೆಲ್ಲ ನಾನು ಹೇಳಬೇಕಾದ್ದಿಲ್ಲ..... ನಿನ್ನ ಕೃತಿಗಳು ಮಾರಾಟವಾಗುವಂಥಾದ್ದೇ, ಆದರೆ......"

"ಥಿಯೋ, ಎಟ್ಟೆನ್‌ನಲ್ಲಿ ಇದ್ದಾಗಿನಿಂದಲೂ ಇದೇ ಇದೇ ಮಾತುಗಳನ್ನು ಬರೆಯುತ್ತಿದ್ದೀಯ!"

"ಅವೆಲ್ಲ ನಿಜ ವಿನ್ಸೆಂಟ್; ನೀನು ನಿರಂತರ ಪ್ರಗತಿಯ ಹಾದಿಯಲ್ಲಿದ್ದು ಪರಿಪಕ್ವಸ್ಥಿತಿಗೆ ತಲುಪುತ್ತಿರುವೆ. ನಿನ್ನ ಪ್ರತಿಯೊಂದು ಹೊಸ ಸ್ಕೆಚ್ಚನ್ನು ತುಂಬ ಉತ್ಸಾಹ, ನಿರೀಕ್ಷೆ, ಭರವಸೆಗಳಿಂದ ಪರಿಶೀಲಿಸುತ್ತೇನೆ. ಇನ್ನೇನು ಔನ್ನತ್ಯ ತಲುಪಿ ಬಿಟ್ಟಿದ್ದೀಯ ಅಂದುಕೊಳ್ಳುತ್ತೇನೆ..... ಆದರೆ ಇಲ್ಲೀವರೆಗೆ....."

"ಮಾರೋಕೆ ಆಗುತ್ತೋ ಆಗೊಲ್ಲವೋ." ಮಧ್ಯೆ ಪ್ರವೇಶಿಸಿ ಹೇಳಿ ಸಿಟ್ಟಿನಿಂದ ಕೈಲಿದ್ದ ಪೈಪನ್ನು ಒಗೆದೆಸೆದು "ಆ ಹಳೇ ಬಂಡೆಗೆ ತಲೆ ಚಚ್ಚುಕೊಳ್ಳೋದು ನನ್ನಿಂದ ಸಾಧ್ಯವಿಲ್ಲ."

"ಇಲ್ಲಿ ಇನ್ನೂ ಕೆಲಸ ಬಾಕಿ ಇದೇಂತ ಹೇಳ್ತಿದ್ದೀಯ ಹಾಗಿದ್ದ ಮೇಲೆ ಬೇಗ ಮುಗಿಸಿಬಿಡು. ಎಷ್ಟು ಬೇಗ ಪ್ಯಾರಿಸ್ ಕಡೆ ಬಂದರೆ ಅಷ್ಟೂ ಒಳ್ಳೇದು. ನಿನ್ನ ಕೃತಿಗಳು

ಮಾರಾಟ ಆಗಬೇಕೂಂತ ಇದ್ದರೆ ಪಿಕ್ಚರ್ಸ್ ಕಳಿಸು. ಸ್ಟಡೀಸ್ (ಪ್ರಯೋಗ) ಬೇಡ. ಯಾರಿಗೂ ಅವುಗಳ ಬಗ್ಗೆ ಆಸಕ್ತಿಯಿಲ್ಲ.

"ಸರಿ. ಇವೆರಡರಲ್ಲಿ ಯಾವುದು ಮುಖ್ಯ ಯಾವುದಲ್ಲ ಅಂತ ಖಚಿತವಾಗಿ ಹೇಳೋದು ಕಷ್ಟ. ಇರಲಿ ಬಿಡು. ಎಷ್ಟು ಸಾಧ್ಯವೋ ಅಷ್ಟನ್ನೂ ಮಾಡೋಣ ಥಿಯೋ. ನಮ್ಮ ಗುಣ, ದೌರ್ಬಲ್ಯಗಳೊಂದಿಗೆ ನಾವು ನಾವಾಗಿಯೇ ಇರೋಣ. 'ನಾವು' ಅಂದೆ. ನೀನು ನನಗೆ ಹಣ ಒದಗಿಸುವುದು ಎಷ್ಟು ಕಷ್ಟವಾಗಿದೆ ಅಂತ ನನಗೆ ಗೊತ್ತು. ನನಗಾಗಿ ಪಡುತ್ತಿರುವ ಕಷ್ಟವೇ ನಾನು ಮಾಡುವ ಎಲ್ಲ ಕಲಾಕೃತಿಗಳ ಸೃಷ್ಟಿಯಲ್ಲಿ ಅರ್ಧ ಭಾಗಕ್ಕೆ ಹಕ್ಕುದಾರನಾಗುವ ಅಧಿಕಾರ ಸಹಜವಾಗಿ ನಿನಗೆ ಬರುತ್ತದೆ."

ಥಿಯೋ ಸುಮ್ಮನೆ ಎದ್ದು ಹಿಂದಿನ ಕೋಣೆಯತ್ತ ನಡೆದ.

–೮–

ತಂದೆ ಸಾಯುವುದಕ್ಕೆ ಮೊದಲು ವಿನ್ಸೆಂಟ್ ಒಂದೆರಡು ಬಾರಿ ಊಟಕ್ಕಾಗಿಯೋ ಇಲ್ಲ ಮನೆಯವರನ್ನು ಮಾತಾಡಿಸಿಕೊಂಡು ಬರಲೋ ಮನೆ ಕಡೆ ಹೋಗಿ ಬಂದಿದ್ದ. ಶ್ರಾದ್ಧ ಗೀದ್ಧ ಮುಗಿದ ಮೇಲೆ ಅವನ ಸೋದರಿ ಎಲಿಜಬೆತ್ ಅವನನ್ನು ಕೃತಘ್ನ ಎಂದು ಕರೆದದ್ದೇ ಅಲ್ಲದೆ. ಮನೆ, ಮನೆತನದ ಗೌರವವನ್ನು ಉಳಿಸಿಕೊಳ್ಳಬೇಕಾಗಿದೆ ಎಂದು ತಿಳಿಸಿ ಬಿಟ್ಟಳು. ತಾಯಿ, ಅವನ ಬದುಕಿಗೆ ಅವನೇ ಜವಾಬ್ದಾರ ಎಂದು ಹೇಳಿ, ಹೆಣ್ಣುಮಕ್ಕಳ ಜೊತೆ ಉಳಿದುಕೊಳ್ಳುವುದು ತನ್ನ ಕರ್ತವ್ಯವಾಗಿದೆ ಎಂದು ತಿಳಿಸಿ ಬಿಟ್ಟಳು.

ಈಗ ನ್ಯೂನೆನ್‌ನಲ್ಲಿ ಏಕಾಂಗಿಯಾಗಿ ಬಿಟ್ಟ. ಮನುಷ್ಯರಿಗೆ ಬದಲಾಗಿ ಈಗ ನಿಸರ್ಗಕ್ಕೆ ಹೆಚ್ಚು ಒತ್ತುಕೊಟ್ಟ. ಅದರ ಅಧ್ಯಯನಕ್ಕೆ ತೊಡಗಿದ. ಪ್ರಕೃತಿಯನ್ನು ಹಿಡಿದಿಡುವುದು, ಅರ್ಥಮಾಡಿಕೊಳ್ಳುವುದು ಬಹಳ ಕಷ್ಟವೆನಿಸಿತು. ಅವುಗಳ ಬಗ್ಗೆ ಪ್ರಯೋಗಗಳನ್ನು ಮಾಡುತ್ತಿದ್ದನಾದರೂ, ಎಲ್ಲಿಯೋ ಒಂದು ಕಡೆ ಹಾದಿ ತಪ್ಪುತ್ತಿತ್ತು. ಮತ್ತೆ ಅವನು ಪ್ರಯೋಗ ಬಿಟ್ಟು ಹಿಂದೆ ಮಾಡುತ್ತಿದ್ದಂತೆ ಮಾಡಲು ಶುರು ಮಾಡಿದ. ನಿಸರ್ಗ ಅವನಿಗೆ ಒಲಿಯಿತು. ಒಂಟಿತನದ ಕ್ಷಣಗಳಲ್ಲಿ ಅತೀವ ನೋವನ್ನು ಅನುಭವಿಸುತ್ತಿದ್ದ. ತೀಕ್ಷ್ಣ ನಾಲಗೆಯ ವೀಸೆನ್‌ಬ್ರೂಕ್‌ನನ್ನು ಅವನ ಸ್ಟುಡಿಯೋದಲ್ಲಿ ಭೇಟಿಯಾಗಲು ಹೋಗಿದ್ದಾಗ, ನೋವಿನ ಬಗ್ಗೆ ಹೇಳಿದ ಮಾತುಗಳು, ಅವನು ಇನ್ನೂ ಸ್ಪಷ್ಟವಾಗಿ ವಿವರಿಸಿದ್ದ.

"ನೋವನ್ನು ನಾನೆಂದೂ ಹತ್ತಿಕ್ಕಲು ಪ್ರಯತ್ನಿಸುವುದಿಲ್ಲ. ಯಾಕೆಂದರೆ ಅನೇಕ ವೇಳೆ ಈ ನೋವೇ ಕಲಾವಿದರಿಗೆ ಅತ್ಯಂತ ಶಕ್ತಿಯುತವಾದ, ಅಭಿವ್ಯಕ್ತಿ ನೀಡಲು ಪ್ರಚೋದನೆಯಾಗಿರುತ್ತದೆ."

ಡಿಗ್ರೂತ್ ಎಂಬ ರೈತ ಕುಟುಂಬದವರೊಂದಿಗೆ ಅವನ ಸ್ನೇಹ ಬೆಳೆಯಿತು. ತಂದೆತಾಯಿ, ಮಗ ಮತ್ತು ಇಬ್ಬರು ಹೆಣ್ಣುಮಕ್ಕಳು. ಎಲ್ಲರೂ ಹೊಲದಲ್ಲಿ ಕೆಲಸ

ಮಾಡುತ್ತಿದ್ದರು. ಡಿ ಗ್ರೂತ್, ಬ್ರಬಾಂತ್‌ನ ಎಲ್ಲ ರೈತರಂತೆ, ಕಪ್ಪುಬಣ್ಣದವನಾಗಿದ್ದ. ಬೋರಿನೇಜ್‌ನ ಗಣಿಕಾರ್ಮಿಕರಂತೆ ಮುಖವೆಲ್ಲ ಕಪ್ಪು. ನೀಗ್ರೋ ಥಳಿಯಂತೆ ಕಾಣುತ್ತಿದ್ದರು. ಕಪ್ಪಾದ ಮುಖ, ದೊಡ್ಡ ದೊಡ್ಡ ಮೂಗಿನ ಹೊಳ್ಳೆಗಳು, ದಪ್ಪನೆಯ ತುಟಿಗಳು, ಉದ್ದನೆಯ ಕಿವಿಗಳು, ಉಬ್ಬಿದ ಹಣೆ, ಚಿಕ್ಕ ತಲೆ, ಮೇಲೆ ಮೊನಚು. ಕೇವಲ ಒಂದೇ ಒಂದು ಕೋಣೆಯಿದ್ದ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ಒಂದು ಮೇಜು, ಒಂದೆರಡು ಕುರ್ಚಿ, ಒಂದಷ್ಟು ಪೆಟ್ಟಿಗೆಗಳು ಮೇಲಿನಿಂದ ಇಳಿಬಿಟ್ಟಿದ್ದ ಲ್ಯಾಂಪು.

ಡಿ ಗ್ರೂತ್‌ರ ಮುಖ್ಯ ಆಹಾರ ಆಲೂಗಡ್ಡೆ. ರಾತ್ರಿ ಊಟಕ್ಕೆ ಒಂದು ಕಪ್ಪು, ಕಪ್ಪು ಕಾಫಿ, ಒಂದು ತುಂಡು ಹಂದಿ ಮಾಂಸವಿರುತ್ತಿತ್ತು. ಅದೂ ವಾರಕ್ಕೊಮ್ಮೆ ಮಾತ್ರ. ಆಲೂಗಡ್ಡೆಯೇ ಮುಖ್ಯ ಬೆಳೆ. ಅದನ್ನೇ ಬಿತ್ತುವುದು; ಬೆಳೆಯುವುದು; ಫಸಲು ತೆಗೆಯುವುದು; ತಿನ್ನುವುದು ಅಷ್ಟೇ ಅವರ ಜೀವನದಲ್ಲಿ ಲಭ್ಯವಾಗಿದ್ದುದು.

ಸ್ಟೀನ್ ಡಿ ಗ್ರೂತ್ ಹದಿನೇಳು ವರ್ಷದ ಮುದ್ದಾದ ಹುಡುಗಿ. ಕೆಲಸ ಮಾಡುವಾಗ ಬಿಳಿಯ ಟೋಪಿಯನ್ನು ಧರಿಸುತ್ತಿದ್ದಳು; ಮತ್ತು ಬಿಳಿ ಕಾಲರಿನ ಕಪ್ಪು ಜಾಕೆಟ್ ಒಂದನ್ನು ತೊಟ್ಟಿದ್ದಳು.

ಪ್ರತಿದಿನ ಸಂಜೆ, ವಿನ್ಸೆಂಟ್ ಅವರ ಮನೆಗೆ ಭೇಟಿ ಕೊಟ್ಟು, ಒಂದಷ್ಟು ಹೊತ್ತು ಕಳೆದು ಬರುವುದನ್ನು ಅಭ್ಯಾಸ ಮಾಡಿಕೊಂಡಿದ್ದ. ಸ್ಟೀನ್ ಮತ್ತು ವಿನ್ಸೆಂಟ್ ಖುಷಿಯಾಗಿ ಮಾತಾಡುತ್ತ ಕಾಲ ಕಳೆಯುತ್ತಿದ್ದರು. ಸ್ಟೀನ್ ಅಂತೂ ಬಹಳ ನಗುತ್ತಿದ್ದಳು.

"ನೋಡು ನಾನು ಬಹಳ ಒಳ್ಳೆಯ ಹೆಣ್ಣು. ನನ್ನನ್ನು ಡ್ರಾ ಮಾಡ್ತಾ ಇದ್ದೀಯ. ಮಿಜ್ನಹೀರ್ ನಿಮಗಾಗಿ ಈ ಟೋಪಿ (ಬೊನೆಟ್) ಧರಿಸಲೇನು?"

"ಬೇಡ ಸ್ಟೀನ್. ನೀನು ಈಗ ಹೇಗಿದ್ದೀಯೋ, ಹಾಗೇ ಚೆನ್ನಾಗಿದ್ದೀಯ."

"ನಾನು, ಚೆನ್ನಾಗಿದ್ದೀನಿ!"

ಜೋರಾಗಿ ಬಿದ್ದು ಬಿದ್ದು ನಗಲು ಆರಂಭಿಸಿದಳು. ಜೀವಂತಿಕೆ ತುಂಬಿದ್ದ ವಿಶಾಲವಾದ ಕಣ್ಣುಗಳು, ಮುದ್ದಾದ ಭಾವಾಭಿವ್ಯಕ್ತಿಯ ರೀತಿ, ಬದುಕಿನ ಸಹಜ ಸೌಂದರ್ಯವೆನಿಸಿತು. ಆಲೂಗಡ್ಡೆಗಳನ್ನು ಅಗೆಯುವಾಗ ಬಾಗಿದ ಅವಳ ದೇಹದ ರೇಖೆಗಳು, ಕೇ ಳಲ್ಲಿಯೂ ಕಾಣಲಾಗದ ಆಕರ್ಷಣೆಯನ್ನು ಹೊಂದಿದ್ದವು. ಯಾವುದೇ ಒಂದು ಆಕೃತಿಯಲ್ಲಿ, ಅತಿಮುಖ್ಯವಾದದ್ದು ಕ್ರಿಯೆ. ಆದರೆ ಹಿಂದಿನ ಬಹುದೊಡ್ಡ, ಶ್ರೇಷ್ಠ ಕಲಾವಿದರೆಲ್ಲ ಇದನ್ನೇ ಮರೆತಿದ್ದಾರೆ ಎಂಬ ಸತ್ಯವನ್ನು ಗ್ರಹಿಸಿದ. ಅದಕ್ಕೆಂದೇ ಅವನು ಕ್ರಿಯೆಯಲ್ಲಿ ತೊಡಗಿರುವ ಸಂದರ್ಭದೊಂದಿಗೇ ಆಕೃತಿಗಳನ್ನು ಬಿಡಿಸಲು ಆರಂಭಿಸಿದ. ಊಟ ಮಾಡುತ್ತಿರುವ, ಟೇಬಲ್ ಸರಿಮಾಡುತ್ತಿರುವ, ಹೊಲದಲ್ಲಿ ಅಗೆಯುವ ಕೆಲಸದಲ್ಲಿ ಇರುವ – ಕ್ಷಣಗಳನ್ನೇ ಡ್ರಾಯಿಂಗ್‌ಗಳಲ್ಲಿ ಸೆರೆ ಹಿಡಿದ. ಸ್ಟೀನ್ ಅಂತೂ ವಿನ್ಸೆಂಟ್‌ನನ್ನು ಆಗಾಗ ತಮಾಶೆ ಮಾಡುತ್ತಿದ್ದಳು; ರೇಗಿಸುತ್ತಿದ್ದಳು. ಒಮ್ಮೊಮ್ಮೆ ಅವನ ಜೊತೆಯಲ್ಲಿ ಹೊಲ, ಗದ್ದೆ ಬಯಲು ಪ್ರದೇಶಗಳಲ್ಲಿ ಅಲೆದಾಡಲು

ಹೋಗುತ್ತಿದ್ದಳು. ಆ ಬಡ ರೈತರಿಗೆ ಇಂಥಾದ್ದು ಬಿಟ್ಟರೆ ಬೇರೆ ಮನರಂಜನೆಯೇ ಇರುತ್ತಿರಲಿಲ್ಲ.

"ಮಾರ್ಗಾಟ್ ಬೆಜೆಮನ್ ನಿನ್ನನ್ನು ಇಷ್ಟಪಟ್ಟಿದ್ದಳಾ ಹೇಗೆ?" ಒಮ್ಮೆ ಅವಳು ಕೇಳಿದಳು.

"ಹೌದು."

"ಹಾಗಾದರೆ ಆತ್ಮಹತ್ಯೆ ಪ್ರಯತ್ನ ಮಾಡಿದ್ದೇಕೆ?"

"ಯಾಕೇಂದ್ರೆ ಅವಳ ಮನೆಯವರಿಗೆ, ಅವಳು ನನ್ನ ಜೊತೆ ಮದುವೆಯಾಗೋದು ಇಷ್ಟವಿರಲಿಲ್ಲ!"

"ಅವಳೊಬ್ಬಳು ಹುಚ್ಚಿ! ನಾನಾದರೆ ಏನು ಮಾಡ್ತಿದ್ದೆ ಗೊತ್ತಾ?.... ಸಾಯೋಕೆ ಬದಲಾಗಿ, ನಿನ್ನನ್ನು ಪ್ರೀತಿಸ್ತಿದ್ದೆ!"

ಅವನನ್ನು ನೋಡಿ ನಕ್ಕು ಪೈನ್ ಮರಗಳ ಕಡೆಗೆ ಓಡಿದಳು. ಇಡೀ ದಿನ ಪೈನ್ ಮರಗಳ ಕಾಡಿನಲ್ಲಿ ಸಂತೋಷವಾಗಿ, ನಗ್ತಾ, ಆಡ್ತಾ ಕಾಲ ಕಳೆದರು. ಇವರಿಬ್ಬರ ಆಟವನ್ನು ಇನ್ನೂ ಒಂದು ಜೋಡಿ ಗಮನಿಸಿತು. ಸ್ಟೀನ್‌ಗೆ ಮಾತೆತ್ತಿದರೆ ನಗುವ ಅಭ್ಯಾಸ ಇತ್ತು. ಸಣ್ಣಪುಟ್ಟದ್ದಕ್ಕೆಲ್ಲ ನಗುತ್ತಿದ್ದಳು. ವಿನ್ಸೆಂಟ್ ಹೇಳುವ ಪ್ರತಿ ಮಾತಿಗೂ ಎಡಬಿಡದೆ ನಗುತ್ತಿದ್ದಳು. ಅವನ ಜೊತೆ ಕುಸ್ತಿ ಆಡಿ ನೆಲದ ಮೇಲೆ ಕೆಡವಿದಳು. ತನ್ನ ಮನೆಯಲ್ಲಿ ಮಾಡುತ್ತಿದ್ದ ಡ್ರಾಯಿಂಗ್‌ಗಳು ಇಷ್ಟವಾಗದಿದ್ದರೆ ಅದರ ಮೇಲೆ ಕಾಫಿ ಸುರಿಯುತ್ತಿದ್ದಳು. ಇಲ್ಲವೇ ತೆಗೆದು ಮುದ್ದೆ ಮಾಡಿ ಬೆಂಕಿಗೆ ಹಾಕುತ್ತಿದ್ದಳು. ಅನೇಕ ಸಲ ಅವನ ಸ್ಟುಡಿಯೋಗೆ ಬಂದು ಪೋಸ್ ಕೊಡುತ್ತಿದ್ದಳು. ಅವಳು ಹೊರಟು ಹೋದ ಮೇಲೆ ನೋಡಿದರೆ, ಸ್ಟುಡಿಯೋದ ಎಲ್ಲ ವಸ್ತುಗಳೂ ಅಸ್ತವ್ಯಸ್ತವಾಗಿರುತ್ತಿದ್ದವು.

ಚಳಿಗಾಲದ ಆಗಮನವಾಯಿತು. ವಿನ್ಸೆಂಟ್ ಈಗ ಸ್ಟುಡಿಯೋದಲ್ಲಿಯೇ ಇದ್ದು ಕೆಲಸ ಮಾಡುತ್ತಿದ್ದ. ನ್ಯೂನೆನ್‌ನ ಜನ ದುಡ್ಡು ಕೊಡದೆ ಪೋಸ್ ಕೊಡಲು ಬರುತ್ತಿರಲಿಲ್ಲ. ಹೇಗ್‌ನಲ್ಲಿ ಸರಿಸುಮಾರು ತೊಂಬತ್ತು ಮಂದಿ ಚಿಪ್ಪಿಗ ಮಹಿಳೆಯರನ್ನು, ಒಂದು ಮೂರು ಮಂದಿಯ ಗ್ರೂಪ್ ಸ್ಕೆಚ್‌ಗಾಗಿ, ಸ್ಕೆಚ್ ಮಾಡಿದ್ದ. ಡಿ ಗ್ರೂತ್‌ನ ಕುಟುಂಬದ ಒಂದು ಸ್ಕೆಚ್ ಮಾಡಬೇಕೆಂದುಕೊಂಡ. ಆದರೆ ಅದಕ್ಕೆ ಮೊದಲು ಆ ಭಾಗದಲ್ಲಿ ಇರುವ ಪ್ರತಿಯೊಬ್ಬ ರೈತನನ್ನೂ ಸ್ಕೆಚ್ ಮಾಡಬೇಕೆಂದುಕೊಂಡ.

ಕ್ಯಾಥೋಲಿಕ್ ಪಾದ್ರಿಗೆ, ಈ ಕೇರ್‌ಟೇಕರ್ ಮನೆಯಲ್ಲಿ ವಿನ್ಸೆಂಟ್‌ನಂಥವನಿಗೆ ಜಾಗ ಕೊಡೋಕೆ ಇಷ್ಟವೇ ಇರಲಿಲ್ಲ. ಆದರೆ ವಿನ್ಸೆಂಟ್ ವಿನಯವಂತನೂ ಸಜ್ಜನನೂ ಆಗಿದ್ದ ಕಾರಣ, ನಿರಾಕರಿಸಲು ಮನಸ್ಸಾಗಲಿಲ್ಲ; ಕಾರಣವೂ ಇರಲಿಲ್ಲ. ಒಂದು ದಿನ ಆಡ್ರಿಯಾನ ಷಾಫ್ರಾತ್ ತುಂಬಾ ಭಾವೋದ್ವಿಗ್ನಳಾಗಿ ವಿನ್ಸೆಂಟ್‌ನ ಸ್ಟುಡಿಯೋ ಪ್ರವೇಶಿಸಿ,

"ಫಾದರ್ ಪಾವೆಲ್ಸ್ ನಿನ್ನನ್ನು ತಕ್ಷಣ ಕಾಣಬೇಕೆಂದು ಹೇಳಿದ್ದಾರೆ" ಎಂದಳು.

ಫಾದರ್ ಪಾವೆಲ್ಸ್ ಕೆಂಪು ಮೊಗದ ಭಾರಿ ದೇಹದ ವ್ಯಕ್ತಿಯಾಗಿದ್ದ. ಬರುತ್ತಿದ್ದಂತೆ ಸ್ಟುಡಿಯೋ ಸುತ್ತ ಕಣ್ಣಾಡಿಸಿದ. ಇಂಥ ಅಸ್ತವ್ಯಸ್ತ ಸ್ಥಿತಿಯನ್ನು, ಅವ್ಯವಸ್ಥೆಯನ್ನು ಎಂದೂ ಕಂಡಿರಲಿಲ್ಲ ಎಂದುಕೊಂಡ.

"ಫಾದರ್ ಹೇಳಿ ನನ್ನಿಂದೇನಾಗಬೇಕು?"

"ನೀನು ನನಗಾಗಿ ಏನೂ ಮಾಡಬೇಡ. ನಾನೇ ನಿನಗಾಗಿ ಒಂದು ಕೆಲಸ ಮಾಡಬೇಕೂಂತ ಇದ್ದೀನಿ. ಅದೂ ನೀನು ಒಪ್ಪಿದರೆ?"

"ನನಗಾಗಿ! ನನಗಾಗಿ ಅಂಥದ್ದೇನು ಫಾದರ್?"

"ನೋಡು, ಅವಳು ಕ್ಯಾಥೊಲಿಕ್, ನೀನು ಪ್ರಾಟಸ್ಟೆಂಟ್! ನಿಮ್ಮಿಬ್ಬರಿಗಾಗಿ ಬಿಷಪ್‌ರಿಂದ ವಿಶೇಷ ಅನುಮತಿ ಪಡೆಯುತ್ತೇನೆ. ಕೆಲವೇ ದಿನಗಳಲ್ಲಿ ನಿಮ್ಮಿಬ್ಬರಿಗೂ ಮದುವೆ ಸಿದ್ಧವಾಗಿರು!"

ವಿನ್ಸೆಂಟ್ ಫಾದರ್ ಪಾವೆಲ್‌ರ ತೀರಾ ಸಮೀಪಕ್ಕೆ ಬಂದು ಅವರ ಮುಖವನ್ನು ನೋಡುತ್ತಾ,

"ಫಾದರ್ ನೀವು ಹೇಳ್ತಿರೋದು, ನನಗೇನೂ ಅರ್ಥವಾಗ್ತಿಲ್ಲ"

"ಎಲ್ಲ ಅರ್ಥ ಆಗಿದೆ. ಈ ನಾಟಕ ಬೇಡ. ಸ್ಟೀನ್ ಈಗ ಗರ್ಭಿಣಿ. ಮನೆ ಗೌರವ ಹಾಳಾಗಬಾರದು."

"ಎಂಥ ಪಿಶಾಚಿ!"

"ನಿನ್ನನ್ನು ಪಿಶಾಚಿ ಎನ್ನಬೇಕು. ಪಿಶಾಚಿ ಮಾಡುವ ಕೆಲಸವನ್ನೇ ನೀನೂ ಮಾಡಿರುವುದು."

"ಇದನ್ನು ನೀವು ನಂಬ್ತೀರಾ ಫಾದರ್?.... ಖಂಡಿತ ನೀವು ತಪ್ಪಾಗಿ ತಿಳಿದಿದ್ದೀರಿ!"

"ನನ್ನ ಹತ್ತಿರ ಸರಿಯಾದ ಸಾಕ್ಷಿ ಇಲ್ಲದ ಹೊರತು ಯಾರನ್ನೂ ನಾನು ದೂರುವುದಿಲ್ಲ,"

"ಸ್ಟೀನ್ ನಿಮಗೆ ಹೇಳಿದಳೇನು?.... ಅದು ನಾನು.... ಅಂತ?"

"ಇಲ್ಲ. ಹೆಸರು ಹೇಳೋದಕ್ಕೆ ಒಪ್ಪಿಕೊಳ್ಳಲಿಲ್ಲ."

"ಹಾಗಾದರೆ, ನನ್ನ ತಲೆ ಮೇಲೆ ಯಾಕೆ ಹೊರಿಸುತ್ತೀರಿ?"

"ಯಾಕೇಂದ್ರೆ, ನಿನ್ನ ಜೊತೆಗೇ ಇದ್ದದ್ದನ್ನು ಎಷ್ಟೋ ಸಲ ನೋಡಿದ್ದೇವೆ. ಆಗಾಗ ಸ್ಟುಡಿಯೋಗೆ ಬರ್ತಾಳಲ್ಲವೇ?"

"ಬರ್ತಾಳೆ."

"ಭಾನುವಾರ ಅವಳ ಜೊತೆ ಅಡ್ಡಾಡೋಕೆ ಫೀಲ್ಡ್ಸ್‌ಗೆ ಹೋಗಿರಲಿಲ್ಲವೇನು?"

"ಹೌದು ಹೋಗಿದ್ದೆ."

"ಇಷ್ಟೆಲ್ಲ ಆದ ಮೇಲೆ ನನಗೆ ಮತ್ತೆ ಬೇರೆ ಸಾಕ್ಷಿಬೇಕೆ?"

ವಿನ್ಸೆಂಟ್ ಒಂದು ಕ್ಷಣ ಮಾತಾಡಲಿಲ್ಲ.

"ಫಾದರ್ ಇದೆಲ್ಲ ಕೇಳಿ ನನಗೆ ದುಃಖ ಆಗಿದೆ. ಅದೂ ನನಗೆ ಸ್ಟೀನ್ ಒಳ್ಳೆ ಫ್ರೆಂಡ್ ಆಗಿರುವಾಗ ಇಂಥಾದ್ದು ನಡೆದದ್ದು ಇನ್ನೂ ದುಃಖ ಬರಿಸುತ್ತೆ. ಆದರೆ, ಪಶ್ಚಾತ್ತಾಪ ಪಡಬೇಕಾದ, ಪಾಪ ಪ್ರಜ್ಞೆಗೆ ಒಳಗಾಗ ಬೇಕಾದ ಯಾವ ತಪ್ಪನ್ನೂ ನಾನು ಮಾಡಿಲ್ಲ ಅನ್ನೋದು ಮಾತ್ರ ಸತ್ಯ"

"ಅದನ್ನು ನಾನು ನಂಬಬೇಕೇ?"

"ಬೇಡ, ನಂಬಬೇಡಿ."

ಆ ದಿನ ಸ್ಟೀನ್ ಫೀಲ್ಡ್ಸ್‌ನಿಂದ ಹಿಂತಿರುಗಿದಳು. ಅವಳಿಗಾಗಿ ಅವರ ಮನೆಯ ಗುಡಿಸಲಿನ ಮೆಟ್ಟಿಲ ಮೇಲೆ ಕಾದು ಕುಳಿತಿದ್ದ. ಮನೆಯವರೆಲ್ಲ ಊಟಕ್ಕಾಗಿ ಒಳಗೆ ಕುಳಿತಿದ್ದರು. ಸ್ಟೀನ್ ಅವನ ಪಕ್ಕದಲ್ಲಿ ಮುದುಡಿ ಕುಳಿತಳು.

"ನಿನಗೆ, ಡ್ರಾ ಮಾಡೋಕೆ ಬೇರೆ ಯಾರನ್ನಾದರೂ ಕಳಿಸಿ ಕೊಡ್ತೇನೆ" ಎಂದಳು.

"ಸ್ಟೀನ್. ನಾನು ಕೇಳಿದ್ದೆಲ್ಲ ಹಾಗಾದರೆ ನಿಜವೇನು?"

"ಹೌದು. ನೋಡ್ತೀಯೇನು?"

ಅವನ ಕೈ ತೆಗೆದು ಹೊಟ್ಟೆಮೇಲೆ ಇರಿಸಿಕೊಂಡಳು. ಅವಳ ಉಬ್ಬಿದ್ದ ಬಸಿರಿನ ಸ್ಪರ್ಷದಿಂದ ಅವನಿಗೆ ಅರ್ಥವಾಯಿತು.

"ಫಾದರ್ ಪಾವೆಲ್, ನಾನೇ ಇದಕ್ಕೆ ತಂದೆ ಅಂತ ತಿಳಿಸಿದರು."

ಸ್ಟೀನ್ ಗಟ್ಟಿಯಾಗಿ ನಕ್ಕಳು.

"ನೀನೇ ಆಗಿದ್ದರೆ ಚೆನ್ನಾಗಿತ್ತು. ಆದರೆ ನಿನಗೆ ಬೇಡವೆನಿಸಿತು. ಹೌದಲ್ಲ?"

ಅವಳ ಮೈಮೇಲೆ ಬೆವರಿನಿಂದ, ಮೆತ್ತಿದ ಮಣ್ಣು ಪೆಳ್ಳೆಗಳಾಗಿದ್ದವು. ಅವಳ ದೇಹದ ಅಂಗಾಂಗಳೆಲ್ಲ ಒರಟಾಗಿದ್ದವು. ಮೂಗು, ತುಟಿಗಳು ದಪ್ಪವಾಗಿದ್ದವು. ವಿನ್ಸೆಂಟ್ ಇದೆಲ್ಲವನ್ನೂ ಗಮನಿಸಿದ.

ಅವಳು ಅವನತ್ತ ಮುಗುಳ್ನಗೆ ಬೀರಿದಳು.

"ನನಗೂ ಹಾಗೇ ಅನ್ಸತ್ತೆ ಸ್ಟೀನ್. ನಾನೇ ನಿಜವಾಗಿಯೂ ಇದರ ತಂದೆ ಆಗಬಾರದಿತ್ತೇ?"

"ಹಾಗಾದರೆ ಫಾದರ್ ಪಾವೆಲ್ ನಿನ್ನನ್ನೇ ತಂದೆ ಅಂತ ತೀರ್ಮಾನ ಮಾಡಿದರೇನು?.... ತುಂಬಾ ತಮಾಶೆಯಾಗಿದೆ!"

"ಇದರಲ್ಲಿ ತಮಾಶೆಯಾಗುವಂಥಾದ್ದು ಏನಿದೆ?"

"ನಾನೊಂದು ಗುಟ್ಟು ಹೇಳ್ತೀನಿ. ಅದನ್ನು ಯಾರಿಗೂ ಹೇಳಬಾರದು?"

"ಪ್ರಮಾಣ ಮಾಡ್ತೀನಿ."

"ಪಾವೆಲ್‌ರ ಚರ್ಚಿನ ಕೆರ್ಕ್‌ಮೀಸ್ಟರ್!"

"ನಿನ್ನ ಮನೆಯವರಿಗೆ ಗೊತ್ತೇನು?"

"ಖಂಡಿತ ಇಲ್ಲ. ನಾನು ಅವರಿಗೆ ಹೇಳೂದೂ ಇಲ್ಲ. ಆದರೆ ಇದಕ್ಕೆ ಕಾರಣ ನೀನು ಅಲ್ಲ ಅನ್ನೋದೂ ಗೊತ್ತು!"

ವಿನ್ಸೆಂಟ್ ಒಳಗಡೆ ಹೋದ. ಒಳಗೆ ವಾತಾವರಣದಲ್ಲಿ ಏನೂ ಬದಲಾವಣೆ ಕಾಣಲಿಲ್ಲ. ಸ್ಟೀನ್‌ಳ ಬಸಿರನ್ನು ಒಂದು ಹಸು, ಕುರಿ ಬಸಿರಾಗುವಷ್ಟೇ ಸಹಜವಾಗಿ ತೆಗೆದುಕೊಂಡಂತೆ ಕಾಣಿಸುತ್ತಿತ್ತು. ವಿನ್ಸೆಂಟ್‌ನನ್ನು ಮೊದಲಿನಂತೆಯೇ ವಿಶ್ವಾಸದಿಂದ ಬರಮಾಡಿಕೊಂಡರು. ಅವನು ನಿರಪರಾಧಿ ಅನ್ನುವುದನ್ನು ತಿಳಿದಿದ್ದರು.

ಆದರೆ ಊರಿನವರ ನಂಬಿಕೆಯೇ ಬೇರೆಯಾಗಿತ್ತು. ಆಡ್ರಿಯಾನಾ ಬಾಗಿಲಿನ ಹತ್ತಿರ ನಿಂತು ಕೇಳಿಸಿಕೊಳ್ಳುತ್ತಿದ್ದಳು. ಕ್ಷಣ ಮಾತ್ರದಲ್ಲಿ ಅಕ್ಕಪಕ್ಕದವರಿಗೆಲ್ಲ ವಿನ್ಸೆಂಟ್ ಮಗುವಿನ ತಂದೆ ಅನ್ನುವ ಸುದ್ದಿಯನ್ನು ತಿಳಿಸಿದಳು. ಸ್ವಲ್ಪ ಸಮಯದಲ್ಲಿಯೇ ನ್ಯೂನೆನ್‌ನ ಎರಡು ಸಾವಿರದ ಆರುನೂರು ಮಂದಿಯೂ ಇದನ್ನೇ ನಂಬಿದರು. ಫಾದರ್ ಪಾವೆಲ್ ಅವರಿಬ್ಬರ ಮದುವೆಗೆ ಒತ್ತಾಯ ಮಾಡುತ್ತಿದ್ದಾರೆಂದೂ ಜನ ಮಾತಾಡಿಕೊಳ್ಳ ತೊಡಗಿದರು.

ನವೆಂಬರ್, ಚಳಿಗಾಲಗಳು ಬಂದವು. ಅಲ್ಲಿಂದ ಹೊರಡುವ ಸಮಯ ಹತ್ತಿರವಾಯಿತು. ನ್ಯೂನೆನ್‌ನಲ್ಲಿ ಇನ್ನು ಇರುವುದರಲ್ಲಿ ಯಾವ ಪ್ರಯೋಜನವೂ ಕಾಣಲಿಲ್ಲ ಅವನು ಪೈಂಟ್ ಮಾಡಬೇಕೆಂದುಕೊಂಡಿದ್ದೆಲ್ಲವನ್ನೂ ಪೈಂಟ್ ಮಾಡಿ ಮುಗಿಸಿದ್ದ. ಹಳ್ಳಿಯ ಜೀವನದ ಬಗ್ಗೆ ತಿಳಿಯಬೇಕಾದ್ದನ್ನೆಲ್ಲ ತಿಳಿದಿದ್ದ. ಈಗ ಈ ಊರಿನ ಜನರ ದ್ವೇಷ, ಅಸಮಾಧಾನಗಳ ಮಧ್ಯೆ ಬದುಕುವ ಮನಸ್ಸಿರಲಿಲ್ಲ. ಹೊರಡಲೇ ಬೇಕಾದ ಸಮಯ ಬಂದಿತ್ತು. ಆದರೆ ಎಲ್ಲಿಗೆಂದು ಹೋಗುವುದು?

"ಮಿಜ್ನಹೀರ್ ವಾನ್‌ಗೋ, ಫಾದರ್ ಪಾವೆಲ್‌ರು ನೀನು ಈ ಕೂಡಲೇ ಜಾಗ ಖಾಲಿ ಮಾಡಬೇಕೆಂದು ಹೇಳುತ್ತಿದ್ದಾರೆ" ಆಡ್ರಿಯಾನಾ ದುಃಖದಿಂದ ತಿಳಿಸಿದಳು.

"ಆಯ್ತು. ಅವರು ಹೇಗೆ ಹೇಳಿದರೆ ಹಾಗೆ."

ತಾನು ಮಾಡಿದ ಕೃತಿಗಳನ್ನು ನೋಡಿದ. ಎರಡು ವರ್ಷಗಳಿಂದ ದುಡಿದು ಮಾಡಿದ್ದು, ನೇಕಾರರ, ರೈತರ ಮಗ್ಗಗಳ, ಅಲ್ಲಿನ ಚರ್ಚುಗಳ, ಪಾದ್ರಿ ಮನೆಗಳ, ಹಳೆಯ ಚರ್ಚಿನ ಗೋಪುರ, ಬಯಲು, ಅಲ್ಲಿನ ಕುರುಚಲು ಗಿಡಗಳು, ಮುಳ್ಳುಕಂಟಿ, ಪೊದೆಗಳು ಹೀಗೆ ನೂರಾರು ಪೈಂಟಿಂಗ್‌ಗಳು!

ಏನೋ ಭಾರವೆನಿಸಿತು. ತನ್ನೆಲ್ಲ ಪೈಂಟಿಂಗ್‌ಗಳು ಕೇವಲ ಆಂಶಿಕ. ರೈತರ ಬದುಕಿನ ತುಣುಕುಗಳು ಇದುವೆ ಹೊರತು, ರೈತ, ಅವನ ಬದುಕು, ಅವನ ಗುಡಿಸಲು, ಹೊಗೆಯಾಡುವ ಆಲೂಗಡ್ಡೆಗಳು, ಬ್ರಬಾಂಟೀನ್‌ನ ವಾಸನೆ - ಎಲ್ಲವನ್ನೂ ಒಂದೇ ಕೃತಿಯಲ್ಲಿ ಸಮಗ್ರತೆಯೊಂದಿಗೆ ಕಟ್ಟಿಕೊಡಲು ಸಾಧ್ಯವಾಗುತ್ತಿಲ್ಲ ಎನಿಸಿತು. ಅಂಥಾದ್ದನ್ನು ಪೂರ್ತಿಮಾಡದೆ ಹೋಗುವುದಾದರೂ ಹೇಗೆ!

ಕ್ಯಾಲೆಂಡರ್ ಕಡೆ ನೋಡಿದ. ತಿಂಗಳು ಮುಗಿಯಲು ಇನ್ನೂ ಹನ್ನೆರಡು ದಿನ ಬಾಕಿ ಇತ್ತು. ಅವನು ಆಡ್ರಿಯಾನಾಳನ್ನ ಕರೆದ.

"ಫಾದರ್ ಪಾವೆಲ್‌ಗೆ ಹೇಳಿ, ನಾನು ತಿಂಗಳ ಪೂರ್ತಿ ಬಾಡಿಗೆಯನ್ನು ಕೊಟ್ಟಿದ್ದೀನಿ, ಒಂದನೇ ತಾರೀಖಿನವರೆಗೆ ಖಾಲಿ ಮಾಡುವುದಿಲ್ಲ ಅಂತ ಹೇಳಿ" ಎಂದ.

ವಿನ್ಸೆಂಟ್, ಈಸಲ್, ಪೈಂಟ್ಸ್, ಕ್ಯಾನ್‌ವಾಸ್, ಬ್ರಷ್ಷುಗಳು – ಎಲ್ಲವನ್ನೂ ತೆಗೆದುಕೊಂಡು ಡಿ ಗ್ರೂತ್‌ರ ಗುಡಿಸಲಿಗೆ ಹೋದ. ಮನೆಯಲ್ಲಿ ಯಾರೂ ಇರಲಿಲ್ಲ. ಕೋಣೆಯ ಒಳಭಾಗದ ಪೆನ್ಸಿಲ್ ಸ್ಕೆಚ್ ಮಾಡಲು ತೊಡಗಿದ. ಮನೆಯವರು ಒಳಗೆ ಬಂದಾಗ, ಅದನ್ನು ಹರಿದು ಬಿಸಾಡಿದ. ಡಿ ಗ್ರೂತ್‌ರು ಊಟಕ್ಕಾಗಿ ಕುಳಿತರು. ಹೊಗೆಯಾಡುವ ಆಲೂಗಡ್ಡೆ, ಕಪ್ಪು ಕಾಫಿ, ಹಂದಿ ಮಾಂಸಗಳು ಅವರ ಮುಂದಿದ್ದವು. ವಿನ್ಸೆಂಟ್ ಕ್ಯಾನ್‌ವಾಸನ್ನು ಈಸಲ್‌ಗೇರಿಸಿ, ಮನೆಯವರು ನಿದ್ರೆ ಮಾಡಲು ಹೋಗುವವರೆಗೂ ಮುಂದುವರೆಸಿದ. ಮತ್ತೆ ಅದನ್ನು ಸ್ಟುಡಿಯೋಗೆ ಹೊತ್ತೊಯ್ದು ರಾತ್ರಿ ಇಡೀ ಕೆಲಸ ಮಾಡಿದ. ಬೆಳಿಗ್ಗೆ ನಿದ್ದೆ ಮಾಡಿದ. ಎದ್ದು ಒಂದು ರೀತಿಯ ಅಸಹ್ಯದಿಂದ ರಾಕ್ಷಸೀ ಆವೇಶಕ್ಕೆ ಒಳಗಾಗಿ ಕ್ಯಾನ್‌ವಾಸನ್ನು ಸುಟ್ಟು ಹಾಕಿದ, ಮತ್ತೆ ಡಿ ಗ್ರೂತ್‌ರ ಗುಡಿಸಲಿನ ಕಡೆ ನಡೆದ.

ಹಿಂದಿನ ಡಚ್ ಮಾಸ್ಟರುಗಳು, ಡ್ರಾಯಿಂಗ್ ಮತ್ತು ಬಣ್ಣಗಳು ಬೇರೆ ಬೇರೆ ಅಲ್ಲ, ಒಂದೇ ಎಂಬುದನ್ನು ಅವನಿಗೆ ಕಲಿಸಿದ್ದರು. ಡಿ ಗ್ರೂತ್ ಕುಟುಂಬದವರು ಮಾಮೂಲಿಯಾಗಿ ಕುಳಿತುಕೊಳ್ಳುವ ಜಾಗಗಳಲ್ಲಿಯೇ ಕುಳಿತರು. ವಿನ್ಸೆಂಟ್‌ಗೆ ಈ ಜನ ಹೊಲಗಳಲ್ಲಿ ಆಲೂಗಡ್ಡೆಗಳನ್ನು ಅಗೆಯುವಾಗ ಉಪಯೋಗಿಸುವ ಕೈಗಳನ್ನೇ ದೀಪದ ಬೆಳಕಿನಲ್ಲಿ ಆಲೂಗಡ್ಡೆ ತಿನ್ನಲು ಹೇಗೆ ಉಪಯೋಗಿಸುತ್ತಾರೆ, ಹೇಗೆ ಊಟದ ಪಾತ್ರೆಗಳಲ್ಲಿ ತಮ್ಮ ಕೈಗಳನ್ನು ಇರಿಸುತ್ತಾರೆ – ಎನ್ನುವುದನ್ನು ಗಮನಿಸಿ, ಕೈಗಳ ಶ್ರಮವನ್ನು ಕಲಾಕೃತಿ ಹೇಳುವಂತಾಗಬೇಕೆಂದು ಹಾತೊರೆಯುತ್ತಿದ್ದ. ಹೇಗೆ ಪ್ರಾಮಾಣಿಕತೆಯಿಂದ ತಮ್ಮ ಊಟವನ್ನು ಸಂಪಾದಿಸಿಕೊಳ್ಳುತ್ತಾರೆಂಬುದನ್ನೂ ತಿಳಿಸಬೇಕೆಂದಿದ್ದ.

ಪೂರ್ತಿ ಆವೇಶದೊಂದಿಗೆ ಕ್ಯಾನ್‌ವಾಸ್ ಮೇಲೆ ಆಕ್ರಮಣ ಮಾಡುವ ಹಳೆಯ ಚಾಳಿ ಈಗ ಅವನಿಗೆ ಒದಗಿ ಬಂತು. ಊಹಿಸಲಾಗದ ವೇಗ. ತತ್ಪರತೆಗಳೊಂದಿಗೆ, ಉತ್ಸಾಹದೊಂದಿಗೆ ಕೆಲಸ ಶುರು ಮಾಡಿದ. ನೂರಾರು ರೈತರು, ಗುಡಿಸಲುಗಳು, ಮನೆಮಂದಿ ಎಲ್ಲರೂ ಹೊಗೆಯಾಡುತ್ತಿದ್ದ ಆಲೂಗಡ್ಡೆಗಳ ಮುಂದೆ ಕುಳಿತಿರುವುದನ್ನು, ಅವನಿಗರಿವಿಲ್ಲದಂತೆ ಕ್ಯಾನ್‌ವಾಸ್‌ನಲ್ಲಿ ಇಳಿಸಲು ಆರಂಭಿಸಿದ.

"ಫಾದರ್ ಪಾವೆಲ್ ಇವತ್ತು ಇಲ್ಲಿಗೆ ಬಂದಿದ್ದ." ತಾಯಿ ಹೇಳಿದಳು.

"ಯಾಕಂತೆ?" ವಿನ್ಸೆಂಟ್ ಪ್ರಶ್ನಿಸಿದ.

"ನಿನಗೆ ಪೋಸ್ ಕೊಡದೆ ಇದ್ದರೆ, ನಮಗೆ ಹಣ ಕೊಡುವುದಾಗಿ ಹೇಳಿದ."

"ನೀವೇನು ಹೇಳಿದಿರಿ?"

"ನೀನು ನಮಗೆ ಸ್ನೇಹಿತ ಅಂದೆವು."

"ಇಲ್ಲಿ ಸುತ್ತಮುತ್ತ ಇರೋ ಎಲ್ಲ ಮನೆಗಳಿಗೂ ಹೋಗಿದ್ದಾನೆ." ಸ್ಟೀನ್ ಮಧ್ಯೆ ಹೇಳಿದಳು. "ಆದರೆ ಅವರೆಲ್ಲ, ಅವನ ಧರ್ಮದ ಹಣ ತಗೊಳ್ಳೊದಕ್ಕಿಂತ ನಿನ್ನ ಹತ್ತಿರ ಚಿಕ್ಕಾಸು ತಗೊಂಡು ಪೋಸ್ ಕೊಡ್ತೀವಿ ಅಂತ ಹೇಳಿದ್ದಾರೆ."

ಮಾರನೇ ದಿನ ಮತ್ತೆ ಕ್ಯಾನ್‌ವಾಸ್ ಮೇಲೆ ತನ್ನ ಬೇಸರ ತೋರಿಸಿಕೊಂಡ. ಏನೋ ಒಂದು ಬಗೆಯ ಅಸಹಾಯಕತೆ, ಹತಾಶೆ, ಅಸಮರ್ಥತೆಗಳ ಆಕ್ರೋಶದೊಂದಿಗೆ ಕ್ಯಾನ್‌ವಾಸ್‌ನ್ನು ಎಸೆದು ಬಿಟ್ಟ. ಇನ್ನು ಕೇವಲ ಹತ್ತು ದಿವಸ ಗಡುವಿತ್ತು, ನ್ಯೂನೆನ್‌ನಿಂದ ಹೊರಡಲು. ಅವನಿಗೆ ಅಸಹನೀಯ ಹಿಂಸೆಯ ಅನುಭವವಾಗುತ್ತಿತ್ತು. ಆದರೂ ಮಿಲ್ಲೆಟ್‌ಗೆ ಮಾತು ಕೊಟ್ಟದ್ದನ್ನು ಪೂರೈಸದೆ ಹೊರಡುವ ಹಾಗಿರಲಿಲ್ಲ.

ಪ್ರತಿದಿನಾ ರಾತ್ರಿ ಹೊತ್ತು ಡಿ ಗ್ರೂತ್‌ರ ಮನೆಗೆ ಹೋಗುತ್ತಿದ್ದ. ಕುಳಿತುಕೊಳ್ಳಲೂ ಆಗದಷ್ಟು ನಿದ್ರೆ ಬಂದಾಗ ಎದ್ದು ಹೋಗುತ್ತಿದ್ದರು. ಪ್ರತಿಯೊಂದು ರಾತ್ರಿಯೂ ಹೊಸ ಹೊಸ ಬಣ್ಣಗಳ ಪ್ರಯೋಗ, ಬೇರೆಬೇರೆ ಅಳತೆ ಪ್ರಮಾಣಗಳು, ಅರ್ಥಗಳು, ಇವುಗಳ ಪ್ರಯೋಗ, ಹುಡುಕಾಟಗಳು ಮುಂದುವರೆಯುತ್ತಿದ್ದವು. ಆದರೂ ಎಲ್ಲಿಯೋ ಏನೋ ಕೊರತೆ, ಅಪರಿಪೂರ್ಣತೆ, ಸರಿಯಾಗಿಲ್ಲವೆಂಬ ಅತೃಪ್ತಿ, ಅಸಮಾಧಾನಗಳು.

ತಿಂಗಳ ಕಡೆಯ ದಿನ ಬಂತು. ವಿನ್ಸೆಂಟ್ ಉನ್ಮಾದ, ಉದ್ರೇಕಾವಸ್ಥೆಯಲ್ಲಿ ಕೆಲಸ ಮಾಡಿದ. ನಿದ್ದೆಯೇ ಇಲ್ಲ; ಊಟವಂತು ಮೊದಲೇ ಇಲ್ಲ. ಎಲ್ಲವನ್ನೂ ಮರೆತು ಪೈಪ್ ಪೂರ್ತಿ ಸೇದಿ ಮುಗಿಸಿದ. ಬ್ಯಾಗ್‌ನಲ್ಲಿ ಎಲ್ಲಾ ತುಂಬಿಕೊಂಡ. ಗೋಡೆ ಮೇಲಿದ್ದ ಸ್ಟಡೀಸ್, ಸ್ಕೆಚಸ್, ಪೈಂಟಿಂಗ್ಸ್ ಎಲ್ಲವನ್ನೂ ಕಳಚಿ ಒಂದು ಪೆಟ್ಟಿಗೆಯಲ್ಲಿ ಇರಿಸಿದ. ಹಾಗೇ ದಿವಾನ್ ಮೇಲೆ ಬಿದ್ದುಕೊಂಡ.

"ನಿರಾಶೆ, ಸೋಲಿನ ಭಾವಸ್ಥಿತಿಯಲ್ಲಿಯೇ ಪ್ರಕೃತಿ, ಸ್ವಭಾವಗಳನ್ನು ಅರಿಯಲು ಹೋರಾಟಕ್ಕೆ ಮುಂದಾಗುತ್ತಾನೆ. ಎಲ್ಲವೂ ದಾರಿ ತಪ್ಪುತ್ತದೆ; ಆದರೆ ಕಡೆಗೆ ತನ್ನ ಸ್ವಂತ ಪ್ಯಾಲೆಟ್‌ನಿಂದಲೇ ಪ್ರಶಾಂತವಾಗಿ ಸೃಷ್ಟಿ ಕ್ರಿಯೆಗೆ ತೊಡಗುತ್ತಾನೆ. ಆಗ ಕೈಗೆ ಎಟುಕದ್ದೆಲ್ಲವೂ ಅವನ ಮುಂದೆ ಕೈಕಟ್ಟಿ ನಿಲ್ಲುತ್ತವೆ."

ಬ್ರಸೆಲ್ಸ್‌ನಲ್ಲಿದ್ದಾಗ ಪೀಟರ್‌ಸನ್ ಹೇಳಿದ್ದ. ಮಾಡೆಲ್ಸ್‌ಗೆ ತೀರಾ ಹತ್ತಿರವಾಗಿ ಕೆಲಸ ಮಾಡುವುದರಿಂದ, ಯಥಾವತ್ತಾದ ರೂಪಣ ಸಾಧ್ಯವಾಗುತ್ತಿಲ್ಲ ಎಂದು. ಇಲ್ಲೀವರೆಗೆ ತಾನು ಕಾಣುವುದೆಲ್ಲದರಲ್ಲಿ ತನ್ನನ್ನು ಸುರಿದುಕೊಳ್ಳುತ್ತಿದ್ದ. ಈಗ ಅವುಗಳನ್ನು ತನ್ನೊಳಗೆ ಸೆಳೆದುಕೊಳ್ಳುತ್ತಿದ್ದಾನೆ.

ಸಿಪ್ಪೆ ಸುಲಿಯದ ಆಲೂಗಡ್ಡೆಯ ಮಣ್ಣಿನ ಬಣ್ಣದಲ್ಲಿ ಎಲ್ಲವನ್ನೂ ಪೈಂಟ್ ಮಾಡಿದ. ಕೊಳಕಾದ ಟೇಬಲ್ ಕ್ಲಾತ್. ಹೊಗೆ ತುಂಬಿದ್ದ ಗೋಡೆಗಳು ಒರಟು ಧೂಲಗಳಿಂದ ಇಳಿಬಿದ್ದ ಲ್ಯಾಂಪು, ಹೊಗೆಯಾಡುತ್ತಿದ್ದ ಆಲೂಗಡ್ಡೆಗಳನ್ನು ಬಡಿಸುತ್ತಿರುವ ಸ್ಟೀನ್, ಕಪ್ಪು ಕಾಫಿ ಸುರಿಯುತ್ತಿರುವ ತಾಯಿ, ತುಟಿಗೆ ಬಟ್ಟಲು ಎತ್ತಿಕೊಳ್ಳುತ್ತಿರುವ ಸೋದರ ಎಲ್ಲವನ್ನೂ ದೇವರು ಕೊಟ್ಟಂತೆ ಸ್ವೀಕರಿಸುವ ಭಾವದೊಂದಿಗೆ ಪ್ರಶಾಂತವಾಗಿ ಕಾಣುತ್ತಿದ್ದ ಎಲ್ಲರ ಮುಖಗಳು – ಎಲ್ಲವೂ ಕ್ಯಾನ್‌ವಾಸ್‌ನಲ್ಲಿ ಸೇರಿದವು.

ಬೆಳಗಾಯಿತು. ಕಿಟಕಿಯೊಳಗಿಂದ ಬೆಳ್ಳಿಕಿರಣವೊಂದು ಇಣುಕಿತು. ಸ್ಟೂಲ್ ಮೇಲಿಂದ ಎದ್ದ. ಈಗ ಪ್ರಶಾಂತವಾಗಿದ್ದ. ಹನ್ನೆರಡು ದಿನಗಳ ಉದ್ವಿಗ್ನತೆ, ಆವೇಶಗಳು ಮುಗಿದಿದ್ದವು. ತಾನು ಮಾಡಿದ ಕೆಲಸವನ್ನು ಗಮನಿಸಿದ. ಹಂದಿಮಾಂಸ, ಕಪ್ಪು

ಕಾಫಿ, ಹೊಗೆಯಾಡುವ ಆಲೂಗಡ್ಡೆ! ಕಡೆಗೂ ತಾನು ಬಯಸಿದ್ದು ಕ್ಯಾನ್‌ವಾಸ್‌ನಲ್ಲಿ ನೆಲೆನಿಂತಿತು. ಸಾಯುವಂತಹುಗಳ ನಡುವೆ ಹಾದೂ ಸಾವಿಲ್ಲದ ಸ್ಥಿತಿ ತಲುಪಿತ್ತು. ಬ್ರಬಾಂಟ್‌ನ ರೈತನಿಗೆ ಸಾವೆಂಬುದೇ ಇಲ್ಲ.

ಮೊಟ್ಟೆಯ ಬಿಳಿಯ ಲೋಳೆಯಿಂದ ಕ್ಯಾನ್‌ವಾಸ್ ಮೇಲೆ ಮೂಡಿದ್ದ ಚಿತ್ರವನ್ನು ಒರೆಸಿ ತೊಳೆದ. ಪೆಟ್ಟಿಗೆಯಲ್ಲಿ ತುಂಬಿರಿಸಿದ್ದ ಡ್ರಾಯಿಂಗ್‌ಗಳನ್ನು ಮನೆಗೆ ಒಯ್ದು ತಾಯಿಗೆ ಒಪ್ಪಿಸಿದ. ಅವರೆಲ್ಲರಿಗೂ ಗುಡ್‌ಬೈ ಹೇಳಿದ. ಸ್ಟುಡಿಯೋಗೆ ಬಂದು 'ಪೊಟ್ಯಾಟೋ ಈಟರ್ಸ್' ಎಂದು ಕ್ಯಾನ್‌ವಾಸ್‌ನ ಅಡಿಯಲ್ಲಿ ಶೀರ್ಷಿಕೆ ಬರೆದ. ಅದರ ಜೊತೆಗೆ ಅವನು ಮಾಡಿದ್ದ ಉಳಿದ 'ಸ್ಟಡೀಸ್'ಗಳನ್ನು ತೆಗೆದಿರಿಸಿಕೊಂಡು ಪ್ಯಾರಿಸ್ ಕಡೆ ಹೊರಟ.

□□

## ಭಾಗ – ಐದು

# ಆಹಾ! ಹೌದು ಇದು ಪ್ಯಾರಿಸ್!!

–೧–

"ಅಂದ್ರೆ, ನಾನು ಬರೆದ ಲೆಟ್ಟರ್ ನಿನಗೆ ಸಿಗಲಿಲ್ಲ?" ಥಿಯೋ ಬೆಳಿಗ್ಗೆ ತಿಂಡಿಗೆ ಕೂತಾಗ ಕೇಳಿದ.

"ಇಲ್ಲಾ ಅನ್ಸತ್ತೆ..... ಇಷ್ಟೆಷ್ಟಕ್ಕೂ ಅದರಲ್ಲೇನಿತ್ತು?" ವಿನ್ಸೆಂಟ್ ಕೇಳಿದ.

"ಗೂಪಿಲ್ಸ್‌ನಲ್ಲಿ ನನಗೆ ಪ್ರಮೋಷನ್ ಸಿಕ್ಕಿದ ವಿಷಯ ಬರೆದಿದ್ದೆ."

"ಯಾಕೆ ಥಿಯೋ, ನೆನ್ನೆ ಅದರ ಬಗ್ಗೆ ಒಂದು ಮಾತೂ ಹೇಳಲಿಲ್ಲ."

"ನೀನು ಕೇಳಿಸಿಕೊಳ್ಳಲೂ ಆಗದಷ್ಟು ಸಂಭ್ರಮದಲ್ಲಿದ್ದೆ. ಬುಲೆವಾರ್ಡ್ ಮಾಂಟ್‌ಮಾರ್ತ್ರನಲ್ಲಿ ಇರೋ ಗ್ಯಾಲರಿ ನಾನು ನೋಡಿ ಕೊಳ್ತಿದ್ದೀನಿ."

"ಥಿಯೋ, ಅದ್ಭುತ! ಆರ್ಟ್ ಗ್ಯಾಲರಿಯ ಯಜಮಾನ!"

"ನಿಜವಾಗಿಯೂ ಗ್ಯಾಲರಿ ನನ್ನ ಸ್ವಂತದ್ದಲ್ಲ. ಗೂಪಿಲ್ಸ್ ಪಾಲಿಸಿ ಏನಿದೆ. ಅದನ್ನು ಕಡ್ಡಾಯವಾಗಿ ಪಾಲಿಸಲೇಬೇಕು. ಆದರೆ ಒಂದೇ ಒಂದು ಒಳ್ಳೆ ವಿಷಯ ಅಂದ್ರೆ, ಇಂಪ್ರೆಷನಿಷ್ಟರ ಕೃತಿಗಳ ಪ್ರದರ್ಶನಕ್ಕೆ ಒಪ್ಪಿಗೆ ನೀಡಿದ್ದಾರೆ."

"ಯಾರ ಯಾರ ಕೃತಿಗಳನ್ನು ಪ್ರದರ್ಶನಕ್ಕೆ ಇಡ್ತಿದ್ದೀ?"

"ಮೋನೆಟ್, ಡೆಗಾಸ್, ಪಿಸ್ಸಾರೋ, ಮಾನೆಟ್ಸ್."

"ಅವರ ಹೆಸರನ್ನೇ ಕೇಳಿಲ್ಲ."

"ಹಾಗಾದರೆ ಗ್ಯಾಲರಿಗೆ ಬಂದು ಅವನ್ನೆಲ್ಲ ಚೆನ್ನಾಗಿ ಗಮನಿಸು."

"ಅದ್ಯಾಕದು ಮುಖ ಹಾಗೆ?"

"ಏನಿಲ್ಲ ಇನ್ನು ಸ್ವಲ್ಪ ಕಾಫಿ ತಗೋತೀಯ, ಇನ್ನು ಸ್ವಲ್ಪ ಹೊತ್ತಲ್ಲೇ ಹೊರಡಬೇಕು. ನನ್ನ ಆಫೀಸಿಗೆ ನಡದೇ ಹೋಗುತ್ತೇನೆ."

"ಥ್ಯಾಂಕ್ಸ್. ಒಂದರ್ಧ ಕಪ್ ಮಾತ್ರ ಸಾಕು. ಥಿಯೋ ನಿನ್ನ ಜೊತೆ ಕೂತು ಬ್ರೇಕ್‌ಫಾಸ್ಟ್ ಮಾಡೋದೆ ಒಂದು ಖುಷಿ."

"ನೀನು ಪ್ಯಾರಿಸ್‌ಗೆ ಬರೋದನ್ನು ಎಷ್ಟೋ ದಿನಗಳಿಂದ ಎದುರು ನೋಡ್ತಿದ್ದೆ. ನೀನಂತೂ ಬರ್ಲೇ ಬೇಕಿತ್ತೂನ್ನು! ಆದರೆ ಜೂನ್ ವರೆಗೂ ತಡೆದಿದ್ದರೆ ಚೆನ್ನಾಗಿತ್ತು. ನಾನು ರೂ ಲೆಪಿಕ್‌ಗೆ ಹೋದ ಮೇಲಾಗಿದ್ದರೆ, ಅಲ್ಲಿ ಮೂರು ರೂಮಿನ ಮನೆಯಿರ್ತಿತ್ತು.

ಇಲ್ಲಿ ನಿನಗೆ ಕೆಲಸ ಮಾಡೋಕೆ ಅಷ್ಟೊಂದು ಜಾಗಾನೂ ಇಲ್ಲ; ಕೆಲಸಾನೂ ಮಾಡೋಕೆ ಆಗೊಲ್ಲ."

ವಿನ್ಸೆಂಟ್ ಕುರ್ಚಿಯನ್ನು ತಿರುಗಿಸಿ ಸುತ್ತಲೂ ನೋಡಿದ. ಅಪಾರ್ಟ್‌ಮೆಂಟ್‌ನಲ್ಲಿ ಇದ್ದದ್ದು ಒಂದು ಕೋಣೆ, ಪುಟ್ಟ ಅಡಿಗೆ ಮನೆ, ಮತ್ತು ಒಂದು ಅಲಮಾರಿ. ಕೋಣೆಯನ್ನೇನೋ ಅಚ್ಚುಕಟ್ಟಾಗಿ ಸಜ್ಜುಗೊಳಿಸಲಾಗಿತ್ತಾದರೂ ಓಡಾಡಲು ಜಾಗವೇ ಇರಲಿಲ್ಲ.

"ನಾನು ಈಸಲ್ ಅನ್ನು ಇರಿಸಿದರೆ ನಿನ್ನ ಸುಂದರವಾದ ಫರ್ನಿಚರನ್ನು ಮುಂದುಗಡೆ ಇರುವ ಅಂಗಳದಲ್ಲಿ ಇರಿಸಬೇಕಾಗುತ್ತೆ."

"ನನಗೆ ಗೊತ್ತು ಇಷ್ಟೆಲ್ಲ ಸಾಮಾನುಗಳಿಂದ ತುಂಬಿ ಹೋಗಿದೆ. ಆದರೆ ನಾನು ಕೊಂಡುಕೊಳ್ಳಬೇಕೂಂತ ಅಂದ್ಕೊಳ್ಳಿದ್ದ ಈ ಫರ್ನಿಚರ್ ಕಣ್ಣಿಗೆ ಬಿದ್ದದ್ದರಿಂದ ಬಿಡೋಕೆ ಆಗಲಿಲ್ಲ. ಬಾ ವಿನ್ಸೆಂಟ್ ಅಲ್ಲಿ ಗುಡ್ಡ ಇದೆಯಲ್ಲ ಅದರಿಂದ ಕೆಳಗೆ ಒಂದು ಜಾಗಕ್ಕೆ ನಿನ್ನನ್ನು ಕರ್ಕೊಂಡು ಹೋಗ್ತೀನಿ. ನನ್ನ ಪ್ರಿಯವಾದ ವಾಕಿಂಗ್ ಸ್ಪಾಟ್ 'ಬುಲ್‌ವಾರ್ಡ್' ಬೆಳಗಿನ ಜಾವದ ಘಮಲನ್ನು ಆಘ್ರಾಣಿಸದೆ ಪ್ಯಾರಿಸ್ ಅರ್ಥವಾಗೊಲ್ಲ."

ಥಿಯೋ ಭಾರವಾಗಿದ್ದ ಕಪ್ಪುಕೋಟನ್ನು ಅಚ್ಚ ಬಿಳುಪಿನ ಅಂಗಿಯ ಮೇಲೆ ಧರಿಸಿದ. ಬೈತಲೆಯ ಎರಡೂ ಕಡೆಯ ಗುಂಗುರು ಕೂದಲಿನ ಮೇಲೆ ಬ್ರಶ್‌ನಿಂದ ಫೈನಲ್ ಟಚಪ್ ಎಂಬಂತೆ ಬಾಚಿಕೊಂಡ. ನಂತರ ಮೀಸೆ, ಗಡ್ಡಗಳ ಮೇಲೂ ಬ್ರಶ್ ಆಡಿಸಿದ. ಕಪ್ಪು ಬೌಲರ್ ಹ್ಯಾಟ್ ತಲೆಗೆ ಧರಿಸಿದ. ಗ್ಲೋವ್ಸ್ ಏರಿಸಿಕೊಂಡ. ಕೈಯಲ್ಲೊಂದು ವಾಕಿಂಗ್ ಸ್ಟಿಕ್ ಹಿಡಿದು ಹೊರ ಬಾಗಿಲಿನಲ್ಲಿ ನಿಂತು,

"ವಿನ್ಸೆಂಟ್ ರೆಡಿಯಾದೆಯಾ?..... ಓ ದೇವರೇ ಏನಿದು? ಇಂಥಾದ್ದನ್ನೇನಾದರೂ ಹಾಕ್ಕೊಂಡು ಪ್ಯಾರಿಸ್‌ನಲ್ಲಿ ಕಾಣಿಸಿಕೊಂಡರೆ, ಪೋಲಿಸ್‌ನವರು ಎಳ್ಕೊಂಡು ಹೋಗ್ತಾರೆ."

"ಏನಾಗಿದೆ ಇದಕ್ಕೆ!" ಎಂದು ತನ್ನ ಕಡೆಗೊಮ್ಮೆ ನೋಡಿಕೊಂಡ. "ನಾನು ಸುಮಾರು ಎರಡು ವರ್ಷದಿಂದ ಇದನ್ನೇ ಹಾಕ್ಕೋತ್ತಿದ್ದೀನಿ. ಯಾರೂ ಏನೂ ಹೇಳಿಲ್ಲ!"

ಥಿಯೋ ಗಟ್ಟಿಯಾಗಿ ನಕ್ಕ. "ಪರವಾಗಿಲ್ಲ ಬಿಡು. ಪ್ಯಾರಿಸ್‌ನವರಿಗೆ ನಿನ್ನಂಥವರ ಅಭ್ಯಾಸ ಆಗಿದೆ. ಗ್ಯಾಲರಿ ಕೆಲಸ ಮುಗಿದ ಮೇಲೆ ನಿನಗೊಂದಷ್ಟು ಬಟ್ಟೆ ಕೊಡಿಸ್ತೀನಿ."

ಇಬ್ಬರೂ ಅಪಾರ್ಟ್‌ಮೆಂಟಿನ ಮೆಟ್ಟಿಲು ಇಳಿದು, ನಡೆದು ರೂ ಲಾವಲ್ ಪ್ರವೇಶಿಸಿದರು. ಇದು ಸಾಕಷ್ಟು ವಿಶಾಲವಾದ ಮತ್ತು ಪ್ರತಿಷ್ಠಿತ ರಸ್ತೆಯಾಗಿತ್ತು. ಉದ್ದಕ್ಕೂ ಔಷಧಿ ಅಂಗಡಿಗಳು, ಪಿಕ್ಚರ್ ಫ್ರೇಂ ಅಂಗಡಿಗಳು ಮತ್ತು ಪುರಾತನವಸ್ತುಗಳ ಮಳಿಗೆಗಳು ಸಾಲುಸಾಲಾಗಿ ಇದ್ದವು.

"ಈ ಬಿಲ್ಡಿಂಗ್‌ನ ಮೂರನೇ ಅಂತಸ್ತಿನಲ್ಲಿ ಇರುವ ಈ ಮೂರು ಜನ ಹೆಂಗಸರನ್ನು ಗಮನಿಸು" ಥಿಯೋ ಹೇಳಿದ.

ವಿನ್ಸೆಂಟ್ ತಲೆ ಎತ್ತಿ ನೋಡಿದ. ಮೂರು ಮುಖಗಳು ಮತ್ತು ಮುಂಡದ ಭಾಗಗಳು. ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ಮಾಡಿದವುಗಳು. ಆ ಮೂರು ಹೆಣ್ಣಿನ ಬೊಂಬೆಗಳ ಕೆಳಗೆ, ಶಿಲ್ಪ (Sculpture) ವಾಸ್ತು (Architecture) ಮತ್ತು ವರ್ಣಚಿತ್ರಕಲೆ (Painting) – ಎಂದು ಬರೆದಿತ್ತು.

"ಯಾಕೆ ವರ್ಣಚಿತ್ರಕಲೆಯನ್ನು ಇಷ್ಟು ವಿಕಾರವಾದ ಹೆಂಗಸಿನ ಜೊತೆ ಗುರುತಿಸಿದ್ದಾರೆ?"

"ನನಗೂ ಗೊತ್ತಿಲ್ಲ. ಇರಲಿ. ನೀನು ಸರಿಯಾದ ಜಾಗಕ್ಕೇ ಬಂದಿದ್ದೀಯ."

ಇಬ್ಬರೂ ಪುರಾತನವಸ್ತುಗಳ ಮಳಿಗೆ 'ಲ ವೂ ರೂಯೆನ್'ಗೆ ಬಂದರು. ಥಿಯೋ ಫರ್ನಿಚರನ್ನು ಇಲ್ಲಿಂದಲೇ ಕೊಂಡದ್ದು. ಮರುಗಳಿಗೆಯಲ್ಲಿ ಅವರಿಬ್ಬರೂ ಮಾಂಟ್ ಮಾರ್ತ್ರೆನಲ್ಲಿ ಇದ್ದರು. ನಗರದ ಹೃದಯ ಭಾಗದಲ್ಲಿದ್ದ ಇದು ಬಹಳ ಜನನಿಬಿಡತೆಯಿಂದ ಕೂಡಿತ್ತು. ನಿಜವಾದ ಪ್ಯಾರಿಸ್‌ನ ಬಣ್ಣ ಇಲ್ಲಿ ಬೆಳಕಿಗೆ ಬಂತು. ಜನ ಓಡಾಡುತ್ತಿದ್ದರು. ಕೆಲವರು ಕಾಫಿ ಕುಡಿಯುತ್ತಿದ್ದರು, ಮತ್ತೆ ಕೆಲವರು ತಿನ್ನುತ್ತಿದ್ದರು. ಮಾಂಸ ತರಕಾರಿ ಅಂಗಡಿಗಳು, ಕೆಫೆಗಳು ಬೇಕರಿಗಳು ತಮ್ಮ ದಿನನಿತ್ಯದ ವ್ಯಾಪಾರ ಚಟುವಟಿಕೆಗಳಲ್ಲಿ ಮೈಮರೆತಿದ್ದರು.

ಇದೊಂದು ಬೂರ್ಜ್ವಾ ಜಿಲ್ಲೆ. ಅಂಗಡಿಗಳಿಂದ ಇಡಿಕಿರಿದಿತ್ತು. ಕೆಲಸಕ್ಕೆ ಹೋಗುವ ಆತುರದಲ್ಲಿದ್ದವರು ರಸ್ತೆಯ ಮಧ್ಯೆಯೇ ಹಾದುಹೋಗುತ್ತಿದ್ದರು. ಅಂಗಡಿಗಳ ಮುಂದೆ ದೊಡ್ಡ ದೊಡ್ಡ ಕ್ರೇಟ್‌ಗಳಲ್ಲಿ ಇರಿಸಿದ್ದ ತರಕಾರಿಗಳ ಮೇಲೆ ಕೈಯಿರಿಸಿ ಬೆರಳುಗಳಿಂದ ಪರೀಕ್ಷಿಸುತ್ತಿದ್ದ, ಚೌಕಾಸಿ ಮಾಡುತ್ತಿದ್ದ ಹೆಂಗಸರು, ತುಂಬಿದ್ದರು.

"ಹೂಂ! ಇದೇ ನಿಜವಾದ ಪ್ಯಾರಿಸ್." ಒಂದು ನಿಟ್ಟುಸಿರುನೊಂದಿಗೆ ಹೇಳಿದ, ವಿನ್ಸೆಂಟ್.

"ಹೌದು. ಯೂರೋಪಿನ ರಾಜಧಾನಿ ಪ್ಯಾರಿಸ್. ಕಲಾವಿದರಿಗೆ ವಿಶೇಷವಾದ್ದು."

ವಿನ್ಸೆಂಟ್ ಪ್ಯಾರಿಸ್‌ನ ಚಟುವಟಿಕೆ, ಕಾರ್ಯ ಮಗ್ನತೆಗಳನ್ನು ಗಮನಿಸುವುದರಲ್ಲಿ ಮಗ್ನನಾದ. ಯುವಕರು ಕಪ್ಪು, ಕೆಂಪು ಪಟ್ಟೆಗಳ ಜಾಕೆಟ್ಟುಗಳನ್ನು ಧರಿಸಿದ್ದರು. ಹೆಂಗಸರು ಬ್ರೆಡ್ಡನ್ನು ಕಂಕುಳ ಕೆಳಗೆ ಇರಿಸಿಕೊಂಡು ನಡೆಯುತ್ತಿದ್ದರು. ತಳ್ಳುಗಾಡಿಗಳು ಸಾಲಾಗಿ ಒಂದರ ಪಕ್ಕದಲ್ಲಿ ಒಂದಾಗಿ ನಿಂತಿದ್ದವು. ಗೃಹಿಣಿಯರು ಮೃದು ಚಪ್ಪಲಿಗಳನ್ನು ಹಾಕಿಕೊಂಡಿದ್ದರು. ಶ್ರೀಮಂತ ವ್ಯಾಪಾರಿಗಳು, ಅಂಗಡಿ ಮಾಲಿಕರು ತಮ್ಮ ತಮ್ಮ ಕೆಲಸಕ್ಕೆ ಹೋಗಲು ವೇಗದ ಹೆಜ್ಜೆ ಹಾಕುತ್ತಿದ್ದರು. ಮಾಂಸದ ಅಂಗಡಿಗಳು, ಬೇಕರಿಗಳು, ಕೆಫೆಗಳು, ಲಾಂಡ್ರಿಗಳು – ಮೊದಲಾದುವನ್ನು ಹಾದು, ಸರ್ಕಲ್ ದಾಟಿದರು, ನಂತರ, ನಾತ್ರದಾಮ್ ಡಿ ಲೊರೆಟ್ ಚೌಕಕ್ಕೆ ಬಂದರು.

ಅಲ್ಲಿದ್ದ ಕೊಳಕಾದ ಕಪ್ಪುಕಲ್ಲಿನ ಚೌಕಾಕಾರದ ಚರ್ಚು, ತ್ರಿಕೋಣಾಕಾರದ ಛಾವಣಿಯನ್ನು ಹೊದ್ದು, ನೋಡಲು, ಮೇಲಿನ ನೀಲಿ ಆಗಸದ ಹಿನ್ನೆಲೆಗೆ, ತುಂಬ ಸುಂದರವಾಗಿ, ಮನಮೋಹಕವಾಗಿ ಕಾಣಿಸುತ್ತಿತ್ತು. ವಿನ್ಸೆಂಟ್ ಬಾಗಿಲಿನ ಮೇಲೆ ಬರೆದಿದ್ದ ಅಕ್ಷರಗಳನ್ನು ಹತ್ತಿರದಿಂದ ನೋಡಿದ.

"ಸ್ವಾತಂತ್ರ್ಯ, ಸಮಾನತೆ, ಸೋದರತ್ವ..... (Liberty, equality, fraternity ಎಂದು ಫ್ರೆಂಚ್‌ನಲ್ಲಿ ಬರೆದಿತ್ತು) ನಿಜವಾಗಿಯೂ ಇವುಗಳಿಗೆ ಅರ್ಥವಿದೆಯೇ ಥಿಯೋ?"

"ಇದೆ ಅಂತ ನಂಬಿದ್ದೇನೆ. ಮೂರನೆ ರಿಪಬ್ಲಿಕ್ ಬಹುಶಃ ಶಾಶ್ವತವಾಗಿ ಉಳಿದಿರುತ್ತೆ. ರಾಜನಿಷ್ಠರ ಯುಗ ಮುಗಿದು, ಸಮಾಜನಿಷ್ಠರು ಅಧಿಕಾರಕ್ಕೆ ಬರುತ್ತಿದ್ದಾರೆ. ಒಂದು ದಿನ ರಾತ್ರಿ ಎಮಿಲಿಜೋಲಾ ಹೇಳ್ತಿದ್ದ – ಮುಂದಿನ ಕ್ರಾಂತಿ ರಾಜಶಾಹಿಗೆ ಬದಲಾಗಿ ಕ್ಯಾಥೋಲಿಸಂ ವಿರುದ್ಧ ಆಗಲಿದೆ – ಎಂದು."

"ಜೋಲಾ! ಅವನ ಪರಿಚಯ ನಿನಗೆ ಇರೋದಕ್ಕೆ ನೀನೆಷ್ಟು ಅದೃಷ್ಟ ಮಾಡಿದ್ದೆ, ಥಿಯೋ."

"ಪಾಲ್ ಸೆಜ಼ಾನ್ನೆ ಅವನನ್ನು ನನಗೆ ಪರಿಚಯ ಮಾಡಿಸಿದ. ವಾರಕ್ಕೊಮ್ಮೆ ನಾವೆಲ್ಲ 'ಬಾತಿನೊಲ್ಲೆ' ಕೆಫೆಯಲ್ಲಿ ಸೇರ್ತೀವಿ. ಮುಂದಿನ ಸಲ ಹೋದಾಗ ನಿನ್ನನ್ನೂ ಕರ್‍ಕೊಂಡು ಹೋಗ್ತೀನಿ."

ರೂ ಮೋಂಟ್ ಮಾರ್ತ್ರೆ ತನ್ನ ಮೊದಲಿನ ಬೂರ್ಜ್ವಾ ಗುಣ ಬಿಟ್ಟು, ಈಗ ಒಂದು ಬಗೆಯ ಗಾಂಭೀರ್ಯ, ಪ್ರತಿಷ್ಠೆಗಳನ್ನು ಪಡೆದಿದೆ. ಅಭಿವೃದ್ಧಿಯ ಲಕ್ಷಣಗಳು ಢಾಳಾಗಿ ಕಾಣಿಸುತ್ತವೆ. ವಿಶಾಲವಾದ ದೊಡ್ಡ ದೊಡ್ಡ ಅಂಗಡಿಗಳು, ಮಳಿಗೆಗಳು, ಭವ್ಯವಾದ ಕಟ್ಟಡಗಳು, ಮೊದಲಿಗಿಂತ ಒಳ್ಳೊಳ್ಳೆ ಬಿಟ್ಟೆ, ಬರೆ ತೊಟ್ಟ ಮಂದಿ ಸಂಗೀತ ಸಭಾಂಗಣಗಳು, ರೆಸ್ಟೋರೆಂಟ್‌ಗಳಿಂದ ಕೂಡಿದ ಪೇವ್‌ಮೆಂಟ್‌ಗಳು, ಹೋಟೆಲುಗಳು, ಕುದುರೆಗಾಡಿಗಳಿಗೆ ಬದಲಾಗಿ ವಾಹನಗಳು ಕಾಣಿಸುತ್ತವೆ.

ಇಬ್ಬರು ಸೋದರರೂ ವೇಗವಾಗಿ ಹೆಜ್ಜೆ ಹಾಕಿದರು. ಬೆಳಗಿನ ಎಳೆಬಿಸಿಲು ಹಿತವಾಗಿ, ಚೈತನ್ಯದಾಯಕವಾಗಿತ್ತು. ಪ್ಯಾರಿಸ್‌ನಗರದ ಶ್ರೀಮಂತ, ಸಂಕೀರ್ಣ ಬದುಕಿನ ಅನುಭವವಾಗತೊಡಗಿತ್ತು.

"ಮನೇಲಿ ನಿನಗೆ ಕೆಲಸ ಮಾಡೋಕೆ ಆಗದೇ ಇರುವುದರಿಂದ ಕಾರಮನ್ ಸ್ಟುಡಿಯೋಗೆ ಹೋಗಬಹುದು."

"ಏನದು? ಹೇಗಿರುತ್ತೆ?"

"ಕೋರ್‌ಮನ್ ಎಲ್ಲ ಅಕಾಡೆಮಿಕ್ ಮಾಸ್ಟರ್‌ಗಳು ಇರೋಹಾಗೆ ಒಬ್ಬ. ನಿನಗೆ ಅವನ ಅಭಿಪ್ರಾಯ, ವಿಮರ್ಶೆ ಬೇಡ ಅಂತ ಅನಿಸಿದರೆ, ನಿನ್ನ ತಂಟೆಗೆ ಬರೊಲ್ಲ. ನಿನ್ನ ಪಾಡಿಗೆ ನೀನು ಮಾಡ್ಕೋಬಹುದು."

"ತುಂಬಾ ಖರ್ಚಾಗುತ್ತೇನು?"

ಥಿಯೋ ತನ್ನ ಕೈಲಿದ್ದ ಬೆತ್ತದಿಂದ ವಿನ್ಸೆಂಟ್‌ನ ತೊಡೆ ಮೇಲೆ ಮೆಲ್ಲಗೆ ಹೊಡೆದ.

"ನನಗೆ ಪ್ರಮೋಷನ್ ಸಿಕ್ಕಿದೆ. ಅಂತ ಹೇಳಿದೆನಲ್ಲ? ಜೋಲಾ ಮುಂದಿನ ಕ್ರಾಂತಿಯಲ್ಲಿ ಅಳಿಸಿಹಾಕಬೇಕೆಂದು ಯೋಚಿಸುತ್ತಿರುವ ಶ್ರೀಮಂತ ವರಿಷ್ಠವರ್ಗದವರ ಗುಂಪಲ್ಲಿ ನಾನೂ ಒಬ್ಬ."

'ರೂ ಮಾಂಟ್‌ಮಾತ್ರಟ್ಟಿಂದ ಬುಲ್‌ವಾರ್ಡ್ ಮಾಂಟ್ ಮಾರ್ತ್ರಗೆ ಬಂದರು. ಇಲ್ಲಿನ ಡಿಪಾರ್ಟ್‌ಮೆಂಟಲ್ ಸ್ಟೋರ್ಸ್, ಅಂಗಡಿಗಳು ಬಹಳ ದುಬಾರಿ. ಮುಂದೆ ಇದೇ ಬುಲ್‌ವಾರ್ಡ್ ಡೆ ಇಟಾಲಿಯನ್ಸ್ ಆಗಿ ಪರಿವರ್ತಿತವಾದಾಗ, 'ಲೆ ಪೋಸ್ ದ ಒಪೆರಾ' ಗೆ ದಾರಿ ಮಾಡಿತು. ಆಗಿನಿಂದ ಜನರ, ಗ್ರಾಹಕರ ಕೊಳ್ಳುವ ಅಥವಾ ಷಾಪಿಂಗ್ ಮಾಡುವ ವ್ಯವಹಾರಕ್ಕೆ ಅತ್ಯಂತ ಪ್ರಮುಖ, ಪ್ರಸಿದ್ಧ ತಾಣವಾಯಿತು. ತೀರಾ ಬೆಳಗಿನ ಸಮಯವಾಗಿದ್ದ ಕಾರಣ ಈಗ, ಅಷ್ಟೊಂದು, ಜನರ ಓಡಾಟವಿರಲಿಲ್ಲ. ಆದರೆ ಅಂಗಡಿಗಳಲ್ಲಿ ವ್ಯಾಪಾರಕ್ಕಾಗಿ ಸಿದ್ಧತೆಗಳು ನಡೆಯುತ್ತಿದ್ದವು.

ಥಿಯೋನ ಗೂಪಿಲ್ ಕಂಪೆನಿಯ ಕಛೇರಿ, ರೂ ಮಾಂಟ್ ಮಾರ್ತ್ರದ ೯ನೇ ನಂಬರಿನಲ್ಲಿತ್ತು. ಥಿಯೋ ಮತ್ತು ವಿನ್ಸೆಂಟ್ ರಸ್ತೆ ದಾಟಿ, ಗಾಡಿ ಮುಂದೆ ಹೋಗಲೆಂದು ಒಂದು ಗ್ಯಾಸ್‌ಲ್ಯಾಂಪ್ ಬದಿಯಲ್ಲಿ ನಿಂತರು. ನಂತರ ಗ್ಯಾಲರಿ ಕಡೆ ಹೆಜ್ಜೆ ಹಾಕಿದರು. ಚೆನ್ನಾಗಿ ಪಳಗಿದ ಕ್ಲರ್ಕುಗಳು ಥಿಯೋ ಪ್ರವೇಶಿಸಿದ್ದನ್ನು ನೋಡಿ ಗೌರವ ಸೂಚಿಸಿದರು. ವಿನ್ಸೆಂಟ್ ತಾನೂ ಕ್ಲರ್ಕ್ ಆಗಿದ್ದಾಗ, ಟರ್ಸ್‌ಟೀಗ್, ಒಬಾಕ್ ಇವರುಗಳಿಗೆ ತಲೆಬಾಗುತ್ತಿದ್ದುದನ್ನು ನೆನಪಿಸಿಕೊಂಡ. ಅವನಿಗೆ ಹಿಂದೆ ತಾನಿದ್ದ ಹಳೆಯ ವಾತಾವರಣವೇ ಅನುಭವಕ್ಕೆ ಬಂತು. ಗ್ಯಾಲರಿಯ ಗೋಡೆಗಳ ಮೇಲೆಲ್ಲ ಬೊಗ್ಯೂರೋ, ಹೆನ್ನೆರ್, ಡೆಲಾರೋಶ್ ಮೊದಲಾದವರ ಪೈಂಟಿಂಗ್ಸ್ ಇದ್ದವು. ಅಂಗಡಿಯ ಮುಖ್ಯ ದ್ವಾರದಿಂದ ದೂರದಲ್ಲಿ ಒಂದು ಸಣ್ಣ ಬಾಲ್ಕನಿಯಿದ್ದು. ಅದರ ಹಿಂಭಾಗದಲ್ಲಿನ ಕೊಠಡಿಗೆ ಹೋಗಲು ಮೆಟ್ಟಿಲುಗಳಿದ್ದವು.

"ನೀನು ನೋಡಬೇಕೆಂದಿರುವ ಚಿತ್ರಗಳು ಒಳಗೆ ಹೋಗುವ ದಾರಿಯಲ್ಲಿಯೇ ಇದೆ...... ನೀನು ನೋಡಿದ್ದು ಆದಮೇಲೆ ನನ್ನ ಆಫೀಸಿಗೆ ಬಾ ನಿನಗೆ ಅವುಗಳ ಬಗ್ಗೆ ಏನನ್ನಿಸಿತು, ನನಗೆ ತಿಳಿಸು."

"ಥಿಯೋ ನಿನ್ನ ಉದ್ದೇಶ ಏನಿದೆ ಹೇಳು?"

ಥಿಯೋ, ಸ್ವಲ್ಪ ಅಸಮಾಧಾನದಿಂದ ಕಾಣಿಸಿದ.

"ಸಮಯ ಏನಾಗಿದೆ" ಅಂತ ಕೇಳಿ ಆಫೀಸಿನ ಕಡೆ ಹೊರಟು ಹೋದ.

-೨-

"ಇದೇನಿದು ಹುಚ್ಚಾಸ್ಪತ್ರೇಲಿ ಇದ್ದೀನಾ ಹೇಗೆ?" ವಿನ್ಸೆಂಟ್ ಪ್ರವೇಶದ್ವಾರದಲ್ಲಿ ಇದ್ದ ಒಂದೇ ಒಂದು ಕುರ್ಚಿಯಲ್ಲಿ ಕುಳಿತ. ಕಣ್ಣುಗಳನ್ನು ಉಜ್ಜಿಕೊಂಡ. ಹನ್ನೆರಡನೇ ವಯಸ್ಸಿನಿಂದಲೂ ಗಾಢವಾದ ಮತ್ತು ಸೌಮ್ಯವಾದ ಪೈಂಟಿಂಗ್‌ಗಳನ್ನು ನೋಡಿ ಅಭ್ಯಾಸವಿತ್ತು. ಈ ಪೈಂಟಿಂಗ್ಸ್‌ಗಳಲ್ಲಿ ಬ್ರಷ್‌ನ ಕೆಲಸ ಕಾಣುತ್ತಲೇ ಇರಲಿಲ್ಲ. ಕ್ಯಾನ್‌ವಾಸ್‌ನ ಮೇಲೆ ಪ್ರತಿಯೊಂದು ವಿವರವೂ ಸಮರ್ಪಕವಾಗಿ ಯಾವುದೇ ದೋಷಗಳಿಲ್ಲದಂತೆ ಮೂಡಿರುತ್ತಿದ್ದವು. ವರ್ಣಛಾಯೆಗಳು ಒಂದರೊಳಗೊಂದು ಸೇರಿಕೊಂಡಿರುತ್ತಿದ್ದವು. ಗೋಡೆಯ ಮೇಲಿದ್ದ ಪೈಂಟಿಂಗ್ಸ್ ಅವನನ್ನು ನೋಡಿ

ನಗುತ್ತಿದ್ದವು. ಇಂತಹ ಪೈಂಟಿಂಗ್ಸ್‌ನ್ನು ಅವನೆಂದೂ ನೋಡಿರಲೂ ಇಲ್ಲ; ಕಲ್ಪಿಸಿಕೊಂಡೂ ಇರಲಿಲ್ಲ. ಬಣ್ಣಗಳಲ್ಲಿ ಸಮತಲತೆ ಇರಲಿಲ್ಲ; ಭಾವನಾತ್ಮಕತೆ ಇರಲಿಲ್ಲ. ಯೂರೋಪಿನಲ್ಲಿ ಜನಪ್ರಿಯವಾಗಿದ್ದ ಬಣ್ಣಗಳು ಅಲ್ಲಿ ಕಾಣುತ್ತಲೇ ಇರಲಿಲ್ಲ. ಕಲಾಕೃತಿಗಳು ಚೈತನ್ಯಪೂರ್ಣವಾಗಿಯೂ ಲವಲವಿಕೆಯಿಂದಲೂ ಕೂಡಿದ್ದವು. ಬ್ಯಾಲೆ ಹುಡುಗಿಯರು, ಸ್ಟೇಜ್‌ನ ಹಿಂಭಾಗ, ಹಳೇಕಾಲದ ಕೆಂಪು, ಹಸಿರು, ನೀಲಿಗಳು ಒಂದರ ಪಕ್ಕದಲ್ಲಿ ಒಂದು ಬರುವಂತೆ ಮಾಡಲಾಗಿತ್ತು. ಕೆಳಗೆ ಸಹಿ ನೋಡಿದ 'ಡೆಗಾಸ್' ಎಂದಿತ್ತು.

ಮತ್ತೊಂದು ಕಡೆ ಒಂದಷ್ಟು ಹೊರಾಂಗಣದ ದೃಶ್ಯ ಚಿತ್ರಗಳಿದ್ದವು. ನದೀ ದಡದುದ್ದಕ್ಕೂ ಕಾಣುವ ದೃಶ್ಯಗಳು. ಕಣ್ಣಿಗೆ ಹಬ್ಬ ಉಂಟು ಮಾಡುವ ಬಣ್ಣಗಳಲ್ಲಿ ನಡು ಬೇಸಿಗೆ, ಸುಡು ಬಿಸಿಲಿನ ಸೂರ್ಯ ಅವುಗಳಲ್ಲಿ ಚಿತ್ರಿತವಾಗಿತ್ತು. ಆ ಪೈಂಟಿಂಗ್ಸ್ ಕೆಳಗೆ ಮೋನೆಟ್ ಎಂದು ಹೆಸರಿತ್ತು.

ಈ ಎಲ್ಲಾ ಕೃತಿಗಳಲ್ಲಿ ವಿನ್ಸೆಂಟ್‌ಗೆ, ಮೊದಲು ನೋಡಿದ ಚಿತ್ರಗಳಲ್ಲಿನ ಪ್ರಕಾಶ ಕಾಣಿಸುತ್ತಿರಲಿಲ್ಲ. ಮೋನೆಟ್ ಯಾವುದನ್ನು ಗಾಢ ಬಣ್ಣಗಳೆಂದು ಕರೆದಿದ್ದನೋ ಅವೆಲ್ಲವೂ ವಾಸ್ತವವಾಗಿ ತೆಳುವಿಗಿಂತಲೂ ತೆಳು ಬಣ್ಣವಾಗಿದ್ದವು. ಬ್ರಷ್‌ನ ಪಾತ್ರ ಹೆಚ್ಚಾಗಿ ಕಾಣಿಸುತ್ತಿತ್ತು. ಒಂದೊಂದು ಸ್ಟ್ರೋಕೂ ನಿಸರ್ಗದ ಲಯದೊಂದಿಗೆ ಹೊಂದಿಕೊಂಡಂತೆ ಕಾಣಿಸುತ್ತಿತ್ತು. ಮೇಲುಪದರದಲ್ಲಿ, ಕಣ್ಣಿಗೆ ಹೊಡೆಯುವಂಥ ಬಣ್ಣಗಳು ಗಾಢವಾಗಿದ್ದವು; ದಪ್ಪಲೇಪದಂತಿದ್ದವು.

ವಿನ್ಸೆಂಟ್ ಒಂದು ಚಿತ್ರದ ಮುಂದೆ ನಿಂತುಕೊಂಡ. ಫ್ರೆಂಚ್‌ದೇಶದವನಿಗೆ ಸ್ವಾಭಾವಿಕವಾದ ಗೆಲುವಿನ ಮುಖಭಾವದೊಂದಿಗೆ, ಸಣ್ಣ ದೋಣಿಯೊಂದರಲ್ಲಿ, ಕೈಲಿ ಚುಕ್ಕಾಣಿ ಹಿಡಿದು ಕುಳಿತಿದ್ದ. ಒಳಗೆ ಉಣ್ಣೆಯ ಅಂಗಿಯನ್ನು ಧರಿಸಿದ್ದ. ಪಕ್ಕದಲ್ಲಿ ಹೆಂಡತಿ ಸುಮ್ಮನೆ ಕುಳಿತಿದ್ದಳು. ವಿನ್ಸೆಂಟ್ ಹೆಸರಿಗಾಗಿ ಹುಡುಕಿದ.

"ಓ ಇಲ್ಲಿಯೂ ಮೋನೆಟ್!" ಅವನ ಹೊರಾಂಗಣದ ಚಿತ್ರಗಳಿಗೂ ಇದಕ್ಕೂ ಹೋಲಿಕೆಯೇ ಕಾಣುವುದಿಲ್ಲ."

ಮತ್ತೆ ನೋಡಿದ. ಹೆಸರನ್ನು ತಪ್ಪಾಗಿ ಗ್ರಹಿಸಿದ್ದ. ಅದು ಮೋನೆಟ್ ಆಗಿರಲಿಲ್ಲ. ಈ ಕಲಾವಿದನ ಹೆಸರು ಮಾನೆಟ್. ನಂತರ ಅವನ ಇತರೆ ಕಲಾಕೃತಿಗಳು ನೆನಪಾದವು. ಅವುಗಳ ಹಿಂದೆ ಕತೆಯೂ ಇತ್ತು. ಪಿಕ್‌ನಿಕ್ ದ ಗ್ರಾಸ್' 'ಒಲಿಂಪಿಯಾ' – ಈ ಕೃತಿಗಳನ್ನು, ನಾಶ ಮಾಡಲು ಹೊರಟಿದ್ದವರಿಂದ ರಕ್ಷಿಸಲು ಪೋಲೀಸರೇ ಮುಂದಾಗಬೇಕಾಯಿತು.

ಯಾಕೆಂದು ಮಾತ್ರ ವಿನ್ಸೆಂಟ್‌ಗೆ ತಿಳಿದಿರಲಿಲ್ಲ. ಮಾನೆಟ್‌ನ ಪೈಂಟಿಂಗ್ಸ್ ಅವನಿಗೆ ಎಮಿಲಿ ಜೋಲಾನ ಕಾದಂಬರಿಗಳನ್ನು ನೆನಪಿಸುತ್ತಿದ್ದವು. ಅದೇ ಬಗೆಯ ಸತ್ಯಾನ್ವೇಷಣೆಯ ಹುರುಪು ಸತ್ಯ ಬಗೆಯುವಲ್ಲಿ, ನಿರ್ಭಯತೆ, ನೋಡಲು ಎಷ್ಟೇ ಭಯಂಕರವೆನಿಸಿದರೂ, ಪಾತ್ರದ ಸಹಜ ಸೌಂದರ್ಯ ನಿರೂಪಣೆ! ಗಂಭೀರವಾಗಿ ಚಿತ್ರವನ್ನು ಗಮನಿಸಿದ. ಬಣ್ಣಗಳಲ್ಲಿ ಗ್ರೆಡೇಷನ್ ಇರಲಿಲ್ಲ. ವಿವರಗಳು ಅಷ್ಟಾಗಿ ಕಾಣಿಸುತ್ತಿರಲಿಲ್ಲ. ಬಣ್ಣ, ರೇಖೆ, ಬೆಳಕು, ಛಾಯೆಗಳು ಒಂದು ನಿರ್ದಿಷ್ಟ ಸೂಕ್ಷ್ಮ

ಸಂಯೋಜನೆಯಲ್ಲಿ ಬಂದಿರಲಿಲ್ಲ. ಒಂದರೊಳಗೊಂದು ಬೆರೆತಂತೆ ಕಾಣಿಸುತ್ತಿತ್ತು.

"ಪ್ರಕೃತಿಯಲ್ಲಿ ಕಾಣುವ ಬಣ್ಣಗಳ ವಿನ್ಯಾಸದಲ್ಲಿ ಆಗುವ ವ್ಯತ್ಯಾಸಗಳು" ಎಂದುಕೊಂಡ ವಿನ್ಸೆಂಟ್.

ಮಾವ್‌ನ ಧ್ವನಿ ಕಿವಿಗೆ ಕೇಳಿಸಿತು. "ರೇಖೆಗಳನ್ನು ಕುರಿತು ಖಚಿತವಾದ ಹೇಳಿಕೆ ನೀಡುವುದು ನಿನಗೆ ಅಸಾಧ್ಯ ಎನಿಸುತ್ತದೆಯೇ ವಿನ್ಸೆಂಟ್?"

ವಿನ್ಸೆಂಟ್ ಕುಳಿತುಕೊಂಡ. ನೋಡಿದ ಕಲಾಕೃತಿಯನ್ನು ಮನಸ್ಸಿನೊಳಗೆ ಇಳಿಸಿಕೊಂಡ. ಸ್ವಲ್ಪ ಸಮಯದ ನಂತರ, ಅವನಿಗೆ ಹೊಳೆಯಿತು. ಪೈಂಟಿಂಗ್‌ನಲ್ಲಿ ಕ್ರಾಂತಿ ತರುವುದಕ್ಕೆ ಕಲಾವಿದರು ಸರಳವೂ ಔಚಿತ್ಯಪೂರ್ಣವೂ ಆದ ಉಪಾಯವನ್ನು ಕಂಡುಕೊಂಡಿದ್ದರು. ಈ ಕಲಾವಿದರ ಪೈಂಟಿಂಗ್ಸ್ ಎಲ್ಲಿಯೂ ನಿರ್ವಾತವಿಲ್ಲದೆ ಮಜಭೂತಾಗಿ, ಅಖಂಡವಾಗಿ ಇದ್ದವು. ವಸ್ತುಗಳು ಕ್ರಿಯಾಶೀಲವಾಗಿ ಕ್ಯಾನ್‌ವಾಸ್ ಮೇಲೆ ಮೂಡಿದ್ದವು. ವಿನ್ಸೆಂಟ್‌ಗೆ ಗೊತ್ತು, ಅಕಾಡೆಮಿಷಿಯನ್ ಪೈಂಟರ್ಸ್ ಸಾಂಪ್ರದಾಯಿಕ ಮಾರ್ಗವನ್ನೇ ಅನುಸರಿಸುತ್ತಿದ್ದರು. ಜೀವಂತಿಕೆ, ಕ್ರಿಯಾಶೀಲತೆಗಳು ಕಾಣಿಸುತ್ತಿರಲಿಲ್ಲ; ಪ್ರಯೋಗ ಸಾಹಸಕ್ಕೆ ಮುಂದಾಗುತ್ತಿರಲಿಲ್ಲ.

ಆದರೆ ಈ ಹೊಸ ಪೀಳಿಗೆಯವರು! ಉಪಾಯ ತಂತ್ರಗಳನ್ನು ಕಂಡುಕೊಂಡಿದ್ದರು. ಕ್ಯಾನ್‌ವಾಸ್‌ನಲ್ಲಿ ಖಾಲಿ ಜಾಗಗಳಿಗೆ ಅವಕಾಶವೇ ಇರಲಿಲ್ಲ. ಗಾಳಿ, ಬೆಳಕು, ವಾತಾವರಣ, ಸೂರ್ಯ..... ಎಲ್ಲವನ್ನೂ ತುಂಬಿಸುತ್ತಿದ್ದರು. ಅವುಗಳಲ್ಲಿ ತರಲತೆ ಇರುತ್ತಿತ್ತು. ಪೈಂಟಿಂಗ್ಸ್ ಮತ್ತೆ ಇದೇ ರೀತಿಯಲ್ಲಿ ಇರಲಾರದು ಎಂಬುದನ್ನು ಅರ್ಥಮಾಡಿಕೊಂಡ. ಫೋಟೊಗ್ರಫಿ ಯಂತ್ರಗಳು, ಅಕಾಡೆಮಿಷಿಯನ್ನರು, ಮರುಪ್ರತಿಗಳನ್ನು ತೆಗೆದಾರು. ಆದರೆ ಈ ಯುವಕಲಾವಿದರು ತಮ್ಮ ತಮ್ಮ ಸ್ವಭಾವ, ಚಿಂತನೆಗಳಿಗೆ ತಾವು ಕೆಲಸ ಮಾಡುವ ಪರಿಸರ, ವಾತಾವರಣಕ್ಕೆ ತಕ್ಕಂತೆ ತಮ್ಮ ಪ್ರತಿಭೆಯನ್ನು ರೂಪಿಸಿಕೊಳ್ಳುತ್ತಾ ಪೈಂಟಿಂಗ್ಸ್‌ಗಳಿಗೆ ಹೊಸತನವನ್ನು ತುಂಬುತ್ತಾ ಹೋಗುತ್ತಾರೆ, ಹೊಸ ಕಲಾಪ್ರಕಾರವನ್ನು ಸೃಷ್ಟಿ ಮಾಡಿದರೋ ಎಂಬಂತೆ!

ಅವನು ಮೆಟ್ಟಿಲಿಂದಿಳಿದು ಥಿಯೋ ಇದ್ದ ಕೋಣೆಗೆ ಹೋದ. ಮುಗುಳ್ನಗೆ ತಂದುಕೊಂಡು ವಿನ್ಸೆಂಟ್ ಕಡೆ ನೋಡಿದ.

"ನೋಡಿದ್ದಾಯ್ತಾ, ವಿನ್ಸೆಂಟ್?"

"ಓಹ್ ಥಿಯೋ!" ಏದುಸಿರು ಬಿಟ್ಟ. ಮಾತಾಡಬೇಕೆಂದುಕೊಂಡ. ಆದರೆ ಮಾತಾಡಲು ಆಗಲಿಲ್ಲ. ಮತ್ತೆ ಅವನ ದೃಷ್ಟಿ ಪ್ರವೇಶದ್ವಾರದ ಕಡೆ ಹೋಯಿತು. ಎದ್ದು ಗ್ಯಾಲರಿಯ ಆಚೆ ಓಡಿದ.

ಅಗಲವಾದ, ಸಾಲು ಮರಗಳಿದ್ದ ರಸ್ತೆಯನ್ನು ದಾಟಿ ಒಪೆರಾ ಕಟ್ಟಡದ ಬಳಿ ಬಂದ. ಅಲ್ಲಿಂದ ಕಲ್ಲು ಕಟ್ಟಡಗಳನ್ನು ದಾಟಿಕೊಂಡು, ಸಿಯೆನ್ ನದಿ ಸೇತುವೆಯ ಬಳಿ ಬಂದ. ನಂತರ ಕೆಳಗಿಳಿದು ದಡದತ್ತ ನಡೆದು ಬಂದು, ದಡದ ಅಂಚಿನಲ್ಲಿ ಕುಳಿತು ನೀರಲ್ಲಿ ಬೆರಳಾಡಿಸಿದ. ಮತ್ತೆ ಸೇತುವೆಯನ್ನು ದಾಟಿ ದಡದ ಮತ್ತೊಂದು

ಕಡೆಯಿಂದ ಹೊರಟು ಸಮಾಧಿಯೊಂದನ್ನು ಹಾದು, ಬಲಕ್ಕೆ ತಿರುಗಿ ದೊಡ್ಡದಾದ ರೈಲ್ವೆ ಸ್ಟೇಷನ್‌ಗೆ ಬಂದ. ಸಿಯೆನ್ ನದಿಯನ್ನು ದಾಟಿ ಬಂದದ್ದನ್ನೇ ಮರೆತು ಅಲ್ಲಿ ನಿಂತಿದ್ದ ಪೋಲೀಸ್ ಸೈನಿಕನನ್ನು ರೂ ಲಾವಲ್ ಬಗ್ಗೆ ವಿಚಾರಿಸಿದ.

"ಏನು ರೂಲಾವಲೊ? ಸಾರ್. ನೀವು ತಪ್ಪುದಾರಿಗೆ ಬಂದಿದ್ದೀರಿ. ನಗರದ ಆ ಕಡೆಗೆ ಅದು ಇರೋದು! ಇದು ಮೋಂತ್‌ಪಾರನಸ್. ನೀವು ಆ ಗುಡ್ಡ ಇಳಿದು ಸಿಯೆನ್ ನದಿ ದಾಟಿ ಮತ್ತೆ ಮೇಲೆ ಮೋಂತ್‌ಮಾರ್ತ್ರ ಕಡೆಗೆ ವಾಪಸ್ ಹೋಗಬೇಕು."

ಎಷ್ಟೋ ಹೊತ್ತು, ಪ್ಯಾರಿಸ್‌ನ ದಾರಿಗಳು ತಿಳಿಯದೆ ಅಡ್ಡಾಡಿದ. ಕಣ್ಣಿಗೆ ಹಬ್ಬ ಮಾಡುವ್ ದೊಡ್ಡ ದೊಡ್ಡ ಮಳಿಗೆಗಳು, ವಿಶಾಲ ಬೀದಿಗಳು ಜೊತೆಗೆ ಮತ್ತೆ ಕೆಲವು ಕಡೆಯಂತೂ ಇದಕ್ಕೆ ತದ್ವಿರುದ್ಧವಾಗಿ ಕೊಳಕು ಬೀದಿಗಳು, ನಂತರ ಬೂರ್‌ಷ್ವಾ ರಸ್ತೆಗಳು, ಸಾಲುಸಾಲಾಗಿ ಮದ್ಯದಂಗಡಿಗಳು ಕಾಣಿಸಿದವು. ಮತ್ತೊಮ್ಮೆ ಅವನು ಗುಡ್ಡದ ತುದಿಯಲ್ಲಿದ್ದ. ಮೇಲಿಂದ ನೋಡಿದಾಗ ಸಾಲುಮರಗಳಿಂದ ಕೂಡಿದ ರಸ್ತೆಗಳು ಕಾಣಿಸಿದವು. ಮತ್ತೊಂದು ಕಡೆ ವಿಶಾಲ ಕಾಡುಗಳಿದ್ದವು.

ಮಧ್ಯಾಹ್ನ ದಾಟುವಾಗ, ಕಡೆಗೆ ರೂಲಾವಲ್ ಪತ್ತೆಯಾಯಿತು. ಸಾಕಷ್ಟು ದಣಿದಿದ್ದ. ತನ್ನ ಪಿಕ್ಚರ್ಸ್‌ಗಳನ್ನು ಕಟ್ಟಿಟ್ಟ ಜಾಗಕ್ಕೆ ಹೋದ. ಅವುಗಳನ್ನೆಲ್ಲ ಬಿಡಿಸಿ ನೆಲದ ಮೇಲೆ ಹರಡಿದ. ತನ್ನ ಕ್ಯಾನ್‌ವಾಸ್‌ಗಳತ್ತ ನೋಡಿದ. ಅವು ಕಪ್ಪಗೆ ಒಂದು ಥರಾ ಮಂಕಾಗಿದ್ದವು. ಅವುಗಳಲ್ಲಿ ಜೀವಕಳೆಯೇ ಇರಲಿಲ್ಲ. ಯಾವುದೋ ಓಬಿರಾಯನ ಕಾಲದ ಪೈಂಟಿಂಗ್‌ನಂತೆ ಇತ್ತು.

ಥಿಯೋ ಮನೆಗೆ ಬಂದಾಗ, ವಿನ್ಸೆಂಟ್ ನಿಸ್ತೇಜನಾಗಿ ನೆಲದ ಮೇಲೆ ಕುಳಿತಿದ್ದುದು ಕಾಣಿಸಿತು. ಅವನೂ ಅವನ ಪಕ್ಕದಲ್ಲಿಯೇ ಕುಳಿತ. ಬೆಳಗಿನ ಕೊನೆಯ ಕಿರಣವೂ ಕೋಣೆಯಿಂದ ಮರೆಯಾಗಿತ್ತು.

"ವಿನ್ಸೆಂಟ್ ನಿನಗೆ ಹೇಗೆ ಅನ್ನಿಸ್ತಿದೇಂತ ನನಗೆ ಗೊತ್ತು. ಒಂದು ಥರಾ ಗಾಭರಿಯಾಗುತ್ತೆ ಅಲ್ವಾ? ಪೈಂಟಿಂಗ್ ಯಾವುದನ್ನೂ ಪವಿತ್ರವೆಂದು ಉಳಿಸಿಕೊಂಡಿತ್ತೊ ಅದೆಲ್ಲವನ್ನೂ ನಾವು ಬೇಕಾದ್ದಕ್ಕಿಂತ ಹೆಚ್ಚಿಗೆ ಆಚೆ ಎಸೀತಿದೀವಿ."

ವಿನ್ಸೆಂಟ್‌ನ ಪುಟ್ಟ ಕಣ್ಣುಗಳು ಥಿಯೋನತ್ತ ನೋಡಿದವು. "ಥಿಯೋ ನೀನು ಇದನ್ನೆಲ್ಲ ನನಗೆ ಯಾಕೆ ಹೇಳಲಿಲ್ಲ? ಯಾಕೆ? ಯಾಕೆ? ತುಂಬಾ ಮೊದಲೇ ನನ್ನನ್ನು ಇಲ್ಲಿಗೆ ಯಾಕೆ ಕರೆತರಲಿಲ್ಲ? ಸುದೀರ್ಘವಾದ ಆರು ವರ್ಷಗಳ ಕಾಲ ಸುಮ್ಮನೆ ವ್ಯರ್ಥವಾಯಿತು."

"ಏನು ವ್ಯರ್ಥ?.... ನಿನಗೆಲ್ಲೋ ತಲೆ ಕೆಟ್ಟಿದೆ. ನಿನ್ನ ಕಲೆಯನ್ನು ನೀನೇ ರೂಪಿಸಿಕೊಂಡಿದ್ದೀಯ. ನೀನು ವಿನ್ಸೆಂಟ್ ವಾನ್‌ಗೋನಂತೆ ಪೈಂಟ್ ಮಾಡ್ತಿದ್ದೀ. ನಿನ್ನದೇ ಒಂದು ಅಭಿವ್ಯಕ್ತಿ ಶೈಲಿಯನ್ನು ಗಟ್ಟಿಗೊಳಿಸಿಕೊಳ್ಳುವ ಮೊದಲೇ ಇಲ್ಲಿಗೆ ಬಂದಿದ್ದರೆ ನಿನ್ನದಾಗಿ ಏನೂ ಉಳಿಯುದೆ ಇಲ್ಲಿನ ಎಲ್ಲರಂತೆ ನಿನ್ನನ್ನೂ ರೂಪಾಂತರಗೊಳಿಸುತ್ತಿದ್ದರು!"

"ಆದರೆ ನಾನು ಏನು ಮಾಡಲಿ? ಈ ಕಸದ ರಾಶಿ ನೋಡು! ತನ್ನ ಕ್ಯಾನ್‌ವಾಸನ್ನು ಸಿಟ್ಟಿನಿಂದ ಕಾಲಿನಿಂದ ಒದ್ದ. ಇದೆಲ್ಲ ಸತ್ತ ಹೆಣ. ಕೆಲಸಕ್ಕೆ ಬಾರದ್ದು."

"ಏನು ಮಾಡಬೇಕೂಂತ ನೀನು ನನ್ನನ್ನು ಕೇಳುವುದಾದರೇ ನಾನೊಂದು ಮಾತು ಹೇಳ್ತೀನಿ. ಇಂಪ್ರೆಷನಿಷ್ಟರಿಂದ ಬಣ್ಣ ಬೆಳಕುಗಳ ವಿನ್ಯಾಸಗಳನ್ನು ಕಲಿತುಕೋ. ಅಷ್ಟಂತೂ ನೀನು ಅವರಿಂದ ಕಲಿಯಲೇ ಬೇಕು. ಅದಕ್ಕಿಂತ ಜಾಸ್ತಿ ಬೇಡ. ಅವರನ್ನು ಅನುಕರಣೆ ಮಾಡಬೇಡ. ಅವರ ಪ್ರಭಾವಕ್ಕೆ ಒಳಗಾಗಬೇಡ. ಪ್ಯಾರಿಸ್‌ನ ಪ್ರಭಾವದಿಂದ ದೂರ ಇದ್ದು ನಿನ್ನತನವನ್ನು ಉಳಿಸಿಕೋ."

"ಆದರೆ ಥಿಯೋ ಈಗ ನಾನು ಮತ್ತೆ ಮೊದಲಿಂದ ಕಲಿಯಬೇಕಾಗುತ್ತೆ. ನಾನು ಮಾಡೋದೆಲ್ಲ ತಪ್ಪಾಗ್ತಿದೆ."

"ಇಲ್ಲ. ಬಣ್ಣ ಬೆಳಕುಗಳ ಹೊರತು, ನೀನು ಮಾಡುತ್ತಿರುವುದೆಲ್ಲ ಸರಿಯಾಗಿದೆ.... ಬೋರಿನೇಜ್‌ನಲ್ಲಿ ಪೆನ್ಸಿಲ್ ಕೈ ಹಿಡಿದಾಗಿನಿಂದ ನೀನು ಇಂಪ್ರೆಷನಿಷ್ಟನೇ ಆಗಿದ್ದೀಯ. ನಿನ್ನ ಡ್ರಾಯಿಂಗ್ಸ್, ಬ್ರಷ್ ವರ್ಕು...... ಎಲ್ಲವೂ ಅದನ್ನೇ ಹೇಳುತ್ತೆ. ಮಾನೆಟ್‌ಗಿಂತ ಮೊದಲು ಆ ಶೈಲಿಯಲ್ಲಿ ಯಾರೂ ಪೈಂಟ್ ಮಾಡಿದ್ದಿಲ್ಲ. ನಿನ್ನ ರೇಖೆಗಳ ವಿನ್ಯಾಸ ನೋಡು. ಖಚಿತವಾಗಿ ಏನನ್ನೂ ಹೇಳೋದಿಲ್ಲ. ನೀನು ಮಾಡುವ ಮುಖಗಳು, ಮರಗಳು, ಆಕೃತಿಗಳು....... ಅವೆಲ್ಲವೂ ನಿನ್ನ ಇಂಪ್ರೆಷನ್‌ಗಳೇ! ಅವೆಲ್ಲವೂ ಒರಟೊರಟಾಗಿ, ಅಪರಿಪೂರ್ಣವಾಗಿ, ನಿನ್ನ ವ್ಯಕ್ತಿತ್ವದ ಮೂಲಕವಾಗಿ ಮೂಡಿನಿಂತಿರುತ್ತವೆ. ಇಂಪ್ರೆಷನಿಷ್ಟ್ ಎನಿಸಿಕೊಳ್ಳುವುದೇ ಇಂಥಾದ್ದರಿಂದ! ಎಲ್ಲರಂತೆ ಕಲಾನಿಯಮ, ಸಿದ್ಧಾಂತಗಳಿಗೆ ಅಡಿಯಾಳಾಗದೆ ನಿನ್ನ ಭಾವನೆ, ನಿನ್ನ ಮನೋಧರ್ಮ, ನಿನ್ನ ಕಾಣ್ಕೆಯಂತೆ ನೀನು ಮಾಡವುದೇ, ಮಾಡುತ್ತಿರುವುದೇ ಸರಿ. ನಿನ್ನ ಕಾಲಕ್ಕೆ ತಕ್ಕಂತಹ ರೀತಿಯಲ್ಲಿಯೇ ಮುಂದುವರೆಯುತ್ತಿರುವಿ ವಿನ್ಸೆಂಟ್! ನೀನು ನಿನ್ನನ್ನು ಏನೆಂದು ಬೇಕಾದರೂ ಕರೆದುಕೋ, ಆದರೆ ವಾಸ್ತವದಲ್ಲಿ ನೀನು ಇಂಪ್ರೆಷನಿಷ್ಟ್. ಇದರಲ್ಲಿ ಎರಡು ಮಾತಿಲ್ಲ."

"ನಾನು ಯಾರಿಗಾದರೂ ಇಷ್ಟವಾಗಿದ್ದೇನೆಯೇ?"

"ಪ್ಯಾರಿಸ್‌ನಲ್ಲಿ ಯುವಕಲಾವಿದರು ನಿನ್ನ ಪೈಂಟಿಂಗ್ಸ್ ಬಗ್ಗೆ ತಿಳಿದಿದ್ದಾರೆ. ಮಾರಾಟವಾಗುವ ಕಲಾವಿದರು ಅಲ್ಲದೆ ಹೋದರೂ, ಪ್ರಯೋಗಶೀಲ ಕಲಾವಿದರಾಗಿದ್ದಾರೆ. ನಿನ್ನ ಬಗ್ಗೆ ತಿಳಿಯಬೇಕೆಂದಿದ್ದಾರೆ. ಅವರಿಂದ ಅದ್ಭುತವಾದ ವಿಷಯಗಳನ್ನು ತಿಳಿಯಬಹುದು."

"ನನ್ನ ಕಲಾಕೃತಿಗಳನ್ನು ನೋಡಿದ್ದಾರೇನು? ನಿಜವಾಗಿಯೂ ನೋಡಿದ್ದಾರಾ?"

ಥಿಯೋನನ್ನು ಸರಿಯಾಗಿ ಗಮನಿಸಲು ಮೊಣಕಾಲಿನ ಮೇಲೆ ಕುಳಿತ. ಜುಂಡರ್ಟ್‌ನ ನರ್ಸರಿಯಲ್ಲಿ, ನೆಲದ ಮೇಲೆ ಕುಳಿತು ತಾವಿಬ್ಬರೂ ಆಟವಾಡುತ್ತಿದ್ದುದನ್ನು ಥಿಯೋ ನೆನಪು ಮಾಡಿಕೊಂಡ.

"ಖಂಡಿತ. ಇಷ್ಟು ದಿವಸ ಪ್ಯಾರಿಸ್‌ನಲ್ಲಿದ್ದು ಏನ್ಮಾಡ್ತಿದ್ದೆ ಅಂದ್ಕೊಂಡಿದ್ದೀಯ! ಅವರಂತೂ ನಿನಗೆ ಅಂತರಂಗ ಬಗಿದು ನೋಡುವ ಕಣ್ಣಿದೆ; ಒಳ್ಳೆ ಕೈ ಚಳಕವಿದೆ ಎಂದು ನಂಬಿದ್ದಾರೆ. ಈಗ ಸದ್ಯಕ್ಕೆ ನೀನು ಮಾಡಬೇಕಾಗಿರುವುದೊಂದ್ರೆ, ನಿನ್ನ ಬಣ್ಣಗಳನ್ನು ತೆಳುಗೊಳಿಸು ಮತ್ತು ಪ್ರಕಾಶವಮಾನವೂ, ಚೈತನ್ಯ ಪೂರ್ಣವೂ ಆಗಿರುವಂಥಾದ್ದನ್ನು ಮಾಡುವುದನ್ನು ಕಲಿ. ವಿನ್ಸೆಂಟ್ ಏನೆಲ್ಲ ಹೊಸ ಹೊಸ ಪ್ರಯೋಗಗಳು ನಡೆಯುತ್ತಿರುವ ಕಾಲದಲ್ಲಿ ಇದ್ದೇವೆ ಎನ್ನುವುದೇ ಒಂದು ರೋಮಾಂಚಕಾರಿ ಅನುಭವ ಅನಿಸುತ್ತಲ್ಲ!"

"ಥಿಯೋ ಹಾಳಾದವನೇ! ದುಷ್ಟ ಪಿಶಾಚಿಯೇ!"

"ಏಳು. ಬೇಗ ಎದ್ದು ರೆಡಿಯಾಗು. ಊಟಕ್ಕೆ ಹೊರಗಡೆ ಹೋಗೋಣ. ಬ್ರಾಸರಿ ಯೂನಿವರ್ಸೆಲ್‌ಗೆ ಕರ್ಕೊಂಡು ಹೋಗ್ತೀನಿ. ಅಲ್ಲಿ ಊಟ ತಿಂಡಿ ತುಂಬ ಚೆನ್ನಾಗಿರುತ್ತೆ. ಇವತ್ತು ನಿನಗೆ ಭರ್ಜರಿ ಊಟ ಕೊಡಿಸ್ತೇನೆ, ಅದೂ ಒಂದು ಷಾಂಪೇನ್‌ಬಾಟಲ್ ಜೊತೆಗೆ. ಪ್ಯಾರಿಸ್ಸು, ವಿನ್ಸೆಂಟು – ಇಬ್ಬರ ಸಮಾಗಮದ ಖುಷಿಯಲ್ಲಿ, ಈ ಆಚರಣೆ!"

–೩–

ಮಾರನೇ ದಿನ ಬೆಳಿಗ್ಗೆ ವಿನ್ಸೆಂಟ್ ತನ್ನೆಲ್ಲ ಡ್ರಾಯಿಂಗ್ ವಸ್ತುಗಳನ್ನು ಕೋರ್‌ಮನ್‌ಗೆ ತೆಗೆದುಕೊಂಡು ಹೋದ. ಸ್ಟುಡಿಯೋ ಮೂರನೇ ಅಂತಸ್ತಿನಲ್ಲಿತ್ತು. ಉತ್ತರ ಭಾಗದಿಂದ ಬೆಳಕು ಬರುತ್ತಿತ್ತು. ಬಾಗಿಲ ಕಡೆಗೆ ಮುಖಮಾಡಿದ ನಗ್ನ ಪುರುಷ ಮಾಡೆಲ್ ಪೋಸ್ ಕೊಡುತ್ತಿದ್ದ. ವಿದ್ಯಾರ್ಥಿಗಳಿಗೆಂದು ಸುಮಾರು ಮೂವತ್ತು ಕುರ್ಚಿಗಳು, ಈಸಲ್‌ಗಳು ಒಂದು ಕಡೆ ಹರಡಿಕೊಂಡಿದ್ದವು. ವಿನ್ಸೆಂಟ್ ಕೋರ್‌ಮನ್‌ನಲ್ಲಿ ರಿಜಿಸ್ಟರ್ ಮಾಡಿಸಿಕೊಂಡಿದ್ದರಿಂದ ಅವನಿಗಾಗಿ ಒಂದು ಈಸಲ್ ಅನ್ನೂ ಕೊಡಲಾಗಿತ್ತು.

ವಿನ್ಸೆಂಟ್ ಒಂದು ಗಂಟೆ ಹೊತ್ತು ಸ್ಕೆಚ್ ಮಾಡಿಯಾದ ಮೇಲೆ ಹಜಾರದ ಕಡೆಗಿದ್ದ ಬಾಗಿಲನ್ನು ತೆರೆದುಕೊಂಡು ಹೆಂಗಸೊಬ್ಬಳು ಪ್ರವೇಶಿಸಿದಳು. ಅವಳ ತಲೆಸುತ್ತ ಬ್ಯಾಂಡೇಜಿತ್ತು. ಕೈಯನ್ನು ದವಡೆ ಮೇಲೆ ಇರಿಸಿಕೊಂಡಿದ್ದಳು. ನಗ್ನವಾಗಿ ಕುಳಿತು ಪೋಸು ಕೊಟ್ಟಿದ್ದ ಮಾಡೆಲ್ ಅನ್ನು ನೋಡುತ್ತಿದ್ದಂತೆ ಗಾಭರಿಗೊಂಡು "ಓ ದೇವರೇ!" ಎಂದು ಚೀರಿ ಓಟ ಕಿತ್ತಳು.

ವಿನ್ಸೆಂಟ್ ತನ್ನ ಪಕ್ಕದಲ್ಲಿದ್ದ ವ್ಯಕ್ತಿಯನ್ನು ಮಾತಾಡಿಸಿ,

"ಯಾಕೆ ಆ ಹೆಂಗಸು ಹಾಗೆ ಕಿರುಚಿದಳು? ಏನಾಯಿತ್ತು ಅವಳಿಗೆ?" ಎಂದು ಕೇಳಿದ.

"ಓ ಅದಾ! ದಿನಾ ಈ ರೀತಿ ಆಗ್ತಾನೇ ಇರುತ್ತೆ. ಪಕ್ಕದ ಡೆಂಟಿಸ್ಟನ್ನು ನೋಡೋಕೆ ಬಂದಿದ್ದಳು. ಇಲ್ಲಿ ಬೆತ್ತಲೆ ಕುಳಿತಿರುವವರನ್ನು ನೋಡಿ ಗಾಭರಿಗೊಂಡಿದ್ದಾಳೆ. ಬೆತ್ತಲೆಯಲ್ಲಿ ಇದ್ದವರನ್ನು ನೋಡಿ ಗಾಭರಿಗೊಂಡರೆ ಸಾಮಾನ್ಯವಾಗಿ ಹಲ್ಲುನೋವು ವಾಸಿಯಾಗುತ್ತೆ...... ನೀನು ಇಲ್ಲಿಗೆ ಹೊಸಬನೇನು?"

"ಹೌದು. ಇವತ್ತಿಗೆ ಪ್ಯಾರಿಸ್‌ಗೆ ಬಂದು ಮೂರು ದಿವಸ ಆಯ್ತು."

"ನಿನ್ನ ಹೆಸರೇನು?"

"ವಾನ್‌ಗೋ. ನಿನ್ನ ಹೆಸರು?"

"ಹೆನ್ರಿ ತೊಲೋಸ್-ಲಾಟ್ರೆಕ್. ಥಿಯೋ ವಾನ್‌ಗೋ ನಿನಗೇನಾದರೂ ಸಂಬಂಧಿಯಾಗಬೇಕೆ?"

"ಅವನು ನನ್ನ ತಮ್ಮ."

"ಹಾಗಾದರೆ ನೀನು ವಿನ್ಸೆಂಟ್! ಹೌದಲ್ಲ? ನಿನ್ನನ್ನು ನೋಡಿ ತುಂಬಾ ಸಂತೋಷ ಆಯ್ತು. ನಿನ್ನ ತಮ್ಮ ಇಡೀ ಪ್ಯಾರಿಸ್‌ನಲ್ಲೇ ತುಂಬ ಒಳ್ಳೆಯ ಆರ್ಟ್‌ಡೀಲರ್. ಯುವಕಲಾವಿದರಿಗೆ ಪ್ರೋತ್ಸಾಹ ಕೊಡೋದು ಅವನು ಒಬ್ಬನೇ. ಬರೆ ಪ್ರೋತ್ಸಾಹ ಕೊಡೋದಷ್ಟೇ ಅಲ್ಲ; ಬೇರೆಯವರಿಂದಲೂ ಕೊಡಿಸುವುದಕ್ಕೆ ಹೋರಾಟ ಮಾಡ್ತಾನೆ. ನಾವೇನಾದರೂ ಪ್ಯಾರಿಸಿನ ಕಲಾ ಪ್ರೇಮಿಗಳಿಗೆ ಇಷ್ಟವಾಗಿದ್ದರೆ, ಅದರ ಕ್ರೆಡಿಟ್ ಹೋಗೋದು, ಹೋಗಬೇಕಾದ್ದು ಥಿಯೋವಾನ್‌ಗೋಗೆ! ನಮ್ಮೆಲ್ಲರ ದೃಷ್ಟಿಯಲ್ಲಿ ಅವನು ಅತ್ಯಂತ ಸಭ್ಯ; ಸಜ್ಜನ."

"ನಾನೂ ಹಾಗೇ ಭಾವಿಸ್ತೀನಿ."

ವಿನ್ಸೆಂಟ್ ಲಾಟ್ರೆಕ್‌ನನ್ನು ಗಂಭೀರವಾಗಿ ಗಮನಿಸಿದ. ಅವನದು ತಗ್ಗು ಹಣೆ. ಆದರೆ ಕಣ್ಣು, ಮೂಗು, ತುಟಿ ಗಲ್ಲಗಳು ಮಾತ್ರ ಸ್ವಲ್ಪ ಉಬ್ಬಿ ಚಾಚಿದಂತಿದ್ದವು. ಅವನ ಗಡ್ಡವೂ ಕೂಡಾ ಕೆಳಮುಖವಾಗಿ ಬೆಳೆಯುಯುವುದರ ಬದಲಿಗೆ ಹೊರಮುಖವಾಗಿ ಬೆಳೆದಿತ್ತು.

"ಈ ಕೋರ್‌ಮನ್‌ನಂಥ ಭಯಂಕರ ಜಾಗಕ್ಕೆ ಬರುವುದಕ್ಕೆ ಕಾರಣವಾದರೂ ಏನು?" ಲಾಟ್ರೆಕ್ ವಿಚಾರಿಸಿದ.

"ನನಗೆ ಸ್ಕೆಚ್ ಮಾಡೋಕೆ ಎಲ್ಲಾದರೂ ಒಂದಷ್ಟು ಜಾಗ ಬೇಕಿತ್ತು, ಅದಕ್ಕೇ ಬಂದೆ. ನೀನು?"

"ಗೊತ್ತಿದ್ರೇ ತಾನೇ? ಇಷ್ಟೂ ದಿವಸ ವೇಶ್ಯಾ ವಾಟಿಕೆಗಳಲ್ಲಿ ಇದ್ದೆ. ಅಲ್ಲಿ ಒಂದಷ್ಟು ಜನ ಹುಡುಗಿಯರ ಭಾವಚಿತ್ರಗಳನ್ನು ಮಾಡಿದೆ. ನಿಜವಾದ ಕೆಲಸ ಅಂದ್ರೆ ಅದೇ! ಸ್ಟುಡಿಯೋದಲ್ಲಿದ್ದು ಸ್ಕೆಚ್ ಮಾಡೋದು ಬರೀ ಮಕ್ಕಳಾಟ."

"ನೀನು ಮಾಡಿರುವ ಅವುಗಳನ್ನು ನೋಡಬೇಕಲ್ಲ!"

"ನಿಜವಾಗಿಯೂ ನೋಡಬೇಕೂಂತಿದ್ದೀಯ!"

"ಸತ್ಯವಾಗಲೂ! ಯಾಕೆ ನಂಬಿಕೆ ಬರೊಲ್ವಾ?"

"ಯಾಕೇಂದ್ರೆ ಜನ, ಡಾನ್ಸ್ ಮಾಡೋ ಹುಡುಗೀರ್‍ನ, ವಿದೂಷಕರನ್ನ, ಸೂಳೇರನ್ನ ಸ್ಕೆಚ್ ಮಾಡೋದರಿಂದ ತಲೆ ಕೆಟ್ಟಿರುವವನು ಅಂತ ತಿಳಿದಿದ್ದಾರೆ. ನಿಜವಾದ ಪಾತ್ರಗಳು ಸಿಗುವುದು ಅಂಥಾಕಡೇಲೇ!"

"ನನಗೆ ಗೊತ್ತು. ಹೇಗ್‌ನಲ್ಲಿ ಅಂಥ ಒಬ್ಬಳ ಜೊತೆ ಮದುವೆಯಾಗಿದ್ದೆ."

"ಆಹಾ ತುಂಬ ಒಳ್ಳೇದು. ಈ ವಾನ್‌ಗೋ ಕುಟುಂಬಾನೇ ಒಂದು ಥರಾ ವಿಶೇಷ. ಆ ಮಾಡೆಲ್‌ದು ಸ್ಕೆಚ್ ಮಾಡಿದ್ದರೆ ಈ ಕಡೆ ಕೊಡು ನೋಡೋಣ."

"ನಾಲ್ಕು ಸ್ಕೆಚ್‌ಗಳನ್ನು ಮಾಡಿದ್ದೀನಿ. ಎಲ್ಲವನ್ನೂ ತಗೋ."

ಲಾಟ್ರೆಕ್ ಆ ಸ್ಕೆಚ್‌ಗಳನ್ನು ಗಂಭೀರವಾಗಿ ಗಮನಿಸಿದ ನಂತರ ಹೇಳಿದ– "ಗೆಳೆಯ, ನಮ್ಮಿಬ್ಬರ ಜೋಡಿ ಸರಿ ಹೋಗುತ್ತೆ. ಯಾಕೇಂದ್ರೆ ನಮ್ಮಿಬ್ಬರ ಆಲೋಚನೆಗಳು ಒಂದೇ ಆಗಿವೆ. ಕೋರ್‌ಮನ್ ಇವುಗಳನ್ನು ನೋಡಿದ್ದಾನೇನು?"

"ಇಲ್ಲ."

"ಅವನು ನೋಡಿದರೆ, ನೀನು ಪಾಸಾದೆ. ಅಂದ್ರೆ ಅವನ ಅಭಿಪ್ರಾಯದ ಮಟ್ಟಿಗೆ, ಒಂದು ದಿನ ಅವನು ಹೇಳಿದ – ಲಾಟ್ರೆಕ್ ಯಾವಾಗಲೂ ನೀನು ತುಂಬ ಎಕ್ಸಾಗರೇಟ್ ಮಾಡ್ತೀಯ. ನಿನ್ನ ಪ್ರತಿಯೊಂದು ಸ್ಟಡೀಸ್ (ಪ್ರಯೋಗ, ಹೊರಾಂಗಣ ಚಿತ್ರ) ನಲ್ಲೂ ಒಂದು ರೇಖೆಯ ಮೂಲಕ ಗುಣದ ಅತಿಶಯತೆಯನ್ನು ವಕ್ರವಾಗಿ ಅಥವಾ ವಿಡಂಬನೆಯ ಮೂಲಕತೋರಿಸ್ತೀ."

"ಸರಿ, ನೀನು ಜವಾಬು ಕೊಟ್ಟಿರ್ತೀಯ..... ಕೋರ್‌ಮನ್ ಅದು ಕ್ಯಾರಿಕೇಚರ್ ಅಲ್ಲಿ ಕ್ಯಾರೆಕ್ಟರ್! ಅಂತ."

ಕುತೂಹಲ, ತುಂಟತನಗಳನ್ನು ತುಂಬಿಕೊಂಡ ಕಣ್ಣುಗಳಿಂದ ವಿನ್ಸೆಂಟ್ ಕಡೆ ನೋಡುತ್ತಾ – "ಈಗಲೂ ನಿನಗೆ ನನ್ನ ಹುಡುಗೀರನ್ನು ನೋಡಬೇಕೂಂತ ಅನ್ಸುತ್ತಾ?"

"ಹೌದು. ಖಂಡಿತ ನೋಡ್ಬೇಕೂನ್ಸತ್ತೆ!"

ವಿನ್ಸೆಂಟ್, ತನ್ನ ಗೆಳೆಯ ಕುಳಿತ ಜಾಗದಿಂದ ಎದ್ದಾಗ ಅವನ ಕಾಲು ಕುಂಟು ಎಂಬುದನ್ನು ಗಮನಿಸಿದ. ಲಾಟ್ರೆಕ್ ಎದ್ದು ನಿಂತಾಗ ಕುಳಿತದ್ದಕ್ಕಿಂತ ಹೆಚ್ಚು ಎತ್ತರವಾಗೇನೂ ಕಾಣಿಸುತ್ತಿರಲಿಲ್ಲ.

ಅವರಿಬ್ಬರೂ ಸಾಲುಮರಗಳ ರಸ್ತೆಯಲ್ಲಿ ಹೆಜ್ಜೆ ಹಾಕಿದರು. ಲಾಟ್ರೆಕ್ ಕೈಲಿ ಹಿಡಿದಿದ್ದ ಊರುಗೋಲನ್ನೇ ಹೆಚ್ಚಾಗಿ ಅವಲಂಬಿಸಿದ್ದ. ಅವನು ಆಗಾಗ ಮಧ್ಯೆಮಧ್ಯೆ ವಿನ್ಸೆಂಟ್‌ಗೆ ಸುಂದರವಾದ ವಸ್ತುಗಳನ್ನು ತೋರಿಸಲು ನಿಲ್ಲುತ್ತಿದ್ದ. ಮೌಲಿನ್ ರೂಜ್ ತಲುಪುವುದಕ್ಕೆ ಮೊದಲು ಬಟ್ ಮಾಂಟ್‌ಮಾರ್ತ್ರೆ ಕಡೆ ಹೊರಳಿದರು. ಸ್ವಲ್ಪ ಸ್ವಲ್ಪ ದೂರಕ್ಕೂ ಲಾಟ್ರೆಕ್‌ಗೆ ವಿಶ್ರಾಂತಿ ಬೇಕಾಗುತ್ತಿತ್ತು.

"ವಿನ್ಸೆಂಟ್ ವಾನ್‌ಗೋ, ಎಲ್ಲರಂತೆ ನಿನಗೂ ಕೂಡಾ, ನನ್ನ ಕಾಲು ಹೀಗ್ಯಾಕೆ ಅಂತ ಅನಿಸಿರಬೇಕಲ್ಲ? ಇರಲಿ. ನಾನೇ ವಿವರಿಸ್ತೀನಿ."

"ಬೇಡ. ಅದರ ಬಗ್ಗೆ ಚರ್ಚೆ ಬೇಡ."

"ಇಲ್ಲ ನೀನು ತಿಳಿದುಕೊಳ್ಳಲೇಬೇಕು. ಕೋಲಿನ ಮೇಲೆ ಮತ್ತಷ್ಟು ಆಸರೆ ಪಡೆದ. ನಾನು ಹುಟ್ಟಿದಾಗ ನನ್ನ ಮೂಳೆಗಳು ಬಹಳ ಬ್ರಿಟಲ್ ಆಗಿದ್ದವು. ನನ್ನ

ಹನ್ನೆಡರನೆ ವಯಸ್ಸಿನಲ್ಲಿ ಡ್ಯಾನ್ಸ್ ಹಾಲ್‌ನಲ್ಲಿ ಜಾರಿಬಿದ್ದೆ. ಬಲ ತೊಡೆಯ ಮೂಳೆ ಮುರಿದು ಹೋಯಿತು. ಅದರ ಮರುವರ್ಷ ಎಲ್ಲೋ ಹಳ್ಳ ಒಂದರಲ್ಲಿ ಬಿದ್ದು ಎಡಗಡೆ ಮೂಳೆ ಮುರಿದುಕೊಂಡೆ. ಅದೆಲ್ಲ ಆದ ನಂತರದಿಂದ ಇಲ್ಲೀವರೆಗೆ ನನ್ನ ಕಾಲುಗಳು ಒಂದಂಗುಲದಷ್ಟು ಉದ್ದವೂ ಬೆಳೆದಿಲ್ಲ."

"ಅದರಿಂದ ನಿನಗೆ ದುಃಖ ಆಗಿದೆಯೇನು?"

"ಇಲ್ಲ. ನಾನೂ ಎಲ್ಲರ ಹಾಗೆ ಚೆನ್ನಾಗಿ ಇದ್ದಿದ್ದರೆ ಬಹುಶಃ ನಾನು ಪೈಂಟರ್ ಆಗುತ್ತಲೇ ಇರಲಿಲ್ಲ. ನನ್ನ ತಂದೆ ತುಲೌಸ್‌ನ ಕೌಂಟ್ ಆಗಿದ್ದಾನೆ. ಆತನ ನಂತರ, ನಾನು ಬಯಸಿದರೆ ನನಗೇ ಆ ಬಿರುದು (ಟೈಟಲ್) ಸಿಕ್ಕಬಹುದಾಗಿತ್ತು. ಫ್ರಾನ್ಸ್ ದೊರೆಯ ಜೊತೆಯಲ್ಲಿಯೇ ನಾನೂ ಸವಾರಿ ಮಾಡಬಹುದಾಗಿತ್ತು...... ಯಾವಾಗ?..... ಫ್ರಾನ್ಸ್‌ಗೆ ದೊರೆ ಎಂಬಂಥಾವನು ಇದ್ದಿದ್ದರೆ!..... ಆದರೆ ಪೈಂಟರ್ ಆಗೋ ಸಾಮರ್ಥ್ಯ ಇರುವಾಗ, 'ಕೌಂಟ್' ಗಿರಿ ಯಾರಿಗೆ ಬೇಕು?"

"ಹೌದು..... ಈಗಂತೂ ಕೌಂಟ್‌ಗಿರಿ ಕಾಲ ಮುಗಿದಂತೇ!"

"ಹೋಗೋಣವೇ? ಡೆಗಾಸ್‌ನ ಸ್ಟುಡಿಯೋ ಇಲ್ಲಿಯೇ ಪಕ್ಕದ ಗಲ್ಲಿಯಲ್ಲಿದೆ. ಎಲ್ಲರಿಗೂ ನಾನು ಅವನನ್ನು ಕಾಪಿ ಮಾಡ್ತಿದ್ದೀನಿ ಅನ್ನಿಸ್ತೆ. ಯಾಕೇಂದ್ರೆ ಅವನು ಬ್ಯಾಲೆ ಡ್ಯಾನ್ಸರ್‌ಗಳನ್ನು ಮಾಡ್ತಾನೆ; ನಾನು ಮೌಲಿನ್ ರೊಝ್‌ನ ಹುಡುಗಿಯರನ್ನು ಮಾಡ್ತೀನಿ. ಜನ ಏನು ಬೇಕಾದರೂ ಹೇಳಲಿ. ನೋಡು ನಾನಿರುವುದು ಇಲ್ಲೇ. 'ರೂಫೋಂತೇನ್' ೧೯. ನೀನು ಊಹಿಸಿದಂತೆ, ನಾನು ಮೊದಲ ಅಂತಸ್ತಿನಲ್ಲಿ ಇರುತ್ತಿದ್ದೇನೆ."

ಅವನು ಬಾಗಿಲು ತೆರೆದು, ತಲೆ ಬಾಗಿ ವಿನ್ಸೆಂಟ್‌ನನ್ನು ಒಳಗೆ ಸ್ವಾಗತಿಸಿದ.

"ನಾನಿರುವುದು ಒಬ್ಬನೇ. ಜಾಗನೋಡಿ ಕುಳಿತುಕೋ."

ವಿನ್ಸೆಂಟ್ ಸುತ್ತಲೂ ನೋಡಿದ. ಕ್ಯಾನ್‌ವಾಸ್‌ಗಳಲ್ಲದೆ, ಫ್ರೇಮ್‌ಗಳು, ಈಸಲ್‌ಗಳು, ಸ್ಟೂಲುಗಳು, ಬಟ್ಟೆ ಸುರುಳಿಗಳು ಜೊತೆಗೆ, ಸ್ಟುಡಿಯೋವನ್ನು ಪೂರ್ತಿಯಾಗಿ ಆಕ್ರಮಿಸಿಕೊಂಡಿದ್ದ ದೊಡ್ಡ ಟೇಬಲ್ಲುಗಳೆರಡು ಒಂದರ ಮೇಲೆ ಮಧ್ಯದ ಬಾಟಲಿಗಳು, ವಿವಿಧ ಬಣ್ಣದ ಲಿಕ್ಕರ್‌ಗಳನ್ನು ಸೋಸುವುದಕ್ಕಾಗಿ ಇರಿಸಿದ್ದ ಡಿಕ್ಯಾಂಟರ್‌ಗಳು; ಮತ್ತೊಂದು ಟೇಬಲ್ಲಿನ ಮೇಲೆ ಡ್ಯಾನ್ಸರ್ಸ್‌ಗೆ ಸಂಬಂಧಪಟ್ಟ ಚಪ್ಪಲಿಗಳು, ವಿಗ್ಗುಗಳು, ಹಳೆ ಪುಸ್ತಕಗಳು, ಉಡುಪುಗಳು, ಕೈಚೀಲಗಳು, ಕಾಲ್ಚೀಲಗಳು, ಅಶ್ಲೀಲವಾದ ಛಾಯಾಚಿತ್ರಗಳು ಅಮೂಲ್ಯವಾದ ಜಪಾನಿ ಕಲಾಕೃತಿಗಳ ಪ್ರತಿಗಳು ತುಂಬಿದ್ದವು. ಇಷ್ಟೊಂದು ವಸ್ತುಗಳ ಮಧ್ಯೆ ಎಲ್ಲೋ ಒಂದು ಚೂರು ಜಾಗವಿದ್ದು, ಅಲ್ಲಿ ಲಾಟ್ರೆಕ್ ಕುಳಿತು ಪೈಂಟ್ ಮಾಡುತ್ತಿದ್ದ.

"ಯಾಕೆ ವಾನ್‌ಗೋ...... ಕುಳಿತುಕೊಳ್ಳಲು ಎಲ್ಲೂ ಜಾಗ ಸಿಗಲಿಲ್ಲ? ಅಲ್ಲಿ ಬಿದ್ದಿರೋ ಸಾಮಾನುಗಳನ್ನು ಪಕ್ಕಕ್ಕೆ ಸರಿಸಿ, ಆ ಕಿಟಕಿ ಬಳಿಗೆ ಕುರ್ಚಿ ಎಳೆದುಕೋ. ಈ ಮನೇಲಿ ಇಪ್ಪತ್ತೊಂದು ಜನ ಹುಡುಗೀರು ಇದ್ದರು. ನಾನು ಸರಿಸುಮಾರು ಎಲ್ಲ

ಹುಡುಗೀರ ಜೊತೆ ಮಲಗಿದ್ದೇನೆ. ಹೆಣ್ಣನ್ನು ಸರಿಯಾಗಿ ಪೂರ್ತಿಯಾಗಿ ಅರ್ಥಮಾಡಿಕೊಳ್ಳೋದಕ್ಕೆ ಮುಂಚೆ, ಅವಳ ಜೊತೆ ಮಲಕ್ಕೋಳ್ಳೋದು ಅಗತ್ಯ ಅಂತ ನಿನಗೆ ಅನಿಸುವುದಿಲ್ಲವೇ?"

"ಅನ್ಸತ್ತೆ."

"ನೋಡು ಇಲ್ಲಿದೆ ಸ್ಕೆಚಸ್. ನಾನು ಇವನ್ನು ಒಬ್ಬ ಡೀಲರ್ ಹತ್ತಿರ ತಗೊಂಡು ಹೋದೆ. ಅವನು ಅದನ್ನು ನೋಡಿ – ಲಾಟ್ರೆಕ್, ಇಂತಹ ಅಸಹ್ಯವಾದ್ದನ್ನು ಸ್ಕೆಚ್ ಮಾಡುವ ಹುಚ್ಚು ನಿನಗ್ಯಾಕೆ ಬಂತು?" ಎಂದು ಕೇಳಿದ. ಮತ್ತೆ ಮಾತು ಮುದುವರೆಸಿದ. 'ಯಾವಾಗಲೂ ಯಾಕೆ ಇಷ್ಟು ಅಸಹ್ಯವಾದ, ಅಶ್ಲೀಲವಾದ, ಭಯಂಕರ ಜಿಗುಪ್ಸೆ ಬರಿಸುವವರನ್ನೇ ಬರೀತೀಯ? ಈ ಹೆಂಗಸರು ಅಸಹ್ಯಕ್ಕೆ, ತಿರಸ್ಕಾರಕ್ಕೆ ಪಾತ್ರರಾದವರು ಅಂತ ಅವರ ಹಣೇಲೇ ಬರೆದು ಬಿಟ್ಟಿರುತ್ತೆ. ಮಾಡ್ರನ್ ಆರ್ಟ್ ಅಂದ್ರೆ, ಹೀಗೆ ವಿಕೃತವೂ ಅಶ್ಲೀಲವೂ ಆಗಿರುವುದೇ ಏನು? ನಿಮ್ಮಂಥ ಕಲಾವಿದರಿಗೆ ಏನಾಗಿದೆ. ನಿಮ್ಮ ಕಣ್ಣಿಗೆ ಸೌಂದರ್ಯ ಕಾಣಿಸುವುದೇ ಇಲ್ಲವೇ. ಬರೀ ಈ ತುಂಬಿದ ಹೊಲಸನ್ನು ಮಾತ್ರವೇ ನಿಮ್ಮ ಕಲೆಯಲ್ಲಿ ತಂದು ತುರುಕುತ್ತೀರಿ' ಎಂದಿದ್ದ. ನಾನು ಹೇಳಿದೆ– ಕ್ಷಮಿಸಿ. ನನಗೆ ವಾಂತಿ ಬರೋ ಹಾಗೆ ಆಗ್ತಿದೆ. ನಿಮ್ಮ ಸುಂದರವಾದ ಈ ಕಾರ್ಪೆಟ್ಟನ್ನು ಹಾಳು ಮಾಡೋಕೆ ನನಗೆ ಇಷ್ಟ ಇಲ್ಲ' ಅಂತ. ನಾನು ಹೇಳಿದ್ದು ಸರಿಯಾಗಿದೆ ಅಲ್ವಾ ವಾನ್‌ಗೋ? ಒಂದು ಸ್ವಲ್ಪ ವೈನ್ ತಗೋತೀಯ ಹೇಳು. ಯಾವುದು ಕೊಡಲಿ. ನನ್ನ ಬಳಿ ಎಷ್ಟೊಂದು ಬಗೆಯ ಡ್ರಿಂಕ್‌ಗಳಿವೆ. ನಿನಗೆ ಬೇಕಾದ್ದನ್ನು ಆರಿಸಿಕೋ."

ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ವಸ್ತುಗಳನ್ನು ಸರಿಸುತ್ತಾ ಕುರ್ಚಿಯನ್ನು ಎಳೆದುಕೊಂಡು, ಡ್ರಿಂಕ್‌ಗಳಿದ್ದ ಜಾಗಕ್ಕೆ ಬಂದ. ಗ್ಲಾಸಿಗೆ ಸುರಿದುಕೊಂಡು, ಅದನ್ನು ವಿನ್ಸೆಂಟ್‌ನತ್ತ ಚಾಚಿದ.

"ವಿಕೃತಿ, ಅಶ್ಲೀಲತೆಗಳಿಗಾಗಿ, ವಾನ್‌ಗೋ.... ಅಕಾಡೆಮಿಗೆ ಈ ಸೋಂಕು ತಾಗದಿರಲಿ...." ಎನ್ನುತ್ತಾ ಇಬ್ಬರೂ ಗ್ಲಾಸುಗಳನ್ನು ತಾಗಿಸಿ, ತುಟಿಗಿರಿಸಿದರು. ವಿನ್ಸೆಂಟ್ ಡ್ರಿಂಕ್ ಹೀರುತ್ತಲೇ, ಲಾಟ್ರೆಕ್‌ನ 'ಸ್ಟಡೀಸ್'ಗಳನ್ನು ಗಂಭೀರವಾಗಿ ನೋಡಿದ. ಮಾಂಟ್ ಮಾರ್ತ್ರೆಯ ವೇಶ್ಯಾವಾಟಿಕೆಯ ಇಪ್ಪತ್ತೇಳು ಹುಡುಗಿಯರ ಸ್ಕೆಚ್‌ಗಳಿದ್ದವು. ವಿನ್ಸೆಂಟ್‌ಗೆ ಅರ್ಥವಾಯಿತು. ಅವರು ಇದ್ದಂತಹ ಸಹಜ ಸ್ಥಿತಿ, ಭಂಗಿಗಳಲ್ಲೇ ಅವನು ಸ್ಕೆಚ್ ಮಾಡಿದ್ದ. ಅವುಗಳಲ್ಲಿ ವಸ್ತುನಿಷ್ಠತೆ ಇತ್ತೇ ಹೊರತು ನೈತಿಕ ಮೌಲ್ಯಗಳಾಗಲೀ, ನಿಯಮಗಳಾಗಲೀ ಇರಲಿಲ್ಲ. ಆ ಹುಡುಗಿಯರ ಮುಖದ ಮೇಲಿನ ನೋವು, ಸಂಕಟಗಳನ್ನು, ದಡ್ಡುಗಟ್ಟಿದ ಕಾಮುಕತೆಯನ್ನು, ಅಸಹ್ಯ, ಪಶುಸದೃಶ ಭಾವನೆಗಳನ್ನು, ತುಂಬ ಸಮರ್ಥವಾಗಿ ಕಾಣಿಸಿದ್ದ.

"ರೈತರ ಭಾವಚಿತ್ರಗಳು ನಿನಗೆ ಇಷ್ಟವಾಗುತ್ತೇನು?"

"ಖಂಡಿತ. ಆದರೆ ಸೆಂಟಿಮೆಂಟಲ್ ಆಗಿ ಇರದಿದ್ರೆ ಮಾತ್ರ!"

"ನಾನು ರೈತರನ್ನು ಸ್ಕೆಚ್ ಮಾಡ್ತೀನಿ. ಈ ಹೆಂಗಸರೂ ಕೂಡಾ ನನಗೆ ರೈತರ ರೀತಿಯಲ್ಲೇ ಕಾಣಿಸುತ್ತಾರೆ. ಮಾಂಸದ ತೋಟಗಾರಿಕೆ ಮಾಡುತ್ತಾರೆ, ಒಂದು ಥರಾ!

ಮಣ್ಣು ಮತ್ತು ಮಾಂಸ ಒಂದೇ ವಸ್ತುವಿನ ಎರಡು ಭಿನ್ನ ರೂಪಗಳು ಮಾತ್ರ... ಏನಂತೀಯ? ಇವರು ಮಾಂಸದ ಸಾಗುವಳಿ ಮಾಡುತ್ತಾರೆ. ಸಾಗುವಳಿ ಮಾಡುತ್ತಲೇ ಬದುಕನ್ನು ಉತ್ಪಾದಿಸುತ್ತಾರೆ. ನೀನು ಮಾಡಿರುವ ಕೆಲಸ ತುಂಬಾ ಒಳ್ಳೇದು ಲಾಟ್ರೆಕ್. ಹೇಳಲು ಯೋಗ್ಯವಾದ್ದನ್ನೇ ಹೇಳಿದ್ದೀಯ."

"ನೀನು ಅವುಗಳನ್ನು ವಿಕಾರವಾಗಿವೆ ಅಂತ ತಿಳಿದಿಲ್ಲತಾನೇ?"

"ಇಲ್ಲ. ಅವು ಅಧಿಕೃತವಾಗಿವೆ. ಬದುಕಿಗೆ ಕೊಟ್ಟ ಗಂಭೀರ ವಿವರಣೆ, ವಿಶ್ಲೇಷಣೆಯಾಗಿದೆ. ಇದಕ್ಕಿಂತ ಹೆಚ್ಚಿನ, ಉತ್ಕೃಷ್ಟವಾದ ಸೌಂದರ್ಯ ಎಂಬುದು ಇರಲು ಸಾಧ್ಯವೇ? ನೀನೇನಾದರೂ ಈ ಹೆಂಗಸರನ್ನು ಅತ್ಯಂತ ಸಹಜ ಮತ್ತು ವಾಸ್ತವ ಸತ್ಯಗಳಿಂದ, ನಗ್ನ ಸತ್ಯಗಳಿಂದ ದೂರವಿರಿಸಿ, ಹುಸಿ ಮೌಲ್ಯ, ನೈತಿಕತೆಗಳನ್ನು ಬಿಂಬಿಸುವಂತೆ, ಯಥಾರ್ಥತೆಯಿಂದ ವಂಚಿಸಿ ಚಿತ್ರಿಸಿದ್ದರೆ, ಆಗ ಅವು ವಿಕಾರವಾಗಿ ಬಿಡುತ್ತಿದ್ದವು. ಆದರೆ ನೀನು ಕಂಡ ಸಂಪೂರ್ಣ ಸತ್ಯಗಳನ್ನು ಹೇಳಿದ್ದೀಯ. ಅದಕ್ಕಿಂತ ಸುಂದರವಾದ್ದು ಮತ್ತೊಂದು ಇರಲಾರದು."

"ಓ ದೇವರೇ, ನಿನ್ನಂತಹ ಗಂಡಸರು ಪ್ರಪಂಚದಲ್ಲಿ ಇನ್ನಷ್ಟು ಮಂದಿ ಇರಬಾರದೇ? ಇನ್ನೊಂದು ಡ್ರಿಂಕ್ ತಗೋ. ಆ ಸ್ಕೆಚ್‌ಗಳಲ್ಲಿ ನಿನಗೆಷ್ಟು ಬೇಕೋ ಅಷ್ಟನ್ನೂ ತಗೋ?"

ವಿನ್ಸೆಂಟ್ ಒಂದು ಕ್ಯಾನ್‌ವಾಸನ್ನು ಬೆಳಕಿಗೆ ಎದುರಾಗಿ ಇಟ್ಟು, ಒಂದು ಕ್ಷಣ ಗಮನಿಸಿ, "ಓಹ್, 'ದಾಮಿಯೆರ್'ನನ್ನು ನೆನಪಿಸುತ್ತೆ ಈ ಮುಖ!" ಎಂದು ಉತ್ಸಾಹದಿಂದ ಉದ್ಗರಿಸಿದ.

ಲಾಟ್ರೆಕ್ ಮುಖದಲ್ಲಿ ಗೆಲುವು ಕಾಣಿಸಿತು.

"ಹೌದು. ಅದು ದಾಮಿಯೆರ್‌ನದೇ! ಎಲ್ಲರಿಗಿಂತ ಬಹಳ ದೊಡ್ಡ ಮನುಷ್ಯ. ನಾನೇನಾದರೂ ಪಾಠ ಕಲಿತಿದ್ದೀನೀಂದ್ರೆ ಅವನಿಂದಲೇ! ಅವನು ದ್ವೇಷಿಸುವ ರೀತಿ ಕೂಡಾ ಅದ್ಭುತ!"

"ದ್ವೇಷಿಸುವಂತಹ ವಸ್ತುಗಳನ್ನು! ಹಾಗಿದ್ದ ಮೇಲೆ ಪೈಂಟ್ ಮಾಡುವುದಾದರೂ ಯಾಕೆ? ನಾನಂತು ನನಗಿಷ್ಟವಾದ್ದನ್ನು ಮಾತ್ರವೇ ಪೈಂಟ್ ಮಾಡ್ತೀನಿ."

"ವಾನ್‌ಗೋ, ಪ್ರಪಂಚದಲ್ಲಿ ಶ್ರೇಷ್ಠವೆನಿಸಿಕೊಂಡಿರುವ ಕಲೆಯೆಲ್ಲ ಹುಟ್ಟಿದ್ದು ದ್ವೇಷದಲ್ಲಿಯೇ!.... ಓ, ನೀನು ನನ್ನ ಗಾಗಿನ್‌ನನ್ನು ಮೆಚ್ಚಿಕೊಳ್ತಾ ಇದ್ದೀಯ?"

"ಯಾರದದು ಪೈಂಟಿಂಗ್ ಅಂದೆ?"

"ಪಾಲ್ ಗಾಗಿನ್. ಅವನು ನಿನಗೆ ಗೊತ್ತೇನು?"

"ಇಲ್ಲ."

"ಹಾಗಾದರೆ ಅವನನ್ನು ಭೇಟಿಯಾಗಲೇ ಬೇಕು. ಅವನಿಗೆ ಹಳೆಕಾಲದ, ಸಾಂಪ್ರದಾಯಿಕ ಪೈಂಟಿಂಗ್ ಕಡೆ ಹೋಗೋದು ಒಂದು ಹುಚ್ಚು. ಆದರೆ ಅವನು ಅದ್ಭುತ ಕಲಾವಿದ. ಅವನಿಗೆ ಒಬ್ಬಳು ಹೆಂಡತಿ, ಮೂರು ಜನ ಮಕ್ಕಳು ಮತ್ತು ಸ್ಟಾಕ್ ಎಕ್ಸ್‌ಚೇಂಜ್‌ನಲ್ಲಿ ಒಳ್ಳೆಯ ಕೆಲಸ ಇತ್ತು. ವರ್ಷಕ್ಕೆ ಮೂವತ್ತು ಸಾವಿರ

ಫ್ರಾಂಕ್ಸ್ ಆದಾಯ ಇತ್ತು. ಹದಿನೈದು ಸಾವಿರದಷ್ಟಕ್ಕೆ, ಪಿಸಾರೋ, ಮಾನೆಟ್, ಸಿಸ್ಲಿ ಮೊದಲಾದವರಿಂದ ಪೈಂಟಿಂಗ್ಸ್ ಕೊಂಡು ಕೊಂಡ. ಅವನ ಮದುವೆ ವಾರ್ಷಿಕೋತ್ಸವದ ದಿನ ತನ್ನ ಹೆಂಡತಿಯ ಪೋರ್ಟ್‌ರೈಟ್ ಮಾಡಿದ. ಅವಳಿಗೆ ಅದೊಂದು ಸುಂದರವಾದ ಉಡುಗೊರೆ ಅನಿಸಿತು. ಸ್ಟಾಕ್ ಎಕ್ಸ್‌ಚೇಂಜ್ ಆರ್ಟ್ ಕ್ಲಬ್‌ನಲ್ಲಿ ಕೂತು, ಭಾನುವಾರಗಳಂದು ಪೈಂಟಿಂಗ್ ಮಾಡ್ತಿದ್ದ. ಒಂದು ಸಲ ತನ್ನ ಪೈಂಟಿಂಗ್ ಅನ್ನು ಮಾನೆಟ್‌ಗೆ ತೋರಿಸಿದ. ತುಂಬಾ ಚೆನ್ನಾಗಿದೆ ಅಂತ ಅವನು ಮೆಚ್ಚಿಕೊಂಡ. ಆದರೆ ತಾನು ಇನ್ನೂ ಬರೀ ಹವ್ಯಾಸಿ, ಅಷ್ಟಾಗಿ ಪರಿಣತ ಅಲ್ಲ ಅಂದ, ಅದಕ್ಕೆ ಮಾನೆಟ್ ಕೆಟ್ಟ ಚಿತ್ರ ಮಾಡುವವರು ಅಮೆಚೂರ್ ಆಗ್ತಾರೆ ಹೊರತು ನೀನಲ್ಲ ಎಂದ. ಸರಿ, ಆ ಹೊಗಳಿಕೆ ಅವನ ತಲೇಲಿ ಕೂತು ಬಿಡ್ತು. ಕೆಲಸ ಬಿಟ್ಟ. ರೂಯೆನ್‌ನಲ್ಲಿ ಮನೆ ಮಾಡಿದ. ತಾನು ಉಳಿಸಿದ್ದ ಹಣದಿಂದ ಹೆಂಡತಿ ಮಕ್ಕಳ ಜೊತೆ ಸಂಸಾರ ಮಾಡಿದ. ಆಮೇಲೆ ಅವರನ್ನೆಲ್ಲ, ಹೆಂಡತಿ ತವರಿಗೆ ಕಳಿಸಿಬಿಟ್ಟ. ಅಂದಿನಿಂದ ಅವನು ತನ್ನ ಬುದ್ಧಿ ನೆಚ್ಚಿಕೊಂಡು ಜೀವನ ಮಾಡ್ತಿದ್ದಾನೆ."

"ತುಂಬಾ ಕುತೂಹಲಕರವಾಗಿದೆ."

"ಅವನನ್ನು ಭೇಟಿ ಆದಾಗ ಸ್ವಲ್ಪ ಹುಷಾರಾಗಿರು. ಸ್ನೇಹಿತರನ್ನು ಗೋಳಾಡಿಸುವುದೆಂದರೆ ಅವನಿಗೆ ಖುಷಿ. ಅದು ಸರಿ, ಈಗ ನೀನು ಮೌಲಿನ್‌ರೂಜ್ ಮತ್ತು ಮಾಂಟ್ ಮಾರ್ತ್ರೆ ಹುಡುಗೀರನ್ನು ತೋರಿಸ್ತೀಯ ಹೇಗೆ? ಅಲ್ಲಿರುವ ಹುಡುಗೀರೆಲ್ಲ ನನಗೆ ಗೊತ್ತು. ಹೆಂಗಸರೆಂದರೆ ನಿನಗೆ ಇಷ್ಟಾನಾ ವಾನ್‌ಗೋ? ನಾನು ಕೇಳಿದ್ದರ ಅರ್ಥ, ಅವರ ಜೊತೆ ಮಲಗೋಕೆ ಅಂತ! ನನಗಂತು ಅದೆಲ್ಲ ತುಂಬಾ ಇಷ್ಟ. ಏನು ಹೇಳ್ತಿ? ಒಂದು ರಾತ್ರಿ ಅಲ್ಲಿಗೆ ಹೋಗೋಣವೇನೊ."

"ಖಂಡಿತ ಆಗಬಹುದು."

"ಸ್ಪ್ಲೆಂಡಿಡ್! ಕೋರ್‌ಮನ್‌ಗೆ ಈಗ ವಾಪಸ್ ಹೋಗಬೇಕಾಗುತ್ತೆ. ಇನ್ನೊಂದು ಗ್ಲಾಸ್?.... ಹಾಂ!.... ಇನ್ನೊಂದು ಸಲ ತುಂಬಿಸಿಕೋ ಬಾಟಲ್ ಖಾಲಿ ಆಗುತ್ತೆ. ಸ್ವಲ್ಪ ನೋಡಿಕೊಂಡು! ಮುಂದೆ ಟೇಬಲ್ ಇದೆ..... ಹೊಡ್ಕೋತೀಯ. ಬಿಡು! ಬಿಡು.... ಕೆಲಸದವಳು ಅದನ್ನೆಲ್ಲ ಕ್ಲೀನ್ ಮಾಡ್ತಾಳೆ. ಆದಷ್ಟು ಬೇಗ ಇಲ್ಲಿಂದ ಹೋಗಬೇಕಾಗಬಹುದೇನೋ ಎನಿಸುತ್ತೆ. ನಾನು ಬಹಳ ಶ್ರೀಮಂತನ ಮಗ ವಾನ್‌ಗೋ. ನನ್ನಂಥ ಅಂಗವಿಕಲನಾದ ಮಗನನ್ನು ಪ್ರಪಂಚಕ್ಕೆ ತಂದಿರುವುದಕ್ಕಾಗಿ ನಾನೆಲ್ಲಿ ಬೈತೀನೋ ಅಂತ ಹೆದರಿಕೆ. ಅದಕ್ಕೇ ನಾನು ಕೇಳಿದ್ದನ್ನೆಲ್ಲಾ ಕೊಡಿಸ್ತಾನೆ. ಯಾವುದೋ ಒಂದು ಖಾಲಿ ಸ್ಟುಡಿಯೋ ಕೊಂಡುಕೊಳ್ತೇನೆ. ಏನೆಲ್ಲ ಸಾಮಾನು ತಂದು ತುಂಬ್ತೇನೆ. ಕಡೆಗೆ ಉಸಿರು ಕಟ್ಟಿದ ಹಾಗಾದ ಕೂಡಲೇ ಅದನ್ನು ಬಿಟ್ಟು ಮತ್ತೊಂದು ಕಡೆ ಹೋಗ್ತೇನೆ. ಅದು ಸರಿ, ನಿನಗೆ ಎಂಥ ಹೆಣ್ಣು ಇಷ್ಟ? ಹೊಂಬಣ್ಣದ ಕೂದಲಿನವಳೋ, ಕೆಂಚು ಕೂದಲಿನವಳೋ?"

"ಬೀಗದ ಬಗ್ಗೆ ಯೋಚನೆ ಮಾಡಬೇಡ...... ನಾನು ನಿನ್ನ ಮುಂದೆ ನಾಟಕ ಮಾಡಬೇಕಾದ ಅಗತ್ಯ ಇಲ್ಲ. ಈ ಕೋಲನ್ನೇ ಹೆಚ್ಚು ನೆಚ್ಕೊಂಡಿರ್ತೀನಿ. ನನಗೆ

ಬೇಗಬೇಗ ನಡೆಯೋಕೆ ಆಗೊಲ್ಲ. ಅದಕ್ಕೇ ಆಗಾಗ ಸುಂದರವಾದ ದೃಶ್ಯಗಳು ಕಂಡರೆ ನೋಡ್ತಾ ನಿಂತು ಬಿಡ್ತೀನಿ! ಒಂದು ರೀತಿಯಿಂದ ನಾವೆಲ್ಲ ಕುಂಟರೇ!..... ಇರಲಿ, ನಡೆ ಹೋಗೋಣ."

–೪–

ತುಂಬ ಸುಲಭ ಅಂತ ಅನ್ನಸ್ತೆ. ಅವನು ಮಾಡಬೇಕಾದದ್ದು, ಹಳೆಯ ಪ್ಯಾಲೆಟ್ ಅನ್ನು ಬಿಸಾಡೋದು; ತೆಳು ಬಣ್ಣಗಳನ್ನು ಕೊಂಡುಕೊಳ್ಳೋದು; ಇಂಪ್ರೆಷನಿಷ್ಟರ ಹಾಗೆ ಪೈಂಟ್ ಮಾಡೋದು. ಮೊದಲಿನ ದಿನದ ಪ್ರಯತ್ನದಲ್ಲಿ ಅವನಿಗೆ ಆಶ್ಚರ್ಯವೊಂದು ಕಡೆ! ಕೋಪ ಒಂದು ಕಡೆ. ಎರಡನೆ ದಿನದ ಕಡೆಯಲ್ಲಿ ಏನೋ ಗಾಭರಿ; ಮೂರನೇ ದಿನಕ್ಕೆ ಬರುತ್ತಿದ್ದ ಹಾಗೆ, ಗಾಭರಿ, ಬೇಸರ, ಸಿಟ್ಟು, ಭಯಕ್ಕೆ ತಿರುಗಿತು. ವಾರದ ಕೊನೆಯ ಹೊತ್ತಿಗೆ, ಕ್ರೋಧದ ಪರಾಕಾಷ್ಠೆ ತಲುಪಿದ್ದ. ಬಣ್ಣಗಳ ಜೊತೆಗೆ ತಿಂಗಳುಗಟ್ಟಲೆ ಪ್ರಯತ್ನ ನಡೆಸಿದರೂ ಕಷ್ಟಪಟ್ಟರೂ ಇನ್ನೂ ಅಪ್ರಬುದ್ಧ, ಹೊಸಬ. ಕ್ಯಾನ್‌ವಾಸ್‌ಗಳೆಲ್ಲ ಮತ್ತೆ ಗಾಢಬಣ್ಣಗಳಿಂದ ಮಂಕಾಗಿ, ನಿರ್ಜೀವವಾಗಿಯೇ ಕಾಣಿಸುತ್ತಿದ್ದವು, ಕೋರಮನ್ ಅಕಾಡೆಮಿನಲ್ಲಿ, ಲಾಟ್ರೆಕ್ ಅವನ ಪಕ್ಕದಲ್ಲಿಯೇ ಕುಳಿತು ಅವನು ಪೈಂಟ್ ಮಾಡುತ್ತಿದ್ದುದನ್ನು ಗಮನಿಸುತ್ತಿದ್ದ. ಆದರೆ ಅವನಿಗೆ ಸಲಹೆ ಸೂಚನೆ ಕೊಡುವ ಸಾಹಸಕ್ಕೆ ಮಾತ್ರ ಹೋಗಲಿಲ್ಲ.

ಒಂದು ವಾರ ವಿನ್ಸೆಂಟ್‌ಗೆ ಕಷ್ಟವೋ ಕಷ್ಟ ಎನಿಸಿದರೆ, ಥಿಯೋಗೆ ಅದಕ್ಕಿಂತ ಸಾವಿರ ಪಟ್ಟು ಕಷ್ಟವೆನಿಸಿತು.

ಥಿಯೋ ಬಹಳ ಸೌಮ್ಯ ಸ್ವಭಾವದವನು. ಬಹಳ ಶಿಸ್ತಿನ ಮತ್ತು ಅಚ್ಚುಕಟ್ಟಿನ ಮನುಷ್ಯ. ನಡೆ, ನುಡಿ, ಮಾತು ಎಲ್ಲದರಲ್ಲಿಯೂ ಒಂದು ಬಗೆಯ ಗಾಂಭೀರ್ಯ. ಎಲ್ಲೇ ಇರಲಿ, ಮನೆ, ಆಫೀಸ್ ಎಲ್ಲಿದ್ದರೂ ತನ್ನ ನಡವಳಿಕೆಯಲ್ಲಿ, ವೇಷಭೂಷಣಗಳಲ್ಲಿ ಬದಲಾವಣೆ ಸಾಧ್ಯವೇ ಇರಲಿಲ್ಲ. ವಿನ್ಸೆಂಟ್‌ನಲ್ಲಿ ಲವಲವಿಕೆಯ ಎಳ್ಳಿನಷ್ಟು ಭಾಗ ಮಾತ್ರ ಅವನಲ್ಲಿ ಕಾಣಲು ಸಾಧ್ಯವಿತ್ತು. ಲೂ ಲ್ಯಾವಲ್‌ನಲ್ಲಿದ್ದ ಅಪಾರ್ಟ್‌ಮೆಂಟು ಅವನ ಮಟ್ಟಿಗೆ ಸಾಕಾಗಿತ್ತು. ಒಂದು ವಾರ ಪೂರ್ತಿಯಾಗುವುದರೊಳಗೆ ವಿನ್ಸೆಂಟ್ ಅದನ್ನೊಂದು ಕಸದ ಬುಟ್ಟಿ ಎಂಬಂತೆ ರೂಪಾಂತರಗೊಳಿಸಿಬಿಟ್ಟಿದ್ದ. ಸಾಮಾನೆಲ್ಲವನ್ನೂ ಅಲ್ಲಿ ಬಿಸಾಡಿದ. ಕುರ್ಚಿ, ಟೇಬಲ್ಲು ಎಲ್ಲವನ್ನೂ ಸಿಟ್ಟಿನಿಂದ ಒದೆಯುತ್ತಿದ್ದ. ನೆಲದ ಮೇಲೆ ಖಾಲಿಯಾದ ಬಣ್ಣದ ಟ್ಯೂಬುಗಳು ಹರಡಿಕೊಂಡಿದ್ದವು. ದಿವಾನು, ಟೇಬಲುಗಳ ಮೇಲೆಲ್ಲ ಕೊಳಕು ಬಟ್ಟೆಗಳಿದ್ದವು. ಅಡಿಗೆ ಮನೆ ಪಾತ್ರೆಗಳನ್ನೆಲ್ಲ ಒಡೆದೊಡೆದು ಹಾಕಿದ. ಎಲ್ಲೆಂದರಲ್ಲಿ ಬಣ್ಣಗಳನ್ನು ಚೆಲ್ಲಾಡಿದ. ಥಿಯೋನ ಅಚ್ಚುಕಟ್ಟು ಅಸ್ತವ್ಯಸ್ತವಾಯಿತು.

"ವಿನ್ಸೆಂಟ್, ವಿನ್ಸೆಂಟ್, ಯಾಕಿಷ್ಟು ಒರಟಾಗಿ ನಡ್ಕೊಳ್ತಿ?"

ವಿನ್ಸೆಂಟ್ ಆ ಪುಟ್ಟ ಅಪಾರ್ಟ್‌ಮೆಂಟ್‌ನಲ್ಲಿ ಶತಪಥ ಹಾಕುತ್ತಿದ್ದ. ಬೇಸರದಿಂದ ಗೊಣಗಿದ – "ನಾನು ಬಹಳ ತಡವಾಗಿ ಆರಂಭಮಾಡಿದೆ. ಈ ವಾರ ಇಪ್ಪತ್ತು ಕ್ಯಾನ್‌ವಾಸ್‌ಗಳನ್ನು ಮಾಡಿದೆ. ನನ್ನ ಹಳೆ ಟೆಕ್ನಿಕ್‌ನಲ್ಲಿಯೇ ಉಳಿದುಕೊಳ್ಳುತ್ತಿದ್ದೇನೆ.

ಮತ್ತೆ ಮೊದಲಿಂದ ಶುರು ಮಾಡಬೇಕೂಂದ್ರೆ ಸಾಧ್ಯವೇ ಇಲ್ಲ. ಥಿಯೋ ನನ್ನ ಕಥೆ ಮುಗೀತು. ಮತ್ತೆ ನಾನು ಹಾಲೆಂಡ್‌ಗೆ ಹೋಗಿ ಕುರಿ, ಕೋಳಿ ಪೈಂಟ್ ಮಾಡೋದು ನನ್ನಿಂದ ಆಗೊಲ್ಲ. ಇಲ್ಲಿಗೆ ಬಂದ ಮೇಲಂತೂ ಸಾಧ್ಯವೇ ಇಲ್ಲ! – ಎನಿಸುತ್ತೆ. ಇಲ್ಲಿನ ಮುಖ್ಯ ಪ್ರವಾಹದಲ್ಲಿ ಸೇರೋಕೆ, ಮೊದಲೇ ಇಲ್ಲಿಗೆ ಬರಬೇಕಾಗಿತ್ತು. ಈಗೇನು ಮಾಡಲಿ ನಾನು?"

ಕುಳಿತಲ್ಲಿಂದ ಜಿಗಿದೆದ್ದು ತಾಜಾ ಗಾಳಿ ಬೇಕೆನಿಸಿ ಬಾಗಿಲನ್ನು ಒದ್ದು ತೆರೆದು, ಕಿಟಕಿಯ ಮೂಲಕ ರೆಸ್ಟೋರೆಂಟ್ ಬತ್ತೈಲ್ ಅನ್ನು ದಿಟ್ಟಿಸುತ್ತಾ ನಿಂತ. ನಂತರ ಕಿಟಕಿಯ ಗಾಜು ಒಡೆದು ಹೋಗುವಷ್ಟು ರಭಸದಿಂದ ಕಿಟಕಿ ಬಾಗಿಲು ಮುಚ್ಚಿ ಅಡಿಗೆ ಮನೆಯತ್ತ, ಒಂದು ಲೋಟನೀರು ಕುಡಿಯಲು ಓಡಿದ. ಆದರೆ ಅರ್ಧನೀರನ್ನು ನೆಲದ ಮೇಲೆ ಚೆಲ್ಲಿದ, ಅರ್ಧ ಕುಡಿದು ನಂತರ ಪಡಸಾಲೆಯತ್ತ ಬಂದ.

"ಥಿಯೋ, ಈಗ ಏನ್ಮಾಡಲಿ ಹೇಳು, ಪೈಂಟಿಂಗ್ ಬಿಟ್ಟುಬಿಡಲೇ! ನನ್ನ ಕೈಯಲ್ಲಿ ಸಾಧ್ಯವಿಲ್ಲವೇನೋ ಎನಿಸಿದೆ. ನಿನಗೇನನಿಸುತ್ತೆ?"

"ವಿನ್ಸೆಂಟ್, ನೀನು ಮಗು ಥರಾ ಆಡ್ತಿದ್ದೀ. ಸಮಾಧಾನದಿಂದ ಸ್ವಲ್ಪ ಹೊತ್ತು ಕೂತ್ಕೋ, ನಾನು ಹೇಳೋದನ್ನ ಕೇಳಿಸಿಕೋ, ಸುಮ್ಮನೆ ಈ ಥರಾ ಓಡಾಡ್ತಾ ಇರಬೇಡ. ನನಗೆ ಮಾತಾಡೋಕೆ ಕಷ್ಟವಾಗುತ್ತೆ. ನಿನ್ನ ದಮ್ಮಯ್ಯಾಂತೀನಿ. ದಯವಿಟ್ಟು ನೀನು ಕಾಲಿಗೆ ಹಾಕ್ಕೊಂಡಿರೋ ಮಣಭಾರದ ಬೂಟುಗಳನ್ನು ತೆಗೆದುಬಿಡು. ನೀನು ಓಡಾಡುವಾಗಲೆಲ್ಲ ಈ ಕುರ್ಚಿಗೆ ತಗಲಿಸ್ತೀಯ!"

"ಥಿಯೋ ಈಗ ಆರು ವರ್ಷಗಳಿಂದ ನನಗೆ ಸಹಾಯ ಮಾಡ್ತಾ ಬಂದಿದ್ದೀಯ. ನಿನಗೆ ಇದರಿಂದ ಸಿಕ್ಕಿದ್ದೇನು? ಒಂದಷ್ಟು ಕೆಲಸಕ್ಕೆ ಬಾರದ ಚಿತ್ರಗಳು, ಭಯಂಕರ ನಷ್ಟ. ಅಷ್ಟೇ ತಾನೇ?"

"ನೋಡಪ್ಪಾ, ನೀನು ರೈತರ ಚಿತ್ರ ಬರೀಬೇಕೂ ಅಂದ್ಕೊಂಡಾಗ, ತಕ್ಷಣ ಬರೆಯೋಕೆ ಆಯ್ತಾ? ಒಂದು ವಾರದಲ್ಲಿ ಎಲ್ಲ ಕಲಿತು ಬಿಟ್ಟೆಯಾ? ಇಲ್ಲ ಐದು ವರ್ಷ ತಗೊಂಡೆಯಾ?"

"ಅದು ಸರಿ. ಆದರೆ ಆಗತಾನೆ ಕಲಿಯಲು ಶುರುಮಾಡಿದ್ದೆ."

"ಈಗಲೂ ಹಾಗೆ. ಬಣ್ಣಗಳ ಜೊತೆ ಪ್ರಯತ್ನ ಈಗ ತಾನೇ ಮಾಡ್ತಿದ್ದೀಯ! ಅದಕ್ಕೂ ಬಹುಶಃ ಒಂದೈದು ವರ್ಷ ಬೇಕಾಗಬಹುದೇನೋ!"

"ಅಂದ್ರೆ ಇದು ಮುಗಿಯೋದೇ ಇಲ್ವೇನು? ನನ್ನ ಜೀವನ ಪರ್ಯಂತ ಕಲಿಯೋದರಲ್ಲೇ ಕಳೆಯಬೇಕೇನು? ನನಗೆ ಆಗಲೇ ಮೂವತ್ಮೂರು ವರ್ಷ ಆಗಿದೆ. ದೇವರ ದಯೆಯಿಂದ ಎಂದಾದರೂ ನನಗೆ ಪ್ರಬುದ್ಧತೆ ಬರುವ ಸಾಧ್ಯತೆ ಇದೆಯೇನು?"

"ವಿನ್ಸೆಂಟ್ ಇದು ನಿನ್ನ ಕಡೆಯ ಪ್ರಯತ್ನ. ಯೂರೋಪ್‌ನಲ್ಲಿ ಪೈಂಟಿಂಗ್ಸ್ ಹೇಗೆ ನಡೀತಾ ಇದೆ ಅನ್ನೋದೆಲ್ಲ ನನಗೆ ಗೊತ್ತು. ಒಂದು ಸಲ ನಿನ್ನ ಬಣ್ಣಗಳನ್ನು ತೆಳು ಮಾಡಿ ನೋಡು......"

"ಥಿಯೋ, ನಿಜವಾಗಿ ನನ್ನಿಂದ ಸಾಧ್ಯ ಅಂತ ಅನ್ಸತ್ತಾ? ನಾನು ಸೋತೆ ಅಂತ ನಿನಗೆ ಅನ್ನಿಸಲಿಲ್ಲ ತಾನೇ?"

"ನನಗೆ ಅನಿಸುತ್ತಿರೋದು ಏನುಗೊತ್ತಾ, ನೀನೊಬ್ಬ ಶತಮೂರ್ಖ ಅಂತ! ಕಲೆಯ ಇತಿಹಾಸದಲ್ಲಿ ಆದ ಕ್ರಾಂತಿಯನ್ನು ಕೇವಲ ಒಂದು ವಾರದಲ್ಲಿ ಹಿಡಿತಕ್ಕೆ ತಗೋಬೇಕೂಂತ ಇದ್ದೀಯಲ್ಲ! ಸುಮ್ಮನೆ ಎದ್ದು ನಡಿ ಜೊತೆಗೆ, ಹೊರಗೆ ಸ್ವಲ್ಪ ಅಡ್ಡಾಡಿ ತಾಜಾ ಗಾಳಿ ಸೇವನೆಯಾದರೂ ಮಾಡಿ ಬರೋಣ. ನೀನೂ ಸ್ವಲ್ಪ ತಲೆ ತಣ್ಣಗೆ ಮಾಡ್ಕೋ. ನಿನ್ನ ಜೊತೆ ಈ ರೂಮಲ್ಲಿ ಇನ್ನೊಂದೈದು ನಿಮಿಷ ಇದ್ದರೂ, ನಾನೇನು ಮಾಡ್ತೀನೋ ನನಗೇ ಗೊತ್ತಿಲ್ಲ."

ಮಾರನೆ ದಿನ ಕೋರ್‌ಮನ್ ಅಕಾಡೆಮಿನಲ್ಲಿ ತಡ ಮಧ್ಯಾಹ್ನವರೆಗೆ ಬಹಳ ಹೊತ್ತು ಸ್ಕೆಚ್ ಮಾಡಿ, ನಂತರ ಥಿಯೋ ಬಳಿಗೆ ಹೋದ. ಏಪ್ರಿಲ್ ತಿಂಗಳ ಸಂಜೆಯ ಕೆಂಪು ಬಣ್ಣದಿಂದ ಆರು ಅಂತಸ್ತಿನ ಕಟ್ಟಡ ಅದ್ದಿದಂತಿತ್ತು. ರೂ ಮಾಂಟ್ ಮಾರ್ತ್ರೆಯ ರಸ್ತೆಗಳೆಲ್ಲ ಗಿಜಗುಟ್ಟುತ್ತಿದ್ದವು. ಕೆಫೆಗಳ ಮುಂದುಗಡೆ ಸ್ನೇಹಿತರೊಂದಿಗೆ ಹರಟೆಹೊಡೆಯುತ್ತ ನಿಂತ ಗುಂಪುಗಳು ಇದ್ದವು. ಕೆಫೆಯ ಒಳಗಡೆಯಿಂದ ಸಂಗೀತ ಕೇಳಿಬರುತ್ತಿತ್ತು. ಗ್ಯಾಸ್‌ದೀಪಗಳು ಉರಿಯುತ್ತಿದ್ದವು. ಯುವಕರು ಟೇಬಲ್‌ಗಳ ಮೇಲೆ ಚಾದರಗಳನ್ನು ಹಾಸುತ್ತಿದ್ದರು. ಡಿಪಾರ್ಟ್‌ಮೆಂಟ್ ಸ್ಟೋರ್‌ಗಳ ಬಾಗಿಲುಗಳು ಮುಚ್ಚುತ್ತಿದ್ದವು. ರಸ್ತೆ ಮೇಲಿನ ಕಸದ ಡಬ್ಬಿಗಳನ್ನು ಖಾಲಿ ಮಾಡುತ್ತಿದ್ದರು. ಥಿಯೋ ಮತ್ತು ವಿನ್ಸೆಂಟ್ ಇಬ್ಬರೂ ನಿರಾಳವಾಗಿ ಸ್ವಲ್ಪ ಹೊತ್ತು ಅಡ್ಡಾಡಿದರು. ನೋತ್ರದಾಮ್ ದು ಲೊರೆಟ್ ಹಾದು ಗುಡ್ಡ ಸುತ್ತಿ ರೂ ಲಾವಲ್‌ಗೆ ಹಿಂತಿರುಗಿದರು.

"ಒಂದು ಡ್ರಿಂಕ್ ಹಾಕೋಣವೇ ವಿನ್ಸೆಂಟ್?"

"ಜನ ಕಾಣಿಸೋ ಕಡೆ ಹೋಗಿ ಕುಳಿತುಕೊಳ್ಳೋಣ."

"ರೂ ಡೆ ಅಬೆಸ್ಸ್‌ನಲ್ಲಿ ಇರುವ ಬತ್ತೈಯ ರೆಸ್ಟೋರೆಂಟ್‌ಗೆ ಹೋಗೋಣ. ಅಲ್ಲಿ ನನ್ನ ಕೆಲವು ಸ್ನೇಹಿತರೂ ಸಿಗಬಹುದು."

ರೆಸ್ಟೋರೆಂಟ್ ಬತ್ತೈಯ್ ಸಾಮಾನ್ಯವಾಗಿ ಕಲಾವಿದರ ಕಟ್ಟೆ ಆಗಿತ್ತು. ಆಗಾಗ ಅಲ್ಲಿ ತುಂಬಾ ಜನ ಕಲಾವಿದರು ಸೇರ್ತಿರ್ತಾರೆ. ಮುಂದಿನ ಭಾಗದಲ್ಲಿ ಕೇವಲ ಒಂದೈದಾರು ಟೇಬಲ್ಲುಗಳು ಮಾತ್ರವೇ ಇದ್ದವು. ಆದರೆ ಒಳಗಡೆ ವಿಶಾಲವಾದ ಕೋಣೆಗಳು ಇದ್ದವು. ಮೇಡಂ ಬತ್ತೈಯ ಸಾಮಾನ್ಯವಾಗಿ ಕಲಾವಿದರನ್ನು ಒಂದು ರೂಮಿಗೆ ಕಳಿಸುತ್ತಿದ್ದಳು. ಮತ್ತು ಬೂರ್ಜ್ವಾ ಗುಂಪನ್ನು ಮತ್ತೊಂದು ರೂಮಿಗೆ ಕಳಿಸುತ್ತಿದ್ದಳು. ಒಂದು ಸಲ ನೋಡಿದರೆ ಸಾಕು, ಆಕೆ ತಕ್ಷಣ ಯಾರು ಯಾವ ವರ್ಗಕ್ಕೆ ಸೇರಿದವರು ಎಂದು ಹೇಳಿ ಬಿಡುತ್ತಿದ್ದಳು.

"ಏ ಬಾಯ್, ಒಂದು ಕುಮ್ಮೆಲ್ ತಗೊಂಡ್ಬಾ."

"ನನಗೇನು ಹೇಳಿದೆ."

"ಕ್ವಾಂಟ್ರೋ, ನಿನಗೆ ಇಷ್ಟವಾಗುವ ಡ್ರಿಂಕನ್ನು ಶಾಶ್ವತವಾಗಿ ಹಿಡಿಯುವುದಕ್ಕೆ ಮೊದಲು, ಸ್ವಲ್ಪ ಸ್ವಲ್ಪ ರುಚಿನೋಡಬೇಕಾಗುತ್ತೆ."

ಆ ಯುವಕ ಇಬ್ಬರ ಮುಂದೆಯೂ ಎರಡು ಡ್ರಿಂಕ್‌ಗಳನ್ನು ಇರಿಸಿದ, ಜೊತೆಗೆ ಬಿಲ್ಲನ್ನೂ ಇಟ್ಟ. ಥಿಯೋ ಸಿಗರೇಟ್ ಹಚ್ಚಿದರೆ, ವಿನ್ಸೆಂಟ್ ಪೈಪ್ ಹಚ್ಚಿದ. ಲಾಂಡ್ರಿ ಹೆಂಗಸರು ಇಸ್ತ್ರಿ ಮಾಡಿಟ್ಟಿದ್ದ ಬಟ್ಟೆಗಳನ್ನು ಹಿಡಿದು ಇವರನ್ನು ಹಾದು ಹೋದರು. ಇನ್ನೊಬ್ಬ ಕೆಲಸಗಾರ ಕೈಯಲ್ಲಿ ಮೀನು ಹಿಡಿದುಕೊಂಡು ಇವರ ಬಳಿ ಸುಳಿದುಹೋದ. ಅಲ್ಲೆಲ್ಲ ಪೈಂಟರ್ಸ್ ಇದ್ದರು. ಈಸಲ್‌ಗೆ ಕ್ಯಾನ್‌ವಾಸ್‌ಗಳನ್ನು ಏರಿಸುತ್ತಿದ್ದರು. ವ್ಯಾಪಾರಸ್ಥರು, ಹೆಂಗಸರು ಆಕರ್ಷಕವಾದ ಉಡುಪಿನಲ್ಲಿ ಅಲ್ಲಿ ಕಾಣಿಸಿದರು. ಉದ್ದನೆಯ ಸ್ಕರ್ಟುಗಳಲ್ಲಿ, ಎತ್ತರದ ಹಿಮ್ಮಡಿಯ ಚಪ್ಪಲಿಯಲ್ಲಿ ಇದ್ದ ಹೆಂಗಸರು ಸಣ್ಣ ನಡುವುಳ್ಳ ಸುಂದರಿಯರಾಗಿದ್ದರು. ಅವರು ಧರಿಸಿದ್ದ ಹ್ಯಾಟುಗಳಲ್ಲಿ ಬಣ್ಣಬಣ್ಣದ ಗರಿಗಳಿದ್ದವು.

"ಆಹಾ! ಎಂಥ ಅದ್ಭುತವಾದ ಮೆರವಣಿಗೆ ಪ್ರದರ್ಶನ! ಅಲ್ವೆ ಥಿಯೋ!"

"ಅಪೆಂಥಿಫ್ ಡ್ರಿಂಕ್ ಸಮಯ ಆಗುವವರೆಗೂ ಯಾರೊಬ್ಬರಿಗೂ ಇಲ್ಲಿ ಬೆಳಗಾಗುವುದೇ ಇಲ್ಲ."

"ಪ್ಯಾರಿಸ್ ಯಾಕೆ ಇಷ್ಟೊಂದು ಅದ್ಭುತ, ರೋಮಾಂಚಕಾರಿ ಆಗಿರುತ್ತೆ ಅನ್ನೋದು ನನಗಿನ್ನೂ ಅರ್ಥವಾಗಿಲ್ಲ."

"ನಿಜವಾಗಿ ಹೇಳೋದಾದರೆ ನನಗೂ ಸರಿಯಾಗಿ ಗೊತ್ತಿಲ್ಲ. ಅದು ನಿಜಕ್ಕೂ ಒಂದು ನಿಗೂಢ! ಫ್ರೆಂಚ್ ಗುಣದ ವಿಶೇಷವೇ ಅದಾಗಿರಬಹುದು. ಒಂದು ರೀತಿಯ ಸ್ವಾತಂತ್ರ್ಯ (ಸಹನಗುಣ) ಸಹನೀಯತೆ, ಬದುಕನ್ನು ಸಹಜವಾಗಿ ಸ್ವೀಕರಿಸುವಂತಹ ರೀತಿ..... ಇತ್ಯಾದಿ!..... ಹಲೋ. ಇಲ್ಲಿ ನನಗೊಬ್ಬ ಫ್ರೆಂಡ್ ಸಿಕ್ಕಿದ್ದಾನೆ. ನೀನು ಅವನನ್ನು ಭೇಟಿಯಾಗಲೇ ಬೇಕು..... ಗುಡ್ ಈವಿನಿಂಗ್ ಪಾಲ್..... ಹೇಗಿದ್ದೀಯ?"

"ಆರಾಮಿದ್ದೀನಿ. ನೀನು ಹೇಗಿದ್ದೀಯ ಥಿಯೋ?"

"ನನ್ನ ಸೋದರ ವಿನ್ಸೆಂಟ್ ವಾನ್‌ಗೋ! ..... ವಿನ್ಸೆಂಟ್ ಇವನು ಪಾಲ್‌ಗಾಗಿನ್. ಕೂತ್ಕೋ ಪಾಲ್. ನಿನಗೆ ಇಷ್ಟವಾದ ಅಬಿಸಿಂತ್ ಆಗಬಹುದಲ್ಲ!"

ಪಾಲ್ ಡ್ರಿಂಕನ್ನು ಕೈಗೆತ್ತಿಕೊಂಡು ತುಟಿಗಿಟ್ಟ. ನಂತರ ವಿನ್ಸೆಂಟ್ ಕಡೆ ತಿರುಗಿದ.

"ಮಿಸ್ಟರ್ ವಾನ್‌ಗೋ! ಪ್ಯಾರಿಸ್ ಹೇಗನಿಸುತ್ತೆ?"

"ನನಗೆ ತುಂಬ ಹಿಡಿಸಿದೆ."

"ನೀನು ಹೇಳೋದು ಕುತೂಹಲಕಾರಿಯಾಗಿದೆ! ನನ್ನನ್ನು ಕೇಳೋದಾದರೆ ನಾನು ಇದನ್ನು ಒಂದು ಬೃಹತ್ ಕಸದ ಬುಟ್ಟಿ ಎಂದೇ ಕರೆಯುತ್ತೇನೆ. ನಾಗರೀಕತೆಯೇ ಇಲ್ಲಿನ ಕಸ."

"ಥಿಯೋ ಕ್ವಾಂಟ್ರೋ ನನಗೆ ಅಷ್ಟಾಗಿ ಹಿಡಿಸೊಲ್ಲ. ಬೇರೆ ಯಾವುದಾದರೂ ಆರ್ಡರ್ ಮಾಡು."

"ಅಬಿಸಿಂತ್ ಯಾಕೆ ರುಚಿ ನೋಡಬಾರದು. ವಿನ್ಸೆಂಟ್, ಗಾಗಿನ್ ಗ್ಲಾಸಿಗೆ ಅದನ್ನು ಬಗ್ಗಿಸಿಕೊಡು. ಕಲಾವಿದರು ಕುಡಿಯಲು ಲಾಯಕ್ಕಾಗಿರೋ ಡ್ರಿಂಕ್ ಅಂದ್ರೆ ಇದೇ!"

"ಥಿಯೋ ನೀನೇನು ಹೇಳ್ತೀ?"

"ನನ್ನನ್ನು ಯಾಕೆ ಕೇಳ್ತಿ. ನಿಮಗೆ ಇಷ್ಟವಾದದ್ದನ್ನೇ ತರಿಸಿಕೊಳ್ಳಿ. ಬಾಯ್, ಒಂದು ಅಬಿಸಿಂತ್ ಅನ್ನು ಈತನಿಗೆ ಕೊಡು..... ಏನು ಪಾಲ್, ಇತ್ತೀಚೆಗೆ ಬಹಳ ಖುಷಿಯಲ್ಲಿ ಇರೋ ಹಾಗೆ ಕಾಣಿಸ್ತೀಯ. ಏನ್ಸಮಾಚಾರ? ಕ್ಯಾನ್‌ವಾಸ್‌ಗಳೇನಾದರೂ ಮಾರಾಟವಾದವೇನು?"

"ಅಯ್ಯೋ ಅಂಥಾದ್ದೇನೂ ಇಲ್ಲ. ಇವತ್ತು ಬೆಳಿಗ್ಗೆ ಒಂದು ರೋಮಾಂಚಕಾರಿ ಅನುಭವವಾಯಿತು."

ಥಿಯೋ ವಿನ್ಸೆಂಟ್‌ಗೆ ಕಣ್ಣು ಹೊಡೆದ. "ಪಾಲ್ ಹೇಳು ಏನದು?.... ಬಾಯ್ ಮಿಸ್ಟರ್ ಗಾಗಿನ್‌ಗೆ ಇನ್ನೊಂದು ರೌಂಡ್ ಅಬಿಸಿಂತ್."

ಗಾಗಿನ್ ತನ್ನ ನಾಲಿಗೆಯಿಂದ ಅಬಿಸಿಂತ್‌ನ ರುಚಿ ಸವಿದ. ಒಂದು ಗುಟುಕನ್ನು ಬಾಯೊಳಗೆ ಸೇರಿಸಿ ಮಾತಿಗೆ ಆರಂಭಿಸಿದ.

"ನಿನಗೆ ಆ ಕಡೆ ಬೀದೀಲಿ, ಬೆಳಿಗ್ಗೆ ಐದು ಗಂಟೆಗೆ, ಮದರ್ ಫೋರೆಲ್ ಗಟ್ಟಿಯಾಗಿ, ಹೆಲ್ಪ್! ಹೆಲ್ಪ್! ಯಾರಾದರೂ ಬಂದು ಸಹಾಯ ಮಾಡಿ, ನನ್ನ ಗಂಡ ನೇಣು ಹಾಕಿಕೊಂಡಿದ್ದಾನೆ! ಎಂದು ಕಿರುಚುತ್ತಿದ್ದಳು. ಅದು ಕೇಳಿದ್ದೇ ದಿಢೀರನೆ ಹಾಸಿಗೆಯಿಂದ ಎದ್ದು ಬಟ್ಟೆ ಹಾಕ್ಕೊಂಡು, ಒಂದು ಚಾಕು ಹುಡುಕಿ ತಗೊಂಡು ಹೋಗಿ ಹಗ್ಗವನ್ನು ಕತ್ತರಿಸಿದೆ. ಆ ಮನುಷ್ಯನ ಉಸಿರಾಟ ನಿಂತುಹೋಗಿತ್ತು. ಆದರೆ ದೇಹ ಇನ್ನೂ ಬಿಸಿಯಾಗಿತ್ತು. ಅವನ ಹಾಸಿಗೆ ಬಳಿಗೆ ಎತ್ತಿಕೊಂಡು ಹೋಗಲು ಯೋಚಿಸಿದೆ. ಆದರೆ ಅಷ್ಟರಲ್ಲಿ ಮದರ್ ಫೋರೆಲ್ ಕೂಗಿ – ನಾವು ಪೋಲೀಸರು ಬರುವ ವರೆಗೆ ಕಾಯಬೇಕು!" ಎಂದಳು.

"ನನ್ನ ಮನೆಯ ಮತ್ತೊಂದು ದಿಕ್ಕಿಗೆ ಒಂದು ಹದಿನೈದು ಗಜ ದೂರದಲ್ಲಿ ತೋಟವಿದೆ. ನಾನು ತೋಟದ ಮಾಲಿಯನ್ನು ಕರೆದು 'ಕ್ಯಾಂಟಲೂಪ್' ಇದೆಯೇನು ಎಂದು ವಿಚಾರಿಸಿದೆ. ಅವನು 'ಇದೆ ಸಾರ್. ಚೆನ್ನಾಗಿ ಹಣ್ಣಾಗಿರೋದೇ ಇದೆ' ಎಂದ. ಬ್ರೇಕ್‌ಫಾಸ್ಟ್ ತಗೊಳ್ಳೋವಾಗ, ಸತ್ತ ಮನುಷ್ಯನ ಯೋಚನೆಯೇ ಇಲ್ಲದೆ ಆ ಹಣ್ಣನ್ನು ತಿಂದೆ. ಜೀವನದಲ್ಲಿ ಒಳ್ಳೆಯದು ಇದೆ. ವಿಷವಿದ್ದರೆ ವಿಷಕ್ಕೆ ಪರಿಹಾರ ರೂಪದಲ್ಲಿ ಅಥವಾ ಅದಕ್ಕೆ ಪ್ರತಿಯಾಗಿ ವಿಷಹಾರಕವೂ ಇದೆ. ನನ್ನನ್ನ ಊಟಕ್ಕೆ ಕರೆದಿದ್ದರು. ಅದಕ್ಕಾಗಿ, ಎಲ್ಲರಿಗೂ ಅಚ್ಚರಿ ಮೂಡಿಸುವಂತೆ ಅತ್ಯುತ್ತಮವಾದ ಉಡುಪನ್ನು ಧರಿಸಿಕೊಂಡಿದ್ದೆ. ಕತೆಯೆಲ್ಲ ಹೇಳಿದೆ. ಅವರು ಅದಕ್ಕೂ ತಮಗೂ ಯಾವುದೇ ಸಂಬಂಧವಿಲ್ಲವೆಂಬಂತೆ ಮುಗುಳ್ನಗುತ್ತಿದ್ದರು. ಅಲ್ಲದೆ ಅವನು ನೇಣು ಹಾಕಿಕೊಂಡಿದ್ದ ಹಗ್ಗದ ತುಣುಕಿದ್ದರೆ ತೋರಿಸುವಂತೆ ಕೇಳಿಕೊಂಡರು."

ವಿನ್ಸೆಂಟ್ ಪಾಲ್ ಗಾಗಿನ್ ಕಡೆ ನೋಡಿದ. ದೊಡ್ಡ ಗಾತ್ರದ ತಲೆ, ದಪ್ಪನೆಯ ಮೂಗು, ಅಗಲವಾದ, ಬಾದಾಮಿ ಆಕಾರದ ಕಣ್ಣುಗಳು ಸ್ವಲ್ಪ ಹೊರಚಾಚಿದಂತೆ ಇದ್ದವು. ಭಯಂಕರ ವಿಷಾದದ ಛಾಯೆ ಅವನ ಕಣ್ಣುಗಳಲ್ಲಿ ತುಂಬಿತ್ತು. ಹುಬ್ಬಿದ

ಎಲೆಬುಗಳು ಎದ್ದು ಕಾಣುತ್ತಿದ್ದವು. ಒಟ್ಟಾರೆಯಾಗಿ ಕ್ರೂರ ಜೀವಂತಿಕೆ, ಲವಲವಿಕೆಗಳುಳ್ಳ ಮನುಷ್ಯ ದೈತ್ಯನಾಗಿದ್ದ.

ಥಿಯೋ ಸಣ್ಣಗೆ ಮುಗುಳ್ನಕ್ಕ.

"ಪಾಲ್ ನೀನು ಸಹಜವಾಗಿ ಕಾಣಲೆಂದು, ನಿನ್ನ ಸ್ಯಾಡಿಸಂನ ಅಗತ್ಯಕ್ಕಿಂತ ಹೆಚ್ಚಾಗಿ ಪ್ರದರ್ಶಿಸುತ್ತಿರುವೆ ಅಂತ ನನ್ನ ಭಾವನೆ. ಈಗ ನನಗೆ ಹೋಗಬೇಕಿದೆ. ಒಂದು ಡಿನ್ನರ್ ಕಾರ್ಯಕ್ರಮ ಇದೆ. ವಿನ್ಸೆಂಟ್ ನೀನೂ ಬರ್ತಿಯೇನು?"

"ಥಿಯೋ, ಅವನು ನನ್ನ ಜೊತೆ ಇರಲಿ ಬಿಡು. ನಿನ್ನ ಈ ಸೋದರನನ್ನು ಪರಿಚಯ ಮಾಡಿಕೊಳ್ಳಬೇಕಿದೆ" ಎಂದು ಗಾಗಿನ್ ಹೇಳಿದ.

"ಆಯ್ತು. ಆದರೆ ಅವನಿಗೆ ಅಬಿಸಿಂತ್‌ನ ಹೆಚ್ಚಾಗಿ ಕುಡಿಸಬೇಡ. ಅವನಿಗೆ ಅಭ್ಯಾಸ ಇಲ್ಲ."

"ವಿನ್ಸೆಂಟ್ ನಿನ್ನ ಆ ತಮ್ಮ ಎಲ್ಲಾ ಸರಿ. ಆದರೆ ಯುವ ಕಲಾವಿದರನ್ನು ಪರಿಚಯಿಸಲು ಇನ್ನೂ ಸ್ವಲ್ಪ ಹೆದರ್ತಾನೆ. ಆದರೆ ವಾಲದೋಂ ಮುಂದೆ ಏನೂ ನಡೆಯೊಲ್ಲ."

"ಹಾಗೇನಿಲ್ಲ. ಬಾಲಕನಿಯಲ್ಲಿ ಸಿಸ್ಲಿ, ಮಾನೆಟ್, ಮೋನೆಟ್, ಪಿಸ್ಸಾರೋ ಮೊದಲಾದವರ ಚಿತ್ರಗಳು ಪ್ರದರ್ಶನಕ್ಕೆ ಇವೆಯಲ್ಲ."

"ನಿಜ. ಆದರೆ ಸ್ಯುರಾತ್, ಗಾಗಿನ್, ಸೆಝಾನ್, ತುಲೋಸ್ ಲಾಟ್ರೆಕ್ ಮೊದಲಾದವರದೆಲ್ಲ ಎಲ್ಲಿದೆ? ಬೇರೆಯವರೆಲ್ಲ ಮುದುಕರಾಗ್ತಿದ್ದಾರೆ. ಕಾಲ ಸರಿದು ಹೋಗ್ತಿದೆ."

"ಓಹ್, ಹಾಗಾದರೆ ನಿನಗೆ ತುಲೋಸ್ ಲಾಟ್ರೆಕ್‌ನ ಪರಿಚಯ ಇದೆಯೇನು?"

"ಓಹ್ ಗೊತ್ತಿಲ್ದೆ ಏನು? ಯಾರಿಗೆ ತಾನೇ ಅವನು ಗೊತ್ತಿಲ್ಲ? ಬಹಳ ಒಳ್ಳೆ ಪೈಂಟರ್. ಆದರೆ ಒಂಥರಾ ವಿಚಿತ್ರ! ತಾನು ಪರಿಪೂರ್ಣ ಮನುಷ್ಯನಾಗಿಲ್ಲದಿರುವುದರಿಂದ ಐದು ಸಾವಿರ ಹೆಣ್ಣುಮಕ್ಕಳ ಜೊತೆಗೆ ಮಲಗಬೇಕಾಗುತ್ತೆ ಅಂತ ಸಮರ್ಥಿಸಿಕೊಳ್ಳುತ್ತಾನೆ. ಪ್ರತಿದಿನಾ ಬೆಳಿಗ್ಗೆ ಎದ್ದಾಗ ಕಾಲಿಲ್ಲದ ಏನೋ ಒಂದು ಬಗೆಯ ಕೀಳರಿಮೆಯಿಂದ ಭಯಂಕರ ಯಾತನೆ ಅನುಭವಿಸುತ್ತಾನೆ. ಈ ಕೀಳರಿಮೆಯನ್ನು ಮರೆಯುವುದಕ್ಕಾಗಿ ಪ್ರತಿರಾತ್ರಿ ಹೆಣ್ಣು, ಹೆಂಡಗಳಲ್ಲಿ ಮುಳುಗಿ ಬಿಡುತ್ತಾನೆ. ಆದರೆ ಬೆಳಗೆದ್ದ ಕೂಡಲೇ ಮತ್ತೆ ಕೀಳರಿಮೆಯ ಭಾವ ಮರುಕಳಿಸುತ್ತದೆ. ಅವನ ಈ ವಿಚಿತ್ರ ಸ್ವಭಾವ, ನರಳಿಕೆ ಇಲ್ಲದೆ ಇದ್ದಿದರೆ ನಮ್ಮ ಕಾಲದ ಮಹಾನ್ ಕಲಾವಿದನಾಗಿ ಬಿಡುತ್ತಿದ್ದ. ಇಂಥಲ್ಲೇ ಸಾವು ತಿರುವು ಪಡೆಯುವುದು. ನನ್ನ ಸ್ಟುಡಿಯೋ ನಾಲ್ಕನೇ ಮಹಡಿಯಲ್ಲಿದೆ. ಅಲ್ಲಿ ಮೆಟ್ಟಿಲಿದೆ. ಬೋರ್ಡ್ ಮುರಿದು ಹೋಗಿದೆ."

ಗಾಗಿನ್ ಸ್ವಲ್ಪ ಮೊದಲೇ ಎದ್ದು ಹೋದ. ಅದೊಂದು ಅಟ್ಟದ ಕೋಣೆಯಾಗಿತ್ತು. ವಸ್ತುಗಳೆಲ್ಲ ಚೆಲ್ಲಾಪಿಲ್ಲಿಯಾಗಿ ಹರಡಿಕೊಂಡಿದ್ದವು. ಕುರ್ಚಿ, ಮೇಜು, ಈಸಲ್, ಮಂಚಗಳಿಂದ ತುಂಬಿತ್ತು. ಬಾಗಿಲ ಬಳಿಯ ಗೋಡೆಯ ಗೂಡಿನಲ್ಲಿ ಅಶ್ಲೀಲ ಚಿತ್ರಗಳ ರಾಶಿ ಇರುವುದನ್ನು ವಿನ್ಸೆಂಟ್ ಗಮನಿಸಿದ.

"ಇಂಥ ಚಿತ್ರಗಳಿಂದ, ಪ್ರೀತಿಯ ಬಗ್ಗೆ ನೀನು ಉದಾತ್ತವಾಗಿ ಯೋಚಿಸಲಾರೆ ಅಂದ್ಕೋತೀನಿ!"

"ಎಲ್ಲಿ ಕೂತ್ಕೋತೀಯ? ಹಾಸಿಗೆ ಮೇಲ್ಲೋ? ಕುರ್ಚಿ ಮೇಲ್ಲೋ? ಅಲ್ಲಿ ಟೇಬಲ್ ಮೇಲೆ ಒಂದಿಷ್ಟು ತಂಬಾಕು ಇದೆ. ನಿನ್ನ ಪೈಪ್‌ಗೆ ಸಾಕಾಗುತ್ತೆ..... ಹೂಂ! ನನಗೆ ಹೆಂಗಸರನ್ನು ಕಂಡರೆ ತುಂಬ ಇಷ್ಟ. ಆದರೆ ಅವರು ದುಂಡಗೆ ಇರಬೇಕು; ಕೆಟ್ಟವರಾಗಿರಬೇಕು. ಅವರು ಬುದ್ಧಿವಂತರಾಗಿದ್ದರೆ ನನಗೆ ಹಿಡಿಸೊಲ್ಲ. ನನಗೆ ದಪ್ಪಕ್ಕೆ ಇರುವ ಯಾರಾದರೂ ಮಿಸ್ಟ್ರೆಸ್ ಆಗಿ ಸಿಗಬೇಕೂಂತ ಆಸೆ ಪಡ್ತೀನಿ. ಆದರೆ ಇಲ್ಲಿವರೆಗೆ ಯಾರೊಬ್ಬರೂ ಅಂಥವರು ಸಿಗಲಿಲ್ಲ. ನಾನೊಬ್ಬ ಮೂರ್ಖ ಅನ್ನೋ ಹಾಗೆ, ಯಾವಾಗಲೂ ಅವರು ಬಸಿರಾಗಿರುತ್ತಿದ್ದರು. ಹೋದ ತಿಂಗಳು ಒಂದು ಕತೆ ಪ್ರಕಟವಾಗಿತ್ತು. ಯಾರೋ ಯುವ ಲೇಖಕ ಮೋಪಸಾಂ ಅಂತ, ಓದಿರುವೆಯೇನು? ಅವನು ಝೋಲಾನ ಆಶ್ರಿತ. ಅವನು ದಪ್ಪನೆಯ ಹೆಂಗಸರನ್ನು ತುಂಬಾ ಇಷ್ಟ ಪಡ್ತಾನೆ. ಕ್ರಿಸ್‌ಮಸ್‌ದಿನ ಇಬ್ಬರಿಗೆ ಊಟದ ವ್ಯವಸ್ಥೆ ಮಾಡಿ, ಜೊತೆಗಾರನನ್ನು ಹುಡುಕಲೆಂದು ಹೊರಗೆ ಹೋಗುತ್ತಾನೆ. ಆಗ ಇದ್ದಕ್ಕಿದ್ದಂತೆ ಒಬ್ಬ ಹೆಂಗಸು ಕಣ್ಣಿಗೆ ಬೀಳುತ್ತಾಳೆ. ಅವನು ಬಯಸಿದ್ದ ರೀತಿಯಲ್ಲಿ ಇದ್ದುದರಿಂದ ಅವಳನ್ನೇ ಕರೆತರುತ್ತಾನೆ. ಸರಿಯಾಗಿ ಊಟ ಮಾಡುವ ಹೊತ್ತಿಗೆ ಗಂಡು ಮಗುವೊಂದು ಭೂಮಿಗೆ ಬೀಳುತ್ತೆ!"

"ಗಾಗಿನ್, ಇದಕ್ಕೂ ಪ್ರೀತಿಗೂ ಯಾವುದೇ ಸಂಬಂಧ ಇಲ್ಲ."

ಗಾಗಿನ್ ಹಾಸಿಗೆ ಮೇಲೆ ಮೈಚಾಚಿ, ತೋಳನ್ನು ದಿಂಬಾಗಿಸಿಕೊಂಡು ಹೊಗೆಯ ಮೋಡಗಳನ್ನು ಸೃಷ್ಟಿಸುತ್ತಾ, ಅದನ್ನು ಬಣ್ಣವಿಲ್ಲದ ದೂಲಗಳತ್ತ ಉಗುಳುತ್ತಿದ್ದ.

"ನಾನು ಹೇಳಿದ್ದರ ಅರ್ಥ, ಸೌಂದರ್ಯಕ್ಕೆ ನಾನು ಸ್ಪಂದಿಸುವುದಿಲ್ಲ ಅಂತ ಅಲ್ಲ ವಿನ್ಸೆಂಟ್! ಆದರೆ ನನ್ನ ಇಂದ್ರಿಯಗಳ ಗಮನಕ್ಕೆ ಸರಿಯಾಗಿ ಬರ್ತಿಲ್ಲ ಅಷ್ಟೆ! ನನ್ನ ದೃಷ್ಟೀಲಿ ಪ್ರೀತಿ ನೀನು ತಿಳಿದ ಹಾಗಿಲ್ಲ. ಪ್ರೀತಿಸ್ತೇನೆ ಅಂತ ಹೇಳಿದರೆ ಸಾಕು, ನನ್ನ ಹಲ್ಲುಗಳೆಲ್ಲ ಮುರಿದು ಹೋಗುತ್ತವೆ. ಆದರೆ ಅದರ ಬಗ್ಗೆ ನಾನೇನು ಅಷ್ಟಾಗಿ ತಲೆಕೆಡಿಸಿಕೊಳ್ಳೊಲ್ಲ. ಜೀಸಸ್‌ನಂತೆ ನಾನು ಹೇಳೋದೂ ಇಷ್ಟೆ! ಶರೀರ ಶರೀರಾನೇ, ಆತ್ಮ ಆತ್ಮಾನೇ!...... ಸಾಕು. ಒಂದಿಷ್ಟು ದುಡ್ಡು ನನ್ನ ದೇಹವನ್ನು ತಣಿಸುತ್ತೆ, ನನ್ನ ಆತ್ಮವನ್ನು ಪ್ರಶಾಂತವಾಗಿ ಇರಲು ಬಿಡುತ್ತೆ."

"ನೀನು ವಿಷಯವನ್ನು ಗಂಭೀರವಾಗಿ ತಗೊಂಡೇ ಇಲ್ಲಾಂತ ಅನ್ಸತ್ತೆ."

"ಇಲ್ಲ. ನನ್ನ ಜೊತೆ ಮಲಗಲು ಹೆಣ್ಣು ಸಿಕ್ಕಿದರೆ ಸಾಕು. ಅವಳು ಸಂತೋಷಪಟ್ಟರೆ, ನಾನು ಅವಳಿಗೆ ಎರಡರಷ್ಟು, ಸಂತೋಷ ಪಡ್ತೇನೆ. ಹೊರಗಿನಿಂದ ಸಿಗುವ ದೈಹಿಕ ಸುಖವಷ್ಟೇ ಸಾಕು ನನಗೆ. ಭಾವನಾತ್ಮಕವಾಗಿ ನಾನೆಂದೂ ತೊಡಗಿಸಿಕೊಳ್ಳುವುದಿಲ್ಲ. ಅದೆಲ್ಲವನ್ನೂ ನನ್ನ ಪೈಂಟಿಂಗ್ಸ್‌ಗೆ ಉಳಿಸಿಕೊಳ್ಳುತ್ತೇನೆ."

"ಇತ್ತೀಚೆಗೆ ನಾನೂ ಕೂಡಾ ಅದೇ ನಿಲುವಿಗೆ ಬರುತ್ತಿದ್ದೇನೆ..... ಬೇಡ. ಇನ್ನು ಸಾಕು. ಅಬಿಸಿಂತ್ ಅನ್ನು ಇನ್ನು ಸಹಿಸಿಕೊಳ್ಳೋಕೆ ಸಾಧ್ಯ ಇಲ್ಲ. ಈಗಾಗಲೇ ತುಂಬಾ

ಕುಡಿದಾಗಿದೆ.... ಹೂಂ ಮುಂದುವರೆಸು. ನನ್ನ ತಮ್ಮ ನಿನ್ನ ಬಗ್ಗೆ ತುಂಬಾ ಹೇಳ್ತಾನೆ. ನಿನ್ನ 'ಸ್ಟಡೀಸ್'ನ ನೋಡಬಹುದಾ?"

ಗಾಗಿನ್ ದಿಢೀರನೆ ಎದ್ದು ಕುಳಿತ.

"ಸಾಧ್ಯ ಇಲ್ಲ. ಅವೆಲ್ಲ ನನ್ನ ಖಾಸಗಿ ಸಂಗ್ರಹಕ್ಕೆ. ಆದರೆ ನನ್ನ ಪೈಂಟಿಂಗ್ಸ್ ತೋರಿಸಲು ಅಭ್ಯಂತರವಿಲ್ಲ. ಈ ಬೆಳಕಲ್ಲಿ ಸರಿಯಾಗಿ ನೋಡೋಕೆ ಆಗೋದಿಲ್ಲ. ಆದರೂ ನೀನು ನೋಡಬೇಕೆಂದರೆ, ಆಗಬಹುದು."

ಗಾಗಿನ್ ಮೊಣಕಾಲೂರಿ ಕುಳಿತು, ಮಂಚದ ಕೆಳಗೆ ಇಟ್ಟಿದ್ದ ಕ್ಯಾನ್‌ವಾಸ್‌ಗಳ ರಾಶಿ ಹೊರತೆಗೆದು, ಮೇಜಿನ ಮೇಲಿರಿಸಿದ್ದ ಅಬಿಸಿಂತ್ ಬಾಟಲ್ ಮುಂದುಗಡೆಗೆ ಕ್ಯಾನ್‌ವಾಸನ್ನು ಬಿಡಿಸಿ ಹಿಡಿದ. ಗಾಗಿನ್‌ನ ಪೈಂಟಿಂಗ್ಸ್‌ನಲ್ಲಿ ವಿನ್ಸೆಂಟ್ ಏನೋ ವಿಶೇಷವಾದದ್ದನ್ನು ನಿರೀಕ್ಷಿಸಿದ್ದ. ಆದರೆ ಅವನಿಗೆ ಆಶ್ಚರ್ಯವಾಯಿತು. ಅಸ್ತವ್ಯಸ್ತವಾದ ಬಣ್ಣಗಳಲ್ಲಿ ಚಿತ್ರಗಳು ಅದ್ದಿದಂತಿದ್ದವು. ಮರಗಳು ಅನ್ನೋದನ್ನು, ಯಾವ ಸಸ್ಯವಿಜ್ಞಾನಿಗೂ ಗುರುತಿಸಲು ಆಗುತ್ತಿರಲಿಲ್ಲ. ಪ್ರಾಣಿಗಳೋ, ಕುವಿಯರ್‌ಗೆ ಇದ್ದುವೆಂಬುದನ್ನು ಊಹಿಸಲೂ ಅಸಾಧ್ಯವಾಗಿದ್ದವು. ಗಾಗಿನ್ ಕೈಯಲ್ಲಿ ಮಾತ್ರವೇ ಸೃಷ್ಟಿಸಲು ಸಾಧ್ಯವಾಗುವ ಮನುಷ್ಯರು ಮಾತ್ರ ಕಾಣಿಸಿದರು. ಅಗ್ನಿ ಪರ್ವತಗಳಿಂದ ಹೊಮ್ಮಲು ಮಾತ್ರ ಸಾಧ್ಯವಾಗಿದ್ದ ಸಮುದ್ರ, ಯಾವ ದೇವರಿಗೂ ವಾಸಮಾಡಲು ಸಾಧ್ಯವಾಗದ ಆಕಾಶ, ವಿಚಿತ್ರವೂ, ವಿಕಾರವೂ, ಆದ ಸ್ಥಳೀಯರು! ಅವನ ಕಲ್ಪನೆ, ಕನಸಿನ ಚಿತ್ರಗಳು ಕಡುಗೆಂಪು ಮತ್ತು ನೀಲಿಬಣ್ಣಗಳಿಂದ ಮಾಡಲಾಗಿದ್ದವು. ಅಲ್ಲಿನ ಪ್ರಾಣಿಗಳು, ಹೂಗಳು ಅಲಂಕಾರಿಕ ದೃಶ್ಯಗಳಲ್ಲಿ, ಸೂರ್ಯನ ಬೆಳಕು, ಶಾಖಗಳಿಂದ ಒಡೆದೆದ್ದು ಕಾಣುತ್ತಿದ್ದವು.

"ನೀನು ಲಾಟ್ರೆಕ್‌ನ ಹಾಗೆಯೇ" ವಿನ್ಸೆಂಟ್ ಗೊಣಗಿದ. ದ್ವೇಷಿಸುತ್ತೀರಿ; ಶಕ್ತಿ ಮೀರಿ ದ್ವೇಷಿಸುತ್ತೀರಿ."

ಗಾಗಿನ್ ನಕ್ಕ. "ನನ್ನ ಪೈಂಟಿಂಗ್ ಬಗ್ಗೆ ನಿನಗೆ ಹೇಗನ್ನಸ್ತೆ?"

"ಹೇಳಬೇಕೂಂದ್ರೆ...... ಗೊತ್ತಾಗ್ತಿಲ್ಲ. ಸ್ವಲ್ಪ ಸಮಯ ಬೇಕಾಗುತ್ತೆ. ಈಗ ಹೋಗ್ತರ್ತೀನಿ. ಮತ್ತೊಮ್ಮೆ ನೋಡಿದ ಮೇಲೆ ಹೇಳ್ತೀನಿ."

"ನಿನಗೆ ಬರಬೇಕೂಂತ ಅನಿಸಿದಾಗೆಲ್ಲ ಬರ್ತಿರು. ಇಡೀ ಪ್ಯಾರಿಸ್‌ನಲ್ಲಿ ನಾನು ಮಾಡೋ ಹಾಗೆ, ಪೈಂಟಿಂಗ್ ಮಾಡೋ ಒಬ್ಬನೇ ಒಬ್ಬ ಇದ್ದಾನೆ. ಅವನ ಹೆಸರು ಸ್ಯುರಾತ್. ಅವನೂ ಕೂಡಾ ಒಂದು ರೀತಿಯಲ್ಲಿ ಸಂಪ್ರದಾಯವಾದಿ; ಹಳೆ ಕಾಲದವನು. ಇನ್ನು ಪ್ಯಾರಿಸ್‌ನಲ್ಲಿ ಉಳಿದವರೆಲ್ಲ ಬಹಳ ನಾಗರಿಕರು."

"ಜಾರ್ಜ್ ಸ್ಯುರಾತ್? ವಿನ್ಸೆಂಟ್ ವಿಚಾರಿಸಿದ.

"ಬಹುಶಃ ಅವನ ಹೆಸರೇ ಕೇಳಿಲ್ಲ."

"ಕೇಳಿರೋಕೆ ಸಾಧ್ಯವೂ ಇಲ್ಲ. ಯಾಕೇಂದ್ರೆ ಅವನ ಪೈಂಟಿಂಗ್‌ನ ಪ್ರದರ್ಶನಕ್ಕೆ ಇಡುವುದಕ್ಕೆ ಯಾವ ಆರ್ಟ್ ಡೀಲರೂ ಮುಂದೆ ಬಂದಿಲ್ಲ. ಆದರೂ ಅವನೊಬ್ಬ ದೊಡ್ಡ ಕಲಾವಿದ."

"ಅವನನ್ನು ಭೇಟಿಯಾಗಬೇಕಲ್ಲ!"

"ಒಂದು ದಿವಸ ಯಾವತ್ತಾದರೂ ಕರ್ಕ್ಕೊಂಡು ಹೋಗ್ತೀವಿ.... ಊಟಕ್ಕೆ ಹೋಗೋಣವೇ?.... ಊಟ ಆದ್ಮೇಲೆ ಹಾಗೇ ಬ್ರುವಾಂತ್ ತನಕ ಹೋಗಿ ಬರೋಣ. ನನ್ನ ಹತ್ತಿರ ಎರಡು ಫ್ರ್ಯಾಂಕ್‌ಗಳು ಇವೆ. ನಿನ್ನ ಹತ್ತಿರ ದುಡ್ಡೇನಾದರೂ ಇದೆಯೇನು? ಈ ಬಾಟಲ್ ಇಲ್ಲಿಂದ ಹಿಡ್ಕೊಂಡು ಹೋಗೋಣ. ನೀನು ಮೊದಲು ಇಳಿ. ನಿನಗಾಗಿ ಈ ದೀಪ ಹಿಡ್ಕೊಂಡಿರ್ತೀನಿ. ಇಲ್ಲಾಂದ್ರೆ ತಲೆ ಹೊಡ್ಕೋಬೇಕಾಗುತ್ತೆ."

–೫–

ಬೆಳಗಿನ ಜಾವ ಎರಡು ಗಂಟೆಯಾಗಿತ್ತು! ಇಬ್ಬರೂ ಸ್ಯುರಾತ್‌ನ ಮನೆ ತಲುಪುವಷ್ಟು ಹೊತ್ತಿಗೆ.

"ಇಷ್ಟು ಹೊತ್ತಲ್ಲಿ ಅವನನ್ನು ಎಬ್ಬಿಸುವುದಕ್ಕೆ ನಿನಗೆ ಹೆದರಿಕೆ ಅನಿಸೊಲ್ಲವೆ?"

"ಹಾಗೇನಿಲ್ಲ! ಅವನು ಇಡೀ ರಾತ್ರಿ ಎದ್ದಿರ್ತಾನೆ. ಅವನು ಬಹುಶಃ ಮಲಗುವುದೇ ಇಲ್ಲ. ಇಲ್ಲಿದೆ ನೋಡು ಅವನ ಮನೆ. ಈ ಮನೆ ಅವರಮ್ಮನದು. ಒಂದು ಸಲ ಅವನಮ್ಮ ನನಗೆ ಹೇಳಿದ್ದಳು,– 'ಪಾಲ್, ನನ್ನ ಮಗ ಜಾರ್ಜ್ ಪೈಂಟಿಂಗ್ ಮಾಡ್ಬೇಕೂಂತ ಆಸೆ ಪಡ್ತಾನೆ. ನಾನು ಮಾಡಲಿ ಬಿಡು ಅಂತ ಅಂದ್ಕೊಂಡೆ. ನನ್ನ ಹತ್ತಿರ ಸಾಕಷ್ಟು ಹಣ ಇದೆ. ಇಬ್ಬರಿಗೆ ಎಷ್ಟು ಬೇಕು. ಅವನಿಗೆ ಸಂತೋಷ ಆದರೆ ಸಾಕು ಅಷ್ಟೆ!' ಅವನು ಅವಳ ಆದರ್ಶ ಪುತ್ರ, ಒಂದು ಕೆಟ್ಟ ಅಭ್ಯಾಸ ಇಲ್ಲ. ಕುಡಿಯೋದಿಲ್ಲ. ಸಿಗರೇಟ್ ಸೇದೊಲ್ಲ, ರಾತ್ರಿ ಹೊತ್ತು ಅಲೆಯೋಕೆ ಹೋಗೊಲ್ಲ. ಹೆಂಗಸರ ಹಿಂದೆ ಬೀಳೊಲ್ಲ. ದುಡ್ಡೂ ಅಷ್ಟೆ! ಪೈಂಟಿಂಗ್‌ಗೆ ಬೇಕಾದ ವಸ್ತುಗಳನ್ನು ಬಿಟ್ಟರೆ, ಬೇರೆ ಯಾವುದಕ್ಕೂ ಖರ್ಚು ಮಾಡೊಲ್ಲ. ಅವನಿಗೆ ಇರುವ ಒಂದು ಕೆಟ್ಟ ಅಭ್ಯಾಸ ಅಂದ್ರೆ ಪೈಂಟಿಂಗ್! ಅವನಿಗೆ ಒಬ್ಬಳು ಮಿಸ್ಟ್ರೆಸ್ ಇದ್ದಾಳೇಂತ ಕೇಳಿದ್ದೀನಿ. ಇಲ್ಲೆ ಎಲ್ಲೋ ಹತ್ತಿರದಲ್ಲಿ ಅವಳೂ ಅವಳ ಮಗ ವಾಸ ಮಾಡ್ತಿದ್ದಾರಂತೆ. ಆದರೆ ಅವನೆಂದೂ ಅದನ್ನು ಬಾಯಿಬಿಟ್ಟು ಹೇಳಿಲ್ಲ."

"ಮನೆಯೆಲ್ಲ ಕತ್ತಲಿದ್ದ ಹಾಗೆ ಇದೆ. ಮನೆಯವರು ಯಾರಿಗೂ ತೊಂದರೆ ಕೊಡದ ಹಾಗೆ ಒಳಗೆ ಹೋಗೋದು ಹೇಗೆ?"

"ಅವನದು ಮೇಲೆ, ಅಟ್ಟದ ಕೋಣೆ ಇದೆ. ಆ ಕಡೆಯ ಕಿಟಕಿಯಿಂದ ಬೆಳಕು ಕಾಣುತ್ತೆ. ನಾವು ಒಂದು ಸಣ್ಣ ಕಲ್ಲನ್ನು ಕಿಟಕಿಯೊಳಗಿಂದ ಎಸೆಯೋಣ..... ನೀನು ಎಸೆಯೋದು ಬೇಡ. ನಾನೇ ಎಸೀತೇನೆ. ಸರಿಯಾಗಿ ಗುರಿ ಇಟ್ಟು ಕಲ್ಲು ಎಸೀದೆ ಇದ್ರೆ ಕೆಳಗಡೆ ಕಿಟಕಿ ಒಡೆದು ಅವನಮ್ಮ ಎದ್ದು ಬಿಡ್ತಾಳೆ."

ಜಾರ್ಜ್ ಸ್ಯುರಾತ್ ಕೆಳಗೆ ಬಂದು ಇವರನ್ನು ಸ್ವಾಗತಿಸಿದ. ಬೆರಳನ್ನು ತುಟಿ ಮೇಲಿರಿಸಿ ಸದ್ದು ಮಾಡಬೇಡವೆಂದು ಸೂಚಿಸಿ, ಇಬ್ಬರನ್ನೂ ಮೇಲೆ ಕರೆದುಕೊಂಡು ಹೋದ. ಒಳಗೆ ಹೋದ ಕೂಡಲೇ ಅಟ್ಟದ ಕೋಣೆಯ ಬಾಗಿಲನ್ನು ಮುಚ್ಚಿದ.

"ಜಾರ್ಜ್, ವಿನ್ಸೆಂಟ್ ವಾನ್‌ಗೋನನ್ನು ಪರಿಚಯಿಸಲು ಕರ್‍ಕೊಂಡು ಬಂದೆ. ಥಿಯೋನ ಅಣ್ಣ ಇವನು. ನಿಜವಾದ ಡಚ್‌ನಂತೆ ಪೈಂಟ್ ಮಾಡುತ್ತಾನೆ. ಅದರ ಜೊತೆಗೆ ಒಳ್ಳೆಯ ವ್ಯಕ್ತಿ."

ಸ್ಯುರಾತ್‌ನ ಅಟ್ಟದ ಕೋಣೆ ಬಹಳ ವಿಶಾಲವಾಗಿತ್ತು. ಮನೆಯಷ್ಟೇ ಅಗಲವಾಗಿತ್ತು. ಬೃಹತ್ತಾದ ಭಿತ್ತಿಗಳು ಗೋಡೆಯ ಮೇಲಿದ್ದವು. ಅವುಗಳ ಮುಂದುಗಡೆ ಏಣಿಯಿತ್ತು. ಎತ್ತರದ ಚೌಕಾಕಾರದ ಮೇಜೊಂದು ಗ್ಯಾಸ್ ದೀಪದ ಕೆಳಗೆ ಇತ್ತು. ಅದರ ಮೇಲೆ ಇನ್ನೂ ಹಸಿಯಾಗಿದ್ದ ಕ್ಯಾನ್‌ವಾಸನ್ನು ಹಾಸಿತ್ತು.

"ಮಿಸ್ಟರ್ ವಾನ್‌ಗೋ ನಿನ್ನನ್ನು ನೋಡಿ ತುಂಬ ಸಂತೋಷ ಆಯ್ತು. ಒಂದೆರಡು ನಿಮಿಷ ಕ್ಷಮಿಸಬೇಕು. ಬಣ್ಣಗಳು ಒಣಗಿ ಹೋಗೋದಕ್ಕೆ ಮೊದಲು ಒಂದಿಷ್ಟು ಕೆಲಸ ಮುಗಿಸಿ ಬಂದು ಬಿಡ್ತೀನಿ."

ಅವನು ಎತ್ತರದ ಸ್ಟೂಲೊಂದರ ಮೇಲೆ ನಿಂತು, ಕ್ಯಾನ್‌ವಾಸ್ ಮೇಲೆ ಕೈಯಾಡಿಸತೊಡಗಿದ. ಗ್ಯಾಸ್ ದೀಪ ಒಂದೇ ಸಮನೆ ಉರಿಯುತ್ತಿತ್ತು. ಟೇಬಲ್ ಮೇಲೆ ಪುಟ್ಟ ಪುಟ್ಟ ಬಣ್ಣದ ಕುಡಿಕೆಗಳು ಸಾಲಾಗಿದ್ದವು. ಸ್ಯುರಾತ್ ಅತಿ ಸಣ್ಣದಾದ ಬ್ರಷ್‌ನ್ ತುದಿಯನ್ನು ಬಣ್ಣದಲ್ಲಿ ಅದ್ದಿ, ಕ್ಯಾನ್‌ವಾಸ್ ಮೇಲೆ ತೀರಾತೀರಾ ಚಿಕ್ಕದಾದ ಚುಕ್ಕಿಗಳನ್ನು ಅತ್ಯಂತ ನಿಖರತೆಯೊಂದಿಗೆ ಲೆಕ್ಕಾಚಾರದ ಪ್ರಕಾರ ಇಡತೊಡಗಿದ. ಯಾವುದೇ ಭಾವಾವೇಶವಿಲ್ಲದೆ ಗಂಭೀರ ಮೌನದೊಂದಿಗೆ ಕೆಲಸದಲ್ಲಿ ನಿರತನಾಗಿದ್ದ. ಒಂದು ಯಂತ್ರದ ರೀತಿಯಲ್ಲಿ ನಿರ್ಲಿಪ್ತತೆಯೊಂದಿಗೆ ಕಾರ್ಯಮಗ್ನನಾದಂತೆ ಕಾಣುತ್ತಿದ್ದ. ಡಾಟ್, ಡಾಟ್, ಡಾಟ್...... ಒಮ್ಮೆ ಕುಡಿಕೆಯ ಬಣ್ಣದಲ್ಲಿ ಅದ್ದಿಯೂ ಅದ್ದದಂತೆ ಅದ್ದಿ ಕ್ಯಾನ್‌ವಾಸ್ ಮೇಲೆ ಚುಕ್ಕಿಗಳನ್ನಿರಿಸುತ್ತಾ ಹೋದ. ಡಾಟ್, ಡಾಟ್, ಡಾಟ್.... ಒಂದಲ್ಲ, ಎರಡಲ್ಲ...... ಹತ್ತು, ನೂರು, ಸಾವಿರ...... ಲೆಕ್ಕವಿಲ್ಲದಷ್ಟು ಚುಕ್ಕಿಗಳು!

ವಿನ್ಸೆಂಟ್ ಬಾಯಿಬಿಟ್ಟುಕೊಂಡು ಗಮನಿಸ ತೊಡಗಿದ. ಕಡೆಗೆ ಸ್ಯುರಾತ್ ಸ್ಟೂಲ್ ಮೇಲಿಂದಲೇ ಇವನ ಕಡೆ ತಿರುಗಿ ನೋಡಿದ.

"ಹಾಂ! ಈಗ ಪೂರ್ತಿಯಾಯ್ತು ನೋಡು!"

"ವಿನ್ಸೆಂಟ್‌ಗೆ ಅದನ್ನು ತೋರಿಸಿಕೊಡ್ತೀಯ ಜಾರ್ಜ್? ಅವನು ಕುರಿ, ಮೇಕೆ, ಹಸುಗಳನ್ನು ಪೈಂಟ್ ಮಾಡ್ಕೊಳ್ತಾ ಬಂದವನು. ಹೋದ ವಾರದ ತನಕ, ಮಾಡರ್ನ್ ಆರ್ಟ್ ಅಂಥಾ ಒಂದಿದೆ' ಅನ್ನೋ ವಿಷಯಾನೇ ಗೊತ್ತಿರಲಿಲ್ಲ."

"ಮಿಸ್ಟರ್ ವಿನ್ಸೆಂಟ್ ವಾನ್‌ಗೋ, ಈ ಸ್ಟೂಲ್ ಮೇಲೆ ಕೂತ್ಕೊಳ್ಳಿ."

ವಿನ್ಸೆಂಟ್ ಸ್ಟೂಲ್ ಹತ್ತಿ ಕುಳಿತು, ಮುಂದೆ ಹರಡಿದ್ದ ಕ್ಯಾನ್‌ವಾಸನ್ನು ನೋಡಿದ. ಜೀವನದಲ್ಲಿಆಗಲೀ, ಕಲೆಯಲ್ಲಾಗಲಿ ಎಂದೂ ನೋಡಿರದ ದೃಶ್ಯ ಅದಾಗಿತ್ತು. ಅದು ಗ್ರ್ಯಾಂಡ್ ಜಾತ್ ದ್ವೀಪವಾಗಿತ್ತು. ಅಸಂಖ್ಯ ಬಣ್ಣದ ಬಿಂದುಗಳಿಂದ ರಚಿತವಾದ ಮನುಷ್ಯಾಕಾರಗಳು! ಗಾಥಿಕ್ ಕೆಥೆಡ್ರಲ್‌ನ ಸ್ತಂಭಗಳಂತೆ ಕಾಣುತ್ತಿದ್ದವು. ಹುಲ್ಲು, ನದಿ, ದೋಣಿಗಳು, ಮರಗಳು ಎಲ್ಲವೂ ಅಸ್ಪಷ್ಟವಾಗಿ ತೆಳುಬಣ್ಣದ ಚುಕ್ಕಿಗಳ

ಸಮೂಹದಂತೆ ಕಾಣಿಸಿದವು. ಕ್ಯಾನ್‌ವಾಸ್‌ನಲ್ಲಿ ಪ್ರಕಾಶಮಾನವಾದ ತೆಳುಬಣ್ಣಗಳನ್ನು ಬಳಸಲಾಗಿದ್ದರೂ ಮಾನೆಟ್ ಮತ್ತು ಡೆಗಾಸ್, ಗಾಗಿನ್‌ರು ಬಳಸುವ ಬಣ್ಣಗಳಿಗಿಂತ ತೆಳುವಾಗಿದ್ದವು. ಇಷ್ಟೊಂದು ತೆಳುಬಣ್ಣಗಳನ್ನು ಬಳಸುವ ಸಾಹಸವೇ ಅವರಿಗಿರಲಿಲ್ಲ. ಇಡೀ ದೃಶ್ಯ ಯಾವುದೋ ಅಮೂರ್ತ ಜಗತ್ತಿನ ಮೇಳವಿಕೆ ಸಾಮರಸ್ಯಗಳನ್ನು ಸೂಚಿಸುತ್ತಿತ್ತು. ಅದಕ್ಕೆ ಜೀವವಿದ್ದಿದ್ದರೆ, ಈ ನೈಸರ್ಗಿಕ ಜಗತ್ತಿಗಿಂತ ಬೇರೆಯಾಗಿಯೇ ಇರುತ್ತಿತ್ತು. ಇಡೀ ಪರಿಸರ ಪ್ರಕಾಶಮಾನವಾಗಿ ಕಂಗೊಳಿಸುತ್ತಿತ್ತು. ಆದರೆ ಎಲ್ಲಿಯೂ ಅಣುವಿನಷ್ಟೂ ಪ್ರಾಣವಾಯುವಿರಲಿಲ್ಲ. ಆದರೂ ಚೈತನ್ಯ ಪೂರ್ಣ ಬದುಕಿನ ನಿಶ್ಚಲ ಬದುಕಾಗಿತ್ತು. ಚಲನಶೀಲತೆಯೆಂಬುದು ಸಂಪೂರ್ಣವಾಗಿ ಕಣ್ಮರೆಯಾಗಿತ್ತು.

ಗಾಗಿನ್ ವಿನ್ಸೆಂಟ್‌ನ ಪಕ್ಕದಲ್ಲಿ ನಿಂತು, ಅವನ ಮುಖದ ಮೇಲಿನ ಭಾವನೆಗಳನ್ನು ಗಮನಿಸಿ ನಕ್ಕ.

"ಪರವಾಗಿಲ್ಲ ಬಿಡು. ನೀನೇ ಅಲ್ಲ, ಮೊದಲ ಬಾರಿ ನೋಡಿದವರಿಗೆ ಯಾರಿಗಾದರೂ ನಿನ್ನ ಹಾಗೆಯೇ ಅಚ್ಚರಿ ಎನಿಸುತ್ತದೆ.... ಅದಿರಲಿ. ನೀನು ಇದರ ಬಗ್ಗೆ ಏನು ಹೇಳ್ತೀ?"

ವಿನ್ಸೆಂಟ್ ಕ್ಷಮಾಯಾಚನೆಯ ದನಿಯಲ್ಲಿ ಹೇಳಿದ.

"ಮಿಸ್ಟರ್ ಕ್ಷಮಿಸು. ಈಗೊಂದಷ್ಟು ದಿನಗಳಿಂದ ಏನೇನೋ ವಿಚಿತ್ರವಾದ ಅನುಭವಗಳಾಗುತ್ತಿವೆಯಾದ್ದರಿಂದ ನನಗೊಂದು ರೀತಿ ಗೊಂದಲ ಸ್ಥಿತಿ ಉಂಟಾಗಿದೆ. ಸಮತೋಲನವನ್ನು ಕಳೆದುಕೊಂಡಿದ್ದೇನೆ. ಯಾವುದಕ್ಕೂ ಏನನ್ನೂ ಹೇಳಲಾರದ ಸ್ಥಿತಿಯಲ್ಲಿದ್ದೇನೆ. ಡಚ್‌ಸಂಪ್ರದಾಯದಲ್ಲಿ ನನಗೆ ಅಭ್ಯಾಸವಾಗಿದೆ. ಇಂಪ್ರೆಷನಿಷ್ಟರು ಏನನ್ನು ಅಭಿವ್ಯಕ್ತಿಸಲು ಹೊರಟಿದ್ದಾರೆ ಅನ್ನುವುದು ನನಗಿನ್ನೂ ಸರಿಯಾಗಿ ಅರ್ಥವಾಗಿಲ್ಲ. ಈಗ ನನಗೆ ಅನ್ನಿಸ್ತಿದೆ.... ಇಲ್ಲೀವರೆಗಿನ ನನ್ನ ಎಲ್ಲ ನಂಬಿಕೆಗಳೂ ಬೇಡವಾದದ್ದಾಗಿದೆ ಅಂತ!"

"ನನಗೆ ಅರ್ಥವಾಗುತ್ತೆ" ನಿಧಾನವಾಗಿ ಹೇಳಿದ.

"ನನ್ನ ರೀತಿ, ಪೈಂಟಿಂಗ್ ಕಲೆಯ ಜಗತ್ತಿನಲ್ಲಿಯೇ ಕ್ರಾಂತಿ ಮಾಡಲು ಹೊರಟಿದೆ. ಹಾಗಿರುವಾಗ ಒಂದೇ ಸಲಕ್ಕೆ ಎಲ್ಲವೂ ನಿನಗೆ ಅರ್ಥವಾಗಬೇಕೆಂದು ನಿರೀಕ್ಷಿಸುವುದೂ ಸರಿಯಲ್ಲ. ನೋಡು ಮಿಸ್ಟರ್, ಇಲ್ಲಿವರೆಗೆ ಪೈಂಟಿಂಗ್ ಅನ್ನೋದು ವೈಯಕ್ತಿಕ ಅನುಭವಕ್ಕೆ ಸಂಬಂಧಪಟ್ಟದ್ದಾಗಿತ್ತು. ಆದರೆ ಈಗ ನನಗೆ ಅದನ್ನು ಒಂದು ಅಮೂರ್ತ ಅನುಭವದ ನೆಲೆಗೆ ಕೊಂಡೊಯ್ಯಬೇಕೆನಿಸಿದೆ. ಆದಷ್ಟೂ ನಮ್ಮ ಸಂವೇದನೆಗಳನ್ನು ಸಂಕೀರ್ಣ ಮತ್ತು ಬುದ್ಧಿಯ ಸೂಕ್ಷ್ಮ ನೆಲೆಯಲ್ಲಿರಿಸಬೇಕೆಂದಿದ್ದೇನೆ. ಮನುಷ್ಯ ಸಂವೇದನೆಗಳನ್ನು ಬಣ್ಣ, ಗೆರೆ, ಛಾಯೆಗಳ ಮೂಲಕ ಅಮೂರ್ತ ಸ್ಥಿತಿಗೆ ತಂದಿಡಬೇಕಾಗಿದೆ. ನನ್ನ ಮೇಜಿನ ಈ ಪುಟ್ಟ ಕುಡಿಕೆಗಳನ್ನು ಗಮನಿಸಿದೆಯಾ?"

"ಹೌದು ಅವುಗಳನ್ನು ಗಮನಿಸುತ್ತಲೇ ಇದ್ದೇನೆ."

"ವಾನ್‌ಗೋ, ಆ ಪ್ರತಿಯೊಂದು ಕುಡಿಕೆಯಲ್ಲೂ ಮಾನವ ಸಂವೇದನೆಗಳಿವೆ. ನನ್ನಲ್ಲಿರುವ ಸೂತ್ರದ ಪ್ರಕಾರ ಅವು ಕೆಮಿಸ್ಟ್ ಅಂಗಡಿಗಳಲ್ಲಿ ಮಾರಾಟಕ್ಕೆ ಸಿಗುವಂತೆ

ಮಾಡಬಹುದು. ಪ್ಯಾಲೇಟ್ ಮೇಲೆ ಬಣ್ಣಗಳ ಯಡ್ಡಾದಿಡ್ಡಿ ಮಿಶ್ರಣ ಮಾಡಬೇಕಾದ ಅಗತ್ಯವಿರುವುದಿಲ್ಲ. ಅದೆಲ್ಲಾ ಹಿಂದಿನ ಕಾಲಕ್ಕೆ ಸರಿಯಾಗಿತ್ತು. ಇನ್ನು ಮುಂದೆ ಪೈಂಟರ್ ಕೆಮಿಸ್ಟ್‌ರ ಅಂಗಡಿಗಳಿಗೆ ಹೋಗಿ ಬೆಲೆಕೊಟ್ಟು ಅವುಗಳ ಮುಚ್ಚಳ ತೆಗೆದರೆ ಮುಗೀತು. ಇದು ವಿಜ್ಞಾನ ಯುಗ. ನಾನು ಪೈಂಟಿಂಗ್ ಮೂಲಕ ವಿಜ್ಞಾನವನ್ನು ರಚಿಸುತ್ತೇನೆ. ಪೈಂಟಿಂಗ್ಸ್‌ಗಳಲ್ಲಿ ನಮ್ಮ ವ್ಯಕ್ತಿತ್ವ ಮರೆಯಾಗಬೇಕು. ಮತ್ತು ಪೈಂಟಿಂಗ್ ವಾಸ್ತುವಿಜ್ಞಾನದಂತೆ ನಿಖರತೆ, ಖಚಿತತೆಗಳನ್ನು ಹೊಂದಿರಬೇಕು. ನಾನು ಹೇಳೋದು ಅರ್ಥ ಆಗ್ತಿದೆಯೇ ಮಿಸ್ಟರ್?"

"ಇಲ್ಲ. ನನಗೇನೂ ಅರ್ಥವಾಗ್ತಿಲ್ಲ."

ಗಾಗಿನ್ ವಿನ್ಸೆಂಟನನ್ನು ಯಾಕೆ ನಿನ್ನ ವಿಧಾನ, ನಿನ್ನ ಶೈಲಿ ಅಂತ ಪದೇ ಪದೇ ಹೇಳ್ತೀ. ನೀನು ಹುಟ್ಟುವುದಕ್ಕೆ ಮೊದಲೇ ಪಿಸಾರೋ ಇಂಥ ಪ್ರಯೋಗ ಮಾಡಿದ್ದಾನೆ."

"ಅದು ಸುಳ್ಳು!"

ಸ್ಯುರಾತ್‌ನ ಮುಖ ಕೆಂಪಾಯಿತು. ಸ್ಟೂಲ್ ಮೇಲಿಂದ ಥಟ್ಟನೆ ಎದ್ದ. ಕಿಟಕಿಯ ಬಳಿಗೆ ವೇಗವಾಗಿ ನಡೆದ. ಕಿಟಕಿಯ ಕಂಬಿಗಳನ್ನು ಬಿಗಿಯಾಗಿ ಹಿಡಿದ. ಮತ್ತೆ ಬಿರುಗಾಳಿಯಂತೆ ಹಿಂತಿರುಗಿದ.

"ನನಗಿಂತ ಮೊದಲು ಪಿಸಾರೋ ಈ ವಿಧಾನ ಬಳಸಿದ್ದಾನೇಂತ ಯಾರು ಹೇಳಿದವರು? ಇದು ನನ್ನ ಶೈಲಿ; ನನ್ನ ವಿಧಾನ. ಇಂಥಾದ್ದನ್ನು ಯೋಚಿಸಿದ್ದು, ನಾನೇ ಮೊದಲು. ಚುಕ್ಕಿಗಳ ಶೈಲಿಯನ್ನು ಪಿಸಾರೋ ನನ್ನಿಂದಲೇ ಕಲಿತದ್ದು. ನಾನು ಸಂಪ್ರದಾಯವಾದಿ ಇಟಾಲಿಯನ್ ಕಲಾವಿದರ ಚರಿತ್ರೆಯನ್ನು ಚೆನ್ನಾಗಿ ಓದಿದ್ದೀನಿ..... ತಿಳ್ಕೋ, ನನಗಿಂತ ಮೊದಲು ಯಾರೂ ಈ ರೀತಿ ಯೋಚನೆ ಮಾಡಿರಲಿಲ್ಲ..... ನಿನಗೆ ಎಷ್ಟು ಧೈರ್ಯ...."

ಕೋಪದಿಂದ ತುಟಿ ಕಚ್ಚಿದ. ತನ್ನೊಂದು ಸ್ಕ್ಯಾಫೋಲ್ಡ್ ಬಳಿಗೆ ಹೋದ. ಇಬ್ಬರ ಕಡೆಗೆ ಬೆನ್ನು ಹಾಕಿನಿಂತ.

ಪರಿಸ್ಥಿತಿಯಲ್ಲಿ ಆದ ಬದಲಾವಣೆ ನೋಡಿ ವಿನ್ಸೆಂಟ್‌ಗೆ ಅಚ್ಚರಿ ಎನಿಸಿತು. ಟೇಬಲ್ ಮೇಲೆ ಹರಡಿದ್ದ ಕ್ಯಾನ್‌ವಾಸ್ ಗಮನಿಸುತ್ತಿದ್ದ ಸ್ಯುರಾತ್ ಕೂಡಾ ಒಂದು ಶಿಲ್ಪದಂತೆ ಕಾಣಿಸಿದ. ಅವನಲ್ಲಿ ಪ್ರಯೋಗ ಶಾಲೆಯಲ್ಲಿ ಪ್ರಯೋಗ ನಿರತ ವಿಜ್ಞಾನಿಯಲ್ಲಿ ಇರುವಂತಹ ನಿರ್ಭಾವುಕತೆಯೇ ನೆಲೆಸಿತ್ತು. ಅವನ ಧ್ವನಿಯೂ ಒಬ್ಬ ಬೋಧಕನ ಧ್ವನಿಯಂತೆ ಇತ್ತು. ಅವನ ಕ್ಯಾನ್‌ವಾಸ್‌ನಲ್ಲಿನ ಅಮೂರ್ತತೆ ಅವನೊಳಗಿನ ಅಮೂರ್ತತೆಯ ಪ್ರತಿಫಲನವಾಗಿತ್ತು. ಆದರೆ ಅದೇ ಮನುಷ್ಯ, ತುಟಿ ಕಚ್ಚುತ್ತಾ ಕ್ರೋಧಾವೇಶದಿಂದ ತಲೆಯಾಡಿಸುತ್ತಾ, ನೀಟಾಗಿ ಬಾಚಿಕೊಂಡಿದ್ದ ಗುಂಗುರು ಕೂದಲನ್ನು ಕೆಡಿಸಿಕೊಂಡ.

"ಓಹ್ ಜಾರ್ಜ್, ಸಾಕು ಬಾ" ಎಂದು ವಿನ್ಸೆಂಟ್‌ನ ಕಡೆ ಕಣ್ಣು ಮಿಟುಕಿಸಿ, "ಇದು ನಿನ್ನದೇ ವಿಧಾನ, ಶೈಲಿ ಅಂತ ಎಲ್ಲರಿಗೂ ಗೊತ್ತಿದೆ. ನೀನಿಲ್ಲದೆ ಇದ್ದರೆ ಈ

ಪಾಯಿಂಟಲಿಸಂ (ಚುಕ್ಕಿವಾದ ಅಥವಾ ಬಿಂದುವಾದ) ಬಗ್ಗೆ ಯಾರಿಗೂ ಏನೂ ತಿಳೀತಿರಲಿಲ್ಲ."

ಸಮಾಧಾನಗೊಂಡ ಸ್ಯುರಾತ್ ಟೇಬಲ್ ಬಳಿಗೆ ಬಂದ. ಕೋಪ ನಿಧಾನವಾಗಿ ಕರಗಿ ಹೋಗಿತು.

"ಮಿಸ್ಟರ್ ಸ್ಯುರಾತ್ ಪೈಂಟಿಂಗ್‌ನ ವ್ಯಕ್ತಿಮುಕ್ತ ವಿಜ್ಞಾನವನ್ನಾಗಿ ಮಾಡುವುದಾದರೂ ಹೇಗೆ? ಪೈಂಟಿಂಗ್ ಮಾಡುವಲ್ಲಿ ಕಲಾವಿದನ ವೈಯುಕ್ತಿಕತೆಯೇ ಮುಖ್ಯವಾಗುವುದಲ್ಲವೇ?"

"ಸರಿ, ನಾನು ತೋರಿಸಿಕೊಡ್ತೇನೆ."

ಸ್ಯುರಾತ್ ಕ್ರೇಯಾನ್‌ಗಳಿದ್ದ ಬಾಕ್ಸನ್ನು ತೆಗೆದುಕೊಂಡು ನೆಲದ ಮೇಲಿದ್ದ ಖಾಲಿಯಾದ ಹಲಗೆಯ ಮೇಲೆ ಕುಳಿತ. ಅವರ ತಲೆ ಮೇಲೆ ಸರಿಯಾಗಿ, ಗ್ಯಾಸ್ ದೀಪ ಉರಿಯುತ್ತಿತ್ತು. ರಾತ್ರಿ ನೀರವವಾಗಿತ್ತು. ಅವನಿಗೆ ಒಂದು ಕಡೆ ವಿನ್ಸೆಂಟ್ ಕುಳಿತ ಮತ್ತೊಂದು ಕಡೆ ಗಾಗಿನ್ ಕುಳಿತ. ಸ್ಯುರಾತ್ ಇನ್ನೂ ಭಾವೋದ್ರೇಕ ಸ್ಥಿತಿಯಲ್ಲಿದ್ದ. ಉತ್ಸಾಹದೊಂದಿಗೆ ಹೇಳಿದ.

"ನನ್ನ ಅಭಿಪ್ರಾಯದಲ್ಲಿ ಬಣ್ಣಗಳ ಎಲ್ಲ ಪರಿಣಾಮಗಳನ್ನು ಸೂತ್ರೀಕರಿಸಲು ಸಾಧ್ಯವಿದೆ. ಒಂದು ಸರ್ಕಸ್ ದೃಶ್ಯ ಬರೀಬೇಕೂಂತ ಅನ್ಸತ್ತೇಂತ ಅಂದ್ಕೊ. ಒಂದು ಕಡೆ ಇಲ್ಲಿ, ಬತ್ತಲಗುದುರೆ ಸವಾರ, ಇಲ್ಲಿ ತರಬೇತಿದಾರ, ಇಲ್ಲಿ ಪ್ರೇಕ್ಷಕರು, ಗ್ಯಾಲರಿ ಎಲ್ಲಾ ಇವೆ. ಉಲ್ಲಾಸದ ಪರಿಸವನ್ನು ಸೂಚಿಸಬೇಕಾಗಿದೆ. ಪೈಂಟಿಂಗ್‌ನ ಮೂರು ಮುಖ್ಯ ಅಂಶಗಳು ಯಾವುವು? ಬಣ್ಣ, ಗೆರೆ, ಛಾಯೆ, ಆಯ್ತಲ್ಲ! ನಾನು ಎಲ್ಲ ರೇಖೆಗಳನ್ನು ಅಡ್ಡರೇಖೆಗಳ ಮೇಲೆ ತರುತ್ತೇನೆ. ಪ್ರಕಾಶಮಾನವಾದ ಬಣ್ಣಗಳು ಎದ್ದು ಕಾಣುವಂತೆ ಹೀಗೆ.... ಹೀಗೆ ಮಾಡುತ್ತಾ ಹೋಗುತ್ತೇನೆ..... ಈಗ ಉಲ್ಲಾಸ ಅಮೂರ್ತ ಸ್ಥಿತಿಯಲ್ಲಿ ಧ್ವನಿತವಾಗುತ್ತದೆಯೋ ಇಲ್ಲವೋ?"

"ಅದೇನೋ ಸರಿ.... ಅಮೂರ್ತ ರೂಪದಲ್ಲಿ ಉಲ್ಲಾಸವನ್ನು ಧ್ವನಿಸುತ್ತದೆಯೇ ಹೊರತು, ಉಲ್ಲಾಸವನ್ನು ಸಹಜತೆಯಲ್ಲಿ ಹಿಡಿದಿಡಲಾರದು."

ಕುಳಿತಿದ್ದ ಸ್ಥಿತಿಯಲ್ಲಿಯೇ ಮುಖವೆತ್ತಿದ. ಏನೋ ಯೋಚನೆಯಲ್ಲಿದ್ದಂತೆ ಕಾಣಿಸಿತು. ನೋಡಿದ ವಿನ್ಸೆಂಟ್! ಎಷ್ಟು ಸುಂದರವಾಗಿದ್ದಾನೆ ಎಂದುಕೊಂಡ.

"ಉಲ್ಲಾಸವನ್ನೇ ಅಲ್ಲಿ ತಂದಿರಿಸುವುದು ನನ್ನ ಉದ್ದೇಶವಲ್ಲ. ಉಲ್ಲಾಸದ ಅಂತಃಸ್ಸತ್ವವನ್ನು ತೋರಿಸಿ ಕೊಡಬೇಕೆಂಬುದೇ ನನ್ನ ಪ್ರಯತ್ನ. ಪ್ಲೇಟೋ ಹೆಸರಿನ ಪರಿಚಯವಿದೆಯೇನು?"

"ಇದೆ"

"ಹಾಗಾದರೆ ಕೇಳು. ಪೈಂಟರ್ಸ್ ವಸ್ತುಗಳನ್ನು ಇರುವ ಹಾಗೇ ಪೈಂಟ್ ಮಾಡೋದಲ್ಲ. ಅವುಗಳ ಸತ್ವವನ್ನು ಪೈಂಟಿಂಗ್‌ನಲ್ಲಿ ಮೂಡಿಸಬೇಕು. ಒಬ್ಬ ಕಲಾವಿದ ಕುದುರೆಯನ್ನು ಪೈಂಟ್ ಮಾಡಿದರೆ ವಾಸ್ತವ ಪ್ರಪಂಚದಲ್ಲಿ, ತನ್ನೆದುರಿನ ರಸ್ತೆಗಳಲ್ಲಿ

ಕಾಣಿಸುವ ಯಾವುದೋ ಒಂದು ನಿರ್ದಿಷ್ಟ ಕುದುರೆಯಾಗಬೇಕಿಲ್ಲ. ಯಥಾವತ್ತಾದ ವಸ್ತುರೂಪಗಳನ್ನು ಹಿಡಿದಿಡುವುದಕ್ಕೆ ಕ್ಯಾಮರಾಗಳಿವೆ. ಫೋಟೋಗ್ರಾಫ್ಸ್ ತೆಗೆದುಕೊಂಡರೆ ಆಯ್ತು. ಆದರೆ ನಾವು ಅದನ್ನು ಮೀರಿ ಹೋಗಬೇಕು. ಮಿಸ್ಟರ್ ವಾನ್‌ಗೋ, ನಾವು ಕುದುರೆಯನ್ನು ಪೈಂಟ್ ಮಾಡಿದರೆ, ಅಲ್ಲಿ ನಿಜವಾದ ಅಥವಾ ಯಥಾವತ್ತಾದ ಕುದುರೆಯನ್ನು ಕಾಣಿಸಬೇಕಿಲ್ಲ. ಅಲ್ಲಿ ಬೇಕಾಗುವುದು ಪ್ಲೇಟೋ ಹೇಳುವ ಕುದುರೆತನ. ಮನುಷ್ಯನನ್ನು ಪೈಂಟ್ ಮಾಡಿದರೆ ಅವನ ಮೂಗಿನ ಮೇಲಿನ ಗಂತಿಯೊಂದಿಗೆ ತೋರಿಸಬೇಕಿಲ್ಲ; ಎಲ್ಲ ಮನುಷ್ಯರನ್ನು ಪ್ರತಿನಿಧಿಸುವ ಮನುಷ್ಯತನವನ್ನು ಸತ್ವ, ಸಾರಗಳೊಂದಿಗೆ ಕಾಣಿಸಬೇಕು. ನಾನು ಹೇಳಿದ್ದು ಅರ್ಥವಾಯಿತೇ ಗೆಳೆಯ?"

"ಅರ್ಥವೇನೋ ಆಯಿತು. ಆದರೆ ನಿನ್ನ ತರ್ಕವನ್ನು ನಾನು ಒಪ್ಪುವುದಿಲ್ಲ."

"ಸರಿ ಒಪ್ಪುವುದೂ ಬಿಡುವುದೂ ಆಮೇಲೆ ಆಗಲಿ."

ಸ್ಯುರಾತ್ ಕುಳಿತ ಸ್ಥಿತಿಯಿಂದ ಮೇಲೆದ್ದ. ನೆಲದ ಮೇಲೆ ಬರೆದಿದ್ದ ಸರ್ಕಸ್ ಚಿತ್ರವನ್ನು ಅಳಿಸಿದ.

"ಈಗ ಮಾತು ಬೇಡ. ನಾನು ಗ್ರ್ಯಾಂಡ್ ಜಾತ್ತ್ ದ್ವೀಪದ ದೃಶ್ಯವನ್ನು ಮಾಡ್ತಿದ್ದೇನೆ. ನಾನು ಎಲ್ಲ ಗೆರೆಗಳನ್ನು ಹೀಗೆ ಅಡ್ಡಡ್ಡಲಾಗಿ ಎಳೀತೇನೆ. ಕತ್ತಲು-ಬೆಳಕು, ತಣ್ಣಗೆ-ಬೆಚ್ಚಗೆ – ಇವುಗಳ ನಡುವೆ ಒಂದು ಬಗೆಯ ಸಮಾನತೆಯನ್ನು, ವರ್ಣಛಾಯೆಯಲ್ಲಿ ತರಲು ಪ್ರಯತ್ನಿಸುತ್ತೇನೆ...... ಕಾಣಿಸುತ್ತಿದೆಯೇ?"

"ಮುಂದುವರೆಸು ಜಾರ್ಜ್...... ಮೂರ್ಖ ಪ್ರಶ್ನೆಗಳನ್ನು ಕೇಳ್ತಾ ನಿಲ್ಲಬೇಡ" ಗಾಗಿನ್ ಹೇಳಿದ.

"ಈಗ ನೋಡು ದುಃಖದ ಸ್ಥಿತಿಯನ್ನು ತೋರಿಸಬೇಕು. ಗೆರೆಗಳನ್ನು ಹೀಗೆ ಕೆಳಮುಖವಾಗಿ ಎಳೀಬೇಕು. ಸಪ್ಪೆಯಾದ ಬಣ್ಣವನ್ನು ಬಳಸುವುದರಿಂದ, ದಟ್ಟವಾದ ಬಣ್ಣ ಬಳಸುವುದರಿಂದ ಹೀಗೆ..... ದುಃಖದ ಭಾವ, ಸೃಷ್ಟಿಯಾಯಿತು! ಒಂದು ಮಗು ಕೂಡಾ ಹೀಗೆ ಮಾಡೋಕೆ ಸಾಧ್ಯವಾಗುತ್ತೆ. ಕ್ಯಾನ್‌ವಾಸನಲ್ಲಿ ಸ್ಪೇಸ್‌ಗಳನ್ನು ಗಣಿತ ಸೂತ್ರದ ಪ್ರಕಾರ ಸರಿಯಾಗಿ ತುಂಬಬಹುದು. ಈ ಸೂತ್ರಗಳನ್ನೆಲ್ಲ ಪುಟ್ಟ ಪುಸ್ತಕದಲ್ಲಿ ದಾಖಲಾಗಿಸಿದೆ. ಅದರ ಬಗ್ಗೆ ನಾನು ಸಾಕಷ್ಟು ಕೆಲಸ ಮಾಡಿದ್ದೇನೆ ಈಗಾಗಲೇ. ಏನಿದ್ದರೂ ಪೈಂಟರ್ ಕೆಮಿಸ್ಟ್‌ನ ಅಂಗಡಿಗೆ ಹೋಗಿ ನಿರ್ದಿಷ್ಟ ಬಣ್ಣಗಳ ಕುಡಿಕೆಗಳನ್ನು ಕೊಂಡುಕೊಳ್ಳಬೇಕು; ನಿಯಮಗಳಿಗೆ ವಿಧೇಯನಾಗಿ ನಡೆದುಕೊಳ್ಳಬೇಕು, ಅಷ್ಟೆ! ಅವನು ವೈಜ್ಞಾನಿಕವಾಗಿಯೂ ಇರುತ್ತಾನೆ; ಪರಿಪೂರ್ಣ ಪೈಂಟರ್ ಕೂಡಾ ಆಗ್ತಾನೆ. ಸೂರ್ಯನ ಬೆಳಕಲ್ಲಾಗಲೀ, ಗ್ಯಾಸ್ ದೀಪದ ಬೆಳಕಲ್ಲಾಗಲಿ ಕೆಲಸ ಮಾಡಿರಲಿ, ಸಂನ್ಯಾಸಿಯೋ ಸಂಸಾರಿಯೋ ಆಗಿರಲಿ, ಏಳು ವರ್ಷದವನಾಗಿರಲಿ, ಎಪ್ಪತ್ತು ವರ್ಷದವನಾಗಿರಲಿ –ವಾಸ್ತುಶಾಸ್ತ್ರಬದ್ಧ ರೀತಿಯಲ್ಲಿ, ಅಮೂರ್ತತೆಯಲ್ಲಿ ಪರಿಪೂರ್ಣ ಕಲಾವಿದನಾಗಿ ಬಿಡುತ್ತಾನೆ.

ವಿನ್ಸೆಂಟ್ ಕಣ್ಣುಮಿಟುಕಿಸಿದ. ಗಾಗಿನ್ ನಕ್ಕ.

"ಅವನು ನಿನ್ನನ್ನು ವಿಚಿತ್ರ ಮನುಷ್ಯ ಅಂದ್ಕೊಳ್ತಾನೆ ಜಾರ್ಜ್."

ಸ್ಯುರಾತ್, ಕಡೆಯ ಡ್ರಾಯಿಂಗ್ ಅನ್ನು ಅಳಿಸಿದ. ನಂತರ ಅದನ್ನು ಒಂದು ಮೂಲೆಯಲ್ಲಿ ಎಸೆದ.

"ನಿಜವಾಗಿಯೂ ನಿನಗೆ ಹಾಗೆ ಅನ್ಸತ್ತಾ ವಾನ್‌ಗೋ?"

ವಿನ್ಸೆಂಟ್, ವಿರೋಧಿಸುವ ಧ್ವನಿಯಲ್ಲಿ ಹೇಳಿದ: "ಇಲ್ಲ, ಇಲ್ಲ...... ನನ್ನನ್ನೇ ಎಷ್ಟೋ ಸಲ ಹೀಗೆ ಕರೆದಿದ್ದಾರೆ...... ಆದರೆ ಒಂದಂತೂ ಸತ್ಯ, ನಿನ್ನ ವಿಚಾರಗಳಂತೂ ವಿಚಿತ್ರವಾಗಿವೆ!"

"ಅವನು ಒಪ್ಪಿಕೊಂಡಿದ್ದಾನೇಂತ ಆಯ್ತಲ್ಲ ಜಾರ್ಜ್!" ಗಾಗಿನ್ ಹೇಳಿದ.

ಬಾಗಿಲ ಮೇಲೆ ಯಾರೋ ತಟ್ಟಿದ ಸದ್ದಾಯಿತು.

"ಓ ದೇವರೇ!" ಗಾಗಿನ್ ಗೊಣಗಿದ....."ನಿಮ್ಮಮ್ಮನ ನಿದ್ದೆ ಕೆಡಿಸಿಬಿಟ್ಟೆವು. ಮೊದಲೇ ಹೇಳಿದ್ದಳು, ರಾತ್ರಿ ಹೊತ್ತಲ್ಲಿ ಇಲ್ಲೇನಾದರೂ ಕಾಣಿಸಿಕೊಂಡರೆ ಕಾಲುಮುರೀತೀನೀಂತ!"

ಸ್ಯುರಾತ್‌ನ ತಾಯಿ ಒಳಗೆ ಬಂದಳು.

"ಜಾರ್ಜ್, ರಾತ್ರಿ ತುಂಬಾ ಹೊತ್ತು ಕೆಲಸ ಮಾಡೊಲ್ಲ ಅಂತ ಹೇಳಿದ್ದೆ. ಓ! ನೀನಾ ಪಾಲ್..... ಯಾಕೆ ಯಾವುದಾದರೂ ಜಾಗಾನ ಬಾಡಿಗೆಗೆ ತಗೋಬಾರದು. ಕಡೇ ಪಕ್ಷ ರಾತ್ರಿ ಹೊತ್ತು ಮಲಗೋಕೆ ಜಾಗ ಸಿಗುತ್ತೆ."

"ಇಲ್ಲಿಯೇ ಜಾಗ ಕೊಟ್ಟರೆ, ಬಾಡಿಗೆ ಕೊಡೋ ಅಗತ್ಯ ಇರೊಲ್ಲ."

"ಸಾಕಪ್ಪ! ಸಾಕು. ಫ್ಯಾಮಿಲಿನಲ್ಲಿ ಒಬ್ಬ ಆರ್ಟಿಸ್ಟ್ ಇರೋದೇ ಸಾಕು. ತಗೊಳ್ಳಿ ನಿಮಗೆ ಕೊಡೋಕೆ ಕಾಫಿ, ಬ್ರಿಯೋಕ್ಸ್ ತಂದಿದ್ದೀನಿ. ಕೆಲಸ ಮಾಡಬೇಕಾದರೆ, ಚೆನ್ನಾಗಿ ತಿನ್ನಬೇಕು..... ಪಾಲ್ ನಿನ್ನ ಅಬಿಸಿಂತ್ ತರೋಕೆ ಮತ್ತೆ ಕೆಳಗಡೆ ಹೋಗಬೇಕು."

"ನೀವೇ ಎಲ್ಲಾ ಕುಡಿದು ಬಿಟ್ಟಿಲ್ಲ ತಾನೇ?"

"ಪಾಲ್, ನಾನು ಇದಕ್ಕೆ ಮುಂಚೆ ಹೇಳಿದ್ದು ನೆನಪಿದೆ ತಾನೇ?"

ವಿನ್ಸೆಂಟ್ ಈಗ ಕಾಣಿಸಿಕೊಂಡ.

"ಮದರ್. ಇವನು ನನ್ನ ಹೊಸ ಫ್ರೆಂಡ್ ವಿನ್ಸೆಂಟ್ ವಾನ್‌ಗೋ" ಸ್ಯುರಾತ್ ಪರಿಚಯಿಸಿದ.

ಸ್ಯುರಾತ್‌ನ ತಾಯಿ ಕೈ ಚಾಚಿದಳು.

"ನನ್ನ ಮಗನ ಫ್ರೆಂಡ್ ಯಾರೇ ಬಂದರೂ ಅವರಿಗೆ ಈ ಮನೆಯಲ್ಲಿ ಪೂರ್ಣ ಸ್ವಾಗತವಿದೆ." ಮಿಸ್ಟರ್ ಏನು ತಗೊಳ್ತೀಯ?"

"ನಿಮಗೆ ಅಭ್ಯಂತರ ಇಲ್ಲಾಂದ್ರೆ, ಗಾಗಿನ್‌ಗೆ ಕೊಟ್ಟ ಅಬಿಸಿಂತ್ ಅನ್ನೇ ಒಂದು ಗ್ಲಾಸು ಕೊಟ್ಟರೆ ಸಾಕು."

"ನೀನು ಅದನ್ನು ತಗೋ ಬೇಡ. ಸ್ಯುರಾತ್‌ನ ಅಮ್ಮ ನನಗೆ ಕೊಡೋದೆ ರೇಷನ್‌ನಲ್ಲಿ! ಒಂದು ತಿಂಗಳಿಗೆ ಒಂದು ಬಾಟಲ್ ಅಷ್ಟೆ! ಬೇರೆ ಯಾವುದಾದರೂ ಡ್ರಿಂಕ್ ತಗೋ. ಇಷ್ಟಕ್ಕೂ ನಿನಗೆ ಡ್ರಿಂಕುಗಳ ನಡುವೆ ವ್ಯತ್ಯಾಸವೇ ಗೊತ್ತಾಗೊಲ್ಲ.

ಮೂವರೂ ಒಟ್ಟಿಗೆ ಕಾಫಿ, ಬ್ರಿಯೋಸಿಂತ್ ಮುಗಿಸಿದರು. ಅಷ್ಟು ಹೊತ್ತಿಗೆ ಬೆಳಗಾಗುತ್ತಿತ್ತು. ಸೂರ್ಯನ ಹಳದಿ ಕಿರಣ ಉತ್ತರದ ಕಡೆಯ ಕಿಟಕಿಯಿಂದ ಒಳಗೆ ಪ್ರವೇಶಿಸಿತು.

"ಸರಿ ನಾನು ಹೋಗಿ ಡ್ರೆಸ್ ಚೇಂಜ್ ಮಾಡ್ಕೊಳ್ತೀನಿ..... ಮಿಸ್ಟರ್ ವಾನ್‌ಗೋ ಒಂದು ಸಂಜೆ ನಮ್ಮ ಜೊತೆ ಊಟ ಮಾಡಲು ಬಾ. ನಮಗೂ ಜೊತೆಯಾಗಿ ಊಟ ಮಾಡೋಕೆ ಸಂತೋಷವಾಗುತ್ತೆ."

ಸ್ಯುರಾತ್, ವಿನ್ಸೆಂಟ್‌ಗೆ ಹೇಳಿದ "ನಾನು ನಿನನ್ನ ವಿಧಾನವನ್ನು ನಿನಗೆ ವಿವರಿಸಿದ್ದೀನಿ, ಆದರೆ ಪೂರ್ತಿಯಾಗಲ್ಲ. ಸ್ಥೂಲವಾಗಷ್ಟೆ ಹೇಳಿದ್ದೀನಿ. ನಿನಗೆ ಆದಾಗೆಲ್ಲ ಬರ್ತಾ ಇರು. ಇಬ್ಬರೂ ಒಟ್ಟಿಗೆ ಕೆಲಸ ಮಾಡೋಣ. ನನ್ನ ವಿಧಾನವನ್ನು ಅಥವಾ ನಾ ಮಾಡೋ ರೀತಿಯನ್ನು ನೀನು ಅರ್ಥ ಮಾಡಿಕೊಂಡರೆ, ನಿನಗೇ ಗೊತ್ತಾಗುತ್ತೆ, ಪೈಂಟಿಂಗ್ ಮೊದಲಿನ ಹಾಗೆ ಇರೋದೇ ಇಲ್ಲ. ಇನ್ನು ಸ್ವಲ್ಪ ಕೆಲಸ ಮಾಡೋದಿದೆ. ಮಲಗುವುದಕ್ಕೆ ಮೊದಲು ಮುಗಿಸಬೇಕು. ಅಂದಹಾಗೆ ಥಿಯೋಗೆ ನನ್ನ ನಮಸ್ಕಾರ ಹೇಳು."

ವಿನ್ಸೆಂಟ್ ಮತ್ತು ಗಾಗಿನ್ ಇಬ್ಬರೂ ಗುಡ್ಡ ದಾಟಿ ಮಾಂಟ್‌ಮಾರ್ತ್ರೆ ಕಡೆ ಹೆಜ್ಜೆ ಹಾಕಿದರು. ಪ್ಯಾರಿಸ್ ಇನ್ನೂ ನಿದ್ರಾವಸ್ಥೆಯಲ್ಲಿಯೇ ಇತ್ತು. ಅಂಗಡಿ ಬಾಗಿಲುಗಳೆಲ್ಲ ಮುಚ್ಚಿದ್ದವು. ಬಂಡಿಗಳು ಹೊತ್ತು ತಂದಿದ್ದ ಹಣ್ಣು, ತರಕಾರಿಗಳನ್ನೆಲ್ಲ ಖಾಲಿ ಮಾಡಿ ಮನೆಯ ಕಡೆ ಹೊರಟಿದ್ದವು.

"ಅಲ್ಲಿ ಮೇಲೆ ಹೋಗೋಣ. ಸೂರ್ಯ ಪ್ಯಾರಿಸ್ ಅನ್ನು ಎಚ್ಚರಿಸುವ ದೃಶ್ಯವನ್ನು ನೋಡೋಣ" ಗಾಗಿನ್ ಹೇಳಿದ.

"ನಂಗೂ ಅದು ಇಷ್ಟ."

ಸಾಲುಮರಗಳಿದ್ದ ರಸ್ತೆ ಕ್ಲಿಷಿ ತಲುಪಿದ ಮೇಲೆ ರೂ ಲೆಪಿಕ್, ಮೌಲಿನ್ ದ ಲ ಗ್ಯಾಲೆಟ್‌ಗಳನ್ನು ಹಾದು ಮಾಂಟ್‌ಮಾರ್ತ್ರೆಯ ಕಡೆಗೆ ಹೆಜ್ಜೆಹಾಕಿದರು. ಮನೆಗಳ ಸಂಖ್ಯೆ ಕಡಿಮೆಯಾಗುತ್ತ, ಹೂಗಳಿಂದ ಮರಗಳಿಂದ ಕೂಡಿದ ಪ್ರದೇಶಗಳು ಹೆಚ್ಚಾದವು. ಇಬ್ಬರೂ ಬಳಸುದಾರಿ ಹಿಡಿದು ನಡೆದರು.

"ನಿಜ ಹೇಳು ಗಾಗಿನ್. ಸ್ಯುರಾತ್‌ನ ವಿಚಾರವಾಗಿ ನಿನ್ನ ಅಭಿಪ್ರಾಯ ಏನು?"

"ನನಗೆ ಗೊತ್ತಿತ್ತು, ನೀನು ಈ ಪ್ರಶ್ನೆ ಕೇಳಿಯೇ ಕೇಳ್ತಿ ಅಂತ! ಡೆಲಾಕ್ರ್ವಾನಲ್ಲಿ ಇರುವ ಎಲ್ಲರಿಗಿಂತ ಬಣ್ಣಗಳ ವಿಜ್ಞಾನವನ್ನು ತುಂಬಾ ಚೆನ್ನಾಗಿ ತಿಳಿದುಕೊಂಡಿದ್ದಾನೆ. ಕಲೆ ಕುರಿತಾಗಿ ಅವನಲ್ಲಿ ಅನೇಕ ಬೌದ್ಧಿಕ ಚಿಂತನೆಗಳಿವೆ. ಅದೇ ತಪ್ಪು. ಕಲಾವಿದರು ತಾವು ಏನ್ಮಾಡ್ತಿದ್ದಾರೆ ಅನ್ನುವುದರ ಬಗ್ಗೆ ತಿಳಿದಿರಬಾರದು. ಸಿದ್ಧಾಂತಗಳನ್ನು, ತತ್ವಗಳನ್ನು ವಿಮರ್ಶಕರಿಗೆ ಬಿಡಬೇಕು. ಬಣ್ಣಗಳಿಗೆ ಸಂಬಂಧ ಪಟ್ಟಂತೆ ಜಾರ್ಜ್‌ನ ಕೊಡುಗೆ ತುಂಬಾ ಮಹತ್ವದ್ದು. ಅವನ ಗಾಥಿಕ್ ಆರ್ಕಿಟೆಕ್ಚರ್ ಬಹುಶಃ ಸಂಪ್ರದಾಯಸ್ಥರಿಂದ ಆದಷ್ಟು ಬೇಗೆ ಪ್ರತಿಕ್ರಿಯೆ ಬರುವಂತೆ ಮಾಡುತ್ತೆ."

ಮಾಂಟ್ ಮಾರ್ತ್ರೆ ಗುಡ್ಡದ ಮೇಲೆ ನಿಂತು ನೋಡಿದಾಗ ಇಡೀ ಪ್ಯಾರಿಸ್ ಅವರ ಕಣ್ಣಿಗೆ ಗೋಚರಿಸಿತು. ಅಲ್ಲಿನ ಸರೋವರಗಳು, ಚರ್ಚುಗಳು, ಮಸುಕು ಮಂಜಿನ ರಾತ್ರಿಯೊಳಗಿಂದ ಎದ್ದು ಕಾಣುತ್ತಿದ್ದವು. ಸಿಯೆನ್ ನದಿ ಪ್ಯಾರಿಸ್ ನಗರವನ್ನು ಹೋಳಾಗಿಸಿ ಬಳಸಿ ಹರಿಯುತ್ತಿತ್ತು. ಸಿಯೆನ್ ನದಿ ಕಣಿವೆಯ ಇಳಿಜಾರಿನಲ್ಲಿ ಮನೆಗಳು ಕಾಣಿಸುತ್ತಿದ್ದವು. ಸೂರ್ಯೋದಯದ ಬೆಳಕು ಬ್ವಾ ದ ವಿನ್‌ಸೆನ್ ಮೇಲೆ ಬಿತ್ತು. ಆದರೆ ಮತ್ತೊಂದು ದಿಕ್ಕಿನಲ್ಲಿದ್ದ ದೃಶ್ಯಗಳು ಇನ್ನೂ ಕತ್ತಲಿದ್ದುದರಿಂದ ಸರಿಯಾಗಿ ಕಾಣಿಸಲಿಲ್ಲ. ನಗರದ ಮುಖ್ಯ ಸ್ಥಳಗಳಾದ, ಒಪೆರಾ, ನೋತ್ರದಾಮ್ ಮತ್ತು ಆರ್ಕ್‌ದ ತ್ರಿಯೋಮ್ಫ್‌ಗಳು ಕಲ್ಲುಗುಡ್ಡಗಳಂತೆ ಕಾಣಿಸುತ್ತಿದ್ದವು.

–೬–

ರೂ ಲಾವಲ್ ಅಪಾರ್ಟ್‌ಮೆಂಟ್‌ನಲ್ಲಿ ಶಾಂತಿ ನೆಲೆಸಿತ್ತು. ಶಾಂತಿ ನೆಲೆಸಿದ್ದಕ್ಕೆ ಥಿಯೋ ತನ್ನ ಅದೃಷ್ಟಕ್ಕೆ ಕೃತಜ್ಞತೆ ಸಲ್ಲಿಸಿದ. ಆದರೆ ಆ ಶಾಂತಿ ಬಹಳ ಕಾಲ ಉಳಿಯಲಿಲ್ಲ. ವಿನ್ಸೆಂಟ್ ಮೊದಲಿನ ರೀತಿಯಲ್ಲಿ ನಿಧಾನವಾಗಿ ಪೈಂಟ್ ಮಾಡುತ್ತಿದ್ದುದನ್ನು ಬಿಟ್ಟು ಸ್ನೇಹಿತರನ್ನು ಅನುಕರಿಸತೊಡಗಿದ. ಇಂಪ್ರೆಷನಿಸ್ಟ್ ಆಗಬೇಕೆನ್ನುವ ಹಠದಲ್ಲಿ, ಕಲಿತದ್ದನ್ನೂ ಮರೆತು ಬಿಟ್ಟ. ಅವನ ಕ್ಯಾನ್‌ವಾಸ್‌ಗಳೆಲ್ಲ ಸ್ಯುರಾತ್, ಲಾಟ್ರೆಕ್, ಗಾಗಿನ್‌ರ ಭಯಂಕರ ಅನುಕರಣೆಯ ಪ್ರತಿಗಳಂತೆ ಕಾಣಿಸಿದವು. ಆದರೆ ಅವನು ತಾನು ಅದ್ಭುತವಾದ ಪ್ರಗತಿಯನ್ನು ಸಾಧಿಸಿದ್ದೇನೆಂಬ ಭ್ರಮೆಯಲ್ಲಿ ಉಳಿದ.

ಒಂದು ದಿನ ಥಿಯೋ ಕೇಳಿದ– "ನೋಡಿಲ್ಲಿ ಬ್ರದರ್, ನಿನ್ನ ಹೆಸರೇನು?"

"ವಿನ್ಸೆಂಟ್ ವಾನ್‌ಗೋ."

"ಖಂಡಿತವಾಗಿಯೂ ಅದೇ ಹೆಸರ? ಇಲ್ಲ ಸ್ಯುರಾತ್, ಗಾಗಿನ್ ಅಂತ ಬೇರೆ ಹೆಸರುಗಳಿವೆಯಾ?"

"ಥಿಯೋ, ಏನಿದು ತಮಾಶೆ?"

"ಜಾರ್ಜ್ ಸ್ಯುರಾತ್ ಆಗ್ಬಿಡ್ತೀನಿ ಅಂತ ನಿನಗೆ ಖಂಡಿತ ಅನ್ನಿಸ್ತಿದೆಯಾ? ನಿನಗೆ ಗೊತ್ತಿಲ್ಲವೇನು? ಲಾಟ್ರೆಕ್ ಅನ್ನುವವನು, ಎಷ್ಟೋ ಸಮಯದಿಂದ ಒಬ್ಬನೇ ಇದ್ದದ್ದು? ಗಾಗಿನ್ ಕೂಡಾ ಒಬ್ಬನೇ!.... ದೇವರೇ! ಅವರನ್ನು ಅನುಕರಿಸುವ ಕೆಲಸ ಯಾಕೆ ಮಾಡ್ತಿದ್ದೀಯೋ!"

"ನಾನು ಅನುಕರಣೆ ಮಾಡ್ತಿಲ್ಲ. ಕಲೀತಾ ಇದ್ದೀನಿ, ಅವರಿಂದ."

"ಇಲ್ಲ. ನೀನು ಅವರ ಅನುಕರಣೆ ಮಾಡ್ತಿದ್ದೀಯ. ನೀನು ಹೊಸದಾಗಿ ಮಾಡಿರುವ ಯಾವುದಾದರೂ ಕ್ಯಾನ್‌ವಾಸ್ ತೋರಿಸು. ನಾನು ತಕ್ಷಣ ಯಾರನ್ನು ನೀನು ಅನುಕರಣೆ ಮಾಡಿದ್ದೀಯಾಂತ ಹೇಳಿಬಿಡ್ತೀನಿ. ನೀನು ಹಿಂದಿನ ರಾತ್ರಿ ಯಾರ ಜೊತೆ ಇದ್ದೆ ಅನ್ನೋದನ್ನೂ ನಿನಗೆ ತಿಳಿಸ್ತೀನಿ."

"ನಾನು ಸಾಕಷ್ಟು ಸುಧಾರಿಸಿಕೊಂಡಿದ್ದೀನಿ ಥಿಯೋ. ನೋಡು ನನ್ನ ಬಣ್ಣಗಳು ಎಷ್ಟು ಲೈಟಾಗಿವೆ."

"ಇಲ್ಲ. ಖಂಡಿತ ನೀನು ಕೆಳಕ್ಕೆ ಹೋಗ್ತಿದ್ದೀಯ. ವಿನ್ಸೆಂಟ್‌ನಂತೆ ಈಗ ಪೈಂಟ್ ಮಾಡ್ತಿಲ್ಲ. ಈ ಪಿಕ್ಚರ್ಸ್ ವಾನ್‌ಗೋದಲ್ಲ. ಒಂದೇ ದಿನದಲ್ಲಿ ಸಾಧಿಸುವ ಭ್ರಮೆ ಬೇಡ ವಿನ್ಸೆಂಟ್. ಬಹಳ ಕಷ್ಟ ಪಡಬೇಕು. ನಿನ್ನ ಸ್ವಂತಿಕೆಯಿಂದ ಮಾಡದೆ ಬೇರೆಯವರನ್ನು ಅನುಕರಣೆ ಮಾಡುವ ಸ್ಥಿತಿಗೆ ಇಳಿದುಬಿಟ್ಟೆಯಾ? ಅವರು ನಿಜವಾಗಿ ಏನು ನೀಡಬೇಕಂತಿದ್ದಾರೆ ಅನ್ನೋದನ್ನು ಅರ್ಥಮಾಡಿಕೊಳ್ಳೋಕೆ ಆಗುವುದಿಲ್ಲವೇ?"

"ಥಿಯೋ, ನಾನು ಹೇಳ್ತೀನಿ, ಇವೆಲ್ಲ ಚೆನ್ನಾಗಿವೆ!"

"ಆದರೆ ನಾನು ಹೇಳ್ತೇನೆ, ಅಧ್ವಾನ್ನವಾಗಿವೆ!"

ವಾಗ್ಯುದ್ಧ ಮುಂದುವರೆಯಿತು

ಪ್ರತಿದಿನಾ ರಾತ್ರಿ ದಣಿದು, ಹೆದರುತ್ತಲೇ ಹಿಂದಿರುಗುತ್ತಿದ್ದ. ಅವನು ಬರುವಷ್ಟು ಹೊತ್ತಿಗೆ ಅಸಮಾಧಾನ ಚಡಪಡಿಕೆಗಳಿಂದ, ತಾನು ಮಾಡಿದ ಹೊಸ ಕ್ಯಾನ್‌ವಾಸ್ ಹಿಡಿದು ಅವನಿಗೆ ಎದುರುಕಾದಿರುತ್ತಿದ್ದ. ಥಿಯೋ ಬಂದು, ಬಟ್ಟೆ ಬದಲಾಯಿಸುವುದಕ್ಕೂ ಸಮಯವಿಲ್ಲದಂತೆ, ವಿನ್ಸೆಂಟ್ ಆತುರದಿಂದ ಅವನೆದುರು ನಿಲ್ಲುತ್ತಿದ್ದ.

"ನೋಡು! ಇದು ಚೆನ್ನಾಗಿಲ್ವೇನು! ನನ್ನಲ್ಲಿ ಸುಧಾರಣೆ ಕಾಣಿಸುತ್ತಿಲ್ಲವೇನು?.... ನೋಡು ಸೂರ್ಯನ ಬೆಳಕಿನ ಪರಿಣಾಮ!...... ಇದನ್ನು ಓಡ್ಡು!......"

ಥಿಯೋಗೆ ಈಗ ಸಂದಿಗ್ಧ. ಸುಳ್ಳು ಹೇಳಿ ಶಾಂತಿಯಿಂದ ಇರೋಕೆ ಅವಕಾಶ ಮಾಡಿಕೊಳ್ಳೋದೋ, ಇಲ್ಲ ಸತ್ಯ ಹೇಳಿ ಅವನ ಭಾವಾವೇಶದೊಂದಿಗಿನ ಆಕ್ರಮಣವನ್ನು ಎದುರಿಸಲು ಅಣಿಯಾಗುವುದೋ! ಎನ್ನುವ ಸಂದಿಗ್ಧ. ಯಾವುದನ್ನು ಆಯ್ಕೆ ಮಾಡಿಕೊಳ್ಳಬೇಕೆಂದು ಹೊಳೆಯಲಿಲ್ಲ. ಥಿಯೋ ಪೂರ್ತಿಯಾಗಿ ದಣಿದು ಹೋಗಿದ್ದ. ನಿಜ ಹೇಳಿ ಅವನ ಹಾವಳಿ ಸಹಿಸಿಕೊಳ್ಳುವಷ್ಟು ಶಕ್ತಿ ಇರಲಿಲ್ಲ. ಆದರೂ ನಿಜ ಹೇಳಿದ.

"ಡ್ಯುರಾಂಡ್ ರ್ಯೂಯೆಲ್ ಹತ್ತಿರ ಯಾವಾಗ ಹೋಗಿದ್ದೆ?"

"ಅದಕ್ಕೂ ಇದಕ್ಕೂ ಸಂಬಂಧ ಏನು?"

"ನನ್ನ ಪ್ರಶ್ನೆಗೆ ಉತ್ತರ ಕೊಡು."

ಒಂದು ರೀತಿ ಸಂಕೋಚ, ಹಿಂಜರಿಕೆಗಳಿಂದಲೇ ಹೇಳಿದ – ನೆನ್ನೆ ಮಧ್ಯಾಹ್ನ."

"ವಿನ್ಸೆಂಟ್ ನಿನಗೆ ಗೊತ್ತಿದೆಯೇನು, ಪ್ಯಾರಿಸ್‌ನಲ್ಲಿ ಎಡ್‌ವರ್ಡ್ ಮಾನೆಟ್‌ನನ್ನು ಅನುಕರಣೆ ಮಾಡಲು ಸಾವಿರಾರು ಮಂದಿ ಪ್ರಯತ್ನ ಮಾಡ್ತಿದ್ದಾರೆ. ಆದರೆ ಅವರೆಲ್ಲ ನಿನಗಿಂತ ಚೆನ್ನಾಗಿ ಮಾಡ್ತಿದ್ದಾರೆ."

ಇಬ್ಬರ ಸಮರಕ್ಕೆ ಆ ಜಾಗ ಸಾಲದಾಗಿತ್ತು. ವಿನ್ಸೆಂಟ್ ಒಂದು ಉಪಾಯ ಮಾಡಿದ. ಅವನು ಎಲ್ಲ ಇಂಪ್ರೆಷನಿಸ್ಟರನ್ನು ಒಂದೇ ಕ್ಯಾನ್‌ವಾಸ್‌ನಲ್ಲಿ ತುರುಕಿದ.

"ತುಂಬಾ ತಮಾಶೆಯಾಗಿ, ಚೆನ್ನಾಗಿದೆ. ನಾವು ಇದಕ್ಕೆ 'ರಿಕ್ಯಾಚ್ಯುಲೇಷನ್' ಅಂತ ಹೆಸರು ಕೊಡೋಣ. ಕ್ಯಾನ್‌ವಾಸ್‌ನಲ್ಲಿರುವ ಪ್ರತಿಯೊಂದಕ್ಕೂ ಶೀರ್ಷಿಕೆಗಳನ್ನು ಕೊಡೋಣ. ಈ ಮರ ಇದೆಯಲ್ಲ ಪಕ್ಕಾ ಗಾಗಿನ್! ಆ ಮೂಲೆಯಲ್ಲಿ ಇರುವ ಹುಡುಗಿ ತುಲೋಪ್ ಲಾಟ್ರೆಕ್! ಆಮೇಲೆ ಆ ಹೊಳೆಯ ಮೇಲೆ ಬಿದ್ದಿರುವ ಸೂರ್ಯನ ಬೆಳಕಿಗೆ ಸಿಸ್ಲಿ, ಬಣ್ಣಕ್ಕೆ ಮೋನೆಟ್, ಎಲೆಗಳಿಗೆ ಪಿಸ್ಸಾರೋ, ಗಾಳಿಗೆ ಸ್ಯುಯುರಾತ್, ಮಧ್ಯೆ ಇರುವ ಆಕೃತಿಗೆ ಮಾನೆಟ್ ಅಂತ ಹೆಸರುಗಳನ್ನು ಬರೆದು ಬಿಡೋಣ."

ವಿನ್ಸೆಂಟ್ ಥಿಯೋ ಜೊತೆ ಗಟ್ಟಿಯಾಗಿ ಜಗಳ ಮಾಡಿದ. ಇಡೀ ದಿನ ಕಷ್ಟಪಟ್ಟು ಕೆಲಸ ಮಾಡಿದ. ಥಿಯೋ ರಾತ್ರಿ ಮನೆಗೆ ಬಂದಾಗ, ಉಪಾಧ್ಯಾಯನಿಂದ ಬೆತ್ತದ ಏಟು ತಿಂದ ಮಗುವಿನಂತಿದ್ದ. ಥಿಯೋ ಪಡಸಾಲೆಯಲ್ಲಿಯೇ ಮಲಗಿದ. ವಿನ್ಸೆಂಟ್‌ಗೆ ಅಲ್ಲಿ ಪೈಂಟ್ ಮಾಡೋಕೆ ಅವಕಾಶ ಇರಲಿಲ್ಲ. ವಿನ್ಸೆಂಟ್ ಜೊತೆ ಜಗಳ ಅವನ ಉದ್ರೇಕಕ್ಕೆ ಕಾರಣವಾಗಿತ್ತು. ನಿದ್ದೆ ಸಾಧ್ಯವಾಗಿರಲಿಲ್ಲ. ಎಷ್ಟೋ ಹೊತ್ತು ಅವನಿಗೆ ಬುದ್ಧಿ ಹೇಳುವುದರಲ್ಲೇ ಕಳೆಯಿತು, ಕಡೆಗೆ ಆಯಾಸದಿಂದ ಸೋತು ಹೋಗಿ ನಿದ್ದೆ ಕಣ್ಣು ತುಂಬಿ ಬಂತು. ದೀಪ ಉರಿಯುತ್ತಲೇ ಇತ್ತು. ವಿನ್ಸೆಂಟ್ ಉದ್ರೇಕದಿಂದ ಏನೇನೋ ಸನ್ನೆಗಳನ್ನು ಮಾಡಿಕೊಂಡು ಗೊಣಗುತ್ತಿದ್ದ. ಥಿಯೋ ಹೇಗೋ ಅವನ ಜೊತೆ ಸಹಿಸಿಕೊಳ್ಳುವುದನ್ನು ಅಭ್ಯಾಸ ಮಾಡಿಕೊಂಡ. ಅವನಿಗೆ ಒಂದೇ ಒಂದು ಸಮಾಧಾನ ಇದ್ದದ್ದೆಂದರೆ, ಇದೆಲ್ಲ ರೂಲೆಪೆಕ್‌ಗೆ ಷಿಫ್ಟ್ ಆಗುವವರೆಗೆ ಮಾತ್ರ ಅನ್ನೋದು! ಅಲ್ಲಿ ಅವನಿಗೆ ಪ್ರತ್ಯೇಕವಾಗಿ ಒಂದು ರೂಮು ಇರುತ್ತೆ. ಬಾಗಿಲಿಗೆ ಒಂದು ದೊಡ್ಡ ಬೀಗ ಕೂಡ ಇರುತ್ತೆ.

ವಿನ್ಸೆಂಟ್ ತನ್ನ ಕ್ಯಾನ್‌ವಾಸ್‌ಗಳ ವಿಚಾರದಲ್ಲಿ ಜಗಳ ಮಾಡಿ ಮಾಡಿ ಸಾಕಾದ ಮೇಲೆ, ಈಗ ಕಲೆ, ಕಲೆಯ ವ್ಯಾಪಾರ, ಕಲಾವಿದರ ಕುರಿತಾದ ಚರ್ಚೆಗಳಿಂದ ಥಿಯೋನ ರಾತ್ರಿಗಳನ್ನೆಲ್ಲಾ ಹಾಳುಮಾಡಿದ.

"ಥಿಯೋ ನನಗೊಂದು ವಿಷಯ ಅರ್ಥವಾಗ್ತಾ ಇಲ್ಲ. ಇಡೀ ಪ್ಯಾರಿಸ್‌ನಲ್ಲಿ ನೀನೊಬ್ಬ ದೊಡ್ಡ ಆರ್ಟ್ ಡೀಲರ್ ಸಂಸ್ಥೆಯಲ್ಲಿ ಮ್ಯಾನೇಜರ್ ಆಗಿದ್ದೀಯ. ಆದರೆ ನಿನ್ನ ಅಣ್ಣನದು, ಒಂದು ಕ್ಯಾನ್‌ವಾಸನ್ನಾದರೂ ಡಿಸ್‌ಪ್ಲೇ ಮಾಡಿದ್ದೀಯ?"

"ವಾಲ್‌ದೋನ್ ಅದಕ್ಕೆ ಅವಕಾಶ ಕೊಡೊಲ್ಲ."

"ನೀನು ಪ್ರಯತ್ನ ಮಾಡಿದ್ದೀಯ?"

"ಸಾವಿರಸಲ!"

"ಸರಿ. ನನ್ನ ಪೈಂಟಿಂಗ್ಸ್ ಚೆನ್ನಾಗಿಲ್ಲ ಅಂತಲೇ ಇಟ್ಕೋ. ಆದರೆ ಸ್ಯುರಾತ್? ಲಾಟ್ರೆಕ್? ಗಾಗಿನ್?"

"ಪ್ರತಿಸಲವೂ, ಅವರು ತಮ್ಮ ಹೊಸ ಕ್ಯಾನ್‌ವಾಸ್ ತಂದಾಗಲೆಲ್ಲ ವಾಲ್‌ದೋನ್‌ನ ಕೇಳ್ತೀನಿ. ಪ್ರವೇಶದ್ವಾರದಲ್ಲಿ ಅವುಗಳನ್ನು ತೂಗುಹಾಕೋಣ ಅಂತ!"

"ಗ್ಯಾಲರಿಗೆ ನೀನಾ ಯಜಮಾನ ಅಥವಾ ಬೇರೆ ಯಾರಾದರೂ ಇದ್ದಾರಾ?"

"ಅಯ್ಯೋ, ನಾನಲ್ಲಿ ಒಬ್ಬ ಕೆಲಸಗಾರ!"

"ಹಾಗಾದರೆ, ನೀನು ಅಲ್ಲಿಂದ ಹೊರಗೆ ಬಾ. ಇದು ಅವಮಾನ! ತೀರಾ ಅವಮಾನ! ನಾನಾಗಿದ್ದರೆ ಅಲ್ಲಿ ಒಂದು ಕ್ಷಣವೂ ಇರ್ತಿರ್ಲಿಲ್ಲ. ಯಾವಾಗಲೋ ಅವನನ್ನು ಉಗಿದು, ಆಚೆ ಬರ್ತಿದ್ದೆ."

"ಅದೆಲ್ಲ ಬೆಳಿಗ್ಗೆ ಬ್ರೇಕ್‌ಫಾಸ್ಟ್ ಮಾಡುವಾಗ ಮಾತಾಡೋಣ. ಈಗಂತೂ ತುಂಬಾ ನಿದ್ದೆ ಬರ್ತಿದೆ. ಆಯಾಸ ಕೂಡಾ ಆಗಿದೆ."

"ಬೆಳಿಗ್ಗೆವರೆಗೆ ಕಾಯುವಷ್ಟು ತಾಳ್ಮೆ ನನ್ನಲ್ಲಿಲ್ಲ. ಈಗಲೇ ಅದರ ಬಗ್ಗೆ ಮಾತಾಡಬೇಕು ಥಿಯೋ. ಮಾನೆಟ್ ಮತ್ತು ಡೆಗಾಸ್ ಅವರಿಗೆ ಈಗಾಗಲೇ ಸಾಕಷ್ಟು ಮನ್ನಣೆ ಸಿಕ್ಕಿದೆ. ಜನ ಅವರನ್ನು ಒಪ್ಪಿಕೊಂಡಿದ್ದಾರೆ. ಹೀಗಿರುವಾಗ ಅವರ ಪೈಂಟಿಂಗ್ಸ್‌ಗಳನ್ನು ಪ್ರದರ್ಶಿಸುವುದರಿಂದ ಬರುವ ಲಾಭವಾದರೂ ಏನು? ಅವರ ಕ್ಯಾನ್‌ವಾಸ್‌ಗಳು ಚೆನ್ನಾಗಿ ಮಾರಾಟ ಕೂಡಾ ಆಗ್ತಾ ಇವೆ. ಈಗ ನೀನು ಹೋರಾಟ ಮಾಡಬೇಕಿರುವುದು ಯುವ ಕಲಾವಿದರ ಪರವಾಗಿ."

"ನನಗೆ ಸ್ವಲ್ಪ ಅವಕಾಶ ಕೊಡು. ಬಹುಶಃ ಒಂದು ಮೂರು ವರ್ಷ......"

"ಇಲ್ಲ! ಮೂರು ವರ್ಷ ಕಾಯೋಕಾಗೊಲ್ಲ. ಈಗಲೇ ನಾವು ಕೆಲಸ ಶುರು ಮಾಡಬೇಕು. ನೀನ್ಯಾಕೆ, ಆ ಕೆಲಸ ಬಿಸಾಕಿ, ನಿನ್ನದೇ ಸ್ವಂತ ಗ್ಯಾಲರಿಯೊಂದನ್ನು ತೆಗೆಯಬಾರದು? ಯೋಚನೆ ಮಾಡು. ವಾಲ್‌ದೋನ್, ಹೆನ್ನೇರ್, ಬೊಗ್ಯಾರೊ.... ಎಲ್ಲರನ್ನು ಆ ಕಡೆ ನೂಕು!"

"ಅದಕ್ಕೆ ದುಡ್ಡು ಬೇಕಾಗುತ್ತೆ ವಿನ್ಸೆಂಟ್! ನಾನೇನೂ ದುಡ್ಡು ಉಳಿಸಿಲ್ಲ."

"ಹೇಗಾದರೂ ದುಡ್ಡು ತರೋಣ."

"ಆರ್ಟ್ ಬಿಸಿನೆಸ್‌ನಲ್ಲಿ. ಬೇಗ ಬೇಗ ಸಂಪಾದನೆ ಸಾಧ್ಯ ಆಗೊಲ್ಲ ವಿನ್ಸೆಂಟ್. ತುಂಬ ನಿಧಾನ ಆಗುತ್ತೆ."

"ನಿಧಾನ ಆಗಲಿ ಬಿಡು. ನಾವು ಚೆನ್ನಾಗಿ ಕುದುರುವವರೆಗೆ ಹಗಲೂ ರಾತ್ರಿ ಕಷ್ಟ ಪಡೋಣ."

"ಅಲ್ಲೀವರೆಗೆ ಏನು ಮಾಡೋದು? ಹೇಗೆ ಮಾಡೋದು? ಹೊಟ್ಟೆಗೆ ಯಾರು ಹಾಕ್ತಾರೆ?"

"ಪರೋಕ್ಷವಾಗಿ, ನನ್ನ ಸ್ವಂತ ಸಂಪಾದನೆ ಇಲ್ಲ ಅಂತ ಸೂಚನೆ ಕೊಡ್ತಿದ್ದೀಯ?"

"ಅಪ್ಪ ನಿನ್ನ ದಮ್ಮಯ್ಯ ಅಂತ ಕೈಮುಗೀತೀನಿ. ಹೋಗಿ ಮಲಕ್ಕೋ, ನನಗೂ ಸಾಕಾಗಿದೆ."

"ಇಲ್ಲ ಹೋಗೊಲ್ಲ. ನನಗೆ ನಿಜ ಹೇಳು. ನನ್ನ ಸಂಪಾದನೆ ಇಲ್ಲಾ ಅನ್ನೋ ಕಾರಣಕ್ಕೇನೇ ಗೂಪಿಲ್ಸ್ ಬಿಡೋಕೆ ಹೆದರ್ತಿದ್ದೀಯ? ನನಗೆ ಸಹಾಯ ಮಾಡಬೇಕಾಗಿದೆ ಅಂತ ಅಲ್ವಾ?" ಹೇಳು, ನಿಜ ಹೇಳು, ನನಗೆ ಗೊತ್ತು ನನ್ನ ಭಾರ ನಿನ್ನ ಹೆಗಲ

ಮೇಲಿದೆ. ನಾನೇ ನಿನ್ನನ್ನು ಕೆಳಕ್ಕೆ ತುಳೀತಿದ್ದೀನಿ. ಕೆಲಸ ಬಿಡಲು ಆಗದಷ್ಟು ಅಸಹಾಯಕನನ್ನಾಗಿ ಮಾಡಿದ್ದೀನಿ. ನನ್ನ ಜವಾಬ್ದಾರಿ ಇಲ್ಲದೆ ಇದ್ದಿದ್ದರೆ ನೀನು ಸ್ವತಂತ್ರನಾಗಿ ಇರುತ್ತಿದ್ದೆ."

"ನೋಡು ನಿನಗಿಂತ ಒಂದು ಚೂರು ದೊಡ್ಡವನಾಗಿದ್ದಿದ್ದರೆ, ಒಂದು ಚೂರು ಹೆಚ್ಚು ಶಕ್ತಿವಂತನಾಗಿದ್ದಿದ್ದರೆ ನಿನ್ನ ಮೂಳೆ ಮುರೀತಿದ್ದೆ. ಈಗಲೂ ಏನು ಪರವಾಗಿಲ್ಲ. ಗಾಗಿನ್‌ನ ಕರೆದು ಅವನಿಂದ ಆ ಕೆಲಸ ಮಾಡಿಸಬಲ್ಲೆ. ನನ್ನ ಕೆಲಸ ಗೂಪಿಲ್ಸ್ ಜೊತೆಗೆ, ಈಗಲೂ ಆಮೇಲೂ, ಎಂದೆಂದೂ! ನಿನ್ನ ಕೆಲಸ, ಇವತ್ತು, ನಾಳೆ, ಅಲ್ಲದೆಯಾವತ್ತೂ ಪೈಂಟಿಂಗ್ ಮಾಡೋದು. ಗೂಪಿಲ್ಸ್‌ನಲ್ಲಿ ನಾನು ಮಾಡುವ ಕೆಲಸದಲ್ಲಿ ಅರ್ಧ ನಿನಗೆ ಸೇರಿದ್ದು. ನೀನು ಮಾಡುವ ಪೈಂಟಿಂಗ್‌ನಲ್ಲಿ ಅರ್ಧ ನನಗೆ ಸೇರಿದ್ದು ತಿಳೀತಾ? ಈಗ ಸುಮ್ಮನೆ ನಿನ್ನ ಹಾಸಿಗೆ ಬಳಿ ಹೋಗು. ನನಗೆ ನಿದ್ದೆ ಮಾಡಲು ಬಿಡು. ಇಲ್ಲಾಂದ್ರೆ ಪೋಲೀಸ್‌ನ ಕರೀಬೇಕಾಗುತ್ತೆ!"

ಮಾರನೆ ದಿನ ಸಾಯಂಕಾಲ ಥಿಯೋ ವಿನ್ಸೆಂಟ್ ಕೈಗೆ ಒಂದು ಎನ್‌ವಲಪ್ ಕೊಟ್ಟು ಹೇಳಿದ – "ಇವತ್ತು ರಾತ್ರಿ ನಿನಗೇನೂ ಕೆಲಸ ಇಲ್ಲ ಅಂದ್ರೆ ಈ ಪಾರ್ಟಿಗೆ ಹೋಗೋಣ."

"ಯಾರು ಕೊಡ್ತಿರೋದು ಪಾರ್ಟಿ?"

"ಹೆನ್ರಿ ರೂಸೋ, ಈ ಇನ್ವಿಟೇಷನ್ ತೆಗೆದು ನೋಡು."

ಅದರಲ್ಲಿ ಕವಿತೆಯ ಎರಡು ಸಾಲುಗಳು ಮತ್ತು ಕೈಯಲ್ಲಿ ಪೈಂಟ್ ಮಾಡಿದ ಕೆಲವು ಹೂಗಳು ಇದ್ದವು.

"ಯಾರು ಈತ?" ವಿನ್ಸೆಂಟ್ ವಿಚಾರಿಸಿದ.

"ಇವನನ್ನು ನಾವು ಲ ದೂನಿಯೇರ್ ಅಂತ ಕರೀತೀವಿ. ನಲವತ್ತನೇ ವಯಸ್ಸಿನವರೆಗೆ ಅವನು ಕಸ್ಟಮ್ಸ್ ಕಲೆಕ್ಟರ್ ಆಗಿದ್ದ. ಗಾಗಿನ್ ಥರಾನೇ, ಭಾನುವಾರಗಳಲ್ಲಿ ಪೈಂಟಿಂಗ್ ಮಾಡುವ ಹವ್ಯಾಸ ಇರಿಸಿಕೊಂಡಿದ್ದ. ಕೆಲವರ್ಷಗಳ ಹಿಂದಷ್ಟೇ ಪ್ಯಾರಿಸ್‌ಗೆ ಬಂದು ಕಾರ್ಮಿಕರ ಡಿಸ್ಟ್ರಿಕ್ಟ್ ಆಗಿದ್ದ ಬಸ್ತೀಲ್‌ನಲ್ಲಿ ನೆಲೆಗೊಂಡ. ಅವನಿಗೆ ಒಂದು ದಿನವಾದರೂ ವಿದ್ಯಾಭ್ಯಾಸ ಇರಲಿಲ್ಲ. ಒಬ್ಬರಿಂದಲೂ ಸೂಚನೆ ಸಲಹೆಗಳು ಸಿಗಲಿಲ್ಲ. ಆದರೂ ಪೈಂಟಿಂಗ್ ಮಾಡ್ತಾನೆ; ಕವಿತೆ ಬರೀತಾನೆ; ಸಂಗೀತ ರಚನೆ ಮಾಡ್ತಾನೆ; ಕಾರ್ಮಿಕರ ಮಕ್ಕಳಿಗೆ ವಯಲಿನ್ ಪಾಠ ಹೇಳಿಕೊಡ್ತಾನೆ. ಪಿಯಾನೋ ನುಡಿಸ್ತಾನೆ. ಒಂದಿಬ್ಬರು ಹಿರಿಯರಿಗೆ ಡ್ರಾಯಿಂಗೂ ಕಲಿಸ್ತಾನೆ."

"ಎಂಥಾದ್ದನ್ನು ಪೈಂಟ್ ಮಾಡ್ತಾನೆ?"

"ಅದ್ಭುತವಾಗಿ ಪ್ರಾಣಿಗಳನ್ನು ಅದರಲ್ಲೂ ಅವುಗಳಿಗಿಂತಲೂ ಅದ್ಭುತವಾದ, ಕಾಡುಗಳ ನಡುವೆ ಕಾಣಿಸಿಕೊಳ್ಳುವ ಪ್ರಾಣಿಗಳು! ತುಂಬಾ ಹತ್ತಿರದಿಂದ ಅವನು ನೋಡಿದ್ದು, ಬ್ವಾದ ಬುಲೋನ್‌ನಲ್ಲಿನ ಝಾರ್ದಾನ್ ದ ಅಕ್ಲಿಮೇಷನ್. ಪಾಲ್ ಗಾಗಿನ್ ಅವನನ್ನು ಕಂಡು ಎಷ್ಟೇ ಹಾಸ್ಯ ಮಾಡಿದರೂ ಸರಿ, ಅವನೊಬ್ಬ ಕೃಷಿಕ, ಸಂಪ್ರದಾಯವಾದಿ ವ್ಯಕ್ತಿ."

"ಅವನ ಕೆಲಸ ಹೇಗಿರುತ್ತೆ ಥಿಯೋ?"

"ಅದು ನನಗೆ ಗೊತ್ತಿಲ್ಲ. ಆದರೆ ಪ್ರತಿಯೊಬ್ಬರೂ ಅವನನ್ನು ಹುಚ್ಚ, ತಲೆಕೆಟ್ಟವನು ಅಂತ ಕರೀತಾರೆ."

"ಹಾಗೇನಾ ಅವನು?"

"ಅವನು ಒಂದು ಥರಾ ಮಗು ಇದ್ದ ಹಾಗೆ. ನಿಜವಾದ ಮಗು; ಮುಗ್ಧ. ಈವತ್ತು ರಾತ್ರಿ ಹೇಗಿದ್ದರೂ ಪಾರ್ಟಿಗೆ ಹೋಗ್ತಿವಲ್ಲ, ನೀನೇ ನೋಡಿ ತೀರ್ಮಾನಕ್ಕೆ ಬಾ. ಅವನ ಕ್ಯಾನ್‌ವಾಸ್‌ಗಳೆಲ್ಲ ಗೋಡೆ ಮೇಲೆ ತೂಗಿರುವುದನ್ನು ನೀನೇ ನೋಡುವಿಯಂತೆ."

"ಅವನು ಪಾರ್ಟಿಗಳನ್ನು ಕೊಡಬೇಕಾದರೆ, ಅವನ ಹತ್ತಿರ ಹಣ ಇರಲೇಬೇಕು."

"ಇವತ್ತು ಪ್ಯಾರಿಸ್‌ನಲ್ಲಿ ಇರುವ ಪೈಂಟರ್ಸ್‌ಗಳಲೆಲ್ಲಾ ಬಡವನೆಂದರೆ ಇವನೇ. ಪಾಠ ಹೇಳಿಕೊಡೋಕೆ ಬೇಕಾಗಿರೋ ವಯಲಿನ್ ಕೂಡ ಪಾಪ ಬಾಡಿಗೆಗೆ ತಗೋತಾನೆ. ಅದನ್ನು ಕೊಂಡುಕೊಳ್ಳೋಕೂ ಅವನಲ್ಲಿ ಹಣ ಇಲ್ಲ. ಆದರೂ ಪಾರ್ಟಿಗಳನ್ನು ಕೊಡ್ತಾನೆ. ಯಾಕೇಂದ್ರೆ ಅದರಲ್ಲಿ ಒಂದು ಉದ್ದೇಶ ಇರುತ್ತೆ. ನೀನೇ ಅರ್ಥಮಾಡಿಕೊಳ್ತೀ, ಅಲ್ಲಿಗೆ ಹೋದ ಮೇಲೆ."

ರೂಸೋ ಇದ್ದ ಮನೇಲಿ ಬೇರೆ ಕಾರ್ಮಿಕರ ಕುಟುಂಬಗಳೂ ವಾಸಿಸುತ್ತಿದ್ದವು. ನಾಲ್ಕನೇ ಮಹಡಿಯಲ್ಲಿ ರೂಸೋನ ಕೋಣೆಯಿತ್ತು. ಅದರ ತುಂಬೆಲ್ಲಾ ಮಕ್ಕಳ ಚಿಲಿಪಿಲಿ. ಅಡಿಗೆ ಮನೆ, ಬಟ್ಟೆ ಒಗೆಯುವ ಜಾಗ, ಬಾತ್‌ರೂಮುಗಳು, ಲೆಟ್ರೀನುಗಳು ಅಲ್ಲೇ ಇದ್ದು ಎಲ್ಲದರ ವಾಸನೆಗಳು ಯಾರಿಗಾದರೂ ಉಸಿರು ಕಟ್ಟಿಸುವಂತಿತ್ತು.

ಬಾಗಿಲ ಸದ್ದು ಕೇಳಿ ರೂಸೋ, ಬಾಗಿಲು ತೆಗೆಯಲು ಹೋದ. ಥಿಯೋ ಬಾಗಿಲಲ್ಲಿದ್ದ. ಥಿಯೋ ದೃಢಕಾನಾಗಿದ್ದ. ಆದರೆ ಸ್ವಲ್ಪ ಎತ್ತರ ಕಡಿಮೆ. ಹೆಚ್ಚು ಕಡಿಮೆ ವಿನ್ಸೆಂಟ್‌ನನ್ನೇ ಹೋಲುತ್ತಿದ್ದ. ಅವನ ಬೆರಳುಗಳೂ ದುಂಡಗೆ ಕುಳ್ಳಗೆ ಇದ್ದವು. ಕಣ್ಣಲ್ಲಿ ಮುಗ್ಧತೆ ಇಣುಕಿತ್ತು.

"ವಾನ್‌ಗೋ ನೀವು ಬಂದದ್ದು ನನಗೆ ತುಂಬಾ ಗೌರವದ ಸಂಗತಿಯಾಗಿದೆ" ಎಂದು ಮೃದುವಾದ, ಸ್ನೇಹಪೂರಿತ ಧ್ವನಿಯಲ್ಲಿ ಹೇಳಿದ.

ಥಿಯೋ ವಿನ್ಸೆಂಟ್‌ನನ್ನು ಪರಿಚಯಿಸಿದ. ರೂಸೋ ಅವರಿಬ್ಬರಿಗೂ ಕುಳಿತುಕೊಳ್ಳಲು ಹೇಳಿ ಕುರ್ಚಿಗಳನ್ನು ತೋರಿಸಿದ. ರೂಮು ಬಹಳ ವರ್ಣರಂಜಿತವಾಗಿತ್ತು; ಜೀವಂತವಾಗಿತ್ತು. ರೂಸೋ ಬಿಳಿ ಮತ್ತು ಕೆಂಪು ಚೌಕಗಳಿದ್ದ ಪರದೆಗಳನ್ನು ಕಿಟಕಿಳಿಗೆ ಇಳಿಬಿಟ್ಟಿದ್ದ. ಗೋಡೆಗಳ ಮೇಲೆಲ್ಲ ಕಾಡು ಪ್ರಾಣಿಗಳ, ಕಾಡುಗಳ, ನಿಸರ್ಗ ದೃಶ್ಯಗಳ ಕ್ಯಾನ್‌ವಾಸುಗಳಿದ್ದವು.

ಒಂದು ಕಡೆ ಮೂಲೆಯಲ್ಲಿ ತೀರಾ ಹಳೆಯದಾಗಿದ್ದ ವಯಲಿನ್ ಗೋಡೆಗೆ ಒರಗಿ ಇರಿಸಲಾಗಿತ್ತು. ಅದರ ಬಳಿ ನಾಲ್ಕು ಹುಡುಗರು ವಯಲಿನ್‌ಗಳನ್ನು ಹಿಡಿದು, ಹೆದರಿದಂತೆ ನಿಂತಿದ್ದರು. ಮೇಲೆ ಷೆಲ್ಫ್‌ನಲ್ಲಿ ಮನೆಯಲ್ಲಿಯೇ ತಯಾರಿಸಿದ್ದ ಪುಟ್ಟ

ಪುಟ್ಟ ಆಕಾರದ ಬನ್ನುಗಳಿದ್ದವು. ಹಲವು ಕುರ್ಚಿಗಳು, ಬೆಂಚುಗಳು ಕೋಣೆಯ ತುಂಬೆಲ್ಲ ಹರಡಿಕೊಂಡಿದ್ದವು.

"ಬಂದ ಅತಿಥಿಗಳಲ್ಲಿ ನೀವೇ ಮೊದಲು, ವಿಮರ್ಶಕ ಗಿಲೌಮ್ ಪಿಲ್ಲ್ ಒಂದು ಪಾರ್ಟಿಯನ್ನು ಕರೆತರುತ್ತಿದ್ದಾರೆ. ನಿಜಕ್ಕೂ ನನಗೆ ಗೌರವದ ಸಂಗತಿ."

ಹೊರಗಡೆಯಿಂದ ಸದ್ದು ಕೇಳಿಬಂತು. ಗಾಡಿ ಚಕ್ರಗಳು ಉರುಳುವ ಸದ್ದು, ಮಕ್ಕಳ ಗದ್ದಲ, ಅತಿಥಿಗಳು ಬಂದದ್ದನ್ನು ಸೂಚಿಸಿತ್ತು. ರೂಸೋ ಬಾಗಿಲ ಬಳಿ ಹೋಗಿ ಅವರನ್ನು ಸ್ವಾಗತಿಸಿದ. ಮುದ್ದಾದ ಹೆಂಗಸರ ಧ್ವನಿಗಳು ಪಡಸಾಲೆಯನ್ನು ತುಂಬಿದವು:

ಮುಂದೆ ಹೋಗಿ, ಮುಂದೆ ಹೋಗಿ, ಸದ್ದಿಲ್ಲದೆ ಸಾಗಬೇಕು" ಎಂದು ಹೇಳುತ್ತ ಬೆರಳನ್ನು ಬಾಯಿ ಮೇಲೆ ಇಟ್ಟು ಸಾಗಬೇಕೆಂದು ಎಚ್ಚರಿಸಿದ.

ಅಲ್ಲಿದ್ದವರಿಗೆ ಇದು ತಮಾಶೆಯೆನಿಸಿ ಜೋರಾಗಿ ನಗತೊಡಗಿದರು. ರೂಸೋ ಥಿಯೋ ಕಡೆ ತಿರುಗಿ ಮುಗುಳ್ನಕ್ಕ. ವಿನ್ಸೆಂಟ್, ರೂಸೋನ ಕಣ್ಣಲ್ಲಿ ಎಂದೂ ಯಾರಲ್ಲಿಯೂ ಕಾಣದಿದ್ದ ಮುಗ್ಧತೆಯನ್ನು ಗಮನಿಸಿದ. ಕೇಡಿನ ಕೋಪದ ಸೋಂಕೂ ಇರಲಿಲ್ಲವೆಂಬುದನ್ನೂ ಗುರುತಿಸಿದ.

ಹತ್ತು ಹನ್ನೆರಡು ಜನರ ಗುಂಪು ಕೋಣೆಯೊಳಗೆ ನುಗ್ಗಿ ಬಂತು. ಗಂಡಸರು ಸಂಜೆಯ ಉಡುಪಿನಲ್ಲಿದ್ದರು. ಹೆಂಗಸರು ಒಳ್ಳೊಳ್ಳೆ ಬಟ್ಟೆ ಹಾಕಿದ್ದರು. ಫ್ಯಾಷನ್ ಚಪ್ಪಲಿಗಳನ್ನು ಧರಿಸಿದ್ದರು. ಕೈಗಳಿಗೆ ಗ್ಲೌವ್ಸ್ ಹಾಕಿದ್ದರು. ಒಳಗೆ ಬರುತ್ತಿದ್ದಂತೆ ಅವರೊಂದಿಗೆ ಮಾದಕ ಸೆಂಟುಗಳ ವಾಸನೆಯೂ ಬಂತು!

"ನೋಡು ಹೆನ್ರಿ, ನಾವು ಬಂದಿದ್ದೇವೆ. ಆದರೆ ತುಂಬಾ ಹೊತ್ತು ಇರೋಕೆ, ಸಾಧ್ಯವಾಗೊಲ್ಲ. ಪ್ರಿನ್ಸೆಸ್ ದ ಬ್ರೋಗ್ಲಿಯ 'ಬಾಲ್' ಅಟೆಂಡ್ ಮಾಡಬೇಕಿದೆ. ಅಷ್ಟರಲ್ಲಿ ನನ್ನ ಪಾರ್ಟಿಯ ಅತಿಥಿ ಸತ್ಕಾರ ಆಗಬೇಕು" ಎಂದು ತುಂಬಿದ, ಗಂಭೀರವಾದ ದನಿಯಲ್ಲಿ ಗಿಲೋಮ್ ಹೇಳಿದ.

"ಓಹ್ ನಾನು ಈತನನ್ನು ಭೇಟಿಯಾಗಬೇಕು" ಎಂದು ಕೆಂಚು ಕೂದಲಿನ ಹುಡುಗಿಯೊಬ್ಬಳು ನುಗ್ಗಿ ಬಂದಳು.

"ಓ ಈತನೇನಾ? ಇಡೀ ಪ್ಯಾರಿಸ್‌ನಲ್ಲಿ ಈತನನ್ನು ಬಹಳ ದೊಡ್ಡ ಪೈಂಟರ್ ಅಂತ ಕೊಂಡಾಡುತ್ತಿದ್ದಾರೆ!...... ನನ್ನ ಕೈಯನ್ನು ಚುಂಬಿಸುವೆಯಾ ಮಿಸ್ಟರ್ ರೂಸೋ?"

"ಬ್ಲಾಂಷೆ, ಹುಷಾರಾಗಿರು...... ನಿನಗೆ ಗೊತ್ತಿಲ್ಲ ಈ ಆರ್ಟಿಸ್ಟುಗಳು....."

ರೂಸೋ ಮುಗುಳ್ನಕ್ಕು ಅವಳ ಕೈಯನ್ನು ಚುಂಬಿಸಿದ. ವಿನ್ಸೆಂಟ್ ಮೂಲೆ ಸೇರಿದ. ಪಿಲ್ಲ್ ಮತ್ತು ಥಿಯೋ ಬಹಳ ಹೊತ್ತು ಹರಟೆ ಹೊಡೆದರು. ಉಳಿದವರೆಲ್ಲ ಜೊತೆ ಜೊತೆಯಾಗಿ ಕೋಣೆಯ ಉದ್ದಗಲಕ್ಕೂ ಅದು ಇದು ಮಾತಾಡುತ್ತ ಓಡಾಡಿದರು. ರೂಸೋನ ಪರದೆಗಳ ಬಗ್ಗೆ, ಕ್ಯಾನ್‌ವಾಸ್‌ಗಳ ಬಗ್ಗೆ ಟೀಕೆ ಮಾಡುತ್ತ ನಗುತ್ತಿದ್ದರು; ಕೇಕೆ ಹೊಡೆಯುತ್ತಿದ್ದರು. ಇದ್ದಬದ್ದ ವಸ್ತುಗಳ ಮೇಲೆಲ್ಲ ಕೈಯಾಡಿಸಿ ನೋಡುತ್ತಿದ್ದರು.

ಒಂದು ಮೂಲೆಯನ್ನೂ ಬಿಡದೆ ಶೋಧಿಸಿದರು; ತಮಾಶೆ ಮಾಡಿದರು. ಜೋಕ್‌ಗಳನ್ನು ಹಂಚಿಕೊಂಡರು.

"ಲೇಡೀಸ್ ಅಂಡ್ ಜೆಂಟಲ್‌ಮೆನ್ ತಾವು ದಯವಿಟ್ಟು ಕುಳಿತುಕೊಂಡರೆ ನಮ್ಮ ಹುಡುಗರು ಆರ್ಕೆಸ್ಟ್ರಾ ಪ್ರಾರಂಭಿಸುತ್ತಾರೆ. ಅವರು ನನ್ನದೇ ಕಾಂಪೋಸಿಷನ್‌ಗಳಿಂದ ನುಡಿಸುತ್ತಾರೆ. ಹೆದರಿಕೆಯಿಂದ ನಿಂತಿದ್ದ ನಾಲ್ಕು ಹುಡುಗರು ಮ್ಯೂಸಿಕ್‌ಸ್ಟ್ಯಾಂಡ್ ಮುಂದೆ ನಿಂತರು. ತಮ್ಮ ವಯಲಿನ್‌ಗಳನ್ನು ನುಡಿಸಲು ಸಜ್ಜಾದರು. ರೂಸೋ ತನ್ನ ಪಿಯಾನೋ ಮುಂದೆ ಕುಳಿತು ಕಣ್ಣುಮುಚ್ಚಿಕೊಂಡ. ಒಂದು ಕ್ಷಣದ ನಂತರ ಕಣ್ಣು ಬಿಟ್ಟು "ರೆಡಿ....ಶುರುಮಾಡಿ ಎಂದು ಹೇಳಿ ಪಿಯಾನೋ ನುಡಿಸತೊಡಗಿದ. ಅವನ ಕಾಂಪೋಸಿಷನ್ ಬಹಳ ಸರಳ ಮತ್ತು ಜಾನಪದೀಯವಾಗಿತ್ತು. ವಿನ್ಸೆಂಟ್ ಕೇಳಿಸಿಕೊಳ್ಳಲು ಪ್ರಯತ್ನಪಟ್ಟ. ಆದರೆ ಗುಂಪಿನ ಗದ್ದಲದಲ್ಲಿ ಸಂಗೀತ ಎಲ್ಲಿಯೋ ಅಡಗಿ ಹೋಯಿತು. ಕೊನೆಗೆ ಎಲ್ಲರೂ ಸಂತೋಷದಿಂದ ಚಪ್ಪಾಳೆ ಹೊಡೆದರು. ಬ್ಲಾಂಷ್ ರೂಸೋ ನಿಂತಿದ್ದ ಕಡೆ ಬಂದು ಅವನ ಹೆಗಲ ಮೇಲೆ ಕೈಯಿರಿಸಿದಳು.

"ಮಿಸ್ಟರ್ ನೀನು ನುಡಿಸಿದ್ದು ತುಂಬಾ ಚೆನ್ನಾಗಿತ್ತು. ನನ್ನ ಮನಸ್ಸಿಗೆ ತುಂಬ ಹಿಡಿಸಿತು."

"ನನ್ನನ್ನು ಹೊಗಳ್ತಿದ್ದೀರಿ ಮೇಡಂ" ಬ್ಲಾಂಷ್ ನಗುತ್ತಲೇ ಕಿರುಚಿದಳು.

"ಗಿಲೌಮ್ ಈಗ ಹೇಳಿದ್ದು ಕೇಳಿಸಿಕೊಂಡೆಯಾ? ನಾನು ಹೊಗಳ್ತಿದ್ದೀನಿ ಅಂತ ಭಾವಿಸಿದ್ದಾನೆ!"

"ಈಗ ಮತ್ತೊಂದು ಕಾಂಪೋಸಿಷನ್ ನುಡಿಸ್ತೇನೆ" ರೂಸೋ ಹೇಳಿದ.

"ನಿನ್ನ ಕವಿತೆಗಳಲ್ಲೇ ಒಂದನ್ನು ನುಡಿಸು ಹೆನ್ರಿ. ನಿನ್ನ ಹತ್ತಿರ ಎಷ್ಟೊಂದು ಕವಿತೆಗಳು ಇವೆಯಲ್ಲ!"

ಮಗುವಿನ ಮುಗ್ಧತೆಯಲ್ಲಿ ಹಿಗ್ಗಿದ.

"ಆಯ್ತು ಗಿಲೌಮ್. ನೀನು ಇಷ್ಟ ಪಡುವುದಾದರೆ ನನ್ನ ಕವಿತೆಯೇ ಆಗಲಿ."

ರೂಸೋ ಟೇಬಲ್ ಬಳಿ ಹೋದ. ಕವಿತೆಯ ಪುಟಗಳ ಮೇಲೆ ಕೈಯಾಡಿಸಿದ. ಒಂದನ್ನು ಆರಿಸಿಕೊಂಡ. ಪಿಯಾನೋ ಬಳಿ ಹೋಗಿ ಕುಳಿತು, ನುಡಿಸತೊಡಗಿದ. ವಿನ್ಸೆಂಟ್‌ಗೆ ಆ ಮ್ಯೂಸಿಕ್ ಇಷ್ಟವಾಯಿತು. ಕವಿತೆಯ ಕೆಲವು ಸಾಲುಗಳೂ ಬಹಳ ಸುಂದರವೆನಿಸಿದವು. ಆದರೆ ಎರಡೂ ಜೊತೆಗೂಡಿದ್ದು ಯಾಕೋ ಅಷ್ಟಾಗಿ ಪರಿಣಾಮಕಾರಿ ಎನಿಸಲಿಲ್ಲ. ಗುಂಪಿನಲ್ಲಿ ಗದ್ದಲ ಶುರುವಾಯಿತು.

ಮ್ಯೂಸಿಕ್ ಮುಗಿದ ನಂತರ ರೂಸೋ ಅಡಿಗೆ ಮನೆಗೆ ಹೋಗಿ ಕಾಫಿ ಬಟ್ಟಲುಗಳನ್ನು ಹಿಡಿದುಕೊಂಡು ಬಂದು ಅತಿಥಿಗಳಿಗೆ ನೀಡಿದ. ಬನ್ನುಗಳಲ್ಲಿ ಹುದುಗಿಸಿ ಇರಿಸಿದ್ದ ಕಾರವೇ ಬೀಜಗಳನ್ನು ತೆಗೆದು ಒಬ್ಬರ ಬಟ್ಟಲಲ್ಲಿ ಒಬ್ಬರು ಹಾಕಿದರು. ವಿನ್ಸೆಂಟ್ ಮೂಲೆ ಸೇರಿ ತನ್ನ ಪಾಡಿಗೆ ತಾನು ಪೈಪ್ ಸೇದತೊಡಗಿದ.

"ಹೆನ್ರಿ ಬಾ. ನಿನ್ನ ಇತ್ತೀಚಿನ ಯಾವುದಾದರೂ ಪೈಂಟಿಂಗ್ ತೋರಿಸು. ನಾವು ಬಂದಿರುವುದು ಅದಕ್ಕೋಸ್ಕರವೇ. ಅದು ಲೂವ್ರ್‌ಗಾಗಿ ಕೊಂಡುಕೊಳ್ಳೋಕೆ ಮೊದಲೇ ನಾವಿಲ್ಲಿ ನೋಡಬೇಕು."

"ನನ್ನ ಹತ್ತಿರ ತುಂಬಾ ಚೆನ್ನಾಗಿರೋ ಹೊಸ ಹೊಸ ಪೈಂಟಿಂಗ್ಸ್ ಇವೆ. ಬೇಕಾದರೆ ಗೋಡೆ ಮೇಲಿಂದ ತೆಗೆದು ಕೊಡ್ತೀನಿ."

ಎಲ್ಲರೂ ತಾ ಮುಂದು ನಾ ಮುಂದು ಅಂತ ರೂಸೋಗೆ ಕಾಂಪ್ಲಿಮೆಂಟ್ಸ್ ಕೊಡೋಕೆ ಮುಗಿಬಿದ್ದರು."

"ಇದು ಅದ್ಭುತ! ನಿಜವಾಗಿಯೂ ಅಲೌಕಿಕವಾಗಿದೆ!..... ಇದು ನನಗೆ ಬೇಕೇ ಬೇಕು. ಇದಿಲ್ಲದೆ ನನಗೆ ಇರೋಕೇ ಸಾಧ್ಯವಿಲ್ಲ. ಡಿಯರ್ ಮಾಸ್ಟರ್, ಈ ಅಮೂಲ್ಯವೂ ಅಮರವೂ ಆಗಿರುವ ಮಹಾನ್ ಕಲಾಕೃತಿಯ ಬೆಲೆಯೆಷ್ಟು?"

"ಇಪ್ಪತ್ತೈದು ಫ್ರ್ಯಾಂಕ್."

"ಏನು ಇಪ್ಪತ್ತೈದು ಫ್ರಾಂಕ್! ಅಷ್ಟೇನೇ, ಇಂಥ ಮಹಾನ್ ಕೃತಿಯ ಬೆಲೆ! ಇದನ್ನು ನನಗೆ ಅರ್ಪಣೆ ಮಾಡುವಿರಾ?"

"ಅದು ನನಗೆ ಹೆಮ್ಮೆಯ ವಿಷಯ!"

"ನಾನು ನನ್ನ ಭಾವಿ ಹೆಂಡತಿಗೆ ಇಂಥಾದ್ದೊಂದು ತಂದುಕೊಡ್ತೀನೀಂತ ಮಾತು ಕೊಟ್ಟಿದ್ದೆ" ಗಿಲೋಮ್ ಹೇಳಿದ.

"ಹೆನ್ರಿ ಇದು ನನ್ನವಳಿಗೆ. ನೀನು ಮಾಡಿರುವುದರಲ್ಲೆಲ್ಲ, ಇದು ತುಂಬಾನೇ ಚೆನ್ನಾಗಿರಬೇಕಲ್ಲ!"

"ನಿಮಗೆ ಬೇಕಾಗಿರುವುದು ಎಂಥಾದ್ದೆಂದು ನನಗೆ ಗೊತ್ತು ಮಿಸ್ಟರ್ ಪಿಲ್ಲ್."

ಅವನು ಗೋಡೆಯ ಮೇಲಿಂದ ಕ್ಯಾನ್‌ವಾಸನ್ನು ತೆಗೆದ. ಕಾಲ್ಪನಿಕ ಕಾಡಿನೊಳಗಿಂದ ನೋಡುತ್ತಿದ್ದ ಒಂದು ವಿಚಿತ್ರ ಪ್ರಾಣಿಯದಾಗಿತ್ತು ಚಿತ್ರ.

"ಅದೇನಿದು?"

"ಅದು ಸಿಂಹ."

"ಅಲ್ಲ ಅದು ಹುಲಿ."

"ಆಮೇಲೆ ಇವಳು ನಮ್ಮ ಧೋಬಿ ಹೆಂಗಸು. ನನಗೆ ಚೆನ್ನಾಗಿ ಗೊತ್ತಿದೆ."

"ಇದು ಸ್ವಲ್ಪ ದೊಡ್ಡದಾಗಿದೆ. ಇದರ ಬೆಲೆ ಮೂವತ್ತು ಫ್ರ್ಯಾಂಕ್ ಆಗುತ್ತೆ" ಮಧುರವಾಗಿ ಹೇಳಿದ ರೂಸೋ.

"ಪರವಾಗಿಲ್ಲ ಹೆನ್ರಿ ಪರವಾಗಿಲ್ಲ. ಅದಕ್ಕೆ ಆ ಬೆಲೆ ಸಲ್ಲುತ್ತೆ. ಒಂದಲ್ಲ ಒಂದು ದಿನ ನನ್ನ ಮೊಮ್ಮಕ್ಕಳು ಇದನ್ನು ಮೂವತ್ತು ಸಾವಿರ ಪೌಂಡ್‌ಗೆ ಮಾರಿದರೂ ಮಾರಬಹುದು!"

"ನನಗೊಂದು ಬೇಕು! ನನಗೊಂದು ಬೇಕು." ಅಂತ ಹಲವರು ಮುಂದೆ ಬಂದರು.

"ನನ್ನ ಸ್ನೇಹಿತರಿಗೇಂತ ಒಂದು ತೆಗೆದುಕೊಳ್ಳಲೇ ಬೇಕು. ಈ ಅವಧಿಯಲ್ಲಿ ನಡೆದ ಕಲಾಪ್ರದರ್ಶನಗಳಲ್ಲಿ ಇದೇ ಬೆಸ್ಟ್ ಪ್ರದರ್ಶನ!"

"ಬನ್ನಿ ಬನ್ನಿ ಎಲ್ಲ...... ಬಾಲ್‌ಗೆ ತಡವಾಗುತ್ತೆ. ನಿಮ್ಮ ಪೈಂಟಿಂಗ್ಸ್‌ಗಳನ್ನೂ ತೆಗೆದುಕೊಂಡು ಬನ್ನಿ. 'ಪ್ರಿನ್ಸೆಸ್ ದ ಬ್ರೋಗ್ಲಿ'ಯಲ್ಲಿ ಸಂಚಲನ ಉಂಟು ಮಾಡೋಣ. ಇವುಗಳನ್ನು ತೋರಿಸಿ. ತುಂಬಾ ತುಂಬಾ ಚೆನ್ನಾಗಿ ಸಮಯ ಕಳೆಯಿತು. ಇನ್ನೊಮ್ಮೆ ಇದೇ ಥರದ ಪಾರ್ಟಿ ಕೊಡು..... ಬರೋಣವೇ...? ಗುಡ್‌ನೈಟ್" ಎಂದು ಪಿಲ್ಸ್ ಹೇಳಿ ಹೊರಟ.

"ಗುಡ್ ಬೈ ಮಾಸ್ಟರ್" ಎಂದು ಬ್ಲಾಂಷೆ ಅವನ ಮೂಗಿನ ಬಳಿ ಸೆಂಟ್ ತುಂಬಿದ್ದ ಕರವಸ್ತ್ರವನ್ನು ಬೀಸುತ್ತ ಹೇಳಿದಳು.

"ನಿಮ್ಮನ್ನು ಎಂದೂ ಮರೆಯುವುದಿಲ್ಲ. ಸದಾ ನೆನಪಿನಲ್ಲಿ ಇರಿಸಿಕೊಳ್ಳುತ್ತೇನೆ."

"ಅವನ ಪಾಡಿಗೆ ಅವನನ್ನು ಬಿಡಬಾರದೆ ಬ್ಲಾಂಷೆ. ರಾತ್ರಿ ನಿದ್ದೆಯೆಲ್ಲ ಹಾಳುಮಾಡ್ತೀ, ಆ ಬಡಪಾಯೀದು!" ಯಾರೋ ಒಬ್ಬರು ಟೀಕೆ ಮಾಡಿದರು.

ಗಲಾಟೆ ಮಾಡುತ್ತಾ, ಕೀಟಲೆಯ ಜೋಕುಗಳನ್ನು ಹೇಳುತ್ತಾ ಮೆಟ್ಟಿಲಿಳಿದರು. ಅವರು ಇಳಿದರೂ ಪರಿಮಳದ ಮೋಡ ಇನ್ನೂ ತೇಲುತ್ತಿತ್ತು!

ಥಿಯೋ ಮತ್ತು ವಿನ್ಸೆಂಟ್ ಬಾಗಿಲವರೆಗೂ ಹೆಜ್ಜೆ ಹಾಕಿದರು. ರೂಸೋ ಟೇಬಲ್ ಮೇಲಿದ್ದ ನಾಣ್ಯಗಳನ್ನು ದಿಟ್ಟಿಸುತ್ತಿದ್ದ.

"ಥಿಯೋ ನೀನೊಬ್ಬನೇ ಮನೆಗೆ ಹೋಗೋದಕ್ಕೆ ಅಭ್ಯಂತರವಿಲ್ಲಾಂದ್ರೆ, ನಾನು ಇಲ್ಲೇ ಇದ್ದು ಇವರೊಂದಿಗೆ ಮಾತಾಡಿ ಬರ್ತೇನೆ" ಎಂದ.

ಥಿಯೋ ಹೊರಟು ಹೋದ, ವಿನ್ಸೆಂಟ್ ಬಾಗಿಲ ಬಳಿಗೆ ಹೋಗಿದ್ದುದಾಗಲೀ, ಬಾಗಿಲಿಗೆ ಒರಗಿ ನಿಂತಿರುವುದನ್ನಾಗಲೀ ರೂಸೋ ಗಮನಿಸಲಿಲ್ಲ.

"ಎಂಬತ್ತು, ತೊಂಬತ್ತು, ನೂರು, ನೂರೈದು ಫ್ರ್ಯಾಂಕ್‌ಗಳು."

ತಲೆಯೆತ್ತಿ ವಿನ್ಸೆಂಟ್ ನಿಂತಿದ್ದನ್ನು ಗಮನಿಸಿದ. ಮಗುವಿನ ಮುಗ್ಧಭಾವ ಅವನ ಕಣ್ಣಲ್ಲಿ ಮತ್ತೆ ಕಾಣಿಸಿಕೊಂಡಿತು. ಹಣವನ್ನು ಪಕ್ಕಕ್ಕೆ ಸರಿಸಿ, ಗೊಂದಲಗೊಂಡು ನೋಡುತ್ತಾ ನಿಂತ.

"ನಿನ್ನ ಆ ಮುಖವಾಡವನ್ನು ತೆಗೆದಿರಿಸು. ನಾನೂ ಕೂಡಾ ಒಬ್ಬ ರೈತ' ಒಬ್ಬ ಪೈಂಟರ್."

ರೂಸೋ ಟೇಬಲ್ ಬಳಿಯಿಂದ ವಿನ್ಸೆಂಟ್ ನಿಂತಿದ್ದ ಕಡೆಗೆ ಬಂದ. ಅವನು ಕೈಹಿಡಿದ.

"ನಿನ್ನ ಸೋದರ ಡಚ್ ರೈತರ ಚಿತ್ರಗಳನ್ನು ನನಗೆ ತೋರಿಸಿದ್ದಾನೆ. ಅವು ಚೆನ್ನಾಗಿವೆ. ನಾನು ಒಂದಲ್ಲ, ಎರಡಲ್ಲ, ಅನೇಕ ಸಲ ನೋಡಿದ್ದೇನೆ. ಮೆಚ್ಚಿಕೊಂಡಿದ್ದೇನೆ."

"ನಿನ್ನ ಪೈಂಟಿಂಗ್ಸ್ ಅನ್ನೂ ನೋಡಿದ್ದೇನೆ.... ರೂಸೋ, ಅವು(ಮೂರ್ಖವಾಗಿವೆ.) ತಮ್ಮನ್ನು ತಾವೇ ಮರುಳುಗೊಳಿಸಿಕೊಳ್ಳುವ ಶಕ್ತಿ ಹೊಂದಿವೆ. ನಿನ್ನನ್ನೂ ನಾನು ಮೆಚ್ಚಿಕೊಳ್ತೇನೆ."

"ಧನ್ಯವಾದಗಳು! ದಯವಿಟ್ಟು ಕೂತ್ಕೋ. ನನ್ನ ಟೊಬ್ಯಾಕೋನಿಂದ ನಿನ್ನ ಪೈಪ್ ತುಂಬಿಸಿಕೋ. ನೂರೈದು ಫ್ರ್ಯಾಂಕ್‌ಗಳು! ಟೊಬ್ಯಾಕೋ, ಆಹಾರ, ಕ್ಯಾನ್‌ವಾಸ್. – ಎಲ್ಲವನ್ನೂ ಖರೀದಿಸಬಹುದು."

ಟೇಬಲ್‌ನ ಎದುರು ಬದರಾಗಿ ಕುಳಿತು ಸ್ನೇಹದ ಮಾತಾಡುತ್ತಾ ಸ್ಮೋಕ್ ಮಾಡತೊಡಗಿದರು.

"ನಿನ್ನನ್ನು ಜನ ಕ್ರೇಜ಼ಿಮ್ಯಾನ್ ಅಂತ ಕರೀತಿರೋ ವಿಷಯ ನಿನಗೆ ಗೊತ್ತಿರಬಹುದೇನೋ!"

"ಹೌದು ಗೊತ್ತು. ಹಾಗೇ, ಹೇಗ್‌ನಲ್ಲಿ ನಿನ್ನನ್ನೂ ಇದೇ ರೀತಿ ಕರೆಯುವುದನ್ನೂ ಕೇಳಿದ್ದೇನೆ."

"ಹೌದು."

"ಏನು ಬೇಕಾದರೂ ಕರೆದುಕೊಳ್ಳಲಿ. ಒಂದಲ್ಲ ಒಂದು ದಿನ ನನ್ನ ಪೈಂಟಿಂಗ್ಸ್ ಲಕ್ಸಮ್ ಬರ್ಗ್‌ನಲ್ಲಿ ಗೋಡೆಗಳ ಮೇಲೆ ಅಲಂಕೃತವಾಗಿರುತ್ತೆ."

"ನನ್ನದು,.... ಲೂವ್ರ್‌ನಲ್ಲಿರುತ್ತವೆ."

ಇಬ್ಬರೂ ಒಬ್ಬರೊಬ್ಬರ ಕಣ್ಣಲ್ಲಿದ್ದುದನ್ನು ಅರ್ಥ ಮಾಡಿಕೊಂಡು ಜೋರಾಗಿ, ಮನಸ್ಸು ಪೂರ್ತಿಯಾಗಿ ನಕ್ಕರು.

"ಅವರು ಹೇಳೋದು ಸತ್ಯ. ನಾವಿಬ್ಬರೂ ಕ್ರೇಜೀಗಳೇ!"

"ಹೋಗಿ ಒಂದು ಬಾಟಲ್ ಹಾಕೋಣವೇ?" ರೂಸೋ ಕೇಳಿದ.

–೭–

ಮರುಬುಧವಾರ, ಸಂಜೆ ಊಟದ ಹೊತ್ತಿಗೆ ಗಾಗಿನ್ ವಿನ್ಸೆಂಟ್ ಮನೆಯ ಬಾಗಿಲು ತಟ್ಟಿದ.

"ನಿನ್ನ ತಮ್ಮನಿಗೆ ಗ್ಯಾಲರಿಯಲ್ಲಿ ತುಂಬ ಕೆಲಸ ಇದೆಯಂತೆ. ಅದಕ್ಕೆ ನಿನ್ನನ್ನು ಕೆಫೆ ಬಾತಿನೋಲ್‌ಗೆ ಕರೆದುಕೊಂಡು ಬರಲು ನನಗೆ ತಿಳಿಸಿದ್ದಾನೆ..... ಇವು ಚೆನ್ನಾಗಿರೋ ಹಾಗಿದೆ. ನೋಡಬಹುದೇನು?"

"ಖಂಡಿತಾ, ಕೆಲವನ್ನು ಬ್ರಬಾಂಟ್‌ನಲ್ಲಿದ್ದಾಗ ಮಾಡಿದ್ದೆ. ಮತ್ತೆ ಕೆಲವು ಹೇಗ್‌ನಲ್ಲಿದ್ದಾಗಿನವು."

ಗಾಗಿನ್ ಆ ಪಿಕ್ಚರ್ಸ್ ಅನ್ನು ಚೆನ್ನಾಗಿ ಗಮನಿಸಿದ. ಏನೋ ಹೇಳಬೇಕೆಂದು ಪ್ರಯತ್ನಿಸುತ್ತಿದ್ದುದು ಅವನ ಕೈಯ್ಯಿ, ಬಾಯಿ ಸನ್ನೆಗಳಿಂದ ತಿಳಿಯುತ್ತಿತ್ತು. ಆದರೆ ಹೇಳಲು ಸರಿಯಾದ ಮಾತುಗಳು ಸಿಗುತ್ತಿರಲಿಲ್ಲವೆಂಬುದು ಸ್ಪಷ್ಟವಾಗಿ ಗೋಚರವಾಗುತ್ತಿತ್ತು.

"ನಾನು ಕೇಳುವುದಕ್ಕೆ ಕ್ಷಮೆಯಿರಲಿ..... ನಿನಗೆ ಯಾವಾಗಲಾದರೂ ಎಪಿಲೆಪ್ಸಿ ಇತ್ತೇನು?" ಕಡೆಗೂ ಕೇಳಿದ.

ವಿನ್ಸೆಂಟ್ ಯಾವುದೋ ಸೆಕೆಂಡ್‌ಹ್ಯಾಂಡ್‌ನಲ್ಲಿ ಕೊಂಡಿದ್ದ ಕೋಟನ್ನು ಹಾಕಿಕೊಳ್ಳುತ್ತ ಗಾಗಿನ್ ಕಡೆ ದುರುಗುಟ್ಟಿ ನೋಡಿದ.

"ಏನಂದೆ? ನನಗೇನಾಗಿದೆ ಅಂತ ಕೇಳಿದೆ?"

"ಎಪಿಲೆಪ್ಸಿ. ನರಗಳ ದೌರ್ಬಲ್ಯದಿಂದ ಉಂಟಾಗುವ ಸ್ಥಿತಿ."

"ನನಗೆ ತಿಳಿದ ಮಟ್ಟಿಗೆ ಇಲ್ಲ. ಆದರೆ ಯಾಕೆ ಹಾಗೆ ಕೇಳಿದೆ?"

"ಅದೇ ನಿನ್ನ ಪಿಕ್ಚರ್ಸ್!..... ಅವು ಕ್ಯಾನ್‌ವಾಸ್‌ನಿಂದ ಹೊರಗೆ ಒಡೆದುಕೊಂಡು ಬರುವಂತೆ ಕಾಣುತ್ತಿವೆ. ನಿನ್ನ ಕೃತಿಗಳನ್ನು ನೋಡಿದಾಗಲೆಲ್ಲ..... ಇದೇ ಮೊದಲ ಸಲ ಅಲ್ಲ..... ತುಂಬ ಸಲ ನನಗೆ ಹಾಗೆ ಅನಿಸಿದೆ. ಅವುಗಳನ್ನು ನೋಡ್ತಿದ್ದ ಹಾಗೆ ನನಗೆ ನನ್ನ ನರಗಳಲ್ಲಿ ಉದ್ರಿಕ್ತ ಸ್ಥಿತಿ ಉಂಟಾಗುತ್ತೆ. ಎಷ್ಟು ಪ್ರಯತ್ನಿಸಿದರೂ ತಡೆದುಕೊಳ್ಳಲು ಸಾಧ್ಯವಾಗುವುದಿಲ್ಲ. ನಿನ್ನ ಚಿತ್ರಗಳು ಸಿಡಿದು ಆಚೆ ಬರದೆ ಇದ್ದರೂ, ನನಗಂತೂ ಏನೇನೋ ಆಗುತ್ತೆ. ಬಿಡಿಸಿಕೊಂಡು ಹೊರಗೆ ಬರಬೇಕು ಅನಿಸುತ್ತೆ. ಎಲ್ಲಿ ನನಗೆ ತುಂಬ ಡಿಸ್ಟರ್ಬ್ ಆಗುತ್ತೆ ಗೊತ್ತಾ?"

"ಇಲ್ಲ. ಎಲ್ಲಿ?"

"ನನ್ನ ಕರುಳಲ್ಲಿ. ಒಳಗೆಲ್ಲ ಒಂದು ಥರಾ ಹಿಂಸೆಯಾಗುತ್ತೆ. ತುಂಬ ಅಸ್ವಸ್ಥನಾದಂತೆನಿಸುತ್ತದೆ. ತಡೆದುಕೊಳ್ಳೋಕೇ ಆಗದಿರುವಷ್ಟು ಹಿಂಸೆಯಾಗುತ್ತೆ."

"ಹಾಗಾದರೆ ಇವುಗಳನ್ನು ಲಾಕ್ಸಟೀವ್ಸ್ ಆಗಿ ಮಾರುತ್ತೇನೆ. ತಗೊಂಡುಹೋಗಿ ಲ್ಯಾವೇಟರಿನಲ್ಲಿ ತೂಗು ಹಾಕು. ದಿನಕ್ಕೊಂದೆರಡು ಬಾರಿ ಅದನ್ನು ನೋಡಿ ಬರ್ತಿರು."

"ನಿಜವಾಗಲೂ ಹೇಳ್ತಿದ್ದೀನಿ. ನಿನ್ನ ಪಿಕ್ಚರ್ಸ್ ನನ್ನಿಂದ ನೋಡ್ತಿರಲು ಸಾಧ್ಯವೇ ಆಗೊಲ್ಲ. ಒಳಗೆಲ್ಲ ತೊಳಸುವಂತೆ ಮಾಡುತ್ತವೆ."

"ಹೊರಡೋಣವೇ?"

ಅವರಿಬ್ಬರೂ ಬುಲ್‌ವಾಡ್ ಕ್ಲಿಷಿ ಕಡೆಗೆ ಹೊರಟರು.

"ಊಟ ಆಯ್ತೇನು?"

"ನೀನು ಊಟ ಮಾಡಿದೆಯಾ?"

"ಬತ್ತೈಗೆ ಹೋಗೋಣವೇ."

"ಒಳ್ಳೇದಾಯ್ತು ನಡಿ ಹೋಗೋಣ. ದುಡ್ಡೇನಾದರೂ ಇದೆಯೇನು?"

"ಒಂದು ಸೆಂಟೀಮ್ ಕೂಡಾ ಇಲ್ಲ. ನಿನ್ನ ಹತ್ತಿರ?"

"ಮಾಮೂಲಿ! ಒಂದು ಚಿಕ್ಕಾಸೂ ಇಲ್ಲ. ಥಿಯೋ ಬಂದು ಕರ್‍ಕೊಂಡು ಹೋಗ್ತಾನೇಂತ ಕಾದಿದ್ದೆ."

"ಥುತ್. ಇವತ್ತು ನಮಗೆ ಉಪವಾಸವೇ ಗತಿ!"

"ಪರವಾಗಿಲ್ಲ ಬಾ. ಸುಮ್ಮನೆ ಹೋಗಿ ಇವತ್ತಿನ ಮೆನು ಏನೂಂತ ನೋಡೋಣ."

ಅವರಿಬ್ಬರೂ ರೂಲೆಪಿಕ್‌ನಿಂದ ರೂ ದ ಅಬ್ಬೆಸ್ಸೆಸ್ ಕಡೆ ಹೊರಟರು. ಮದಾಂ ಬತ್ತೈಯ ಒಂದು ಮರಕ್ಕೆ ಮೆನು ಕಾರ್ಡ್ ಕಟ್ಟಿದ್ದಳು.

"ಊಂ.... ನನ್ನ ಫೇವರೆಟ್ ಡಿಶ್ ಇಲ್ಲಿದೆ."

"ಏನು, ವೀಲ್! (ಕರುವಿನ ಮೃದು ಮಾಂಸ)"

"ಛಿ! ಅದು ನನಗೆ ಇಷ್ಟ ಇಲ್ಲ.... ಹೋಗಲಿಬಿಡು. ಇವತ್ತು ಊಟಮಾಡಬೇಕಾದ ಅಗತ್ಯವೇ ಇಲ್ಲ."

"ಎಂಥಾ ತಮಾಶೆ!"

ಅವರು ರಸ್ತೆಉಲ್ಲಿ ಅಡ್ಡಾಡಿ ಬಟ್ಟ್‌ನ ಇಳಿಜಾರಿನಲ್ಲಿದ್ದ ತ್ರಿಕೋಣಾಕಾರದ ಪಾರ್ಕಿಗೆ ಬಂದರು.

"ಹಲೋ, ಆ ಕಡೆ ನೋಡು. ಕಲ್ಲು ಬೆಂಚಿನ ಮೇಲೆ ಸೆಜಾನ್ನೆ ಮಲಗಿದ್ದಾನೆ. ಷೂಗಳನ್ನೇ ತಲೆದಿಂಬಾಗಿ ಯಾಕೆ ಇಟ್ಕೊಳ್ತಾನೋ ನನಗಿನ್ನೂ ಅರ್ಥವಾಗಿಲ್ಲ. ಬಾ ಹೋಗಿ ಎಬ್ಬಿಸೋಣ."

ಮಲಗಿದ್ದ ಸೆಝಾನ್ನೆನ ಟ್ರೌಸರ್ ಬೆಲ್ಟ್ ಹಿಡಿದೆಳೆದ. ಕಾಲಿನ ಮೇಲೆ ಎರಡು ಏಟು ಹಾಕಿದ. ನೋವಿನಿಂದ ಚೀರುತ್ತಾ ಗಾಭರಿಯಿಂದ, ಸೆಝಾನ್ನೆ ಎದ್ದು ಕುಳಿತ.

"ಗಾಗಿನ್, ಹಿಂಸಾರೂಪಿ ಶೈತಾನ! ತಮಾಶೆ ಮಾಡೋ ರೀತಿ ಇದೇನಾ? ಹೀಗೇ ಮಾಡು. ಒಂದಲ್ಲ ಒಂದು ದಿನ ನನ್ನ ಕೈಲಿ ತಲೆ ಹೊಡೆಸ್ಕೋತೀಯ."

"ಕಾಲು ಹೊರಗಿಟ್ಟುಕೊಂಡು ಮಲಗಿದ್ದಕ್ಕೆ ಸರಿಯಾದ ಶಿಕ್ಷೆಯಾಯಿತು ಬಿಡು. ಯಾಕೆ ಆ ಕೊಳಕು ಬೂಟುಗಳನ್ನು ತಲೆ ಕೆಳಗೆ ಇಟ್ಕೋತೀಯಾಂತ ಮೊದಲು ಹೇಳು. ಪಿಲ್ಲೋ ಇಲ್ಲದೆ ಮಲಗುವುದಕ್ಕಿಂತ ಕೆಟ್ಟದಾಗಿರುತ್ತೆ ಈ ಬೂಟುಗಳು ತಲೆ ಕೆಳಗಿದ್ದರೆ!"

ಸೆಜಾನ್ನೆ ಪಾದಗಳನ್ನು ಒರೆಸಿಕೊಂಡು ಬೂಟುಗಳನ್ನು ಏರಿಸಿಕೊಂಡ.

"ನಾನು ಅವನ್ನು ಪಿಲ್ಲೋ ಆಗಿ ಬಳಸ್ತಾ ಇಲ್ಲ. ಯಾರೂ ಕದ್ದುಕೊಂಡು ಹೋಗದಿರಲಿ ಅಂತ ಭದ್ರವಾಗಿ ತಲೆ ಕೆಳಗೆ ಇರಿಸಿಕೊಳ್ಳುತ್ತೇನೆ."

ಗಾಗಿನ್ ವಿನ್ಸೆಂಟ್ ಕಡೆ ತಿರುಗಿ, "ನೋಡೋ ಅವನು ಹೇಗೆ ಮಾತಾಡ್ತಿದ್ದಾನೆ. ಯಾರಿಗಾದರೂ ಅವನಾಡುವ ಮಾತಿನ ರೀತಿ ನೋಡಿದರೆ ಹಸಿದ ಆರ್ಟಿಸ್ಟ್ ಅನ್ನತ್ತಾ? ಇವನಪ್ಪನಿಗೆ ಒಂದು ಸ್ವಂತ ಬ್ಯಾಂಕಿದೆ. ಅರ್ಧದಷ್ಟು ರಾಜ್ಯ ಇದೆ.... ಪಾಲ್ ಇವನು ವಿನ್ಸೆಂಟ್ ವಾನ್‌ಗೋ. ಥಿಯೋನ ಅಣ್ಣ.

ಸೆಝಾನ್ನೆ ಮತ್ತು ವಿನ್ಸೆಂಟ್ ಪರಸ್ಪರ ಕೈ ಕುಲುಕಿದರು.

"ಒಂದರ್ಧ ಗಂಟೆ ಮೊದಲು ಸಿಕ್ಕಿದ್ದರೆ ಎಷ್ಟೋ ಚೆನ್ನಾಗಿತ್ತು ಸೆಝಾನ್ನೆ..... ನಮ್ಮ ಜೊತೆ ಊಟಕ್ಕೆ ನೀನೂ ಬರಬಹುದಾಗಿತ್ತು. ಬತ್ತೈನಲ್ಲಿ, ನಾನೆಂದೂ ಅಷ್ಟೊಂದು ರುಚಿಯಾಗಿದ್ದುದನ್ನು ತಿಂದೇ ಇರದಿದ್ದ 'ಡಿಶ್' ಒಂದಿತ್ತು.

"ಅಂದ್ರೆ ಅದು ಅಷ್ಟೊಂದು ರುಚಿಯಾಗಿತ್ತೇನು?" ಸೆಜ಼ಾನ್ನೆ ಕೇಳಿದ.

"ರುಚೀನಾ? ಅಬ್ಬಬ್ಬ! ಹೇಳೋಕೆ ಆಗದಷ್ಟು ಸವಿಯಾಗಿತ್ತು. ಹೌದಲ್ಲ ವಿನ್ಸೆಂಟ್?"

"ಹೌದೌದು! ಅವನು ಹೇಳಿದ್ದೆಲ್ಲ ಸತ್ಯ!"

"ಹಾಗಾದರೆ ನಾನೂ ಅದರ ರುಚಿ ನೋಡಬೇಕು. ಬನ್ನಿ ನಂಜೊತೆ ಕಂಪನಿ ಕೊಡಿ."

'ಇಲ್ಲಪ್ಪ, ಇನ್ನೊಂದು ಸಲ ನನ್ನಿಂದ ತಿನ್ನೋಕೆ ಆಗೋದಿಲ್ಲ ಅನ್ಸತ್ತೆ..... ನಿನಗೆ ವಿನ್ಸೆಂಟ್?"

"ನನಗೂ ಆಗೋದೇ ಇಲ್ಲ. ಆದರೂ ಸೆಜಾನ್ನೆ ಇಷ್ಟೊಂದು ಬಲವಂತ ಮಾಡಿದರೆ......"

"ಗಾಗಿನ್, ಬಾರಯ್ಯ! ನಿನಗೇ ಗೊತ್ತಿದೆ. ನಾನು ಒಬ್ಬನೇ ತಿನ್ನೋಕೆ ಯಾವತ್ತೂ ಇಷ್ಟ ಪಡೊಲ್ಲ. ನಿಮಗೆ 'ವೀಲ್' ಇಷ್ಟ ಇಲ್ಲ ಅನ್ನೋದಾದರೆ, ಬೇರೆ ಏನಾದರೂ ತಗೊಳ್ಳಿ."

"ಸರಿ ಆಯ್ತು. ನಿನ್ನ ಮಾತಿಗೆ ಬೆಲೆ ಕೊಟ್ಟು ಬರಬೇಕಾಗಿದೆ. ಬಾ ವಿನ್ಸೆಂಟ್."

ಅವರು ಮೂವರು ಬತ್ಯೆಯ್ಯೆಗೆ ಬಂದರು.

"ಗುಡ್ ಈವಿನಿಂಗ್ ಜಂಟಲ್‌ಮೆನ್..... ಏನು ಕೊಡಲಿ?"

"ಮೂರು ಪ್ಲೇಟು ಪ್ಲಾಟ್ ದುಜಾರತ್."

"ಆಯ್ತು. ಕುಡಿಯೋಕೆ?"

"ನೀನೇ ಯಾವುದೂಂತ ಹೇಳು ಸೆಜ಼ಾನ್ನೆ, ಯಾಕೆಂದರೆ ಅದರ ಬಗ್ಗೆ ನಿನಗೆ ಚೆನ್ನಾಗಿ ಗೊತ್ತು."

"ಸರಿ. ಸೈಂಟ್ ಎ ಸ್ಟೇಫ್, ಬೋರ್ದೋ, ಸೌತೆರ್ನ್, ಬ್ಯೂನ್....."

"ಪೊಮ್ಮಾರ್ಡ್ ಯಾವಾಗಲಾದರೂ ಟ್ರೈ ಮಾಡಿದ್ದೀಯ? ನನಗನ್ನಿಸುತ್ತೆ, ಡ್ರಿಂಕ್‌ಗಳಲ್ಲಿ ಅದೇ ಬೆಸ್ಟ್" ಗಾಗಿನ್ ಸಂಕೋಚವಿಲ್ಲದೆ ಹೇಳಿದ.

"ಒಂದು ಬಾಟಲ್ ಪೊಮ್ಮಾರ್ಡ್" ಸೆಜ಼ಾನ್ನೆ ವೈಟರ್‌ಗೆ ಆರ್ಡರ್ ಕೊಟ್ಟ.

ಗಾಗಿನ್ ವೀಲ್ ಮತ್ತು ಬಟಾಣಿ ನಿಮಿಷಾರ್ಧದಲ್ಲಿ ಮುಗಿಸಿದ್ದ, ಸೆಜ಼ಾನ್ನೆ ಇನ್ನೂ ಊಟದ ಅರ್ಧದಲ್ಲಿದ್ದ.

"ಅಂದ ಹಾಗೆ ಪಾಲ್, ಝೋಲಾನ 'ಲೂ ವೂವ್ರ್' ಸಾವಿರಾರು ಫ್ರ್ಯಾಂಕ್‌ಗೆ ಮಾರಾಟ ಆಗ್ತಿದೆಯಂತೆ."

ಸೆಜ಼ಾನ್ನೆಗೆ ಒಂದು ಥರ ಬೇಸರವಾಯಿತು. ಮುಖ ಕಿವುಚಿದ. ತಿನ್ನುತ್ತಿದ್ದ ಪ್ಲೇಟನ್ನು ಪಕ್ಕಕ್ಕೆ ತಳ್ಳಿದ. ವಿನ್ಸೆಂಟ್ ಕಡೆ ತಿರುಗಿ,

"ವಿನ್ಸೆಂಟ್ ಆ ಪುಸ್ತಕವನ್ನು ಓದಿದ್ದೀಯೇನು?"

"ಇನ್ನೂ ಇಲ್ಲ. ಈಗಷ್ಟೇ 'ಜರ್ಮಿನಾಲ್' ಅನ್ನು ಮುಗಿಸಿದ್ದೇನೆ."

" 'ಲ ವೂವ್ರ್' ಬಹಳ ಕೆಟ್ಟ ಪುಸ್ತಕ.... ಬರೀ ಸುಳ್ಳಿನ ಕಂತೆ" – ಸೆಝಾನ್ನೆ ಟೀಕಿಸಿದ. "ಸ್ನೇಹದ ಹೆಸರಿನಲ್ಲಿ ನಡೆದ ಭಯಂಕರ ದ್ರೋಹ, ಅದು ಒಬ್ಬ ಪೈಂಟರ್‌ನ ಜೀವನವನ್ನು ಆಧರಿಸಿ ಬರೆದದ್ದು ವಾನ್‌ಗೋ! ನನ್ನ ಮೇಲೇ ಬರೆದಿರೋದು! ಎಮಿಲಿ ಝೋಲಾ ನನ್ನ ಬಹಳ ಹಳೆಯ ಸ್ನೇಹಿತ. ನಾವಿಬ್ಬರೂ ಏಕ್ಸ್ ಪ್ರಾಂತದಲ್ಲಿ ಒಟ್ಟಿಗೆ ಬೆಳೆದವರು. ಒಟ್ಟಿಗೆ ಶಾಲೆ ಓದಿದ್ದು. ನಾನು ಪ್ಯಾರಿಸ್‌ಗೆ ಬಂದದ್ದೂ ಅವನ ಕಾರಣದಿಂದಲೇ. ಎಮಿಲಿ ಮತ್ತು ನಾನು ಸ್ವಂತ ಸೋದರರಂತೆ ಇದ್ದೆವು. ನಮ್ಮ ಪ್ರಾಯದಲ್ಲಿ ನಾವಿಬ್ಬರೂ ಒಳ್ಳೆ ಪೈಂಟರ್ಸ್ ಆಗಬೇಕೆಂದು ಕನಸು ಕಂಡಿದ್ದೆವು. ಈಗ ಅವನು ನನಗೆ ಈ ರೀತಿ ಮಾಡಿದ್ದಾನೆ."

"ಅವನು ನಿನಗೇನು ಮಾಡಿದ್ದಾನೆ?"

"ನನ್ನನ್ನು ಲೇವಡಿ ಮಾಡಿದ; ಹಂಗಿಸಿದ. ಪ್ಯಾರಿಸ್‌ನಲ್ಲೆಲ್ಲ ನನ್ನ ಬಗ್ಗೆ ನಗುವ ಹಾಗೆ ಮಾಡಿದ. ನಾನು ಕಲೆಯ ಬಗ್ಗೆ, ಬೆಳಕಿನ ಬಗ್ಗೆ, ಘನವಸ್ತುಗಳ ಬಗ್ಗೆ ನನ್ನ ಸಿದ್ಧಾಂತಗಳನ್ನು, ನನ್ನ ದೃಷ್ಟಿಯಲ್ಲಿ ವಿವರಿಸಿದೆ. ನನ್ನ ಕಲಾಕ್ರಾಂತಿಯ ವಿಚಾರಗಳನ್ನು ತಿಳಿಸಿದೆ. ಅವನು ಅದನ್ನೆಲ್ಲ ಕೇಳಿಸಿಕೊಂಡ. ಹೇಳೋಕೆ ಪ್ರೋತ್ಸಾಹ ನೀಡಿದ. ಆ ಮೇಲೆ ನನ್ನನ್ನು ಹೊರಗಿಟ್ಟ. ಬೇಕಾದ್ದನ್ನೆಲ್ಲ ನನ್ನಿಂದ ಕೇಳಿ ತಿಳಿದುಕೊಂಡ ಮೇಲೆ ನನ್ನನ್ನು ಪಕ್ಕಕ್ಕೆ ತಳ್ಳಿದ. ಎಲ್ಲರ ಮುಂದೆ ನನ್ನನ್ನೊಬ್ಬ ಮೂರ್ಖನನ್ನಾಗಿ ಮಾಡಿ ನಿಲ್ಲಿಸಿದ."

ವೈನ್ ಹೀರುತ್ತ, ವಿನ್ಸೆಂಟ್‌ನ ಜೊತೆ ಮಾತು ಮುಂದುವರೆಸಿದ. ಅವನ ಕಣ್ಣಲ್ಲಿ ತೀವ್ರವಾದ ದ್ವೇಷವಿತ್ತು.

"ತನ್ನ ಪುಸ್ತಕದಲ್ಲಿ ನಾವು ಮೂರು ಮಂದಿಯನ್ನು ಸೇರಿಸಿದ್ದಾನೆ. ನಾನು, ಬಾಜಿಲ್ಲೆ ಮತ್ತು ಮಾನೆಟ್‌ನ ಸ್ಟುಡಿಯೋ ಗುಡಿಸುತ್ತಿದ್ದ ಬಡಪಾಯಿ ಹುಡುಗ ಒಬ್ಬ. ಹುಡುಗ ಆರ್ಟಿಸ್ಟ್ ಆಗಬೇಕು ಅನ್ನೋ ಆಸೆ ಇಟ್ಕೊಂಡಿದ್ದ. ಆದರೆ ಕಡೆಗೆ ಹತಾಶನಾಗಿ ಆತ್ಮಹತ್ಯೆ ಮಾಡಿಕೊಂಡ. ಝೋಲಾ ನನ್ನನ್ನು ಒಬ್ಬ ದಾರ್ಶನಿಕನನ್ನಾಗಿ ಚಿತ್ರಿಸಿದ್ದಾನೆ. ಇನ್ನೊಬ್ಬ, ದುಷ್ಟ ಭ್ರಮೆಗಳಲ್ಲಿ ಬಿದ್ದು, ತನ್ನನ್ನು ಮಹಾನ್ ಕ್ರಾಂತಿಕಾರಿ ಕಲಾವಿದ ಎಂದು ಭಾವಿಸಿರುತ್ತಾನೆ. ಅವನನ್ನು ದೊಡ್ಡ ಕಲಾವಿದನಂತೆ ಚಿತ್ರಿಸಿದ್ದಾನೆ. ಅವನಿಗೆ ಸಾಂಪ್ರದಾಯಿಕ ಶೈಲಿಯ ಗಂಧವೂ ಇಲ್ಲದ ಕಾರಣ, 'ಕ್ರಾಂತಿ' ಮಾಡುತ್ತಿದ್ದೇನೆಂದು ಘೋಷಿಸಿಕೊಳ್ಳುತ್ತಾನೆ. ಹಾಗೆ ನೋಡಿದರೆ ಸರಿಯಾಗಿ ಪೈಂಟ್ ಮಾಡೋಕೂ ಬರುವುದಿಲ್ಲ. ಆದರೆ ನನ್ನನ್ನು ನನ್ನ ಮಾಸ್ಟರ್ ಪೀಸ್ ಮುಂದೆ, ನೇಣು ಹಾಕಿಕೊಳ್ಳುವ ಹಾಗೆ ಮಾಡಿದ್ದಾನೆ. ಕಡೆಗೆ ನನಗೆ ಅರ್ಥವಾಯಿತು. 'ಜೀನಿಯಸ್' ಅನ್ನೋದನ್ನು ನಾನು ತಪ್ಪಾಗಿ ಗ್ರಹಿಸಿದ್ದೆ ಅಂತ. ನನಗೆ ವಿರುದ್ಧವಾಗಿ ಏಕ್ಸ್‌ನ ಕಲಾವಿದನೊಬ್ಬನನ್ನು ತರುತ್ತಾನೆ. ಅವನೊಬ್ಬ ಸೆಂಟಿಮೆಂಟಲ್ ಶಿಲ್ಪಿ. ಏನೇನೋ ಕೆಲಸಕ್ಕೆ ಬಾರದ ಸಿದ್ಧಾಂತಗಳನ್ನು, ವ್ಯಾಖ್ಯಾನಗಳನ್ನು ಮುಂದಿಡುತ್ತಾನೆ. ಅಂಥವನನ್ನು ಮಹಾನ್ ಕಲಾವಿದ ಎಂಬಂತೆ ತೋರಿಸಿದ್ದಾನೆ."

"ಬಹಳ ತಮಾಷೆಯಾಗಿದೆ" ಗಾಗಿನ್ ಹೇಳಿದ.

ಪೈಂಟಿಂಗ್ ವಿಚಾರದಲ್ಲಿ, ಎಡುವರ್ಡ್ ಮಾನೆಟ್‌ನ ಕ್ರಾಂತಿಯ ವಿಚಾರವನ್ನು ಪ್ರಚಾರಕ್ಕೆ ತಂದವರಲ್ಲಿ ಝೋಲಾನೇ ಮೊದಲಿಗ. ಇಂಪ್ರೆಷನಿಸ್ಟ್ ಪೈಂಟಿಂಗ್‌ಗೆ ಝೋಲಾ ಮಾಡಿದಷ್ಟು ಸಹಾಯ ಮತ್ಯಾರೂ ಮಾಡಿಲ್ಲ."

"ಹೌದು. ಮಾನೆಟ್ ಅಂದ್ರೆ ಅವನಿಗೆ ಬಹಳ ಗೌರವ. ಅವನು ಈ ಅಕಾಡೆಮಿಷಿಯನ್‌ರನ್ನು ಪಕ್ಕಕ್ಕೆ ದೂಡಿದ. ಆದರೆ ನಾನು ಇಂಪ್ರೆಷನಿಸ್ಟರಿಗಿಂತ ಮುಂದೆ ಹೋಗೋಕೆ ಪ್ರಯತ್ನ ಮಾಡಿದರೆ ನನ್ನ ಶತಮೂರ್ಖ, ಪೆದ್ದ ಅಂತ ಕರೀತಾನೆ. ಇನ್ನು ಎಮಿಲಿ ವಿಷಯಕ್ಕೆ ಬರುವುದಾದರೆ ಅವನೇನೂ ಮಹಾಬುದ್ಧಿವಂತನಲ್ಲ, ಅವನು ಅಂಥ ಒಳ್ಳೆ ಗೆಳೆಯನೂ ಅಲ್ಲ. ಅವನ ಮನೆಗೆ ಹೋಗೋದನ್ನ ಬಹಳ ಹಿಂದೆಯೇ ನಿಲ್ಲಿಸಿಬಿಟ್ಟೆ. ಅವನೊಬ್ಬ ಕೆಲಸಕ್ಕೆ ಬಾರದ ಬೂರ್ಜ್ವಾಥರ ಬದುಕಿದ್ದಾನೆ. ಅವನ ವೈಭವ ಏನು! ಬೆಲೆಬಾಳುವ ರತ್ನ ಗಂಬಳಿಗಳು ನೆಲದ ಮೇಲೆ ಹಾಸಿರುತ್ತವೆ. ಬೆಂಕಿಗೂಡಿನ ಮೇಲೆ ಇರುವ ಷೆಲ್ಫ್‌ನಲ್ಲಿ ಹೂದಾನಿಗಳು, ಕೆಲಸದವರು ಕೈಗೆ, ಕಾಲಿಗೆ. ಸುಂದರವಾಗಿ ಕೆತ್ತಿದ ಹಲಗೆ, ಮಾಸ್ಟರ್ ಪೀಸ್‌ಗಳನ್ನು ಸೃಷ್ಟಿಮಾಡಲು! ಮಾನೆಟ್‌ಗೆ ಧೈರ್ಯವಾಗದಿದ್ದ ಮಿಡಲ್‌ಕ್ಲಾಸ್ ಬದುಕನ್ನು ಬದುಕಿದ. ಅವರಿಬ್ಬರೂ ಆಂತರ್ಯದಲ್ಲಿ ಪಕ್ಕಾ ಬೂರ್ಜ್ವಾಗಳು. ಅದಕ್ಕೇ ಅವರಿಬ್ಬರಲ್ಲಿ ಅಷ್ಟೊಂದು ಹೊಂದಾಣಿಕೆ. ನಾನು ಅವನದೇ ಊರಿನಿಂದ ಬಂದವನು, ಸಣ್ಣವನಿದ್ದಾಗಿನಿಂದ ನೋಡಿದವನು. ಬಹುಶಃ ಅವನಿಗೆ, ನನ್ನಿಂದ ಮಹತ್ವದ ಕಲಾಕೃತಿ ಸಾಧ್ಯವಾಗೊಲ್ಲ ಅಂತ ಅನಿಸಿರಬೇಕು."

"ನಿನ್ನ ಪಿಕ್ಚರ್ಸ್‌ಗೆ, ಕೆಲವು ವರ್ಷಗಳ ಹಿಂದೆ 'ಬ್ರೋಷರ್' ಬರೆದ ಅಂತ ಕೇಳಿದ್ದೆ. ಏನಾಯ್ತು ಅದಕ್ಕೆ?"

"ಎಮಿಲಿ, ಅದು ಪ್ರಿಂಟ್‌ಗೆ ಹೋಗುವುದಕ್ಕೆ ಮೊದಲೇ ಹರಿದು ಬಿಸಾಕಿದ ಗಾಗಿನ್."

"ಆದರೆ ಯಾಕೆ?"

"ನಾನು ಅವನ ಹಳೆ ಫ್ರೆಂಡ್ ಆಗಿದ್ದ ಕಾರಣ, ಅವನೇ ನನ್ನ ಪಿಕ್ಚರ್ಸ್‌ಗೆ ಪ್ರಾಯೋಜಕ ಅಂತ ಎಲ್ಲಿ ಜನ ತಿಳಿದು ಬಿಡುತ್ತಾರೋ ಎಂದು ಭಯಪಟ್ಟು ಈ ಕೆಲಸ ಮಾಡಿದ. ಅವನು ಆ ಬ್ರೋಷರ್‌ನ ಪ್ರಿಂಟ್ ಮಾಡಿಬಿಟ್ಟಿದ್ದರೆ, ಇಷ್ಟೊತ್ತಿಗೆ ನಾನು ಎಸ್ಟೇಬ್ಲಿಷ್ ಆಗ್ಬಿಡುತ್ತಿದ್ದೆ. ಸಲೋನ್ ದ ರೆಫ್ಯೂಸೆಯಲ್ಲಿ ಪ್ರದರ್ಶನಕ್ಕಿರುವ ನನ್ನ ಚಿತ್ರಗಳನ್ನು ನೋಡಿ, ನೂರಕ್ಕೆ ತೊಂಬತ್ತೊಂಬತ್ತು ಜನ ನಕ್ಕರು. ಡ್ಯೂರಾಂಡ್-ರೂಯೆಲ್, ಡೇಗಾಸ್, ಮೋನೆಟ್ ಮತ್ತು ನನ್ನ ಗೆಳೆಯ ಗಿಲೋಮ್ ಎಲ್ಲರ ಚಿತ್ರಗಳನ್ನು ಪ್ರದರ್ಶನಕ್ಕೆ ಇರಿಸುತ್ತಾನೆ. ಆದರೆ ನನ್ನದಕ್ಕೆ ಒಂದೆರಡು ಅಂಗುಲ ಜಾಗವನ್ನೂ ಕೊಡೊಲ್ಲ. ನಿನ್ನ ತಮ್ಮ ಮಿಸ್ಟರ್ ವಾನ್‌ಗೋ ಕೂಡ ಪ್ರದರ್ಶಿಸಲು ಹೆದರುತ್ತಾನೆ. ಪ್ಯಾರಿಸ್‌ನಲ್ಲಿ ಒಬ್ಬನೇ ಒಬ್ಬ ಡೀಲರ್ ಪೇರ್ ತಾಂಗೆ ನನ್ನ ಚಿತ್ರಗಳನ್ನು

ಪ್ರದರ್ಶನಕ್ಕೆ ಇಡಲು ಒಪ್ಪಿದ್ದಾನೆ. ಆದರೆ ಪಾಪ! ಉಪವಾಸ ಬಿದ್ದಿರುವ ಕೋಟ್ಯಾಧೀಶ್ವರನಿಗಾಗಿ ಒಂದು ಚೂರು ಬ್ರೆಡ್ಡೂ ಮಾರೋಕೆ ಆಗಿಲ್ಲ."

"ಆ ಬಾಟಲಿನಲ್ಲಿ ಪೊಮ್ಮಾರ್ಡ್ ಒಂದಿಷ್ಟು ಏನಾದರೂ ಉಳಿದಿದೆಯೇ ಸೆಜಾನ್ನೆ" ಗಾಗಿನ್ ವಿಚಾರಿಸಿದ.

"ಜೋಲಾ ಬಗ್ಗೆ ಹೇಳಬೇಕೂಂದ್ರೆ, ಅವನು ವಾಷರ್‌ವುಮೆನ್ ಕೈಲಿ ನಿಜವಾದ ವಾಷರ್‌ವುಮೆನ್ ಥರಾನೇ ಮಾತಾಡಸ್ತಾನೆ. ಆದರೆ ಅಲ್ಲಿಂದ ಹೊರಗೆ ಬಂದಾಗ, ತನ್ನ ಮಾತಿನ ಶೈಲಿಯನ್ನು ಬದಲಾಯಿಸುವುದನ್ನೇ ಮರೆತುಬಿಡ್ತಾನೆ."

"ಸಾಕಪ್ಪಾ ಸಾಕು! ಈ ಪ್ಯಾರಿಸ್‌ನ ಸಹವಾಸವೇ ಬೇಡ. ನನ್ನೂರಿಗೆ ನಾನು ಹೋಗ್ಬಿಡ್ತೇನೆ. ಉಳಿದಷ್ಟೂ ಕಾಲ ಅಲ್ಲಿಯೇ ಇದ್ದು ಬಿಡ್ತೇನೆ. ಕಣಿವೆಯೊಳಗಿಂದ ಎದ್ದು ನಿಂತಿರುವ ಗುಡ್ಡ ಇದೆ. ಸುಂದರವಾದ ಹಳ್ಳಿಯಿದೆ. ಆ ಪ್ರದೇಶದಲ್ಲಿ ಗಾಳಿ, ಬೆಳಕು ಧಾರಾಳವಾಗಿದೆ. ಗುಡ್ಡದ ಬಳಿಯೇ ಒಂದಿಷ್ಟು ಜಾಗ ಮಾರಾಟಕ್ಕಿದೇಂತ ತಿಳಿಯಿತು. ಪೈನ್ ಗಿಡಗಳೆಲ್ಲ ಸಮೃದ್ಧವಾಗಿ ಬೆಳೆದಿವೆಯಂತೆ. ಇನ್ನೇನು ಬೇಕು – ಅಲ್ಲಿಯೇ ಒಂದು ಸ್ಟುಡಿಯೋ ಮಾಡಿಕೊಳ್ತೇನೆ; ಸೇಬಿನ ತೋಟ ಮಾಡಿಕೊಳ್ತೇನೆ. ನನ್ನ ಜಾಗದ ಸುತ್ತ ಒಂದು ಪ್ರಾಕಾರ ನಿರ್ಮಿಸಿ ಬಿಡ್ತೇನೆ. ಸಿಮೆಂಟಿನ ಜೊತೆ ಗಾಜಿನ ಚೂರುಗಳನ್ನು ಗೋಡೆಗೆ ಮೆತ್ತಿಸಿ, ಹೊರ ಪ್ರಪಂಚವನ್ನು ದೂರದಲ್ಲಿ ಇರಿಸಿ ಬಿಡ್ತೇನೆ. ನಾನು ಪ್ರೊವೆನ್ಸ್ ಅನ್ನು ಎಂದಿಗೂ ಬಿಟ್ಟು ಬರೊಲ್ಲ."

"ಓ ಸಂನ್ಯಾಸಿ ಥರ?" ಗಾಗಿನ್ ಗ್ಲಾಸು ಖಾಲಿ ಮಾಡುತ್ತ ಹೇಳಿದ.

"ಹೌದು! ಸಂನ್ಯಾಸಿಯೇ!"

"ಆಹ್ ಏಕ್ಸ್‌ನ ಸಂನ್ಯಾಸಿ! ಎಷ್ಟು ಮೋಹಕವಾದ ಶೀರ್ಷಿಕೆ! ಸದ್ಯಕ್ಕೆ ನಾವು ಬಾಟಿನೋಲ್ ಕೆಫೆಗೆ ಹೋಗೋಣ. ಇಷ್ಟು ಹೊತ್ತಿಗೆ ಎಲ್ಲರೂ ಬಂದಿರ್ತಾರೆ."

–೮–

ಅಂದುಕೊಂಡ ಹಾಗೆ ಎಲ್ಲರೂ ಅಲ್ಲಿದ್ದರು. ಲಾಟ್ರೆಕ್‌ನ ಮುಂದೆ ಸಾಸರ್‌ಗಳು ಒಂದರಮೇಲೊಂದು ಇದ್ದು, ತನ್ನ ಕೈಯೂರುವಷ್ಟು ಎತ್ತರಕ್ಕಿತ್ತು. ಜಾರ್ಜ್ ಸ್ಯುರಾತ್ ತೆಳ್ಳಗೆ ಎತ್ತರಕ್ಕಿದ್ದ ಪೈಂಟರ್ ಆ್ಯಂಕೆಟಿನ್ ಜೊತೆ ಹರಟೆ ಹೊಡೆಯುತ್ತಿದ್ದ. ಇವನು ಇಂಪ್ರೆಷನಿಸ್ಟ್ ಶೈಲಿಯ ಜೊತೆ ಜಪಾನಿ ಶೈಲಿಯನ್ನೂ ಬೆರಸಿ ಪ್ರಯೋಗ ಮಾಡುತ್ತಿದ್ದ. ಹೆನ್ರಿ ರೂಸೋ ಜೇಬಿನಲ್ಲಿ ಇರಿಸಿಕೊಂಡಿದ್ದ ಬನ್ನುಗಳನ್ನು ತೆಗೆದು ಹಾಲು ಬೆರೆತ ಕಾಫಿಯಲ್ಲಿ ಮುಳುಗಿಸಿ ಮೆಲ್ಲುತ್ತಿದ್ದ. ಥಿಯೋ ಪಾರಿಸಿನ ಇಬ್ಬರು ಆಧುನಿಕ ವಿಮರ್ಶಕರ ಜೊತೆ ಉತ್ಸಾಹದಿಂದ ಮಾತಾಡುತ್ತಿದ್ದ.

ಬಾಟಿನೋಲ್ ಮೊದಲಿಗೆ ಬುಲ್‌ವಾರ್ಡ್ ಕ್ಲಿಷಿಯ ಪ್ರವೇಶ ಭಾಗದಲ್ಲಿನ ಉಪನಗರವಾಗಿತ್ತು. ಇಲ್ಲಿಯೇ ಮಾನೆಟ್‌ಗೆ ಪ್ಯಾರಿಸಿನವರಿಂದ ಮೆಚ್ಚುಗೆಯ ಹುಚ್ಚು ಪ್ರಶಂಸೆ ಶುರುವಾದದ್ದು. ಮಾನೆಟ್‌ನ ಸಾವಿನ ನಂತರ, ಸ್ಕೂಲ್ ಆಫ್ ಬಟ್ಟಿನೋಲ್, ವಾರಕ್ಕೆ ಎರಡು ಸಲ ಆ ಜಾಗದಲ್ಲಿ ಪರಸ್ಪರ ಭೇಟಿಯಾಗುವ ಅಭ್ಯಾಸವನ್ನು

ರೂಢಿಸಿಕೊಂಡರು. ಲೆಗ್ರೋಸ್, ಫಾನ್‌ತಿನ್ ಲಾತೂರ್, ಕೂರ್‌ಬೆತ್, ರೆನ್ವಾರ್ ಎಲ್ಲರೂ ಅಲ್ಲಿ ಸೇರಿ ತಮ್ಮ ತಮ್ಮ ಕಲಾ ಸಿದ್ಧಾಂತಗಳ ಬಗ್ಗೆ ಚಿಂತನೆ ಮಾಡಿದರು. ಆದರೆ ಈಗ ಆ ಶಾಲೆಯನ್ನು ಯುವಕರು ವಶಕ್ಕೆ ತೆಗೆದುಕೊಂಡಿದ್ದಾರೆ.

ಸೆಝಾನ್ನೆ ಎಮಿಲಿ ಝೋಲಾನನ್ನು ಗಮನಿಸಿದ. ಜೋಲಾ ದೂರದ ಟೇಬಲ್ ಬಳಿ ಹೋಗಿ ಕುಳಿತ. ಗುಂಪಿನಿಂದ ದೂರವಾಗಿದ್ದು, ಕಾಫಿಗೆ ಆರ್ಡರ್ ಮಾಡಿದ. ಗಾಗಿನ್, ವಿನ್ಸೆಂಟ್‌ನನ್ನು ಜೋಲಾಗೆ ಪರಿಚಯಿಸಿದ. ನಂತರ ತುಲೋಸ್ ಲಾಟ್ರೆಕ್‌ನ ಪಕ್ಕದ ಕುರ್ಚಿಯಲ್ಲಿ ಹೋಗಿ ಕುಳಿತ. ಈಗ ವಿನ್ಸೆಂಟ್ ಮತ್ತು ಝೋಲಾ ಇಬ್ಬರೇ ಉಳಿದರು.

"ಪಾಲ್ ಸೆಝಾನ್ನೆ ಜೊತೆ ನೀನು ಬಂದದ್ದನ್ನು ನೋಡಿದೆ. ವಾನ್‌ಗೋ. ಅವನು ನನ್ನ ಬಗ್ಗೆ ಖಂಡಿತ, ಏನಾದರು ಹೇಳಿರ್ತಾನೇಂತ ನನಗೆ ಗೊತ್ತು.

"ಹೌದು."

"ಏನು ಹೇಳಿದ?"

"ನೀನು ಬರೆದ ಪುಸ್ತಕದಿಂದ ಅವನು ತುಂಬಾ ಬೇಸರಗೊಂಡಿದ್ದಾನೆ."

ಜೋಲಾ ನಿಟ್ಟುಸಿರಿಟ್ಟು, ಟೇಬಲನ್ನು ಸ್ವಲ್ಪ ಹಿಂದಕ್ಕೆ ಸರಿಸಿ, ತನ್ನ ಉಬ್ಬಿದ ಹೊಟ್ಟೆಗೆ ಸ್ವಲ್ಪ ಜಾಗ ಮಾಡಿಕೊಂಡ.

"ಷೆವೆನಿಂಜೆರ್ ಚಿಕಿತ್ಸೆ ಬಗ್ಗೆ ಕೇಳಿದ್ದೀಯಾ?.... ಏನು ಹೇಳ್ತಾರೆ ಜನ ಗೊತ್ತಾ?.... ಊಟದ ಜೊತೆ ಏನೂ ಕುಡೀದೆ ಇದ್ದರೆ. ಮೂರು ತಿಂಗಳಲ್ಲಿ ಮೂರು ಪೌಂಡ್ಸ್ ದೇಹವನ್ನು ಕರಗಿಸಿಕೊಳ್ಳಬಹುದಂತೆ."

"ನಾನು ಅಂಥಾದ್ದನ್ನು ಇಲ್ಲೀವರೆಗೆ ಎಲ್ಲಿಯೂ ಕೇಳಿದ ಹಾಗಿಲ್ಲ."

"ಪಾಲ್ ಸೆಝಾನ್ನೆ ಮೇಲೆ ಆ ಥರಾ ಪುಸ್ತಕ ಬರೆಯೋದು ನನಗೂ ಹಿಂಸೆ ಎನಿಸಿತ್ತು. ಆದರೆ ಅದರಲ್ಲಿನ ಒಂದೊಂದು ಶಬ್ದವೂ ಸತ್ಯ. ನೀನೊಬ್ಬ ಪೈಂಟರ್. ನಿನಗೆ ಬೇಕಾದ ತುಂಬಾ ಪ್ರಿಯನಾದ ಸ್ನೇಹಿತ ನಿನಗೇನೋ ಅಂದ ಅಂತ ನೀನು ಅವನ ಭಾವಚಿತ್ರವನ್ನು ಸುಳ್ಳಾಗಿ ಚಿತ್ರಿಸುತ್ತೀಯ? ಖಂಡಿತ ಮಾಡೊಲ್ಲ. ಪಾಲ್, ತುಂಬ ಒಳ್ಳೆಯವನು. ಅವನು ವರ್ಷಾನುಗಟ್ಲೆ ನನ್ನ ತೀರಾ ತೀರಾ ಹತ್ತಿರದ ಗೆಳೆಯನಾಗಿದ್ದ. ಆದರೆ ಅವನ ಕೆಲಸ ತುಂಬಾ ಕೆಟ್ಟದಾಗಿದೆ. ನನ್ನ ಮನೇಲಿ ಏನಾದರೂ ನಾವು ಸಹಿಸಿಕೊಳ್ತೀವಿ. ಆದರೆ ಫ್ರೆಂಡ್ಸ್ ಬಂದಾಗ? ಅವನು ಮಾಡಿದ ಕ್ಯಾನ್‌ವಾಸುಗಳು ಅವರ ಕಣ್ಣಿಗೆ ಬಿದ್ದು ನಗೆಪಾಟಲಿಗೆ ಗುರಿಯಾಗಬಾರದೂಂತ ಅವನ್ನೆಲ್ಲ ಸುತ್ತಿ ಕಪಾಟಿನಲ್ಲಿ ಇಟ್ಟುಬಿಡ್ತಿದ್ದೆ."

"ಆದರೆ ನೀನು ಹೇಳುವಷ್ಟು ಕೆಟ್ಟದಾಗಿರಲಾರವು ಅಂತ ನನ್ನ ಭಾವನೆ."

"ಕೆಟ್ಟ! ಭಯಂಕರವಾಗಿ ಕೆಟ್ಟದ್ದಾಗಿವೆ. ವಾನ್‌ಗೋ ಅವನ ಕೆಲಸ ನೀನು ನೋಡಿಲ್ಲ ಅಂತ ಕಾಣಿಸುತ್ತೆ! ಐದು ವರ್ಷದ ಮಕ್ಕಳು ಡ್ರಾ ಮಾಡೋಹಾಗೆ

ಮಾಡ್ತಾನೆ. ಖಂಡಿತ ಹೇಳ್ತಿದ್ದೀನಿ. ನಿಜವಾಗಲೂ ಅವನು ಒಂದು ಥರಾ ಹುಚ್ಚುನಾಗಿ ಬಿಟ್ಟಿದ್ದಾನೆ.

"ಗಾಗಿನ್‌ಗೆ ಅವನ ಬಗ್ಗೆ ತುಂಬ ಗೌರವ ಇದೆ."

"ಇದನ್ನು ನೋಡಿದರೆ ನನಗೆ ಸಂಕಟ ಆಗುತ್ತೆ. ಸುಮ್ಮನೆ ಈ ಹುಚ್ಚಿಗೆ ಬಿದ್ದು ಜೀವನಾನೇ ಹಾಳು ಮಾಡಿಕೊಳ್ತಿದ್ದಾನೆ. ನನ್ನ ಕೇಳಿದರೆ ಅವನು ಏಕ್ಸ್‌ಗೆ ಹೋಗಿ ಅವನ ತಂದೆ ಮಾಡುವ ಬ್ಯಾಂಕಿನ ಕೆಲಸ ವಹಿಸಿಕೊಳ್ಳೋದು ಒಳ್ಳೇದು ಅನ್ಸತ್ತೆ. ಜೀವನಕ್ಕೆ ಒಂದು ದಾರೀನಾದರೂ ಆಗುತ್ತೆ..... ಈಗಿರುವ ಸ್ಥಿತೀಲಿ ನೋಡಿದರೆ, ಅವನು ಆತ್ಮಹತ್ಯೆ ಮಾಡಿಕೊಳ್ಳೋದು ಖಂಡಿತ..... ಅದೇ ನಾನು ಲೂ ವೂವ್ರ್ ವಿಚಾರದಲ್ಲಿ ಬರೆದಿದ್ದೀನಲ್ಲ, ಹಾಗೆ' ಆ ಪುಸ್ತಕ ಓದಿದ್ದೀಯ ಮಿಸ್ಟರ್?"

"ಇಲ್ಲ. ಇನ್ನೂ ಇಲ್ಲ. 'ಜರ್ಮಿನಾಲ್' ಕೃತಿಯನ್ನು ಈಗ ತಾನೇ ಮುಗಿಸಿದ್ದೀನಿ."

"ಹಾಗಾದರೆ, ಆದರೆ ಬಗ್ಗೆ ನಿನ್ನ ಅಭಿಪ್ರಾಯ?"

"ಬಾಲ್ಜಾಕ್‌ನ ನಂತರ ಅತ್ಯುತ್ತಮ ಕೃತಿ ಅನ್ನೋದು ನನ್ನ ಅನಿಸಿಕೆ."

"ಹೌದು ಅದು ನನ್ನ ಮಹತ್ವದ ಕೃತಿ. ಮಹಾಕೃತಿ. ಅದು ಒಂದು ಮ್ಯಾಗ್‌ಜಿನ್ "ಎನ್‌ಫಿಲ್‌ತೋಂ'ನಲ್ಲಿಯೂ ಬಂತು. ಅದರಿಂದ ನನಗೆ ಒಳ್ಳೆ ದುಡ್ಡೂ ಬಂತು ಈಗಾಗಲೇ ಆರುಸಾವಿರ ಪ್ರತಿಗಳ ಮಾರಾಟ ಆಗಿದೆ. ಇವತ್ತು ನನ್ನ ಆದಾಯ ಇರುವಷ್ಟು ಹಿಂದೆಂದೂ ಇರಲಿಲ್ಲ. ಮೆಡಾನ್‌ನಲ್ಲಿ ಇರುವ ನನ್ನ ಮನೆಯನ್ನು ಇನ್ನೂ ಸ್ವಲ್ಪ ದೊಡ್ಡದು ಮಾಡ್ತೀನಿ. ಈ ಪುಸ್ತಕ ಫ್ರಾನ್ಸ್‌ನ ಗಣಿ ಪ್ರದೇಶಗಳಲ್ಲಿ ಈಗಾಗಲೇ ನಾಲ್ಕು ಚಳುವಳಿ, ಪ್ರತಿಭಟನೆಗಳನ್ನು ಹುಟ್ಟುಹಾಕಿದೆ. 'ಜರ್ಮಿನಾಲ್' ಒಂದು ಬೃಹತ್ ಕ್ರಾಂತಿಗೆ ದಾರಿ ಮಾಡುತ್ತೆ; 'ಕ್ಯಾಪಿಟಲಿಸಂ'ಗೆ ಗುಡ್‌ಬೈ ಮಾಡಿಸುತ್ತೆ. ಮಿಸ್ಟರ್ ವಿನ್ಸೆಂಟ್, ಎಂಥ ಪೈಂಟಿಂಗ್ಸ್ ಮಾಡ್ತಿ?"

"ಗಾಗಿನ್ ಅದೇನು, ನಿನ್ನ ಮೊದಲ ಹೆಸರು ಹೇಳಿದ್ದು?"

"ವಿನ್ಸೆಂಟ್, ವಿನ್ಸೆಂಟ್ ವಾನ್‌ಗೋ. ಥಿಯೋ ವಾನ್‌ಗೋ ನನ್ನ ಬ್ರದರ್.

ಜೋಲಾ, ಗಾಜಿನ್ ಟೇಬಲ್ ಮೇಲೆ ಗೀಚುತ್ತಿದ್ದ ಪೆನ್ಸಿಲನ್ನು ಪಕ್ಕಕ್ಕೆ ಇರಿಸಿ, ವಿನ್ಸೆಂಟ್‌ನತ್ತ ನೋಡಿದ.

"ವಿಚಿತ್ರ! ವಿಚಿತ್ರವಾಗಿದೆ!!" ಎಂದ.

"ಅದರಲ್ಲೇನು ವಿಚಿತ್ರ?"

"ನಿನ್ನ ಹೆಸರು! ಎಲ್ಲೋ ಕೇಳಿದ್ದೆ ಅನ್ಸತ್ತೆ."

"ಬಹುಶಃ ಥಿಯೋ ಏನಾದರೂ ಹೇಳಿರಬಹುದು."

"ಅವನು ಹೇಳಿದ್ದೇನೋ ಉಂಟು. ಆದರೂ ಬೇರೆ ಎಲ್ಲೋ, ಯಾರೋ?.... ಒಂದ್ನಿಮಿಷ! ಅದು.... ಅದು.... ಅದೇನೂಂದ್ರೆ...... 'ಜರ್ಮಿನಾಲ್'!..... ನೀನು ಎಂದಾದರೂ ಕಲ್ಲಿದ್ದಲ ಗಣಿ ಪ್ರದೇಶಕ್ಕೆ ಹೋಗಿದ್ದೆಯಾ?"

"ಹೌದು!..... ನಾನು ಬೆಲ್ಜಿಯನ್ ಬೋರಿನೇಜ್‌ನಲ್ಲಿ ಎರಡು ವರ್ಷ ಇದ್ದೆ."

"ಬೋರಿನೇಜ್! ಪೆತಿತ್ ವಾಸ್ಮೆ! ಮಾರ್ಕಾಸ್!"

ಜೋಲಾನ ಉಬ್ಬಿದ ಕಣ್ಣುಗಳು ಮತ್ತಷ್ಟು ಅಗಲವಾಗಿ, ಕುತೂಹಲ, ಆಶ್ಚರ್ಯಗಳನ್ನು ಹೊರಚೆಲ್ಲಿದವು.

"ಓಹ್ ಹಾಗಾದರೆ ಕ್ರಿಸ್ತನ ಪುನರವತರಣ!"

ವಿನ್ಸೆಂಟ್ ನಾಚಿದ. "ಹೀಗೆ ಹೇಳುವುದರ ಅರ್ಥ?"

ನಾನು ಬೋರಿನೇಜ್‌ನಲ್ಲಿ ಐದು ವಾರ ಇದ್ದೆ. 'ಜರ್ಮಿನಾಲ್'ಗೆ ವಿಷಯ ಸಂಗ್ರಹಿಸುತ್ತಿದ್ದೆ. ಮುಗ್ಧ ಗಣಿ ಕಾರ್ಮಿಕರು, ಕ್ರಿಸ್ತಧರ್ಮ ಉಪದೇಶಕನಲ್ಲಿ ಕ್ರಿಸ್ತನನ್ನು ಕಂಡಂತೆ ವಿವರಿಸಿದರು.

"ದಯವಿಟ್ಟು ಮೆಲ್ಲಗೆ ಮಾತಾಡು!"

"ನಾಚಿಕೆಯಾಕೆ ವಿನ್ಸೆಂಟ್? ನೀನು ಅಲ್ಲಿ ಮಾಡಿದ ಕೆಲಸ ಸಾಮಾನ್ಯವಾದ್ದಲ್ಲ. ಆದರೆ ನೀನು ಆರಿಸಿಕೊಂಡ ದಾರಿ ತಪ್ಪು. ಧರ್ಮದಿಂದ ಮನುಷ್ಯರನ್ನು ಉದ್ಧಾರ ಮಾಡೋಕೆ ಸಾಧ್ಯ ಇಲ್ಲ. ಮುಂದೆ ಏನೋ ಒಳ್ಳೆದಾಗುತ್ತೆ ಅಂತ, ಜನ ಕಷ್ಟವನ್ನು ಒಪ್ಪಿಕೊಳ್ಳಲು ಸಿದ್ಧರಾಗುತ್ತಾರೆ."

"ನನಗೆ ಬಹಳ ತಡವಾಗಿ ಆ ಸತ್ಯ ಅರ್ಥವಾಯ್ತು."

"ಎರಡು ವರ್ಷ ಬೋರಿನೇಜ್‌ನಲ್ಲಿದ್ದೆ. ನೀನು ನಿನ್ನದಾದ ಎಲ್ಲವನ್ನೂ ಕೊಟ್ಟೆ. ಬಟ್ಟೆ ಬರೆ, ತಿಂಡಿ ತೀರ್ಥ, ಕಡೆಗೆ ಇದ್ದ ಬದ್ದ ಹಣವನ್ನೂ, ಸಾಯುವ ಸ್ಥಿತಿ ತಲುಪುವವರೆಗೆ ಅವರಿಗೆ ಸಹಾಯ ಮಾಡಿದೆ. ಅವರಿಗಾಗಿ ಕೆಲಸ ಮಾಡಿದೆ. ಆದರೆ ನಿನಗೆ ಸಿಕ್ಕಿದ್ದೇನು?..... ಏನೂ ಇಲ್ಲ? ನಿನ್ನನ್ನು ಹುಚ್ಚ ಅಂತ ಕರೆದರು. ಚರ್ಚಿನಿಂದ ಬಹಿಷ್ಕಾರ ಹಾಕಿದರು. ನೀನೇನೋ ಅಲ್ಲಿಂದ ಹೋದೆ. ಆದರೆ ಅಲ್ಲಿನ ಪರಿಸ್ಥಿತಿ? ನೀನು ಹೋಗುವಾಗ ಹೇಗಿತ್ತೋ, ಈಗಲೂ ಹಾಗೇ ಇದೆ."

"ಅವರ ಸ್ಥಿತಿ ಭಯಂಕರ ದಾರುಣವಾಗಿತ್ತು."

"ಆದರೆ ನನ್ನ ಮಾಧ್ಯಮ ಚೆನ್ನಾಗಿ ಕೆಲಸ ಮಾಡುತ್ತೆ. ಬರೆದ ಮಾತು ಕ್ರಾಂತಿಗೆ ದಾರಿ ಮಾಡುತ್ತೆ. ಓದು ಬಲ್ಲ ಪ್ರತಿಯೊಬ್ಬ ಗಣಿಕಾರ್ಮಿಕ, ಫ್ರಾನ್ಸ್, ಬೆಲ್ಜಿಯಮ್ ಎಲ್ಲ ಕಡೆಯಲ್ಲೂ ನನ್ನ ಪುಸ್ತಕ ಓದಿದ್ದಾನೆ. ಅಲ್ಲಿ ಇಡೀ ಪ್ರದೇಶದಲ್ಲಿ ಒಂದು ಕಾಫಿ ಹೌಸಾಗಲೀ, ಕಿತ್ತು ಹೋದ ಗುಡಿಸಲಾಗಲಿ ಇಲ್ಲ. ಜರ್ಮಿನಾಲ್‌ನ ಒಂದು ಒಳ್ಳೆಯ ಪ್ರತಿಯಾಗಲಿ ಇಲ್ಲ. ಆದರೂ ಓದು ಬಾರದಿರುವವರೂ ಕೂಡಾ ಓದಿಸಿ ಕೇಳಿಸಿಕೊಂಡಿದ್ದಾರೆ; ಅದೂ ಒಂದೇ ಸಲ ಅಲ್ಲ,. ಅನೇಕ ಸಲ! ಈಗಾಗಲೇ ನಾಲ್ಕು ಬಾರಿ ಧರಣಿ ಕೂತಿದ್ದಾರೆ. ಮತ್ತೆ ಇನ್ನೂ ಹತ್ತಾರು ಸಲ ಸತ್ಯಾಗ್ರಹ ಮಾಡ್ತಾರೆ. ಇಡೀ ದೇಶ ಎಚ್ಚೆತ್ತಿದೆ. 'ಜರ್ಮಿನಾಲ್' ಹೊಸ ಸಮಾಜವನ್ನು ನಿರ್ಮಿಸುತ್ತೆ, ಆದರೆ ನಿನ್ನ 'ಧರ್ಮ'ಕ್ಕೆ ಆ ಸಾಮರ್ಥ್ಯ ಇಲ್ಲ, ಇದಕ್ಕೆ ಬದಲಾಗಿ ನನಗೆ ಸಿಗುವ ಬಹುಮಾನ ಏನು?"

"ಏನು?"

"ಫ್ರ್ಯಾಂಕ್ಸ್, ಸಾವಿರಗಟ್ಟಲೆ ಫ್ರ್ಯಾಂಕ್ಸ್! ಕುಡಿಯಲು ಕಂಪನಿ ಕೊಡ್ತೀಯ?"

ಲಾಟ್ರೆಕ್ ಟೇಬಲ್ ಬಳಿಯೂ ಚರ್ಚೆ ಬಿಸಿಯೇರಿತು. ಎಲ್ಲರ ಗಮನ ಆ ಕಡೆ ಹರಿಯಿತು.

"ಅದು ಹೇಗೆ, 'ನನ್ನ ವಿಧಾನ' ಸ್ಯುರಾತ್? ಲಾಟ್ರೆಕ್ ಪ್ರಶ್ನಿಸಿದ.

ಸ್ಯುರಾತ್ ಅವನ ಪ್ರಶ್ನೆಯನ್ನು ನಿರ್ಲಕ್ಷಿಸಿದ. ಅವನ ಪ್ರಶಾಂತ ಮುಖ ಮುದ್ರೆ 'ಪುರುಷ ಸೌಂದರ್ಯ'ದ ಪ್ರತೀಕದಂತೆ ಕಾಣಿಸಿತು.

"ಓಗ್ಡನ್ ರೂಡ್ ಅನ್ನೋ ಅಮೆರಿಕನ್ ಬಣ್ಣಗಳ ರಿಫ್ರ್ಯಾಕ್ಷನ್ ಬಗ್ಗೆ ಒಂದು ಪುಸ್ತಕ ಬರೆದಿದ್ದಾನೆ. ಇದು ಹೆಲ್‌ಮೋಲ್ಟ್ಜ ಮತ್ತು ಛೆವರಾಲ್‌ರು ಬರೆದಿದ್ದಕ್ಕಿಂತ ಮುಂದಿದೆ. ಆದರೂ ಸೂಪರ್‌ವಿಲ್ಲ್‌ನಷ್ಟು ಆಕರ್ಷಕವಾಗಿಲ್ಲ. ಅದು ಓದುವುದರಿಂದ ಎಲ್ಲರಿಗೂ ತುಂಬಾ ಉಪಯೋಗ ಆಗುತ್ತೆ."

"ನಾನು ಪೈಂಟಿಂಗ್ ಬಗ್ಗೆ ಪುಸ್ತಕಗಳನ್ನು ಓದುವುದೇ ಇಲ್ಲ. ಅದನ್ನೆಲ್ಲ ಸಾಮಾನ್ಯರಿಗೆ ಬಿಟ್ಟು ಬಿಟ್ಟಿದ್ದೀನಿ."

ಸ್ಯುರಾತ್ ಮೇಲುಕೋಟನ್ನು ಬಿಚ್ಚಿ ಟೈಯನ್ನು ಸರಿ ಮಾಡಿಕೊಂಡ.

"ಬಣ್ಣಗಳ ಬಳಕೆ ಬಗ್ಗೆ ಊಹೆಮಾಡಿಕೊಳ್ಳುತ್ತಾ ಇರುವಷ್ಟು ಕಾಲವೂ ನೀನು ಒಬ್ಬ ಸಾಮಾನ್ಯ."

"ಹಾಗೇನಿಲ್ಲ. ನನಗೆ ನನ್ನ ಸಹಜ ಸ್ಫೂರ್ತಿಯಿಂದ ಗೊತ್ತಾಗುತ್ತೆ."

"ವಿಜ್ಞಾನವೆಂದರೆ ವಿಧಾನ ಜಾರ್ಜ್" – ಗಾಗಿನ್ ಮಧ್ಯೆ ಪ್ರವೇಶಿಸಿದ. ಎಷ್ಟೋ ವರ್ಷಗಳ ಅಭ್ಯಾಸ, ಅನುಭವಗಳಿಂದ ನಾವು ಅನ್ವಯಿಸುವುದು ವೈಜ್ಞಾನಿಕವಾಗಿಯೇ ಇರುತ್ತದೆ. ಬಣ್ಣಗಳ ಬಳಕೆಯಲ್ಲಿ ಒಂದು ಬಗೆಯ ವೈಜ್ಞಾನಿಕ ಖಚಿತತೆ ಇರುತ್ತದೆ.

"ಅಷ್ಟು ಇದ್ದರೆ ಸಾಲದು ಗೆಳೆಯ. ನಮ್ಮ ಕಾಲದ ಟ್ರೆಂಡ್ ಆಬ್ಜೆಕ್ಟೀವ್ ಉತ್ಪಾದನೆ. ಸ್ಫೂರ್ತಿ, ಪ್ರೇರಣೆ, ಪ್ರಯೋಗ ಅವೆಲ್ಲ ಈಗ ಬೇಕಾಗಿಲ್ಲ."

"ನನಗೆ ಈ ಪುಸ್ತಕಗಳನ್ನು ಓದುವುದು ಸಾಧ್ಯವೇ ಇಲ್ಲ."

ರೂಸೋ ಪ್ರತಿಕ್ರಿಯಿಸಿದ. ಅವುಗಳನ್ನು ಓದುವುದೆಂದರೇನೇ ತಲೆನೋವು! ಅದರಿಂದ ಬಿಡಿಸಿಕೊಳ್ಳೋಕೆ ಹೋಗಿ, ದಿನವಿಡೀ ಪೈಂಟ್ ಮಾಡ್ತಾ ಕಳೀಬೇಕಾಗುತ್ತೆ."

ಎಲ್ಲರೂ ನಕ್ಕರು. ಆಂಕೆಟಿನ್ ಜೋಲಾ ಕಡೆ ತಿರುಗಿ ಹೇಳಿದ. ಇವತ್ತಿನ ಸಂಜೆ ಪೇಪರಿನಲ್ಲಿ 'ಜರ್ಮಿನಾಲ್' ಕೃತಿಯ ಬಗ್ಗೆ ಟೀಕೆ! ನೋಡಿದೆಯಾ?"

"ಇಲ್ಲ. ಏನು ಹೇಳಿದ್ದಾರೆ?"

"ಒಬ್ಬ ವಿಮರ್ಶಕ, ಹತ್ತೊಂಬತ್ತನೇ ಶತಮಾನದ ಒಬ್ಬ ದೊಡ್ಡ ಅನೈತಿಕ ಬರಹಗಾರ" ಎಂದು ಬರೆದಿದ್ದಾನೆ.

"ಸರಿ, ಅದು ಮಾಮೂಲಿ ವಿಮರ್ಶೆನೇ! ಅವರಿಗೆ ನನ್ನ ಬಗ್ಗೆ ಟೀಕೆ ಮಾಡೋಕೆ ಬೇರೇನೂ ಸಿಗೋದಿಲ್ವೆ?"

"ಅವರು ಹೇಳಿದ್ದರಲ್ಲಿ ಸತ್ಯವಿದೆ ಜೋಲಾ. ನಿನ್ನ ಪುಸ್ತಕ ಅತಿಲೈಂಗಿಕತೆ, ಅಶ್ಲೀಲತೆಗಳಿಂದ ತುಂಬಿದೆ."

"ಅಶ್ಲೀಲತೆ ಕಣ್ಣಿಗೆ ಬಿದ್ದಾಗ, ನೀನು ನೋಡಲೇ ಬೇಕಾಗುತ್ತೆ."

"ನೀನು ನೋಡಿದಾಗ ಅದು ಅಲ್ಲಿತ್ತೇನು ಲಾಟ್ರೆಕ್?"

"ಬಾಯ್, ಇನ್ನೊಂದು ತಾಂಡ್ ಡ್ರಿಂಕ್ಸ್ ಸರ್ವ್ ಮಾಡು" ಜೋಲ ಆರ್ಡರ್ ಮಾಡಿದ.

"ಅವನು ಹೇಳೋದನ್ನು ಕೇಳಬೇಕಾಗಿದೆ." ಸೆಜಾನ್ನೆ ಆಂಕೆಟಿನ್‌ಗೆ ಹೇಳಿದ. "ನಮಗಾಗಿ ಎಮಿಲಿ ಡ್ರಿಂಕ್ಸ್ ಪಾರ್ಟಿ ಕೊಟ್ಬಾಂದ್ರೆ, ಒಂದು ಗಂಟೆಯಾದರೂ ಅವನ ಲೆಕ್ಚರ್ ಕೇಳಿಸಿಕೊಳ್ಳಲೇ ಬೇಕು."

ವೈಟರ್ ಎಲ್ಲರಿಗೂ ಡ್ರಿಂಕ್ಸ್ ಸರ್ವ್ ಮಾಡಿದ. ಎಲ್ಲರೂ ಪೈಪ್ ಹಚ್ಚಿಕೊಂಡರು. ಮತ್ತಷ್ಟು ಹತ್ತಿರ ಸರಿದು ಕೂತರು. ಗ್ಯಾಸ್ ದೀಪದ ಬೆಳಕು ಸಾಕಷ್ಟು ಪ್ರಕಾಶವನ್ನು ಆ ಕೋಣೆಯಲ್ಲಿ ಹರಡಿತು. ಬೇರೆ ಟೇಬಲ್‌ಗಳ ಕಡೆಯಿಂದ ಮಾತುಗಳು ಪಿಸುದನಿಯಲ್ಲಿ ಕೇಳಿಸುತ್ತಿತ್ತು.

"ನನ್ನ ಪುಸ್ತಕಗಳನ್ನು ಅನೈತಿಕ, ಅಶ್ಲೀಲ ಅಂತಾರೆ, ಹಾಗೇ ನಿನ್ನ ಪೈಂಟಿಂಗ್ಸ್ ಬಗ್ಗೇನೂ ಹೇಳ್ತಾರೆ ಹೆನ್ರಿ. ಜನಕ್ಕೆ, ಕಲಾಜಗತ್ತಿನಲ್ಲಿ ನೈತಿಕ, ಅನೈತಿಕ ಅನ್ನೋ ಪ್ರಶ್ನೆ ಬರುವುದಿಲ್ಲ. ನೈತಿಕ ತೀರ್ಪುಗಳೆಂಬುದಕ್ಕೆ ಕಲೆಯ ಜಗತ್ತಿನಲ್ಲಿ ಅವಕಾಶ ಇಲ್ಲ. ಕಲೆ ನೈತಿಕವಾದ್ದು; ಹಾಗೆಯೇ ಬದುಕೂ ಕೂಡಾ. ನನಗೆ ಅಶ್ಲೀಲ ಪುಸ್ತಕಗಳು; ಅಶ್ಲೀಲ ದೃಶ್ಯಗಳು ಎಂಬುದಿಲ್ಲ. ಚೆನ್ನಾಗಿ ಮೂಡಿವೆಯೇ, ಅಭಿವ್ಯಕ್ತವಾಗಿಯೇ ಎಂಬುದಷ್ಟೇ ನನಗೆ ಬೇಕಾದ್ದು. ತೂಲೋಸ್ ಲಾಟ್ರೆಕ್ ಚಿತ್ರಿಸುವ ಸೂಳೆಯೂ ನನಗೆ ನೈತಿಕವಾದ್ದು ಎನಿಸುತ್ತದೆ. ಯಾಕೆಂದರೆ ಅವನು ಬಾಹ್ಯ ಆಕಾರದ ಮೂಲಕವೇ ಅಂತರಂಗದ ಸೌಂದರ್ಯವನ್ನು ಹೊಮ್ಮಿಸುತ್ತಾನೆ. ಮುಗ್ಧ ಹಳ್ಳಿಗಾಡಿನ ಹುಡುಗಿಯನ್ನು ಬೊಗೋರೋ ಎಷ್ಟು ಸೆಂಟಿಮೆಂಟಲೈಸ್ ಮಾಡಿ ಚಿತ್ರಿಸಿದ್ದಾನೆಂದರೆ, ಅವಳ ಅತಿರೇಕದ ಸೌಂದರ್ಯವೇ ನೋಡಿದವರಲ್ಲಿ ವಾಂತಿ ಬರುವ ಹಾಗೆ ಮಾಡುತ್ತೆ."

"ಹೌದು. ಅದಂತೂ ಸತ್ಯ" ಥಿಯೋ ಹೇಳಿದ.

ಜೋಲಾನನ್ನು ಪೈಂಟರ್ಸ್ ಎಲ್ಲಾ ಗೌರವಿಸುವುದನ್ನು ಗಮನಿಸಿದ. ಜೋಲಾ ಯಶಸ್ಸು ಪಡೆದಿದ್ದಾನೆ ಎಂದಾಗಲೀ, ಹಣವಿದೆ ಎಂದಾಗಲೀ ಅಲ್ಲ. ಯಶಸ್ಸನ್ನು ಸಾಮಾನ್ಯ ಮಾನದಂಡಗಳಿಂದ ಅಳೆಯುವುದನ್ನು ದ್ವೇಷಿಸುತ್ತಾನೆ. ತಿರಸ್ಕರಿಸುತ್ತಾನೆ. ಜೋಲಾ ಕೆಲಸ ಮಾಡುವ ಮಾಧ್ಯಮ ಅವರೆಲ್ಲರಿಗೂ ನಿಗೂಢವೂ ಮತ್ತು ತಮಗೆ ಅಸಾಧ್ಯವೂ ಆಗಿದೆ ಎನ್ನುವ ನಂಬಿಕೆ; ಮೆಚ್ಚುಗೆ. ಅದಕ್ಕೇ ಅವನು ಹೇಳುವ ಪ್ರತಿಯೊಂದು ಮಾತನ್ನೂ ಬಹಳ ಆಸಕ್ತಿಯಿಂದ ಕೇಳಿಸಿಕೊಳ್ಳುತ್ತಾರೆ.

ಸಾಮಾನ್ಯ ಮನುಷ್ಯನ ಬುದ್ಧಿ ದ್ವಂದ್ವಗಳೊಂದಿಗೆ ಆಲೋಚಿಸುತ್ತದೆ. ನೆರಳು–ಬೆಳಕು, ಸಿಹಿ–ಹುಳಿ, ಒಳಿತು–ಕೆಡುಕು ಹೀಗೆ. ಆದರೆ ನಿಸರ್ಗದಲ್ಲಿ ಅಂತಹ

ದ್ವಂದ್ವವೆಂಬುದು ಇಲ್ಲವೇ ಇಲ್ಲ. ನಿಸರ್ಗದಲ್ಲಿ ಪ್ರಪಂಚದಲ್ಲಿ ಒಳಿತು ಎನ್ನುವುದಾಗಲೀ ಕೆಡುಕು ಎನ್ನುವುದಾಗಲೀ ಇಲ್ಲವೇ ಇಲ್ಲ. ಇರುವುದಿಷ್ಟೆ! ಇರುವುದು; ಮಾಡವುದು [ಅಸ್ತಿತ್ವ-ಕ್ರಿಯ] ಒಂದು ಕ್ರಿಯೆಯನ್ನು ವಿವರಿಸಿದರೆ ಬದುಕನ್ನೇ ವಿವರಿಸಿದಂತೆ. ಅದನ್ನು ವಿವರಿಸಿದಾಗ ನಾವು ಹೆಸರುಗಳನ್ನು ಕೊಡುತ್ತೇವೆ. ಅಶ್ಲೀಲತೆ; ದೌರ್ಬಲ್ಯ ಇತ್ಯಾದಿ.... ಇತ್ಯಾದಿ.... ವೈಯಕ್ತಿಕ ಪೂರ್ವಗ್ರಹಗಳ ಜಗತ್ತನ್ನು ಪ್ರವೇಶಿಸಿ ಬಿಡುತ್ತೇವೆ."

"ಆದರೆ ಎಮಿಲಿ, ಸಾಮಾನ್ಯ ಜನ, ಯಾವುದಾದರೂ ಒಂದು ಲೆವೆಲ್‌ನ ನೈತಿಕತೆಯ ಮಾನದಂಡ ಇಲ್ಲದೆ ಹೋದರೆ ಏನು ಮಾಡಬೇಕು?"

"ನೈತಿಕತೆ ಅನ್ನೋದು ಒಂದು ಧರ್ಮ ಇದ್ದ ಹಾಗೆ. ತಮ್ಮ ಬದುಕಿನ ಬಣ್ಣಗಳನ್ನು ಮುಚ್ಚಿಕೊಳ್ಳುವುದಕ್ಕೆ ಸೃಷ್ಟಿಸಿಕೊಂಡ ನಿದ್ರಾವಸ್ಥೆ." ಲಾಟ್ರೆಕ್ ವಿವರಿಸಿದ.

"ನಿನ್ನ ಅನೈತಿಕತೆ ಅರಾಜಕತೆಯಲ್ಲದೆ ಬೇರೇನೂ ಅಲ್ಲ ಜೋಲಾ." ಸ್ಯುರಾತ್ ವಿವರಿಸಿದ. "ಸರ್ವನಾಶಕ್ಕೆಂದೇ ಇರುವ ಶೂನ್ಯವಾದಿ ಅರಾಜಕತೆ. ಇಂಥಾದ್ದನ್ನು ಮೊದಲೂ ಕೂಡಾ ಪ್ರಯೋಗಿಸಲಾಗಿದೆಯಾದರೂ ಅದರಿಂದ ಯಾವುದೇ ಪರಿಣಾಮ ಆಗಿಲ್ಲ."

"ನಿಜ. ಕೆಲವು ನೈತಿಕ ನಿಯಮಗಳು ಇರಬೇಕು.... ಸಮಷ್ಠಿ ಸಮಾಜಕ್ಕಾಗಿ ವೈಯಕ್ತಿಕ ತ್ಯಾಗದ ಅವಶ್ಯಕತೆ ಇದೆ. ನೈತಿಕತೆ ಬಗ್ಗೆ ನನ್ನ ವಿರೋಧವೇನೂ ಇಲ್ಲ. ಆದರೆ ಅಂಥಾದ್ದರಿಂದ ವ್ಯಕ್ತಿಯನ್ನು ತುಳಿಯುವಂತಾಗಬಾರದು. ಮೋಪಸಾಃ ವಿಚಾರದಲ್ಲಿ ಆದಂತೆ. ನೈತಿಕತೆ ಅನ್ನುವುದು ಇವತ್ತು ಫ್ರಾನ್ಸ್‌ನಲ್ಲಿ ಕಾಮಜಗತ್ತಿಗೆ ಮಾತ್ರ ಸೀಮಿತವಾಗಿದೆ. ಜನ ಯಾರ ಜೊತೆ ಮಲಗುವುದಕ್ಕೆ ಇಷ್ಟಪಡುತ್ತಾರೋ, ಮಲಗಲು ಬಿಡಬೇಕು. ಇದಕ್ಕಿಂತ ಮೇಲುದರ್ಜೆಯ ನೈತಿಕತೆ ಏನೆಂದು ನನಗೆ ಗೊತ್ತು."

"ಕೆಲವು ವರ್ಷಗಳ ಹಿಂದೆ ನಾನು ಕೊಟ್ಟ ಡಿನ್ನರ್‌ನ ನೆನಪಾಗುತ್ತದೆ..... ನಾನು ಆಹ್ವಾನಿಸಿದ್ದ ಅತಿಥಿಗಳಲ್ಲಿ ಒಬ್ಬ ಹೇಳಿದ. ಮೈ ಡಿಯರ್ ಫ್ರೆಂಡ್, ನಿನಗೆ ಗೊತ್ತಿರಬಹುದು, ನಿನ್ನ ಪಾರ್ಟಿಗಳಲ್ಲಿ ನಿನ್ನ ಮಿಸ್ಟ್ರೆಸ್ ಇರುವುದರಿಂದ ನನ್ನ ಹೆಂಡತಿಯನ್ನು ಕರೆತರಲು ಆಗುವುದಿಲ್ಲ ಎಂದು. ನಾನು ಹೇಳಿದೆ – 'ಪರವಾಗಿಲ್ಲ, ಅವಳನ್ನು ಸಾಯಂಕಾಲ ಬೇರೆ ಎಲ್ಲಿಗಾದರೂ ಕಳಿಸಿಬಿಡುತ್ತೇನೆ. ಊಟ ಎಲ್ಲ ಆದ ಮೇಲೆ, ನಮ್ಮ ಆ ಮೇಡಂ, ಸಂಜೆಯಲ್ಲಾ ಆಕಳಿಸುತ್ತಾ ಕಳೆದವಳು. ಆಕಳಿಸುವುದನ್ನು ನಿಲ್ಲಿಸಿ, ಗಂಡನಿಗೆ ಹೇಳಿದಳು – ನಾವು ಮಾಡೋಕೆ ಮುಂಚೆ, ತಮಾಶೆಯಾಗಿ ಮಾತಾಡೋಣ'– ಎಂದಳು. ಅವಳ ಗಂಡ – 'ನಾನು ಹೊಟ್ಟೆ ಬಿರಿಯ ಉಂಡಿದ್ದೇನೆ.... ಮಾಡೋದೇನೂ ಬೇಡ. ಬರೀ ಮಾತಾಡೋಣ' ಎಂದ."

"ಹೂಂ! ಅದೆಲ್ಲ ಕತೆ ಹೇಳುತ್ತೆ ಬಿಡು!" ಜೋಲಾ ಗಟ್ಟಿಯಾಗಿ ಹೇಳಿದ. ಎಲ್ಲರೂ ನಗುತ್ತಿದ್ದರು.

"ಸರಿ, ಸರಿ...... ನೀತಿ ನಿಯಮ. ಧರ್ಮಶಾಸ್ತ್ರಗಳನ್ನು ಪಕ್ಕಕ್ಕಿಟ್ಟು, ಕಲೆಯಲ್ಲಿ ಅನೈತಿಕತೆ ವಿಷಯಕ್ಕೆ ಬರೋಣ."

ವಿನ್ಸೆಂಟ್ ಹೇಳಿದ– "ನನ್ನ ಚಿತ್ರಗಳನ್ನು ಯಾರೂ ಅಶ್ಲೀಲ ಅಂತ ಕರೆಯುವುದಿಲ್ಲ. ಆದರೆ ನಾನೊಬ್ಬ ನೀತಿಗೆಟ್ಟವನು, ವಿಕೃತ ಮನಸ್ಸಿನವನು ಅಂತ ಜನ ನನಗೆ ಹಣೆಪಟ್ಟಿ ಕಟ್ಟಿದ್ದಾರೆ."

"ಎದುರು ತಿರುಗ ಬೇಕಿತ್ತು, ವಿನ್ಸೆಂಟ್" ತುಲೋಸ್ ಲಾಟ್ರೆಕ್ ಹೇಳಿದ.

"ಪಬ್ಲಿಕ್‌ಗೆ ಹೊಸ ಅನೈತಿಕತೆಯೆಂದರೆ ಅದೇನೇ." – ಗಾಗಿನ್ ಒಪ್ಪಿದಂತೆ ಹೇಳಿದ. "ಮರ್ಕ್ಯೂರ್‌ದ ಫ್ರಾನ್ಸ್ – ಇವತ್ತು ನಮ್ಮ ಬಗ್ಗೆ ಏನು ಹೇಳಿದೆ ಗೊತ್ತಾ? .... ವಿಕೃತಿ ಪಂಥ."

"ಇದೇ ಆರೋಪ ನನ್ನ ಮೇಲೂ ಇದೆ." – ಜೋಲಾ ಹೇಳಿದ. "ಒಂದು ದಿನ ಒಬ್ಬ ಕೌಂಟೆಸ್ಸ್ ಏನು ಹೇಳಿದಳು ಗೊತ್ತಾ, "ಜೋಲಾ ನಿನ್ನಂತಹ ಅತಿಶಯ ಪ್ರತಿಭಾವಂತರು ಯಾಕೆ ಎಲ್ಲೆಲ್ಲೋ ಹೋಗಿ, ಏನೇನು ಕೊಳಕು ಇದೆ ಅಂತ ನೋಡ್ತೀರ?" ಎಂದು.

ಲಾಟ್ರೆಕ್ ಜೇಬಿನಿಂದ ಪೇಪರ್ ಕಟ್ಟಿಂಗ್ ಒಂದನ್ನು ಹೊರತೆಗೆದ.

"ಕೇಳಿ. ಹೋದ ಸಲ 'ಸಲೋನ್ ದ ಇಂಡಿಪೆಂಡೆಂಟ್ಸ್' ನಲ್ಲಿ ನನ್ನ ಕ್ಯಾನ್‌ವಾಸ್‌ಗಳ ಬಗ್ಗೆ ವಿಮರ್ಶಕನೊಬ್ಬ ಹೀಗೆ ಬರೆದಿದ್ದಾನೆ. "ತುಲೋಸ್ ಲಾಟ್ರೆಕ್, ತೀರಾ ಸಾಮಾನ್ಯವಾದ ನಯಗಾರಿಕೆ, ನಾಜೂಕಿಲ್ಲದ ಚಿತ್ರಗಳು, ಕನಿಷ್ಠ ವರ್ಗದ ವಿಷಯಗಳಲ್ಲಿನ ಆಸಕ್ತಿಯನ್ನು, ಇಲ್ಲಿ ಪ್ರದರ್ಶಿಸಿರುವುದಕ್ಕಾಗಿ ಖಂಡನೀಯನಾಗಿದ್ದಾನೆ. ನಿಜವಾದ ಸೌಂದರ್ಯ ಗ್ರಹಿಕೆಯಾಗಲೀ, ಆಕೃತಿ ಮತ್ತು ಚಲನಶೀಲತೆಯಲ್ಲಿ ಮೋಹಕತೆಯಾಗಲಿ ಕಾಣಿಸುವುದೇ ಇಲ್ಲ. ಒಂದಂತೂ ನಿಜ. ತೀವ್ರವಾದ ಪ್ಯಾಷನ್‌ನಿಂದ ಬ್ರಷ್‌ಗಳನ್ನು ಬಿರುಸಾಗಿ ಬಳಸಿ, ವಿಕಾರ ರೂಪ, ಆಕೃತಿಗಳನ್ನು ಸೃಷ್ಟಿಸುತ್ತಾನೆ. ಆದರೆ ಇಂಥವುಗಳಿಂದ ಬರುವ ಪ್ರಯೋಜನವಾದರೂ ಏನು?"

"ಅವನು ಹೇಳಿದ್ದು ಸರಿ..... ನೀವು ವಕ್ರಬುದ್ಧಿಯವರು ಅಲ್ಲದಿದ್ದರೂ, ತಪ್ಪುದಾರಿಯಲ್ಲಿದ್ದೀರಿ..... ಕಲೆ ಅಮೂರ್ತ ವಸ್ತುಗಳಿಂದ ಮೂಡಬೇಕು. ಅವು ಯಾವುವು ಅನ್ನೋದು ಗೊತ್ತಿರಬೇಕಲ್ಲ! ಬಣ್ಣ, ಬ್ರಷ್ಷ್, ವಿನ್ಯಾಸ. ಛಾಯೆ ಇತ್ಯಾದಿ. ಅದು ಸಮಾಜವನ್ನು ಉದ್ಧಾರ ಮಾಡಬೇಕಿಲ್ಲ; ವಿಕೃತಿಯ ಬಗ್ಗೆ ಶೋಧ ಮಾಡಬೇಕಿಲ್ಲ. ದೈನಂದಿನ ಬದುಕಿನಿಂದ ದೂರವಾಗಿ, ಅದು ಸಂಗೀತದಂತೆ ಇರಬೇಕು."

"ಹೋದ ವರ್ಷ ವಿಕ್ಟರ್ ಹ್ಯೂಗೋ ತೀರಿಕೊಂಡ..... ಅವನ ಜೊತೆಗೇ ಇಡೀ ನಾಗರಿಕತೆಯೂ ಸತ್ತು ಹೋಯಿತು. ಮುದ್ದಾದ ಸುಂದರವಾದ ಅಂಗಭಂಗಿಗಳು, ಪ್ರಣಯ, ಕಲಾತ್ಮಕ ಸುಳ್ಳುಗಳು, ತಪ್ಪಿಸಿಕೊಳ್ಳುವ ಸೂಕ್ಷ್ಮ ಉಪಾಯಗಳು ಎಲ್ಲವೂ ಅವನೊಂದಿಗೆ ಮರೆಯಾದವು. ನನ್ನ ಕೃತಿಗಳು ಹೊಸ ನಾಗರಿಕತೆಯ ಪ್ರತೀಕಗಳು. ಇಪ್ಪತ್ತನೇ ಶತಮಾನದ ಅನೈತಿಕ ನಾಗಕರಿತೆಗೆ ಸಂಕೇತ! ಆದ್ದರಿಂದ ನೀನು ನಿನ್ನ

ಪೈಂಟಿಂಗ್ ಮುಂದುವರೆಸಿಕೊಂಡು ಹೋಗು, ಬೋರ್ಗೋ ಇನ್ನು ತನ್ನ ಹೆಣ ಹೊತ್ತು ಪ್ಯಾರಿಸ್‌ನಲ್ಲೆಲ್ಲಾ ಅಡ್ಡಾಡುತ್ತಿದ್ದಾನೆ. ಎಡುವರ್ಡ್ ಮಾನೆಟ್ ತನ್ನ ಕ್ಯಾನ್‌ವಾಸ್, 'ಪಿಕ್‌ನಿಕ್ ಆನ್ ದಿ ಗ್ರಾಸ್' ಪ್ರದರ್ಶಿಸಿದ ದಿನವೇ ಅವನು ಖಾಯಿಲೆ ಬಿದ್ದ. ಮಾನೆಟ್ 'ಒಲಿಂಪಿಯಾ' ಚಿತ್ರ ಪೂರೈಸಿದ ದಿನವೇ ಪ್ರಾಣಬಿಟ್ಟ, ಈಗ ಮಾನೆಟ್ ಇಲ್ಲ; ಹಾಗೆ ಡೊಮಿಯೆರ್ ಕೂಡ ಇಲ್ಲ. ಆದರೆ ಡೆಗಾಸ್, ಲಾಟ್ರೆಕ್ ಮತ್ತು ಗಾಗಿನ್‌ರೂ ತಮ್ಮ ಕೆಲಸವನ್ನು ಮುಂದುವರೆಸಿದ್ದಾರೆ."

"ಆ ಲಿಸ್ಟ್‌ಗೆ ವಿನ್ಸೆಂಟ್ ಹೆಸರನ್ನೂ ಸೇರಿಸು." ಲಾಟ್ರೆಕ್ ಮಧ್ಯೆ ಬಾಯಿ ಹಾಕಿ ಹೇಳಿದ.

"ಬಹಳ ಸಂತೋಷ. ವಿಕೃತಿ ಪಂಥಕ್ಕೆ ನಿನ್ನನ್ನೂ ನಾಮಿನೇಟ್ ಮಾಡ್ತಿದ್ದೀವಿ. ನಿನಗೆ ಒಪ್ಪಿಗೆ ತಾನೇ?"

"ಅಯ್ಯೋ ದೇವರೆ, ನಾನು ಹುಟ್ಟಿರುವುದೇ ಆ ಪಂಥದೊಳಗೆ!"

"ಫ್ರೆಂಡ್ಸ್ ಹಾಗಾದರೆ ನಾವೆಲ್ಲ ನಮ್ಮದೊಂದು ಮಾನಿಫೆಸ್ಟೋ (ಪ್ರಣಾಳಿಕೆ) ಸಿದ್ಧ ಮಾಡೋಣ!! – ಜೋಲಾ ಹೇಳಿದ.

"ಮೊದಲಿಗೆ, ಸತ್ಯವೆಲ್ಲ ಸುಂದರ, ಆ ಸೌಂದರ್ಯ ಎಷ್ಟೇ ಅಸಹ್ಯವಾಗಿರಲಿ! ಯಾವುದೇ ವಿರೋಧವಿಲ್ಲದೆ ಪ್ರಕೃತಿಗೆ ಸಂಬಂಧಿಸಿದ್ದೆಲ್ಲವನ್ನೂ ನಾವು ಒಪ್ಪಿಕೊಳ್ಳೋಣ. ಸುಂದರ ಸುಳ್ಳಿನಲ್ಲಿ ಕಟು ಸತ್ಯದಲ್ಲಿರುವುದಕ್ಕಿಂತ ಹೆಚ್ಚಿನ ಸೌಂದರ್ಯವಿದೆ; ಕಲೆ ಕಲಾವಿದರ ಪ್ರದರ್ಶನ, ಸಭೆಗಳಲ್ಲಿ ಇರುವುದಕ್ಕಿಂತ ಹೆಚ್ಚಿನ ಕಾವ್ಯ ಜಡತ್ವದಲ್ಲಿದೆ ಎಂದು ನಂಬೋಣ ಮನುಷ್ಯ ಸಂವೇದನೆಗಳಲೆಲ್ಲ ತೀವ್ರವಾದದ್ದು ನೋವು ಆಗಿರುವುದರಿಂದ ಅದನ್ನೇ ಒಳ್ಳೆಯದೆಂದು ಭಾವಿಸೋಣ. ಸೂಳೆಯಿಂದಲೋ, ವಿಟನಿಂದಲೋ ಯಾರಿಂದಲೇ ಆಗಲಿ 'ಸೆಕ್ಸ್' ಚಿತ್ರಿತವಾದಲ್ಲಿ, ಸುಂದರವೆಂದೇ ಭಾವಿಸೋಣ. ವಿಕಾರಕ್ಕಿಂತ ಗುಣ, ಸೌಂದರ್ಯಕ್ಕಿಂತ ನೋವು, ಪ್ಯಾರಿಸ್‌ನ ಸಮಸ್ತ ಸಂಪತ್ತಿಗಿಂತ ಕಟುಸತ್ಯಗಳನ್ನು, ಶ್ರೇಷ್ಠವೆಂದು, ಮಹತ್ವದ್ದೆಂದು ತೀರ್ಮಾನಿಸೋಣ. ನೈತಿಕ ತೀರ್ಮಾನಗಳ ಬಗ್ಗೆ ತಲೆ ಕೆಡಿಸಿಕೊಳ್ಳದೆ ಬದುಕನ್ನು ಅದರ ಸಮಗ್ರತೆಯೊಂದಿಗೆ ಸ್ವೀಕರಿಸೋಣ. ಕೌಂಟೆಸ್ಸ್ ಎಷ್ಟು ದೊಡ್ಡವಳೋ, ಸೂಳೆಯೂ ಅಷ್ಟೇ ದೊಡ್ಡವಳು. ಕ್ಯಾಬಿನೆಟ್ ಮಿನಿಸ್ಟರ್‌ನಷ್ಟೇ ರೈತನೂ ದೊಡ್ಡವನು – ಎಂದು ಭಾವಿಸೋಣ. ಎಲ್ಲರೂ ಯಾವುದೇ ತರತಮತೆಯಿಲ್ಲದೆ ಪ್ರಕೃತಿಯ ಎದುರಿನಲ್ಲಿ, ಅದರ ಧರ್ಮಕ್ಕೆ ತಕ್ಕಂತೆ ವಿಲೀನಗೊಳ್ಳುತ್ತಾರೆ. ಬದುಕಿನ ಸೂತ್ರದಲ್ಲಿ ಹೆಣೆದುಕೊಂಡಿದ್ದಾರೆ!"

"ಚೀಯರ್ಸ್! ಬಾಟಲುಗಳನ್ನೆತ್ತಿ, ಅನೈತಿಕತೆ, ವಿಕೃತಿ ಪಂಥದ ಹೆಸರಿನಲ್ಲಿ ಸೆಲೆಬ್ರೇಟ್ ಮಾಡೋಣ" – ತುಲೋಸ್ ಲಾಟ್ರೆಕ್ ಹುರಿದುಂಬಿಸಿದ.

ಸೆಝಾನ್ನೆ, ಸ್ಯುರಾತ್ ಎಲ್ಲರೂ ಸಂಭ್ರಮದಲ್ಲಿ ಜೊತೆಯಾದರು.

–೯–

ಜೂನ್ ತಿಂಗಳ ಪ್ರಾರಂಭ. ಥಿಯೋ ಮತತು ವಿನ್ಸೆಂಟ್ ರೂ ಲೆಪಿಕ್‌ನ ೫೪ನೇ ನಂಬರ್ ಮನೆಗೆ ಬದಲಾದರು. ಮೊದಲಿದ್ದ ಮನೆಗಿಂತ ಸ್ವಲ್ಪದೂರದಲ್ಲಿತ್ತು. ಅವರ ಮನೆ ೩ನೇ ಮಹಡಿಯಲ್ಲಿತ್ತು. ಮೂರು ರೂಮುಗಳಿದ್ದವು. ಒಂದು ಬಾಕ್ಸ್ ರೂಮು, ಅಡಿಗೆ ಮನೆ ಪಡಸಾಲೆಯಲ್ಲಿ ಥಿಯೋನ ಸುಂದರವಾದ ಹಳೆಯ ಕ್ಯಾಬಿನೆಟ್, ಪ್ಯಾರಿಸ್‌ನ ಕೊರೆಯುವ ಚಳಿಯಿಂದ ಬೆಚ್ಚಗಿಡಲು ಒಂದು ದೊಡ್ಡ ಸ್ಟೊವ್ ಇದ್ದು, ಅಂದವಾಗಿ, ಹಿತವಾಗಿ ಇತ್ತು. ಥಿಯೋಗೆ ಗೃಹಾಲಂಕಾರದಲ್ಲಿ ಬಹಳ ಅಭಿರುಚಿ ಇತ್ತು. ಪ್ರತಿಯೊಂದು ವಸ್ತುವನ್ನೂ ಅಚ್ಚುಕಟ್ಟಾಗಿ, ಯಾವ ಯಾವುದು ಎಲ್ಲೆಲ್ಲಿ ಇರಬೇಕೆಂಬುದನ್ನು ಅರಿತಿದ್ದು, ಅವುಗಳನ್ನು ಸಮರ್ಪಕವಾಗಿ ಓರಣಗೊಳಿಸಿದ್ದ. ಪಡಸಾಲೆಯ ಪಕ್ಕದಲ್ಲಿಯೇ ಅವನ ಬೆಡ್‌ರೂಂ ಇತ್ತು, ವಿನ್ಸೆಂಟ್ ಬಾಕ್ಸ್‌ರೂಮಿನಲ್ಲಿ ಮಲಗುತ್ತಿದ್ದ. ಅದರ ಹಿಂದುಗಡೆಯೇ ಸ್ಟುಡಿಯೋ ಇತ್ತು.

"ಇನ್ನು ಮುಂದೆ ಕೋರ್‌ಮನ್ ಅಕಾಡೆಮಿಗೆ ಹೋಗಬೇಕಾದ ಅವಶ್ಯಕತೆ ಇಲ್ಲ ವಿನ್ಸೆಂಟ್" ಥಿಯೋ ತಿಳಿಸಿದ.

ಅವರಿಬ್ಬರೂ ಪಡಸಾಲೆಯ ಫರ್ನಿಚರನ್ನು ಸರಿ ಜೋಡಿಸುತ್ತಿದ್ದರು.

ಥಿಯೋ ಸೋಫಾವನ್ನು ಒಂದು ಮೂಲೆಗೆ ಸರಿಸಿ ಇಟ್ಟು, ನಿಂತು, ಹೇಗೆ ಕಾಣುವುದೆಂಬುದನ್ನು ಪರೀಕ್ಷಿಸಿದ.

"ನೀನು ಇತ್ತೀಚೆಗೆ ಒಂದಾದರೂ ಕ್ಯಾನ್‌ವಾಸನ್ನು ಪೂರ್ತಿ ಮಾಡಿದಂತೆ ಕಾಣಲಿಲ್ಲವಲ್ಲ, ವಿನ್ಸೆಂಟ್?"

"ಇಲ್ಲ. ಮಾಡಿಲ್ಲ."

"ಯಾಕೆ?"

"ಬಣ್ಣಗಳನ್ನು ಸರಿಯಾಗಿ ಮಿಶ್ರಣ ಮಾಡುವುದನ್ನು ಕಲಿಯುವವರೆಗೆ, ಮಾಡಿಯೂ ಪ್ರಯೋಜನವಿಲ್ಲವಲ್ಲ ಥಿಯೋ?"

"ಸರಿ, ಈ ಕುರ್ಚಿ ನಿನಗೆ ಬೇಕಾಗಿದೆಯೇ ಥಿಯೋ, ಎಲ್ಲಿಗೆ ಬೇಕಿದೆ?.... ಆ ದೀಪದ ಕೆಳಗೋ ಅಥವಾ ಕಿಟಕಿಯ ಪಕ್ಕದಲ್ಲೋ?..... ಈಗ ನನ್ನದೇ ಆದ ಒಂದು ಸ್ವಂತ ಸ್ಟುಡಿಯೋ ಇರುವುದರಿಂದ....."

ಮಾರನೇ ದಿನ ಬೆಳಿಗ್ಗೆ ವಿನ್ಸೆಂಟ್ ಎದ್ದ. ತನ್ನ ಹೊಸ ಸ್ಟುಡಿಯೋದಲ್ಲಿ ಈಸಲ್ ಇರಿಸಿ, ಫ್ರೇಮಿಗೆ ಕ್ಯಾನ್‌ವಾಸನ್ನು ಫಿಕ್ಸ್ ಮಾಡಿದ. ಹೊಸ ಪ್ಯಾಲೆಟ್ ಅನ್ನು ಸರಿ ಮಾಡಿಕೊಂಡ. ಥಿಯೋ ತಂದಿದ್ದ ಬ್ರಷ್‌ಗಳನ್ನೂ ಮೃದುಗೊಳಿಸಿದ. ಥಿಯೋ ಕೂಡಾ ಏಳುವ ಸಮಯವಾದ್ದರಿಂದ ಕಾಫಿ ರೆಡಿಮಾಡಿ, ಕೆಳಗಿದ್ದ ಬೇಕರಿಗೆ ಹೋಗಿ, ತಾಜಾ ಮತ್ತು ಗರಿಗರಿಯಾದ ಬನ್ನು, ಬಿಸ್ಕತ್ತುಗಳನ್ನು ತಂದ. ಬ್ರೇಕ್‌ಫಾಸ್ಟ್‌ಗೆ, ವಿನ್ಸೆಂಟ್ ಆತುರಪಡುತ್ತಿದ್ದುದನ್ನು ಥಿಯೋ ಗಮನಿಸಿದ.

"ಆಯ್ತು ವಿನ್ಸೆಂಟ್, ಮೂರು ತಿಂಗಳಿಂದ ಸ್ಕೂಲ್‌ಗೆ ಹೋಗ್ತಿದ್ದೀಯ. ಅಂದ್ರೆ ಕೋರ್‌ಮನ್ ಸ್ಕೂಲಂತಲ್ಲ, ಪ್ಯಾರಿಸ್ ಸ್ಕೂಲಿಗೆ! ಮುನ್ನೂರು ವರ್ಷಗಳಿಂದ ಯೂರೋಪಿನಲ್ಲಿ ಯಾವ ರೀತಿ ಪೈಂಟಿಂಗ್ ನಡೀತಾ ಇದೆ, ಎಷ್ಟು ಮಹತ್ವದ್ದಾಗಿದೆ ಅನ್ನೋದನ್ನು ನೋಡ್ತಿದ್ದೀಯ. ಈಗ ನೀನು ರೆಡಿಯಾಗಿ...."

ವಿನ್ಸೆಂಟ್ ತಿನ್ನುತ್ತಿದ್ದ ತಿಂಡಿಯ ಪ್ಲೇಟನ್ನು ಪಕ್ಕಕ್ಕೆ ಸರಿಸಿ ಥಟ್ಟನೆ ಎದ್ದು ನಿಂತ.... ಈಗ ಹೊರಟೆ..."

"ಕೂತ್ಕೋ. ಮೊದಲು ತಿಂಡಿ ಮುಗಿಸು. ಬೇಕಾದಷ್ಟು ಟೈಮಿದೆ. ನೀನು ಯಾವುದಕ್ಕೂ ಯೋಚನೆ ಮಾಡಬೇಕಾದ್ದಿಲ್ಲ. ಪೈಂಟ್ಸ್, ಕ್ಯಾನ್‌ವಾಸುಗಳು – ಎಲ್ಲವನ್ನೂ ಹೋಲ್‌ಸೇಲ್‌ನಲ್ಲಿ ತರ್ತೀನಿ. ನೀನು ಬೇಕಾದಷ್ಟು ಕೆಲಸ ಮಾಡಬಹುದು. ಯಾವುದಕ್ಕೂ ಕಡಿಮೆ ಬೀಳೊಲ್ಲ. ಮೊದಲಿಗೆ ನೀನು ನಿನ್ನ ಹಲ್ಲಿನ ಬಗ್ಗೆ ಯೋಚನೆ ಮಾಡು. ಆಪರೇಷನ್ ಮಾಡಿಸಿಕೋ. ಆರೋಗ್ಯ ಬಹಳ ಮುಖ್ಯ. ಆಮೇಲೆ ಬೇಕಾದರೆ ನಿಧಾನವಾಗಿ ಕೆಲಸ ಮಾಡು!"

"ಸುಮ್ಮನೆ ಏನೇನೋ ಮಾತಾಡಬೇಡ ಥಿಯೋ ಎಂದಾದರೂ ನಾನು ಮಾಡಿದ್ದರಲ್ಲಿ ನಿಧಾನವಾಗಲೀ ಗಮನವಿಟ್ಟಿದಿರುವುದಾಗಲೀ ಕಂಡಿದ್ದೀಯ!"

ಥಿಯೋ ರಾತ್ರಿ ಮನೆಗೆ ಬಂದಾಗ, ವಿನ್ಸೆಂಟ್ ಬಹಳ ಭಾವೋದ್ರೇಕ ಸ್ಥಿತಿಯಲ್ಲಿದ್ದ. ಸುಮಾರು ಆರುವರ್ಷಗಳಿಂದ ಒಂದೇ ಸಮನೆ. ಅಸಹನೀಯವಾದ ಪರಿಸ್ಥಿತಿಗಳಲ್ಲಿ ಪೈಂಟಿಂಗ್‌ನಲ್ಲಿ ತೊಡಗಿಸಿಕೊಂಡಿದ್ದ. ಈಗ ಅವನಿಗೆ ಎಲ್ಲ ಅನುಕೂಲಗಳಿವೆ. ಬೇಕಾದ್ದೆಲ್ಲ ಸಿಗುತ್ತಿವೆ. ಒಂದು ಕಾಲಕ್ಕೆ ಎಲ್ಲರಿಂದ ಅವಮಾನಗೊಂಡು ಅವನ ಸೃಜನಶೀಲತೆಯೇ ಜಡಗೊಂಡಿತ್ತು.

ವಿನ್ಸೆಂಟ್‌ನನ್ನು ಸಮಾಧಾನಗೊಳಿಸುವಷ್ಟು ಹೊತ್ತಿಗೆ ಹತ್ತುಗಂಟೆ ದಾಟಿತ್ತು. ಅವರಿಬ್ಬರೂ ಊಟಕ್ಕೆಂದು ಹೊರಗಡೆ ಹೋದರು. ವಿನ್ಸೆಂಟ್‌ನ ಆತ್ಮವಿಶ್ವಾಸ ಸ್ವಲ್ಪ ಮಟ್ಟಿಗೆ ಹಿಂತಿರುಗಿತ್ತು. ಥಿಯೋ ಮಾತ್ರ ಯಾಕೋ ದಣಿದಂತಿದ್ದ; ಮುಖ ಬಿಳುಚಿಕೊಂಡಿತ್ತು.

ಮುಂದಿನ ಕೆಲವು ವಾರಗಳಂತೂ ಇಬ್ಬರಿಗೂ ಯಾತನಾಮಯವಾಗಿತ್ತು. ಪ್ರತಿದಿನ ರಾತ್ರಿ ಥಿಯೋ ಬರುವಷ್ಟು ಹೊತ್ತಿಗೆ ವಿನ್ಸೆಂಟ್ ಎಂಥೆಂಥದೋ ಬಿರುಗಾಳಿ ಎಬ್ಬಿಸಿ ಬಿಡುತ್ತಿದ್ದ. ಅವನ ಬಾಗಿಲಿಗೆ ಹಾಕಿದ್ದ ದೊಡ್ಡ ಬೀಗವೂ ಪ್ರಯೋಜನಕ್ಕೆ ಬಂದಿರಲಿಲ್ಲ. ಬೆಳಗಿನ ಜಾವದ ತನಕ ಥಿಯೋ ಜೊತೆ ವಾದ ಮಾಡುತ್ತಾ ಕೂತಿರುತ್ತಿದ್ದ. ಅಕಸ್ಮಾತ್ ಮಧ್ಯೆಯೇನಾದರೂ ಥಿಯೋ ಕಣ್ಣುಮುಚ್ಚಿದ್ದರೆ, ವಿನ್ಸೆಂಟ್ ಅವನನ್ನು ಬಲವಾಗಿ ಅಲುಗಾಡಿಸಿ ಎಬ್ಬಿಸಿ ಬಿಡುತ್ತಿದ್ದ.

"ಬಾಲಸುಟ್ಟ ಬೆಕ್ಕಿನಂತೆ ಅತ್ತಿಂದಿತ್ತ ಇತ್ತಿಂದತ್ತ ಓಡಾಡುವುದನ್ನು ದಯವಿಟ್ಟು ನಿಲ್ಲಿಸು" ಅಂತ ಥಿಯೋ ವಿನ್ಸೆಂಟ್‌ನನ್ನು ಕೈಮುಗಿದು ಬೇಡಿದ.

"ಆ ದರಿದ್ರ ಅಬಿಸಿಂತ್ ಕುಡಿಯೋದನ್ನು ನಿಲ್ಲಿಸು. ಗಾಗಿನ್ ಅದನ್ನು ಕುಡಿದು ಕುಡಿದು ಪೈಂಟಿಂಗ್ ಕಲೀಲಿಲ್ಲ. ನಾನು ಹೇಳುವುದನ್ನು ಸ್ವಲ್ಪವಾದರೂ ಕೇಳಿಸಿಕೊ ಈಡಿಯಟ್. ನೀನು ನಿನ್ನ ಕ್ಯಾನ್‌ವಾಸನ್ನು ಅರ್ಥಮಾಡಿಕೊಂಡು ಸರಿಯಾಗಿ ವಿಮರ್ಶೆ ಮಾಡಲು ಕಡಿಮೆ ಎಂದರೂ ಒಂದು ವರ್ಷ ಸುಮ್ಮನೆ ಬಿಡಬೇಕು. ಸುಮ್ಮನೆ ಇಲ್ಲದ್ದನ್ನು ತಲೆಗೆ ಹಚ್ಚಿಕೊಂಡು ಹಾಳಾಗುವುದರಿಂದ ಏನನ್ನು ತಾನೇ ನಿನಗೆ ಸಾಧಿಸಲು ಸಾಧ್ಯವಾಗುತ್ತೆ? ನೋಡು ಹೇಗಾಗ್ತಿದ್ದೀಯ! ಈಗಾಗಲೇ ಸಾಯುವಷ್ಟು ಸಣ್ಣಗೆ ಆಗಿಬಿಟ್ಟಿದ್ದೀಯ. ಇಂಥ ಸ್ಥಿತೀಲಿ ನಿನಗೆ ಒಳ್ಳೆಯ ಪೈಂಟಿಂಗ್ ಸಾಧ್ಯವಾಗೊಲ್ಲ."

ಪ್ಯಾರಿಸ್ಸಿಗೆ ಬೇಸಿಗೆ ಬಂತು. ಭಯಂಕರ ಬಿಸಿಲು ಸುರಿಯುತ್ತಿತ್ತು. ತಮತಮಗೆ ಬೇಕಾದ ಕೆಫೆಗಳಲ್ಲಿ ಕುಳಿತು ಪ್ಯಾರಿಸಿಗರು ತಂಪಾದ ಕಾಫಿ ಅಥವಾ ಇತರೆ ಪಾನೀಯಗಳನ್ನು ಸೇವಿಸುತ್ತಿದ್ದರು. ಹೂವಿನ ಮಾರ್ಕೆಟ್ಟಂತೂ ವರ್ಣರಂಜಿತವಾಗಿದ್ದು ಕಣ್ಣಿಗೆ ಹಬ್ಬವೆನಿಸಿತ್ತು. ಸಿಯೆನ್ ನದಿ ನಗರವನ್ನು ಬಳಸಿ ಹರಿಯುತ್ತಿದ್ದು, ಮರಗಿಡಗಳಿಗೆ ತಂಪನ್ನು ನೀಡಿತ್ತು. ಅಲ್ಲಲ್ಲಿ ಹಸಿರಿನ ತೇಪೆಗಳು ಕಾಣಿಸುತ್ತಿದ್ದವು.

ಪ್ರತಿದಿನ ವಿನ್ಸೆಂಟ್ ಈಸಲ್ ಅನ್ನು ಬೆನ್ನಿಗೇರಿಸಿ ತನಗೆ ಬೇಕಾದ ದೃಶ್ಯಗಳ ಬೇಟೆಗೆ ಹೋಗುತ್ತಿದ್ದ. ಇಷ್ಟೊಂದು ಬಿಸಿಲನ್ನು ಅವನೆಂದೂ ನೋಡಿರಲಿಲ್ಲ. ಜೊತೆಗೆ ಇಂಥ ಗಾಢ ಬಣ್ಣಗಳೂ ಅವನಿಗೆ ಅಪರೂಪವಾಗಿದ್ದವು. ಪ್ರತಿದಿನ ಸಾಯಂಕಾಲ ತಪ್ಪದೆ, ಬಿಸಿಬಿಸಿ ಚರ್ಚೆ ಮಾಡಲೆಂದು ಗೂಪಿಲ್ಸ್‌ಗೆ ಭೇಟಿ ನೀಡುತ್ತಿದ್ದ.

ಒಂದು ದಿನ ಗಾಗಿನ್ ಬಣ್ಣಗಳನ್ನು ಮಿಕ್ಸ್‌ಮಾಡುವುದಕ್ಕೆ ಸಹಾಯ ಮಾಡಲೆಂದು ಬಂದಿದ್ದ.

"ಯಾರಿಂದ ಇವುಗಳನ್ನು ಕೊಂಡುಕೊಳ್ತೀಯ?"

"ಗೊತ್ತಿಲ್ಲ. ಥಿಯೋ ಹೋಲ್‌ಸೇಲಲ್ಲಿ ತರ್ತಾನೆ."

"ನೀವು ಪೇರ್ ಟಾಂಗೆಗೆ ಪ್ರೋತ್ಸಾಹ ಕೊಡಬೇಕು. ಎಲ್ಲರಿಗಿಂತ ಕಡಿಮೆ ಬೆಲೆಯಲ್ಲಿ ಬಣ್ಣಗಳನ್ನು ಕೊಡ್ತಾನೆ, ಕಾಸು ಇಲ್ಲದಿದ್ದಾಗ ಸಾಲಾನೂ ಕೊಡ್ತಾನೆ."

"ಯಾರು ಈ ಪೇರ್ ಟಾಂಗೇ? ಇದಕ್ಕೆ ಮೊದಲೂ ಕೂಡಾ ಇವನ ಹೆಸರನ್ನು ಹೇಳಿರೋದನ್ನು ಕೇಳಿದ್ದೀನಿ."

"ಇನ್ನೂ ಅವನನ್ನು ಭೇಟಿ ಮಾಡಿಲ್ಲವೇ? ಕೂಡಲೇ ಹೊರಟು ಭೇಟಿ ಮಾಡು. ಒಂದು ಕ್ಷಣವೂ ತಡಮಾಡೋದು ಬೇಡ. ನೀನು ಮತ್ತು ಪೇರ್, ನಿಮ್ಮಿಬ್ಬರಲ್ಲಿ ಮಾತ್ರವೇ, ಆಂತರ್ಯದಿಂದ ಬರುವ ಕಮ್ಯುನಿಸಂ ಬಗ್ಗೆ ಕೇಳಿದ್ದೀನಿ. ಬೇಗ ಅ ಹ್ಯಾಟ್ ಹಾಕ್ಕೋ. ಅವನಿರುವ ರೂ ಕ್ಲೌಜೆಲ್‌ಗೆ ಹೋಗೋಣ."

ಅವರು ದಾರಿಯಲ್ಲಿ ಸಾಗುವಾಗಲೇ ಗಾಗಿನ್ ಪೇರ್ ಟಾಂಗೆಯ ಕತೆ ಹೇಳಿದ. ಪ್ಯಾರಿಸ್‌ಗೆ ಬರುವ ಮೊದಲು ಎಡುವರ್ಡ್ ಮನೆಯಲ್ಲಿ ಬಣ್ಣಗಳನ್ನು ಅರೆಯುವ ಕೆಲಸ ಮಾಡುತ್ತಿದ್ದ. ನಂತರ ಬಟ್ಸ್‌ನಲ್ಲಿ ಕೇರ್‌ಟೇಕರ್ ಕೆಲಸ ಮಾಡಿದ. ಅವನ ಹೆಂಡತಿ ಮನೆ ನೋಡ್ಕೊಳ್ತಿದ್ಲು. ಇವನು ಬೀದಿಬೀದೀಲಿ ಬಣ್ಣಗಳನ್ನು ಮಾರಾಟ

ಮಾಡ್ತಿದ್ದ. ಅವನು ಪಿಸಾರೋ, ಮೋನೆಟ್, ಸೆಜಾನ್ನೆ, ಎಲ್ಲರನ್ನೂ ಭೇಟಿಯಾಗುತ್ತಿದ್ದ. ಇವನನ್ನು ಕಂಡರೆ ಎಲ್ಲರೂ ಇಷ್ಟಪಡುತ್ತಿದ್ದರು. ನಾವೆಲ್ಲರೂ ಅವನಿಂದಲೇ ಬಣ್ಣಗಳನ್ನು ಕೊಳ್ಳುತ್ತಿದ್ದೆವು. ಸ್ವಲ್ಪ ಹಿಂದಷ್ಟೆ ಕಮ್ಯುನಿಸ್ಟರ ಜೊತೆ ಸೇರಿದ. ಒಂದು ದಿನ ಅವನು ಸೆಂಟ್ರಿ ಕೆಲಸದಲ್ಲಿದ್ದಾಗ ಯಾವುದೋ ಕನಸಿನಲ್ಲಿ ಮುಳುಗಿದ್ದ. ವರ್ಸೈಯ್ಯೆಯಿಂದ ಬಂದಿದ್ದ ಗುಂಪೊಂದು ಅವನ ಮೇಲೆ ಆಕ್ರಮಣ ಮಾಡಿತು. ಅವನ ಕೈಲಿ ಒಬ್ಬನನ್ನೂ ಗುಂಡಿಟ್ಟು ಕೊಲ್ಲಲು ಸಾಧ್ಯವಾಗಲಿಲ್ಲ. ಕೈಯ್ಯಲ್ಲಿದ್ದ ಬಂದೂಕನ್ನು ಬಿಸಾಡಿದ. ಎರಡು ವರ್ಷ ಶಿಕ್ಷೆ ಅನುಭವಿಸಿದ. ಆಮೇಲೆ ನಾವು ಹೋಗಿ ಬಿಡಿಸಿಕೊಂಡು ಬಂದೆವು.

ಒಂದಷ್ಟು ಹಣ ಕೂಡಿಟ್ಟು ಈ ಸಣ್ಣ ಅಂಗಡಿ ತೆಗೆದಿದ್ದಾನೆ. ಲಾಟ್ರೆಕ್ ಅವನ ಅಂಗಡಿ ಮುಂಭಾಗಕ್ಕೆ ನೀಲಿ ಪೈಂಟ್ ಹಾಕಿಕೊಟ್ಟ. ಸೆಜಾನ್ನೆಯ ಕ್ಯಾನ್‌ವಾಸನ್ನು ಪ್ರದರ್ಶನಕ್ಕೆ ಇರಿಸಿದ ಮೊದಲ ವ್ಯಕ್ತಿಯೆಂದರೆ ಇವನೇ. ಅಂದಿನಿಂದ ನಾವು ಮಾಡಿದ್ದನ್ನೆಲ್ಲ ಅವನಲ್ಲಿ ಇರಿಸಿರ್ತಿವಿ. ಕ್ಯಾನ್‌ವಾಸ್‌ಗಳನ್ನು ಅವನೆಂದೂ ಮಾರೋದಂತೂ ಇಲ್ಲ. ಆದರೂ ನಾವು ಅಲ್ಲಿಯೇ ಇರಿಸಿರ್ತಿವಿ. ಅವನು ಬಹಳ ದೊಡ್ಡ ಕಲಾಪ್ರೇಮಿ. ಆದರೆ ಬಡವ. ಪಿಕ್ಚರ್ಸ್ ಅಂತೂ ಅವನಿಗೆ ಕೊಳ್ಳೋದಕ್ಕೆ ಆಗೊಲ್ಲ. ಕಡೇ ಪಕ್ಷ ಅವುಗಳನ್ನು ಪ್ರದರ್ಶನಕ್ಕಾದರೂ ಇಟ್ಟು ಸಂತೋಷ ಪಡಲಿ ಅನ್ನೋದು ನಮ್ಮುದ್ದೇಶ. ದಿನಾ ಅವುಗಳನ್ನು ನೋಡ್ತಾ ಇರಬಹುದಲ್ಲ!"

"ಅಂದ್ರೆ, ಒಳ್ಳೆ ಬೆಲೆ ಬಂದರೂ ಅವುಗಳನ್ನು ಮಾರುವುದಿಲ್ಲ ಅಂತ್ಲೇನು?"

"ಖಚಿತವಾಗಿ ಹೇಳೋಕೆ ಬರೋದಿಲ್ಲ. ಆದರೆ ಅವನು ತನಗೆ ತುಂಬಾ ಇಷ್ಟವಾದ ಪಿಕ್ಚರ್‌ಗಳನ್ನೇ ಅಂಗಡೀಲಿ ಇರಿಸಿಕೊಳ್ಳೋದು. ಯಾವುದಾದರೂ ಕ್ಯಾನ್‌ವಾಸ್ ಜೊತೆ ಪ್ರೀತಿಯ ನಂಟು ಬೆಳೆಸಿಕೊಂಡು ಬಿಟ್ಟರೆ, ಅವನಿಂದ ಅದನ್ನು ಬೇರೆ ಮಾಡೋಕೆ ಆಗೊಲ್ಲ. ಒಂದು ದಿನ ನಾನು ಅವನ ಅಂಗಡಿ ಮುಂದೆ ನಿಂತಿದ್ದೆ. ಯಾರೋ ಒಬ್ಬರು ಜಂಟಲ್‌ಮ್ಯಾನ್ ನೀಟಾಗಿ ಡ್ರೆಸ್ ಮಾಡಿಕೊಂಡಿದ್ದವನು. ಸೆಝಾನ್ನೆಯ ಪೈಂಟಿಂಗ್‌ನ ತುಂಬಾ ಮೆಚ್ಚಿಗೆಯಿಂದ ಗಮನಿಸುತ್ತಿದ್ದು, ನಂತರ ಅದರ ಬೆಲೆ ಕೇಳಿದ. ಬೇರೆ ಯಾರಾದರೂ ಆರ್ಟ್‌ಡೀಲರ್ ಖುಷಿಯಿಂದ ಅರವತ್ತು ಫ್ರ್ಯಾಂಕ್‌ಗಳಿಗೆ ಮಾರಿ ಬಿಡುತ್ತಿದ್ದ. ಆದರೆ ಪೇರ್ ಟಾಂಗೆ ಆ ಕ್ಯಾನ್‌ವಾಸನ್ನು ನೋಡಿ, 'ಇದಾ! ಇದು ಸೆಜಾನ್ನೆಯ ತುಂಬ ಒಳ್ಳೆ ಪೈಂಟಿಂಗ್. ಆರುನೂರು ಫ್ರ್ಯಾಂಕ್‌ಗೆ ಕಡಿಮೆ ನನಗೆ ಕೊಡೋಕೆ ಮನಸಿಲ್ಲ' ಎಂದ. ಆ ವ್ಯಕ್ತಿ ಕೊಟ್ಟೇ ಬಿಟ್ಟ. ಟಾಂಗೆ ವಿಧಿಯಿಲ್ಲದೆ, ನೋವಿನಿಂದ ಆ ಕ್ಯಾನ್‌ವಾಸನ್ನು ಅವನಿಗೆ ಕೊಡುವಾಗ ಕಣ್ಣು ತುಂಬಿಬಂದಿತ್ತು!"

"ಹಾಗಾದರೆ ಅವನ ಅಂಗಡೀಲಿ ಪ್ರದರ್ಶನಕ್ಕೆ ಇಡುವುದರಿಂದ ಬರೋ ಲಾಭವಾದರೂ ಏನು?"

"ನೋಡು ಪೇರ್ ಟಾಂಗೆ ಒಂದು ಥರಾ ವಿಚಿತ್ರ ಮನುಷ್ಯ. ಕಲೆಯ ಬಗ್ಗೆ ಅವನಿಗೆ ತಿಳಿದಿರುವುದೆಲ್ಲ ಬಣ್ಣಗಳನ್ನೆಲ್ಲಾ ಹೇಗೆ ಮಾಡಬಹುದು ಅನ್ನೋದಷ್ಟೆ. ಆದರೂ ಯಾವುದು ಒಳ್ಳೇದು ಅಂತ ಗುರುತಿಸುವ ಪ್ರಚಂಡ ಸಾಮರ್ಥ್ಯವಿದೆ.

ಅವನೇನಾದರೂ ನಿನ್ನ ಯಾವುದಾದರೂ ಕ್ಯಾನ್‌ವಾಸನ್ನು ಕೇಳಿದರೆ ಕೊಟ್ಟಿರು. ಪ್ಯಾರಿಸಿನ ಜನಕ್ಕೆ ನಿನ್ನ ಕಲೆಯ ಮೊದಲ ಪರಿಚಯವಾಗುತ್ತೆ. ರೂ ಕ್ಲೌಝೆಲ್ ಬಂತು ನೋಡು. ಈ ಕಡೆ ತಿರುಗೋಣ."

ರೂ ಕ್ಲೌಜೆಲ್, ರೂ ಡೆ ಮಾರ್ಟೈರ್‍ಸ್ ಮತ್ತು ರೂ ಹೆನ್ರಿ ಮೋನಿಯೇರ್‌ಗಳನ್ನು ಸಂಪರ್ಕಿಸುವ ಬೀದಿಯಾಗಿತ್ತು. ಬೀದಿ ಉದ್ದಕ್ಕೂ ಸಣ್ಣ ಅಂಗಡಿಗಳಿದ್ದವು. ಕೆಲವು ಅಂಗಡಿಗಳ ಮೇಲೆ, ವಾಸದ ಮನೆಗಳೂ ಇದ್ದವು. ಪೇರ್ ಟಾಂಗೆಯ ಅಂಗಡಿ ಹುಡುಗಿಯರ ಪ್ರಾಥಮಿಕ ಶಾಲೆಗೆ ಎದುರಾಗಿತ್ತು.

ಪೇರ್ ಟಾಂಗೆ ಇತ್ತೀಚೆಗೆ ಜನಪ್ರಿಯವಾಗುತ್ತಿದ್ದ ಜಪಾನಿ ಪ್ರಿಂಟ್‌ಗಳನ್ನು ನೋಡುತ್ತಿದ್ದ.

"ಪೇರ್, ಇದೋ ನನ್ನೊಬ್ಬ ಸ್ನೇಹಿತ ಬಂದಿದ್ದಾನೆ, ವಿನ್ಸೆಂಟ್ ವಾನ್‌ಗೋ ಅಂತ. ಇವನು ಪಕ್ಕಾ ಕಮ್ಯುನಿಸ್ಟ್."

"ನನ್ನ ಅಂಗಡಿಗೆ ನಿಮಗೆ ಸ್ವಾಗತ. ನೀವು ಬಂದದ್ದು ನನಗೆ ಬಹಳ ಸಂತೋಷವಾಗಿದೆ."

ಮೃದುವಾಗಿ, ಹೆಣ್ಣಿನ ಧ್ವನಿಯಲ್ಲಿ ಪೇರ್ ಹೇಳಿದ. ಅವನ ಕಣ್ಣುಗಳಲ್ಲಿ ಸ್ನೇಹಭಾವವಿತ್ತು. ಹುಬ್ಬಿನವರೆಗೆ ಚಾಚಿದ್ದ ಸ್ಟ್ರಾ ಹ್ಯಾಟನ್ನು ಧರಿಸಿದ್ದ. ಒರಟಾದ ಗಡ್ಡ; ದುಂಡಗೆ ಗಿಡ್ಡಾದ ತೋಳು ಮತ್ತು ಕೈಗಳು ಹೊಂದಿದ ಇವನ ಕಣ್ಣುಗಳು ಅರೆಮುಚ್ಚಿದಂತಿದ್ದವು.

"ಮಿಸ್ಟರ್ ವಾನ್‌ಗೋ ನಿಜವಾಗಿಯೂ ನೀವು ಕಮ್ಯೂನಿಸ್ಟರೇ?"

"ಕಮ್ಯುನಿಸ್ಟ್ ಎಂದರೆ ಏನೆಂದು ನನಗೆ ಸರಿಯಾಗಿ ಅರ್ಥವಾಗಿಲ್ಲ ಪೇರ್ ಟಾಂಗೆ. ನನಗೆ ಗೊತ್ತಿರೋದು, ಎಲ್ಲರೂ ಅವರವರಿಗೆ ತೋಚಿದ ಕೆಲಸವನ್ನು ಎಷ್ಟು ಸಾಧ್ಯವೋ ಅಷ್ಟು ಮಾಡಬೇಕು ಮತ್ತು ಮಾಡಿದ್ದಕ್ಕೆ ತಕ್ಕ ಪ್ರಯೋಜನವೂ ಸಿಗಬೇಕು. ಅವನ ಅಗತ್ಯಗಳು ಪೂರ್ತಿಯಾಗಬೇಕು."

"ಅಷ್ಟೇ... ಅದು ಸರಳವಾಗಿ!"

"ಆಹಾ ಪಾಲ್, ನೀನು ಸ್ಟಾಕ್ ಎಕ್ಸ್‌ಚೇಂಜ್‌ನಲ್ಲಿ ಕೆಲಸಮಾಡಿದ್ದೀಯ. ಮನುಷ್ಯರನ್ನು ಪ್ರಾಣಿಗಳಾಗಿ ಮಾಡೋದು ಹಣಾಂತ ಗೊತ್ತೇ ಇರಬೇಕಲ್ಲ!"

"ಹೌದು. ಅದು ಹಾಗೂ ಸತ್ಯ, ಇನ್ನೊಂದು ದುಡ್ಡು ಇಲ್ಲದೆ ಹೋದಾಗಲೂ ಪ್ರಾಣಿಯಾಗೋದು."

"ನಿಜ ಹೇಳಿದಿರಿ ಪೇರ್ ಟಾಂಗೇ" ವಿನ್ಸೆಂಟ್ ದನಿಗೂಡಿಸಿದ.

"ನಮ್ಮ ಗೆಳೆಯ, ಪಾಲ್ ಇದ್ದಾನಲ್ಲ, ದುಡ್ಡು ಮಾಡುವವರನ್ನೂ ದ್ವೇಷಿಸುತ್ತಾನೆ, ದುಡ್ಡು ಮಾಡಲು ಆಗದೇ ಇರುವವರನ್ನೂ ದ್ವೇಷಿಸುತ್ತಾನೆ. ನಾನಂತೂ ಎರಡನೇ ವರ್ಗದಲ್ಲಿ ಇರೋಕೇ ಇಷ್ಟ ಪಡ್ತೀನಿ. ಯಾರೇ ಆಗಲಿ ದಿನಕ್ಕೆ ಐವತ್ತು ಸೆಂಟೀಮ್‌ಗಿಂತ ಹೆಚ್ಚಿಗೆ ಖರ್ಚು ಮಾಡಿದರೆ ನನ್ನ ದೃಷ್ಟೀಲಿ ಅವನೊಬ್ಬ ದುಷ್ಟ!"

"ಗುಣ, ನನ್ನಲ್ಲಿ ಅನಿವಾರ್ಯ ಕಾರಣದಿಂದ ಮನೆ ಮಾಡಿದೆ. ಪೇರ್ ಟಾಂಗೇ, ನನ್ನ ಮೇಲೆ ನಂಬಿಕೆ ಇರಿಸಿ ಇನ್ನೊಂದಷ್ಟು ಬಣ್ಣಗಳನ್ನು ಕೊಡಲು ಸಾಧ್ಯವೇ? ನನ್ನ ಸಾಲದ ಹೊರೆ ಈಗಾಗಲೇ ನಿನ್ನ ಮೇಲೆ ಭಾರವಾಗಿದೆ, ಆದರೂ ನನ್ನ ಕೆಲಸ ಮುಂದುವರೆಯಬೇಕಾದರೆ ಈ ಸಾಲ ಮಾಡಲೇ ಬೇಕಾಗುತ್ತೆ. ಇಲ್ಲವಾದಲ್ಲಿ....."

"ಆಯ್ತು ಪಾಲ್. ಸಾಲವಾಗಿ ಕೊಡ್ತೀನಿ. ಜನರಲ್ಲಿ ನಾನು ಇಟ್ಟಿರೋ ನಂಬಿಕೇನ ಸ್ವಲ್ಪ ಕಡಿಮೆ ಮಾಡಿಕೊಂಡರೆ, ನೀನು ನಂಬಿಕೇನ ಸ್ವಲ್ಪ ಹೆಚ್ಚು ಹುಟ್ಟಿಸಿದರೆ, ಇಬ್ಬರಿಗೂ ಒಳ್ಳೇದಾಗುತ್ತೇಂತ ನನ್ನ ಭಾವನೆ...... ಅದು ಸರಿ. ನನಗೆ ಭರವಸೆ ಕೊಟ್ಟಿದ್ದ ಹೊಸ ಚಿತ್ರದ ಬಗ್ಗೆ ಏನು ಮಾಡಿದೆ? ಅದೇನಾದರೂ ಕೊಟ್ಟರೆ, ಅದನ್ನು ಮಾರಿ, ನಿನ್ನ ಸಾಲಕ್ಕೆ ಅಡ್ಜೆಸ್ಟ್ ಮಾಡ್ಕೋತೀನಿ."

ಗಾಗಿನ್ ವಿನ್ಸೆಂಟ್ ಕಡೆ ಕಣ್ಣು ಮಿಟುಕಿಸಿ, "ಆಯ್ತು ಪೇರ್, ಎರಡು ಪಿಕ್ಚರ್ಸ್ ತಂದು ಕೊಡ್ತೇನೆ – ಎರಡೂ ಪಕ್ಕಗಳಲ್ಲಿ ತೂಗು ಹಾಕಬಹುದು. ಈಗ ನನಗೆ ಒಂದು ಟ್ಯೂಬ್ ಕಪ್ಪು, ಒಂದು ಟ್ಯೂಬ್ ಹಳದಿ ಬೇಕಾಗಿದೆ."

"ಬಾಕಿ ಇರುವ ಬಿಲ್ ಹಣ ತೀರಿಸು ಇನ್ನಷ್ಟು ಬಣ್ಣಗಳನ್ನು ಕೊಡ್ತೇನೆ."

ಮೂರೂ ಜನ ಒಂದೇ ಸಲಕ್ಕೆ ತಿರುಗಿದರು. ಮೇಡಂ ಟಾಂಗೆ ಮನೆ ಒಳಗಿನಿಂದ ಅಂಗಡಿಗೆ ಬಂದಳು. ಸಣ್ಣ ಮುಖ ಪುಟ್ಟ ಆಕಾರ ಆದರೆ ಕ್ರೋಧ ತುಂಬಿದ ಕಣ್ಣುಗಳಿಂದ ಒಮ್ಮೆಲೇ ಗಾಗಿನ್ ಮೇಲೆ ಕಿಡಿ ಕಾರಿದಳು.

"ಏನಂದು ಕೊಂಡಿದ್ದೀಯ? ಈ ಅಂಗಡೀನ ಧರ್ಮಕ್ಕೆ ಇಟ್ಟಿದ್ದೇವೇನು? ಟಾಂಗೆಯ ಕಮ್ಯುನಿಸಂನಿಂದ ಹೊಟ್ಟೆ ತುಂಬಿಸ್ಕೊಳ್ಳಬೇಕೇನು? ಮೊದಲು ಕೊಡಬೇಕಾದ ಸಾಲ ತೀರಿಸು. ಇಲ್ಲ ಪೋಲೀಸ್‌ಗೆ ಕಂಪ್ಲೇಟ್ ಮಾಡ್ತೀನಿ."

ಗಾಗಿನ್, ತಣ್ಣಗೆ. ಅವನ ಮಾಮೂಲಿ ಖುಷಾಲಿ ಸ್ವಭಾವದಿಂದ, ಮೇಡಂ ಟಾಂಗೆಯ ಕೈಯನ್ನು ತೆಗೆದುಕೊಂಡು ಮುದ್ದಿಸಿದ.

"ಆಹ್ ಝಾಂತಿಪ್ ಇವತ್ತು ಎಷ್ಟು ಸುಂದರವಾಗಿ ಕಾಣುತ್ತಿದ್ದೀಯ!"

ಮೇಡಂ ಟಾಂಗೆಗೆ ತನ್ನನ್ನು ಯಾಕೆ ಯಾವಾಗಲೂ ಝಾಂತಿಪ್ ಅಂತ ಕರೆಯುತ್ತಾನೆನ್ನುವುದು ಅರ್ಥವಾಗಿರಲಿಲ್ಲ. ಆದರೆ ಆ ಹೆಸರು ಹೇಳಿದಾಗ ಅದರ ಧ್ವನಿಯ ಮೋಹಕತೆಗೆ ಬಿದ್ದು ಹೆಮ್ಮೆಯಿಂದ ಬೀಗುತ್ತಿದ್ದಳು.

"ಈ ಥರ ಹೊಗಳಿ ನನ್ನ ಕೈಯಿಂದ ತಪ್ಪಿಸಿಕೊಳ್ಳೋಕೆ ನೋಡಬೇಡ. ದಿನವಿಡೀ ಬಣ್ಣಗಳನ್ನು ಅರೆದು ಅರೆದು ಪ್ರಾಣಬಿಡ್ತೀವಿ. ನೀನು ಬಂದು ಸದ್ದಿಲ್ಲದೆ ಕದ್ದುಕೊಂಡು ಹೋಗ್ತೀಯ."

"ಓ ನನ್ನ ಪ್ರಿಯ ಝಾಂತಿಪ್, ನನ್ನ ಮೇಲೆ ಇಷ್ಟು ನಿಷ್ಠುರಳಾಗಬೇಡ. ನಿನ್ನಲ್ಲಿ ಕಲಾವಿದನ ಚೈತನ್ಯವಿದೆ. ಅದು ನಿನ್ನ ಮುದ್ದುಮುಖದಲ್ಲಿ ಬಿಂಬಿತವಾಗಿದೆ."

ಮೇಡಂ ಟಾಂಗೆ, ಧರಿಸಿದ್ದ ಏಪ್ರನ್ ಅನ್ನು ಎತ್ತಿ ಹಿಡಿದು ತನ್ನ ಮುಖದ ಮೇಲಿನ ಕಲಾವಿದನನ್ನು ಬರೆಸಿ ಬಿಸಾಡುವಂತೆ, ಮುಖ ಒರೆಸಿಕೊಂಡಳು. "ಥೂ

ಮನೇಲಿರೋ ಒಬ್ಬ ಆರ್ಟಿಸ್ಟ್ ಸಾಕಾಗಿದೆ. ಅವನು ಬಂದು ಕೇವಲ ಐವತ್ತು ಸೆಂಟೀಮ್‌ಗಳ ಮೇಲೆ ಬದುಕುತ್ತೇನೆ ಅಂತ ನಿನ್ನ ಹತ್ತಿರ ಬಂದು ಹೇಳಿರಬೇಕು. ಆದರೆ ಆ ಐವತ್ತು ಸೆಂಟೀಮ್‌ಗಳನ್ನು ಎಲ್ಲಿಂದ ತರ್‍ತಾನಂತೆ?"

"ಮೇಡಂ, ಪ್ಯಾರಿಸ್‌ನಲ್ಲೆಲ್ಲ ನಿಮ್ಮ ಸೌಂದರ್ಯ, ಮೋಹಕತೆಗಳ ಬಗ್ಗೇನೇ ಮಾತಾಡಿಕೊಳ್ತಿದ್ದಾರೆ."

ಮತ್ತೆ ಮೊಣಕಾಲೂರಿ, ಅವಳ ಕೈಯನ್ನು ಮತ್ತೊಮ್ಮೆ ಮುದ್ದಿಸಿದ್ದೇ, ಮೆತ್ತಗಾದಳು.

"ಹಾ! ಹಾ, ನೀನೊಬ್ಬ ದುಷ್ಟ, ಹೊಗಳುಭಟ್ಟ. ಹೋಗಲೀಂತ ಈ ಸಲಕ್ಕೆ ಒಂದು ಸ್ವಲ್ಪ ಬಣ್ಣ ಕೊಡ್ತೀನಿ, ಆದರೆ, ತಕ್ಷಣ ನಿನ್ನ ಹಳೆಬಾಕಿ ತೀರಿಸಿಬಿಡು."

"ಅಬ್ಬ! ನಿನ್ನ ಈ ಕರುಣೆಗೆ, ಪ್ರಿಯ ಝಾನ್ತಿಪ್, ನಿನ್ನದೊಂದು ಭಾವಚಿತ್ರವನ್ನು ಪೈಂಟ್ ಮಾಡ್ತೀನಿ. ನೀನೇ ನೋಡ್ತಿರು. ಈ ಚಿತ್ರ ಒಂದಲ್ಲ ಒಂದು ದಿನ ಲೂವ್ರನಲ್ಲಿ ಪ್ರದರ್ಶಿತವಾಗಿ ನಮ್ಮಿಬ್ಬರ ಹೆಸರೂ ಅಮರವಾಗಿ ಉಳಿಯುತ್ತದೆ."

ಮುಂದಿನ ಬಾಗಿಲ ಕರೆಗಂಟೆ ಕೇಳಿಸಿತು. ಅಪರಿಚಿತ ವ್ಯಕ್ತಿಯೊಬ್ಬ ಒಳಗೆ ಬಂದ.

"ಆ ಕಿಟಕಿ ಕಡೆಗೆ ಹಾಕಿರುವ, ವರ್ಣಚಿತ್ರ, ಯಾರದು?"

"ಪಾಲ್ ಸೆಝಾನ್ನೆ"

"ಸೆಝಾನ್ನೆ? ಅರೆ, ಇದಕ್ಕೆ ಮೊದಲು ಈ ಹೆಸರು ಕೇಳಿಯೇ ಇಲ್ಲ!.... ಇದು ಮಾರಾಟಕ್ಕಿದೆಯೇನು?"

"ಅಯ್ಯೋ, ಇದು ಯಾರಿಗೋ ಆಗಲೇ...... ಮೇಡಂ ಟಾಂಗೆ, ಟಾಂಗೆಯನ್ನು ಪಕ್ಕಕ್ಕೆ ತಳ್ಳಿ ಆ ವ್ಯಕ್ತಿಯ ಬಳಿಗೆ ಓಡಿದಳು.

"ಈ ಚಿತ್ರವೇನೋ, ಮಾರಾಟ ಆಗಿದೆ. ಆದರೆ ಇದು ಸುಂದರವಾದ 'ಸ್ಟಿಲ್‌ಲೈಫ್'. ಇಂಥ ಸೇಬುಗಳನ್ನು ಇದಕ್ಕೆ ಮೊದಲು ಎಲ್ಲಿಯಾದರೂ ನೋಡಿದ್ದೀರಾ ಮಿಸ್ಟರ್? ನಿಮಗೆ ಬೇಕಾದರೆ ಸ್ವಲ್ಪ ಅಗ್ಗದ ಬೆಲೆಗೇ ಕೊಡ್ತೀವಿ, ಯಾಕೆಂದರೆ ನೀವು ಅದನ್ನು ತುಂಬ ಮೆಚ್ಚಿಕೊಂಡಿದ್ದೀರಿ."

"ಎಷ್ಟು ಹಾಗಾದರೆ?"

"ಎಷ್ಟು ಟಾಂಗೆ?" ಹೆದರಿಸುವ ದನಿಯಲ್ಲಿ ಕೇಳಿದಳು ಮೇಡಂ ಟಾಂಗೆ.

ಟಾಂಗೆ ಉಗುಳು ನುಂಗುತ್ತ

"ಮುನ್ನೂರು......"

"ಟಾಂಗೆ!"

"ಎರಡು ನೂರು....."

"ಟಾಂಗೆ!"

"ಹೋಗಲಿ ಒಂದು ನೂರು ಫ್ರ್ಯಾಂಕ್."

"ಏನು ನೂರು ಫ್ರ್ಯಾಂಕೆ?.... ಅದು ಅನಾಮಧೇಯನೊಬ್ಬನ ಪೈಂಟಿಂಗ್‌ಗೆ! ಅದು ಬಹಳ ಜಾಸ್ತಿ ಅಂತ ಅನಿಸುತ್ತೆ. ನಾನು ಇಪ್ಪತ್ತೈದು ಫ್ರ್ಯಾಂಕ್‌ಗೆ ಸಿದ್ಧನಾಗಿ ಬಂದಿದ್ದೆ. ಈಗ ನೋಡಿದರೆ ಇಷ್ಟೊಂದು ಬೆಲೆಯೇ?"

ಮೇಡಂ ಟಾಂಗೆ ಕಿಟಕಿಗೆ ತೂಗು ಹಾಕಿದ್ದ ಕ್ಯಾನ್‌ವಾಸನ್ನು ಇಳಿಸಿದಳು.

"ನೋಡಿ ಮಿಸ್ಟರ್, ಇದು ಬಹಳ ದೊಡ್ಡಚಿತ್ರ, ನಾಲ್ಕು ಸೇಬುಗಳಿಗೆ ನೂರು ಫ್ರ್ಯಾಂಕ್. ಆದರೆ ನೀವು ಕೇವಲ ಇಪ್ಪತ್ತೈದು ಫ್ರ್ಯಾಂಕ್ ಮಾತ್ರ ಖರ್ಚು ಮಾಡಬೇಕಂತೀರಿ. ಹಾಗಾದರೆ ಒಂದು ಸೇಬು ಮಾತ್ರವೇ ತೆಗೆದುಕೊಳ್ಳಿ."

"ಹಾಗೇ ಮಾಡಬಹುದು. ಒಂದು ಸೇಬು ಇರುವ ಹಾಗೆ, ಕ್ಯಾನ್‌ವಾಸನ್ನು ಉದ್ದಕ್ಕೆ ಕತ್ತರಿಸಿ ಕೊಟ್ಟುಬಿಡಿ."

ಮೇಡಂ ಒಳಗೆ ಓಡಿ, ಕತ್ತರಿ ತಂದಳು. ಕ್ಯಾನ್‌ವಾಸ್‌ನಲ್ಲಿ, ಕಡೆಯ ಸೇಬನ್ನು ಕತ್ತರಿಸಿ, ಪ್ರತ್ಯೇಕಿಸಿ, ಕಾಗದದಲ್ಲಿ ಸುತ್ತಿಕೊಟ್ಟಳು. ಆ ವ್ಯಕ್ತಿ ಇಪ್ಪತ್ತೈದು ಪ್ರ್ಯಾಂಕ್‌ಗಳನ್ನು ಕೊಟ್ಟು, ಪೊಟ್ಟಣ ತೆಗೆದುಕೊಂಡು ಹೊರಟ.

"ಆಹಾ! ನನ್ನ ಪ್ರೀತಿಯ ಸೆಝಾನ್ನೆ, ಇದನ್ನು ಕಿಟಕಿಗೇ ತೂಗುಹಾಕಿರುತ್ತೇನೆ. ಜನ ನೋಡಿಯಾದರೂ ಸಂತೋಷ ಪಡಲಿ."

ಮೇಡಂ, ಹರಿದ ಕ್ಯಾನ್‌ವಾಸನ್ನು ಕೌಂಟರಿನ ಮೇಲೆ ಇರಿಸಿದಳು.

"ಮತ್ತೊಂದು ಸಲ ಯಾರಾದರೂ ಬಂದು, ತಮ್ಮ ಹತ್ತಿರ ಸಾಕಷ್ಟು ದುಡ್ಡಿಲ್ಲ ಅಂದ್ರೆ, ಆತನಿಗೆ ಒಂದೇ ಸೇಬನ್ನು ಕೊಡಿ, ಯಾರು ಏನೇ ಕೊಟ್ಟರೂ ಎಷ್ಟೇ ಕೊಟ್ಟರೂ ಇದನ್ನು ಕೊಟ್ಬಿಡಿ. ಹೇಗಿದ್ದರೂ ಇದರ ಪ್ರಯೋಜನವಂತೂ ಇಲ್ಲ.... ನೀನು ಗಾಗಿನ್, ನಗಬೇಕಾದ್ದಿಲ್ಲ..... ಇದೆಲ್ಲ ನಿನಗೂ ಅನ್ವಯಿಸುತ್ತೆ. ನೀನು ಮಾಡಿರುವ ಕ್ಯಾನ್‌ವಾಸನ್ನೂ ಹೀಗೆ ತೆಗೆದು ಅದರಲ್ಲಿರುವ ಸೂಳೇರಲ್ಲಿ, ಒಬ್ಬೊಬ್ಬಳನ್ನೇ ಐದೈದು ಫ್ರ್ಯಾಂಕ್‌ಗೆ ಮಾರಿಬಿಡ್ತೀನಿ."

"ನನ್ನ ಪ್ರಿಯ ಝಾನ್ತಿಪ್, ಅನ್ಯಾಯ ಆಯ್ತು. ತಡವಾಗಿ ನಿನ್ನನ್ನು ಭೇಟಿಯಾದೆ. ಸ್ಟಾಕ್ ಎಕ್ಸ್‌ಚೇಂಜ್‌ನಲ್ಲಿ ಇದ್ದಾಗ ನಿನ್ನನ್ನು ಭೇಟಿ ಆಗಿದಿದ್ದರೆ, ಇಡೀ ಬ್ಯಾಂಕನ್ನೇ ಫ್ರಾನ್ಸ್‌ನಲ್ಲಿ ನಮ್ಮದೂಂತ ಮಾಡಿಕೊಡು ಬಿಡಬಹುದಾಗಿತ್ತು, ಇಷ್ಟು ಹೊತ್ತಿಗೆ."

ಮೇಡಂ ಟಾಂಗೆ ಹಿಂದುಗಡೆಯಿಂದ ಮನೆಯೊಳಕ್ಕೆ ನಡೆದಳು. ಟಾಂಗೆ ವಿನ್ಸೆಂಟ್‌ಗೆ ಹೇಳಿದ – "ಮಿಸ್ಟರ್, ನಿಮ್ಮ ಬಣ್ಣಗಳನ್ನು ಇಲ್ಲಿಂದಲೇ ಕೊಂಡುಕೊಳ್ಳಿ, ಹಾಗೇ ನಿಮ್ಮ ಪೈಂಟಿಂಗ್ಸ್ ಏನಾದರೂ ಇದ್ದರೆ ತಂದುಕೊಡಿ."

"ನಿಮ್ಮ ಮಾತು ಕೇಳಿ ನನಗೆ ಸಂತೋಷವಾಗಿದೆ..... ಜಪಾನಿ ಪ್ರಿಂಟ್‌ಗಳು ತುಂಬ ಚೆನ್ನಾಗಿವೆ, ಮಾರಾಟಕ್ಕೇನಾದರೂ ಸಿಗಬಹುದೇ?"

"ಸಿಗುತ್ತೆ, ಇತ್ತೀಚೆಗೆ ಇವು ತುಂಬ ಫ್ಯಾಷನ್ ಆಗಿವೆ, ಪ್ಯಾರಿಸ್‌ನಲ್ಲಿ! ಗಾನ್‌ಕೋರ್ಟ್ ಸೋದರರು ಇದನ್ನು ಸಂಗ್ರಹಿಸಲು ಶುರು ಮಾಡಿದಾಗಿನಿಂದ, ನಮ್ಮ ಪ್ಯಾರಿಸ್‌ನ ಕಲಾವಿದರ ಮೇಲೆ ಇವುಗಳ ಪ್ರಭಾವ ತುಂಬಾ ಆಗಿದೆ."

"ನನಗೆ ಈ ಎರಡು ಬೇಕು. ಅವನ್ನು ಪ್ರಯೋಗ ಮಾಡಬೇಕು.... ಇವುಗಳ ಬೆಲೆ ಎಷ್ಟು?"

"ಒಂದೊಂದಕ್ಕೆ ಮೂರು ಫ್ರ್ಯಾಂಕ್."

"ನಾನು ತಗೋತೀನಿ....... ಓ ದೇವರೇ! ಇದ್ದ ಒಂದು ಫ್ರ್ಯಾಂಕನ್ನೂ ಕೂಡ ಖರ್ಚು ಮಾಡಿಬಿಟ್ಟಿದ್ದೇನೆ.... ಗಾಗಿನ್, ನಿನ್ನ ಹತ್ತಿರ ಆರು ಫ್ರ್ಯಾಂಕುಗಳು ಇವೆಯೇನು?"

"ತಮಾಶೆ ಮಾಡಬೇಡ!"

ವಿನ್ಸೆಂಟ್ ನಿರಾಶೆ, ಹತಾಶೆಗಳಿಂದ ಆ ಎರಡೂ ಪ್ರಿಂಟ್ಸ್ ಅನ್ನು ಕೌಂಟರ್ ಮೇಲೆ ಇಟ್ಟು ಬಿಟ್ಟ."

"ಪೇರ್ ಟಾಂಗೆ, ಇವುಗಳನ್ನು ಈಗ ಇಲ್ಲೆ ಬಿಡ್ತಿದ್ದೇನೆ."

ಪೇರ್ ಟಾಂಗೆ ಎರಡೂ ಪ್ರಿಂಟ್‌ಗಳನ್ನು ಅವನ ಕೈಯಲ್ಲಿಟ್ಟು ವಿಕಾರವಾಗಿದ್ದ ಮುಖದಲ್ಲಿ, ಸಂಕೋಚದ ನಗೆಯನ್ನೊಂದು ಚಿಮ್ಮಿಸಿದ.

"ನಿನ್ನ ಕೆಲಸಕ್ಕೆ ಇವು ಬೇಕಾಗಿವೆ. ದಯವಿಟ್ಟು ತೆಗೆದುಕೋ. ದುಡ್ಡು ಬೇಕಾದರೆ ಆಮೇಲೆ ಕೊಡುವಿಯಂತೆ."

## -೧೦-

ವಿನ್ಸೆಂಟ್‌ನ ಗೆಳೆಯರಿಗೆ ಪಾರ್ಟಿ ಕೊಡಲು ಥಿಯೋ ಆಲೋಚಿಸಿದ. ನಾಲ್ಕು ಡಜನ್ ಬೇಯಿಸಿದ ಮೊಟ್ಟೆಗಳು, ಒಂದು ಕೆಗ್ ಹೆಂಡ, ಮೂರು ನಾಲ್ಕು ಟ್ರೇಗಳ ತುಂಬ ಬ್ರಿಯೋಕ್ಸ್, ಪೇಸ್ಟರೀಸ್‌ಗಳನ್ನೂ ಸಿದ್ಧ ಪಡಿಸಿದ ಪಡಸಾಲೆಯಲ್ಲಿ ಹೊಗೆಸೊಪ್ಪಿನ ಹೊಗೆ ಎಷ್ಟು ದಟ್ಟವಾಗಿ ತುಂಬಿತ್ತೆಂದರೆ, ಗಾಗಿನ್ ತನ್ನ ಸ್ಥೂಲ ದೇಹವನ್ನು ಹೊಗೆಯೊಳಗಿಂದ ನುಗ್ಗಿಸಿ ಬರುತ್ತಿದ್ದರೆ, ಓಷನ್‌ಲೈನರ್ ಒಬ್ಬ ಮಂಜನ್ನು ಸೀಳಿಕೊಂಡು ಬರುತ್ತಿದ್ದ ಹಾಗೆ ಕಾಣಿಸಿತು. ಲಾಟ್ರೆಕ್ ಒಂದು ಮೂಲೆ ಸೇರಿ ಕೂತು, ಮೊಟ್ಟೆಯನ್ನು, ಥಿಯೋನ ಪ್ರೀತಿಯ ಆರ್ಮ್‌ಚೇರಿನ ಮೇಲೆ ಒಡೆದು, ಮೊಟ್ಟೆಯ ಕವಚವನ್ನು ನೆಲಕ್ಕೆ ಹಾಸಿದ್ದ ಕಂಬಳಿ ಮೇಲೆಲ್ಲ ಚೆಲ್ಲಿದ. ರೂಸೋ ಅಂತು ಹೆಂಗಸೊಬ್ಬಳು ತನ್ನನ್ನು ಮೆಚ್ಚಿ ಕೊಟ್ಟಿದ್ದ ಸೆಂಟಿನ ಮತ್ತಿನಿಂದ ಉದ್ರೇಕಿತನಾಗಿದ್ದ. ತನ್ನ ಈ ಕಥೆಯನ್ನು ಎಲ್ಲರಿಗೂ ಮತ್ತೆ ಮತ್ತೆ ತಿಳಿಸಿ ಹೇಳಿದ. ಕಿಟಕಿಗೆ ಹೊಂದಿಕೊಂಡು ನಿಂತಿದ್ದ ಸೆಜ಼ಾನ್ನೆಗೆ ಸ್ಯುರಾತ್ ತನ್ನ ಹೊಸ ಥಿಯರಿಯ ಬಗ್ಗೆ ಹೇಳಲು ಆಲೋಚಿಸುತ್ತಿದ್ದ. ವಿನ್ಸೆಂಟ್ ಎಲ್ಲರ ಗ್ಲಾಸುಗಳನ್ನು ತುಂಬಿಸಿದ; ಗಾಗಿನ್ ಹೇಳುತ್ತಿದ್ದ ಪೋಲಿ ಕತೆಗಳನ್ನು ಕೇಳಿ ನಗುತ್ತಿದ್ದ. ರೂಸೋ ಇಷ್ಟೊಂದು ಹುಮ್ಮಸ್ಸಿನಿಂದ, ಉತ್ಸಾಹದಿಂದ ವಿವರಿಸುತ್ತಿರುವ ಆ ಹೆಂಗಸು ಯಾರಿರಬಹುದು ಎಂದು ಆಶ್ಚರ್ಯ ಪಡುತ್ತಿದ್ದ. ಜೊತೆಗೆ ಆಗಾ ಲಾಟ್ರೆಕ್ ಬಳಿ ಬಣ್ಣ, ರೇಖೆ, ಚುಕ್ಕಿ ಕುರಿತಾದ ವಾಗ್ವಾದಗಳನ್ನೂ ಮಾಡುತ್ತಿದ್ದ. ಹೆಚ್ಚಿನ ಪರಿಣಾಮ ಇವುಗಳಲ್ಲಿ ಯಾವುದರಿಂದ ಸಾಧ್ಯ ಎನ್ನುವುದೇ ಅವರ ಚರ್ಚೆಯ ವಿಷಯವಾಗಿತ್ತು. ಕಡೆಗೆ ಸ್ಯುರಾತ್‌ನ ಕಪಿಮುಷ್ಟಿಯಿಂದ ಬಿಡಿಸಲು ಸೆಜ಼ಾನ್ನೆಗೆ ಮಾತ್ರವೇ ಸಾಧ್ಯವಾಯಿತು.

ಆ ಕೋಣೆಯಲ್ಲಿ, ಬಿರಿದುಹೋಗುವಷ್ಟು ಸಂಭ್ರಮೋತ್ಸಾಹ ತುಂಬಿತ್ತು. ಈ ಪರಿಸರಕ್ಕೆ ಕಾರಣವಾದವರಲ್ಲಿ, ಭಯಂಕರ ಸ್ವಾಭಿಮಾನಿಗಳು, ಉತ್ಸಾಹಶೀಲ ವಿಗ್ರಹಭಂಜಕರು, ಸಮಾಜದ ಪ್ರಭಾವಶಾಲಿ ವ್ಯಕ್ತಿಗಳು ಇದ್ದರು. ಥಿಯೋ ಅವರನ್ನೆಲ್ಲ 'ಮಾನೋ ಮೇನಿಯಾಕ'ರೆಂದು ಹೆಸರಿಸಿದ್ದ. ಅವರೆಲ್ಲರೂ ಪ್ರೀತಿಸುತ್ತಿದ್ದರು, ವಾದಕ್ಕಿಳಿಯುತ್ತಿದ್ದರು, ಚರ್ಚಿಸುತ್ತಿದ್ದರು, ತಮ್ಮ ತಮ್ಮ ಸಿದ್ಧಾಂತಗಳನ್ನು ಮಂಡಿಸುತ್ತಿದ್ದರು; ಸಮರ್ಥಿಸುತ್ತಿದ್ದರು – ಏನೇನೋ ವಿಷಯಗಳನ್ನು ಮಾತಿನಲ್ಲಿ ಎಳೆದು ತರುತ್ತಿದ್ದರು. ಅವರೆಲ್ಲರದೂ ಎತ್ತರದ, ದೊಡ್ಡದಾದ, ಗಡುಸಾದ ಧ್ವನಿಯಾಗಿತ್ತು. ಈಗ ಅವರೆಲ್ಲ ಕುಳಿತಿದ್ದ ಥಿಯೋನ ಕೋಣೆಗಿಂತ ಇಪ್ಪತ್ತು ಪಟ್ಟು ದೊಡ್ಡ ಸಭಾಂಗಣವಿದ್ದರೂ ಅವರ ಉತ್ಸಾಹದ ಮಾತುಗಳಿಗೆ ಜಗಳಗಳಿಗೆ ಸಾಕಾಗುತ್ತಿರಲಿಲ್ಲ.

ಆ ಕೋಣೆಯಲ್ಲಿನ ಭಯಂಕರ ಗದ್ದಲ ವಿನ್ಸೆಂಟ್‌ನಲ್ಲಿ ಉಕ್ಕಿಸಿದ ಉತ್ಸಾಹದಿಂದ, ಹೊಮ್ಮಿದ ಅವನ ಮಾತು, ಅಂಗಭಂಗಿ, ರಭಸಗಳು ಥಿಯೋಗೆ ತಲೆನೋವೆನಿಸಿತು. ಈ ಥರದ ಗದ್ದಲ, ಗುಂಪು ಅವನ ಸ್ವಭಾವಕ್ಕೆ ವಿರುದ್ಧವಾಗಿತ್ತು. ಅವರಂಥ ಕಲಾವಿದರನ್ನು ಕಂಡರೆ ಥಿಯೋಗೆ ತುಂಬು ಅಭಿಮಾನ. ಅಂಥವರಿಗಾಗಿಯೇ ಗೂಪಿಲ್ಸ್‌ನ ಆಡಳಿತ ಮಂಡಳಿಯವರನ್ನೂ ಎದುರು ಹಾಕಿಕೊಳ್ಳುತ್ತಿದ್ದ. ಆದರೆ ಅವರ ಅಸಭ್ಯ, ಅನಾಗರಿಕ, ಶಿಷ್ಟಾಚಾರವಿಲ್ಲದ ಅವರ ಗದ್ದಲ ನಡವಳಿಕೆಗಳು ಅವನಿಗೆ ಅಪರಿಚಿತವಾಗಿದ್ದವು. ಥಿಯೋ ಒಂದು ಥರ ಹೆಣ್ಣಿನ ಗಾಂಭೀರ್ಯ ಸ್ವಭಾವದವನಾಗಿದ್ದ. ಒಂದು ಸಲ ತುಲೋಸ್ ಲಾಟ್ರೆಕ್ ತಮಾಶೆಯಾಗಿ ಹೇಳಿದ್ದ – "ಥಿಯೋ ವಿನ್ಸೆಂಟ್‌ನ ಸೋದರ ಆಗಿರುವುದು, ತುಂಬ ಮೋಸವಾಯ್ತು ಒಳ್ಳೆ ಹೆಂಡತಿಯಾಗಬಹುದಾಗಿತ್ತು."

ಥಿಯೋಗೆ ಬೊಗೊರೋಸ್‌ನ ಕ್ಯಾನ್‌ವಾಸ್‌ಗಳನ್ನು ಮಾರುವುದು ಅಷ್ಟು ರುಚಿಸುತ್ತಿರಲಿಲ್ಲ. ಆದರೂ ಅವುಗಳನ್ನು ಮಾರಲು ಸಾಧ್ಯವಾದರೆ ವಾಲ್ಡನ್ ಡೆಗಾಸ್‌ನದನ್ನು ಪ್ರದರ್ಶನಕ್ಕೆ ಇಡಲು ಅವಕಾಶ ಕೊಡುತ್ತಾನೆ. ಮತ್ತೆ ಒಂದಲ್ಲ ಒಂದು ದಿನ ಹೇಗಾದರೂ, ಬಲವಂತ ಮಾಡಿಯಾದರೂ ಸೆಜಾನ್ನೆ, ಗಾಗಿನ್, ಲಾಟ್ರೆಕ್, ಕಡೆಗೊಂದು ದಿನ ವಿನ್ಸೆಂಟ್ ವಾನ್‌ಗೋನದನ್ನೂ ಪ್ರದರ್ಶಿಸಲು ಒಪ್ಪಿಸುತ್ತಾನೆ.

ಗದ್ದಲ, ಜಗಳ, ಹೊಗೆಯಿಂದ ತುಂಬಿದ ಕೋಣೆಯನ್ನೊಮ್ಮೆ ನೋಡಿ, ಮೆಲ್ಲನೆ, ಯಾರಿಗೂ ತಿಳಿಯದಂತೆ ಅಲ್ಲಿಂದ ಜಾರಿಕೊಂಡು ಬಟ್ಟ್‌ವರೆಗೂ ನಡೆದ. ಒಬ್ಬನೇ ನಿಂತು, ದೀಪಗಳಿಂದ ಝುಗಝುಗಿಸುತ್ತಿದ್ದ ಪ್ಯಾರಿಸ್‌ಅನ್ನು ನೋಡಿದ.

ಗಾಗಿನ್, ಸೆಜಾನ್ನೆ ಜೊತೆ ವಾದ ಮಾಡುತ್ತಿದ್ದ. ಒಂದು ಕೈಯಲ್ಲಿ ಬೇಯಿಸಿದ ಮೊಟ್ಟೆ, ಮತ್ತೊಂದು ಕೈಯಲ್ಲಿ ಬ್ರಿಯೋಕ್ ಮತ್ತು ಬೀರ್ ಹಿಡಿದು, ಮೇಲೆತ್ತಿ ಆಡಿಸಿದ, ಬಾಯಲ್ಲಿ ಪೈಪ್ ಇರಿಸಿಕೊಂಡೇ ಬೀರನ್ನು ಕುಡಿಯುವ ಏಕೈಕ ವ್ಯಕ್ತಿ ಇಡೀ ಪ್ಯಾರಿಸಿನಲ್ಲಿ ತಾನೊಬ್ಬನೇ ಎಂದು ತೋರಿಸುವ ರೀತಿ ಅದಾಗಿತ್ತು.

"ಸೆಜಾನ್ನೆ, ನಿನ್ನ ಕ್ಯಾನ್‌ವಾಸ್‌ಗಳು ತಣ್ಣಗಿವೆ. ಬಹಳ ತಣ್ಣಗಿವೆ. ಅವುಗಳ ಮುಂದೆ ನಿಂತರೂ ಸಾಕು, ಹೆಪ್ಪುಗಟ್ಟಿಬಿಡುತ್ತೇನೆ. ಒಂದರಲ್ಲಿಯಾದರೂ ಭಾವನೆಗಳೇ ಇಲ್ಲ. ಸುಮ್ಮನೆ ಅವುಗಳ ಮೇಲೆ ಬಣ್ಣ ಚೆಲ್ಲಿದಂತೆ ಇದೆ."

"ನಾನು ಭಾವನೆಗಳನ್ನು ಪೈಂಟ್ ಮಾಡುವುದಿಲ್ಲ" – ಎದುರು ತಿರುಗಿ ಹೇಳಿದ. ಅದನ್ನೆಲ್ಲ ಕಾದಂಬರಿ ಬರೆಯುವವರಿಗೆ ಬಿಟ್ಟಿದ್ದೇನೆ. ನಾನೇನಿದ್ದರೂ ಸೇಬುಗಳನ್ನು ನಿಸರ್ಗ ದೃಶ್ಯಗಳನ್ನು ಮಾತ್ರವೇ ಪೈಂಟ್ ಮಾಡುತ್ತೇನೆ."

"ಭಾವನೆಗಳನ್ನು ನೀನು ಪೈಂಟ್ ಮಾಡುವುದಿಲ್ಲ. ಯಾಕೆಂದರೆ ನಿನ್ನ ಕೈಲಿ ಆಗೋದಿಲ್ಲ, ನೀನು ನಿನ್ನ ಕಣ್ಣುಗಳಿಂದ ಪೈಂಟ್ ಮಾಡ್ತೀಯ."

"ಬೇರೆಯವರೆಲ್ಲ ಯಾವುದರಿಂದ ಪೈಂಟ್ ಮಾಡ್ತಾರೆ?"

"ಎಷ್ಟೋ ಬೇರೆ ಬೇರೆ ವಸ್ತುಗಳಿಂದ" – ಗಾಗಿನ್ ಕೂಡಲೇ ರೂಮಿನ ಸುತ್ತ ಕಣ್ಣಾಡಿಸಿದ. ಲಾಟ್ರೆಕ್ ಗುಲ್ಮದಿಂದ, ವಿನ್ಸೆಂಟ್ ಹೃದಯದಿಂದ, ಸ್ಯುರಾತ್ ತಲೆಯಿಂದ ಪೈಂಟ್ ಮಾಡ್ತಾರೆ. ಸ್ಯುರಾತ್ ತಲೆಯಿಂದ ಮಾಡುವ ಪೈಂಟಿಂಗ್, ಕಣ್ಣಿಂದ ಮಾಡುವ ನಿನ್ನ ಪೈಂಟಿಂಗ್‌ನಷ್ಟೇ ಕೆಟ್ಟದಾಗಿರುತ್ತೆ. ರೂಸೋ ಪ್ರತಿಭೆಯಿಂದ ಮಾಡ್ತಾನೆ."

"ಗಾಗಿನ್, ನೀನು ಯಾವುದರಿಂದ?"

"ಯಾರು ನಾನಾ?.... ನಾನು ಯಾವುದರಿಂದ ಪೈಂಟ್ ಮಾಡ್ತೀನಿ ಅನ್ನೋದನ್ನು ಯೋಚಿಸಿಯೇ ಇಲ್ಲ."

"ಪ್ರತಿಯೊಬ್ಬರಿಗೂ ತಾವು ಯಾವುದರಿಂದ ಪೈಂಟ್ ಮಾಡ್ತೀವಿ ಅನ್ನೋದು ಗೊತ್ತಿದೆ" ಲಾಟ್ರೆಕ್ ಹೇಳಿದ.

ಗಾಗಿನ್ ಬಗ್ಗೆ ನಗುತ್ತಿದ್ದುದು ಮುಗಿದ ನಂತರ, ಸ್ಯುರಾತ್ ದಿವಾನ್‌ನ ಎರಡೂ ಅಂಚುಗಳನ್ನು ಹಿಡಿದು ಗಟ್ಟಿಯಾದ ಧ್ವನಿಯಲ್ಲಿ ಹೇಳಿದ – "ತಲೆ ಅಥವಾ ಬುದ್ಧಿಯಿಂದ ಪೈಂಟ್ ಮಾಡುವವನನ್ನು ತಮಾಶೆ ಮಾಡಬಹುದು. ಆದರೆ ಕ್ಯಾನ್‌ವಾಸ್‌ಗಳನ್ನು ಹೇಗೆ ಪರಿಣಾಮಕಾರಿಯಾಗಿ ಮಾಡಬಹುದು ಅನ್ನುವುದನ್ನು ತಿಳಿದುಕೊಂಡೆ."

"ಓ ಆ ಹಳೇ ಪುರಾಣವನ್ನು ಮತ್ತೊಮ್ಮೆ ಕೇಳಬೇಕಾಗುತ್ತಲ್ಲ" ಎಂದು ಗೊಣಗುತ್ತಲೇ ನುಡಿದ, ಸೆಜಾನ್ನೆ.

"ಬಾಯ್ಮುಚ್ಚು ಸೆಝಾನ್ನೆ! ಗಾಗಿನ್ ಸುಮ್ಮನೆ ಒಂದು ಕಡೆ ಕೂತ್ಕೋ. ರೂಮೊಳಗಡೆಯೆಲ್ಲ ಅಡ್ಡಾಡ್ತಿರಬೇಡ. ರೂಸೋ ನೀನು ನಿನ್ನನ್ನು ಅಭಿಮಾನಿಸುವ ಹುಡುಗಿಯ ಕತೆಯನ್ನು ನಿಲ್ಲಿಸು. ಲಾಟ್ರೆಕ್, ಮೊಟ್ಟೆಯೊಂದನ್ನು ಈ ಕಡೆ ಎಸೆ. ವಿನ್ಸೆಂಟ್ ಬ್ರಿಯಾಕ್ ಏನಾದರೂ ಸಿಗುತ್ತಾ?..... ಈಗ ಎಲ್ಲರೂ ಕೇಳಿಸಿಕೊಳ್ಳಿ,

"ಏನು ನಡೀತಿದೆ ಸ್ಯುರಾತ್. ಸಲೋನ್‌ದ ರೆಫ್ಯೂಸೆನಲ್ಲಿ ನಿನ್ನ ಕ್ಯಾನ್‌ವಾಸ್ ಮೇಲೆ ಯಾವನೋ ಒಬ್ಬ ಉಗಿದು ಹೋದಾಗಿನಿಂದ ಯಾಕಿಷ್ಟು ಉದ್ರೇಕಗೊಳ್ಳುತ್ತಿದ್ದೀ!"

"ಕೇಳಿ! ಪೈಂಟಿಂಗ್ ಇವತ್ತೇನಾಗಿದೆ? ಬೆಳಕು. ಎಂಥ ಬೆಳಕು. ಅಳತೆಯ ಬೆಳಕು ಬಣ್ಣದ ಚುಕ್ಕಿಗಳು ಒಂದರೊಳಗೊಂದು ಪ್ರವಹಿಸುತ್ತಿರುತ್ತವೆ.

"ಅದು ಪೈಂಟಿಂಗ್ ಅಲ್ಲ. 'ಪಾಯಿಂಟಿಲಿಸಂ'! (ಚುಕ್ಕಿವಾದ)"

"ಓ ದೇವರೇ! ಜಾರ್ಜ್ ಮತ್ತೆ ನಿನ್ನ ವಿದ್ವತ್ಭಾಷಣ!"

"ಬಾಯ್ಮುಚ್ಚು! ನಾವು ಕ್ಯಾನ್‌ವಾಸ್ ಮಾಡಿ ಮುಗಿಸ್ತೇವೆ. ಆ ಮೇಲೆ ಏನ್ಮಾಡ್ತೇವೆ, ಅದನ್ನು ಯಾರೋ ಒಬ್ಬ ಮೂರ್ಖನಿಗೆ ಮಾರಾಟ ಮಾಡ್ತೇವೆ. ಅವನು ಅದಕ್ಕೊಂದು ಚಿನ್ನದ ಚೌಕಟ್ಟು ಹಾಕಿ ನಮ್ಮೆಲ್ಲ ಶ್ರಮವನ್ನು ಹಿಚುಕಿ ಕೊಲ್ಲುತ್ತಾನೆ. ಈಗ ನಾನು ಕೊಡುವ ಸಲಹೆ ಏನೆಂದರೆ, ನಾವು ಎಂದೂ ನಮ್ಮ ಕೃತಿ ನಮ್ಮ ಕೈಯಿಂದ, ಅದಕ್ಕೆ ಚೌಕಟ್ಟು ಹಾಕುವವರೆಗೆ, ಹೊರಗೆ ಹೋಗಲು ಬಿಡಬಾರದು. ಆ ಚೌಕಟ್ಟನ್ನೂ ನಾವೇ ಪೈಂಟ್ ಮಾಡಿ, ಕೃತಿಯ ಭಾಗವಾಗಿಯೇ ಉಳಿಯುವಂತೆ ಮಾಡಬೇಕು."

"ಸ್ಯುರಾತ್, ನೀನು ಬೇಗನೇ, ನಿನ್ನ ಕೆಲಸಕ್ಕೆ ಫುಲ್‌ಸ್ಟಾಪ್ ಹಾಕಿಬಿಡ್ತೀಯ. ಯಾವುದೇ ಪಿಕ್ಚರ್ ಆದರೂ ರೂಮಿನಲ್ಲಿ ನೇತು ಹಾಕಿರಬೇಕು. ರೂಮಿನ ಬಣ್ಣಕ್ಕೆ ಆ ಪಿಕ್ಚರ್ ಹೊಂದಿಕೆ ಆಗದಿದ್ದರೆ, ಪಿಕ್ಚರೂ, ಫ್ರೇಮು ಎರಡೂ ಹಾಳಾಗುತ್ತೆ."

"ಅದೇನೋ ಸರಿ. ಹಾಗಾದರೆ ಪಿಕ್ಚರ್ ಬಣ್ಣಕ್ಕೆ ಹೊಂದಿಕೊಳ್ಳುವ ಬಣ್ಣವನ್ನೇ ರೂಮಿಗೆ ಹಾಕಿದರೆ ಆಯ್ತಲ್ಲ?"

"ಬಹಳ ಒಳ್ಳೆ ಐಡಿಯಾ" ಸ್ಯುರಾತ್ ಹೇಳಿದ.

"ರೂಮಿರುವ ಮನೆ ವಿಚಾರ?"

"ಓ ಜಾರ್ಜ್, ಜಾರ್ಜ್, ನಿನಗೆ ಇಷ್ಟೊಂದು ಬ್ರಹ್ಮಾಂಡವಾದ ಐಡಿಯಾಗಳು ಎಲ್ಲಿಂದ ಬರುತ್ತವೆ!"

"ಅದಾ? ಹೇಳಿದೆನಲ್ಲ, ಬುದ್ಧಿಯಿಂದ ಪೈಂಟ್ ಮಾಡುವುದರಿಂದ ಬರುತ್ತೆ."

"ನೀವೆಲ್ಲ ಯಾಕೆ ತಲೆ ಅಥವಾ ಬುದ್ಧಿ ಉಪಯೋಗಿಸಿ ಪೈಂಟ್ ಮಾಡೊಲ್ಲ ಅಂದ್ರೆ, ನಿಮಗೆ ಇವರೆಡೂ ಇಲ್ಲ!"

"ನೋಡು, ನೋಡು ಜಾರ್ಜ್ ಮುಖ..... ಬೇಗ ಬೇಗ ಹೇಗೆ ಊದಿಕೊಂಡಿದೆ. ಈ ವಿಜ್ಞಾನಿ ಮುಖ!!"

"ಯಾಕೆ ಫ್ರೆಂಡ್ಸ್, ಹೀಗೆ ಒಬ್ಬರಿಗೊಬ್ಬರು ಜಗಳ ಮಾಡ್ಕೊಳ್ತೀರ. ಎಲ್ಲರೂ ಒಟ್ಟಿಗೆ ಸೇರಿ ಕೆಲಸ ಮಾಡಬಾರದೇ?" ವಿನ್ಸೆಂಟ್ ಸಲಹೆ ನೀಡಿದ.

"ನಮ್ಮ ಗುಂಪಿನಲ್ಲಿ ನಿಜವಾದ ಕಮ್ಯುನಿಸ್ಟ್ ಅಂದ್ರೆ ನೀನೆ.... ಹೇಳು. ಒಂದು ವೇಳೆ ನಾವೆಲ್ಲ ಒಟ್ಟಿಗೆ ಕೆಲಸ ಮಾಡುವುದರಿಂದ ನಮಗೇನು ಲಾಭ ಬರುತ್ತೆ?" ಗಾಗಿನ್ ಪ್ರಶ್ನಿಸಿದ.

"ಸರಿ...... ಹೇಳ್ತೀನಿ. ಮೊಟ್ಟೆಯೊಂದನ್ನು ಗಟ್ಟಿಗೆ ಒಡೆದು ಬಾಯಿಗೆ ಸುರಿದುಕೊಂಡು ಹೇಳ ತೊಡಗಿದ. "ನಾನು ಒಂದು ಉಪಾಯ ಯೋಚನೆ ಮಾಡ್ತಿದ್ದೀನಿ. ನಾವು ಯಾರಿಗೂ ಬೇಡದ, ಯಾರೂ ಸರಿಯಾಗಿ ಗುರುತಿಸದ ಕಲಾವಿದರು. ಮಾನೆಟ್, ಡೆಗಾಸ್, ಸಿಸ್ಲಿ, ಪಿಸಾರೋ ನಮಗೊಂದು ದಾರಿ ಹಾಕಿಕೊಟ್ಟಿದ್ದಾರೆ. ಪ್ಯಾರಿಸ್ ಸಮಾಜ

ಅವರನ್ನು ಒಪ್ಪಿಕೊಂಡಿದೆ. ದೊಡ್ಡ ದೊಡ್ಡ ಗ್ಯಾಲರಿಗಳಲ್ಲಿ ಅವರ ಪೈಂಟಿಂಗ್ಸ್‌ಗಳ ಪ್ರದರ್ಶನ ಇರುತ್ತೆ. ಅವರೆಲ್ಲ ಬಹಳ ದೊಡ್ಡವರು, ಒಪ್ಪಿಕೊಳ್ಳೋಣ. ನಾವು ಏನಾದರೂ ಸ್ವಲ್ಪ ಪಕ್ಕದ ರಸ್ತೆಗಳಲ್ಲಿಗೆ ಹೋಗಬೇಕಾದೀತು. ಅವರು ವಿಶಾಲವಾದ ಬೀದಿಗಳಲ್ಲಿ ಪ್ರದರ್ಶನ ಏರ್ಪಡಿಸಿದರೆ ನಾವು ಸಣ್ಣ ಬೀದಿಗಳಲ್ಲಿ ಪ್ರದರ್ಶನ ಇಡಬಹುದಲ್ಲ. ಸಣ್ಣ ಬೀದಿಗಳಲ್ಲಿನ ರೆಸ್ಟೋರೆಂಟ್‌ಗಳಲ್ಲಿ, ಕೆಲಸಗಾರರ ರೆಸ್ಟೋರೆಂಟ್‌ಗಳಲ್ಲಿ ನಾವ್ಯಾಕೆ ಪ್ರದರ್ಶನ ಮಾಡಬಾರದು? ಒಬ್ಬೊಬ್ಬರೂ ಐದೈದು ಕ್ಯಾನ್‌ವಾಸ್‌ಗಳನ್ನು ಕೊಡೋಣ. ಯಾವುದಾದರೂ ಹೊಸಜಾಗದಲ್ಲಿ ಮಧ್ಯಾಹ್ನದ ಹೊತ್ತು ಅವುಗಳನ್ನು ಪ್ರದರ್ಶನಕ್ಕಿಡೋಣ. ಕೆಲಸಗಾರರಿಗೆ ಎಷ್ಟು ಬೆಲೆ ಕೊಡೋಕೆ ಸಾಧ್ಯವೋ ಅಷ್ಟಕ್ಕೇ ಮಾರೋಣ. ನಿರಂತರವಾಗಿ ನಮ್ಮ ಕೃತಿಗಳು ಸಾರ್ವಜನಿಕರ ಕಣ್ಣಿಗೆ ಬೀಳ್ತಾ ಇದ್ರೆ, ಬಡವರಿಗೆ ಒಳ್ಳೆಯ ಕಲೆಯ ಪರಿಚಯ ಮಾಡಿಸಿದ ಹಾಗೆ ಆಗುತ್ತೆ, ಅಲ್ಲದೆ ಕಾಸೂ ಹೆಚ್ಚಾಗಿ ಖರ್ಚಾಗದೆ ಸುಂದರವಾದ ಚಿತ್ರಗಳು ಅವರಿಗೆ ಸಿಕ್ಕಂತೆ ಆಗುತ್ತೆ."

"ಚಿಯರ್ಸ್!..... ಇದು ಅದ್ಭುತವಾದ ಉಪಾಯ!" ರೂಸೋ ಭಾವಾವೇಶದಿಂದ ಹೇಳಿದ.

"ಒಂದು ಕ್ಯಾನ್‌ವಾಸ್ ಮಾಡೋಕೆ ಒಂದು ವರ್ಷ ಬೇಕು ನನಗೆ" ಗೊಣಗುತ್ತಲೇ ಸ್ಯುರಾತ್ ಹೇಳಿದ.

"ಅಷ್ಟು ಕಷ್ಟಪಟ್ಟು ಮಾಡಿದ್ದನ್ನು ಯಾವನೋ ಒಬ್ಬ ಕಾರ್ಪೆಂಟರ್‌ಗೆ ಐದು ಸೂಗಳಿಗೆ ಮಾರಬೇಕೇ?"

"ನಿನ್ನ 'ಸ್ಟಡೀಸ್' ಗಳನ್ನು ಕೊಡಬಹುದಲ್ಲ."

"ರೆಸ್ಟೋರೆಂಟ್‌ನವರು ಒಂದು ವೇಳೆ ನಮ್ಮ ಪಿಕ್ಚರ್ಸ್‌ನ ಕೊಂಡುಕೊಳ್ಳದೆ ಹೋದರೆ?"

"ಇಲ್ಲ. ಖಂಡಿತ ಕೊಂಡ್ಕೊಳ್ತಾರೆ."

"ಯಾಕೆ ಕೊಂಡುಕೊಳ್ಳೊಲ್ಲ? ಅವರ ಪರಿಸರ ಸುಂದರವಾಗುತ್ತಲ್ಲ."

"ಸರಿ ಇದನ್ನು ಹೇಗೆ ನಿರ್ವಹಿಸೋದು? ರೆಸ್ಟೋರೆಂಟ್‌ಗಳನ್ನು ಯಾರು ಗುರ್ತಿಸ್ತಾರೆ?"

"ಅದನ್ನೆಲ್ಲ ನಾನು ಯೋಚ್ನೆ ಮಾಡಿದ್ದೀನಿ" ವಿನ್ಸೆಂಟ್ ಗಟ್ಟಿಯಾಗಿ ಹೇಳಿದ. 'ಪೇರ್ ಟಾಂಗೆಯನ್ನು ಮ್ಯಾನೇಜರ್ ಮಾಡೋಣ. ರೆಸ್ಟೋರೆಂಟ್‌ಗಳನ್ನು ಹುಡುಕಿ ಪಿಕ್ಚರ್ಸ್‌ನ ತೂಗು ಹಾಕುತ್ತಾನೆ. ಬರುವ ದುಡ್ಡನ್ನು ವಸೂಲು ಮಾಡುತ್ತಾನೆ."

"ಅವನೇ ಸರಿಯಾದ ವ್ಯಕ್ತಿ."

"ರೂಸೋ, ಓಡಿ ಹೋಗಿ ಪೇರ್ ಟಾಂಗೇನ ಬೇಗ ಬರೋಕೆ ಹೇಳಿದ್ದಾರೇಂತ ತಿಳಿಸು. ಏನೋ ಅರ್ಜೆಂಟ್ ಕೆಲಸ ಇದೇಂತ ಕೂಡ ಹೇಳು."

"ಈ ನಿಮ್ಮ ಕಾರ್ಯ ಯೋಜನೆಯಲ್ಲಿ ನನ್ನನ್ನು ಸೇರಿಸಬೇಡಿ" ಸೆಝಾನ್ನೆ ತಿಳಿಸಿದ.

"ಯಾಕೆ? ಏನಾಯಿತು?" ಗಾಗಿನ್ ಪ್ರಶ್ನಿಸಿದ.

"ನಿನ್ನ ಸುಂದರವಾದ ಕ್ಯಾನ್‌ವಾಸ್‌ಗಳೇನಾದರೂ ಕೆಲಸಗಾರರು ನೋಡುವುದರಿಂದ, ಹಾಳಾಗಿ ಬಿಡುತ್ತವೇನು?"

"ಆ ಥರ ಏನೂ ಅಲ್ಲ. ನಾನು ತಿಂಗಳ ಕೊನೆಯಲ್ಲಿ ಏಕ್ಸ್‌ಗೆ ಹೊರಟು ಹೋಗುತ್ತೇನೆ."

"ಒಂದು ಸಲ ಪ್ರಯತ್ನ ಮಾಡಿನೋಡು. ಅದರಿಂದ ಪ್ರಯೋಜನ ಇಲ್ಲಾಂತಾದ್ರೆ, ನಿನಗೆ ನಷ್ಟವೇನೂ ಇಲ್ವಲ್ಲ?"

"ಸರಿ. ಆಯ್ತು."

"ರೆಸ್ಟೋರೆಂಟ್‌ಗಳಲ್ಲಿ ನಮಗೆ ಯಶಸ್ಸು ಸಿಕ್ಕಿದರೆ, ಮುಂದೆ ವೇಶ್ಯಾವಾಟಿಕೆಗಳಲ್ಲೂ ಪ್ರಯತ್ನಿಸಬಹುದು."

ಮೋಂಟ್ ಮಾರ್ತ್ರೆಯ ಎಷ್ಟೋ ಹೆಂಗಸರು, ನನಗೆ ಗೊತ್ತಿದ್ದಾರೆ. ಅವರು ನಮ್ಮ ಚಿತ್ರಗಳಿಗೆ ಒಳ್ಳೆ ಗಿರಾಕಿಗಳಾಗ್ತಾರೆ. ಜೊತೆಗೆ ದುಡ್ಡೂ ಹೆಚ್ಚಿಗೆ ಬರುತ್ತೆ." ಲಾಟ್ರೆಕ್ ಸಲಹೆ ನೀಡಿದ.

ಪೇರ್ ಟಾಂಗೆ ಓಡೋಡಿ ಬಂದ. ಏದುಸಿರು ಬಿಡುತ್ತಿದ್ದ ರೂಸೋ ಚೂರು ಪಾರು ವಿಷಯ ತಿಳಿಸಿದ್ದ. ವಿಷಯ ತಿಳಿಯುವ ಉತ್ಸಾಹದಲ್ಲಿದ್ದ. ಅವನ ಮುಖದಲ್ಲಿ ಕಾತುರತೆ ಎದ್ದು ಕಾಣುತ್ತಿತ್ತು.

ಪ್ಲಾನ್ ಬಗ್ಗೆ ವಿವರವಾಗಿ ತಿಳಿದ ಮೇಲೆ, ಉತ್ಸಾಹ ಸಂಭ್ರಮದಿಂದ ಹೇಳಿದ. "ಹೌದು ನನಗೆ ಆ ಜಾಗಗಳೆಲ್ಲ ಗೊತ್ತು. 'ನೋರ್ವಿನ್ಸ್' ಅನ್ನೋ ರೆಸ್ಟೋರೆಂಟ್ ಇದೆ. ಅಲ್ಲಿ ನಮ್ಮ ಕೆಲಸ ಸಕ್ಸೆಸ್ ಆದರೆ ಮುಂದೆಯೂ ಕೆಲವು ರೆಸ್ಟೋರೆಂಟ್‌ಗಳಿವೆ. ನೋರ್ವಿನ್ಸ್‌ನ ಮಾಲಿಕ ನನ್ನ ಗೆಳೆಯ. ಅವನ ರೆಸ್ಟೋರೆಂಟ್ ಗೋಡೆಗಳೆಲ್ಲ ಖಾಲಿ ಖಾಲಿಯಾಗಿದೆ. ಈ ವಿಷಯ ಕೇಳಿದರೆ ಅವನಿಗೂ ಸಂತೋಷ ಆಗುತ್ತೆ. ಇದಾದ ಮೇಲೆ ಬೇಕಾದರೆ ರೂ ಪಿಯರ್‌ನಲ್ಲಿ ಮಾಡೋಣ. ಬೇಕಾದಷ್ಟು! ಸಾವಿರಾರು!... ರೆಸ್ಟೋರೆಂಟ್‌ಗಳಿವೆ!! ಪ್ಯಾರಿಸ್‌ನಲ್ಲಿ ಅವುಗಳಿಗೆ ಬರವೇ ಇಲ್ಲ."

"ಈ ಪುಟ್ಟ 'ಬುಲ್‌ವಾರ್' ಪ್ರದರ್ಶನದ ಉದ್ಘಾಟನೆ ಯಾವಾಗ?" ಗಾಗಿನ್ ಪ್ರಶ್ನಿಸಿದ.

"ತಡಯಾಕೆ?..... ನಾಳೇನೇ ಯಾಕೆ ಆಗಬಾರದು?" ವಿನ್ಸೆಂಟ್ ಸಲಹೆ ನೀಡಿದ.

ಟಾಂಗೆ ಒಂದೇ ಕಾಲಿನ ಮೇಲೆ ಹೆಜ್ಜೆ ಹಾಕಿದ. ತಲೆ ಮೇಲಿನ ಹ್ಯಾಟ್ ತೆಗೆದು ಮತ್ತೆ ತಲೆ ಮೇಲಿರಿಸಿಕೊಂಡ.

"ಸರಿ! ಸರಿ! ನಾಳೆ ನೀವೆಲ್ಲ ನಿಮ್ಮ ನಿಮ್ಮ ಕ್ಯಾನ್‌ವಾಸ್‌ಗಳನ್ನು ತಂದುಕೊಡಿ. ಮಧ್ಯಾಹ್ನದಷ್ಟು ಹೊತ್ತಿಗೆ ನೋರ್ವಿನ್ಸ್ ರೆಸ್ಟೋರೆಂಟ್‌ನ ಗೋಡೆಗಳ ಮೇಲೆ ಏರಿಸಿ ಬಿಡ್ತೀನಿ. ಜನ ಊಟಕ್ಕೆ ಬಂದಾಗ ಅವರಿಗೆ ಒಂದು ಸರ್‌ಪ್ರೈಜ್ ಕೊಡೋಣ! ಪವಿತ್ರವಾದ ಮೋಂಬತ್ತಿಗಳಂತೆ ಪಿಕ್ಚರ್‌ಗಳನ್ನೂ ಈಸ್ಟರ್ ದಿನ ಮಾರಾಟ ಮಾಡೋಣ.

ಏನಿದು? ಬೀರ್?..... ಗುಡ್ ಜಂಟಲ್‌ಮೆನ್ 'ಪೆತಿತ್ ಬುಲ್‌ವಾರ್‌ನ ಕಮ್ಯುನಿಸ್ಟ್ ಆರ್ಟ್ ಕ್ಲಬ್' ಹೆಸರಿಗೆ ಕುಡಿಯೋಣ. ಮೊದಲ ಪ್ರದರ್ಶನಕ್ಕೇ ಅಖಂಡ ಯಶಸ್ಸು ಸಿಗಲಿ!"

–೧೧–

ಪೇರ್ ಟಾಂಗೆ ಮಾರನೇ ದಿನ ಮಧ್ಯಾಹ್ನ, ವಿನ್ಸೆಂಟ್‌ನ ಅಪಾರ್ಟ್‌ಮೆಂಟಿನ ಬಾಗಿಲು ತಟ್ಟಿದ.

"ಎಲ್ಲರಿಗೂ ಒಂದು ಕಡೆಯಿಂದ ಹೇಳಿಕೊಂಡು ಬರ್‍ತಾ ಇದ್ದೀನಿ."..... ಅವನು ವಿಷಯ ತಿಳಿಸಿದ. "ಆದರೆ ನಾವು ನಾರ್ವಿನ್ಸ್‌ನಲ್ಲಿ ಊಟ ಮಾಡಿದರೆ ಮಾತ್ರ, ನಮ್ಮ ಕಲಾಕೃತಿಗಳನ್ನು ಇಡಬಹುದಂತೆ!"

"ಆಯ್ತು ಹಾಗೇ ಮಾಡೋಣ."

"ಹಾಗಾದ್ರೆ ಎಲ್ಲ ಸರಿ ಹೋಯ್ತು. ಬೇರೆಯವರೆಲ್ಲರೂ ಇದಕ್ಕೆ ಒಪ್ಪಿಕೊಂಡಿದ್ದಾರೆ. ನಾವು ನಾಲ್ಕೂವರೆವರೆಗೂ ಪಿಕ್ಚರ್ಸ್ ಪ್ರದರ್ಶನಕ್ಕೆ ಇಡೋಕೆ ಆಗೊಲ್ಲ. ನಾಲ್ಕು ಗಂಟೆ ಹೊತ್ತಿಗೆ ನನ್ನ ಅಂಗಡಿ ಹತ್ತಿರ ಬಂದ್ಬಿಡ್ತೀಯ? ಎಲ್ಲರೂ ಒಟ್ಟಿಗೆ ಜೊತೆಯಾಗಿ ಹೋಗೋಣ."

"ಆಯ್ತು ಬರ್‍ತೀನಿ."

ನಾಲ್ಕು ಗಂಟೆ ಸುಮಾರಿಗೆ ರೂ ಕೌಜೆಲ್ ಬಳಿ ಹೋಗುವಷ್ಟು ಹೊತ್ತಿಗೆ, ಟಾಂಗೆ ಕ್ಯಾನ್‌ವಾಸ್‌ಗಳನ್ನು ಕೈಗಾಡಿಗೆ ತುಂಬುತ್ತಿದ್ದ. ಬೇರೆಯವರೆಲ್ಲ ಒಳಗಡೆ ಕುಳಿತು ಸಿಗರೇಟು ಸೇದುತ್ತಾ ಜಪಾನಿ ಪ್ರಿಂಟ್‌ಗಳ ಬಗ್ಗೆ ಚರ್ಚೆ ಮಾಡುತ್ತಿದ್ದರು.

"ಕೇಳಿ..... ಎಲ್ಲಾ ರೆಡಿಯಾಗಿದೆ."

"ಪೇರ್, ನಿನ್ನ ಗಾಡಿ ತಳ್ಳುವುದಕ್ಕೆ ಸಹಾಯ ಮಾಡಲೇ" ವಿನ್ಸೆಂಟ್ ವಿಚಾರಿಸಿದ.

"ಬೇಡ ಬೇಡ. ನಾನು ಮ್ಯಾನೇಜರ್."

ಅವನು ರಸ್ತೆಯ ಮಧ್ಯಕ್ಕೆ ಗಾಡಿಯನ್ನು ತಳ್ಳಿದ. ಅಲ್ಲಿಂದ ಮುಂದೆ ರಸ್ತೆ ಸಾಕಷ್ಟು ಎತ್ತರದಲ್ಲಿತ್ತು. ಪೈಂಟರ್ ಇಬ್ಬಿಬ್ಬರಾಗಿ ಹೆಜ್ಜೆ ಹಾಕಿದರು. ಗಾಗಿನ್ ಮತ್ತು ಲಾಟ್ರೆಕ್ ಇಬ್ಬರೂ ಜೊತೆಯಾಗಿಯೇ ಇರುತ್ತಿದ್ದರು. ಸ್ಯುರಾತ್ ರೋಸೋನ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದ. ಅವನ ಅಭಿಮಾನಿಯಿಂದ ಬಂದ ಎರಡನೇ ಪತ್ರದ ಬಗ್ಗೆ ತುಂಬ ಭಾವೋದ್ರೇಕಕ್ಕೆ ಒಳಗಾಗಿದ್ದ. ವಿನ್ಸೆಂಟ್ ಮತ್ತು ಸೆಜಾನ್ನೆ ಬಹಳ ಗಂಭೀರವಾಗಿ ಡಿಗ್ನಿಟಿ, ಡಿಕೋರಮ್ ಮೊದಲಾದ ಮಾತುಗಳಲ್ಲಿ ಮುಳುಗಿ ಹೋಗಿ, ಕಡೆಯ ಸಾಲಿನಲ್ಲಿದ್ದರು.

ಸ್ವಲ್ಪ ದೂರ ಗುಡ್ಡ ಏರಿದ ಮೇಲೆ ಗಾಗಿನ್ ಹೇಳಿದ "ಪೇರ್ ಟಾಂಗೆ, ಮಹತ್ವದ ಕಲಾಕೃತಿಗಳಿಂದ ತುಂಬಿ ಗಾಡಿ ಸಾಕಷ್ಟು ಭಾರವಾಗಿದೆ. ನಾನು ಸ್ವಲ್ಪ ಸಹಾಯ ಮಾಡ್ತೀನಿ."

"ಬೇಡ ಬೇಡ. ಈ ಕ್ರಾಂತಿಯ ಮುಂಚೂಣಿಯಲ್ಲಿ ಇರುವವನು ನಾನು. ಮೊದಲ ಗುಂಡಿಗೆ ಎದೆಯೊಡ್ಡಿ ಬೀಳಬೇಕಾದವನು ನಾನು."

ಇವರೆಲ್ಲರ ಮೆರವಣಿಗೆ, ದಾರಿಹೋಕರಿಗೆ ಒಂದು ಥರಾ ತಮಾಶೆಯಾಗಿತ್ತು. ಆದರೆ ಕಲಾವಿದರಿಗೆ ಇದರಿಂದ ಏನೂ ಅನಿಸಿರಲಿಲ್ಲ. ಬದಲಾಗಿ ಉತ್ಸಾಹ, ಸಂಭ್ರಮಗಳಲ್ಲಿ ಪರಸ್ಪರ ಮಾತಾಡಿಕೊಳ್ಳುತ್ತಿದ್ದರು.

"ವಿನ್ಸೆಂಟ್, ನಾನು ನಿನಗೆ ಎರಡನೇ ಲೆಟರ್ ಬಗ್ಗೆ ಹೇಳಲಿಲ್ಲ ಅಲ್ವಾ, ಅದೇ ಸುಗಂಧ ಭರಿತ ಪತ್ರ, ಅದೇ ಹೆಂಗಸು ಬರೆದದ್ದು!" ರೂಸೋ ಸಂತೋಷದ ದನಿಯಲ್ಲಿ ಪ್ರಶ್ನಿಸಿದ.

ವಿನ್ಸೆಂಟ್‌ನ ಪಕ್ಕದಲ್ಲೇ ಓಡೋಡಿ ಬರುತ್ತ ಎಂದೂ ಮುಗಿಯದ ಪತ್ರದ ಕತೆಯನ್ನು ಹೇಳುತ್ತಲೇ ಹೋದ. ಕತೆ ಮುಗಿದ ಮೇಲೆ ಹೋಗಿ ಸ್ಯುರಾತ್‌ನ ಜೊತೆ ಸೇರಿದ. ಲಾಟ್ರೆಕ್ ವಿನ್ಸೆಂಟ್‌ನನ್ನು ಕರೆದು ಕೇಳಿದ.–

"ರೂಸೋನ ಆ ಹೆಂಗಸು ಯಾರು ಗೊತ್ತೇನು?"

"ಇಲ್ಲ. ನನಗೆ ಹೇಗೆ ಗೊತ್ತಾಗಬೇಕು?"

"ಒಳಗೊಳಗೇ ನಗುತ್ತಾ, "ಅದು ಗಾಗಿನ್. ರೂಸೋಗೆ ಪ್ರೇಮ ಪತ್ರಗಳನ್ನು ಬರೆಯುತ್ತಾ ಪ್ರೇಮ ಸಂಬಂಧವನ್ನು ಸೃಷ್ಟಿ ಮಾಡುತ್ತಿದ್ದಾನೆ. ಪಾಪ ರೂಸೋಗೆ ಯಾವ ಹೆಣ್ಣೂ ಇದ್ದಿರಲಿಲ್ಲ. ಸೆಂಟೆಡ್ ಲೆಟರ್‌ಗಳನ್ನು ಹೀಗೆ ಎರಡುಮೂರು ತಿಂಗಳು ಬರೆದುಬರೆದೂ, ಕಡೆಗೊಂದು ದಿನ ಹೆಣ್ಣಿನ ವೇಶದಲ್ಲಿ ಹೋಗಿ ಭೇಟಿಯಾಗ್ತಾನೆ. ಮಾಂಟ್‌ಮಾರ್ತ್ರೆನಲ್ಲಿ ಕಿಂಡಿ ಬಾಗಿಲು ಇರುವ ರೂಮೊಂದರಲ್ಲಿ ರೂಸೋನನ್ನು ಕಾಣಲಿದ್ದಾನೆ. ಮೊಟ್ಟಮೊದಲ ಬಾರಿಗೆ ರೂಸೋಗೆ ಪ್ರೀತಿಮಾಡುವ ಅನುಭವವನ್ನು ನೀಡಲಿದ್ದಾನೆ. ಎಂಥಾ ಅಮೂಲ್ಯವಾದ ಅನುಭವ."

"ಗಾಗಿನ್, ನೀನೊಬ್ಬ ಶೈತಾನನೇ ಸರಿ."

"ಕಮಾನ್ ವಿನ್ಸೆಂಟ್! ಇದೊಂದು ರೋಮಾಂಚಕಾರಿಯಾದ ತಮಾಶೆ."

ಕಡೆಗೆ ಅವರೆಲ್ಲ ನಾರ್ವಿನ್ಸ್ ರೆಸ್ಟೊರೆಂಟ್ ತಲುಪಿದರು. ಅದೊಂದು ಸಾಧಾರಣವಾದ ಸ್ಥಳವಾಗಿತ್ತು. ಒಂದು ಕಡೆಗೆ ವೈನ್‌ಷಾಪ್ ಮತ್ತೊಂದು ಕಡೆ ಕುದುರೆಗಳ ಸಪ್ಲೆಗೆ ಡಿಪೋ ಇತ್ತು. ರೆಸ್ಟೊರೆಂಟ್‌ನ ಹೊರಭಾಗಕ್ಕೆ ಹಳದಿ ಬಣ್ಣವನ್ನು ಬಳಿದಿದ್ದರು. ಒಳಭಾಗದ ಗೋಡೆಗಳಿಗೆ ತಿಳಿನೀಲಿ ಬಣ್ಣವಿತ್ತು. ಸುಮಾರು ಇಪ್ಪತ್ತು ಚೌಕಾಕಾರದ ಟೇಬಲ್‌ಗಳಿದ್ದವು. ಅವುಗಳ ಮೇಲೆ ಚೌಕಿಗಳ ಟೇಬಲ್ ಕ್ಲಾತ್ ಹಾಸಲಾಗಿತ್ತು. ಸ್ವಲ್ಪ ಹಿಂದೆ, ಅಡಿಗೆ ಮನೆಗೆ ಹತ್ತಿರದಲ್ಲಿ, ಎತ್ತರದ ಜಗುಲಿಯಂತಿದ್ದ ಜಾಗದಲ್ಲಿ ರೆಸ್ಟೊರೆಂಟ್ ಪ್ರೊಪ್ರೈಟರ್ ಕುಳಿತಿದ್ದ.

ಹೆಚ್ಚು ಕಡಿಮೆ ಒಂದು ಗಂಟೆ ಹೊತ್ತು, ಯಾರಯಾರ ಪಿಕ್ಚರ್ ಎಲ್ಲೆಲ್ಲಿ, ಯಾರ ಪಕ್ಕದಲ್ಲಿ ತೂಗು ಹಾಕಬೇಕೆಂಬ ವಿಚಾರದಲ್ಲಿ ಚರ್ಚೆ ನಡೆಯಿತು. ಪೇರ್‌ಟಾಂಗೆಗೆ, ಸಾಕಾಗಿ ಹೋಗಿತ್ತು. ಮಾಲಿಕನಿಗೆ ಸಿಟ್ಟು ಬರುತ್ತಿತ್ತು. ಡಿನ್ನರ್ ಟೈಂ ಹತ್ತಿರವಾಗುತ್ತಿತ್ತು.

ರೆಸ್ಟೋರೆಂಟ್ ಅವ್ಯವಸ್ಥೆಯ ಸ್ಥಿತಿಯಲ್ಲಿತ್ತು. ಸ್ಯುರಾತ್ ಗೋಡೆಯ ಬಣ್ಣಕ್ಕೆ ತನ್ನ ಆಕಾಶದ ಚಿತ್ರ ಸರಿ ಹೊಂದುವುದಿಲ್ಲ. ಅದರ ಸೌಂದರ್ಯವೇ ಹಾಳಾಗಿ ಹೋಗುತ್ತೆ ಅನ್ನುವ ಕಾರಣಕ್ಕೆ, ತನ್ನ ಪಿಕ್ಚರ್ ತೂಗುಹಾಕಲು ಒಪ್ಪಲಿಲ್ಲ ಸೆಜಾನ್ನೆ, ಲಾಟ್ರೆಕ್ ಭಯಂಕರವಾಗಿರುವ ಪೋಸ್ಟರ್‌ಗಳ ಪಕ್ಕದಲ್ಲಿರಲು ಒಪ್ಪಲಿಲ್ಲ. ರೂಸೋ ಮನಸ್ಸಿಗೆ ನೋವಾಯಿತು. ಅವನ ಪಿಕ್ಚರ್ಸ್ ಅನ್ನು ಎಲ್ಲಕ್ಕಿಂತ ಹಿಂದೆ. ಅಡಿಗೆ ಮನೆ ಗೋಡೆಯ ಬಳಿ ಇರುವಂತೆ ಮಾಡಿದರು. ಲಾಟ್ರೆಕ್ ತನ್ನೊಂದು ಪಿಕ್ಚರ್ ಅನ್ನು ಲವೇಟರಿ (ಶೌಚಾಲಯ)ಯಲ್ಲಿಯೇ ಇಡಬೇಕೆಂದು ಹಠ ಮಾಡಿದ.

"ಮನುಷ್ಯನ ಗಂಭೀರ ಆಲೋಚನೆಗಳ ಸಮಯವೇ ಅದಾಗಿದೆ" ಎಂದ.

ಪೇರ್ ಟಾಂಗೆ ಹತಾಶೆಯ ಸ್ಥಿತಿಯಲ್ಲಿ ವಿನ್ಸೆಂಟ್ ಬಳಿ ಬಂದ. "ವಿನ್ಸೆಂಟ್, ತಗೋ ಈ ಎರಡು ಫ್ರ್ಯಾಂಕ್. ಇದರ ಜೊತೆಗೆ ನಿನ್ನ ಹತ್ತಿರ ಎಷ್ಟಿದ್ದರೆ ಅಷ್ಟು ಸೇರಿಸಿ, ಇವರನ್ನೆಲ್ಲ ಆ ಬಾರ್‌ಗೆ ಸಾಗಿಸು. ನನಗೆ ಹದಿನೈದು ನಿಮಿಷ ಸಿಕ್ಕರೆ ಸಾಕು, ಕೆಲಸ ಎಲ್ಲ ಮುಗಿಸಿಬಿಡ್ತೀನಿ."

ಅವನ ಯೋಚನೆ ಸರಿಯಾಗಿತ್ತು. ಅವರೆಲ್ಲ ಮತ್ತೆ ರೆಸ್ಟೋರೆಂಟ್‌ಗೆ ಮರಳಿ ಬಂದಾಗ, ಎಲ್ಲವೂ ವ್ಯವಸ್ಥಿತವಾಗಿತ್ತು. ಜಗಳ ಆಡುವುದನ್ನು ನಿಲ್ಲಿಸಿ ರಸ್ತೆ ಕಡೆಗಿದ್ದ ಒಂದು ದೊಡ್ಡ ಟೇಬಲ್‌ನ ಸುತ್ತ ಕುಳಿತರು. ಪೇರ್ ಟಾಂಗೆ ಎಲ್ಲ ಪೋಸ್ಟರ್‌ಗಳನ್ನು ಗೋಡೆಗಳ ಮೇಲೆ ಏರಿಸಿಬಿಟ್ಟಿದ್ದ.

"ಈ ಪೈಂಟಿಂಗ್ಸ್ ಮಾರಾಟಕ್ಕಿವೆ; ಬಹಳ ಅಗ್ಗದ ಬೆಲೆಗೆ ಲಭ್ಯವಿದೆ; ಪ್ರೊಪ್ರೈಟರ್ ಅನ್ನು ಸಂಪರ್ಕಿಸಿ.'

ಐದೂವರೆ ಸಮಯ. ಆರುಗಂಟೆಯವರೆಗೆ ಊಟದ ಸಪ್ಲೈ ಇರುವುದಿಲ್ಲ. ಈ ಕಲಾವಿದರೆನಿಸಿ ಕೊಂಡವರೋ ಶಾಲೆಯ ಹುಡುಗಿಯರ ಹಾಗೆ ಚಡಪಡಿಸುತ್ತಿದ್ದರು. ಮುಂದಿನ ಬಾಗಿಲು ತೆರೆದುಕೊಂಡಾಗಲೆಲ್ಲ ಆಸೆ, ಭರವಸೆಗಳಿಂದ ದೃಷ್ಟಿ ಅತ್ತ ಹಾಯಿಸುತ್ತಿದ್ದರು. ನಾರ್ವಿನ್ಸ್‌ನ ಗಿರಾಕಿಗಳು ಆರುಗಂಟೆವರೆಗೆ ಯಾರೊಬ್ಬರೂ ಬರಲಿಲ್ಲ.

"ವಿನ್ಸೆಂಟ್‌ನ ನೋಡು. ಪ್ರೈಮಾಡೊನ್ನಾಳಂತೆ, ಹೆದರಿ ಕೂತಿದ್ದಾನೆ." ಗಾಗಿನ್ ಸ್ಯುರಾತ್‌ಗೆ ಹೇಳಿದ.

"ಗಾಗಿನ್ ನಾನು ಏನು ಮಾಡ್ತೀನಿ ಗೊತ್ತಾ. ನಿನ್ನ ಕ್ಯಾನ್‌ವಾಸ್‌ಗಿಂತ ಮೊದಲು ನನ್ನ ಕ್ಯಾನ್‌ವಾಸ್‌ಗೆ ಗಿರಾಕಿ ಸಿಕ್ತಾನೆ. ಬೇಕಾದರೆ ಬೆಟ್ ಕಟ್ಟೋಣ. ನಿನಗೆ ಊಟ ನನ್ನ ಕಡೆಯಿಂದ."

"ಒಪ್ಪಿಕೊಂಡೆ."

"ಸೆಜಾನ್ನೆ, ನಾನು ಒಂದಕ್ಕೆ ಮೂರು" ಲಾಟ್ರೆಕ್ ಹೇಳಿದ.

ಸೆಝಾನ್ನೆಗೆ ಯಾಕೋ ಅವಮಾನ ಆದಂತಾಯಿತು. ಎಲ್ಲರೂ ಅವನನ್ನು ನೋಡಿ ನಕ್ಕರು.

"ಮರೀಬೇಡಿ...... ಬೆಲೆ ನಿರ್ಧರಿಸೋದು, ಮಾರೋದು ಎಲ್ಲ ಟಾಂಗೆಗೆ ಬಿಟ್ಟದ್ದು. ಮಧ್ಯೆ ನೀವು ಯಾರೂ ತಲೆಹಾಕಿ ಚೌಕಾಶಿ ಮಾಡೋದು, ಅದೂ ಇದೂ ಮಾಡಬಾರದು." ಎಚ್ಚರಿಸುವ ದನಿಯಲ್ಲಿ ಹೇಳಿದ ವಿನ್ಸೆಂಟ್.

ಆರುಗಂಟೆ ಹತ್ತಿರವಾಗುತ್ತಿದ್ದಂತೆ ಇವರೆಲ್ಲ ಉತ್ಸುಕರಾದರು. ಕ್ರಮೇಣ ಅವರ ತಮಾಶೆ, ಕುಚೋದ್ಯ, ಲೇವಡಿ ಇತ್ಯಾದಿಗಳೆಲ್ಲ ನಿಂತವು. ಬಾಗಿಲ ಕಡೆಯಿಂದ ಅವರ ದೃಷ್ಟಿ ಚಲಿಸಲಿಲ್ಲ. ಒಂದು ಬಗೆಯ ಆತಂಕ ಶುರುವಾಯಿತು.

"ನಾನು ಇಂಡಿಪೆಂಡೆಂಟ್ಸ್ ಜೊತೆ ವಿಮರ್ಶಕರ ಮುಂದೆ ಪ್ರದರ್ಶನ ಮಾಡಿದಾಗ ಹೀಗಾಗಿರಲಿಲ್ಲ." ಗೊಣಗುತ್ತಲೇ ಹೇಳಿದ ಸ್ಯುರಾತ್.

"ಏ! ನೋಡಿ ನೋಡಿ, ಆ ರಸ್ತೆಯಿಂದ ಒಬ್ಬ ಗಿರಾಕಿ ಈ ಕಡೇನೇ ಬರ್ತಿದ್ದಾನೆ!" ರೂಸೋ ಪಿಸುದನಿಯಲ್ಲಿ ಹೇಳಿದ.

ಆ ಮನುಷ್ಯ ನಾರ್ವಿನ್ಸ್ ಕಡೆ ಬಂದು ಮರೆಯಾದ. ಗೋಡೆಯ ಮೇಲಿನ ಗಡಿಯಾರ ಆರುಗಂಟೆ ಬಾರಿಸಿತು. ಕಡೆಯ ಗಂಟೆ ಬಾರಿಸಿದಾಗ, ಒಬ್ಬ ಕಾರ್ಮಿಕ ಒಳಗೆ ಬಂದ. ಅವನು ಕೊಳಕು ಬಟ್ಟೆ ಧರಿಸಿದ್ದ. ಅವನ ಮುಖ, ಮೈತುಂಬಾ ಆಯಾಸದ ಲಕ್ಷಣಗಳು ಕಾಣಿಸಿದವು.

ಆ ಕಾರ್ಮಿಕ, ಊಟದ ಒಂದು ಟೇಬಲ್ ಬಳಿ ಕುಳಿತು, ಹ್ಯಾಟನ್ನು ತೆಗೆದಿರಿಸಿದ. ಆರು ಜನ ಪೈಂಟರ್ಸ್ ಅವನನ್ನೇ ಗಮನಿಸುತ್ತಿದ್ದರು. ಆತ ಮೆನು ಕಾರ್ಡನ್ನು ನೋಡಿ, ಆರ್ಡರ್ ಮಾಡಿದ. ಒಂದೆರಡು ಕ್ಷಣಗಳಲ್ಲಿ ಬಿಸಿಬಿಸಿ ಸೂಪನ್ನು ಹೀರುತ್ತಿದ್ದ. ತನ್ನ ಮುಂದಿದ್ದ ಪ್ಲೇಟಿನ ಮೇಲಿಂದ ದೃಷ್ಟಿ ಬದಲಿಸಲಿಲ್ಲ.

"ಬಹಳ ಕುತೂಹಲಕಾರಿಯಾಗಿದೆ" ವಿನ್ಸೆಂಟ್ ಹೇಳಿದ.

ನಂತರ ಒಂದಿಬ್ಬರು ಷೀಟ್‌ಮೆಟಲ್ ವರ್ಕರ್ಸ್ ಬಂದರು. ಪ್ರೊಪ್ರೈಟರ್ ಸ್ವಾಗತಿಸಿದ. ಎರಡು ಕುರ್ಚಿಗಳಲ್ಲಿ ಕುಕ್ಕರಿಸಿ, ಬೆಳಗ್ಗೆ ನಡೆದಿರಬಹುದಾದ ಯಾವುದೋ ಒಂದು ಘಟನೆಯ ಬಗ್ಗೆ ಇಬ್ಬರೂ ಜಗಳವಾಡಲು ತೊಡಗಿದರು.

ಕ್ರಮೇಣ ರೆಸ್ಟೋರೆಂಟ್‌ಗೆ ಗಿರಾಕಿಗಳು ಬರಲು ತೊಡಗಿದರು. ಅವರವರಿಗೇ ಮೀಸಲಾದ ಟೇಬಲ್‌ಗಳಿದ್ದಂತೆ ಕಾಣಿಸಿತು. ಬಂದವರು ತಮ್ಮತಮ್ಮ ನಿಶ್ಚಿತ ಜಾಗಗಳಲ್ಲಿ ಕುಳಿತರು. ಅವರು ಮೊದಲಿಗೆ ನೋಡಿದ್ದು 'ಮೆನು' ಅವರು ತಮ್ಮ ಮುಂದೆ ತಂದಿಟ್ಟ ಊಟದಲ್ಲಿ ಎಷ್ಟು ತನ್ಮಯರಾಗಿದ್ದರೆಂದರೆ, ಏನೊಂದೂ ಅವರ ಕಣ್ಣಿಗೆ ಬೀಳುವ ಸ್ಥಿತಿಯಲ್ಲಿ ಇರಲಿಲ್ಲ. ಊಟದ ನಂತರ ಪೈಪ್ ಹಚ್ಚಿಕೊಂಡು ಧೂಮಪಾನದಲ್ಲಿ ಮಗ್ನರಾಗಿ, ಅದೂ ಇದೂ ಮಾತಾಡಲು ತೊಡಗಿದರು. ಸಂಜೆಯ ಸುದ್ದಿ ಪತ್ರಿಕೆಗಳನ್ನು ಬಿಡಿಸಿ ಓದಲು ತೊಡಗಿದರು.

"ಮಹನೀಯರೇ, ನಿಮಗೂ ಊಟಗಳನ್ನು ತರಲೇ?" ವೈಟರ್ ಕೇಳಿದ. ಆದರೆ ಯಾರೊಬ್ಬರೂ ಮಾತಾಡಲಿಲ್ಲವಾದ ಕಾರಣ, ವೈಟರ್ ಸುಮ್ಮನೆ ಹೊರಟು ಹೋದ. ಅಷ್ಟರಲ್ಲಿ ಒಂದು ಹೆಣ್ಣು, ಒಂದು ಗಂಡು ಪ್ರವೇಶಿಸಿದರು.

ಇನ್ನೇನು ಅವನು ತನ್ನ ಹ್ಯಾಟನ್ನು ರ್ಯಾಕ್‌ನಲ್ಲಿ ಇರಿಸಬೇಕೆಂದು ಎದ್ದು ನೋಡಿದಾಗ, ರೂಸೋನ ಟೈಗರ್ ಕಣ್ಣಿಗೆ ಬಿತ್ತು. ತನ್ನ ಜೊತೆಗಾರನಿಗೆ ಅದನ್ನು ತೋರಿಸಿದ. ಪೈಂಟರ್ಸ್ ಟೇಬಲ್‌ನಲ್ಲಿ ಎಲ್ಲರೂ ಗಂಭೀರರಾದರು. ರೂಸೋ ಅಂತೂ ಆಗಲೇ ಏಳಲು ಪ್ರಯತ್ನಿಸಿದ. ಹೆಂಗಸು ಮೆಲುದನಿಯಲ್ಲಿ ಏನೋ ಹೇಳಿ ನಕ್ಕಳು. ಮತ್ತೆ ಅವರೆಲ್ಲ ಕುಳಿತು, ಟೇಬಲ್ ಮೇಲಿದ್ದ ಊಟವನ್ನು ಗಬಗಬ ತಿನ್ನುವುದರಲ್ಲಿ ಲೀನರಾದರು.

ಏಳೂಮುಕ್ಕಾಲು ಗಂಟೆಗೆ ವೈಟರ್, ಅವರು ಹೇಳದಿದ್ದರೂ ಸೂಪನ್ನು ತಂದಿಟ್ಟ. ಯಾರೊಬ್ಬರೂ ಮುಟ್ಟಲಿಲ್ಲ. ಅದು ತಣ್ಣಗಾದ ಮೇಲೆ ವೈಟರ್ ಬಂದು ಹಿಂದಕ್ಕೆ ತೆಗೆದುಕೊಂಡು ಹೋದ. ವೈಟರ್ ಈಗ ಗ್ರೇವಿ ತಂದಿರಿಸಿದ. ಲಾಟ್ರೆಕ್ ಫೋರ್ಕ್‌ನಿಂದ ಗ್ರೇವಿಯಲ್ಲಿ ಚಿತ್ರಗಳನ್ನು ಬಿಡಿಸಲು ತೊಡಗಿದ. ರೂಸೋ ಒಬ್ಬ ಮಾತ್ರವೇ ಗ್ರೇವಿ ಸೇವಿಸಿದ. ಪ್ರತಿಯೊಬ್ಬರೂ ತಮ್ಮ ಮುಂದಿದ್ದ ಹುಳಿ ಹೆಂಡವನ್ನು ಖಾ,ಲಿ ಮಾಡಿದರು. ಆಹಾರ ಪದಾರ್ಥಗಳ, ಕಾರ್ಮಿಕರ ಬೆವರಿನ ವಾಸನೆ ರೆಸ್ಟೋರೆಂಟ್‌ನಲ್ಲೆಲ್ಲ ತುಂಬಿತ್ತು.

ಒಬ್ಬೊಬ್ಬರೂ ಊಟ ಮಾಡಿದ್ದ ಹಣವನ್ನು ಪಾವತಿ ಮಾಡಿ, ಶುಭರಾತ್ರಿ ಹೇಳಿ ಒಬ್ಬರ ಹಿಂದೊಬ್ಬರು ಹೊರಗೆ ಹೋದರು.

"ಜೆಂಟಲ್‌ಮೆನ್, ದಯವಿಟ್ಟು ಕ್ಷಮಿಸಿ. ಎಂಟೂವರೆಗೆ ರೆಸ್ಟೋರೆಂಟ ಬಾಗಿಲು ಮುಚ್ಚಬೇಕಿದೆ."

ಪೇರ್ ಟಾಂಗೆ ಗೋಡೆಯ ಮೇಲೆ ಇದ್ದ ಚಿತ್ರಪಟಗಳನ್ನೆಲ್ಲ ಕಳಚಿ ತೆಗೆದು, ಹೊರಗೆ ತೆಗೆದುಕೊಂಡು ಹೋದ. ಗಾಡಿಯನ್ನು ತಳ್ಳಿಕೊಂಡು ಮನೆಯತ್ತ ನಡೆದ.

-೧೨-

ಹಳೆಯ ಗೂಪಿಲ್ಸ್ ಮತ್ತು ವಿನ್ಸೆಂಟ್ ವಾನ್‌ಗೋ ಸಂಸ್ಥೆಗಿದ್ದ ಹೆಸರು, ಪ್ರತಿಷ್ಠೆ, ಅನ್ಯ ಗ್ಯಾಲರಿಗಳಿಂದ ಮರೆಯಾಯಿತು. ಕಲಾಕೃತಿಗಳು ಈಗ ಮಾರುಕಟ್ಟೆಯಲ್ಲಿ ಬೇರೆ ಯಾವುದೋ ಸರಕು ಮಾರಾಟವಾಗುವಂತೆ, ಮಾರಾಟವಾಗತೊಡಗಿದವು. ಆದಷ್ಟು ಹೆಚ್ಚಿನ ಲಾಭ ಬರುವಂತೆ, ಕಳಪೆಯ ಕಲಾಕೃತಿಗಳನ್ನೂ ಮಾರಾಟ ಮಾಡುವಂತೆ, ಥಿಯೋ ಮೇಲೆ ಒತ್ತಡ ಬೀಳುತ್ತಿತ್ತು. ಆಗಾಗ ಅವಮಾನದ ಪ್ರಸಂಗಗಳೂ ಎದುರಾಗುತ್ತಿದ್ದವು.

"ಥಿಯೋ, ನೀನ್ಯಾಕೆ ಗೂಪಿಲ್ಸ್ ತೊರೆಯ ಬಾರದು" ವಿನ್ಸೆಂಟ್ ಕೇಳಿದ.

"ಬೇರೆ ಯಾರೇ ಆರ್ಟ್ ಡೀಲರ್ ಆದರೂ ಇದೇ ಹಣೆ ಬರಹ.... ಅಲ್ದೆ ನಾನು ಈ ಸಂಸ್ಥೆಯಲ್ಲಿ ಎಷ್ಟೋ ವರ್ಷಗಳಿಂದ ಕೆಲಸಮಾಡಿದ್ದೀನಿ" ಸೋತ ದನಿಯಲ್ಲಿ ಹೇಳಿದ.

"ಇಲ್ಲ, ನೀನು ಜಾಗ ಬದಲಾಯಿಸಲೇ ಬೇಕು. ನಾನೇ ಬಲವಂತ ಮಾಡ್ತೀನಿ. ದಿನದಿಂದ ದಿನಕ್ಕೆ ನಿನ್ನ ಮನಸ್ಸಿಗೆ ಏನಾಗ್ತಿದೆ, ನನಗೆ ಗೊತ್ತು. ಇತ್ತೀಚೆಗೆ ಒಂದು ದಿನವೂ ನಿನಗೆ ಅಲ್ಲಿ ಸಂತೋಷ ಸಿಕ್ಕ ಹಾಗೆ ಇಲ್ಲ. ನನ್ನ ಬಗ್ಗೆ ನೀನೇನೂ ಚಿಂತೆ

ಮಾಡಬೇಡ. ಹೇಗೋ ಓಡಾಡಿಕೊಂಡು ಇರಬಲ್ಲೆ. ಥಿಯೋ, ಇಡೀ ಪ್ಯಾರಿಸ್‌ನಲ್ಲಿ ಅತ್ಯಂತ ಬುದ್ಧಿವಂತ ಆರ್ಟ್‌ಡೀಲರ್ ಎಂಬ ಹೆಸರು ನಿನಗಿದೆ. ನಿನ್ನದೇ ಸ್ವಂತದ್ದೊಂದು ಗ್ಯಾಲರಿಯನ್ನೇಕೆ ತೆರೆಯಬಾರದು?"

"ಓ ದೇವರೇ, ಮತ್ತೆ ಮೊದಲಿನಿಂದ ಶುರು ಮಾಡಬೇಕೇ?"

"ಥಿಯೋ, ಕೇಳಿಸಿಕೋ. ನನಗೊಂದು ಐಡಿಯಾ ಬರ್ತಾ ಇದೆ. ನಾವೊಂದು ಕಮ್ಯುನಿಸ್ಟ್ ಆರ್ಟ್ ಗ್ಯಾಲರಿ ತೆಗೆಯೋಣ. ನಾವು ನಮ್ಮ ಕ್ಯಾನ್‌ವಾಸ್‌ಗಳನ್ನೆಲ್ಲ ಕೊಡ್ತೀವಿ. ಅವುಗಳಿಗೆ ಬಂದ ಹಣದಿಂದ ನಾವೆಲ್ಲ ಒಟ್ಟಿಗೆ ಹಂಚಿಕೊಂಡು ಇರೋಣ. ಹೇಗಾದರೂ ಸ್ವಲ್ಪಸ್ವಲ್ಪ ಹಣ ಸೇರಿಸಿ ಬಂದು ಪುಟ್ಟ ಗ್ಯಾಲರಿ ಆರಂಭ ಮಾಡೋಣ, ಯಾವುದಾದರೂ ಸಣ್ಣ ಊರಲ್ಲಿ ಒಂದು ಮನೆ ಮಾಡೋಣ. ಎಲ್ಲರೂ ಒಟ್ಟಿಗೆ ಜೊತೇಲೇ ಇರೋಣ. ಜೊತೆಗೇ ಕೆಲಸ ಮಾಡೋಣ. ಪೋರ್ಟಿಯರ್ ಲಾಟ್ರೆಕ್‌ನ ಕ್ಯಾನ್‌ವಾಸ್ ಮಾರಿದ. ಪೇರ್ ಟಾಂಗೆ ಸೆಜ಼ಾನ್ನೆಯ ಕೆಲವು ಕೃತಿಗಳನ್ನು ಮಾರಿದ. ನನಗಂತೂ ಅನ್ಸತ್ತೆ, ನಾವು ಯುವ ಗ್ರಾಹಕರನ್ನು ಸುಲಭವಾಗಿ ಸೆಳೆಯಬಹುದು ಅಂತ. ಆ ಗ್ರಾಮೀಣ ಪ್ರದೇಶದಲ್ಲಿ ಮನೆ ನಡೆಸೋದು ಅಷ್ಟೊಂದು ಕಷ್ಟವಾಗಲಾರದು. ಪ್ಯಾರಿಸ್‌ನಲ್ಲಿ ನೂರೆಂಟ್ ಕಡೆ ಅಂಗಡಿ ತೆಗೆಯೋ ಬದಲು, ಇಂಥ ಕಡೆ ಸರಳವಾಗಿ ಬದುಕು ನಡೆಸೋದು ಕಷ್ಟವೇನೂ ಆಗೊಲ್ಲ."

"ವಿನ್ಸೆಂಟ್ ನನ್ನ ತಲೆ ಸಿಡಿದು ಹೋಗುತ್ತಿದೆ. ನನಗೆ ಮಲಗೋಕೆ ಬಿಡು."

"ಇಲ್ಲ. ನೀನು ಕೇಳಿಸಿಕೊಳ್ಳಲೇ ಬೇಕು. ಬೇಕಾದರೆ ಭಾನುವಾರ ಮಲಕ್ಕೋಬಹುದು.... ಎಲ್ಲಿ ಹೋಗ್ತಿದ್ದೀಯ..... ಬಟ್ಟೆ ಬೇಕಾದರೆ ಬದಲಾಯಿಸಿಕೋ. ಬೇಡ, ಅನ್ನೊಲ್ಲ. ಆದರೆ ನಾನಂತು ಮಾತಾಡದೆ ಬಿಡೊಲ್ಲ. ನೀನು ಹಾಸಿಗೇಲಿ ಮೈಚಾಚು. ನಿನ್ನ ಪಕ್ಕದಲ್ಲಿ ನಾನು ಕೂತ್ಕೋತೀನಿ. ಗೂಪಿಲ್ಸ್‌ನಲ್ಲಿ ನೀನು ಸಂತೋಷವಾಗಿಲ್ಲಾಂದ್ರೆ, ಪ್ಯಾರಿಸ್‌ನ ಕಲಾವಿದರೆಲ್ಲ ಒಪ್ಪುವುದಾದರೆ, ಸ್ವಲ್ಪ ಹಣಾನಾ ಹೇಗೋ ಶೇಖರಿಸಬಹುದು....."

ಮಾರನೇ ದಿನ ರಾತ್ರಿ ವಿನ್ಸೆಂಟ್‌ನ ಜೊತೇಲಿ ಪೇರ್‌ಟಾಂಗೆ, ಲಾಟ್ರೆಕ್‌ರು ಬಂದರು. ವಿನ್ಸೆಂಟ್ ಸಂಜೆ ಎಲ್ಲಿಯಾದರೂ ಹೋಗಬಹುದೆಂದು, ಥಿಯೋ ಭಾವಿಸಿದ್ದ. ಪೇರ್ ಟಾಂಗೆಯ ಕಣ್ಣುಗಳಲ್ಲಿ ಸಂಭ್ರಮೋತ್ಸಾಹಗಳು ಇಣುಕುತಿದ್ದವು.

"ಮಿಸ್ಟರ್ ವಾನ್‌ಗೋ, ಮಿಸ್ಟರ್ ವಾನ್‌ಗೋ, ಇದು ಬಹಳ ಅದ್ಭುತವಾದ ಯೋಚನೆ. ನಾನು ಬೇಕಾದರೆ ಇಲ್ಲಿರುವ ನನ್ನ ಅಂಗಡಿ ಬಿಟ್ಟು ಬಿಡ್ತೇನೆ. ಹಳ್ಳಿ ಪ್ರದೇಶಕ್ಕೆ ಹೋಗೋಕೆ ನನಗೇನೂ ಅಭ್ಯಂತರವಿಲ್ಲ. ನಾನು ಬೇಕಾದರೆ ಬಣ್ಣಗಳನ್ನೆಲ್ಲಾ ಅರೆದುಕೊಡ್ತೇನೆ. ಕ್ಯಾನ್‌ವಾಸ್‌ಗಳನ್ನು ಬಿಡಿಸಿಕೊಡ್ತೇನೆ. ಫ್ರೇಮ್‌ಗಳನ್ನೂ ಸಿದ್ಧಮಾಡ್ತೇನೆ. ನನಗೇನೂ ಕೊಡಬೇಡ. ಬರೀ ಊಟ, ಇರೋಕೆ ಜಾಗ, ಅಷ್ಟಾದರೆ ಸಾಕು."

ಥಿಯೋ ನಿಟ್ಟುಸಿರಿನೊಂದಿಗೆ ಪುಸ್ತಕ ಕೆಳಗಿರಿಸಿದ.

"ಈ ಸಾಹಸಕ್ಕೆ ದುಡ್ಡನ್ನು ತರುವುದಾದರೂ ಎಲ್ಲಿಂದ? ಗ್ಯಾಲರಿ ಓಪನ್ ಮಾಡೋಕೆ, ಮನೆಗೆ ಬಾಡಿಗೆ ಕೊಡೋಕೆ, ನಾವೆಲ್ಲ ಹೊಟ್ಟೆ ತುಂಬಿಸಿಕೊಳ್ಳೋಕೆ?"

"ಅದಕ್ಕೆಲ್ಲ ಇಲ್ಲಿದೆ ನೋಡು. ಇನ್ನೂರ ಐವತ್ತು ಫ್ರ್ಯಾಂಕ್. ಇದೆಲ್ಲ ನಾನು ಉಳಿತಾಯ ಮಾಡಿದ್ದು. ತಗೋ ವಾನ್‌ಗೋ. ನಮ್ಮ ಕಾಲೋನಿ ಶುರು ಮಾಡೋಕೆ ಸಾಕಾಗುತ್ತೆ" ಎಂದು ಪೇರ್‌ಟಾಂಗೆ ಥಿಯೋಗೆ ಒತ್ತಾಯ ಮಾಡಿದ.

"ಲಾಟ್ರೆಕ್, ನೀನೊಬ್ಬ ಬುದ್ಧಿವಂತ. ಇದಕ್ಕೆಲ್ಲ ಏನು ಹೇಳ್ತೀಯ?"

"ಏನು ಹೇಳೋದು? ನನ್ ಕೇಳಿದರೆ ಒಳ್ಳೇ ಆಲೋಚನೆ ಅಂತಲೇ ಅನ್ನತ್ತೆ, ಎಲ್ಲರಿಗೂ ಗೊತ್ತಿರೋ ಹಾಗೆ, ನಾವು ಪ್ಯಾರಿಸ್ ಜೊತೆ ಹೋರಾಡುತ್ತಲೇ ಇದ್ದೇವೆ. ನಮ್ಮ ನಮ್ಮಲ್ಲೇ ಕಿತ್ತಾಡುತ್ತಲೂ ಇದ್ದೇವೆ. ಹೀಗಿರುವಾಗ ಒಂದು ವೇಳೆ ನಾವೆಲ್ಲರೂ ಒಟ್ಟಾಗಿ ಹೋರಾಟಕ್ಕೆ....."

'ಆಯ್ತು. ನಮ್ಮೆಲ್ಲರಿಗಿಂತ ನೀನು ಶ್ರೀಮಂತ. ನೀನೇನಾದರೂ ಸಹಾಯ ಮಾಡ್ತೀಯ?"

"ಇಲ್ಲ. ಆದರೆ ಬೇಕಾದರೆ, ಪೇರ್‌ಟಾಂಗೆ ಕೊಟ್ಟ ಹಾಗೆ ನಾನೂ ಇನ್ನೂರ ಐವತ್ತು ಫ್ರ್ಯಾಂಕ್ ಕೊಡಲು ಸಿದ್ಧನಿದ್ದೇನೆ."

"ಇದೊಂದು ಹುಚ್ಚು ಕಲ್ಪನೆ! ವ್ಯಾಪಾರ ಜಗತ್ತು ಹೇಗಿದೆ ಅನ್ನೋದು ಗೊತ್ತಿದ್ದರೆ...."

ಪೇರ್ ಟಾಂಗೆ ಥಿಯೋ ಬಳಿಗೆ ಧಾವಿಸಿ, ಅವನ ಕೈ ಹಿಡಿದು,

"ಥಿಯೋ ಹುಚ್ಚು ಆಲೋಚನೆ ಅದೂ ಇದೂಂತ ಹೇಳಬೇಡ. ನಿಜವಾಗಿಯೂ ಇದೊಂದು ಅದ್ಭುತವಾದ ಆಲೋಚನೆ. ನೀನಂತೂ ಮಾಡಲೇಬೇಕು."

"ಥಿಯೋ, ಹಿಂದಕ್ಕೆ ಹೋಗೋ ಪ್ರಶ್ನೆಯೇ ಇಲ್ಲ. ನೀನು ಸಿಕ್ಕಿದ್ದೀಯ! ಹೇಗಾದರೂ ದುಡ್ಡಿಗೆ ವ್ಯವಸ್ಥೆ ಮಾಡ್ತೀವಿ. ನಿನ್ನನ್ನು ನಮ್ಮ ಮುಖಂಡನಾಗಿ ಮಾಡಿ ಕೊಳ್ತೀವಿ.ಲ ಗೂಪಿಲ್ಸ್‌ಗೆ ಗುಡ್‌ಬೈ ಹೇಳಿ ಬಿಡು. ನಾಳೆಯಿಂದ ನಿನಗೂ ಅದಕ್ಕೂ ಸಂಬಂಧ ಇಲ್ಲ. ಈಗ ನೀನು 'ಕಮ್ಯುನಿಸ್ಟ್ ಆರ್ಟ್ ಕಾಲೋನಿ'ಯ ಮ್ಯಾನೇಜರ್!"

ಥಿಯೋ ಕೈಗಳನ್ನು ಹುಬ್ಬಿನ ಮೇಲೆ ಇರಿಸಿಕೊಂಡು,

"ಹಾಂ! ಹಾಂ...... ಕಾಣ್ತಾ ಇದೆ. ಕಾಡು ಪ್ರಾಣಿಗಳ ಗುಂಪೊಂದು ಇಲ್ಲಿಯೇ ಮುಂದೆ ನಿಂತಿದೆ!"

ಮಾರನೆದಿನ ರಾತ್ರಿ ಥಿಯೋ ಮನೆ ತಲುಪಿದಾಗ, ಪೈಂಟರ್ಸ್‌ಗಳಿಂದ ಕಿಕ್ಕಿರಿದು ತುಂಬಿ ಹೋಗಿದೆ. ಮನೆ ಒಳಗೆಲ್ಲಾ ದಟ್ಟವಾದ ಟೊಬ್ಯಾಕೋದ ಹೊಗೆ ಆವರಿಸಿದೆ. ಅಬ್ಬರದ ದನಿಯಲ್ಲಿ ಭಾವೋದ್ವೇಗದ ಮಾತುಗಳು ಕೇಳಿ ಬರುತ್ತಿವೆ. ಇವರೆಲ್ಲರ ನಡುವೆ ವಿನ್ಸೆಂಟ್ ಒಂದು ಸಣ್ಣ ಟೇಬಲ್ ಮೇಲೆ 'ಮಾಸ್ಟರ್ ಆಫ್ ಸೆರೆಮೊನೀಸ್' ಎಂಬಂತೆ ಕುಳಿತಿದ್ದಾನೆ."

"ಇಲ್ಲ, ಇಲ್ಲ...... ಅವನು ಕೂಗಿ ಹೇಳುತ್ತಿದ್ದ. ಯಾರಿಗೂ ಸಂಬಳವೂ ಇಲ್ಲ; ಹಣವೂ ಇಲ್ಲ. ಒಂದು ವರ್ಷ ಹಣದ ಪ್ರಶ್ನೆಯೇ ಇಲ್ಲ. ಥಿಯೋ ಪಿಕ್ಚರ್ಸ್ (ಕಲಾಕೃತಿಗಳು)

ಮಾರಾಟ ಮಾಡ್ತಾನೆ. ನಮಗೆ ಊಟ, ತಿಂಡಿ, ವಸತಿ ನೀಡ್ತಾನೆ. ಜೊತೆಗೆ ಪೈಂಟಿಂಗ್‌ಗೆ ಬೇಕಾದ ಸಾಮಗ್ರಿಯನ್ನೂ ಕೊಡ್ತಾನೆ.

"ಕಲಾಕೃತಿಗಳು ಮಾರಾಟವಾಗದೆ ಇರುವ ಕಲಾವಿದನ ವಿಷಯದಲ್ಲಿ ಏನ್ಮಾಡೋದು? ಎಷ್ಟು ದಿನಾಂತ ಅವನಿಗೆ ಬಿಟ್ಟಿ ಊಟ ಹಾಕೋದು?" ಸ್ಯುರಾತ್ ಪ್ರಶ್ನಿಸಿದ.

"ಎಲ್ಲೀವರೆಗೆ ನಮ್ಮ ಜೊತೆ ಇರೋಕೆ ಇಷ್ಟ ಪಡ್ತಾರೋ. ಅಲ್ಲೀವರೆಗೆ."

"ಅದ್ಭುತವಾಗಿದೆ." ಗಾಗಿನ್ ಥಟ್ಟನೆ ಉತ್ತರಿಸಿದ.

"ಪರವಾಗಿಲ್ಲ, ಯೂರೋಪಿನ ಎಲ್ಲ ಅಮೆಚೂರ್ ಪೈಂಟರ್ಸ್ ಎಲ್ಲರೂ ನಮ್ಮ ಬಾಗಿಲಿನ ಮುಂದೆ ಇರ್ತಾರೆ" –ಮುಂದುವರೆದು ಹೇಳಿದ.

"ಮಿಸ್ಟರ್ ವಾನ್‌ಗೋ".... ಬಾಗಿಲಿಗೆ ಒರಗಿ ನಿಂತಿದ್ದ ಥಿಯೋನನ್ನು ನೋಡುತ್ತಾ

"ತ್ರೀ ಚಿಯರ್ಸ್! ನಮ್ಮ ಮ್ಯಾನೇಜರ್ ಥಿಯೋಗೆ ತ್ರೀ ಚಿಯರ್ಸ್" ಎಂದು ಉತ್ಸಾಹದಿಂದ ಕೂಗಿ ಹೇಳಿದ.

"ಹುರ್‍ರಾಹ್! ಥಿಯೋಗೆ ಹುರ್‍ರಾಹ್!"

ಎಲ್ಲರೂ ಸಡಗರ, ಸಂಭ್ರಮಗಳ ಲಹರಿಯಲ್ಲಿ ಇದ್ದರು. ರೂಸೋ, ಕಾಲೋನಿಯಲ್ಲಿ ವಯಲಿನ್ ಪಾಠಗಳನ್ನು ಹೇಳಿಕೊಡಲು ಸಾಧ್ಯವೇ ಎಂದು ವಿಚಾರಿಸಿದ. ಆ್ಯಂಕೆಟಿನ್, ತನ್ನ ಮನೆಯ ಮೂರು ತಿಂಗಳ ಬಾಡಿಗೆ ಬಾಕಿಯಿರುವುದರಿಂದ ಆದಷ್ಟು ಬೇಗ ಮನೆ ಹುಡುಕಲು ಸಲಹೆ ನೀಡಿದ. ಸೆಝಾನ್ನೆ, ಯಾರಿಗಾದರೂ ತನ್ನ ಸ್ವಂತಕ್ಕೆ ದುಡ್ಡು ಖರ್ಚು ಮಾಡಬೇಕೆನಿಸಿದರೆ, ಅವನಲ್ಲಿ ದುಡ್ಡು ಇದ್ದಲ್ಲಿ ಅವಕಾಶ ಕೊಡಬೇಕೆಂದು ಒತ್ತಾಯಿಸಿದ. ಆದರೆ ವಿನ್ಸೆಂಟ್, ಮಧ್ಯದಲ್ಲಿಯೇ ಬಾಯಿ ಹಾಕಿ, "ಇಲ್ಲ ಖಂಡಿತ ಸಾಧ್ಯವಿಲ್ಲ. ಆ ರೀತಿ ಮಾಡುವುದರಿಂದ ನಮ್ಮ ಕಮ್ಯುನಿಸಂ ಸಿದ್ಧಾಂತಕ್ಕೇ ಧಕ್ಕೆ ಬರುತ್ತದೆ" – ಎಂದು ಗಟ್ಟಿಯಾಗಿ ಹೇಳಿದ. ತಮ್ಮ ಜೊತೆಯಲ್ಲಿ ಹೆಂಗಸನ್ನು ಇರಿಸಿಕೊಳ್ಳಬಹುದೇ ಎಂದು ಲಾಟ್ರೆಕ್ ಪ್ರಶ್ನಿಸಿದ. ಪ್ರತಿಯೊಬ್ಬರೂ ತಿಂಗಳಿಗೆ ಎರಡು ಕ್ಯಾನ್‌ವಾಸ್‌ಗಳನ್ನು ತಪ್ಪದೇ ಕೊಡಲೇಬೇಕೆಂದು ಷರತ್ತು ಹಾಕಿದ.

"ಹಾಗಾದರೆ ನಾನು ಸೇರೊಲ್ಲ. ನನಗೆ ವರ್ಷದಲ್ಲಿ ಒಂದು ದೊಡ್ಡ ಕ್ಯಾನ್‌ವಾಸ್ ಮಾತ್ರ ಮಾಡೋಕೆ ಸಾಧ್ಯ."

"ಕ್ಯಾನ್‌ವಾಸ್‌ಗೆ ಬೇಕಾದ ಬಣ್ಣ ಬ್ರಷ್‌ಗಳಿಗೆ ಏನು ಮಾಡುವುದು? ಹೇಗೆ ಮಾಡುವುದು? ಎಲ್ಲರಿಗೂ ವಾರಕ್ಕೆ ಒಂದೇ ಪ್ರಮಾಣದಲ್ಲಿ ಬಣ್ಣ ಮತ್ತು ಕ್ಯಾನ್‌ವಾಸ್‌ಗಳನ್ನು ಕೊಡುವುದೇ ಹೇಗೆ?"

"ಇಲ್ಲ, ಇಲ್ಲ ಖಂಡಿತ ಇಲ್ಲ. ಆಹಾರದ ಹಾಗೆ. ಯಾರು ಯಾರಿಗೆ ಎಷ್ಟೆಷ್ಟು ಅಗತ್ಯವಿದೆಯೋ ಅಷ್ಟಷ್ಟು ಕೊಡಲಾಗುತ್ತೆ. ಹೆಚ್ಚಿಗೂ ಇಲ್ಲ; ಕಡಿಮೆಯೂ ಇಲ್ಲ."

"ಸರಿ. ನಮ್ಮ ಕಲಾಕೃತಿಗಳು ಮಾರಾಟವಾಗ ತೊಡಗಿದರೆ ಲಾಭದ ಹಣ ಏನಾಗುತ್ತೆ? ಯಾರು ಲಾಭ ತಗೊಳ್ತಾರೆ?"

"ಯಾರೂ ತಗೊಳ್ಳಲ್ಲ. ಉಳಿದ ಹಣದಿಂದ ಬ್ರಿಟ್ಟಾನಿಯಲ್ಲಿ ಒಂದು, ಆಮೇಲೆ ಪ್ರೊವೆನ್ಸ್‌ನಲ್ಲೊಂದು ಕೇಂದ್ರಗಳನ್ನು ಆರಂಭ ಮಾಡೋಣ. ಆಮೇಲೆ ಇಡೀ ಫ್ರಾನ್ಸ್‌ನಲ್ಲಿ ಮಳಿಗೆಗಳನ್ನು ತೆಗೆಯೋಣ. ನಾವೆಲ್ಲ ಒಂದು ಕಡೆಯಿಂದ ಮತ್ತೊಂದು ಕಡೆ ಪ್ರಯಾಣ ಮಾಡುತ್ತಲೇ ಇರೋಣ."

"ರೈಲ್ವೆ ಟಿಕೆಟ್‌ಗೆ ಯಾರು ಕೊಡ್ತಾರೆ ಹಣ? ಲಾಭದ ಹಣದಿಂದ ಕೊಡ್ತಾರೇನು?"

"ಹೌದು. ನಾವೆಷ್ಟು ಪ್ರಯಾಣ ಮಾಡಬಹುದು? ಅದನ್ನು ನಿರ್ಧರಿಸುವವರು ಯಾರು?"

"ಬೆಸ್ಟ್ ಸೀಸನ್‌ನಲ್ಲಿ, ಒಂದೇ ಕಡೆ ತುಂಬಾ ಜನ ಪೈಂಟರ್ಸ್ ಇದ್ದರೆ ಏನ್ಮಾಡೋದು. ಚಳೀಲಿ ನಡುಗುತ್ತಾ ಉಳಿಯುವವರು ಯಾರೂಂತ ತೀರ್ಮಾನ ಯಾರು ಮಾಡ್ತಾರೆ?"

"ಥಿಯೋ, ಥಿಯೋ ಈ ಬಿಸಿನೆಸ್‌ನಲ್ಲಿ ಮ್ಯಾನೇಜರ್ ಆಗಿರುವವನು ನೀನೇ ಥಿಯೋ, ಈ ವಿಷಯದಲ್ಲಿ ಏನ್ಮಾಡಬೇಕು? ಯಾರಾದರೂ ಹೋಗಿ ಸೇರಿಕೊಳ್ಳಬಹುದೇ ಹೇಗೆ? ಸದಸ್ಯತ್ವಕ್ಕೆ ಮಿತಿ ಏನಾದರೂ ಇದೆಯೇ? ನಾವು ಯಾವುದಾದರೂ ಸಿಸ್ಟಮ್‌ಗೆ ಅನುಗುಣವಾಗಿ ಪೈಂಟ್ ಮಾಡಬೇಕೇ? ಅಲ್ಲಿಯೇ ನಾವು ಮಾಡೆಲ್ಸ್‌ಗಳನ್ನು ಕರೆಸಿಕೊಳ್ಳಬಹುದೇ?"

ಬೆಳಗ್ಗೆ ಹೊತ್ತಿಗೆ ಮೀಟಿಂಗ್ ಮುಗೀತು. ಕೆಳಗಿದ್ದವರು ಪೊರಕೆಗಳನ್ನು ಹಿಡಿದು ಸೀಲಿಂಗ್‌ಗಳನ್ನು ಶುಚಿಮಾಡುತ್ತಿದ್ದರು. ನಾಲ್ಕು ಗಂಟೆ ಹೊತ್ತಿಗೆ ಥಿಯೋ ಮಲಗಲು ಹೋದ. ಆದರೆ ಪೇರ್‌ಟಾಂಗೆ, ವಿನ್ಸೆಂಟ್ ಮತ್ತು ಇನ್ನೂ ಕೆಲವರು, ಬಹಳ ಉತ್ಸಾಹದಲ್ಲಿ ಇದ್ದವರು, ಅವನ ಹಾಸಿಗೆ ಸುತ್ತ ನಿಂತು, ಗೂಪಿಲ್ಸ್‌ಗೆ ಆದಷ್ಟು ಬೇಗ, ರಾಜಿನಾಮೆ ಕೊಡಲು ಒತ್ತಾಯಿಸುತ್ತಿದ್ದರು.

ವಾರಗಳು ಕಳೆಯುತ್ತಿದ್ದಂತೆ, ಅವರ ಭಾವೋದ್ವೇಗ ಹೆಚ್ಚಾಗುತ್ತಿತ್ತು. ಸಾಕಷ್ಟು ಪ್ರಸಿದ್ಧರಾದ ಪೈಂಟರ್ಸ್ ವಿನ್ಸೆಂಟ್ ಸೋದರರರನ್ನು ವಿಚಿತ್ರ ವ್ಯಕ್ತಿಗಳೆಂದೂ ಹುಚ್ಚರೆಂದೂ ಮಾತಾಡಿಕೊಂಡರೆ ಮತ್ತೆ ಕೆಲವರು ಈ ಹೊಸ ಪ್ರಯೋಗದ ಬಗ್ಗೆ ಕುತೂಹಲದಿಂದ ನಿರೀಕ್ಷಿಸುತ್ತಿದ್ದರು.

ವಿನ್ಸೆಂಟ್ ಹಗಲೂ ರಾತ್ರಿ ಹುಚ್ಚನಂತೆ ಕೆಲಸ ಮಾಡುತ್ತಿದ್ದ, ಎಷ್ಟೊಂದು ಸಮಸ್ಯೆಗಳು! ಅವೆಲ್ಲಕ್ಕೂ ಪರಿಹಾರ, ದಾರಿ ಹುಡುಕಬೇಕಿತ್ತು. ದುಡ್ಡು ಹೇಗೆ ಹೊಂದಿಸುವುದು; ಅಂಗಡಿಗಳನ್ನು ಎಲ್ಲಿ ತೆಗೆಯೋದು, ಹಳ್ಳೀಲಿರೋ ಮನೆಯನ್ನು ನೋಡಿಕೊಳ್ಳುವವರು ಯಾರು? ಹೇಗೆ? – ಹೀಗೆ ಎಷ್ಟೋ ಪ್ರಶ್ನೆಗಳು! ಥಿಯೋ, ತನ್ನ ಇಚ್ಛೆಗೆ ವಿರುದ್ಧವಾಗಿ ನಡೆಯುತ್ತಿದ್ದ ಈ ಕೆಲಸಗಳಲ್ಲಿ ಸ್ವಲ್ಪ ಉದ್ವಿಗ್ನತೆಯೊಂದಿಗೇ ತೊಡಗಿಸಿಕೊಂಡಿದ್ದ. ರೂಲೆಪಿಕ್‌ನ ಅಪಾರ್ಟ್‌ಮೆಂಟ್ ವಾರದ ಪ್ರತಿರಾತ್ರಿಯೂ ಗಿಜಿಗುಟ್ಟುತ್ತಿತ್ತು. ಪತ್ರಿಕೆಗಳ ಸಂಪಾದಕರು ಕತೆಗಳನ್ನು ಸಂಪಾದಿಸಲು ಬಂದರು. ಕಲಾವಿಮರ್ಶಕರು ಚಳುವಳಿಯ ವಿವರಗಳನ್ನು ಚರ್ಚಿಸಲು ಬಂದರು; ಫ್ರಾನ್ಸ್‌ನ ಎಲ್ಲಾ ಕಡೆಗಳಿಂದ ಪೈಂಟರ್ಸ್, ಇವರ ಸಂಸ್ಥೆಗೆ ಸದಸ್ಯರಾಗಲು, ಪ್ಯಾರಿಸಿಗೆ ಬಂದರು.

ಥಿಯೋ ದೊರೆಯಾದರೆ, ವಿನ್ಸೆಂಟ್ ರಾಯಲ್ ವ್ಯವಸ್ಥಾಪಕ, ಅವನಂತು, ಯೋಜನೆಗಳನ್ನು, ಹಣಕಾಸಿನ ವ್ಯವಸ್ಥೆಯ ನಕ್ಷೆಯನ್ನು, ಸಂಸ್ಥೆಯ ನಿಯಮಾವಳಿಗಳನ್ನು, ಪ್ರಣಾಳಿಕೆಗಳನ್ನು, ಇಡೀ ಯೂರೋಪಿಗೆ ತಿಳಿಯಪಡಿಸಲು ಪ್ಯಾಂಫ್‌ಲೆಟ್‌ಗಳನ್ನು ಸಿದ್ಧಪಡಿಸುವುದರಲ್ಲಿ ಮುಳುಗಿ ಹೋದ.

ಅವನು ಎಷ್ಟು ಕಾರ್ಯಮಗ್ನನಾದನೆಂದರೆ, ಪೈಂಟ್ ಮಾಡುವುದನ್ನೇ ಮರೆತುಬಿಟ್ಟ.

ಸಂಘಟನೆಯ ಬೊಕ್ಕಸಕ್ಕೆ ಏನಿಲ್ಲವೆಂದರೂ ಮೂರು ಸಾವಿರ ಫ್ರ್ಯಾಂಕ್‌ಗಳು ಬಂದು ಸೇರಿದವು. ಪೈಂಟರ್ಸ್ ತಮ್ಮ ಶಕ್ತಿ ಮೀರಿ, ತಮ್ಮಲ್ಲಿದ್ದ ಬಿಡಿಗಾಸೂ ಬಿಡದೆ ಸಂಘಟನೆಗೆ ತೆತ್ತರು. ಬುಲ್‌ವಾರ್ಡ್ ಕ್ಲಿಷಿಯಲ್ಲಿ ಚಿತ್ರಸಂತೆಯನ್ನು ಏರ್ಪಡಿಸಿದರು. ಪ್ರತಿಯೊಬ್ಬ ಕಲಾವಿದನೂ ತನ್ನ ಸ್ವಂತ ಕ್ಯಾನ್‌ವಾಸುಗಳನ್ನು ಸಂತೆಯಲ್ಲಿ ಮಾರಾಟಕ್ಕೆ ಇಟ್ಟ. ಯೂರೋಪಿನ ಎಲ್ಲೆಡೆಯಿಂದಲೂ ಪತ್ರಗಳು, ಕೆಲವೊಮ್ಮೆ ಅವುಗಳಲ್ಲಿ ಹರಿದ ನೋಟುಗಳನ್ನು ಒಳಗೊಂಡಂತೆ, ಬಂದವು. ಕಲಾಭಿರುಚಿಯುಳ್ಳ ಪ್ಯಾರಿಸ್ ನಗರವೇ ಅಪಾರ್ಟ್‌ಮೆಂಟ್ ಬಳಿಗೆ ಬಂತು. ಹೊಸ ಚಳುವಳಿಯ ಉತ್ಸಾಹದ ವಾತಾವರಣವನ್ನು ಅನುಭವಿಸಿದರು. ಹೋಗುವಾಗ ಒಂದೊಂದು ನೋಟನ್ನು ಅಲ್ಲಿರಿಸಿದ್ದ ಪೆಟ್ಟಿಗೆಯಲ್ಲಿ ಹಾಕಿದರು. ವಿನ್ಸೆಂಟ್ ಕಾರ್ಯದರ್ಶಿಯೂ ಆಗಿದ್ದ; ಖಜಾಂಚಿಯೂ ಆಗಿದ್ದ. ತಮ್ಮ ಕಾರ್ಯ ಚಟುವಟಿಕೆ ಪ್ರಾರಂಭವಾಗುವುದಕ್ಕೆ ಮೊದಲು ಕಡೇ ಪಕ್ಷ ಐದು ಸಾವಿರ ಫ್ರ್ಯಾಂಕ್‌ಗಳನ್ನಾದರೂ ತಮ್ಮಲ್ಲಿ ಇರಲೇಬೇಕೆಂದು ವಾದ ಮಾಡಿದ. ರೂ ಟ್ರೋನ್ಷೆಯಲ್ಲಿ, ಒಳ್ಳೆ ಜಾಗದಲ್ಲಿ ಥಿಯೋಗೆ ಒಂದು ಅಂಗಡಿ ಸಿಕ್ಕಿತು. ಹಾಗೆಯೇ ವಿನ್ಸೆಂಟ್ ಸೈಂಟ್ ಜರ್ಮೈನ್ ಎನ್ ಲಾಯೆ ಅರಣ್ಯ ಪ್ರದೇಶದಲ್ಲಿ ದೊಡ್ಡದೊಂದು ಹಳೆಯ ಬಂಗಲೆಯನ್ನು ಪತ್ತೆ ಹಚ್ಚಿದ.

ಇವರ ಜೊತೆ ಸೇರಬಯಸಿದ ಪೈಂಟರ್ಸ್‌ಗಳ ಕ್ಯಾನ್‌ವಾಸ್‌ಗಳ ರೂ ಲೆಪಿಕ್ ಅಪಾರ್ಟ್‌ಮೆಂಟಿಗೆ ಬಂದು ಬೀಳುತ್ತಿದ್ದವು. ನೂರಾರು ಕ್ಯಾನ್‌ವಾಸುಗಳಿಂದ ತುಂಬಿ ಹೆಜ್ಜೆ ಇಡಲೂ ಸಾಧ್ಯವಾಗದಂತಾಯಿತು. ಅಲ್ಲದೆ ಮುಂದೆ ಬರುವ ಕ್ಯಾನ್‌ವಾಸ್‌ಗಳಿಗೂ ಜಾಗವಿಲ್ಲದಂತಾಯಿತು. ಅವರಲ್ಲಿ ಜಗಳ ಚರ್ಚೆ, ವಾದ ವಿವಾದಗಳು, ಹೆಚ್ಚಿದವು. ಕುಡಿಯುವುದು, ತಿನ್ನುವುದು, ಗಟ್ಟಿಯಾಗಿ ಮಾತಾಡುವುದು – ಒಳ್ಳೆ ಗದ್ದಲದ ಸಂತೆಯಂತಾಗಿತ್ತು. ಇದರಿಂದಾಗಿ ಥಿಯೋಗೆ ಮಾಲಿಕನಿಂದ, ಅಪಾರ್ಟ್‌ಮೆಂಟ್ ಖಾಲಿ ಮಾಡಲು ನೋಟೀಸ್ ಬಂತು.

ತಿಂಗಳ ಕೊನೆಯಷ್ಟು ಹೊತ್ತಿಗೆ, ಥಿಯೋ ಪ್ರೀತಿಯಿಂದ ಕೊಂಡು ಪ್ರಾಣವಿರಿಸಿಕೊಂಡಿದ್ದ ಲೂಯಿ ಫಿಲಿಪ್ ಫರ್ನಿಚರ್ ಖಂಡತುಂಡವಾಗಿ ಚೆಲ್ಲಾಪಿಲ್ಲಿಯಾಗಿ ಬಿದ್ದಿತ್ತು.

ವಿನ್ಸೆಂಟ್‌ಗೆ ಪ್ಯಾಲೆಟ್ ಹಿಡಿಯಲೂ ಪುರಸೊತ್ತು ಇರಲಿಲ್ಲ. ಪತ್ರಗಳನ್ನು ಬರೆಯಬೇಕಿತ್ತು; ಸಂದರ್ಶನಗಳನ್ನು ಕೊಡಬೇಕಿತ್ತು, ಅಂಗಡಿಗಳನ್ನು ನೋಡಿಕೊಳ್ಳಬೇಕಿತ್ತು; ಹೊಸ ಪೈಂಟರ್ಸ್, ಅಮೆಚೂರ್ ಪೈಂಟರ್ಸ್‌ಗಳಿಗೆ ಪ್ರೋತ್ಸಾಹ

ಕೊಡಬೇಕಿತ್ತು; ಉತ್ಸಾಗ ತುಂಬ ಬೇಕಿತ್ತು. ಎಲ್ಲರೊಂದಿಗೆ ಮಾತಾಡಿ ಮಾತಾಡಿ ಅವನ ಧ್ವನಿ ಗಡುಸಾಗಿ ಬಿಟ್ಟಿತ್ತು. ಆದರೆ ಅದೇನೋ ಅವನಲ್ಲಿ ದೈತ್ಯ ಶಕ್ತಿಯೊಂದರ ಆವಾಹನೆಯಾದಂತೆ ಕಾಣಿಸಿತು. ಕ್ಷಣಮಾತ್ರವೂ ನಿದ್ದೆ ಮಾಡದೆ, ಕೆಲಸ ಮಾಡುತ್ತಲೇ ಇದ್ದ.

ಚೈತ್ರದ ಪ್ರಾರಂಭದಷ್ಟು ಹೊತ್ತಿಗೆ ಐದು ಸಾವಿರ ಫ್ರ್ಯಾಂಕ್ ಸಂಗ್ರಹವಾಯಿತು. ತಿಂಗಳ ಮೊದಲನೆ ತಾರೀಖಿಗೆ ಥಿಯೋ ಗೂಪಿಲ್ಸ್ ಕಂಪನಿಗೆ ನೋಟೀಸ್ ಕೊಡುವುದರಲ್ಲಿದ್ದ. ರೂ ಟ್ರೋನ್‌ಷೆಟ್‌ನಲ್ಲಿ ಅಂಗಡಿ ತೆಗೆದುಕೊಳ್ಳಲು ನಿರ್ಧರಿಸಿದ. ಸೈಂಟ್ ಜರ್ಮೈನಲ್ಲಿನ ಮನೆ ಮೇಲೆ ಸ್ವಲ್ಪ ಹಣವನ್ನು ಹೂಡಿದ. ಕಾಲೋನಿಯಲ್ಲಿರಲು ಸಿದ್ಧರಾಗಿದ್ದ ಸದಸ್ಯರ ಪಟ್ಟಿಯನ್ನು ಥಿಯೋ, ಟಾಂಗೆ, ವಿನ್ಸೆಂಟ್, ಗಾಗಿನ್, ಲಾಟ್ರೆಕ್ ಎಲ್ಲರೂ ಸೇರಿ ಸಿದ್ಧ ಮಾಡಿದರು. ರಾಶಿ ಕ್ಯಾನ್‌ವಾಸ್‌ಗಳಲ್ಲಿ ಮೊದಲ ಪ್ರದರ್ಶನಕ್ಕೆ ಯೋಗ್ಯವಾದ ಕೆಲವನ್ನು ಥಿಯೋ ಆರಿಸಿ ತೆಗೆದ. ರೂಸೋ ಮತ್ತು ಆಂಕೆಟಿನ್ ಅಂಗಡಿಯನ್ನು ಯಾಥು, ಎಲ್ಲಿ ಅಲಂಕರಿಸಬೇಕೆಂಬ ವಿಷಯದಲ್ಲಿ ಕಿತ್ತಾಡುತ್ತಿದ್ದರು. ಈಗ ಥಿಯೋಗೆ ನಿದ್ದೆಗೆಡಲು ಅಭ್ಯಂತರವಿರಲಿಲ್ಲ. ಮೊದಲಿಗೆ ವಿನ್ಸೆಂಟ್ ಎಷ್ಟು ಉತ್ಸಾಹದಲ್ಲಿ ಇದ್ದನೋ, ಥಿಯೋ ಈಗ ಅದೇ ಪ್ರಮಾಣದಲ್ಲಿ ಉತ್ಸಾಹದಲ್ಲಿದ್ದ. ಬೇಸಿಗೆಯ ಹೊತ್ತಿಗೆ ಕಾಲೋನಿ ಆರಂಭಿಸಲು ಉದ್ವಿಗ್ನತೆಯೊಂದಿಗೆ ಕೆಲಸಗಳನ್ನು ಮಾಡುತ್ತಿದ್ದ. ವಿನ್ಸೆಂಟ್‌ನ ಜೊತೆ ಎರಡನೇ ಸಂಸ್ಥೆ ಅಟ್ಲಾಂಟಿಕ್‌ನಲ್ಲಿರಬೇಕೋ, ಮೆಡಿಟರೇನಿಯನ್‌ನಲ್ಲಿರಬೇಕೋ ಎಂದು ಚರ್ಚಿಸಿದ.

ತುಂಬಾ ದಣಿದಿದ್ದ ವಿನ್ಸೆಂಟ್, ಒಂದು ದಿನ ನಾಲ್ಕು ಗಂಟೆ ಸುಮಾರಿಗೆ ನಿದ್ದೆಹೋದ. ಥಿಯೋ ಅವನನ್ನು ಎಬ್ಬಿಸಲಿಲ್ಲ. ಮಧ್ಯಾಹ್ನದ ಮೇಲೆ ಅವನೇ ಎಚ್ಚರಗೊಂಡು, ಸ್ವಲ್ಪ ತಾಜಾತನವನ್ನು ಅನುಭವಿಸಿದ ಸ್ಟುಡಿಯೋ ಕಡೆ ನಡೆದ. ಈಸಲ್‌ಗೆ ಏರಿಸಿದ್ದ ಕ್ಯಾನ್‌ವಾಸ್ ಹಲವು ವಾರಗಳ ಹಳೇದಾಗಿತ್ತು. ಪ್ಯಾಲೆಟ್ ಮೇಲಿದ್ದ ಬಣ್ಣ ಒಣಗಿ ಹೋಗಿತ್ತು. ಅಲ್ಲಲ್ಲಿ ಬಿರುಕುಗಳು ಬಿಟ್ಟು ಕೊಂಡಿತ್ತಲ್ಲದೆ ಅದರ ಮೇಲೆ ಧೂಳೂ ಕೂತಿತ್ತು. ಬಣ್ಣದ ಟ್ಯೂಬುಗಳು ಮೂಲೆ ಸೇರಿದ್ದವು. ಬ್ರಷ್‌ಗಳು ಹಳೆಯ ಬಣ್ಣಗಳಿಂದ ಕೂಡಿ ರಟ್ಟುಗಟ್ಟಿದ್ದವು.

ಒಂದು ಕ್ಷಣ ಅವನಿಗೆ ತನ್ನೊಳಗಿನ ದನಿ ಕೇಳಿಸಿತು – "ಸ್ವಲ್ಪ ತಡೆ ವಿನ್ಸೆಂಟ್. ನೀನೇನು ಪೈಂಟರೋ ಇಲ್ಲ ಕಮ್ಯುನಿಸ್ಟ್ ವ್ಯವಸ್ಥಾಪಕನೋ?"

ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಕ್ಯಾನ್‌ವಾಸ್‌ಗಳನ್ನು ತೆಗೆದುಕೊಂಡು ಥಿಯೋ ರೂಮಿಗೆ ಹೋದ. ಅವನೆಲ್ಲ ಹಾಸಿಗೆ ಮೇಲೆ ಪೇರಿಸಿದ. ಸ್ಟುಡಿಯೋದಲ್ಲಿ ತನ್ನ ಸ್ವಂತ ಚಿತ್ರಗಳನ್ನು ಮಾತ್ರ ಉಳಿಸಿದ್ದ. ಒಂದೊಂದನ್ನೇ ಈಸಲ್‌ಗೆ ಏರಿಸಿ ಗಮನಿಸಲು ತೊಡಗಿದ. ಅವುಗಳತ್ತ ನೋಡುತ್ತಾ ಉಗುರುಕಚ್ಚುತ್ತಿದ್ದ.

ಹೌದು. ಸಾಕಷ್ಟು ಪ್ರಗತಿಯನ್ನು ಸಾಧಿಸಿದ್ದ. ನಿಧಾನವಾಗಿ ಅವನ ಬಣ್ಣಗಳು ತೆಳುವಾಗಿ, ಪಾರದರ್ಶಕವಾಗುತ್ತಿದ್ದವು. ಅನುಕರಣೆಯ ಛಾಯೆ ಇರಲಿಲ್ಲ. ತನ್ನ

ಗೆಳೆಯರ ಪ್ರಭಾವ ಎಲ್ಲೂ ಕಾಣಿಸುತ್ತಿರಲಿಲ್ಲ. ಈಗ ತನ್ನದೇ ಆದ ಸ್ವಂತವಿಧಾನ, ಶೈಲಿಯನ್ನು ರೂಪಿಸಿಕೊಂಡಿದ್ದ. ಅದು ಅವನ ಅರಿವಿಗೆ ಬಂತು. ಯಾರಲ್ಲಿಯೂ ಕಾಣದ ಹೊಸತನವೊಂದು, ಸಿದ್ಧವಾಗಿತ್ತು. ಆ ಹೊಸತನ ಇಲ್ಲಿ ಹೇಗೆ ಸಾಧ್ಯವಾಯಿತೆಂಬುದು ಅವನಿಗೇ ತಿಳಿದಿರಲಿಲ್ಲ.

ಅಂತೂ ಇಂತೂ ಇಂಪ್ರೆಷನಿಸಂ ಅವನ ನರನಾಡಿಗಳಲ್ಲಿ ಇಳಿಯುತ್ತಿತ್ತು. ಒಂದು ವಿಶಿಷ್ಟವಾದ ಅಭಿವ್ಯಕ್ತಿಯ ರೀತಿಯನ್ನು ಸಾಧಿಸುವ ಹಂತವನ್ನು ತಲುಪಿದ್ದ. ಆದರೆ ತಕ್ಷಣ ನಿಲ್ಲಿಸಿಬಿಟ್ಟ.

ತೀರಾ ಇತ್ತೀಚಿನ ಕ್ಯಾನ್‌ವಾಸನ್ನು ಈಸಲ್‌ಗೇರಿಸಿದ್ದೇ ಗಟ್ಟಿಯಾಗೊಮ್ಮೆ ಕೂಗಿದ. ಏನನ್ನೋ ಕಂಡುಕೊಂಡು ಬಿಟ್ಟಿದ್ದ! ತನ್ನದೇ ಆದ ಒಂದು ನಿರ್ದಿಷ್ಟ ತಂತ್ರ ವಿಧಾನವನ್ನು ಗುರುತಿಸಿಕೊಂಡಿದ್ದ.

ಹಲವು ವಾರಗಳ ವಿಶ್ರಾಂತಿಯಿಂದ, ತನ್ನ ಕೆಲಸದ ವಿಚಾರವಾಗಿ ಒಂದು ಸ್ಪಷ್ಟವಾದ ದೃಷ್ಟಿಕೋನ ರೂಪುಗೊಂಡಿತ್ತು. ತನ್ನದೇ ಆದ ಅಥವಾ ಸ್ವೋಪಜ್ಞವಾದ ಇಂಪ್ರೆಷನಿಸ್ಟ್ ತಂತ್ರವನ್ನು ಕಂಡುಕೊಂಡಿದ್ದ.

ಕನ್ನಡಿಯಲ್ಲಿ ತನ್ನ ಬಿಂಬವನ್ನು ಗಮನವಿಟ್ಟು ನೋಡಿದ. ಗಡ್ಡ, ಮೀಸೆ, ಬಟ್ಟೆ, ಬರೆ ಎಲ್ಲದರಲ್ಲಿಯೂ ಸುಧಾರಣೆಬೇಕಾಗಿತ್ತು. ಗಡ್ಡ ಮೀಸೆಗಳು ಎಡ್ಡಾದಿಡ್ಡಿ ಬೆಳೆದಿದ್ದವು. ಬಟ್ಟೆ ಕೊಳಕಾಗಿತ್ತು. ಅವನು ಹಾಕಿದ್ದ ಪ್ಯಾಂಟು ದೊಗಲೆ ದೊಗಲೆಯಾಗಿತ್ತು. ಅವೆಲ್ಲಕ್ಕೂ ಸಂಸ್ಕಾರದ ಅಗತ್ಯವಿತ್ತು. ಪ್ಯಾಂಟ್ ಇಸ್ತ್ರೀ ಮಾಡಿಕೊಂಡ. ಥಿಯೋನ ಅಂಗಿಗಳಲ್ಲೇ ಒಂದನ್ನೆತ್ತಿ ಏರಿಸಿಕೊಂಡು, ಹಣದ ಪೆಟ್ಟಿಗೆಯಿಂದ ಐದು ಫ್ರ್ಯಾಂಕ್ ತೆಗೆದು ಹಜಾಮನಂಗಡಿಗೆ ಹೊರಟ. ಷೇವ್ ಮುಗಿಸಿ ನೀಟಾದ ಮೇಲೆ ಗೂಪಿಲ್ಸ್ ಕಡೆ ಹೆಜ್ಜೆ ಹಾಕಿದ.

"ಥಿಯೋ, ಒಂದೆರಡು ನಿಮಿಷ ನನ್ನ ಜೊತೆ ಹೊರಗೆ ಹೋಗಲು ಬರುವೆಯಾ?"

"ಯಾಕೆ? ಏನಾಗಬೇಕು?"

"ಇಲ್ಲೇ ಏನಾದರೂ. ಯಾವುದಾದರೂ ಕೆಫೆ ಇದ್ದರೆ...... ಯಾರೂ ಹೆಚ್ಚಾಗಿ ಬರದೆ ಇರೋ ಕಡೆ...."

ಕೆಫೆಯಲ್ಲಿ, ಹೆಚ್ಚು ಜನ ಇಲ್ಲದಿರುವ ಕಡೆ ಬಹಳ ಹಿಂದೆ ಇದ್ದ ಟೇಬಲ್ ಬಳಿ ಇಬ್ಬರೂ ಕುಳಿತರು.

"ವಿನ್ಸೆಂಟ್, ಈ ಒಂದು ತಿಂಗಳಲ್ಲಿ, ನಿನ್ನ ಹತ್ತಿರ ಏಕಾಂತವಾಗಿ ಮಾತಾಡಲು ಸಿಕ್ಕಿರುವುದು ಇದೇ ಮೊದಲು."

"ನನಗೂ ಗೊತ್ತಿದೆ.... ನನಗೇನೋ, ನಾನೊಂದು ಹುಚ್ಚು ಕೆಲಸ ಮಾಡಿಬಿಟ್ಟೆ ಅನಿಸ್ತಿದೆ."

"ಅದು ಹೇಗೆ?"

"ಥಿಯೋ, ಪ್ರಮಾಣವಾಗಿ ಹೇಳು, ನಾನೊಬ್ಬ ಪೈಂಟರ್ ಹೌದಾ ಅಲ್ವಾ? ಇಲ್ಲಿ ನಾನು ಕಮ್ಯುನಿಸ್ಟ್ ವ್ಯವಸ್ಥಾಪಕ ಮಾತ್ರವೇ ಆಗಿದ್ದೀನಾ?"

"ಹೀಗ್ಯಾಕೆ ಕೇಳ್ತಿದ್ದೀಯ?"

"ನಾನು ಇದನ್ನೆಲ್ಲಾ ವ್ಯವಸ್ಥೆ ಮಾಡೋದರಲ್ಲಿಯೇ ಮುಳುಗಿ ಬಿಟ್ಟು, ಪೈಂಟ್ ಮಾಡೋಕೇ ಸಮಯ ಸಿಗಲಿಲ್ಲ. ಒಂದು ಸಲ 'ಆರ್ಟ್‌ಹೌಸ್' ಪ್ರಾರಂಭ ಆಗಿಬಿಟ್ಟರೆ, ಪೂರ್ತಿಯಾಗಿ ಸಮಯವೇ ಇರೋದಿಲ್ಲ."

"ಓ ಹಾಗೋ."

"ಥಿಯೋ ನನಗೆ ಪೈಂಟ್ ಮಾಡಬೇಕಿದೆ. ಈ ಏಳು ವರ್ಷಗಳಿಂದ ಮಾಡಿದ ಸಾಧನೆ. ಬೇರೆ ಪೈಂಟರ್ಸ್‌ಗಾಗಿ ಹೌಸ್ ಮ್ಯಾನೇಜರ್ ಆಗೋಕಲ್ಲ. ನನಗೆ ಬ್ರಷ್‌ಗಳ, ಬಣ್ಣಗಳ, ಭಯಂಕರ ಹಸಿವಾಗದೆ. ಎಷ್ಟೆಂದರೆ, ಈ ಕ್ಷಣವೇ ತಕ್ಷಣಕ್ಕೆ ಇರುವ ಯಾವುದೇ ಟ್ರೈನ್ ಹತ್ತಿ ಪ್ಯಾರಿಸ್‌ನಿಂದ ಓಡಿಹೋಗಬೇಕೆನಿಸಿದೆ."

"ಆದರೆ ವಿನ್ಸೆಂಟ್, ಇಷ್ಟೆಲ್ಲಾ ಮಾಡಿ ಈಗ?"

"ನಾನು ಹೇಳಿದೆನಲ್ಲ, ಆಗ ನನಗೆ ಬುದ್ಧಿ ಇರಲಿಲ್ಲ. ನಾನೊಬ್ಬ ಮೂರ್ಖನಾಗಿದ್ದೆ ಅಂತ. ನಿಜವಾಗಿಯೂ ನನ್ನ ಅಂತರಾತ್ಮದ ಮಾತನ್ನು ಕೇಳಿಸಿಕೊಳ್ಳೋಕೆ ಆಗುತ್ತಾ?"

"ಕೇಳಿಸಿಕೋಳ್ತೀನಿ, ಹೇಳು."

"ನನಗ್ಯಾಕೋ ಬೇರೆ ಪೈಂಟರ್ಸ್ ಅನ್ನು ನೋಡಿದರೆ ವಾಂತಿ ಬರೋಥರ ಆಗುತ್ತೆ. ಅವರ ಮಾತು, ರೀತಿ, ಜಗಳ, ಅವರ ಸಿದ್ಧಾಂತಗಳು ಕೇಳಿ ಕೇಳಿ ಬೇಸರ ಬಂದು ಬಿಟ್ಟಿದೆ. ಏಯ್ ನಗಬೇಡ. ನನ್ನದೂ ಸೇರಿಸಿ ನೀನು ನನ್ನ ಪರವಾಗಿಯೂ ಅವರ ಜೊತೆ ಜಗಳ ಮಾಡಿದ್ದೀಯ. ಅದೇ ಹೇಳಬೇಕೂಂತ ಇರೋದು. ಮಾವ್ ಯಾವಾಗಲೂ ಹೇಳ್ತಾ ಇದ್ದದ್ದೇನು ಗೊತ್ತಾ? "ಪೈಂಟರ್ಸ್ ಪೈಂಟ್ ಮಾಡೋದರಲ್ಲಿ ಇರಬೇಕು; ಇಲ್ಲ ಪೈಂಟಿಂಗ್ ಬಗ್ಗೆ ಮಾತೂ ಆಡ್ತೀನೀಂದ್ರೆ ಸಾಧ್ಯ ಆಗೊಲ್ಲ. ಎರಡನ್ನೂ ಏಕಕಾಲದಲ್ಲಿ ಮಾಡೋಕೆ ಆಗೋದೇ ಇಲ್ಲ" ಅಂತ. ಥಿಯೋ ನೀನು ಏಳು ವರ್ಷಗಳಿಂದ ನನಗೆ ಸಹಾಯ ಮಾಡುತ್ತಲೇ ಇದ್ದೀಯ. ಅದೂ ಬರೀ ಐಡಿಯಾಗಳನ್ನು ಕೇಳಿಸಿಕೊಳ್ಳೋಕೆ?"

"ಕಾಲೋನಿಗಾಗಿ ತುಂಬ ಒಳ್ಳೆ ಕೆಲಸ ಮಾಡಿದ್ದೀಯ ವಿನ್ಸೆಂಟ್."

"ನಿಜ. ಈಗ ನಾವೆಲ್ಲ ಅಲ್ಲಿಗೆ ಹೋಗೋಕೆ ರೆಡಿಯಾಗಿ ಇರೋವಾಗ, ನನಗೆ ಹೋಗೋದು ಬೇಡ ಅಂತ ಅನ್ನಿಸ್ತಿದೆ. ಅಲ್ಲಿದ್ದು ಬಹುಶಃ ನನ್ನ ಕೆಲಸ ಮಾಡೋಕೆ ಆಗದೇನೇ ಇರಬಹುದು. ನಾನು ಹೇಳೋದು ನಿನಗೆ ಅರ್ಥ ಆಗ್ತಿದಿಯೋ ಇಲ್ಲವೋ?.... ಆದರೂ ಅರ್ಥ ಮಾಡಿಸ್ತೀನಿ. ನಾನು ಬ್ರಬಾಂಟ್ ಮತ್ತು ಹೇಗ್‌ನಲ್ಲಿ ಇರುವಾಗ, ನಾನೊಬ್ಬ ಪ್ರಮುಖ ವ್ಯಕ್ತಿ ಅಂತ ಅನಿಸಿತ್ತು. ಜಗತ್ತನ್ನೇ ಎದುರು ಹಾಕಿಕೊಂಡು ಒಂಟಿಯಾಗಿ ಹೋರಾಡುತ್ತಿದ್ದೆ. ನಾನೊಬ್ಬ ಕಲಾವಿದನಾಗಿದ್ದೆ. ಒಬ್ಬನೇ ಒಬ್ಬ ಕಲಾವಿದ.

ನಾನು ಪೈಂಟ್ ಮಾಡಿದ್ದೆಲ್ಲವೂ ಬಹುಮುಖ್ಯವಾಗಿತ್ತು. ನನಗೆ ಅದ್ಭುತ ಸಾಮರ್ಥ್ಯ, ಪ್ರತಿಭೆ ಇದೆ ಅಂತ ಭಾವಿಸಿದೆ. ಜಗತ್ತೂ ಕೂಡಾ ಮುಂದೆ, ಒಂದಲ್ಲ ಒಂದು ದಿನ ಹೀಗೇ "ಅವನೊಬ್ಬ ಅದ್ಭುತ ಕಲಾವಿದ ಅಂತ ಹೇಳುತ್ತೆ."

"ಆದರೆ ಈಗ?"

"ಅಯ್ಯೋ, ಈಗ ಹತ್ತರಲ್ಲಿ ಹನ್ನೊಂದು! ನನ್ನನ್ನೂ ಮೀರಿ ನೂರಾರು ಪೈಂಟರ್ಸ್ ಇದ್ದಾರೆ. ಎಲ್ಲ ಕಡೆಯಿಂದಲೂ ನನ್ನನ್ನು ವ್ಯಂಗ್ಯವಾಗಿ ಚಿತ್ರಿಸಿದ್ದಾರೆ. ಕಾಲೋನಿಯಲ್ಲಿ ಸೇರಬೇಕೂಂತ ಬಂದಿರುವ ಆರ್ಟಿಸ್ಟುಗಳ ರಾಶಿ ರಾಶಿ ಕ್ಯಾನ್‌ವಾಸುಗಳ ಬಗ್ಗೆ ಯೋಚನೆ ಮಾಡು. ಅವರೂ ಕೂಡಾ ತಾವೇನೋ ಮಹಾನ್ ಕಲಾವಿದರಾಗುತ್ತೇವೆ ಎಂದು ಭ್ರಮಿಸಿದ್ದಾರೆ. ಹೀಗಿರುವಾಗ ಅವರಂತೆಯೇ ನಾನೂ ಒಬ್ಬ. ನಾನೇನೂಂತ ನನಗೆ ಹೇಗೆ ಗೊತ್ತಾಗುತ್ತೆ? ನನ್ನ ಧೈರ್ಯವನ್ನು ಉಳಿಸಿಕೊಳ್ಳಬೇಕು. ಪ್ಯಾರಿಸಿಗೆ ಬರುವ ಮೊದಲು ಇಷ್ಟು ಸಂಖ್ಯೆಯಲ್ಲಿ, ತಾವು ಕಲಾವಿದರೆಂದು ಕಲ್ಪಿಸಿಕೊಳ್ಳುವ ಮೂರ್ಖರು ಇದ್ದಾರೇಂತ ಗೊತ್ತಿರಲಿಲ್ಲ. ಈಗ ನನಗೆ ತಿಳಿಯಿತು. ನೆನೆಸಿಕೊಂಡರೆ ನೋವಾಗುತ್ತೆ."

"ಅದಕ್ಕೂ ನಿನಗೂ ಸಂಬಂಧ ಏನು?"

"ಸಂಬಂಧ ಇಲ್ಲದಿರುಬಹುದು. ಆದರೆ ನನ್ನ ಮನಸ್ಸಿನೊಳಗಿನ ಅನುಮಾನದ ಹುಳುವನ್ನು ಸಾಯಿಸಲು ಇನ್ನೂ ನನ್ನಿಂದ ಆಗುತ್ತಿಲ್ಲ. ನಾನೊಬ್ಬನೇ ಇದ್ದಾಗ. ಪ್ರಪಂಚದಲ್ಲಿ, ಒಂದು ದಿನದಲ್ಲಿ ಸಾವಿರಾರು ಪೈಂಟಿಂಗ್ಸ್ ಸೃಷ್ಟಿಯಾಗುತ್ತಿವೆ ಎನ್ನುವ ಸತ್ಯ ಮರೆತುಬಿಡುತ್ತಿದ್ದೆ. ನನಗೆ, ನಾನೊಬ್ಬನೇ ಪೈಂಟರ್ ಅನ್ನುವ ಭಾವನೆಯೇ ಪ್ರಬಲವಾಗಿ ಇರುತ್ತಿತ್ತು. ನನ್ನ ಪೈಂಟಿಂಗ್ ನಾನು ಜಗತ್ತಿಗೆ ಕೊಡುತ್ತಿರುವ ಸುಂದರವಾದ ಉಡುಗೊರೆ ಎಂದೂ ಊಹಿಸಿಕೊಳ್ಳುತ್ತಿದೆ. 'ನನ್ನ ಕಲೆ ಕೆಟ್ಟದಾಗಿದೆ' ಅಂದುಕೊಂಡೂ, ಪೈಂಟ್ ಮಾಡುವುದನ್ನು ನಿಲ್ಲಿಸುತ್ತಿರಲಿಲ್ಲ. ಆದರೆ ಇದು...... 'ಆರ್ಟಿಸ್ಟ್'ನ ಭ್ರಮೆ!..... ಅರ್ಥವಾಯಿತು ತಾನೇ?"

"ಹೂಂ."

"ಅಲ್ಲದೆ ನಾನು ನಗರ ಪೈಂಟರ್ ಅಲ್ಲ. ನನಗೆ ಇದು ಹೊಂದುವುದೇ ಇಲ್ಲ. ನಾನೊಬ್ಬ ಕೃಷಿಕ ಕಲಾವಿದ. ನನ್ನ ಭೂಮಿ, ಹೊಲ ಗದ್ದೆ, ತೋಟ-ತುಡಿಕೆಗಳಿಗೆ ಹಿಂದಿರುಗಬೇಕೆಂದಿದ್ದೇನೆ. ನನ್ನೊಳಗಿನದೆಲ್ಲವನ್ನೂ ಸುಟ್ಟು ಹಾಕಿ, ಪೈಂಟಿಂಗ್ ಮಾಡಬೇಕೆನ್ನುವ ಮಹತ್ವಾಕಾಂಕ್ಷೆಯೊಂದನ್ನು ಮಾತ್ರ ಉಳಿಸಬಲ್ಲ. ತೀಕ್ಷ್ಣ ಬಿಸಿಲಿನ ಬೆಂಕಿ ಬಿಸಿಲಿನ ಸೂರ್ಯ ಬೇಕಾಗಿದ್ದಾನೆ, ನನಗೆ!"

"ಹಾಗಾದರೆ..... ನೀನು. ಪ್ಯಾರಿಸ್ಸನ್ನು..... ಬಿಡಬೇಕು?"

"ಹೌದು. ಬಿಡಲೇಬೇಕು."

"ಕಾಲೋನಿ ವಿಷಯ ಏನು?"

"ನಾನು ಅದರಿಂದ ಹಿಂದುಳಿತೀನಿ..... ನೀನು ಮಾತ್ರ ಅದನ್ನು ಮುಂದುವರೆಸು."

"ಇಲ್ಲ. ನೀನಿಲ್ಲದೆ ನನಗೆ ಸಾಧ್ಯವಿಲ್ಲ."

"ಯಾಕೆ ಸಾಧ್ಯ ಇಲ್ಲ?"

"ಯಾಕೇಂತ ಗೊತ್ತಿಲ್ಲ. ಆದರೆ ನಾನು ಮಾಡಲು ಹೊರಟದ್ದು ನಿನಗಾಗಿ..... ನೀನೇ ಬೇಕೆಂದಿದ್ದೆ."

ಕೆಲಕ್ಷಣಗಳು ಇಬ್ಬರೂ ಮೌನವಾಗಿದ್ದರು.

"ನೀನು ಗೂಪಿಲ್ಸ್‌ಗೆ ಬಿಡೋ ವಿಷಯ ಇನ್ನೂ ಹೇಳಿಲ್ಲ ತಾನೇ?"

"ಇಲ್ಲ. ಒಂದನೇ ತಾರೀಖು ತಿಳಿಸೋಣವೆಂದಿದ್ದೆ."

"ಒಂದು ವೇಳೆ ನಾವು ಯಾರ್‍ಯಾರಿಂದ ದುಡ್ಡು ತೆಗೆದುಕೊಂಡಿದ್ದೇವೋ, ಅವರಿಗೆಲ್ಲ ಅವರ ಹಣ ವಾಪಸ್ ಕೊಟ್ಟು ಬಿಟ್ಟರೆ!"

"ಹಾಗೆ ಮಾಡಬಹುದು. ಇಷ್ಟಕ್ಕೂ ನೀನು ಯಾವಾಗ ಹೋಗುವವನಿದ್ದಿ?"

"ನನ್ನ ಪ್ಯಾಲೆಟ್ ಸರಿ ಹೋದ ಮೇಲೆ."

"ಹಾಗೋ."

"ಆಮೇಲೆ ನಾನು, ಬಹುಶಃ ಸೌತ್ ಕಡೆಗೆ ಹೋಗಬಹುದೇನೋ! ಎಲ್ಲಿಗೇಂತ ಗೊತ್ತಿಲ್ಲ. ಆದರೆ ನನ್ನ ಒಂಟಿತನಕ್ಕೆ, ಏಕಾಂತಕ್ಕೆ ಸರಿಹೋಗಬಹುದಾದ ಜಾಗಕ್ಕೆ. ಅಲ್ಲಿ ಪೈಂಟ್ ಮಾಡುತ್ತಾ ಮಾಡುತ್ತಾ ನನಗೆ ನಾನೇ ಪೈಂಟ್ ಮಾಡುತ್ತಾ ಉಳಿದು ಬಿಡುತ್ತೇನೆ."

ವಿನ್ಸೆಂಟ್ ಒರಟಾದ ರೀತಿಯಲ್ಲಿಯೇ ಪ್ರೀತಿಯನ್ನು ತೋರಿಸುವಂತೆ, ಥಿಯೋನ ಕತ್ತನ್ನು ತನ್ನ ಕೈಗಳಿಂದ ಗಟ್ಟಿಯಾಗಿ ಬಳಸಿ ಹಿಡಿದ.

"ಥಿಯೋ ನಿಜ ಹೇಳು. ನನ್ನ ಕಂಡರೆ ಬೇಸರ ಇಲ್ಲವೇ? ಅದೂ ಇಷ್ಟೆಲ್ಲಾ ಮುಂದಿರುವಾಗ ನಾನು ಬಿಟ್ಟು ಹೋಗ್ತಿರೋದು!....."

"ಬೇಸರವೇ!"

ಥಿಯೋ ವಿಷಾದದ ನಗೆ ನಕ್ಕ. ತನ್ನ ಭುಜಗಳ ಮೇಲಿರಿಸಿದ್ದ ವಿನ್ಸೆಂಟ್‌ನ ಕೈಗಳನ್ನು ತಟ್ಟಿ ಹೇಳಿದ.

"ಇಲ್ಲ. ಖಂಡಿತ ಇಲ್ಲ. ನನಗೆ ಅರ್ಥವಾಗಿದೆ. ನೀನು ಮಾಡ್ತಿರೋದು ಸರಿ ಅಂತಲೇ ನನಗೆ ಅನಿಸುತ್ತಿದೆ..... ಓಲ್ಡ್ ಬಾಯ್..... ಮೊದಲು ಈ ಡ್ರಿಂಕ್ ಖಾಲಿ ಮಾಡು. ನಾನು ಗೂಪಿಲ್ಸ್‌ಗೆ ವಾಪಸ್ ಹೋಗಬೇಕು."

–೧೩–

ವಿನ್ಸೆಂಟ್ ಮುಂದೆಯೂ ಒಂದು ತಿಂಗಳು ತೀರಾ ಕಷ್ಟಪಟ್ಟು ಕೆಲಸ ಮಾಡುತ್ತಿದ್ದ. ಈಗ ಪ್ಯಾಲೆಟ್ ಕೂಡಾ, ತನ್ನ ಗೆಳೆಯರ ಪ್ಯಾಲೆಟ್‌ಗಳಂತೆ, ಶುಭ್ರವಾಗಿ, ಬಳಕೆಗೆ ಸಿದ್ಧವಾಗಿದ್ದರೂ, ತನಗೇ ತೃಪ್ತಿಯಾಗುವ ರೀತಿಯಲ್ಲಿ ಅಭಿವ್ಯಕ್ತಿ ಸಾಧ್ಯವಾಗಿರಲಿಲ್ಲ.

ಮೊದಲಿಗೆ, ತನ್ನ ಒರಟು ರೀತಿಯ ಡ್ರಾಯಿಂಗೇ ಕಾರಣವೆನಿಸಿ, ನಿಧಾನವಾಗಿ ಸಾಗಿದ. ಬಣ್ಣಗಳನ್ನು ಅಚ್ಚುಕಟ್ಟಾಗಿ ಕುಶಲತೆಯಿಂದ ಬಳಸುವುದೇ ಅವನಿಗೆ ಹಿಂಸೆ ಎನಿಸಿತ್ತು. ಅದನ್ನು ಈಸಲ್ ಮೇಲೆ, ಇರಿಸಿ, ನೋಡುವಾಗಂತೂ ಇನ್ನೂ ಅಸಹ್ಯವೆನಿಸುತ್ತಿತ್ತು.

ಬ್ರಷ್ ಬಳಕೆ ಕಾಣಬಾರದೆಂದು ಪ್ರಯತ್ನಿಸಿದ. ಈಗ ತೆಳುಬಣ್ಣಗಳನ್ನು, ಮೊದ್ದುಮೊದ್ದಾಗಿ ಬಳಸುತ್ತಿದ್ದ ಬಣ್ಣಗಳ ಜಾಗದಲ್ಲಿ, ಬಳಸಲು ತೊಡಗಿದ. ಆದರೂ ಏನೂ ಪ್ರಯೋಜನವಾಗಲಿಲ್ಲ. ಪದೇ ಪದೇ ಅವನಿಗೆ, ತಾನು ಹೇಳಬೇಕಾದುದೆಲ್ಲವನ್ನೂ ಹೇಳಲು ಸಾಧ್ಯವಾಗುವಂತಹ ಮತ್ತು ವಿಶಿಷ್ಟವೂ ವಿಭಿನ್ನವೂ ಆದಂತಹ ಮಾಧ್ಯಮವನ್ನು ಸಾಧಿಸಲು ಪ್ರಯತ್ನಿಸುತ್ತಿರುವ ಬಗ್ಗೆ ಪ್ರಜ್ಞೆ ಜಾಗೃತವಾಯಿತು. ಅದಕ್ಕಾಗಿಯೇ, ಅವನಿಗೆ ಮಾಡಿದ್ದೆಲ್ಲವೂ ಅಸಂತೃಪ್ತಿಕರವಾಗಿ ಕಾಣುತ್ತಿತ್ತು.

"ಆವತ್ತು, ಅದನ್ನು ಸಾಧಿಸಿಬಿಟ್ಟಿದ್ದೇನೆಂದುಕೊಂಡಿದ್ದೆ."

ಒಂದು ದಿನ ಸಂಜೆ ಅಪಾರ್ಟ್‌ಮೆಂಟಿನಲ್ಲಿ ಥಿಯೋ ಜೊತೆ ಮಾತಾಡುತ್ತಾ ಹೇಳಿದ.

"ಇನ್ನೇನು ನಾನು ಗುರಿ ತಲುಪಿಯೇ ಬಿಟ್ಟಿದ್ದೇನೆ ಎಂದುಕೊಂಡಿದ್ದೆ. ಆದರೆ ಅದೇನಾಯಿತೋ, ಏನಾಗುತ್ತಿದೆಯೋ, ನನ್ನ ದಾರಿಗೆ ಯಾವುದು ಅಡ್ಡವಾಗಿದೆಯೋ ಅರ್ಥವಾಗುತ್ತಿಲ್ಲ."

"ಅದನ್ನು ನಾನು ಹೇಳ್ತೀನಿ." ವಿನ್ಸೆಂಟ್‌ನಿಂದ ಕ್ಯಾನ್‌ವಾಸನ್ನು ತೆಗೆದುಕೊಂಡು ಥಿಯೋ ಹೇಳಿದ.

"ಹೇಳೋಕೆ ಆಗುತ್ತಾ? ಹಾಗಾದರೆ ಹೇಳು."

"ಅದೇನೂಂದ್ರೆ ಪ್ಯಾರಿಸ್!"

"ಪ್ಯಾರಿಸ್?"

"ಹೌದು. ಪ್ಯಾರಿಸ್ ನಿನ್ನ ತರಬೇತಿ ಕೇಂದ್ರ. ಇಲ್ಲಿ ಇರುವವರೆಗೆ ನೀನು ಸ್ಕೂಲ್‌ಬಾಯ್ ಆಗಿಯೇ ಇರ್ತಿ. ಹಾಲೆಂಡ್‌ನಲ್ಲಿ ನಮ್ಮ ಸ್ಕೂಲ್ ನೆನಪಿದೆಯಾ? ಇತರರು ಯಾವುದನ್ನು ಹೇಗೆ ಮಾಡ್ತಾರೆ, ಹೇಗೆ ಮಾಡಬೇಕು ಅನ್ನುವುದನ್ನು ಕಲಿತೆವೆ ಹೊರತಾಗಿ, ನಾವಾಗಿ ಏನನ್ನೂ ಮಾಡಲಿಲ್ಲ!"

"ಅಂದ್ರೆ ನನಗೆ ಇಲ್ಲಿ ಅನುಕೂಲಕರ ವಿಷಯಗಳು ವಸ್ತುಗಳು ಸಿಗುತ್ತಿಲ್ಲ ಅಂತಲೇ?"

"ಅಲ್ಲ. ನಿನ್ನ ಟೀಚರ್ಸ್ ಪ್ರಭಾವದಿಂದ ನಿನಗೆ ಬಿಡಿಸಿಕೊಳ್ಳಲು ಆಗುತ್ತಿಲ್ಲ. ನೀನಿಲ್ಲದೆ ಒಬ್ಬನೇ ಇರುವುದು, ಕಲ್ಪನೆಯಲ್ಲೂ ಹೆದರಿಕೆ ಹುಟ್ಟಿಸುತ್ತದೆ. ಆದರೂ ನೀನು ಹೋಗಬೇಕು. ಪ್ರಪಂಚದಲ್ಲಿನ ಯಾವುದೋ ಒಂದು ಜಾಗಕ್ಕೆ ಹೋಗು. ಆ ಸ್ಥಳವನ್ನು ನಿನ್ನದಾಗಿಸಿಕೋ. ಅದು ಎಲ್ಲಿ, ಯಾವ ಜಾಗ ಎಂದು ನನಗೆ ಹೇಳಲು ಸಾಧ್ಯವಿಲ್ಲ. ನೀನೇ ನಿನ್ನ ನೆಲೆಯನ್ನು ಕಂಡುಕೊಳ್ಳಬೇಕು; ಕಂಡುಕೊಳ್ಳುತ್ತೀ! ನೀನು ಪ್ರಬುದ್ಧತೆಯನ್ನು ಪಡೆಯುವ ಮೊದಲು ಕ್ಲಾಸ್‌ರೂಂ ಮುಷ್ಟಿಯಿಂದ ಬಿಡುಗಡೆ ಹೊಂದಬೇಕು!"

'ಇತ್ತೀಚೆಗೆ ನಾನೊಂದು ಜಾಗದ ಬಗ್ಗೆ ಬಹಳವಾಗಿ ಯೋಚಿಸುತ್ತಿದ್ದೇನೆ. ಯಾವುದೆಂದು ಗೊತ್ತಾ?"

"ಇಲ್ಲ."

"ಆಫ್ರಿಕಾ."

"ಆಫ್ರಿಕಾ? ಸುಳ್ಳು ಹೇಳುತ್ತಿಲ್ಲ ತಾನೇ?"

"ನಿಜವಾಗಿಯೂ! ಅಲ್ಲಂತೂ ವರ್ಷವಿಡೀ ಬೊಬ್ಬೆ ಬರಿಸುವ ಪ್ರಖರ ಸೂರ್ಯತೇಜವಿರುತ್ತೆ. ಡೆಲಕ್ರ್ವಾ ಕೂಡಾ ತನ್ನ ಬಣ್ಣಗಳನ್ನು ಕಂಡುಕೊಂಡದ್ದು ಅಲ್ಲಿಯೇ. ಒಂದು ದಿನ ನನಗೆ ಅಲ್ಲಿಗೆ ಹೋಗಬೇಕೆನಿಸುತ್ತೆ."

"ಆಫ್ರಿಕಾ ತುಂಬಾ ದೂರ ಇದೆ ವಿನ್ಸೆಂಟ್" ಥಿಯೋ ಯೋಚನಾಮಗ್ನನಾಗಿ ಹೇಳಿದ.

"ಥಿಯೋ, ದೂರ ನನಗೆ ಸಮಸ್ಯೆ ಅಲ್ಲ. ನನಗೆ ಸೂರ್ಯ ಬೇಕು. ಭಯಂಕರ ಸತ್ವ, ಶಾಖಗಳಿಂದ ಕೂಡಿದ ಸೂರ್ಯಬೇಕು. ಯಾವುದೋ ಚುಂಬಕ ಶಕ್ತಿ ನನ್ನನ್ನು ದಕ್ಷಿಣದತ್ತ ಸೆಳೆಯುತ್ತಿದೆ. ಹಾಲೆಂಡ್ ಬಿಟ್ಟು ಬರುವವರೆಗೆ, ಸೂರ್ಯನಂತ ಒಂದು ವಸ್ತು ಇದೇಂತಲೇ ನನಗೆ ತಿಳಿದಿರಲಿಲ್ಲ. ಈಗ ಅನಿಸುತ್ತೆ. ಅಂತಹ ಪ್ರಚಂಡ ವಸ್ತುವಿಲ್ಲದೆ ಪೈಂಟಿಂಗ್ ಅನ್ನೋದು ಸಾಧ್ಯವೇ ಇಲ್ಲ. ನಾನು ಪ್ರಬುದ್ಧತೆಯನ್ನು ತಲುಪಲು ತೀಕ್ಷ್ಣಶಾಖದ ಸೂರ್ಯನಂತಹ ವಸ್ತುವಿನ ಅಗತ್ಯವಿದೆ. ಪ್ಯಾರಿಸಿನ ಚಳಿಯಿಂದ ಹೆಪ್ಪುಗಟ್ಟಿದ್ದೇನೆ. ಥಿಯೋ, ಅಲ್ಲಿನ ಆ ಶೀತಲತೆ ಅಥವಾ ಶೀತ ನನ್ನ ಬ್ರಷ್‌ಗಳಿಗೆ, ಪ್ಯಾಲೆಟ್‌ಗೆ ಇಳಿದಿದೆ ಅನಿಸುತ್ತೆ. ಎಲ್ಲಿಯೇ ಹೋಗಲಿ, ಮನಃಪೂರ್ತಿಯಾಗಿ ಹೋಗುತ್ತೇನೆ. ಒಮ್ಮೆ ನನಗೆ ಆಫ್ರಿಕಾದ ಸೂರ್ಯ ಸಿಕ್ಕಿದರೆ ಸಾಕು ನನ್ನೊಳಗಿನ ಶೀತಮಂಜೆಲ್ಲವೂ ಸುಟ್ಟು ಹೋಗಿ, ನನ್ನ ಪ್ಯಾಲೆಟ್‌ಗೆ ಬೆಂಕಿ ಹತ್ತಿಕೊಳ್ಳುತ್ತದೆ....."

"ಹೂಂ!..... ಅದರ ಬಗ್ಗೆ ಯೋಚನೆ ಮಾಡಬೇಕಾಗುತ್ತೆ...... ಬಹುಶಃ ನೀನು ಹೇಳುವುದು ಸರಿಯಿರಬಹುದು."

ಪಾಲ್ ಸೆಜ಼ಾನ್ನೆ ತನ್ನ ಗೆಳೆಯರಿಗೆಲ್ಲ ಫೇರ್‌ವೆಲ್ ಪಾರ್ಟಿ ನೀಡಿದ. ತಂದೆಯ ಮುಖಾಂತರ ಗುಡ್ಡದ ಮೇಲಿನ ಒಂದಷ್ಟು ಪ್ರದೇಶವನ್ನು ಖರೀದಿಸಿದ್ದ. ಅವನ್ನು ಏಕ್ಸ್‌ಗೆ ಹಿಂತಿರುಗಿ 'ಸ್ಟುಡಿಯೋ' ಕಟ್ಟಿಸಲು ಸಿದ್ಧನಾದ.

"ಪ್ಯಾರಿಸ್‌ನಿಂದ ಆಚೆ ಹೋಗು ವಿನ್ಸೆಂಟ್. ಪ್ರೊವೆನ್ಸ್‌ಗೆ ಬೇಕಾದರೆ ಬಾ, ಏಕ್ಸ್‌ಗೆ ಮಾತ್ರ ಬರಬೇಡ. ಅದು ನನ್ನ ರಾಜ್ಯ. ಬೇಕಾದರೆ ಅದಕ್ಕೆ ಹತ್ತಿರವಾದ ಯಾವ ಸ್ಥಳಕ್ಕಾದರೂ ಸರಿ ಬಂದು ಬಿಡು. ಪ್ರಪಂಚದ ಎಲ್ಲೆಡೆಗಿಂತಲೂ ಇಲ್ಲಿನ ಸೂರ್ಯ ಪ್ರಖರ ಮತ್ತು ಪರಿಶುದ್ಧ. ನೀನೆಂದೂ ಕಾಣದಿದ್ದ ಬೆಳಕು, ಶುದ್ಧ ಬಣ್ಣಗಳು ಪ್ರೊವೆನ್ಸ್‌ನಲ್ಲಿ ನಿನಗೆ ಸಿಗುತ್ತವೆ. ನನ್ನುಳಿದ ಜೀವನವನ್ನೆಲ್ಲ ಅಲ್ಲಿಯೇ ಕಳೆಯಬೇಕೆಂದು ತೀರ್ಮಾನಿಸಿದ್ದೇನೆ."

"ಪ್ಯಾರಿಸ್‌ನಿಂದ ಹೊರಗೆ ಹೋಗುವವರಲ್ಲಿ ಮುಂದೆ ನಾನೇ!".... ಗಾಗಿನ್ ಹೇಳಿದ. "ಸೆಜಾನ್ನೆ ಪ್ರೊವೆನ್ಸ್‌ನಲ್ಲಿ ನಿಜವಾದ ಸೂರ್ಯ ಸಿಕ್ತಾನೆ ಅನ್ನುವುದಾದರೆ,

ವಾರ್ಕ್‌ಸಾಸ್‌ಗೆ ಬಾ. ಅಲ್ಲಿನ ಸೂರ್ಯ ಮತ್ತು ಬಣ್ಣ ಅಲ್ಲಿನ ಜನರಷ್ಟೇ ಪುರಾತನವಾದವು."

"ಅಂದ್ರೆ, ನೀವೆಲ್ಲ ಸೂರ್ಯನ ಆರಾಧಕರಾಗಲು ಹೊರಡಬೇಕಿದೆ' ಸ್ಯುರಾತ್ ಹೇಳಿದ.

"ನನ್ನ ವಿಷಯಕ್ಕೆ ಬರುವುದಾದರೆ, ನಾನಂತೂ ಆಫ್ರಿಕಾಗೆ ಹೋಗುತ್ತಿದ್ದೇನೆ."

"ಭಲೆ! ಭಲೆ! ಹಾಗಾದರೆ ಮತ್ತೊಬ್ಬ ಪುಟ್ಟ ಡೆಲಕ್ರ್ವಾ ನಮಗೆ ಸಿಗಲಿದ್ದಾನೆ."

"ನಿಜವಾಗಿಯೂ ಹೋಗ್ತಿದ್ದೀಯ ವಿನ್ಸೆಂಟ್?" ಗಾಗಿನ್ ಕೇಳಿದ.

"ಹೌದು, ಆದರೆ ತಕ್ಷಣಕ್ಕೇನೂ ಅಲ್ಲ. ಅದಕ್ಕೆ ಮುಂದೆ ಬಹುಶಃ ಪ್ರೊವೆನ್ಸ್‌ನಲ್ಲಿ ಸ್ವಲ್ಪ ಕಾಲ ಇದ್ದು, ಸೂರ್ಯನ ಅಭ್ಯಾಸ ಮಾಡಿಕೊಳ್ಳಬೇಕಾಗುತ್ತೆ."

"ನೀನು ಮಾರ್ಸೈನಲ್ಲಿ ಇರಲು ಸಾಧ್ಯವಿಲ್ಲ. ಅದು ಮೋಂಟಿಸೆಲ್ಲಿಗೆ ಸೇರಿದ ಪಟ್ಟಣವಾಗಿದೆ."

"ನಾನು ಏಕ್ಸ್‌ಗೂ ಹೋಗೋಕೆ ಆಗೊಲ್ಲ. ಅದು ಸೆಝಾನ್ನೆಗೆ ಸೇರಿದ್ದು. ಮೋನೆಟ್ ಆಗಲೇ ಆಂತಿಬೇ ಮುಗಿಸಿದ್ದಾನೆ. ಮಾರ್ಸೈ 'ಫದಾ'ರಿಗೆ ಪವಿತ್ರವಾದದ್ದು ಅನ್ನೋದು ನನಗೆ ಗೊತ್ತಿದೆ. ಹಾಗಾದರೆ ನಾನು ಎಲ್ಲಿಗೆ ಹೋಗಬೇಕೂಂತ ಯಾರಾದರೂ ಸೂಚನೆ ಕೊಡ್ತೀರಾ?"

"ಒಂದು ನಿಮಿಷ! – ಭಾವಾವೇಶದಿಂದ ಲಾಟ್ರೆಕ್ ಕಿರುಚಿದ. ನನಗೊಂದು ಜಾಗ ಗೊತ್ತಿದೆ. ಆರ್ಲೆ ಬಗ್ಗೆ ಯಾವಾಗಲಾದರೂ ಯೋಚನೆ ಮಾಡಿದ್ದೀಯಾ?"

"ಆರ್ಲೆ? ಅದು ರೋಮನ್‌ರು ನೆಲೆಸಿದ್ದ ಪ್ರದೇಶ ಅಲ್ವೆ?"

"ಹೌದು. ಅದು ರೋನ್ ನದಿ ಮೇಲಿದೆ. ಮಾರ್ಸೈಯಿಂದ ಒಂದೆರಡು ಗಂಟೆ ಪ್ರಯಾಣ. ಒಂದು ಸಲ ನಾನು ಅಲ್ಲಿಗೆ ಹೋಗಿದ್ದೆ. ಆ ಗ್ರಾಮೀಣ ಪ್ರದೇಶದ. ಪರಿಸರದ ವರ್ಣವೈಭವ. ಡೇಕ್ರ್ವಾನ ದೃಶ್ಯಗಳಲ್ಲಿನ ಬಣ್ಣಗಳು ಅನೀಮಿಕ್ ಕಾಣುವಂತೆ ಮಾಡುತ್ತದೆ."

"ಅದೆಲ್ಲಾ ಹೇಳಬೇಡ. ಒಳ್ಳೇ ಸೂರ್ಯ ಸಿಗ್ತಾನಾ?"

"ಸೂರ್ಯ? ಹುಚ್ಚನನ್ನಾಗಿಸಿ ಬಿಡುತ್ತೆ. ಆರ್ಲೆ ಜನರನ್ನು ನೀನು ನೋಡಬೇಕು. ಏನು ಗಡದ್ದಾಗಿ ಕಾಣ್ತಾರೆ! ಇನ್ನೂ ಅವರಲ್ಲಿ. ಗ್ರೀಕ್‌ಲಕ್ಷಣಗಳೂ ಇವೆ; ರೋಮನ್ ಲಕ್ಷಣಗಳೂ ಇವೆ. ಗ್ರೀಕರ ನಾಜೂಕಿನ ಮುಖಲಕ್ಷಣಗಳ ಜೊತೆಗೆ ರೋಮನ್‌ರ ದೇಹಧಾರ್ಢ್ಯವೂ ಇದೆ. ಆದರೂ ಅವರ ಗುಣ, ಸಂಸ್ಕೃತಿ ಪೌರ್ವಾತ್ಯವೆನಿಸುತ್ತದೆ. ಈ ಆರ್ಲೆನಲ್ಲಿಯೇ ನನಗೆ ವೀನಸ್ ಮಾಡೆಲ್ ಆಗಿ ಸಿಕ್ಕಿದ್ದು. ಈ ಮಾಡೆಲ್ ಆರ್ಲೇಸಿಯನ್ ಆಗಿದ್ದಳು!"

"ತುಂಬ ಆಕರ್ಷಕವೆನಿಸುತ್ತೆ!" ವಿನ್ಸೆಂಟ್ ಹೇಳಿದ.

"ನಿಜವಾಗಿಯೂ ಆಕರ್ಷಕವೆ. ಮಿಸ್ಟ್ರಾಲ್ ಅನುಭವ ಆಗುವ ತನಕ ಸ್ವಲ್ಪ ವೆಯ್ಟ್ ಮಾಡು."

"ಏನದು 'ಮಿಸ್ಟ್ರಾಲ್'?" ವಿನ್ಸೆಂಟ್ ವಿಚಾರಿಸಿದ.

"ಅಲ್ಲಿಗೆ ಹೋದ ಮೇಲೆ ನಿನಗೇ ಗೊತ್ತಾಗುತ್ತೆ. ಅದು ಏನೂಂತ" ಲಾಟ್ರೆಕ್ ಉತ್ತರಿಸಿದ.

"ಅಲ್ಲಿ ಹೇಗೆ? ವಸ್ತುಗಳು ಅಗ್ಗವಾಗಿ ಸಿಗುತ್ತೇನು?"

"ಊಟ, ವಸತಿಗಳಿಗೆ ಹೊರತಾಗಿ, ಅಲ್ಲಿ ಬೇರೇನು ಖರ್ಚು ಇರೊಲ್ಲ. ಅವೂ ಕೂಡ ಅಷ್ಟೊಂದು ಕಾಸ್ಟ್ಲಿ ಏನಲ್ಲ. ಪ್ಯಾರಿಸ್‌ನಿಂದ ಹೋಗಲೇಕು ಅನ್ನುವುದಾದರೆ, ಯಾಕೆ 'ಆರ್ಲೆ' ಕಡೆ ಪ್ರಯತ್ನಿಸಬಾರದು?"

"ಆರ್ಲೆ," ವಿನ್ಸೆಂಟ್ ತನ್ನಲ್ಲಿಯೇ ಮಣಮಣಗುಟ್ಟಿದ. ಆರ್ಲೆ ಮತ್ತು ಆರ್ಲೇಸಿಯನ್. ಅಲ್ಲಿನ ಹೆಂಗಸರಲ್ಲಿ ಒಬ್ಬಳನ್ನು ಪೈಂಟ್ ಮಾಡಲೇಬೇಕು!"

ಪ್ಯಾರಿಸ್, ವಿನ್ಸೆಂಟ್‌ನನ್ನು ಭಾವೋದ್ರೇಕಕ್ಕೆ ಒಳಗಾಗಿಸಿತ್ತು. ಎಷ್ಟೊಂದು ಸಲ ಅಬಿಸಿಂತ್‌ನ್ನು ಕುಡಿದಿದ್ದ. ಧೂಮಪಾನ ಮಾಡಿದ್ದ. ಬಾಹ್ಯ ಚಟುವಟಿಕೆಗಳಲ್ಲಿ ಹೆಚ್ಚಾಗಿ ತೊಡಗಿಸಿಕೊಂಡಿದ್ದ. ಉತ್ಸಾಹದ ಉತ್ತುಂಗದಲ್ಲಿದ್ದ. ಈಗ ಅವನಿಗೆ, ಅಲ್ಲಿಂದ ಹೊರಟು ಬಿಡಲೇಬೇಕು ಎನಿಸಿತ್ತು. ಎಲ್ಲಿಯಾದರೂ ಪ್ರಶಾಂತವಾದ ಸ್ಥಳಕ್ಕೆ ಹೋಗಿ, ತನ್ನ ಕಲೆಗೆ ಜೀವಶಕ್ತಿಯನ್ನು ಹರಿಸಿ ತುಂಬಬೇಕಿತ್ತು. ಅವನಿಗೆ ತನ್ನಾಸೆಯ ಪೂರೈಕೆಗೆ ಪ್ರಖರ ಸೂರ್ಯನೊಬ್ಬಬೇಕಿದ್ದ. ಎಂಟು ವರ್ಷಗಳಿಂದ, ತನ್ನ ಸೃಜನಶೀಲಶಕ್ತಿಯನ್ನು ಮಹತ್ವದ ಗುರಿಯ ಸಾಧನೆಯತ್ತ ಹೋರಾಡುತ್ತಲೇ ತೊಡಗಿಸಿಕೊಂಡಿದ್ದ. ತಲುಪಲು ಬಯಸಿದ್ದ ಆ ಗುರಿ, ಈಗ ಬಹಳ ಹತ್ತಿರದಲ್ಲಿಯೇ ಇದೆ ಎನ್ನುವ ವಿಶ್ವಾಸ ಅವನಲ್ಲಿ ಮೂಡಿತ್ತು. ಇಲ್ಲೀವರೆಗೆ ಮೌಲಿಕವಾದ ಯಾವುದೇ ಕಲಾಕೃತಿಯನ್ನು ಅವನು ಮಾಡಿರಲಿಲ್ಲ. ಅವನಿಗೂ ಅದು ತಿಳಿದಿತ್ತು. ಈಗ ಬಹುಶಃ ಅತ್ಯಲ್ಪ ಕಾಲದಲ್ಲಿಯೇ ತನ್ನ ಜೀವನ ಸಾರ್ಥಕತೆಯನ್ನು ಸಾರುವ ಕೆಲವು ಕಲಾಕೃತಿಗಳನ್ನು ಸೃಷ್ಟಿಸಲು ಸಾಧ್ಯವಾಗುವುದೆಂದು ನಂಬಿದ.

ಮೋಂಟಿಸೆಲ್ಲಿ ಹೇಳಿದ್ದೇನು? – 'ಪ್ರತಿಯೊಬ್ಬ ಕಲಾವಿದ' ಕಡೇ ಪಕ್ಷ ಹತ್ತು ವರ್ಷಗಳನ್ನಾದರೂ ಸಾಧನೆಯಲ್ಲಿ ತೊಡಗಿಸಬೇಕು. ಆಗ ಮಾತ್ರ ಬಹುಶಃ ಎರಡೋ ಮೂರೋ ಅಧಿಕೃತವಾದ ಕಲಾಕೃತಿಗಳನ್ನು ಸೃಷ್ಟಿಸಲು ಸಾಧ್ಯವಾಗುತ್ತದೆ" ಎಂದು.

ಪ್ಯಾರಿಸ್‌ನಲ್ಲಿ ಥಿಯೋ ಇದ್ದ. ಸ್ನೇಹಿತರು ಇದ್ದರು. ಪ್ರೀತಿ ಸಿಕ್ಕಿತ್ತು. ಜೀವನಕ್ಕೆ ಭದ್ರತೆಯೂ ಇತ್ತು. ಅವನ ತಮ್ಮ ಅವನಿಗೆ ಯಾವುದಕ್ಕೂ ಕಡಿಮೆ ಮಾಡಿರಲಿಲ್ಲ. ಒಂದು ದಿಸವೂ ಹಸಿವಿನಿಂದ ಇರಲು ಬಿಡಲಿಲ್ಲ. ಪೈಂಟಿಂಗ್‌ಗೆ ಬೇಕಾದ ವಸ್ತುಗಳು ಕೇಳದೆಯೂ, ತಂದುಕೊಡುತ್ತಿದ್ದ. ತನ್ನ ಕೈಯಲ್ಲಿ ಸಾಧ್ಯವಾದದ್ದೆಲ್ಲವನ್ನೂ ಅವನಿಗೆ ತಂದುಕೊಟ್ಟಿದ್ದ. ಕೇಳಿದ ಯಾವುದನ್ನೂ, ಪೂರೈಸದೆ ಬಿಟ್ಟಿರಲಿಲ್ಲ. ಅವನ ಬಗ್ಗೆ ಪ್ರೀತಿ, ಸಹಾನುಭೂತಿಗಳಿಗೆ ಕೊರತೆಯೇ ಇರಲಿಲ್ಲ.

ಪ್ಯಾರಿಸ್ ಬಿಟ್ಟ ಕ್ಷಣದಿಂದಲೇ ತನ್ನ ಕಷ್ಟಗಳು ಶುರುವಾಗುತ್ತವೆ ಎನ್ನುವುದು ಗೊತ್ತಿತ್ತು. ಥಿಯೋನಿಂದ ಬೇರೆಯಾಗಿದ್ದು, ಅವನಿಗೆ ಖರ್ಚಿಗೆ ಕೊಡುವ ಹಣ

ಸಾಕಾಗುವುದೇ ಇಲ್ಲ. ಬಹುಶಃ ಅನೇಕ ಸಲ ಹಸಿವಿನಿಂದ ಇರಬೇಕಾದ ಸಂದರ್ಭಗಳೂ ಬರಬಹುದು. ಅಗ್ಗದ ಕೆಫೆಗಳಲ್ಲಿ ವಾಸಮಾಡುತ್ತಾ, ಬಣ್ಣಗಳನ್ನು ಕೊಳ್ಳಲಾಗದೆ, ಪೈಂಟ್ ಮಾಡಲಾಗದೆ ಹತಾಶೆ, ನಿರಾಶೆ ಅಸಹಯಾಕತೆಗಳಿಂದ ನರಳಬೇಕಾಗುತ್ತದೆ. ಮಾತಾಡಲು ಒಬ್ಬರಾದರೂ ಸ್ನೇಹಿತರೂ ಇರುವುದಿಲ್ಲ.

"ನಿಜವಾಗಿಯೂ ಆರ್ಲೆ ನಿನಗೆ ಇಷ್ಟವಾಗುತ್ತೆ" – ತುಲೋಸ್ ಲಾಟ್ರೆಕ್ ಮಾರನೆ ದಿನ ವಿನ್ಸೆಂಟ್‌ಗೆ ಹೇಳಿದ.

"ತುಂಬಾ ಪ್ರಶಾಂತವಾಗಿರುತ್ತೆ. ಯಾರೂ ನಿನಗೆ ತೊಂದರೆ ಮಾಡೊಲ್ಲ. ಒಣ ಬಿಸಿಲು, ರೋಮಾಂಚಕಾರಿ ಬಣ್ಣಗಳು, ಇಡೀ ಯೂರೋಪಿನಲ್ಲಿ ಇದೊಂದೇ ಜಾಗದಲ್ಲಿ ಮಾತ್ರ. ಜಪಾನೀಯರ ಸ್ಪಷ್ಟತೆ ನೋಡಲು ಸಿಗುತ್ತೆ. ಇದಂತೂ "ಪೈಂಟರ್ಸ್ ಪ್ಯಾರಡೈಸ್ (ವರ್ಣ ಕಲಾವಿದರ ಸ್ವರ್ಗ), ಪ್ಯಾರಿಸ್ ಜೊತೆ ಇಷ್ಟು ಗಾಢವಾಗಿ ಅಂಟಿಕೊಂಡಿರದಿದ್ದರೆ, ನಾನೇ ಅಲ್ಲಿಗೆ ಹೋಗುತ್ತಿದ್ದೆ."

ಆ ದಿನ ಸಂಜೆ ಥಿಯೋ ಮತ್ತು ವಿನ್ಸೆಂಟ್ ವ್ಯಾಗ್ನರ್ ಕಾನ್‌ಸರ್ಟ್‌ಗೆ ಹೋದರು. ಆದರೆ ಸ್ವಲ್ಪ ಬೇಗನೇ ಮನೆಗೆ ಬಂದು, ತಮ್ಮ ಬಾಲ್ಯದನೆನಪುಗಳನ್ನು ಮಾಡಿಕೊಂಡು ಹರಟುತ್ತಿದ್ದರು. ಮಾರನೆದಿನ ಬೆಳಿಗ್ಗೆ, ವಿನ್ಸೆಂಟ್‌ನೇ ಎದ್ದು ಥಿಯೋಗೆ ಕಾಫಿ ರೆಡಿ ಮಾಡಿ ಕೊಟ್ಟ. ಥಿಯೋ ಗೂಪಿಲ್ಸ್‌ಗೆ ಹೊರಟ ಮೇಲೆ, ತಮ್ಮ ಪುಟ್ಟ ಫ್ಲಾಟನ್ನು ಪೂರ್ತಿಯಾಗಿ ಶುಚಿ ಮಾಡಿದ. ಗೋಡೆಗಳ ಮೇಲೆ ಪೇರ್ ಟಾಂಗೆಯ ಭಾವಚಿತ್ರ ಒಂದು ಹೆಣ್ಣಿನ ನಗ್ನಚಿತ್ರ, ಮತ್ತೆ ಷಾಂಪ್ಸ್ ಎಲಿನೇಸ್‌ನ ದೃಶ್ಯಗಳನ್ನು ಏರಿಸಿದ.

ಥಿಯೋ ಸಂಜೆ ಹಿಂತಿರುಗಿ ಬಂದಾಗ, ಪಡಸಾಲೆಯ ಟೇಬಲ್ ಮೇಲೆ ಒಂದು ಪತ್ರವಿತ್ತು.

ಪ್ರೀತಿಯ ಥಿಯೋ,

ನಾನು ಆರ್ಲೆಗೆ ಹೊರಟಿದ್ದೇನೆ. ಅಲ್ಲಿಗೆ ತಲುಪಿದ ಮೇಲೆ ಮತ್ತೆ ಬರೆಯುತ್ತೇನೆ. ಗೋಡೆಯ ಮೇಲೆ ನನ್ನ ಕೆಲವು ಪೈಂಟಿಂಗ್ಸ್‌ಗಳನ್ನು ಹಾಕಿದ್ದೇನೆ. ಅವು ಸದಾ ನನ್ನನ್ನು ನಿನ್ನ ನೆನಪಿನಲ್ಲಿ ಇರಿಸುತ್ತವೆ.

ನಿನ್ನ ಪ್ರೀತಿಯ

ವಿನ್ಸೆಂಟ್



## ಭಾಗ – ಆರು

# ನಿಲುಗಡೆಯಿಲ್ಲದ ಕಲಾಸೃಷ್ಟಿ

–೧–

ಆರ್ಲೆಯ ಸೂರ್ಯ ವಿನ್ಸೆಂಟ್‌ನ ಕಣ್ಣು ಚುಚ್ಚಿತು. ಕುರುಡಾಗಿಸುವ ತೀಕ್ಷ್ಣ ಬೆಳಕು. ಹಳದಿ ಬೆಂಕಿಯುಂಡೆಯಂತಿದ್ದ ಸೂರ್ಯ. ಭಯಂಕರ ಬಿಸಿಲು, ಶುಭ್ರಗಾಳಿ ಯಾವುದೋ ಅಪರಿಚಿತ ಲೋಕವನ್ನು ಅವನ ಮುಂದಿರಿಸಿತು.

ಮೂರನೆ ದರ್ಜೆಯ ಬೋಗಿಯಿಂದಿಳಿದು, ಸ್ಟೇಷನ್‌ನಿಂದ ಹೊರಗೆ ಬಂದು ಲಾಮಾರ್ಟಿನ್ ಕಡೆಗೆ ತಿರುಗಿದ. ಈ ಪ್ರದೇಶದ ಒಂದು ಪಕ್ಕಕ್ಕೆ ರ್‍ಹೋನ್ ನದಿ ಇದ್ದರೆ ಮತ್ತೊಂದು ಪಕ್ಕಕ್ಕೆ ಕಾಫಿ ಹೌಸ್‌ಗಳು, ಕನಿಷ್ಠ ದರ್ಜೆಯ ಹೋಟೆಲುಗಳು ಇದ್ದವು.

ವಿನ್ಸೆಂಟ್ ಉಳಿದುಕೊಳ್ಳಲು ಯಾವುದಾದರೂ ಜಾಗ ಸಿಗಬಹುದೇನೋ ಎಂದು ಹುಡುಕಾಡಿದ. ಕಡೆಗೆ ನೇರವಾಗಿ, ಮೊದಲು ಕಣ್ಣಿಗೆ ಬಿದ್ದ ಹೋಟೆಲ್ 'ದೆ ಲಾ ಗೇರ್' ಒಳಗೆ ಪ್ರವೇಶಿಸಿದ. ಅವನಿಗೆ 'ಎ' ದರ್ಜೆ 'ಬಿ' ದರ್ಜೆ ಎನ್ನುವುದರ ಬಗ್ಗೆ ಯೋಚನೆ ಇರಲಿಲ್ಲ. ಅವನು ಆಯ್ದುಕೊಂಡಿದ್ದ ಹೋಟೆಲು ಸಾಮಾನ್ಯ ದರ್ಜೆಯದಾಗಿತ್ತು. ಯಾವುದೋ ಒಂದು ತುಕ್ಕು ಹಿಡಿದ ಮಂಚ, ಸೀಳು ಬಿದ್ದಿದ್ದ ಬಿಂದಿಗೆ, ಹಾಳಾಗಿದ್ದ ಕುರ್ಚಿ ಇತ್ಯಾದಿಗಳಿಂದ ಕೋಣೆ ಸಜ್ಜಿತವಾಗಿತ್ತು. ಪ್ರೊಪ್ರೈಟರ್ ಬಣ್ಣಗೆಟ್ಟಿದ್ದ ಮೇಜೊಂದನ್ನು ತಂದಿರಿಸಿದ. ಕೋಣೆ ಬಹಳ ಚಿಕ್ಕದಾಗಿತ್ತು. ಅವನಿಗೆ ಅಲ್ಲಿ ತನ್ನ ಈಸಲ್ ಇರಿಸಿಕೊಳ್ಳುವುದೇ ಸಮಸ್ಯೆಯಾಗಿತ್ತು. ಆದರೆ ವಿನ್ಸೆಂಟ್ ಇಡೀ ದಿನವನ್ನು ಔಟ್‌ಡೋರ್ ಪೈಂಟಿಂಗ್‌ನಲ್ಲಿಯೇ ಕಳೆಯಲು ನಿರ್ಧರಿಸಿದ್ದ. ತನ್ನ ಪೆಟ್ಟಿ ಪೆಠಾರಿಗಳನ್ನು ಮಂಚದ ಮೇಲೆ ಎಸೆದು ಊರನ್ನು ನೋಡಲೆಂದು ಹೊರಗೋಡಿದ. ಲಾಮಾರ್ಟಿನ್‌ನಿಂದ ಆರ್ಲೆಯ ಕೇಂದ್ರಭಾಗಕ್ಕೆ ಬರಲು ಎರಡು ಮಾರ್ಗಗಳಿದ್ದವು. ಒಂದು ಬಳಸು ಮಾರ್ಗ, ಇದು ಮುಖ್ಯವಾಗಿ ವಾಹನಗಳ ಮೂಲಕ ತಲುಪುವುದಕ್ಕೆಂದಿತ್ತು. ಇನ್ನೊಂದು ನೇರದಾರಿ; ನಡೆದೇ ಹೋಗಬಹುದಾಗಿತ್ತು. ವಿನ್ಸೆಂಟ್ ಈ ದಾರಿ ಹಿಡಿದು ನಡೆದ. ಮಾರ್ಗದಲ್ಲಿ ರೋಮನ್ ಫೋರಮ್, ಆ್ಯಂಫಿಥಿಯೇಟರ್ (ಅರ್ಧವೃತ್ತಾಕಾರದ ಗ್ಯಾಲರಿ)ಗಳನ್ನು ನೋಡಿದ. ನಂತರ ಇಕ್ಕಟ್ಟಾದ ಕಲ್ಲುಹಾಸಿನ ರಸ್ತೆಗಳಿದ್ದವು. ವಿನ್ಸೆಂಟ್, ಸುಡುವ ಬಿಸಿಲಿನಲ್ಲಿ ನಡೆದು 'ದೆ ಲಾ ಮೈರ್' ಪ್ರದೇಶ ತಲುಪಿದ. ನಂತರ ರೋಮನರ ಆರಂಭಕಾಲದಲ್ಲಿನ ಕಲ್ಲುಕಟ್ಟಡದ ನ್ಯಾಯಾಲಯಗಳು,

ಚತುರಾಕಾರದ ಪ್ರಾಂಗಣಗಳು ಕಣ್ಣಿಗೆ ಬಿದ್ದವು. ಬಹಳ ಕಾಲದಿಂದ ಯಾರೂ ಅವುಗಳನ್ನು ಉಪಯೋಗಿಸಿದಂತೆ ಕಾಣುತ್ತಿರಲಿಲ್ಲ. ಸುಡುವ ಸೂರ್ಯನ ಬಿಸಿಲಿನಿಂದ ಪಾರಾಗಲು ಬೀದಿಗಳು ಎಷ್ಟು ಇಕ್ಕಟ್ಟಾಗಿದ್ದುವೆಂದರೆ, ಎದುರು ಬದುರಿನ ಸಾಲುಮನೆಗಳನ್ನು ಮುಟ್ಟಬಹುದಾಗಿತ್ತು. ಕೊಳಕು ಕೊಳಕಾದ ಮಕ್ಕಳಿಗೆ ಆ ರಸ್ತೆಗಳು ಆಶ್ರಯವಾಗಿದ್ದವು.

ವಿನ್ಸೆಂಟ್ ದ ಲ ಮೈರ್‌ನಿಂದ ಅಂಗಡಿಬೀದಿಗೆ ಬಂದ. ಅಲ್ಲಿಂದ ಮುಂದೆ ಒಂದು ಪುಟ್ಟ ಪಾರ್ಕ್ ಇತ್ತು. ಅಲ್ಲಿ ಸ್ವಲ್ಪ ಹೊತ್ತು ಅಡ್ಡಾಡಿದ. ನಂತರ ಗುಡ್ಡ ಹತ್ತಿ ಇಳಿದು ರೋಮನ್ ಅರೆನಾ ತಲುಪಿದ.

ಒಂದು ಕಲ್ಲು ಬಂಡೆಯ ಮೇಲೆ ಕುಳಿತುಕೊಂಡ. ಮೂರು ಅಡಿಗಳಿಗೂ ಹೆಚ್ಚು ಎತ್ತರವಿದ್ದ ಬಂಡೆಯ ಮೇಲಿನಿಂದ ಕಾಲುಗಳನ್ನು ಇಳಿಬಿಟ್ಟು ಆಡಿಸುತ್ತಿದ್ದ. ಪೈಪ್ ಹಚ್ಚಿ ತುಟಿಗಿಟ್ಟುಕೊಂಡ. ಒಮ್ಮೆ ಸುತ್ತಲೂ ಕಣ್ಣಾಡಿಸಿ ಆ ಪ್ರದೇಶವನ್ನು ಪರೀಕ್ಷಿಸುತ್ತಿದ್ದ.

ಕೆಳಗಿದ್ದ ಆ ಊರು, ರ್‍ಹೋನ್ ನದಿ ಕಾಣಿಸುತ್ತಿದ್ದವು. ಮನೆಗಳ ಛಾವಣಿಗಳು ಕಲಾತ್ಮಕವಾಗಿ ಹೆಣೆದುಕೊಂಡಿರುವಂತೆ ಕಾಣಿಸುತ್ತಿದ್ದವು. ಅವು ಕೆಂಪುಜೇಡಿ ಮಣ್ಣಿನಿಂದ ಮಾಡಿದಂತೆ ಇದ್ದವು. ಒಂದೇ ಸಮನೆ ಛಾವಣಿಯ ಹೆಂಚುಗಳು ಸೂರ್ಯಶಾಖದಲ್ಲಿ ಬೇಯುತ್ತಿರುವಂತೆನಿಸಿದವು. ಇದರಿಂದಾಗಿ ಇವು ಹಲವು ಬಣ್ಣಗಳಲ್ಲಿ ಕಾಣಿಸಿದವು.

ಹರಿಯುತ್ತಿದ್ದ ರ್‍ಹೋನ್ ನದಿ ತಟ್ಟನೆ ತಿರುವು ಪಡೆದು ಹರಿಯುವಾಗ, ಗುಡ್ಡದ ಮೇಲಿನ ಆರ್ಲೆ ಗುಡ್ಡಕ್ಕೆ ಅಂಟಿಸಿದಂತೆ ಕಾಣಿಸುತ್ತಿತ್ತು. ಆರ್ಲೆ ಇದ್ದ ಗುಡ್ಡವನ್ನು ಬಳಸಿ ಹರಿಯುತ್ತಿದ್ದ ರ್‍ಹೋನ್ ನದಿ ಕಡೆಗೆ ಮೆಡಿಟರೇನಿಯನ್ ಸಮುದ್ರವನ್ನು ಸೇರುವತ್ತ ಧಾವಿಸುತ್ತಿತ್ತು. ನದಿಯ ಎರಡೂ ಬದಿಗಳಲ್ಲಿ ಕಲ್ಲುದಂಡೆಗಳಿದ್ದವು. ಇವನ ಹಿಂಭಾಗಕ್ಕೆ ಸಾಲು ಸಾಲುಬೆಟ್ಟಗಳಿದ್ದವು. ಈ ಬೆಟ್ಟಗಳು ಬೆಳಕಿನಾಗಸಕ್ಕೆ ಚಾಚಿಕೊಂಡಿದ್ದವು. ಅದ್ಭುತವಾದ ನಿಸರ್ಗದೃಶ್ಯಗಳು ಅವನ ಕಣ್ಣು ತುಂಬಿದ್ದವು. **ಉತ್ತ ಗದ್ದೆಗಳು, ಹೂವಿನ ತೋಟಗಳು,** ಮಾಂಟ್ ಮಜ್ಹೂರ್ ಶಿಖರ ಫಲವತ್ತಾದ ಕಣಿವೆಗಳು– ಎಲ್ಲವೂ ಅಮೂರ್ತವಾದ ಯಾವುದೋ ಒಂದು ಜಾಗದಲ್ಲಿ ಕೂಡಿದಂತೆನಿಸಿತು. ಮಾಂಟ್‌ಮಜ್ಹೂರ್ ಶಿಖರದ ಮೇಲಿನ ಒಂಟಿ ಮೋಡ..... ಎಷ್ಟೊಂದು ಬಗೆಯ ಬಣ್ಣಗಳ ವೈಭವ ಅವನನ್ನು ಹುಚ್ಚನನ್ನಾಗಿಸಿತು. ಅವನ ಕ್ಯಾನ್‌ವಾಸ್‌ಗಳಿಗೆ ಬೇಕಾದ ಅಸಂಖ್ಯಾತ ವರ್ಣ ಛಾಯೆಗಳು! ಕೆಂಪು, ನೀಲಿ ಹಳದಿ – ಎಲ್ಲದರಲ್ಲಿಯೂ ಹತ್ತು ಹಲವಾರು ಬಗೆಯ ಛಾಯೆಗಳು! ನೋಡ ನೋಡುತ್ತಿದ್ದಂತೆ ಉದ್ರೇಕಕ್ಕೆ ಒಳಗಾಗುತ್ತಿದ್ದ. ಉರಿವ ಸೂರ್ಯನ ನಿಂಬೆ ಹಳದಿ, ಮಣ್ಣಿನ ರಕ್ತ ಕೆಂಪು, ಶಿಖರದ ಮೇಲಿನ ಹಿಂಜಿಯಂತಿದ್ದ ಮೋಡದ ಅಚ್ಚ ಬಿಳುಪು!...... ಓಹ್ ಅದ್ಭುತ!.... ಇವುಗಳನ್ನೆಲ್ಲ ಪೈಂಟ್ ಮಾಡುವುದಾದರೂ ಹೇಗೆ? ಮಾಡಲು ಸಾಧ್ಯವೇ? ಮಾಡಿದರೂ, ಇವೆಲ್ಲ ಬಣ್ಣಗಳು ನಿಜವೆಂದು, ಅಸ್ತಿತ್ವದಲ್ಲಿ ಇವೆಯೆಂದು

ನಂಬಿಸುವುದಾದರೂ ಹೇಗೆ? ನಿಸರ್ಗ ಹಳದಿ, ನೀಲಿ, ಹಸಿರು, ಕೆಂಪು, ಗುಲಾಬಿ ಬಣ್ಣಗಳಲ್ಲಿ ಹುಚ್ಚುಚ್ಚಾಗಿ ಹರಡಿಕೊಂಡಿದೆ.

ವಿನ್ಸೆಂಟ್ ವಾಹನಗಳ ರಸ್ತೆ ಹಿಡಿದು ಲಾಮಾರ್ಟೀನ್ ತಲುಪಿದ್ದೇ, ಆತುರಾತುರದಿಂದ ಈಸಲ್ ಅನ್ನು ಹೆಗಲಿಗೇರಿಸಿ ರ್‍ಹೋನ್ ಕಡೆಗೆ ಹೆಜ್ಜೆ ಹಾಕಿದ. ಬಾದಾಮಿ ಮರಗಳು ಆಗತಾನೆ ಹೂತಳೆಯುತ್ತಿದ್ದವು. ನೀರಿನಲ್ಲಿ ಕಾಣಿಸುತ್ತಿದ್ದ ಸೂರ್ಯ ಬಿಂಬಗಳು ಅವನ ಕಣ್ಣು ಕುಕ್ಕುತ್ತಿದ್ದವು. ಸಹಿಸಲಾಗದ ಬೆಳಕಿನಿಂದಾಗಿ ಕಣ್ಣು ಉರಿಯುತ್ತಿದ್ದವು. ಆ ಪ್ರಖರ ಸೂರ್ಯ ಪ್ಯಾರಿಸಿನ ಚಳಿಯನ್ನು, ದಣಿವನ್ನು ಬೇಸರವನ್ನು, ನಿರುತ್ಸಾಹವನ್ನು, ಅತೃಪ್ತಿಯನ್ನು ಅವನ ಆತ್ಮದಿಂದ ಹೀರಿಬಿಟ್ಟಿತ್ತು. ರ್‍ಹೋನ್‌ನಿಂದ ಒಂದು ಕಿಲೋಮೀಟರ್ ದೂರದಲ್ಲಿ ಕೀಲು ಸೇತುವೆಯೊಂದಿದ್ದು, ಅದರ ಮೇಲೆ ಒಂದು ಸಣ್ಣಗಾಡಿ ಸಾಗುತ್ತಿತ್ತು. ಹಿನ್ನೆಲೆಗೆ ನೀಲಿಯಾಗಸವಿತ್ತು. ನದಿಯೂ ಕೂಡಾ ಆಕಾಶದಷ್ಟೇ ನೀಲಿ ಬಣ್ಣದಿಂದ ಕಾಣುತ್ತಿತ್ತು. ದಂಡೆಗಳು ಕಿತ್ತಲೆ ಬಣ್ಣದಲ್ಲಿದ್ದವು. ಇವುಗಳ ಮೇಲೆ ಹಸಿರು ಹುಲ್ಲು ಬೆಳೆದಿತ್ತು. ಆ ದಂಡೆಗಳಲ್ಲಿ ಬಣ್ಣಬಣ್ಣದ ಟೋಪಿಗಳನ್ನು ತಲೆ ಮೇಲಿರಿಸಿಕೊಂಡಿದ್ದ ಧೋಬಿ ಹೆಂಗಸರು ಬಟ್ಟೆಗಳನ್ನು ಎತ್ತಿ ಎತ್ತಿ ಒಗೆಯುತ್ತಿದ್ದರು.

ವಿನ್ಸೆಂಟ್ ಈಸಲ್ ಅನ್ನು ಅಲ್ಲಿರಿಸಿದ. ನೀಳವಾಗಿ ಉಸಿರೆಳೆದು ಕಣ್ಣುಮುಚ್ಚಿದ. ತೆರೆದ ಕಣ್ಣುಗಳಿಂದ ಯಾವ ಮನುಷ್ಯನಿಗೂ ಇಷ್ಟೊಂದು ಬಣ್ಣಗಳನ್ನು ಸೆರೆಹಿಡಿಯಲು ಸಾಧ್ಯವಾಗಲಾರದು. ಸ್ಯುರಾತ್, ಗಾಗಿನ್, ಲಾಟ್ರೆಕ್ ಮೊದಲಾದವರ ಸಿದ್ಧಾಂತಗಳು, ಚರ್ಚೆಗಳು, ವಾದಗಳು – ಎಲ್ಲವೂ ಅವನ ಮನಸ್ಸಿನಿಂದ ಅಳಿಸಿಹೋದವು.

ಕೇವಲ 'ವಿನ್ಸೆಂಟ್' ಮಾತ್ರವೇ ಉಳಿದುಕೊಂಡಿತು! ಊಟದ ಸಮಯಕ್ಕೆ, ಹೋಟೆಲ್‌ಗೆ ಹಿಂತಿರುಗಿದ. ಬಾರ್‌ನ ಒಂದು ಪುಟ್ಟ ಟೇಬಲ್ ಬಳಿ ಕುಳಿತು, ಅಬಿಸಿಂತ್ ತರಲು ಹೇಳಿದ. ಅವನೆದೆ ತುಂಬಾ ಭಾವ ಪ್ರವಾಹ ಉಕ್ಕುಕ್ಕಿ ಹರಿಯುತ್ತಿತ್ತು. ಊಟದ ನೆನಪೂ ಬೇಡವೆನಿಸಿತ್ತು. ಸಂತೋಷ ಸಂಭ್ರಮಗಳಿಂದ ಹೊಟ್ಟೆ ತುಂಬಿಸಿಕೊಂಡಿದ್ದ. ಅವನ ಹತ್ತಿರದಲ್ಲಿಯೇ ಕುಳಿತಿದ್ದ ವ್ಯಕ್ತಿ, ಮುಖ, ಮೈಯ್ಯಿ, ಕೈಯ್ಯಿ, ಬಟ್ಟೆ ಬರೆ – ಎಲ್ಲವೂ ಬಣ್ಣಗಳಿಂದ ಮೆತ್ತಿಕೊಂಡಿದ್ದ ವಿನ್ಸೆಂಟ್‌ನನ್ನು ಗಮನಿಸುತ್ತಿದ್ದು ಮಾತಿಗೆಳೆದ.

"ನಾನು ಪ್ಯಾರಿಸಿನ ಪತ್ರಕರ್ತ......... ಮೂರು ತಿಂಗಳಿಂದ ಇಲ್ಲಿ ಇದ್ದೇನೆ. 'ಪ್ರಾಂತೀಯ ಭಾಷೆ'ಯ ಮೇಲೆ ಒಂದು ಕೃತಿ ಬರೆಯಬೇಕಾಗಿದೆ. ಅದಕ್ಕೆ ಬೇಕಾದ ಸಾಮಗ್ರಿಯನ್ನು ಸಂಗ್ರಹಿಸಲು ಬಂದಿದ್ದೇನೆ" ಎಂದು ತಿಳಿಸಿದ.

"ನಾನು ಇವತ್ತು ಬೆಳಿಗ್ಗೆಯೇ ಪ್ಯಾರಿಸಿನಿಂದ ಬಂದೆ." ವಿನ್ಸೆಂಟ್ ಹೇಳಿದ.

"ಇಲ್ಲಿ ತುಂಬ ದಿನ ಇರಬೇಕನ್ನೋ ಉದ್ದೇಶ ಇದೆ ಅಂತ ನನಗೆ ಅನಿಸುತ್ತೆ. ಹೌದೇ?"

"ಹೌದು. ಬಹುಶಃ ನಿಮ್ಮ ಆಲೋಚನೆ, ಊಹೆ ಸರಿ ಇರಬಹುದು."

"ನಾನು ಹೇಳುವ ಒಂದು ಮಾತನ್ನು ದಯವಿಟ್ಟು ಕೇಳಿಸಿಕೊಳ್ಳಿ. ಈ ಆರ್ಲೆ, ಪ್ರಪಂಚದಲ್ಲೇ ಭಯಂಕರ ಸ್ಥಳ, ಒಬ್ಬ ಮನುಷ್ಯನಾದರೂ ಇಲ್ಲಿ ನೆಟ್ಟಗಿಲ್ಲ. ಅವರನ್ನು

ಒಮ್ಮೆ ಗಮನಿಸಿ! ಅವರ ಕಣ್ಣುಗಳನ್ನು ದಿಟ್ಟಿಸಿನೋಡಿ. ಏನೋ ವಿಚಿತ್ರವಾಗಿದ್ದಾರೆ ಎನಿಸುತ್ತೆ. ಸುತ್ತಮುತ್ತಲ ಪ್ರದೇಶದಲ್ಲೆಲ್ಲೂ ಇಂಥವರು ಇರಲಿಕ್ಕೇ ಸಾಧ್ಯವಿಲ್ಲ."

"ನೀವು ಹೇಳುವುದು ವಿಚಿತ್ರವೆನಿಸುತ್ತೆ" ವಿನ್ಸೆಂಟ್ ಹೇಳಿದ.

"ನೀವೇ ನೋಡ್ತಿರಿ. ಒಂದು ವಾರದೊಳಗೆ ನಿಮಗೆ ನಾನು ಹೇಳಿದ್ದು ನಿಜವೋ, ಅಲ್ಲವೋ ತಿಳಿಯುತ್ತೆ. ಇಡೀ ಪ್ರೊವೆನ್ಸ್‌ನಲ್ಲಿ ಆರ್ಲೆಯೊಂದೇ ದರಿದ್ರ ಸ್ಥಿತಿಯಲ್ಲಿ ಇರುವಂತಹ ಪ್ರದೇಶ. ಪೂರ್ತಿ ಬತ್ತಿ ಹೋಗಿದೆ.

ಬಿಸಿಲಿನ ಅನುಭವ ನಿಮಗೆ ಆಗಿರಬೇಕು. ದಿನದಿನಕ್ಕೂ ಹೆಚ್ಚುವ ಸುಡುಬಿಸಿಲಿನಲ್ಲಿ, ಕಣ್ಣು ಕುಕ್ಕುವ ಬೆಳಕಿನಲ್ಲಿ ಈ ಜನ ಮಾಡುವುದಾದರೂ ಏನೆಂದು ಯೋಚಿಸಿದ್ದೀರಾ? ಎಂಥಾ ಬಿಸಿಲೆಂದರೆ ತಲೆಯೊಳಗಿನದೆಲ್ಲಾ ಆವಿಯಾಗಿ ಹೊರಟುಹೋಗಿರುತ್ತೆ. ಇನ್ನು ಆ ದೈತ್ಯ ಸುಂಟರಗಾಳಿಯನ್ನು ನೋಡಬೇಕು. ನಿಮಗೆ ಅನುಭವ ಆಗಿಲ್ಲ. ವರ್ಷದಲ್ಲಿ ಇನ್ನೂರು ದಿನ ಒಂದೇ ರೀತಿ ಇರುತ್ತೆ. ಚಾಟಿ ಏಟುಗಳು ತಿನ್ನುತ್ತಿರುವಂತೆನಿಸುತ್ತದೆ. ರಸ್ತೆಗಳಲ್ಲಿ ಹೆಜ್ಜೆಯಿರಿಸಿದರೆ ಸಾಕು ಅಲ್ಲಿನ ಕಟ್ಟಡಗಳಿಗೆ ಒಗೆಯಪ್ಪಳಿಸುತ್ತದೆ. ಹೊಲ, ಗದ್ದೆಗಳಲ್ಲಿದ್ದರೆ, ನೆಲಕ್ಕಪ್ಪಳಿಸಿ ಮೈಮೇಲೆ ಮಣ್ಣು ಧೂಳಿನ ರಾಶಿ ಕೂರಿಸುತ್ತದೆ. ಒಂದು ಕ್ಷಣವೂ ಸಹಿಸಲಾಸಾಧ್ಯವಾದ ರೀತಿಯಲ್ಲಿ ಹೊಟ್ಟೆಯೊಳಗೆಲ್ಲಾ ಕಲಕಿ ಹೋಗುತ್ತದೆ. ಅದರ ಭಯಂಕರ ವಿನಾಶಕ ಶಕ್ತಿಯನ್ನು ಕಣ್ಣಾರೆ ಕಂಡಿದ್ದೇನೆ. ಕಿಟಕಿಗಳನ್ನು ಚೂರು ಚೂರು ಮಾಡುತ್ತದೆ. ಮರಗಳು ಬುಡಮೇಲಾಗುತ್ತವೆ; ಬೇಲಿಗಳು ಕಿತ್ತುಬೀಳುತ್ತವೆ. ಮನುಷ್ಯರು, ಪ್ರಾಣಿಗಳು ಹಾರಿಹೋಗಿ ಎಲ್ಲಿಯೋ ಡಿಕ್ಕಿ ಹೊಡೆದು ಉರುಳುತ್ತವೆ; ಸತ್ತೇ ಹೋದವೇನೋ ಎಂದು ಭಯಪಡುವಂತಾಗುತ್ತದೆ. ಮೂರು ತಿಂಗಳಿಂದ ಇಲ್ಲಿ ಇದ್ದೇನೆ. ನನಗೇ ಸ್ವಲ್ಪ ಸ್ವಲ್ಪ ಹುಚ್ಚು ಹಿಡೀತಿದೆ. ನಾಳೆ ಇಲ್ಲಿಂದ ಹೊರಟು ಹೋಗ್ತಿದ್ದೇನೆ ಸಧ್ಯ!"

"ನನಗೇನೋ ನೀವು ಹೇಳ್ತಿರೋದು ಅತಿಶಯೋಕ್ತಿ ಅನ್ಸತ್ತೆ. ನನಗೇನೋ ಅವರಲ್ಲಿ ನೀವು ಹೇಳುವಂಥಾದ್ದು ಒಂದು ಚೂರೂ ಕಾಣಿಸಲಿಲ್ಲ. ಇವತ್ತು ಬೆಳಿಗ್ಗೇನೇ ಅವರನ್ನು ನೋಡಿದೆ, ಸ್ವಲ್ಪ ಹೊತ್ತು."

"ಸ್ವಲ್ಪ ಹೊತ್ತು ನೋಡಿದ್ದು ಸರಿಯೇ. ಅವರು ಪೂರ್ತಿ ಪರಿಚಯ ಆಗೋವರೆಗೂ ಸ್ವಲ್ಪ ಕಾದಿರಿ. ನನ್ನ ಸ್ವಂತ ಅಭಿಪ್ರಾಯ ಏನಿರಬಹುದು, ಕೇಳ್ತೀರಾ?"

"ಕೇಳ್ತೀನಿ. ಏನದು? ನನ್ನ ಜೊತೆ ಅಬಿಸಿಂತ್ ಸೇವಿಸಲು ಕಂಪನಿ ಕೊಡ್ತೀರಾ?"

"ಥ್ಯಾಂಕ್ಸ್. ನನ್ನ ಸ್ವಂತ ಅಭಿಪ್ರಾಯದಲ್ಲಿ ಆರ್ಲೆಯದು ಒಂದು ರೀತಿಯಲ್ಲಿ ಅಪಸ್ಮಾರ ಸ್ಥಿತಿ. ಏನೋ ಆಗುತ್ತೆ. ಇನ್ನೇನು ಕ್ಲೈಮ್ಯಾಕ್ಸ್ ತಲುಪುತ್ತೆ ಅಂದುಕೊಂಡಿದ್ದಾಗ, ಏನೂ ಆಗೋದೇ ಇಲ್ಲ. ಎಂಥ ಉದ್ರೇಕದ ಹಂತ ತಲುಪುತ್ತೆ ಅಂದ್ರೆ, ಇನ್ನೇನು ಖಂಡಿತ ಮೂರ್ಛೆ ಹೋಗಿ ಬಾಯಲ್ಲೆಲ್ಲ ನೊರೆ ಬರುತ್ತೆ ಅನಿಸಿಬಿಡುತ್ತೆ."

"ಹಾಗಾಗುತ್ತೇನು?"

"ಇಲ್ಲ. ಅದೇ ವಿಚಿತ್ರ, ಈ ಪ್ರದೇಶ ಒಂದು ಕ್ಲೈಮಾಕ್ಸ್ ಹಂತ ತಲುಪುತ್ತೆ ಅಂದ್ಕೊಂಡಾಗ, ತಲುಪುವುದೇ ಇಲ್ಲ. ಮೂರು ತಿಂಗಳಿಂದ ನಾನು ಗಮನಿಸುತ್ತಲೇ

ಇದ್ದೇನೆ. ಏನಾದರೂ ಕ್ರಾಂತಿ ಆಗಬಹುದು. ಜ್ವಾಲಾಮುಖಿ ಸ್ಫೋಟಿಸಬಹುದು ಅಂತ. ಇಲ್ಲಿನ ಜನ ಭಾವೋದ್ರಿಕ್ತರಾಗಿ, ಹುಚ್ಚರಂತಾಗಿ ಒಬ್ಬರ ತಲೆ ಒಬ್ಬರ ಕತ್ತರಿಸುತ್ತಾರೆ!– ಅಂತ ಹತ್ತನ್ನೆರಡು ಸಲ ಅಂದುಕೊಳ್ಳುವಷ್ಟರಲ್ಲಿ ಆ ಚಂಡಮಾರುತ ತಣ್ಣಗಾಗಿ ಬಿಡುತ್ತೆ, – ಒಂದೆರಡು ದಿನದ ಮಟ್ಟಿಗೆ! ಕೆಂಡ ಸುರಿಯುವ ಸೂರ್ಯ ಮೋಡಗಳ ಹಿಂದೆ ತಲೆಮರೆಸಿಕೊಂಡು ಬಿಡುತ್ತಾನೆ."

"ಸರಿ, ಹಾಗಾದರೆ ಆರ್ಲೆ ಕ್ಲೈಮಾಕ್ಸ್ ಹಂತಕ್ಕೆ ಹೋಗುವುದೇ ಇಲ್ಲ ಅಂದ ಮೇಲೆ, ನೀವು 'ಅಪಸ್ಮಾರ' ಸ್ಥಿತಿ ಅಂತ ಕರೆಯೋದು ಸರಿ ಹೋಗೊಲ್ಲ. ನಿಮಗೆ ಹಾಗೆ ನಿಜವಾಗಿಯೂ ಹೇಳೋಕಾಗುತ್ತೇನು?" ವಿನ್ಸೆಂಟ್ ನಗುತ್ತಾ ಪ್ರಶ್ನಿಸಿದ.

"ಇಲ್ಲ. ಆದರೂ ಅದನ್ನು ಅಪಸ್ಮಾರೀಯ ಅಂತ ಕರೀಬಹುದು ಅನ್ಸತ್ತೆ" – ಪತ್ರಕರ್ತ ಉತ್ತರಿಸಿದ.

"ಏನದ್ದರ ಅರ್ಥ?"

"ನಾನೊಂದು ಲೇಖನ ಬರೀತಿದ್ದೇನೆ. ಪ್ಯಾರಿಸಿನ ಒಂದು ಪತ್ರಿಕೆಗಾಗಿ ಈ ಲೇಖನ ಬರೀಬೇಕಾಗಿ ಬಂತು. ಈ ಜರ್ಮನ್ ಲೇಖನವೇ ನನಗೆ ಸ್ಫೂರ್ತಿ ನೀಡಿದ್ದು' ಎಂದು ಹೇಳುತ್ತ ತನ್ನ ಜೇಬಿನಿಂದ ಒಂದು ಮ್ಯಾಗ್‌ಜಿನ್ ಹೊರತೆಗೆದು ವಿನ್ಸೆಂಟ್‌ನ ಮುಂದೆ ಬಿಡಿಸಿಟ್ಟ.

"ವೈದ್ಯರು, ಅಪಸ್ಮಾರ ರೋಗದಿಂದ ನರಳುತ್ತಿದ್ದ ನೂರಾರು ರೋಗಿಗಳ ಅಧ್ಯಯನ ಮಾಡಿದ್ದಾರೆ. ಅಪಸ್ಮಾರ ರೋಗದಂತೆ ಕಾಣಿಸುವ ಅನೇಕ ತೊಂದರೆಗಳಿಂದ ನರಳುತ್ತಿದ್ದರೂ ಅದು ಅಪಸ್ಮಾರ (ಎಪಿಲೆಪ್ಸಿ) ರೋಗ ಅಲ್ಲ ಎನ್ನುವ ಅಭಿಪ್ರಾಯವನ್ನು ತಲುಪಿದ್ದಾರೆ. ಈ ಚಾರ್ಟ್‌ನಲ್ಲಿ ಕಾಣಿಸುವಂತೆ ನರದೌರ್ಬಲ್ಯ, ಭಾವೋದ್ರೇಕಗಳು ನಿರಂತರ ಏರುಸ್ಥಿತಿಯಲ್ಲಿರುವುದು ಕಾಣಿಸುತ್ತದೆ. ವೈದ್ಯರು ಇದನ್ನು ತಾತ್ಕಾಲಿಕ ಅಥವಾ ಕ್ಷಣಿಕೋದ್ರೇಕ ಅಂತ ಹೆಸರಿಸುತ್ತಾರೆ. ಕೊನೆ ಹಂತದಲ್ಲಿದ್ದ ಒಬ್ಬೊಬ್ಬ ರೋಗಿಯ ಅಧ್ಯಯನದಿಂದ ಒಂದು ವಿಷಯ ಸ್ಪಷ್ಟವಾಗಿದೆ. ಈ ಬಗೆಯ ಭಾವೋದ್ರಿಕ್ತತೆಯ ಜ್ವರ ಏರುತ್ತ ಏರುತ್ತ, ಸರಿಸುಮಾರು ಮೂವತ್ತೈದು, ಮೂವತ್ತೆಂಟರ ವಯಸ್ಸು ತಲುಪುತ್ತಿದ್ದ ಹಾಗೆ, ಭಯಂಕರವಾಗಿ ಮೂರ್ಛೆರೋಗಕ್ಕೆ ತುತ್ತಾಗುತ್ತಾರೆ. ನಂತರ ಆಗಾಗ ಮೂರ್ಛೆಗೆ ಒಳಗಾಗುತ್ತ ಒಳಗಾಗುತ್ತ ಒಂದೆರಡು ವರ್ಷಗಳಲ್ಲೇ ಸಾಯುತ್ತಾರೆ."

"ಓ ದೇವರೇ. ಅದು ನಿಜವಾಗಿಯೂ ಸಾಯುವ ವಯಸ್ಸು ಅಲ್ಲವೇ ಅಲ್ಲ..... ಹಾಗೆ ನೋಡಿದರೆ ತನ್ನ ಬದುಕನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಪ್ರಾರಂಭವಾಗುವುದೇ ಅಲ್ಲಿಂದ" ವಿನ್ಸೆಂಟ್ ನುಡಿದ.

ಪತ್ರಕರ್ತ ಮ್ಯಾಗ್‌ಜಿನ್ ಅನ್ನು ತೆಗೆದು ಮಡಿಚಿ ಜೇಬಿನಲ್ಲಿ ಇರಿಸಿಕೊಂಡ.

"ಈ ಹೋಟೆಲ್‌ನಲ್ಲಿ ಸ್ವಲ್ಪ ದಿವಸ ಇರ್‍ತೀರೇನು? ಇನ್ನೇನು ನನ್ನ ಲೇಖನ ಮುಗಿಯುತ್ತೆ. ಅದು ಪ್ರಕಟವಾದ ಕೂಡಲೇ ಒಂದು ಪ್ರತಿಯನ್ನು ನಿಮಗೆ ಕಳಿಸುತ್ತೇನೆ. ನನ್ನ ಅಭಿಪ್ರಾಯ ಇಷ್ಟೇ, ಆರ್ಲೆ ಅಪಸ್ಮಾರೀಯವಾದದ್ದು. ಅದರ ಮಿಡಿತದ ವೇಗ

ದಿನದಿನಕ್ಕೆ ಹೆಚ್ಚುತ್ತಿದೆ. ಮೊದಲ ಹಂತದ ಅನಾಹುತಕ್ಕೆ ಸಿದ್ಧವಾಗುತ್ತಿದೆ. ಆಗಿಯೇ ಆಗುತ್ತೆ. ಅದೂ ತೀರಾ ಸ್ವಲ್ಪ ಸಮಯದಲ್ಲಿಯೇ. ಅದು ಆದಾಗ, ನೀವೇ ಅದರ ಭಯಂಕರ ಅನಾಹುತಗಳ ಪರಿಣಾಮಕ್ಕೆ ಸಾಕ್ಷಿಯಾಗಿರುತ್ತೀರಿ. ಕೊಲೆ, ಅತ್ಯಾಚಾರ, ಬೆಂಕಿಹಚ್ಚುವುದು ಇತ್ಯಾದಿ ವಿಧ್ವಂಸಕ ಕೃತ್ಯಗಳು ಸಂಭವಿಸುತ್ತವೆ. ಎಲ್ಲವನ್ನೂ ಇಲ್ಲಿನ ಜನರು ಹೀಗೆ ದಮನಿತರಾಗಿ ಬಹಳ ಕಾಲ ಸಹಿಸಿಕೊಳ್ಳುವುದಿಲ್ಲ. ಏನಾದರೂ ಆಗಿಯೇ ಆಗುತ್ತೆ; ಆಗಲೇ ಬೇಕೂ ಕೂಡಾ! ಜನ ಹುಚ್ಚೆದ್ದು ಮೂರ್ಛಾಕ್ರಾಂತರಾಗುವುದಕ್ಕೆ ಮೊದಲು ನಾನು ಇಲ್ಲಿಂದ ಹೊರಟು ಬಿಡಬೇಕೆಂದಿದ್ದೇನೆ. ನೀವೂ ನನ್ನ ಜೊತೆ ಬಂದು ಬಿಡೀಂತ ಹೇಳ್ತಿದ್ದೇನೆ!"

"ಥ್ಯಾಂಕ್ಸ್. ನನಗೆ ಇಲ್ಲಿರೋದೇ ಇಷ್ಟ!" ವಿನ್ಸೆಂಟ್ ಹೇಳಿದ. "ನಾನು ಹೊರಟೆ. ಬೆಳಿಗ್ಗೆ ಭೇಟಿಯಾಗೋಣ ಅಲ್ಲಾ! ಒಳ್ಳೇದಾಗಲಿ. ನನಗೆ ಪ್ರತಿ ಕಳಿಸುವುದನ್ನು ಮರೆಯಬೇಡಿ."

–೨–

ಪ್ರತಿದಿನಾ ವಿನ್ಸೆಂಟ್ ಬೆಳಗಾಗುವುದಕ್ಕೆ ಮೊದಲೇ ಎದ್ದು ರೆಡಿಯಾಗಿ ನದೀಗುಂಟಾ ಸುಮಾರು ಕಿಲೋಮೀಟರುಗಳಷ್ಟು ದೂರ ನಡೆದು ನಗರದಲ್ಲಿ ತನ್ನ ಮನಸ್ಸಿಗೆ ತಂಬಾ ಹಿಡಿಸುವ ಒಂದು 'ಸ್ಪಾಟ್' ಗಾಗಿ ಹುಡುಕಾಡುತ್ತಿದ್ದ. ರಾತ್ರಿಯಷ್ಟು ಹೊತ್ತಿಗೆ ಒಂದು ಕ್ಯಾನ್‌ವಾಸನ್ನು ಪೂರೈಸಿ ಮರಳುತ್ತಿದ್ದ. ಮನೆಗೆ ಬಂದು ಅದರಲ್ಲಿ ತಿದ್ದುಪಡಿ ಮಾಡಬೇಕಾದ ಅಗತ್ಯವಿಲ್ಲದೆ ಪರಿಪೂರ್ಣವಾದ ಕ್ಯಾನ್‌ವಾಸ್ ರೂಪದಲ್ಲಿ ಇರುತ್ತಿತ್ತು. ಅದಕ್ಕೇ ಅವನು ತೃಪ್ತಿಯಿಂದ ನಿರಾಳವಾಗಿ ನಿದ್ದೆಗೆ ಇಳಿಯುತ್ತಿದ್ದ.

ಒಂದು ಪೈಂಟಿಂಗ್ ಯಂತ್ರದಂತೆ ಒಂದಾದ ಮೇಲೊಂದು ಕ್ಯಾನ್‌ವಾಸ್‌ಗಳನ್ನು ಮಾಡತೊಡಗಿದ. ಏನು ಮಾಡುತ್ತಿದ್ದೇನೆಂಬ ಅರಿವೇ ಇಲ್ಲದಂತೆ ಯಾಂತ್ರಿಕವಾಗಿ ಅವನ ಬ್ರಷ್‌ಗಳು ಕೆಲಸ ಮಾಡುತ್ತಿದ್ದವು. ಆ ಪ್ರದೇಶದ ತೋಟಗಳೆಲ್ಲವೂ ಹೂಗಳಿಂದ ತುಂಬಿ ತುಳುಕುತ್ತಿದ್ದವು. ಅವುಗಳನ್ನೆಲ್ಲ ಬಣ್ಣಗಳಲ್ಲಿ ಸೆರೆಹಿಡಿಯುವ ತೀವ್ರ ತುಡಿತಕ್ಕೆ ಒಳಗಾದ. ತನ್ನ ಪೈಂಟಿಂಗ್ಸ್ ಬಗ್ಗೆ ಯೋಚಿಸುತ್ತಿರಲಿಲ್ಲ; ಸುಮ್ಮನೆ ಪೈಂಟ್ ಮಾಡುತ್ತಿದ್ದ. ಎಂಟು ವರ್ಷಗಳ ನಿರಂತರ ಹೋರಾಟದ ನಂತರ ಗೆಲುವಿನ ಉತ್ಸಾಹದೊಂದಿಗೆ ಅಭಿವ್ಯಕ್ತಿಸಲು ಅವನಿಗೆ ಈಗ ಸಾಧ್ಯವಾಗಿತ್ತು. ಯಾವ ವೇಗದಲ್ಲಿ ಅವನ ಕೆಲಸ ನಡೆಯುತ್ತಿತ್ತೆಂದರೆ, ಬೆಳಗಿನ ಜಾವ ಹೊರಟು ಮಧ್ಯಾಹ್ನದಷ್ಟು ಹೊತ್ತಿಗೆ ಒಂದು ಕ್ಯಾನ್‌ವಾಸನ್ನು ಪೂರೈಸಿಯೇ ಬಿಡುತ್ತಿದ್ದ. ಮನೆಗೆ ಹಿಂತಿರುಗಿ ಒಂದು ಕಪ್ ಕಾಫಿ ಸೇವಿಸಿ ಮತ್ತೆ ಮತ್ತೊಂದು ಹೊಸ ಕ್ಯಾನ್‌ವಾಸ್ ಸಿದ್ಧಪಡಿಸಲು ಅಣಿಯಾಗಿ ಹೊರಡುತ್ತಿದ್ದ.

ತನ್ನ ಪೈಂಟಿಂಗ್ಸ್ ಚೆನ್ನಾಗಿದೆಯೋ ಇಲ್ಲವೋ, ಅದರ ಬಗ್ಗೆ ಯೋಚಿಸುತ್ತಿರಲಿಲ್ಲ. ಪೈಂಟಿಂಗ್ಸ್ ಮುಗಿದ ಮೇಲೆ ಉಳಿದಿರಬಹುದಾದ ಅಲ್ಪಸ್ವಲ್ಪ ಶಕ್ತಿಯನ್ನು ಬಿರುಗಾಳಿಯೊಂದಿಗೆ ಹೋರಾಡಲು ವ್ಯಯಿಸುತ್ತಿದ್ದ. ವಾರದಲ್ಲಿ ಮೂರು ದಿನವಾದರೂ ನೆಲಕ್ಕೆ ಗೂಟಗಳನ್ನು

ಹೊಡೆದು, ಕ್ಯಾನ್‌ವಾಸನ್ನು ಭದ್ರವಾಗಿ ಬಿಗಿದು ಕಟ್ಟಬೇಕಾಗುತ್ತಿತ್ತು. ಬೀಸುವ ಗಾಳಿಗೆ ಕ್ಯಾನ್‌ವಾಸ್ ಹಿಂದಕ್ಕೆ ಮುಂದಕ್ಕೆ ತೂಗಾಡುತ್ತಿತ್ತು. ರಪರಪನೆ ಬಡಿದುಕೊಳ್ಳುತ್ತಿತ್ತು. ರಾತ್ರಿ ಹೊತ್ತಿಗೆ, ಚೆನ್ನಾಗಿ ಏಟು ತಿಂದು ಬಾಸುಂಡೆಗಳನ್ನು ಮೂಡಿಸಿಕೊಂಡಂತೆನಿಸುತ್ತಿತ್ತು.

ಅವನೆಂದೂ ಹ್ಯಾಟ್ ಧರಿಸುತ್ತಿರಲಿಲ್ಲ. ತೀಕ್ಷ್ಣ ಬಿಸಿಲು ಅವನ ತಲೆ ಮೇಲಿನ ಕೂದಲನ್ನು ಸುಡುತ್ತಿತ್ತು. ರಾತ್ರಿ ಲೋಹದ ಮಂಚದ ಮೇಲೆ ಮಲಗಿದಾಗ ತನ್ನ ತಲೆ ಬೆಂಕಿಯ ಚೆಂಡಿನೊಳಗೆ ಇದ್ದಂತೆ ಅನಿಸುತ್ತಿತ್ತು. ಸೂರ್ಯನ ಪ್ರಚಂಡ ಬಿಸಿಲಿಗೆ ಕಣ್ಣು ಬಿಡುವುದೇ ಕಷ್ಟವಾಗಿ, ಹೊಲಗಳ ಹಸಿರು ಆಕಾಶದ ನೀಲಿಗಳ ಅಂತರವೇ ತಿಳಿಯುತ್ತಿರಲಿಲ್ಲ. ಆದರೆ ಹೋಟೆಲ್‌ಗೆ ಹಿಂತಿರುಗಿ ಕ್ಯಾನ್‌ವಾಸನ್ನು ಬಿಡಿಸಿನೋಡಿದಾಗ ನಿಸರ್ಗದ ಅದ್ಭುತ ದೃಶ್ಯಗಳು ಯಥಾವತ್ತಾಗಿ, ತಮ್ಮ ಸಹಜತೆಯೊಂದಿಗೆ ಮೂಡಿರುತ್ತಿದ್ದವು.

ಒಂದು ದಿನ ಆಕಾಶದ ಆಕರ್ಷಕ ನೀಲಿ ಮತ್ತು ಬಿಳಿ ಬಣ್ಣಗಳ ಹಿನ್ನೆಲೆಯಲ್ಲಿ ಕೃಷಿಭೂಮಿಯಲ್ಲಿ ಅರಳಿದ್ದ ಲೈಲಾಕ್‌ಗಳನ್ನು, ಕೆಂಪುಬೇಲಿಯನ್ನು ಕ್ಯಾನ್‌ವಾಸ್‌ನಲ್ಲಿ ಮೂಡಿಸಿದ.

"ಅಬ್ಬ! ಇಲ್ಲೀವರೆಗಿನ ನನ್ನೆಲ್ಲ ಲ್ಯಾಂಡ್‌ಸ್ಕೇಪ್‌ಗಳಲ್ಲೇ ಅದ್ಭುತವಾಗಿದೆ!" ಎಂದು ತನ್ನಲ್ಲೇ ಹೇಳಿಕೊಂಡ.

ಹೋಟೆಲ್‌ಗೆ ಹಿಂತಿರುಗಿದಾಗ, ಮಾವ್‌ನ ಸಾವಿನ ಸುದ್ದಿಯನ್ನು ಬರೆದಿದ್ದ ಪತ್ರವೊಂದು ಬಿದ್ದಿತ್ತು. ವಿನ್ಸೆಂಟ್ ತನ್ನ 'ಪೀಚ್‌ಮರ'ದ ಕೆಳಗೆ 'ಶ್ರದ್ಧಾಂಜಲಿ' ಎಂದು ಬರೆದು, ತನ್ನ ಮತ್ತು ಥಿಯೋನ ಹೆಸರನ್ನು ಸೂಚಿಸಿ 'ಉಯಿಲೆಬೂಮೆನ್' ನ ಮನೆಗೆ ಕೂಡಲೇ ಕಳಿಸಿಕೊಟ್ಟ.

ಮರುದಿನ ಬೆಳಿಗ್ಗೆ 'ಪ್ಲಮ್' ಮರವೊಂದು ಹೂಮುಡಿದು ನಿಂತದ್ದನ್ನು ನೋಡಿದ. ಅವನು ಪೈಂಟಿಂಗ್‌ನಲ್ಲಿ ತೊಡಗಿದ್ದಾಗ ಜೋರಾಗಿ ಗಾಳಿ ಬೀಸಿತು. ಸಮುದ್ರದ ಅಲೆಗಳಲ್ಲಿನ ಏರಿಳಿತದಂತೆ ಬಿಟ್ಟುಬಿಟ್ಟು ಭಯಂಕರ ಪ್ರತಾಡನದೊಂದಿಗೆ ಬೀಸುತ್ತಿತ್ತು. ಅದರ ಮಧ್ಯೆ ಆಗಾಗ ಸೂರ್ಯನೂ ಕಾಣಿಸಿಕೊಳ್ಳುತ್ತಿದ್ದ. ಸೂರ್ಯನ ಬೆಳಕು ಮರಗಳ ಮೇಲೆ ಬಿದ್ದು, ಹೂಗಳು ಫಳಫಳನೆ ಹೊಳೆಯುತ್ತಿದ್ದವು. ಷೆವೆನೆಂಜಿನ್‌ನಲ್ಲಿ ನಡುವೆಯೂ ತಾನು ಪೈಂಟಿಂಗ್ ಮಾಡುತ್ತಿದ್ದ ದಿನಗಳು ನೆನಪಾದವು. ಸಮುದ್ರ ದಂಡೆಗಳನ್ನೂ ದಾಟಿ ಬರುವ ಬೃಹತ್ ಎತ್ತರದ ಅಲೆಗಳು ಎಷ್ಟೋ ಸಲ ಬಂದು ತನಗೆ, ಕ್ಯಾನ್‌ವಾಸ್‌ಗೆ ಅಪ್ಪಳಿಸಿದ್ದುಂಟು. ತನ್ನ ಕ್ಯಾನ್‌ವಾಸ್ ಮೇಲಿನ ಹಳದಿ, ನೀಲಿ ಮತ್ತು ಲೈಲಾಕ್‌ಗಳು ಬಿಳಿಯ ವರ್ಣಛಾಯೆಯ ಪರಿಣಾಮವನ್ನುಂಟು ಮಾಡಿದ್ದವು. ಅದು ಮುಗಿದ ಮೇಲೆ ನೋಡಿದರೆ, ಅವನಿಗೇ ಆಶ್ಚರ್ಯವೆಂಬಂತೆ, ಅರಿವೇ ಇಲ್ಲದಂತೆ ಚಂಡಮಾರುತ ಕಾಣಿಸಿಕೊಂಡಿತ್ತು.

"ಜನ ಇದನ್ನು ನೋಡಿದರೆ, ಇವನೆಲ್ಲೋ ಇದನ್ನು ಮಾಡುವಾಗ ಕುಡಿದಿದ್ದ ಅಂದುಕೊಳ್ಳುತ್ತಾರೆ" ಎಂದು ಹೇಳಿಕೊಂಡು ನಕ್ಕ.

ಮೊದಲೊಂದು ದಿನ ಥಿಯೋ ಬರೆದಿದ್ದ ಲೆಟರ್‌ನಲ್ಲಿ, ಟರ್ಸ್‌ಟೀಗ್ ಹೇಳಿದ ಮಾತುಗಳು ನೆನಪಿಗೆ ಬಂದವು. ಸಿಸಿಲಿ ಮುಂದೆ ನಿಂತಿದ್ದಾಗ, ಥಿಯೋಗೆ ಗೊಣಗೊಣ ದನಿಯಲ್ಲಿ "ಈ ಪೈಂಟಿಂಗ್ ಮಾಡಿದ ಕಲಾವಿದ ಚೆನ್ನಾಗಿ ಕುಡಿದಿರಬೇಕು ಎಂದುಕೊಂಡರೆ ತಪ್ಪಾಗುವುದಿಲ್ಲ ಅನಿಸುತ್ತೆ" ಅಂತ ಹೇಳಿದ್ದ.

"ಈಗ ಟರ್ಸ್‌ಟೀಗ್ ಆರ್ಲೆಯಲ್ಲಿನ ಈ ಚಿತ್ರಗಳನ್ನು ನೋಡಿದರೆ ಚಿತ್ತಭ್ರಮೆಯಲ್ಲಿನ ಉನ್ಮಾದ ಪರಾಕಾಷ್ಠೆಯ ಸ್ಥಿತಿಯಲ್ಲಿದೆ" ಎಂದೇ ಹೇಳುವನು.

ಆರ್ಲೆಯ ಜನ ಅವನನ್ನು ಗಮನಿಸುತ್ತಿದ್ದರು. ಬೆಳಗಾಗುವುದಕ್ಕೆ ಮೊದಲೇ ಭಾರವಾದ ಈಸಲ್‌ನ್ನು ಹೆಗಲಿಗೇರಿಸಿಕೊಂಡು ತಲೆಮೇಲೆ ಹ್ಯಾಟಿಲ್ಲದೇ ಉತ್ಸಾಹತಿರೇಕದೊಂದಿಗೆ ವೇಗದ ಹೆಜ್ಜೆ ಹಾಕುತ್ತಿದ್ದುದನ್ನು ನೋಡಿದ್ದರು. ಹಾಗೆಯೇ ಬರುವಾಗಲೂ, ಮುಖವೆಲ್ಲಾ ಸುಟ್ಟಂತಾಗಿ ಕೇವಲ ಬೆಂಕಿಯಂತೆ ಹೊಳೆಯುತ್ತಿದ್ದ ಎರಡು ಕಣ್ಣುಗಳೊಂದಿಗೆ, ಸುರುಳಿ ಸುತ್ತಿದ್ದ ಕ್ಯಾನ್‌ವಾಸನ್ನು ಕಂಕುಳಲ್ಲಿ ಇರಿಸಿಕೊಂಡು, ತನ್ನೊಳಗೇ ತಾನು ಮಾತಾಡಿಕೊಳ್ಳುತ್ತಾ ಬರುತ್ತಿದ್ದುದನ್ನು ಗಮನಿಸಿದ್ದರು. ಅವನಿಗೆ ಅವರು ಒಂದು ಹೆಸರನ್ನೂ ಇಟ್ಟಿದ್ದರು.

ಫೋ – ರೋ! (ಮಹಾಹುಚ್ಚ)

ಹೋಟೆಲ್‌ನ ಮಾಲಿಕ ವಿನ್ಸೆಂಟ್‌ನನ್ನು ಸಾಧ್ಯವಾದಷ್ಟೂ ಸುಲಿಗೆ ಮಾಡುತ್ತಿದ್ದ. ಆರ್ಲೆಯ ಜನ ಮನೆಯಲ್ಲಿಯೇ ಊಟ ಮಾಡುತ್ತಿದ್ದುದರಿಂದ ಹೋಟೆಲುಗಳಲ್ಲಿ ತಿಂಡಿ, ಊಟಗಳು ಸಿಗುವುದು ಕಷ್ಟವಾಗುತ್ತಿತ್ತು. ಹೋಟೆಲುಗಳು ಬಹಳ ದುಬಾರಿಯಾಗಿದ್ದವು. ಅಂಥ ಹೋಟೆಲುಗಳಲ್ಲೆಲ್ಲ ಸೂಪ್‌ಗಾಗಿ ಹುಡುಕಾಡಿದ. ಎಲ್ಲಿಯೂ ಸಿಗಲಿಲ್ಲ. ಒಂದು ಕಡೆ ಕೇಳಿದ.

"ಮೇಡಂ ಆಲೂಗಡ್ಡೆ ಬೇಯಿಸುವುದು ಕಷ್ಟವಾಗುತ್ತದೆಯೇ?"

"ಕಷ್ಟ ಒಂದೇ ಅಲ್ಲ. ಅಸಾಧ್ಯವೂ ಕೂಡಾ."

"ಸ್ವಲ್ಪ ಅನ್ನಾನಾದರೂ ಸಿಗುತ್ತೇನು?"

"ಅದು ನಾಳೆಯ ಮೆನು."

"ಮ್ಯಾಕರೋನಿ?"

"ಮ್ಯಾಕರೋನಿ ಗೀಕರೋನಿ ಅಂಥಾದ್ದಕ್ಕೆಲ್ಲ ಜಾಗವೇ ಇಲ್ಲ."

ಸ್ವಲ್ಪ ದಿನ ಆದ ಮೇಲೆ ಊಟದ ಚಿಂತೆ ಬಿಟ್ಟು ಬಿಟ್ಟ. ಏನು ಸಿಕ್ಕರೆ ಅದನ್ನೇ ತಿನ್ನುವುದನ್ನು ಅಭ್ಯಾಸ ಮಾಡಿಕೊಂಡ. ಪ್ರಖರ ಸೂರ್ಯನಿಂದ ಸ್ವಲ್ಪ ಚೈತನ್ಯ ತುಂಬಿಕೊಂಡ. ಆಗಾಗ ಹೊಟ್ಟೆ ಅವನನ್ನು ಪೀಡಿಸುತ್ತಿತ್ತು. ಆಗೆಲ್ಲ ಒಳ್ಳೆ ಆಹಾರ ಸಾಧ್ಯವಾಗದೆ, ಅಬಿಸಿಂತ್, ಟೊಬ್ಯಾಕೋಗಳನ್ನೇ ತುಂಬಿಸಿಕೊಳ್ಳುತ್ತಿದ್ದ. ಕ್ಯಾನ್‌ವಾಸ್ ಮುಂದೆ ಗಂಟೆಗಟ್ಟಲೆ ನಿಂತು ಕೆಲಸ ಮಾಡುತ್ತಿದ್ದ ಕಾರಣ ಆಗಾಗ ಅವನಿಗೆ ಚೇತೋಹಾರಿಗಳ ಅವಶ್ಯಕತೆ ಬೀಳುತ್ತಿತ್ತು. ಆಗ ತೆಗೆದುಕೊಳ್ಳುತ್ತಿದ್ದ. ಅಬಿಸಿಂತ್‌ನಿಂದಾಗಿ

ಮರುದಿನಕ್ಕೂ ಉದ್ವೇಗ ಹೆಚ್ಚಾಗುತ್ತಿತ್ತು. ಜೊತೆಗೆ ಪ್ರಚಂಡ ಬಿರುಗಾಳಿ, ಕೆಂಡಸೂರ್ಯ – ಎರಡೂ ಸೇರಿ ಮತ್ತಷ್ಟು ಭಾವೋದ್ರೇಕಕ್ಕೆ ಒಳಗಾಗುತ್ತಿದ್ದ.

ಬೇಸಿಗೆ ಸಮೀಪಿಸುತ್ತಿದ್ದಂತೆ ಎಲ್ಲವೂ ಉರಿದು ಕರಕಲಾಗುತ್ತಿತ್ತು. ಚಿನ್ನ, ಕಂಚು, ತಾಮ್ರ ಬಣ್ಣಗಳನ್ನೆಲ್ಲ ಆಕಾಶದ ಬಿಳಿಬಿಸಿಲಿನ ಹಸಿರು ಪ್ರಕಾಶ ಆವರಿಸಿಬಿಟ್ಟಿತ್ತು. ಸೂರ್ಯನ ಬೆಳಕು ಬಿದ್ದ ವಸ್ತುಗಳೆಲ್ಲ ಗಂಧಕ ಹಳದಿ ಬಣ್ಣದಲ್ಲಿ ಕಾಣಿಸುತ್ತಿದ್ದವು. ಅವನ ಕ್ಯಾನ್‌ವಾಸ್‌ಗಳೆಲ್ಲ ಪ್ರಕಾಶಮಾನವಾದ ತೀಕ್ಷ್ಣ ಹಳದಿ ಬಣ್ಣಗಳಿಂದ ತುಂಬಿ ಹೋಗಿದ್ದವು. ಪುನರುಜ್ಜೀವನದ ನಂತರ ಯೂರೋಪಿನಲ್ಲಿ ಯಾರೂ ಹಳದಿಯನ್ನು ಹೆಚ್ಚಾಗಿ ಬಳಸುತ್ತಿರಲಿಲ್ಲ. ಆದರೂ ಹಿಂಜರಿಯಲಿಲ್ಲ. ಟ್ಯೂಬುಗಳಿಂದ ಹೊರಹೊಮ್ಮಿದ ಹಳದಿ ಬಣ್ಣವೆಲ್ಲ ಕ್ಯಾನ್‌ವಾಸ್ ಮೇಲೆ ಉಳಿಯಿತು. ಅವನ ಪೈಂಟಿಂಗ್ಸ್ ತುಂಬ ಬರೀ ಬಿಸಿಲು.... ಸೂರ್ಯನ ಪ್ರಖರ ಬಿಸಿಲಿನಿಂದ ಅದ್ದಿ ತೆಗೆದಂತಿದ್ದವು. ಬಿಸಿಲಿನಿಂದ ಸುಟ್ಟ, ಗಾಳಿಯಲ್ಲಿ ಮಿಂದ ಕಲಾಕೃತಿಗಳಾಗಿದ್ದವು, ಅವು!

ಇನ್ನು ಮುಂದೆ ಉತ್ತಮ ಕಲಾಕೃತಿಗಳನ್ನು ಮಾಡುವುದು ಅಷ್ಟು ಸುಲಭವಲ್ಲ ಎಂಬುದರ ಅರಿವುಂಟಾಯಿತು. ಈಗ ಅವನಿಗೆ ತನ್ನಲ್ಲೇ ಅತೃಪ್ತಿಯೆನಿಸಿತು. ಮಾಡಿದ್ದರಲ್ಲಿ ಸಮಾಧಾನ ಕಾಣಲಿಲ್ಲ. ಆದರೆ ಆಕಸ್ಮಿಕವಾಗಿ ಒಮ್ಮೊಮ್ಮೆ ಮೂಡುತ್ತಿದ್ದ ನಂಬಿಕೆ ಭರವಸೆಗಳೂ ಕರಗಿಹೋಗುತ್ತಿರುವಂತೆನಿಸಿತು. ಕೆಲಸದಲ್ಲಿ ಪೂರ್ತಿಯಾಗಿ ಮುಳುಗಿ ಹೋಗಿದ್ದಾಗ ಮಾತ್ರವೇ ಲವಲವಿಕೆ ಕಾಣುತ್ತಿತ್ತು. ಅವನಿಗೆ ವೈಯಕ್ತಿಕ ಬದುಕೆಂಬುದೇ ಇರಲಿಲ್ಲ. ಅವನೊಂದು ಪೈಂಟಿಂಗ್ ಯಂತ್ರವಾಗಿದ್ದ. ಪೈಂಟಿಂಗ್ ಮಾಡುವುದೊಂದೇ ಅವನಿಗೆ ಗೊತ್ತಿದ್ದದ್ದು. ಒಂದೇ ವ್ಯತ್ಯಾಸವೆಂದರೆ ಈ ಮನುಷ್ಯ ಯಂತ್ರಕ್ಕೆ ಊಟ, ತಿಂಡಿ, ಪಾನೀಯಗಳು ಬೇಕಾಗುತ್ತಿದ್ದವು, ಅಷ್ಟೆ! ಈ ಯಂತ್ರದಲ್ಲಿ ಪೈಂಟ್‌ಗಳನ್ನು ಸುರಿದು ಬಿಟ್ಟರೆ, ಕ್ಯಾನ್‌ವಾಸ್‌ಗಳು ಸಿದ್ಧವಾಗಿಬಿಡುತ್ತಿದ್ದವು!

ಇಷ್ಟೆಲ್ಲ ಯಾತಕ್ಕೆ? ಯಾವ ಪ್ರಯೋಜನಕ್ಕೆ? ಮಾರಾಟಕ್ಕೆ?..... ಇಲ್ಲಿ ಖಂಡಿತ ಇಲ್ಲ. ಅವನಿಗೆ ಗೊತ್ತಿತ್ತು, ತನ್ನ ಪೈಂಟಿಂಗ್ಸ್‌ಗಳನ್ನು ಯಾರೂ ಕೊಳ್ಳುವುದಿಲ್ಲ ಅಂತ. ಆದರೂ ಇಷ್ಟೊಂದು ಆತುರ ಯಾಕೆ? ಹೀಗಿದ್ದರೂ ಹುಚ್ಚನಂತೆ, ಸಂಕಷ್ಟಗಳ ನಡುವೆ ಊಟ, ತಿಂಡಿ, ವಾಸಕ್ಕೆ ಯಾವುದೇ ಸರಿಯಾದ ವ್ಯವಸ್ಥೆ ಇಲ್ಲದೆ, ಡಜನ್ ಡಜನ್‌ಗಟ್ಟಲೆ ಕ್ಯಾನ್‌ವಾಸ್‌ಗಳನ್ನೇಕೆ ಸಿದ್ಧಪಡಿಸಿ, ರಾಶಿ ಹಾಕುತ್ತಿದ್ದಾನೆ?

ಸಾಧಿಸಬೇಕು; ಗೆಲ್ಲಬೇಕು ಎಂಬ ಭ್ರಮೆಯಿಂದ ವಿನ್ಸೆಂಟ್ ಮುಕ್ತನಾಗಿದ್ದ. ಅವನು ಕ್ಯಾನ್‌ವಾಸ್‌ಗಳನ್ನು ಮಾಡುತ್ತಿದ್ದುದು, ಮಾಡಲು ಬೇರೇನೂ ಕೆಲಸ ಇಲ್ಲದ್ದರಿಂದ: ಮಾನಸಿಕವಾಗಿ ನರಳುವುದನ್ನು ತಪ್ಪಿಸಿಕೊಳ್ಳುವ ಇಚ್ಛೆಯಿಂದ (ಮಾಡುತ್ತಿದ್ದ). ಮನೆ, ಮಠ, ಹೆಂಡತಿ, ಮಕ್ಕಳು, ಸ್ನೇಹಿತರು, ಪ್ರೀತಿ, ಆರೋಗ್ಯ, ದೇವರು – ಯಾವುದೂ ಇಲ್ಲದೆಯೂ ಮಾಡಬಲ್ಲವನಾಗಿದ್ದ. ಆದರೆ ಇದೆಲ್ಲಕ್ಕಿಂತ ಹೆಚ್ಚಿನದಾದ ಪ್ರತಿಭೆ, ಸೃಜನಶೀಲ ಸಾಮರ್ಥ್ಯಗಳಿಲ್ಲದೆ ಮಾಡುವುದು ಸಾಧ್ಯವಿರಲಿಲ್ಲ.

-೩-

ಮಾಡೆಲ್‌ಗಳನ್ನು ಬಾಡಿಗೆಗೆ ಕರೆಸಿಕೊಳ್ಳಲು ಪ್ರಯತ್ನಿಸಿದ. ಆದರೆ ಆರ್ಲೆಯ ಮಂದಿ ಯಾರೂ ಮಾಡೆಲ್ ಆಗಿ ಬರಲು ಒಪ್ಪಲಿಲ್ಲ. ತಮ್ಮನ್ನು ಸರಿಯಾಗಿ ಚಿತ್ರಿಸುವುದಿಲ್ಲ ಎನ್ನುವ ಭಾವನೆಯಲ್ಲಿದ್ದರು. ಅಕಸ್ಮಾತ್ ಕೆಟ್ಟದಾಗಿ ಚಿತ್ರಿತವಾಗಿ ಬಿಟ್ಟರೆ ತಮ್ಮ ಸ್ನೇಹಿತರು ಅವರು ಇವರು ಎಲ್ಲಾ ನೋಡಿ ನಗಬಹುದು ಅನ್ನುವ ಭಯ ಇತ್ತು. ಅವನಿಗೆ ಗೊತ್ತಿತ್ತು, ಬೋಗಾರೋ ತರ ಸುಂದರವಾಗಿ ಪೈಂಟ್ ಮಾಡಿದರೆ, ಜನರಿಗೆ ಖುಷಿ ಆಗುತ್ತೆ. ಮಾಡೆಲ್ ಆಗಿ ಮುಂದೆ ಬರೋಕೆ ನಾಚಿಕೆ ಪಡೋದಿಲ್ಲ. ಆದರೆ ತಾನು ಹಾಗೆ ಮಾಡಲಾರ. ಅದಕ್ಕೇ ಮಾಡೆಲ್‌ಗಳ ಬಗ್ಗೆ ಯೋಚಿಸುವುದನ್ನು ಬಿಟ್ಟ. ಮೊದಲಿನಂತೆ ಮಣ್ಣಿಗೇ ಅಂಟಿಕೊಂಡ.

ಬೇಸಿಗೆ ಮಾಗುತ್ತ ಬಂದಿತ್ತು. ಬಿಸಿಲಿನ ಝಳ ಹೆಚ್ಚಾಗುತ್ತಿತ್ತು. ಗಾಳಿ ಮಾತ್ರ ಕಡಿಮೆಯಾಯಿತು. ಗಂಧಕ ಹಳದಿಯಿಂದ ಬಂಗಾರ ಹಳದಿಯ ವರ್ಣಛಾಯೆಗಳ ಬೆಳಕಿನಲ್ಲಿ ಕೆಲಸ ಮಾಡಿದ. ರೆನ್ವಾರ್‌ನ ಶುದ್ಧರೇಖೆಗಳು ನೆನಪಾದವು. ಜಪಾನಿ ಪ್ರಿಂಟ್‌ಗಳಲ್ಲಿ ಕಾಣುತ್ತಿದ್ದಂತೆಯೇ, ಪ್ರೊವೆನ್ಸ್‌ನ ತಾಜಾ, ಪರಿಶುದ್ಧ ಗಾಳಿಯಲ್ಲಿ, ಎಲ್ಲವೂ ಕಾಣುತ್ತಿದ್ದವು.

ಒಂದು ದಿನ ಬೆಳಿಗ್ಗೆ ಒಬ್ಬ ಹುಡುಗಿ ಅವನ ಕಣ್ಣಿಗೆ ಬಿದ್ದಳು. ಕಾಫಿ ಬಣ್ಣದ ಚರ್ಮ, ಕಂದು ಬೂದು ಮಿಶ್ರಿತ ಕೂದಲು, ಬೂದುಬಣ್ಣದ ಕಣ್ಣುಗಳು. ಅವಳು ತೊಟ್ಟಿದ್ದ ತಿಳಿ ಗುಲಾಬಿ ಬಣ್ಣದ ಕುಪ್ಪಸದೊಳಗಿನಿಂದ ಪುಟ್ಟಪುಟ್ಟ ಮೊಲೆಗಳು ಕಾಣಿಸುತ್ತಿದ್ದವು. ನೋಡುವುದಕ್ಕೆ ಆಕರ್ಷಕವಾಗಿ. ಕನ್ನೆಯೆಂಬುದಕ್ಕೆ ಸಾಕ್ಷಿಯಾಗಿ ಕಾಣುತ್ತಿದ್ದವು. ಅವಳ ತಾಯಿಯೂ ಆಶ್ಚರ್ಯಕರ ಆಕಾರವನ್ನು ಪಡೆದಿದ್ದಳು. ಅಲ್ಲಿನ ಬಣ್ಣಗಳ, ಹೂಗಳ ಹಿನ್ನೆಲೆಯಲ್ಲಿ ಮೋಹಕವಾಗಿ ಕಾಣಿಸುತ್ತಿದ್ದರು. ಇವರಿಬ್ಬರೂ ಅನೇಕ ಸಲ. ತೀರಾ ಕನಿಷ್ಠ ಮೊತ್ತಕ್ಕೆ ಮಾಡೆಲ್‌ಗಳಾಗಲು ಒಪ್ಪಿ ಬಂದಿದ್ದರು.

ಹೋಟೆಲ್‌ಗೆ ಹಿಂತಿರುಗಿದಾಗ, ಅವನ ಮನಸ್ಸೆಲ್ಲ ಆ ಕಾಫಿ ಬಣ್ಣದ ಚರ್ಮದ ಹುಡುಗಿಯನ್ನೇ ಆವರಿಸಿಕೊಂಡಿದೆ ಎಂಬ ಪ್ರಜ್ಞೆ ಅರಿವಿಗೆ ಬಂತು. ನಿದ್ದೆ ಹತ್ತಲಿಲ್ಲ. ಆರ್ಲೆಯಲ್ಲಿ, ಮನೆಗಳಲ್ಲೂ ವಸತಿಗೆ ಅವಕಾಶವಿತ್ತು. ಐದೈದು ಫ್ರಾಂಕ್ ಬೆಲೆಗೆ ಸಿಗುತ್ತಿತ್ತು. ಫ್ರೆಂಚ್ ಸೇನೆಯಲ್ಲಿ, ಸೇರಲು ತರಬೇತಿಗೆಂದು ಬಂದು ನೀಗ್ರೋ ಜನಾಂಗದ ಜೋವ್ಸ್‌ರಿಂದ ದೊರೆತ ಪ್ರೋತ್ಸಾಹದಿಂದ ಈ ವಸತಿ ಅನುಕೂಲ ಲಭ್ಯವಿತ್ತು.

ಎಷ್ಟೋ ತಿಂಗಳ ನಂತರ ಒಬ್ಬ ಹೆಂಗಸಿನ ಜೊತೆಗೆ ಮಾತಾಡುವ ಅವಕಾಶ ಸಿಕ್ಕಿತ್ತು. ಇದಕ್ಕೆ ಮುಂಚೆ ಮಾತಾಡಿದ್ದೂ ಕೂಡಾ, ಹೊಗೆಸೊಪ್ಪು ಕೇಳಲೆಂದೋ ಅಥವಾ ಕಾಫಿ ಕೇಳಲೆಂದೋ ಮಾತ್ರ. ಅವನಿಗೆ ಮಾರ್ಗ್ಗಟ್ ಆಡಿದ್ದ ಮಾತು, ತನ್ನ ಮುಖದ ಮೇಲೆಲ್ಲಾ ಬೆರಳಾಡಿಸಿ, ಪ್ರೀತಿಯ ಮುತ್ತುಗಳನ್ನು ಸುರಿಸಿದ್ದರ ನೆನಪಾಯಿತು.

ಥಟ್ಟನೆ ಜಿಗಿದೆದ್ದು ಲಾ ಮಾರ್ಟಿನ್ ಕಡೆಗೆ ಹೆಜ್ಜೆ ಹಾಕಿದ. ನಂತರ ಕಪ್ಪುಕಲ್ಲು ಮನೆಗಳತ್ತ ಧಾವಿಸಿದ. ಕೆಲ ಕ್ಷಣಗಳ ನಂತರ, ಸ್ವಲ್ಪ ದೂರ ಏರಿ ನಡೆದ ಮೇಲೆ ಸ್ವಲ್ಪ

ಗದ್ದಲ ಕೇಳಿಸಿತು. ಓಡುತ್ತ ಒಬ್ಬ ವೇಶ್ಯೆಯ ಮನೆಯ ಮುಂಭಾಗವನ್ನು ತಲುಪಿದ. ಪೋಲೀಸರು ಅದೇ ಸಮಯಕ್ಕೆ, ಕುಡಿದ ಅಮಲಿನಲ್ಲಿ ಇಟಾಲಿಯನ್ನರು, ಕೊಲೆಮಾಡಿದ್ದ ಇಬ್ಬರು ಜೋವ್ಸ್‌ರ ಹೆಣಗಳನ್ನು ಸಾಗಿಸುತ್ತಿದ್ದರು. ಮನೆಗಳಿದ್ದ ಕಲ್ಲಿನ ರಸ್ತೆಯ ಮೇಲೆ ರಕ್ತ ಹರಿದಿತ್ತು. ಪೋಲೀಸರು ಇಟಾಲಿಯನ್ನರನ್ನು ಕೋಳ ಹಾಕಿ ಕರೆದೊಯ್ದರು. ಹಿಂದೆಯೇ ಹುಚ್ಚೆದ್ದ ಒಂದು ಗುಂಪು ಆವೇಶದಿಂದ – ಅವರನ್ನು ಬಿಡಬೇಡಿ, ಗಲ್ಲಿಗೇರಿಸಿ! ಗಲ್ಲಿಗೇರಿಸಿ!" ಎಂದು ಕೂಗುತ್ತಿತ್ತು.

ವಿನ್ಸೆಂಟ್ ಈ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು ಮೆಸೋನ್ ದ ಟಾಲರೆನ್ಸ್‌ನ, 'ರೂ ದ ರಿಕೊಲೆಟ್ಸ್' ರಸ್ತೆಯಲ್ಲಿದ್ದ ನಂ. ೧ನೇ ಮನೆಯನ್ನು ಪ್ರವೇಶಿಸಿದ. ಪ್ರೊಪ್ರೈಟರ್ ಅವನನ್ನು ಸ್ವಾಗತಿಸಿದ. ಹಜಾರದ ಬಲಭಾಗಕ್ಕೆ ಇದ್ದ ಪುಟ್ಟ ಕೋಣೆಯೊಳಕ್ಕೆ ಕರೆದೊಯ್ದ. ಅಲ್ಲಿ ಒಂದಿಬ್ಬರು ದಂಪತಿಗಳು ಪಾನಸೇವನೆಯಲ್ಲಿ ತೊಡಗಿದ್ದರು.

"ನನ್ನ ಬಳಿ ರಾಷೆಲ್ ಹೆಸರಿನ ಮುದ್ದಾದ ಹುಡುಗಿಯೊಬ್ಬಳು ಇದ್ದಾಳೆ..... ಅವಳನ್ನು ನೋಡ್ತೀರಾ?.... ಅವಳು ನಿಮಗೆ ಹಿಡಿಸದಿದ್ದರೆ, ಬೇರೆಯವರಲ್ಲಿ ನಿಮಗೆ ಹಿಡಿಸುವ ಒಬ್ಬರನ್ನು ಆಯ್ಕೆ ಮಾಡಿಕೊಳ್ಳಬಹುದು" ಲೂಯಿ ಹೇಳಿದ.

"ನಾನು ಅವಳನ್ನು ನೋಡಬಹುದೇ?"

ವಿನ್ಸೆಂಟ್ ಟೇಬಲ್‌ನ ಮುಂದೆ ಕುಳಿತು ಪೈಪ್ ಹಚ್ಚಿದ. ಹೊರಗಡೆಯಿಂದ ನಗುವಿನ ಸದ್ದು ಕೇಳಿಸಿತು. ಒಬ್ಬ ಹುಡುಗಿ ನರ್ತಿಸುತ್ತ ಒಳಗೆ ಬಂದಳು. ವಿನ್ಸೆಂಟ್ ಕುಳಿತಿದ್ದ ಕುರ್ಚಿಗೆ ಎದುರಾಗಿ ಬಂದು ಕುಳಿತಳು. ಅವನತ್ತ ಮುಗುಳ್ನಗೆ ಬೀರಿದಳು.

"ನಾನು ರಾಷೆಲ್ ಅಂತ." ಅವಳು ಪರಿಚಯ ನೀಡಿದಳು.

"ಅಲ್ಲ, ನೀನು ಮಗುವಿಗಿಂತ ದೊಡ್ಡವಳೇನಲ್ಲ. ಇದೆಲ್ಲಾ ಯಾಕೆ?!"

"ನನಗೆ ಹದಿನಾರು ವರುಷ!" ಹೆಮ್ಮೆಯಿಂದ ಬೀಗುತ್ತ ಹೇಳಿದಳು.

"ಎಷ್ಟು ದಿನಗಳಿಂದ ಇಲ್ಲಿ ಇದ್ದೀಯ?"

"ಇಲ್ಲಿ ಲೂಯಿ ಹತ್ತಿರವೇ?.... ಒಂದು ವರ್ಷದಿಂದ!"

"ನಿನ್ನನ್ನು ನೋಡಬೇಕಾಗಿದೆ."

ಅವಳ ಹಿಂದೆ ಗ್ಯಾಸ್ ಲ್ಯಾಂಪ್ ಇತ್ತು. ಅವಳ ಮುಖದ ಕಡೆ ನೆರಳಿತ್ತು. ಕೂದಲನ್ನು ಮೇಲಕ್ಕೆ ಎತ್ತಿ ಕಟ್ಟಿಡಲಾಗಿತ್ತು. ಇದರಿಂದ ಅವಳ ಮುಖ ಇನ್ನಷ್ಟು ದುಂಡಾಗಿ ಕಾಣುತ್ತಿತ್ತು. ಸಣ್ಣ ಸಣ್ಣ ಪ್ರಿಂಟ್ ಇದ್ದ ಡ್ರೆಸ್ ತೊಟ್ಟಿದ್ದಳು. ಕಾಲಿಗೆ ಸ್ಯಾಂಡಲ್‌ಗಳಿದ್ದವು. ದುಂಡನೆಯ ಮೊಲೆಗಳ ತೊಟ್ಟುಗಳು ಅವನತ್ತ, ದೂಷಿಸಲು ಮುಂದಾದ ಬೆರಳುಗಳಂತೆ ಮುಖಮಾಡಿದ್ದವು.

"ನೀನು ಮುದ್ದಾಗಿದ್ದೀ ರಾಷೆಲ್" ವಿನ್ಸೆಂಟ್ ನುಡಿದ.

ಮಗುವಿನಂತಹ ಮುಗ್ಧನಗೆ ಅವಳ ಕಣ್ಣಲ್ಲಿ ಇಣುಕಿತು. ತಿರುಗಿ ಅವನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡಳು.

"ನಿನಗೆ ಇಷ್ಟವಾಯ್ತು ಅಂತ ಕೇಳಿ ನನಗೆ ಸಂತೋಷ ಆಗಿದೆ. ಗಂಡಸರು ಆ ಥರ ಹೇಳೋದನ್ನು ಕೇಳೋಕೆ ನನಗೆ ತುಂಬಾ ಇಷ್ಟ. ಚೆನ್ನಾಗಿರುತ್ತೆ, ಹೌದಲ್ಲ?"

"ನೀನೊಬ್ಬ ತಮಾಶೆ ಮನುಷ್ಯ. 'ಫೋ-ರೋ'."

"ಫೋ-ರೋ!..... ಅಂದ್ರೆ? ನಿನಗೆ ನನ್ನ ಪರಿಚಯ ಇದೆಯಾ?"

"ಲಾಮಾರ್ಟೀನ್‌ನಲ್ಲಿ ಒಂದು ಕಡೆ ನಿನ್ನನ್ನು ನೋಡಿದ್ದೀನಿ. ನೀನ್ಯಾಕೆ ಯಾವಾಗಲೂ, ಬೆನ್ನಮೇಲೆ ಒಂದು ದೊಡ್ಡ ಹೊರೆ ಏರಿಸಿಕೊಂಡು ಓಡ್ತೀರ್ತೀ? ಯಾಕೆ ತಲೆ ಮೇಲೆ ಹ್ಯಾಟ್ ಇಟ್ಕೊಳ್ಳೊಲ್ಲ? ತಲೆ ಬಿಸಿಲಿಗೆ ಸುಡುವುದಿಲ್ಲವೇ? ನಿನ್ನ ಕಣ್ಣು ನೋಡು ಎಷ್ಟು ಕೆಂಪಗಿದೆ: ನಿನಗೆ ನೋವಾಗೋದಿಲ್ವೆ?"

ಅವಳ ಮುಗ್ಧ ಪ್ರಶ್ನೆಗಳಿಗೆ ವಿನ್ಸೆಂಟ್ ನಕ್ಕ.

"ರಾಷೆಲ್, ನೀನು ಬಹಳ ಮುದ್ದಾಗಿದ್ದೀ. ನನ್ನ ನಿಜವಾದ ಹೆಸರನ್ನು ಹೇಳಿದರೆ, ಆ ಹೆಸರಲ್ಲಿಯೇ ಕರೀತೀಯೇನು?"

"ಏನು ಹೆಸರು?"

"ವಿನ್ಸೆಂಟ್."

"ಇಲ್ಲ. ನಾನು ಕರೆಯೋದಿಲ್ಲ. 'ಫೋ-ರೋ' ಅಂತ ಕರೆಯೋದೇ ನನಗೆ ಇಷ್ಟ. ಯಾಕೆ, ಹಾಗೆ ಕರೆಯೋದು ನಿನಗೆ ಬೇಸರ ಅನ್ಸತ್ತಾ? ಕುಡಿಯೋದಕ್ಕೆ ಏನಾದರೂ ಸಿಗಬಹುದೇ?..... ನೋಡು, ಲೂಯಿ ಹಾಲ್‌ನಲ್ಲಿ ನಿಂತುಕೊಂಡು ಎಲ್ಲ ಗಮನಿಸ್ತಾ ಇದ್ದಾನೆ."

ತನ್ನ ಬೆರಳುಗಳಿಂದ ಗಂಟಲನ್ನು ಸವರಿಕೊಂಡಳು. ನೀಲಿ ಕಣ್ಣುಗಳಿಂದ ವಿನ್ಸೆಂಟ್‌ನತ್ತ ನಗೆ ಚೆಲ್ಲಿದಳು. ಸಂತೋಷವನ್ನು ತೋರಿಸಿಕೊಳ್ಳಲು ಅವಳು ನಗುತ್ತಿದ್ದಾಳೆಂದು ಅರ್ಥ ಮಾಡಿಕೊಂಡ. ಹಲ್ಲು ಜೋಡಿಸಿದ ದಾಳಿಂಬೆ ಬೀಜಗಳಂತೆ ಕ್ರಮವಾಗಿದ್ದರೂ ಬಣ್ಣಗೆಟ್ಟಿದ್ದವು. ಕೆಳದುಟಿಯ ಕೆಳಗೆ ಸರಿಯಾಗಿ ಒಂದು ಗುಳಿಯಿತ್ತು.

"ಒಂದು ಬಾಟಲ್‌ಗೆ ಆರ್ಡರ್ ಮಾಡು. ಆದಷ್ಟೂ ಅಗ್ಗದ್ದಿರಲಿ. ನನ್ನ ಹತ್ತಿರ ಹೆಚ್ಚು ಹಣ ಇಲ್ಲ."

ವೈನ್ ಬಂತು. "ನನ್ನ ಕೋಣೆಗೇ ಹೋಗಿ ಕುಡೀಬಹುದಲ್ಲ. ಅಲ್ಲಿ ಏಕಾಂತವಾಗಿರಬಹುದು."

"ನನಗೂ ಅದೇ ತುಂಬ ಸರಿ ಅನ್ಸತ್ತೆ."

ಅವರಿಬ್ಬರೂ ಮೆಟ್ಟಿಲು ಹತ್ತಿ ರಾಷೆಲ್‌ನ ಕೋಣೆಯೊಳಗೆ ಹೋದರು. ಅದರಲ್ಲಿ ಕಿರಿದಗಲದ ಮಂಚ, ಒಂದು ಕುರ್ಚಿ, ಅಲಮಾರಿ, ಗೋಡೆಯ ಮೇಲೆ ಅನೇಕ ಮೆಡಲುಗಳು ಇದ್ದವು. ಬೀರುವಿನ ಮೇಲೆ ಕಿತ್ತುಹೋಗಿದ್ದ ಬೊಂಬೆಗಳಿದ್ದವು.

"ನಾನು ಮನೆಯಿಂದ ಬರುವಾಗ ಇವುಗಳನ್ನು ತಂದಿದ್ದೆ. ಫೋ-ರೋ ತಗೋ ಇವನ್ನು. ಇದು ಜ್ಯಾಕ್ ಇದು ಕ್ಯಾಥರೀನ್. ಇವುಗಳ ಜೊತೆ ಮನೆಯಾಟ ಆಡ್ತಿದ್ದೆ. ಓಹ್ ಫೋ-ರೋ. ಹಾಗೆ ವಿಚಿತ್ರವಾಗಿ ನೋಡಬೇಡ!"

ವಿನ್ಸೆಂಟ್ ಮೂರ್ಖನಂತೆ ಒಂದೊಂದು ಕಂಕುಳಲ್ಲಿ ಒಂದೊಂದು ಬೊಂಬೆ ಇಟ್ಟುಕೊಂಡು, ಅವಳು ನಗುವುದನ್ನು ನಿಲ್ಲಿಸುವವರೆಗೆ ನಿಂತಿದ್ದ. ಅವಳು ಅವನಿಂದ ಜ್ಯಾಕ್ ಮತ್ತು ಕ್ಯಾಥರೀನ್‌ಗಳನ್ನು ತೆಗೆದುಕೊಂಡಳು. ಅವುಗಳನ್ನು ಮೇಲಕ್ಕೆ ಎಸೆದು ಬೀರುವಿನ ಮೇಲೆ ಬೀಳಿಸಿದಳು. ಕಾಲಿನ ಸ್ಯಾಂಡಲ್‌ಗಳನ್ನು ಮೂಲೆಗೆ ಎಸೆದು, ಉಟ್ಟ ಬಟ್ಟೆಯನ್ನು ಬಿಚ್ಚಿದಳು.

"ಕುಳಿತುಕೋ ಫೋ-ರೊ," "ನಾವು ಮನೆಯಾಟ ಆಡೋಣ. ನೀನು ಅಪ್ಪ. ನಾನು ಅಮ್ಮ ಆಗೋಣ. ಈ ಆಟ ನಿನಗೆ ಇಷ್ಟವಾಗುತ್ತಾ?"

ಸ್ವಲ್ಪ ಕುಳ್ಳಾಗಿದ್ದಳು. ತೋರವಾದ ತೊಡೆಗಳು. ಮೊನಚಾದ ಮೊಲೆಗಳು ಸ್ವಲ್ಪ ಜೋಲು ಬಿದ್ದಂತೆ ಕಾಣಿಸುತ್ತಿತ್ತು. ಗೋಲಾಕಾರದ ಹೊಟ್ಟೆ. ತ್ರಿಕೋಣಾಕಾರದ ಪೆಲ್ವಿಕಭಾಗಗಳನ್ನು ಗಮನಿಸಿದ.

"ರಾಷೆಲ್.... ನೀನು ನನ್ನನ್ನು ಫೋ-ರೋ ಅಂತ ಕರೆದರೆ, ನಾನೂ ನಿನ್ನನ್ನು ಬೇರೊಂದು ಹೆಸರಿನಲ್ಲಿ ಕರೀತೀನಿ."

ರಾಷೆಲ್ ಚಪ್ಪಾಳೆ ಹೊಡೆಯುತ್ತಾ ಹೋಗಿ ಅವನ ಮಡಿಲಲ್ಲಿ ತೊಪ್ಪನೆ ಬಿದ್ದಳು.

"ಹೇಳು...... ಹೇಳು... ಏನದು.... ಹೊಸ ಹೊಸ ಹೆಸರುಗಳಿಂದ ಕರೆಸಿಕೊಳ್ಳೋದೂಂದ್ರೆ ನನಗೆ ಇಷ್ಟ....!"

"ನಾನು ನಿನ್ನನ್ನು 'ಲ ಪಿಜನ್' (ಪಾರಿವಾಳ) ಅಂತ ಕರೀತೇನೆ.

ರಾಷೆಲ್‌ಗೆ ಈ ಹೆಸರು ದುಃಖ ತರಿಸಿತು. ಗಲಿಬಿಲಿಗೊಳಿಸಿತು.

"ನನ್ನನ್ನು ಪಿಜನ್ ಅಂತ ಕರೆದದ್ದು ಯಾಕೆ ಅಪ್ಪ?"

ವಿನ್ಸೆಂಟ್ ಅವಳ ದುಂಡನೆಯ ಹೊಟ್ಟೆಯ ಮೇಲೆ ಕೈಯಾಡಿಸಿದ.

"ಯಾಕೇಂದ್ರೆ ನೀನು ಪಾರಿವಾಳದ ಥರಾನೇ ಇದ್ದೀಯ. ಸೌಮ್ಯವಾದ ಕಣ್ಣುಗಳು, ಪುಟ್ಟ ಹೊಟ್ಟೆ!"

"ಪಾರಿವಾಳದ ಹಾಗಿದ್ದರೆ ಚೆನ್ನಾಗಿರುತ್ತಾ?"

"ಖಂಡಿತ. ಪಾರಿವಾಳಗಳು ಬಹಳ ಮುದ್ದಾಗಿರುತ್ತವೆ. ಎಲ್ಲರೂ ಪ್ರೀತಿಸುತ್ತಾರೆ...... ನೀನೂ ಅವುಗಳ ಹಾಗೆ!"

ರಾಷೆಲ್ ಅವನ ಮೇಲೆ ವಾಲಿದಳು. ಕಿವಿಗೆ ಮುತ್ತು ಕೊಟ್ಟಳು. ನಂತರ ದಿಢೀರನೆ ಮಂಚದಿಂದ ಎದ್ದು ನೀರಿನ ಲೋಟಗಳನ್ನು, ವೈನ್‌ಗಾಗಿ ತಂದಳು.

"ಎಂಥ ತಮಾಶೆಯಾಗಿದೆ ನಿನ್ನ ಕಿವಿಗಳು, ಫೋ-ರೋ" ಒಂದೊಂದು ಗುಟುಕು ಸವಿಯುತ್ತ ನುಡಿದಳು.

"ಅವು ನಿನಗೆ ಹಿಡಿಸಿವೆಯೇ?" ವಿನ್ಸೆಂಟ್ ಕೇಳಿದ.

"ಹೂಂ ಮೆದುವಾಗಿ, ಮೃದುವಾಗಿ, ಗುಂಡಗೆ, ನಾಯಿ ಮರಿಗಳ ಕಿವಿಗಳಂತಿವೆ."

"ಹಾಗಾದರೆ ಅವುಗಳನ್ನು ನೀನು ತಗೋ."

ರಾಷೆಲ್ ಗಟ್ಟಿಯಾಗಿ ನಕ್ಕಳು. ಹಿಡಿದಿದ್ದ ಗ್ಲಾಸನ್ನು ತುಟಿಯ ಬಳಿಗೆ ತಂದಳು. ಅವನ ಮಾತು ಅವಳಿಗೆ 'ಜೋಕ್' ಎನಿಸಿ ಕಿಲಕಿಲ ನಕ್ಕಳು. ವೈನ್ ಅವಳ ಎಡಭಾಗದ ಎದೆಯ ಮೇಲೆ ಚೆಲ್ಲಿತು. ಅಲ್ಲಿಂದ ಹರಿದು ಹೊಟ್ಟೆಯ ಕೆಳಗೂ ಜಾರಿತು.

"ನೀನೊಬ್ಬ ಒಳ್ಳೆಯ, ತಮಾಶೆಯ ಫೋ-ರೋ. ಎಲ್ಲರೂ ನಿನ್ನನ್ನು ಹುಚ್ಚ ಅಂತಾರೆ. ಆದರೆ ನೀನು ಹುಚ್ಚ ಅಲ್ಲ...... ಹೌದಲ್ವಾ?"

"ಒಂದು ಸ್ವಲ್ಪ ಇರಬಹುದು."

"ನೀನು ನನ್ನ ಪ್ರಿಯಕರನಾಗ್ತೀಯಾ?.... ಸುಮಾರು ಒಂದು ತಿಂಗಳಿಂದ ಯಾರೂ ಸಿಗಲಿಲ್ಲ. ಪ್ರತಿದಿನಾ ರಾತ್ರಿ ನನ್ನನ್ನು ನೋಡಲು ಬರುವೆ ತಾನೇ?" - ರಾಷೆಲ್ ಕೇಳಿದಳು.

"ಪ್ರತಿದಿನಾ ಬರೋಕೆ ಸಾಧ್ಯ ಆಗೊಲ್ಲ ಅನ್ನತ್ತೆ ಪಾರಿವಾಳವೇ!"

"ಯಾಕಾಗೊಲ್ಲ?" ಗಟ್ಟಿಯಾಗಿ ಪ್ರಶ್ನಿಸಿದಳು.

"ಬೇರೆ ಏನೇನೋ ಕಾರಣಗಳ ಜೊತೆಗೆ, ಹಣವೂ ಇರೋದಿಲ್ಲ."

ರಾಷೆಲ್ ಪ್ರೀತಿಯಿಂದ ಅವನ ಕಿವಿ ಹಿಂಡಿದಳು.

"ನಿನ್ನ ಹತ್ತಿರ ಐದು ಫ್ರ್ಯಾಂಕ್ ಇಲ್ಲವಾದರೆ, ನಿನ್ನ ಕಿವೀನ ಕತ್ತರಿಸಿ ನನಗೆ ಕೊಡ್ತೀಯಾ? ನನಗೆ ಅದು ತುಂಬಾ ಇಷ್ಟ. ಅದನ್ನು ತೆಗೆದುಕೊಂಡು ಬೀರುವಿನಲ್ಲಿ ಭದ್ರವಾಗಿಟ್ಟು, ಪ್ರತಿರಾತ್ರಿ ಅದರ ಜೊತೆ ಆಡ್ಕೊಳ್ತೀನಿ."

"ಸರಿ ಕೊಡ್ತೀನಿ. ಆಮೇಲೆ ನನ್ನ ಹತ್ತಿರ ಐದು ಫ್ರ್ಯಾಂಕ್ ಇದ್ದಾಗ, ಅದನ್ನು ಕೊಟ್ಟರೆ ನನ್ನ ಕಿವೀನ ನನಗೆ ವಾಪಸ್ ಕೊಡ್ತೀಯ?"

"ಓ ಫೋ-ರೋ. ನೀನೆಷ್ಟು ಒಳ್ಳೆಯವನು. ಇಲ್ಲಿಗೆ ಬರುವ ಪ್ರತಿ ಗಂಡಸೂ ನಿನ್ನ ಹಾಗೆ ಇರಬಾರದೇ?"

"ಈ ಜಾಗದಲ್ಲಿ ಖುಷಿ ಸಿಗೊಲ್ವೆ?"

"ಸಿಗುತ್ತೆ. ತುಂಬಾನೇ ಎಂಜಾಯ್ ಮಾಡ್ತೀನಿ. ಇಲ್ಲಿ ಎಲ್ಲರೂ ಇಷ್ಟವಾಗ್ತಾರೆ, ಆದರೆ ಜೋವ್ಸ್ ಮಾತ್ರ ನನಗ್ಯಾಕೋ......"

ರಾಷೆಲ್ ವೈನ್ ಗ್ಲಾಸನ್ನು ಕೆಳಗಿರಿಸಿ, ತನ್ನೆರಡೂ ಕೈಗಳಿಂದ ವಿನ್ಸೆಂಟ್‌ನ ಕುತ್ತಿಗೆಯನ್ನು ಬಳಸಿ ಹಿಡಿದಳು. ಅವಳ ಅಪ್ಪುಗೆಯಿಂದ, ಅವಳ ಮೃದು ಹೊಟ್ಟೆಯ ಸ್ಪರ್ಷ, ಒತ್ತಿದ ಮೊಲೆಗಳ ತೊಟ್ಟುಗಳು ಅವನನ್ನು ಆನಂದಾನುಭೂತಿಯತ್ತ ದೂಡಿದವು.

ಬಾಯಿಗೆ ಬಾಯಿಟ್ಟು ತುಟಿಗಳನ್ನು ಒತ್ತಿದರು.

"ನನ್ನನ್ನು ನೋಡೋಕೆ ನೀನು ಮತ್ತೆ ಬರ್ತೀ ಅಲ್ವ ಫೋ-ರೋ? ನನ್ನ ಮರೆತು ಬೇರೆ ಹುಡುಗೀರನ್ನು ಹುಡುಕಿಕೊಂಡು ಹೋಗ್ಬೇಡ.

"ಬಂದೇ ಬರುತ್ತೇನೆ ಪಾರಿವಾಳವೇ!"

"ಈಗ ಮನೆ ಆಟ ಆಡೋಣವೇ?"

ಅರ್ಧ ಗಂಟೆಯ ನಂತರ ಅಲ್ಲಿಂದ ಹೊರಟ. ಅವನು ಹೋಟೆಲ್ ತಲುಪುವಷ್ಟರಲ್ಲಿ ಎಷ್ಟು ಬಾಯಾರಿದ್ದನೆಂದರೆ, ಲೆಕ್ಕವಿಲ್ಲದಷ್ಟು ನೀರು ಕುಡಿದರೂ ತಣಿಯದಂತಾಗಿತ್ತು.

–೪–

ವಿನ್ಸೆಂಟ್ ಅಂಗಡಿಯಿಂದ ಕೊಳ್ಳುವ ಬಣ್ಣಗಳಿಗಿಂತ ಸ್ವತಃ ತಯಾರಿಸುವ ಬಣ್ಣಗಳಿಂದ ಹೆಚ್ಚು ಪ್ರಯೋಜನವಿದೆಯೆಂಬ ಅಭಿಪ್ರಾಯಕ್ಕೆ ಬಂದ. ಬಣ್ಣಗಳನ್ನು ಯಾವಾಗಲೋ ತಯಾರಿಸಿ ಮಾರಾಟ ಮಾಡುವುದರಿಂದ ಅಷ್ಟು ತಾಜಾತನ ಸಾಧ್ಯವಾಗುತ್ತಿರಲಿಲ್ಲ. ಬಣ್ಣಗಳನ್ನು ಎಷ್ಟು ನುಣ್ಣಗೆ ಅರೆದರೆ ಅಷ್ಟು ತೈಲದೊಂದಿಗೆ ಬೆರೆಯುತ್ತೆ. ಬಣ್ಣಗಳು ಬೆರೆಯಲು ತೈಲವೊಂದು ಮಾಧ್ಯಮವಾಗಿರುತ್ತದೆ. ತನ್ನ ಕ್ಯಾನ್‌ವಾಸ್‌ಗಳು ಒರಟಾಗಿದ್ದರೂ, ಅವನಿಗೆ ಏನೂ ಅನಿಸುತ್ತಿರಲಿಲ್ಲ. ಆದರೆ ಎಂದೋ, ಯಾರೋ, ಹೇಗೋ ಮಾಡಿದ ಬಣ್ಣಗಳನ್ನು ಬಳಸದೆ ತನ್ನ ಬಣ್ಣಗಳನ್ನು ತಾನೇ ಸ್ವತಃ ತಯಾರಿಸಿಕೊಳ್ಳಲು ಯೋಚಿಸಿದ. ಥಿಯೋ ಟಾಂಗೆಯಿಂದ ಆರೆಂಜ್‌ರೆಡ್, ಕೋಬಾಲ್ಟ್, ಮ್ಯಾಲಕೈಟ್, ಅಲ್ಟ್ರಾ ಮೆರೈನ್ ವರ್ಮಿಲಿಯನ್ – ಮುಂತಾದ ಖನಿಜಗಳನ್ನು ಮೂಲಬಣ್ಣಗಳನ್ನು ತರಿಸಿಕೊಟ್ಟ. ವಿನ್ಸೆಂಟ್ ಅವುಗಳನ್ನೆಲ್ಲ ಕುಟ್ಟಿ ಪುಡಿಮಾಡಿ ಬೇರೆಬೇರೆ ಮಿಶ್ರಣಗಳನ್ನು ಮಾಡಿಕೊಂಡ. ಇದರಿಂದ ಅವನಿಗೆ ಬಣ್ಣಗಳ ಬೆಲೆಯೂ ಕಡಿಮೆ ಬಿತ್ತು ಮತ್ತು ಅವುಗಳಲ್ಲಿ ತಾಜಾತನ, ತಾಳಿಕೆ ಗುಣಗಳೂ ಇದ್ದವು.

ನಂತರ ಕ್ಯಾನ್‌ವಾಸ್‌ಗಳ ಬಗ್ಗೆಯೂ ಅಸಂತೃಪ್ತನಾದ. ಇಲ್ಲೀವರೆಗೆ ಬಳಸುತ್ತಿದ್ದ ಕ್ಯಾನ್‌ವಾಸ್‌ಗಳಿಗೆ ಬಣ್ಣಗಳನ್ನು ಸರಿಯಾಗಿ ಹೀರಿಕೊಳ್ಳುವ ಗುಣವಿರಲಿಲ್ಲ. ಅವುಗಳ ಮೇಲಿದ್ದ ತೆಳುವಾದ ಪ್ಲಾಸ್ಟರ್‌ಗೆ ಗಾಢ ಬಣ್ಣಗಳನ್ನು ಹೀರಿಕೊಳ್ಳುವ ಶಕ್ತಿಯಿರಲಿಲ್ಲ. ಥಿಯೋ ಕ್ಯಾನ್‌ವಾಸ್‌ನ ರೋಲ್‌ಗಳನ್ನೇ ಕಳಿಸಿಕೊಟ್ಟ. ರಾತ್ರಿ ಹೊತ್ತು ಅವನು ಪ್ಲಾಸ್ಟರ್ ಮಿಶ್ರಣವನ್ನು ಕ್ಯಾನ್‌ವಾಸ್ ಮೇಲೆ ನೀಟಾಗಿ ಸವರಿದ (ಲೇಪಿಸಿದ). ಮರುದಿನ ಸಿದ್ಧವಾದ ಇಂತಹ ಕ್ಯಾನ್‌ವಾಸ್ ಮೇಲೆ ಕೆಲಸ ಮಾಡುತ್ತಿದ್ದ.

ಜಾರ್ಜ್ ಸ್ಯುರಾತ್ ಚಿತ್ರ ಅಥವಾ ಕಲಾಕೃತಿಗಳಿಗೆ ಎಂತಹ ಫ್ರೇಮ್ ಇರಬೇಕೆಂದು ಹೇಳಿದ್ದು ನೆನಪಾಗಿ ಅದನ್ನೂ ಮನಸಿನಲ್ಲಿ ಇಟ್ಟುಕೊಂಡ. ಮೊದಲ ಸಲ ಥಿಯೋಗೆ ತಾನು ಮಾಡಿದ ಆರ್ಲೇಸಿಯನ್ ಕ್ಯಾನ್‌ವಾಸನ್ನು ಕಳಿಸಿಕೊಟ್ಟಾಗ, ಅದಕ್ಕೆ ಎಂತಹ ಫ್ರೇಮ್, ಹಾಕಬೇಕೆಂಬುದನ್ನೂ ಸೂಚಿಸಿದ್ದ. ಜೊತೆಗೆ ಬಣ್ಣದ ಬಗ್ಗೆಯೂ ಸಲಹೆ ನೀಡಿದ್ದ. ಆದರೂ ಫ್ರೇಮಾಗಿದ್ದ ತನ್ನ ಕಲಾಕೃತಿಗಳನ್ನು ತಾನೇ ಸ್ವತಃ ನೋಡುವವರೆಗೂ ಅವನಿಗೆ ಸಮಾಧಾನವಿರಲಿಲ್ಲ. ತಾನೇ ಫ್ರೇಮ್ ಹಾಕಲು ಬೇಕಾಗುವ ಮರದ ಸೀಳುಗಳನ್ನು ಕೊಂಡುತಂದು, ಬೇಕಾದ ಅಳತೆಗೆ ಕತ್ತರಿಸಿ, ಅವುಗಳಿಗೆ, ಕಲಾಕೃತಿಗಳ ಬಣ್ಣಗಳಿಗೆ ಹೊಂದುವಂತಹ ಬಣ್ಣಗಳನ್ನು ಹಚ್ಚಿದ.

ಈಗ ಅವನು ತನ್ನ ಬಣ್ಣಗಳನ್ನು, ಕ್ಯಾನ್‌ವಾಸ್‌ಗಳನ್ನು ತಾನೇ ತಯಾರಿಸಿಕೊಳ್ಳುತ್ತಿದ್ದ. ಚಿತ್ರಗಳನ್ನು ಪೈಂಟ್ ಮಾಡಿದ; ಫ್ರೇಮುಗಳನ್ನು ತಾನೇ ತಯಾರಿಸಿದ, ಅವುಗಳಿಗೆ ಬಣ್ಣಗಳನ್ನು ತಾನೇ ಹಚ್ಚಿದ.

"ನನ್ನ ಪಿಕ್ಚರ್‌ಗಳನ್ನು (ಕಲಾಕೃತಿಗಳನ್ನು) ನನಗೇ ಕೊಂಡುಕೊಳ್ಳಲು ಮಾತ್ರ ಸಾಧ್ಯವಾಗುತ್ತಿಲ್ಲವಲ್ಲ!" ಎಂದು ಗಟ್ಟಿಯಾಗಿ ಗೊಣಗಿಕೊಂಡ.

ಚಂಡಮಾರುತ ಮತ್ತೊಮ್ಮೆ ಅಪ್ಪಳಿಸಿತು. ನಿಸರ್ಗವೇ ಆವೇಶಕ್ಕೆ ಒಳಗಾದಂತೆ ಕಾಣಿಸಿತು. ಆಕಾಶದಲ್ಲಿ ಮೋಡಗಳ ಸುಳಿವಿರಲಿಲ್ಲ. ಕಣ್ಣಿಗೆ ರಾಚುವ ಸೂರ್ಯ ಪ್ರಕಾಶದ ಜೊತೆಯಲ್ಲಿಯೇ ತೀವ್ರವಾದ ಒಣಹವೆ, ಸಹಿಸಲಸಾಧ್ಯವಾದ ಚಳಿಯೂ ಇತ್ತು. ವಿನ್ಸೆಂಟ್ ಕೋಣೆಯಲ್ಲಿದ್ದುಕೊಂಡೇ ನಿರ್ಜೀವ ವಸ್ತುಗಳ (ಸ್ಟಿಲ್‌ಗಳ) ಚಿತ್ರಗಳನ್ನು ಬಿಡಿಸಿದ. ಬ್ಲೂ ಎನಾಮಲ್‌ನಲ್ಲಿ ಕಾಫಿಪಾತ್ರೆ; ರಾಯಲ್ ಬ್ಲೂ ಮತ್ತು ಗೋಲ್ಡ್ ಬಣ್ಣಗಳಲ್ಲಿ ಬಟ್ಟಲು (ಕಪ್), ಪೇಲ್ ಬ್ಲೂ ಮತ್ತು ವೈಟ್ ಬಣ್ಣಗಳಲ್ಲಿ ಹಾಲಿನ ಜಗ್. ಮತ್ತೊಂದು ಮಜೋಲಿಕ ಬ್ಲೂನಲ್ಲಿ ಕೆಂಪು, ಹಸಿರು, ಕಂದು ಬಣ್ಣಗಳ ವಿನ್ಯಾಸದೊಂದಿಗೆ ಮತ್ತೊಂದು ಜಗ್ - ಇದರ ಮೇಲೆ ಎರಡು ಕಿತ್ತಲೆಹಣ್ಣು ಮತ್ತು ಮೂರು ನಿಂಬೆಹಣ್ಣುಗಳ ಚಿತ್ರಗಳಿರುವಂತೆ, ವರ್ಣ ಚಿತ್ರಗಳನ್ನು ಬಿಡಿಸಿದ.

ಗಾಳಿಯ ರಭಸ ಪೂರ್ತಿಯಾಗಿ ನಿಂತು ಹೋದಮೇಲೆ ಮತ್ತೆ ಹೊರಾಂಗಣ ಚಿತ್ರಗಳನ್ನು ರಚಿಸಲು ಹೊರಗೆ ಹೊರಟ. ರ್‍ಹೋನ್ ನದಿ, ಕಬ್ಬಿಣದ ಸೇತುವೆ, ಆಕಾಶ ಹಡಗುಕಟ್ಟೆ ಮೊದಲಾದವುಗಳನ್ನು ಅಬ್ಸಿಂತ್, ಲೈಲಾಕ್, ಕಿತ್ತಳೆ, ಮ್ಯಾಲ್‌ಕೈಟ್ ಹಸಿರು ಬಣ್ಣಗಳಲ್ಲಿ ರಚಿಸಿದ. ಮನಸ್ಸನ್ನು ಕಲಕುವಂತಹ; ಮನಸ್ಸನ್ನು ಮುಟ್ಟುವಂತಹ ರೀತಿಯ ಕಲಾಕೃತಿಗಳ ರಚನೆಗೆ ತುಡಿಯುತ್ತಿದ್ದ.

ತನ್ನ ಕಣ್ಣಿಗೆ ಕಾಣುವುದನ್ನು ಕಂಡಂತೆ ಸೃಷ್ಟಿಸುವುದಕ್ಕಿಂತ ಬಣ್ಣಗಳನ್ನು ಹೇಗಂದರೆ ಹಾಗೆ ಬಳಸಿ ತನ್ನನ್ನು ಸಮರ್ಥವಾಗಿ ಅಭಿವ್ಯಕ್ತಿಸಲು, ತನ್ನೆಲ್ಲ ಶಕ್ತಿಯನ್ನು ಬಳಸಿದ. ಪ್ಯಾರಿಸ್‌ನಲ್ಲಿ ಪಿಸಾರೋ ಹೇಳಿದ್ದು ಇದೇನೆ. "ಸಾಮರಸ್ಯದ ಅಥವಾ ವಿರೋಧದ ಅಭಿವ್ಯಕ್ತಿಯಲ್ಲಿಯೇ ಆಗಲಿ ಬಣ್ಣಗಳಿಂದ ಸಾಧ್ಯವಾಗುವ ಪರಿಣಾಮಗಳನ್ನು ಸ್ವಲ್ಪ ಅತಿಶಯತೆಯೊಂದಿಗೇ ತೋರಿಸಬೇಕು." ಮೊಪಸಾಃನ 'ಪಿಯರ್ ಎತ್ ಜಾನ್'ನ ಮುನ್ನುಡಿಯಲ್ಲಿಯೂ ಇದೇ ಅಭಿಪ್ರಾಯ ವ್ಯಕ್ತವಾಗಿದೆ. "ಕಲಾವಿದನಿಗೆ ತಾನು ಬದುಕುತ್ತಿರುವ ವಾಸ್ತವ ಜಗತ್ತಿಗಿಂತ ಸುಂದರವಾದ, ಅತಿಶಯವಾದ ಜಗತ್ತನ್ನು ಸೃಷ್ಟಿಸುವ ಸ್ವಾತಂತ್ರ್ಯವಿದೆ." ಎಂದು ಹೇಳಲಾಗಿದೆ. ಯಥಾವತ್ತಾದ ಸೃಷ್ಟಿಯೇ ಆಗಬೇಕೆಂದಿಲ್ಲ. ಪ್ರತಿಭೆ ಸಾಮರ್ಥ್ಯದ ಬಲದಿಂದ, ಕಲಾವಿದನಾಗಿ ಪಡೆದಿರುವ ಸ್ವಾತಂತ್ರ್ಯದ ಹಕ್ಕಿನಿಂದ ಅತಿಶಯ ಜಗತ್ತನ್ನು ಸೃಷ್ಟಿಸಬಹುದು.

ಸೂರ್ಯನೆತ್ತಿಗೇರಿದ್ದ ಹೊತ್ತಿನಲ್ಲಿ, ವಿನ್ಸೆಂಟ್ ಇಡೀ ದಿನ ಕಷ್ಟಪಟ್ಟು ಕೆಲಸ ಮಾಡಿದ. ಉತ್ತ ಹೊಲ, ನೀಲಿ ಹೆಂಟೆಗಳಿಂದ ಕೂಡಿದ ವಿಶಾಲವಾದ ಬಯಲು ಪ್ರದೇಶ. ಪಕ್ವ ತೆನೆಗಳಿಂದ ಕೂಡಿದ ಹೊಲ; ಹಳದಿ ಸೂರ್ಯ –ಇತ್ಯಾದಿಯಾಗಿ ದೃಶ್ಯಚಿತ್ರಗಳನ್ನು ರಚಿಸಿದ.

ಪ್ಯಾರಿಸಿನ ವಿಮರ್ಶಕರಿಗೆ ತಾನು ತುಂಬ ಆತುರದಲ್ಲಿ ಮಾಡುತ್ತಿದ್ದೇನೆ ಅನಿಸಬಹುದೆಂದು ಅವನಿಗೆ ಗೊತ್ತಿತ್ತು. ಅವರ ಅಭಿಪ್ರಾಯಕ್ಕೆ ಅವನ ಸಮ್ಮತಿ ಇರಲಿಲ್ಲ. ನಿಸರ್ಗದ ಬಗ್ಗೆ ತನಗಿದ್ದ ಭಾವತೀವ್ರತೆಯೇ ತನ್ನನ್ನು ಒತ್ತಾಯಿಸಿದ್ದಲ್ಲವೇ? ಭಾವನೆಗಳ ತುಡಿತವನ್ನು ಹತ್ತಿಕ್ಕಲು ಸಾಧ್ಯವೇ ಇಲ್ಲದ ಸಂದರ್ಭದಲ್ಲಿ ಕಲಾವಿದ ತನಗರಿವಿಲ್ಲದಂತೆಯೇ ಅವಿಶ್ರಾಂತನಾಗಿ ಕೆಲಸಮಾಡುತ್ತಾನೆ. ಮಾತಾಡುವಾಗ ಒಮ್ಮೊಮ್ಮೆ ಶಬ್ದಗಳು ನಿರರ್ಗಳವಾಗಿ ಅನಾಯಾಸವಾಗಿ ಒದಗಿಬರುವಂತೆ ಪೈಂಟಿಂಗ್‌ನಲ್ಲೂ ಒಮ್ಮೊಮ್ಮೆ ಸ್ಟ್ರೋಕ್‌ಗಳು ಸ್ಪಷ್ಟವಾಗಿ, ಅನಾಯಾಸವಾಗಿ ಒದಗಿಬರುತ್ತವೆ. ಒಮ್ಮೊಮ್ಮೆ ಏನೇನೋ ಆಗಿ, ಸ್ಫೂರ್ತಿಯೇ ಸತ್ತು ಹೋದಂತೆ ಒಂದು ರೇಖೆಯೂ ಮೂಡುವುದಿಲ್ಲ.

ಈಸಲ್ ಅನ್ನು ಬೆನ್ನಿಗೇರಿಸಿ ಮಾಂಟ್‌ಮಜೂರ್ ಹಾದು ಮನೆಕಡೆಗಿನ ರಸ್ತೆಯಲ್ಲಿ ಹೆಜ್ಜೆಹಾಕಿದ. ನಡೆಯುವ ರಭಸದಲ್ಲಿ ತನಗಿಂತ ಮುಂದೆ ಹೆಜ್ಜೆ ಹಾಕಿ ಒಬ್ಬ ವ್ಯಕ್ತಿ ಮತ್ತು ಒಬ್ಬ ಹುಡುಗ, ಅಡ್ಡಾಡುತ್ತಿದ್ದವರನ್ನು ದಾಟಿ ಹೋದರೂ, ಆ ಇಬ್ಬರನ್ನು ಗುರುತಿಸಿದ. ಆ ವ್ಯಕ್ತಿ ಹಿರಿಯ ರೌಲಿನ್ ಆಗಿದ್ದ. ಆರ್ಲೆಯ ಪೋಸ್ಟ್‌ಮ್ಯಾನ್ ಆಗಿದ್ದ. ಕೆಫೆಯಲ್ಲಿ ಎಷ್ಟೋ ಸಲ ಅವನ ಸಮೀಪದಲ್ಲಿಯೇ ಕುಳಿತಿರುತ್ತಿದ್ದ. ಅವನೊಂದಿಗೆ ಮಾತಾಡಬೇಕೆಂದೂ ಬಯಸಿದ. ಆದರೆ ಸಾಧ್ಯವೇ ಆಗಿರಲಿಲ್ಲ. ಈಗ ಅವನನ್ನು ಮಾತಾಡಿಸುವ ಅವಕಾಶ ಸಿಕ್ಕಿತ್ತು.

"ಗುಡ್ ಡೇ ಮಿಸ್ಟರ್ ರೌಲಿನ್" – ಎಂದು ಮಾತಾಡಿಸಿದ.

"ಆಹ್! ನೀನು ಪೈಂಟರ್...... ನಿನಗೂ ಗುಡ್ ಡೇ...... ನನ್ನ ಮಗನನ್ನು ಹಾಗೆಯೇ ಸುತ್ತಾಡಿಸಿಕೊಂಡು ಬರೋಣಾಂತ ಹೊರಟಿದ್ದೀನಿ."

"ಇವತ್ತು ಹವಾಗುಣ ತುಂಬ ಚೆನ್ನಾಗಿದೆ ಅಲ್ವಾ?"

"ಹಾಂ! ಹಾಂ! ಆ ದೈತ್ಯಗಾಳಿ ಬೀಸದೆ ಇದ್ದರೆ ಚೆನ್ನಾಗಿಯೇ ಇರುತ್ತೆ. ಇವತ್ತೇನಾದರೂ ಪೈಂಟ್ ಮಾಡಿದ್ದೀಯ?"

"ಹೌದು."

"ನಾನೊಬ್ಬ ಅಜ್ಞಾನಿ ನನಗೆ ಕಲೆ ಬಗ್ಗೆ ಏನೂ ಗೊತ್ತಿಲ್ಲ. ಆದರೂ ನೀನು ತೋರಿಸುವುದಕ್ಕೆ ಅಭ್ಯಂತರ ಇಲ್ಲಾಂದ್ರೆ, ನನಗೆ ತುಂಬಾ ಸಂತೋಷ ಆಗುತ್ತೆ; ಗೌರವ ಕೊಟ್ಟ ಹಾಗೂ ಆಗುತ್ತೆ."

"ಖಂಡಿತ. ಸಂತೋಷದಿಂದ ತೋರಿಸುತ್ತೇನೆ."

ಹುಡುಗ ಆಟ ಆಡುತ್ತಾ ಮುಂದೆ ಹೋದ. ಪೋಸ್ಟ್‌ಮ್ಯಾನ್ ಮತ್ತು ವಿನ್ಸೆಂಟ್ ಪಕ್ಕಪಕ್ಕದಲ್ಲಿಯೇ ಹೆಜ್ಜೆಹಾಕುತ್ತಿದ್ದರು. ರೌಲಿನ್ ಕ್ಯಾನ್‌ವಾಸನ್ನು ಗಮನವಿಟ್ಟು ನೋಡುತ್ತಿದ್ದರೆ, ವಿನ್ಸೆಂಟ್ ಅವನ ಮುಖದ ಕಡೆಗೇ ದೃಷ್ಟಿ ನೆಟ್ಟಿದ್ದ. ಅಲ್ಲಿ ಮೂಡುವ ಭಾವನೆಗಳನ್ನು ಗಮನಿಸುತ್ತಿದ್ದ. ಕುತೂಹಲವನ್ನು ಚಿಮ್ಮುತ್ತಿದ್ದ, ಪ್ರಶಾಂತವಾದ ಕಣ್ಣುಗಳು, ಎದೆಭಾಗದವರೆಗೂ ಇಳಿದಿದ್ದ ರೇಶಿಮೆಯ ನುಣುಪಿನ ಗಡ್ಡ, ಧರಿಸಿದ್ದ ನೀಲಿಬಣ್ಣದ (ಟೋಪಿ) ಪೋಸ್ಟ್‌ಮ್ಯಾನ್ ಟೋಪಿ. ಎಲ್ಲವೂ ವಿನ್ಸೆಂಟ್‌ನನ್ನು ಆಕರ್ಷಿಸಿದ್ದವು.

ರೌಲಿನ್‌ನ ಇದೇ ರೀತಿಯಲ್ಲಿದ್ದ ಪೇರ್‌ಟಾಂಗೆಯತ್ತ ಆಕರ್ಷಿತನಾದದ್ದೂ ಹೀಗೇ! ನೋಡಲು ಸರಳ ವ್ಯಕ್ತಿತ್ವ; ಮೊಗದಲ್ಲಿ ಎಲ್ಲಿಯೋ ಸ್ವಲ್ಪ ವಿಷಾದದ ಛಾಯೆ. ಅದ್ದೂರಿಯ ಗ್ರೀಕ್ ಮಾದರಿಯ ಗಡ್ಡದ ಜೊತೆಗೆ ಮುಖ ಅದೇಕೋ ಹೊಂದಿಕೆಯಾದಂತೆ ಕಾಣಿಸಲಿಲ್ಲ.

"ನಾನು ಮೊದಲೇ ಹೇಳಿದಂತೆ ಕಲೆಯ ವಿಚಾರ ನನಗೇನೂ ಗೊತ್ತಿಲ್ಲ. ಆದರೂ ಏನಾದರೂ ಅದರ ಬಗ್ಗೆ ಹೇಳಿದರೆ, ತಪ್ಪು ತಿಳಿಯಬಾರದು. ನೀನು ಬಿಡಿಸಿರುವ ಧಾನ್ಯದ ಹೊಲಗಳು. ಬಹಳ ಸಹಜವಾಗಿವೆ; ಜೀವಂತವಾಗಿವೆ. ನಾವು ಹಾದುಬರುವಾಗ ನೋಡಿದ ಹೊಲಗಳ ಯಥಾವತ್ತಾದ ಚಿತ್ರವಿದೆ. ಅವುಗಳನ್ನು ಪೈಂಟ್ ಮಾಡುತ್ತಿರುವಾಗಲೇ ನಾನು ಗಮನಿಸಿದೆ.

"ಹಾಗಾದರೆ ನಿಮಗೆ ಇಷ್ಟವಾಯಿತೇ?"

"ಇಷ್ಟ ಆಗುತ್ತಾ ಇಲ್ಲವಾ ಅನ್ನೋ ವಿಚಾರದಲ್ಲಿ ನಿಶ್ಚಿತವಾಗಿ ಏನೂ ಹೇಳಲಾರೆ. ಆದರೆ ಅದರಲ್ಲಿ ಮನಸ್ಸನ್ನು ಸೆಳೆಯುವ ಏನೋ ಶಕ್ತಿಯಿದೆ."

ಮಾಂಟ್‌ಮಜೂರ್ ಬುಡವನ್ನು ಹಾದು ಹೋದರು. ಪ್ರಾಚೀನ 'ಅಬ್ಬೆ(ಕ್ರೈಸ್ತಮಠ)ಯ ಮೇಲೆ ಕೆಂಪುಸೂರ್ಯ ಮುಳುಗುತ್ತಿದ್ದ ಸಂಜೆ ಸೂರ್ಯನ ಕಿರಣಗಳು ಮರಗಳ ಎಲೆಗಳ ಮೇಲೆ ಬಿದ್ದು ಎಲೆಗಳಿಗೆ ಕಿತ್ತಲೆ ಬಣ್ಣದ ಬೆಂಕಿಯನ್ನು ಸವರಿದಂತೆ ಕಾಣಿಸುತ್ತಿತ್ತು. ಉಳಿದ ಪೈನ್ ಮರಗಳು, ಮರಳು, ಕಲ್ಲುಬಂಡೆಗಳು ನೀಲಿಛಾಯೆಯನ್ನು ಪಡೆದಂತಿದ್ದವು.

"ಇವೂ ಕೂಡಾ ತುಂಬಾ ನೈಜವಾಗಿವೆ. ಅಲ್ಲವೇ ಮಿಸ್ಟರ್?" – ರೌಲಿನ್ ಕೇಳಿದ.

"ನಾವಿಲ್ಲದೆ ಹೋದಾಗ ಇವು ಇನ್ನೂ ಜೀವಂತವಾಗಿ ನೈಜವಾಗಿ ಕಾಣಿಸುತ್ತವೆ."

ಇಬ್ಬರೂ ಸ್ನೇಹಿತರಂತೆ ಸಲಿಗೆಯಿಂದ ಮಾತಾಡುತ್ತ ಹೆಜ್ಜೆ ಹಾಕಿದರು. ರೌಲಿನ್‌ನ ಮಾತು, ಮನಸು, ಸರಳವೂ ಸ್ಪಷ್ಟವೂ ಆಗಿದ್ದವು. ತಿಂಗಳಿಗೆ ಬರುತ್ತಿದ್ದ ಕೇವಲ ನೂರಮೂವತ್ತೈದು ಫ್ರ್ಯಾಂಕುಗಳಿಂದಲೇ ತಾನು, ತನ್ನ ಹೆಂಡತಿ ನಾಲ್ಕು ಮಕ್ಕಳ ತುಂಬು ಸಂಸಾರವನ್ನು ನಿಭಾಯಿಸುತ್ತಿದ್ದ.

ಇಪ್ಪತ್ತೈದು ವರ್ಷಗಳು ಪೋಸ್ಟ್‌ಮ್ಯಾನ್ ಆಗಿ ಸೇವೆ ಸಲ್ಲಿಸುತ್ತಿದ್ದರೂ, ಆಗಾಗ ನೀಡುತ್ತಿದ್ದ ಸಂಬಳದಲ್ಲಿನ ಬಡ್ತಿ ಬಿಟ್ಟರೆ, ವೃತ್ತಿ ಬದುಕಿನಲ್ಲಿ ಬಡ್ತಿಯೆಂಬುದೇ ಸಾಧ್ಯವಾಗಿರಲಿಲ್ಲ.

"ನಾನು ಚಿಕ್ಕವನಾಗಿದ್ದಾಗ, ದೇವರ ಬಗ್ಗೆ ತುಂಬ ಯೋಚಿಸುತ್ತಿದ್ದೆ. ಆದರೆ ವರ್ಷಗಳು ಕಳೆದಂತೆ ಅವನೂ ಸೊರಗಿ ಹೋಗಿದ್ದಾನೆ. ಅವನು ಇನ್ನೂ ನೀನು ಪೈಂಟ್‌ಮಾಡಿದ ಧಾನ್ಯದ ಹೊಲಗಳಲ್ಲಿ, ಮಾಂಟ್‌ಮಜೂರ್‌ನಲ್ಲಿ ನೆಲೆಸಿದ್ದಾನೆ. ಆದರೆ ಮನುಷ್ಯರ ವಿಚಾರಕ್ಕೆ ಬಂದ...... ಅವರು.... ಅವರು ಸೃಷ್ಟಿಸಿದ ಈ ಪ್ರಪಂಚ....."

"ನನಗೆ ಗೊತ್ತಿದೆ ರೌಲಿನ್. ಆದರೆ ನನಗೆ ಅನಿಸೋದು ಏನೂಂದ್ರೆ, ಈ ಪ್ರಪಂಚವನ್ನು ನೋಡಿ ದೇವರ ಬಗ್ಗೆ ತೀರ್ಮಾನ ತಗೊಳ್ಳಾರದು. ಈಗ ನಾನು 'ಸ್ಟಡೀಸ್' ಮಾಡ್ತೀನಿ. ಅದರಲ್ಲಿ ತಪ್ಪಿದೆ. ಆದರೆ ಅದನ್ನು ಮಾಡುವ ಕಲಾವಿದನ ಬಗ್ಗೆ ಪ್ರೀತಿ ಇದ್ದಾಗ, ತಪ್ಪುಗಳ ಬಗ್ಗೆ ಏನ್ಮಾಡಲು ಸಾಧ್ಯ? ಟೀಕೆ ಮಾಡೋಕೆ ಏನೂ ಉಳಿದಿರೊಲ್ಲ. ಸುಮ್ಮನೆ ಬಾಯಿ ಮುಚ್ಚಿಕೊಳ್ಳಬೇಕು. ಆದರೆ ಉತ್ತಮವಾದದ್ದರ ಬಗ್ಗೆ ಕೇಳುವ ಹಕ್ಕು ಮಾತ್ರ ಉಳಿದಿರುತ್ತದೆ."

"ಹೌದು. ಅದು ಸರಿ..... ಒಂದು ಚೂರಾದರೂ ಒಳ್ಳೆಯದಿದ್ದಾಗ"– ಭಾವುಕವಾಗಿ ಹೇಳಿದ.

"ನಾವು ತೀರ್ಮಾನಗಳನ್ನು ಮಾಡುವ ಮೊದಲು ಒಂದೇ ಕೈನ ಮತ್ತೊಂದು ಕಲಾಕೃತಿಯನ್ನೂ ಗಮನಿಸಬೇಕು. ಅವನು ಸರಿಯಾದ ಮನಃ ಸ್ಥಿತಿಯಲ್ಲಿ ಇಲ್ಲದಿದ್ದಾಗ, ಪರಿಸ್ಥಿತಿ ಚೆನ್ನಾಗಿಲ್ಲದಿದ್ದಾಗ ಈ ಪ್ರಪಂಚವನ್ನು ಆತುರದಲ್ಲಿ ಒಡ್ಡೊಡ್ಡಾಗಿ, ಒರಟಾಗಿ ಮಾಡಿಬಿಟ್ಟಿದ್ದಾನೆ. ಹಾಗೆಯೇ ಕಲಾವಿದನೂ ಕೂಡಾ ಅವನ ಬಗ್ಗೆ ಸರಿಯಾಗಿ ಯೋಚನೆ ಮಾಡಿರಲಿಲ್ಲದಿದ್ದರೆ, ಕಲಾಕೃತಿಯ ಸೃಷ್ಟಿಯಲ್ಲಿಯೂ ತಪ್ಪುಗಳಾಗುತ್ತವೆ."

ಕತ್ತಲಾಗತೊಡಗಿತ್ತು. ರಾತ್ರಿಯ ಚಾದರದ ಮೇಲೆ ನಕ್ಷತ್ರಗಳು ಕಾಣಿಸಿಕೊಳ್ಳ ತೊಡಗಿದ್ದವು. ಕಾಲಿನ್‌ನ ಮುಗ್ಧ ಕಣ್ಣುಗಳು ವಿನ್ಸೆಂಟ್‌ನ ಮುಖದಲ್ಲಿ ಹುಡುಕಾಟ ನಡೆಸಿದ್ದವು.

"ಹಾಗಾದರೆ ಈ ಜಗತ್ತಿಗಿಂತಲೂ ಬೇರೆಯಾದ ಜಗತ್ತುಗಳು ಇವೆಯೆನ್ನುವಿಯಾ?"

"ನನಗೆ ಗೊತ್ತಿಲ್ಲ ರೌಲಿನ್. ನನ್ನ ಕೆಲಸದಲ್ಲಿ ಪೂರ್ತಿಯಾಗಿ ಆಸಕ್ತಿಯಿಂದ ತೊಡಗಿಸಿಕೊಂಡಾಗಿನಿಂದ ಅದೆಲ್ಲದರ ಬಗ್ಗೆ ಯೋಚಿಸುವುದನ್ನು ಬಿಟ್ಟೆ. ಆದರೆ ಈ ಬದುಕು ಎಷ್ಟು ಅಪೂರ್ಣ ಎನಿಸುವುದಲ್ಲವೇ? ಒಂದೊಂದು ಸಲ ಅನಿಸುತ್ತೆ, ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣಿಸಲು ಟ್ರೈನ್‌ಗಳು ಮತ್ತು ಗಾಡಿಗಳು ಸಂಚಾರ ಮಾಧ್ಯಮಗಳಾಗಿರುವಂತೆ, ಟೈಫಾಯ್ಡ್ ಮತ್ತು ಕ್ಷಯಗಳು ಒಂದು ಲೋಕದಿಂದ ಮತ್ತೊಂದು ಲೋಕಕ್ಕೆ ಕರೆದೊಯ್ಯಲು ಸಂಚಾರ ಮಾಧ್ಯಮಗಳಾಗಿವೆ – ಎಂದು."

"ಆಹಾ! ನೀವು ಕಲಾವಿದರು ಏನೆಲ್ಲ ವಿಚಾರ ಮಾಡ್ತೀರ."

"ರೌಲಿನ್, ನೀವು ನನಗೊಂದು ಸಹಾಯಮಾಡ್ತೀರಾ? ನನಗೆ ನಿಮ್ಮನ್ನು ಪೈಂಟ್ ಮಾಡಬೇಕೆಂದಿದೆ. ಅನುಮತಿ ಕೊಡುತ್ತೀರಾ? ಆರ್ಲೆಯ ಮಂದಿ ನನಗೆ ಪೋಸ್‌ಕೊಡಲು ಬರುವುದಿಲ್ಲ."

"ಇದು ನನಗೆ ಹೆಮ್ಮೆಯ ವಿಷಯ. ಆದರೆ ನನ್ನನ್ನೇಕೆ ಚಿತ್ರಿಸಲು ಹೊರಟಿದ್ದೀ? ನಾನೊಬ್ಬ ಕುರೂಪಿ."

"ದೇವರು ಅನ್ನುವವನು ಇರುವುದಾದರೆ, ಅವನಿಗೆ ನಿಮ್ಮಂತಹ ಗಡ್ಡ, ನಿಮ್ಮಂತಹ ಕಣ್ಣುಗಳೇ ಇರಬೇಕು."

"ಮಿಸ್ಟರ್, ನೀನು ನನ್ನನ್ನು ತಮಾಶೆ ಮಾಡ್ತಿದ್ದೀ!"

"ಇಲ್ಲ, ಖಂಡಿತ ಇಲ್ಲ. ಅದಕ್ಕೆ ವಿರುದ್ಧವಾಗಿ ತುಂಬಾ ಪ್ರಾಮಾಣಿಕತೆಯಿಂದ ಹೇಳ್ತಿದ್ದೀನಿ."

"ನಾಳೆ ರಾತ್ರಿ ನೀನು ನಮ್ಮ ಜೊತೆ ಊಟ ಮಾಡಬೇಕು. ನಮ್ಮದು ಸಾಧಾರಣವಾದ ಮನೆ, ಮೇಜು. ಆದರೆ ನೀನು ಬಂದರೆ ನಮಗೆ ತುಂಬ ಸಂತೋಷವಾಗುತ್ತೆ."

ಮೇಡಮ್ ರೌಲಿನ್ ಸರಳ, ಸಾದಾ ರೈತ ಹೆಂಗಸು. ಅವಳನ್ನು ನೋಡಿದಾಗ ಮೇಡಂ ಡೆನಿಸ್‌ಳ ನೆನಪಾಯಿತು. ಕೆಂಪು, ಬಿಳಿ ಚೌಕಗಳಿಂದ ಬಟ್ಟೆಯನ್ನು ಮೇಜಿನ ಮೇಲೆ ಹೊದಿಸಿದ್ದರು. ಬೇಯಿಸಿದ ಆಲೂಗಡ್ಡೆ ಮನೆಯಲ್ಲಿಯೇ ತಯಾರಿಸಿದ ಬ್ರೆಡ್ಡು. ಒಂದು ಬಾಟಲ್ ಹುಳಿ ವೈನ್ ಊಟಕ್ಕೆ ಸಜ್ಜಾಗಿ ಇಡಲಾಗಿತ್ತು. ಊಟವಾದ ಮೇಲೆ ವಿನ್ಸೆಂಟ್, ರೌಲಿನ್ ಜೊತೆ ಮಾತಾಡುತ್ತಲೇ ಮೇಡಂ ರೌಲಿನ್‌ಳ 'ಸ್ಕೆಚ್' ಬಿಡಿಸುತ್ತಿದ್ದ.

"ಕ್ರಾಂತಿಯ ಕಾಲದಲ್ಲಿ ನಾನು ರಿಪಬ್ಲಿಕನ್ ಆಗಿದ್ದೆ. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ ಅಂತ ಈಗ ಅನ್ನಿಸ್ತಿದೆ. ನಮ್ಮನ್ನು ಆಳುವ ಮಂದಿ ಅರಸರಾಗಿರಲಿ, ಮಂತ್ರಿಗಳಾಗಿರಲಿ, ನಮ್ಮಂಥ ಬಡವರ ಸ್ಥಿತಿಯಲ್ಲಿ ಯಾವುದೇ ಬದಲಾವಣೆ ಆಗುವುದಿಲ್ಲ. ಹಿಂದಿನಂತೆಯೇ ಎಂದೆಂದೂ ಬದುಕಬೇಕಾಗುತ್ತದೆ. ರಿಪಬ್ಲಿಕ್ ಆಗಿದ್ದಾಗ ಪರಸ್ಪರ ಎಲ್ಲರೂ ಹಂಚಿಕೊಂಡು ಬಾಳುತ್ತೇವೆ ಎಂದು ಭಾವಿಸಿದ್ದೆ."

"ಇಲ್ಲ ರೌಲಿನ್ ಅದು ಸಾಧ್ಯವಾಗುವುದಿಲ್ಲ."

"ಜೀವನದುದ್ದಕ್ಕೂ ನನ್ನನ್ನು ನಾನೇ ಪ್ರಶ್ನೆಸಿಕೊಳ್ಳುತ್ತಿದ್ದೇನೆ. ಒಬ್ಬನ ಹತ್ತಿರ ಮತ್ತೊಬ್ಬನಿಗಿಂತ ಹೆಚ್ಚಿರಬೇಕು ಯಾಕೆ? ಒಬ್ಬನಿಗಿಂತ ಮತ್ತೊಬ್ಬ ಹೆಚ್ಚಿಗೆ ಕಷ್ಟ ಪಡುತ್ತಿರುವುದೇಕೆ? ಒಬ್ಬ ದುಡಿದು ದುಡಿದು ಸಾಯುತ್ತಿದ್ದರೆ ಇನ್ನೊಬ್ಬ ಸೋಮಾರಿಯಾಗಿ ಬದುಕುವುದೇಕೆ?– ಇಂಥ ಪ್ರಶ್ನೆಗಳನ್ನು ಹಾಕಿಕೊಂಡು, ಅರ್ಥಮಾಡಿಕೊಳ್ಳಲು ಹೆಣಗುತ್ತಿದ್ದೇನೆ. ನಾನು ಚೆನ್ನಾಗಿ ಕಲಿತವನಾಗಿದ್ದರೆ ಬಹುಶಃ ಇಂತಹದನ್ನೆಲ್ಲ ಸರಿಯಾಗಿ ಅರ್ಥಮಾಡಕೊಳ್ಳಲು ಸಾಧ್ಯವಾಗುತ್ತಿತ್ತೇನೋ?"

ವಿನ್ಸೆಂಟ್, ಸಿನಿಕನಾಗಿ ಈ ಥರ ಮಾತಾಡುತ್ತಿರಬಹುದೇ ಎಂದು ಅವನನ್ನು ನೋಡಿದ. ಆದರೆ ಅವನ ಕಣ್ಣುಗಳಲ್ಲಿ ಅದೇ ಮುಗ್ಧತೆ, ಪ್ರಾಮಾಣಿಕತೆಗಳು ಕಾಣಿಸಿದವು.

"ಹೌದು ಗೆಳೆಯ, ತುಂಬಾ ಓದಿಕೊಂಡು ವಿದ್ಯಾವಂತರಾದವರು ಇಂಥ ವಿಚಾರಗಳನ್ನೆಲ್ಲ ಚೆನ್ನಾಗಿ ಅರ್ಥಮಾಡಿಕೊಂಡಿರ್ತಾರೆ. ಆದರೆ ನಾನು, ನಿನ್ನ ಹಾಗೆ ಅಜ್ಞಾನಿ. ಹೆಚ್ಚಾಗಿ ಓದಿಕೊಂಡವನಲ್ಲ. ಈ ವಿಚಾರಗಳನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವೂ ಇಲ್ಲ; ನನಗೆ ಇವು ಒಪ್ಪಿತವೂ ಅಲ್ಲ."

–೫–

ಅವನು ಬೆಳಿಗ್ಗೆ ನಾಲ್ಕು ಗಂಟೆಗೇ ಎದ್ದು, ಮೂರು ನಾಲ್ಕು ಗಂಟೆಗಳಷ್ಟು ನಡೆದು ತನಗೆ ಬೇಕಾದ ಜಾಗ ಹುಡುಕಿಕೊಂಡು ಕತ್ತಲಾಗುವವರೆಗೂ ಪೈಂಟ್‌ಮಾಡಿದ.

ಮನೆಯಿಂದ ಹತ್ತೆನ್ನೆರಡು ಕಿಲೋಮೀಟರ್ ನಡೆಯುವುದು ಅಷ್ಟೇನೂ ಸುಖ ಅಂತ ಅನ್ನಿಸಲಿಲ್ಲ. ಆದರೆ ಕಂಕುಳಲ್ಲಿರಿಸಿಕೊಂಡಿದ್ದ. ಇನ್ನೂ ಹಸಿಯಾಗಿದ್ದ ಕ್ಯಾನ್‌ವಾಸ್ ಅವನಿಗೆ ಭರವಸೆಯನ್ನು ಮೂಡಿಸುತ್ತಿತ್ತು.

ಏಳುದಿನಗಳಲ್ಲಿ, ವಿಸ್ತಾರವಾದ ಏಳು ಕ್ಯಾನ್‌ವಾಸ್‌ಗಳನ್ನು ಮುಗಿಸಿದ. ವಾರದ ಕೊನೆಗಂತೂ ಅವನು ಪೂರ್ತಿ ದಣಿದು ಹೋಗಿದ್ದ. ಬೇಸಿಗೆಯೇನೋ ಚೆನ್ನಾಗಿತ್ತು. ಆದರೆ ಅವನು ಸುಸ್ತಾಗಿ ಕುಳಿತುಬಿಟ್ಟಿದ್ದ. ದೊಡ್ಡದಾಗಿ ಗಾಳಿ ಬೀಸಿತು. ಧೂಳಿನಿಂದ ಮರಗಳೆಲ್ಲ ತುಂಬಿಹೋಗಿ ಬೆಳ್ಳಗೆ ಕಾಣಿಸುತ್ತಿದ್ದವು. ವಿಧಿಯಿಲ್ಲದೆ ವಿನ್ಸೆಂಟ್ ಮನೆಯಲ್ಲಿಯೇ ಉಳಿದ. ಒಂದೇ ಸಮನೆ ಹದಿನಾರು ಗಂಟೆಗಳ ಕಾಲ ನಿದ್ದೆ ಹೋದ.

ದಿನ ಕಳೆಯುವುದು ಕಷ್ಟವಾಗಿತ್ತು. ಗುರುವಾರಕ್ಕೇ ಇದ್ದ ದುಡ್ಡೆಲ್ಲಾ ಮುಗಿದುಹೋಗಿತ್ತು. ಸೋಮವಾರ ಮಧ್ಯಾಹ್ನದವರೆಗೆ ಥಿಯೋ ಕಳಿಸುತ್ತಿದ್ದ ಐವತ್ತು ಫ್ರ್ಯಾಂಕ್‌ಗಳ ನಿರೀಕ್ಷೆ ಸಾಧ್ಯವಿರಲಿಲ್ಲ. ಇದರಲ್ಲಿ ಥಿಯೋದೇನೂ ತಪ್ಪಿರಲಿಲ್ಲ. ಪೈಂಟಿಂಗ್‌ಗೆ ಬೇಕಾದ ಸಾಮಾನೆಲ್ಲವನ್ನೂ ಕೊಡಿಸುವುದರ ಜೊತೆಗೆ ಹತ್ತುದಿನಗಳಿಗೊಮ್ಮೆ ಐವತ್ತು ಫ್ರ್ಯಾಂಕ್‌ಗಳನ್ನೂ ಕಳಿಸುತ್ತಿದ್ದ. ತನ್ನ ಪೈಂಟಿಂಗ್ಸ್‌ಗಳನ್ನು ಫ್ರೇಮ್‌ಗಳಲ್ಲಿ ನೋಡಲು ಹುಚ್ಚನಂತಾಗಿದ್ದ. ತುಂಬಾ ಫ್ರೇಮ್‌ಗಳಿಗೆ ಆರ್ಡರ್ ಕೊಟ್ಟುಬಿಟ್ಟಿದ್ದ. ಅದಕ್ಕೇ ಬಡ್ಜೆಟ್ ಸಾಕಾಗಿರಲಿಲ್ಲ. ನಾಲ್ಕು ದಿನಗಳನ್ನು ಇಪ್ಪತ್ತು ಕಪ್ ಕಾಫಿ, ಒಂದು ತುಂಡು ಬ್ರೆಡ್‌ನಲ್ಲಿಯೇ ಕಳೆದ.

ಅವನಿಗೆ ತನ್ನ ಕೃತಿಗಳ ಬಗ್ಗೆ ಏನೇನೋ ಅನಿಸತೊಡಗಿತು. ಥಿಯೋ ಖರ್ಚುಮಾಡಿದ್ದಕ್ಕೆ ಅನುಗುಣವಾಗಿ, ಇವು ಬೆಲೆಯುಳ್ಳದ್ದಾಗಿಲ್ಲ ಎನಿಸತೊಡಗಿತು. ತನ್ನ ಪೈಂಟಿಂಗ್ಸ್‌ಗೆ ಖರ್ಚಾದ ಹಣವನ್ನು ಪೈಂಟಿಂಗ್ಸ್ ಮಾರಿ ವಾಪಸ್ ಪಡೆದು, ಥಿಯೋಗೆ ಹಣ ಹಿಂತಿರುಗಿಸಬೇಕೆಂದಿದ್ದ. ಆದರೆ ತನ್ನ ಪೈಂಟಿಂಗ್ಸ್‌ಗಳನ್ನು ಒಂದೊಂದೇ ನೋಡಿದಾಗ, ಅವನಿಗೇ ಸಮಾಧಾನವಾಗಲಿಲ್ಲ. ಖರ್ಚು ಮಾಡಿದ್ದಕ್ಕೆ ಸಾರ್ಥಕವೆನಿಸಲಿಲ್ಲ. 'ಸ್ಟಡೀಸ್' (ಹೊರಾಂಗಣ ದೃಶ್ಯಗಳು) ಆದರೂ ಪರವಾಗಿಲ್ಲ ಎನಿಸಿತಾದರೂ, ಬೇರೆ ಕಡೆ ಯಿಂದ ಕೊಂಡುಕೊಂಡರೇನೇ ಅಗ್ಗವಾಗಿ ಸಿಗುತ್ತೆ ಎಂದುಕೊಂಡ.

ಬೇಸಿಗೆಯ ಸಮಯದಲ್ಲಿ ಅವನ ತಲೇಲಿ ಪೈಂಟಿಂಗ್ ಮಾಡಲು ಅನೇಕ ವಿಷಯಗಳು ಪುಂಖಾನುಪುಂಖವಾಗಿ ಹೊಳೆದು ಬರುತ್ತಿದ್ದರೂ, ತಾನು ಒಬ್ಬನೇ ಇದ್ದರೂ ಅದರ ಬಗ್ಗೆ ಏನು ಮಾಡಬೇಕೆಂದು ಯೋಚಿಸಲಿಲ್ಲ. ಸುಮ್ಮನೆ ಸ್ಟೀಮ್ ಎಂಜಿನ್ ರೀತಿ ಅವನ ಕೆಲಸ ಸಾಗುತ್ತಿತ್ತು. ಈಗವನಿಗೆ ಒಂದು ರೀತಿಯ ಅಸಹನೀಯವಾದ ಬೇಸರವೆನಿಸಿತು. ಎಲ್ಲಾದರೂ ಹೊರಗೆ ಹೋಗಿ ಬೇಸರ ಕಳೆದು ಬರೋಣವೆಂದರೆ ಅವನಲ್ಲಿ ಒಂದು ಸೆಂಟೂ ಇರಲಿಲ್ಲ; ತಿನ್ನೋಕೂ ಇಲ್ಲ; ರ್‍ಯಾಷೆಲ್ ಬಳಿಗೆ ಹೋಗಲೂ ಇಲ್ಲ. ಇಡೀ ಸಮಯ ಮಾಡಿದ್ದ ಕೆಲಸವೆಲ್ಲ ಕೆಟ್ಟದಾಗಿದೆ ಎನಿಸಿತು.

"ಹೋಗಲಿ ಬಿಡು. ಖಾಲಿ ಕ್ಯಾನ್‌ವಾಸ್ ಇರೋದಕ್ಕಿಂತ, ಅದರಲ್ಲಿ ಏನೋ ಒಂದು ಚಿತ್ರ ಮೂಡಿದೆಯಲ್ಲ. ನೆಪಗಳು ಇನ್ನು ಸಾಕು. ಪೈಂಟ್ ಮಾಡೋದು ನನ್ನ ಹಕ್ಕು- ಇದೊಂದೇ ಕಾರಣ ಸಾಕು" ಎಂದು ತನಗೆ ತಾನೇ ಹೇಳಿಕೊಂಡ.

ಸುಮ್ಮನೆ ಆರ್ಲೆನಲ್ಲಿ ಇದ್ದರೂ ಪರವಾಗಿಲ್ಲ. ತನ್ನ ವೈಯಕ್ತಿಕತೆಗೆ ಸ್ವಾತಂತ್ರ್ಯ ಸಿಗುತ್ತೆ. ಬದುಕು ಅಲ್ಪಾಯುಷಿ. ದಿನಗಳು ಬೇಗಬೇಗ ಸಾಗಿಹೋಗುತ್ತವೆ. ತಾನೊಬ್ಬ ಪೈಂಟರ್. ಪೈಂಟ್ ಮಾಡಲೇ ಬೇಕಾಗುತ್ತೆ – ಎನ್ನುವ ವಿಚಾರಗಳು ಅವನ ನಂಬಿಕೆಯಾಗಿದ್ದವು.

"ಹಣ ಬಿದ್ದು ಚೂರು ಚೂರಾದರೂ, ಕಲಾವಿದನ ಈ ಬೆರಳುಗಳು ಮೃದುವಾಗುತ್ತವೆ."

ಥಿಯೋಗೆ ಕಳಿಸಲು, ಬೇಕಾದ ಬಣ್ಣಗಳ ಒಂದು ಪಟ್ಟಿ ಮಾಡಿದ. ನಂತರ ಆ ಬಣ್ಣಗಳಲ್ಲಿ ಯಾವುದೂ ಡಚ್ ಕಲಾವಿದರಾದ ಮಾವ್, ಮಾರಿಸ್, ವೀಸೆನ್‌ಬ್ರೂಕ್, ಯಾರಲ್ಲಿಯೂ ಕಾಣುವುದೇ ಇಲ್ಲ ಎನ್ನುವುದನ್ನು ಗ್ರಹಿಸಿದ. ಡಚ್ ಸಾಂಪ್ರದಾಯಿಕ ಬಣ್ಣಗಳಿಂದ, ಆರ್ಲೆಗೆ ಬಂದ ಮೇಲೆ ಪೂರ್ತಿಯಾಗಿ ಮುಕ್ತನಾಗಿದ್ದ.

ಥಿಯೋನಿಂದ ಹಣ ಬಂದ ಮೇಲೆ, ಒಳ್ಳೇ ಊಟ ಸಿಗುವ ಸ್ಥಳವನ್ನು ಹುಡುಕಿದ. ಆ ರೆಸ್ಟೋರೆಂಟ್ ಒಂದು ಥರಾ ವಿಚಿತ್ರವಾಗಿತ್ತು. ಪೂರ್ತಿ ಬೂದಿ ಬಣ್ಣದಲ್ಲಿತ್ತು. ರಸ್ತೆಯ ಬಣ್ಣದಂತೆಯೇ ಎಲ್ಲಾ ಕಡೆಯೂ ಬೂದಿ ಬಣ್ಣವೇ ಕಣ್ಣಿಗೆ ರಾಚುತ್ತಿತ್ತು. ಪರದೆಗಳು ಮಾತ್ರ ಹಸಿರು ಬಣ್ಣದ್ದಾಗಿದ್ದವು. ಬಾಗಿಲಿಗೆ ಧೂಳಿನಿಂದ ತಡೆಯಲು ದೊಡ್ಡದಾದ ಹಸಿರು ಪರದೆಯನ್ನು ಇಳಿಬಿಡಲಾಗಿತ್ತು. ಕಿಟಕಿಯ ಪರದೆಗಳ ಮೂಲಕ, ಸ್ವಲ್ಪ ಮಾತ್ರವೇ ಸೂರ್ಯನ ಬೆಳಕು ಒಳ ಬರಲು ಸಾಧ್ಯವಿತ್ತು.

ಒಂದು ವಾರದ ಬಿಡುವಿನ ನಂತರ, 'ರಾತ್ರಿಗಳ' ಪೈಂಟಿಂಗ್ ಮಾಡಲು ಯೋಚಿಸಿದ. ಬೂದು ಬಣ್ಣದ ರೆಸ್ಟೋರೆಂಟನ್ನೇ ಮಾಡಲು ಆಲೋಚಿಸಿದ. ಜನ ಊಟ ಮಾಡುತ್ತಿದ್ದರು. ಹೆಣ್ಣು ವೈಟರ್‌ಗಳು ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಓಡಾಡುತ್ತಿದ್ದರು. ದಟ್ಟವಾದ ಕೋಬಾಲ್ಟ್ ಬಣ್ಣದಲ್ಲಿ ರಾತ್ರಿಯ ಆಕಾಶ, ಸಾವಿರಾರು ಹೊಳೆವ ನಕ್ಷತ್ರಗಳು ತುಂಬಿರುವಂತೆ ಪೈಂಟ್ ಮಾಡಿದ. ಹೊರಗಡೆ ಹೋದ. ಚಂದ್ರಬೆಳಕಿನಲ್ಲಿದ್ದ ಸೈಪ್ರಸ್ ಮರಗಳು, ನಂತರ ಕೆಫೆ ದ ನ್ಯೂಟ್ (ರಾತ್ರಿಯಲ್ಲಿನ ಕೆಫೆ)ಗಳನ್ನೂ ಪೈಂಟ್ ಮಾಡಿದ. ಈ ಕೆಫೆ, ಲಾಡ್ಜಿಂಗ್‌ಗೆ ಕಾಸುಕೊಡಲು ಸಾಧ್ಯವಿಲ್ಲದವರಿಗೆ ಆಶ್ರಯ ತಾಣವಾಗಿತ್ತು.

'ಕೆಫೆ'ಯ ಒಳಭಾಗವನ್ನು ಒಂದು ದಿನ, ಹೊರಭಾಗವನ್ನು ಮತ್ತೊಂದು ದಿನ ಮಾಡಿದ. ಕೆಂಪು ಮತ್ತು ಹಸಿರು ಬಣ್ಣಗಳನ್ನು ಬಳಸಿ ಮನುಷ್ಯರ ಉತ್ಕಟ ಭಾವನೆಗಳನ್ನು ಬಿಂಬಿಸಲು ಪ್ರಯತ್ನಿಸಿದ. ಒಳಭಾಗಕ್ಕೆ ರಕ್ತ ಕೆಂಪಿನ ಬಣ್ಣವನ್ನು ಬಳಸಿದ. ಮಧ್ಯದಲ್ಲಿ ದಟ್ಟ ಹಳದಿಯಲ್ಲಿ ಬಿಲ್ಲಿಯರ್ಡ್ ಟೇಬಲನ್ನೂ ಮಾಡಿದ. ನಿಂಬೆ ಹಳದಿ ಬಣ್ಣದಲ್ಲಿ ನಾಲ್ಕು ದೀಪಗಳು – ಅವುಗಳಲ್ಲಿ ಉರಿಯುತ್ತಿದ್ದ ಜ್ವಾಲೆ ಕಿತ್ತಳೆ ಮತ್ತು ಹಸಿರು ಬಣ್ಣದಲ್ಲಿರುವಂತೆ ತೋರಿಸಿದ. ಅಲ್ಲಲ್ಲಿ ಮಲಗಿದ್ದ ಕಳ್ಳಕಾಕರುಗಳನ್ನು ವಿಚಿತ್ರವೂ

ಅಪರಿಚಿತವೂ ಆದ ಕೆಂಪು ಮತ್ತು ಹಸಿರು ಛಾಯೆಗಳಲ್ಲಿ ಕಾಣಿಸಿದ. ಇದೆಲ್ಲದರ ಹಿಂದೆ, ಕೆಫೆ, ಹಾಳಾದವರ ಹುಚ್ಚರ, ಅಪರಾಧಿಗಳ, ಕಳ್ಳಕಾಕರ ತಾಣವಾಗಿದೆ ಎಂಬುದನ್ನು ತೋರಿಸುವ ಉದ್ದೇಶವಿರಿಸಿಕೊಂಡಿದ್ದ.

ಆರ್ಲೆ ಜನಕ್ಕೆ ವಿನ್ಸೆಂಟ್‌ನ ರೀತೀನೇ ವಿಚಿತ್ರವೆನಿಸಿತು. ರಾತ್ರಿಯೆಲ್ಲ ಕೆಲಸಮಾಡಿ ಬೆಳಿಗ್ಗೆ ಮಲಗುತ್ತಿದ್ದುದು ಅವರಿಗೆ ಮನರಂಜನೆಯಾಗಿತ್ತು.

ತಿಂಗಳ ಮೊದಲ ದಿನ ಬಂದದ್ದೇ, ಪ್ರೊಪ್ರೈಟರ್ ರೂಮಿನ ಬಾಡಿಗೆಯನ್ನು ಹೆಚ್ಚಿಸಿದ್ದೇ ಅಲ್ಲದೆ, ಅವನು ಕ್ಯಾನ್‌ವಾಸ್‌ಗಳನ್ನು ಇಡುತ್ತಿದ್ದ ಬೀರುವಿಗೂ ಬಾಡಿಗೆ ಕೊಡಬೇಕೆಂದ. ವಿನ್ಸೆಂಟ್‌ಗೆ ಆ ಹೋಟೆಲ್ ಬಗ್ಗೆ, ಹೋಟೆಲ್ ಯಜಮಾನನ ಬಗ್ಗೆ ಬೇಸರ, ಅಸಹ್ಯ ಉಂಟಾದವು. ಅವನು ಊಟಕ್ಕೆಂದು ಹೋಗುತ್ತಿದ್ದ ಬೂದಿ ಬಣ್ಣದ ರೆಸ್ಟೊರೆಂಟ್ ಚೆನ್ನಾಗಿಯೇ ಇತ್ತು. ಆದರೆ ಅವನು ಅಲ್ಲಿಗೆ ಊಟಕ್ಕೆ ಹೋಗುತ್ತಿದ್ದುದು ಹತ್ತುದಿನಗಳಲ್ಲಿ ಎರಡೋ ಮೂರೋ ಬಾರಿ ಮಾತ್ರ. ಚಳಿಗಾಲ ಬಂತು. ಕೆಲಸ ಮಾಡೋಕೆ ಸ್ಟುಡಿಯೋ ವ್ಯವಸ್ಥೆ ಇರಲಿಲ್ಲ. ಇದ್ದ ರೂಮು ಬಹಳ ಕೆಟ್ಟ ಸ್ಥಿತಿಯಲ್ಲಿತ್ತು. ಅಲ್ಲಿ ತಿನ್ನುತ್ತಿದ್ದ ಅಗ್ಗದ ಆಹಾರದಿಂದ ಅವನ ಹೊಟ್ಟೆ ಕೆಡುತ್ತಿತ್ತು.

ತನ್ನದೇ ಸ್ವಂತ ಸ್ಟುಡಿಯೋ, ಮನೆ ಇರಬೇಕೆಂದು ಯೋಚಿಸುತ್ತಿದ್ದ.

ಒಂದು ದಿನ ಕಾಲಿನ್ ಜೊತೆ ಲಾಮಾರ್ಟಿನ್ ದಾಟಿ ಹೋಗುತ್ತಿದ್ದಾಗ 'ಟುಲೆಟ್' ಬೋರ್ಡನ್ನು ಗಮನಿಸಿದ. ಅದು ಅವನಿದ್ದ ಹೋಟೆಲ್‌ಗೆ ತೀರಾ ಹತ್ತಿರದಲ್ಲಿಯೇ ಇತ್ತು. ಆ ಮನೆಗೆ ಎರಡು ಭಾಗಗಳಿದ್ದವು. ಮುಂದೆ ಸ್ವಲ್ಪ ಜಾಗ ಇತ್ತು. ಅದು ಗುಡ್ಡದ ಮೇಲಿನ ಊರಿನ ಕಡೆಗೆ ಮುಖಮಾಡಿತ್ತು. ಅದನ್ನೇ ನೋಡುತ್ತಾ ನಿಂತ.

"ಎಷ್ಟು ವಿಶಾಲವಾಗಿದೆ. ಇಂಥ ಮನೆ ನನಗಿರಬೇಕಿತ್ತು' ಎಂದು ಕಾಲಿನ್‌ಗೆ ಹೇಳಿದ.

"ಇಡೀ ಮನೇನೆ ಬಾಡಿಗೆಗೆ ತೆಗೆದುಕೊಳ್ಳಬೇಕಾಗಿಲ್ಲ ವಿನ್ಸೆಂಟ್. ಇದರ ಒಂದು ಭಾಗವನ್ನು ಬೇಕಾದರೂ ಬಾಡಿಗೆಗೆ ತೆಗೆದುಕೊಳ್ಳಬಹುದು."

"ನಿಜವಾಗಿಯೂ! ಅಲ್ಲಿ ಎಷ್ಟು ರೂಮುಗಳಿರಬಹುದು. ತುಂಬಾ ದುಬಾರಿಯಾಗಿರುತ್ತೋ ಏನೋ?"

"ಒಂದು ಮೂರು ನಾಲ್ಕು ರೂಮುಗಳಿರಬಹುದು. ನೀನು ಹೋಟೆಲ್‌ಗೆ ಕೊಡ್ತೀರೋ ಬಾಡಿಗೆಗಿಂತ ಕಡಿಮೇನೇ ಇರಬಹುದು. ನಾಳೆ ಊಟದ ಹೊತ್ತಿಗೆ ಬೇಕಾದರೆ, ನಾನು ನಿನ್ನ ಜೊತೆಗೆ ಆ ಮನೆ ನೋಡೋಕೆ ಬರ್ತೀನಿ. ನಿನಗೆ ಒಳ್ಳೆ ಬೆಲೆಗೆ ಸಿಗುವ ಹಾಗೆ ನನ್ನಿಂದ ಆಗಬಹುದೇನೋ, ನೋಡ್ತೀನಿ."

ಮಾರನೆದಿನ ಬೆಳಿಗ್ಗೆ ಅವನು ಎಷ್ಟು ಉತ್ಸುಕನಾದನೆಂದರೆ, ಲಾಮಾರ್ಟಿನ್‌ನಿಂದ ಆ ಹಳದಿ ಮನೆಯನ್ನು ಎಷ್ಟು ಸಲ ನೋಡಿದ್ದೇ ನೋಡಿದ್ದು! ಎಲ್ಲಾ ಕಡೆಯಿಂದಲೂ ಪರಿಶೀಲಿಸಿದ. ಮನೆ ಮಜಬೂತಾಗಿ ಕಟ್ಟಿದಂತಿತ್ತು. ಸಾಕಷ್ಟು ಬೆಳಕೂ ಬರುತ್ತಿತ್ತು. ಆ ಮನೆಗೆ ಎರಡು ಪ್ರತ್ಯೇಕ ಪ್ರವೇಶದ್ವಾರಗಳಿದ್ದವು. ಎಡಭಾಗದ್ದನ್ನು ಈಗಾಗಲೇ ಯಾರೋ ಬಾಡಿಗೆಗೆ ಹಿಡಿದಿದ್ದರು.

ಮಧ್ಯಾಹ್ನದ ಊಟವಾದ ಮೇಲೆ ರೌಲಿನ್ ವಿನ್ಸೆಂಟ್‌ನ ಜೊತೆಯಾದ: ಬಲಗಡೆಯಲ್ಲಿನ ಬಾಗಿಲಿನಿಂದ ಇಬ್ಬರೂ ಒಳಗೆ ಪ್ರವೇಶಿಸಿದರು. ಒಳಗೆ ಹೋಗುತ್ತಿದ್ದಂತೆ ಪಡಸಾಲೆ. ಪಡಸಾಲೆ ದಾಟುತ್ತಿದ್ದಂತೆ ದೊಡ್ಡದಾದ ರೂಮು. ಅಲ್ಲಿಂದ ಮತ್ತೊಂದು ಸಣ್ಣರೂಮಿಗೆ ಪ್ರವೇಶಿಸಲು ಬಾಗಿಲಿತ್ತು. ಬಿಳಿ ಸುಣ್ಣದ ಗೋಡೆಗಳಿದ್ದವು. ಪಡಸಾಲೆ ಮತ್ತು ಎರಡನೆಯ ಮಹಡಿಗೆ ಹೋಗಲು ಇದ್ದ ಮೆಟ್ಟಿಲುಗಳು ಶುಭ್ರವಾದ ಕೆಂಪು ಇಟ್ಟಿಗೆಗಳಿಂದ ಹಾಸಲ್ಪಟ್ಟಿದ್ದವು. ಮಹಡಿಯಲ್ಲಿ ಮತ್ತೊಂದು ವಿಶಾಲವಾದ ರೂಮಿದ್ದು, ಅದರಲ್ಲಿ ಕ್ಯಾಬಿನೆಟ್ ಕೂಡಾ ಇತ್ತು. ಕೆಂಪು ಹೆಂಚುಗಳು, ಬಿಳಿಸುಣ್ಣದ ಗೋಡೆಗಳು ಸ್ವಚ್ಛ ಬೆಳಕಿಗೆ ದಾರಿಮಾಡಿದ್ದವು.

ರೌಲಿನ್ ಮಾಲಿಕನಿಗೆ ಮೊದಲೇ ತಾವು ಬರುವುದನ್ನು ಬರೆದು ತಿಳಿಸಿದ್ದರಿಂದ, ಮಾಲಿಕ ಮೇಲಿನ ರೂಮಿನಲ್ಲಿ ಇವರಿಗಾಗಿ ಕಾಯುತ್ತಾ ಕುಳಿತಿದ್ದ. ಆತ ರೌಲಿನ್ ಜೊತೆ ಅಲ್ಲಿನ ಸ್ಥಳೀಯ ಭಾಷೆಯಲ್ಲಿ ಮಾತಾಡುತ್ತಿದ್ದರು. ವಿನ್ಸೆಂಟ್‌ಗೆ ಅಲ್ಪಸ್ವಲ್ಪ ಮಾತ್ರವೇ ಅರ್ಥವಾಗುತ್ತಿತ್ತು. ರೌಲಿನ್ ವಿನ್ಸೆಂಟ್ ಕಡೆ ತಿರುಗಿದ.

"ನೀನು ಎಷ್ಟು ದಿನ ಇಲ್ಲಿ ಇರ್ತೀಯ. ಅನ್ನೋದನ್ನು ಹೇಳಬೇಕಂತಾನೆ."

"ಹೇಳು, ಖಚಿತವಾಗಿ ಹೇಳೋಕಾಗೊಲ್ಲ ಅಂತ."

"ಕಡೇ ಪಕ್ಷ ಆರು ತಿಂಗಳಾದರೂ ಇರ್ತೀಯಾ?"

"ಖಂಡಿತ! ಖಂಡಿತ!"

"ಹಾಗಾದರೆ, ತಿಂಗಳಿಗೆ ಹದಿನೈದು ಫ್ರ್ಯಾಂಕ್‌ಬಾಡಿಗೆಗೆ ಕೊಡ್ತಾನಂತೆ."

"ಹದಿನೈದು ಫ್ರ್ಯಾಂಕ್! ಇಷ್ಟು ದೊಡ್ಡ ಮನೆಗೆ!? ಆ ಹೋಟೆಲ್ ರೂಮಿಗೆ ಕೊಡುತ್ತಿರುವುದರಲ್ಲಿ ಕೇವಲ ಮೂರನೇ ಒಂದು ಭಾಗ. ಹೇಗ್‌ನಲ್ಲಿ ಸ್ಟುಡಿಯೋಗೆ ಕೊಡುತ್ತಿದ್ದುದಕ್ಕಿಂತ ಕಡಿಮೆ. ಹದಿನೈದು ಫ್ರ್ಯಾಂಕ್‌ಗಳಿಗೆ ಶಾಶ್ವತವಾಗಿ ಒಂದು ಮನೆ. ಕೂಡಲೇ ತನ್ನ ಜೇಬಿನೊಳಗಿಂದ ದುಡ್ಡನ್ನು ಈಚೆಗೆ ತೆಗೆದ.

"ಬೇಗ, ಬೇಗ ಕೊಟ್ಟಿಡು! ಬಾಡಿಗೆಗೆ ಸಿಕ್ಕಂತಾಗುತ್ತೆ!"

"ಯಾವಾಗ ನೀನು ಮನೆ ಪ್ರವೇಶಮಾಡ್ತೀ ಅಂತ ಕೇಳ್ತಿದ್ದಾರೆ."

"ಇವತ್ತೇ, ಈಗಲೇ."

"ಹಾಸ್ಕೊಳ್ಳೋದಕ್ಕೆ ಒಂದು ಚಾಪೆ, ಒಂದು ಕುರ್ಚಿ ಕೊಂಡುಕೊಳ್ತೀನಿ. ಆ ಕೆಟ್ಟ ಜಾಗದಲ್ಲಿ ಇರೋದು ಎಷ್ಟು ಕಷ್ಟ ಅಂತ ನಿನಗೆ ಗೊತ್ತಿಲ್ಲ. ಅದಕ್ಕೇ ಈ ಕೂಡಲೇ ಈ ಮನೆಗೆ ಬಂದುಬಿಡಬೇಕು!"

"ಸರಿ ಮಿಸ್ಟರ್, ನಿನ್ನಿಷ್ಟದಂತೇ ಆಗಲಿ!"

ಮನೆಮಾಲಿಕ ಅಲ್ಲಿಂದ ಹೊರಟ. ರೌಲಿನ್ ಕೂಡ ತನ್ನ ಕೆಲಸಕ್ಕೆಂದು ಹಿಂತಿರುಗಿದ. ವಿನ್ಸೆಂಟ್ ಮೇಲೆ ಕೆಳಗೆ ಹತ್ತಿ ಇಳಿದು, ಇಡೀ ಜಾಗವನ್ನು ಪರೀಕ್ಷಿಸಿದ. ಮೊನ್ನೆ ತಾನೆ ಥಿಯೋ ಕಳಿಸಿದ್ದ ಐವತ್ತು ಫ್ರ್ಯಾಂಕ್‌ಗಳು ಅವನ ಬಳಿ ಇದ್ದವು. ಜೇಬಿನಲ್ಲಿ ಇನ್ನೂ

ಮೂವತ್ತು ಫ್ರ್ಯಾಂಕ್ ಉಳಿದಿದ್ದುವು. ಕೂಡಲೆ ಅಲ್ಲಿಂದ ಹೊರಟು, ಆದಷ್ಟು ಕಡಿಮೆ ಬೆಲೆಯಲ್ಲಿ, ಚಾಪೆ ಮತ್ತು ಕುರ್ಚಿಗಳನ್ನು ಈ ಹಳದಿ ಮನೆಗೆ ತಂದ. ಕೆಳಗಿನ ರೂಮು ಮಲಗುವುದಕ್ಕೆ, ಮೇಲಿನ ರೂಮು ಸ್ಟುಡಿಯೋ ಮಾಡಿಕೊಳ್ಳುವುದಕ್ಕೆ ಯೋಚಿಸಿದ. ಚಾಪೇನ ಕೆಳಗಡೆ, ಕೆಂಪು ಹೆಂಚು ಹಾಸಿದ ನೆಲದ ಮೇಲೆ ಎಸೆದ; ಕುರ್ಚಿಯನ್ನು ಮೇಲಕ್ಕೆತ್ತಿಕೊಂಡು ಹೋಗಿ ಇರಿಸಿ, ತಕ್ಷಣವೇ ಹೋಟೆಲ್‌ನತ್ತ ಹೆಜ್ಜೆ ಹಾಕಿದ.

ವಿನ್ಸೆಂಟ್‌ನ ಬಿಲ್ಲಿಗೆ, ಕ್ಷುಲ್ಲಕ ಕಾರಣಕ್ಕಾಗಿ ನಲವತ್ತು ಫ್ರ್ಯಾಂಕ್‌ಗಳನ್ನು ಹೆಚ್ಚಿಗೆ ಸೇರಿಸಿದ. ಪೂರ್ತಿ ಹಣ ಪಾವತಿಸದೆ ಕ್ಯಾನ್‌ವಾಸ್‌ಗಳನ್ನು ಅಲ್ಲಿಂದ ತೆಗೆದುಕೊಂಡು ಹೋಗಲು ಬಿಡಲಿಲ್ಲ. ವಿನ್ಸೆಂಟ್ ತನ್ನ ಪೈಂಟಿಂಗ್ಸ್‌ನ್ನು ಬಿಡಿಸಿಕೊಳ್ಳಲು ಪೋಲೀಸರ ಸಹಾಯ ತೆಗೆದುಕೊಂಡನಾದರೂ, ಹೆಚ್ಚಿಗೆ ಸೇರಿಸಿದ್ದ ಹಣದಲ್ಲಿ ಅರ್ಧವನ್ನಾದರೂ ಕೊಡಲೇ ಬೇಕಾಯಿತು.

ಆ ದಿನ ಮಧ್ಯಾಹ್ನದ ಮೇಲೆ, ಅಲ್ಲಿಯೇ ಇದ್ದ ಒಬ್ಬ ಅಂಗಡಿಯವನು ಸಾಲದ ಮೇಲೆ ಸ್ಟೋವ್, ಎರಡು ಅಡಿಗೆ ಪಾತ್ರೆಗಳು, ಸೀಮೆಎಣ್ಣೆ ದೀಪ, ಎಲ್ಲವನ್ನೂ ಕೊಡಲು ಒಪ್ಪಿದ. ವಿನ್ಸೆಂಟ್ ಬಳಿ ಕೇವಲ ಮೂರೇ ಮೂರು ಫ್ರ್ಯಾಂಕ್‌ಗಳು ಉಳಿದಿದ್ದವು. ಅದರಲ್ಲಿಯೇ ಕಾಫಿ, ಬ್ರೆಡ್ಡು, ಆಲೂಗಡ್ಡೆ, ಸೂಪ್‌ಗಾಗಿ ಒಂದಿಷ್ಟು ಮಾಂಸವನ್ನು ಖರೀದಿಸಿದ. ಬಿಡಿಗಾಸೂ ಅವನಲ್ಲಿ ಇರಲಿಲ್ಲ. ಕೆಳಗಿನ ಭಾಗದಲ್ಲಿ ಅಡಿಗೆಮನೆ ಮಾಡಿಕೊಂಡ.

ರಾತ್ರಿ ಆಯಿತು. ತನ್ನ ಪುಟ್ಟ ಸ್ಟೋವ್ ಮೇಲೆ ಕಾಫಿ ಮಾಡಿದ; ಸೂಪೂ ಮಾಡಿದ. ಅಲ್ಲಿ ಟೇಬಲ್ ಇರಲಿಲ್ಲ. ಚಾಪೆ ಮೇಲೆ ಪೇಪರ್ ಹರಡಿದ. ಚಕ್ಕಂಬಟ್ಟೆ ಹಾಕಿ ಕುಳಿತ. ಅವನ ಬಳಿ ನೈಫ್ ಮತ್ತು ಫೋರ್ಕ್ ಇರಲಿಲ್ಲವಾಗಿ, ಪೈಂಟ್ ಬ್ರಷ್‌ಗಳ ಹಿಂಭಾಗವನ್ನೇ ಆಲೂಗಡ್ಡೆ ಮತ್ತು ಮಾಂಸದ ಚೂರುಗಳನ್ನು ಎತ್ತಿಕೊಳ್ಳಲು ಉಪಯೋಗಿಸಿದ. ಇದರಿಂದಾಗಿ ಆ ಚೂರುಗಳಿಗೆ ಪೈಂಟ್‌ಗಳ ವಾಸನೆ ಹತ್ತಿತ್ತು.

ಊಟವಾದ ಮೇಲೆ ಸೀಮೆಎಣ್ಣೆ ಬುಡ್ಡಿ ದೀಪವನ್ನು ಎತ್ತಿಕೊಂಡು ಮೇಲಿನ ರೂಮಿಗೆ ಹೋದ. ಆ ರೂಮು ಖಾಲಿಖಾಲಿಯಾಗಿ ಕಾಣುತ್ತಿತ್ತು. ಒಂದು ಕಡೆ ಮಾತ್ರ ಈಸಲ್ ಸ್ಟಾಂಡ್ ನಿಂತಿತ್ತು. ಅಲ್ಲಿದ್ದ ಕಿಟಕಿಯಿಂದ ಚಂದ್ರನ ಬೆಳಕು ಹರಿದಿತ್ತು. ದೂರದಲ್ಲಿ ಕಿಟಕಿಯ ಬೆನ್ನಿಗೆ ಲಾಮಾರ್ಟಿನ್‌ನ ಗಾರ್ಡನ್ ಕಾಣಿಸುತ್ತಿತ್ತು.

ಚಾಪೆಯ ಮೇಲೆ ಮಲಗಲು ಹೋದ. ಬೆಳಿಗ್ಗೆ ಎದ್ದಾಗ ಕಿಟಕಿ ತೆರೆದು ಹೊರಗೆ ನೋಡಿದರೆ, ತೋಟದ ಹಸಿರು, ಉದಯಿಸುತ್ತಿದ್ದ ಸೂರ್ಯ, ಡೊಂಕು ಡೊಂಕಾಗಿ ಊರಿನೆಡೆಗೆ ಸಾಗಿದ ರಸ್ತೆ ಎಲ್ಲವೂ ಅವನ ಕಣ್ಣಿಗೆ ಬಿತ್ತು. ಮತ್ತೊಮ್ಮೆ ನೆಲಕ್ಕೆ ಹಾಸಿದ್ದ ಕೆಂಪು ಹೆಂಚುಗಳನ್ನು, ಶುಭ್ರವಾಗಿದ್ದ ಗೋಡೆಗಳನ್ನು, ವಿಶಾಲವಾದ ಮನೆಯನ್ನು ಗಮನವಿಟ್ಟು ನೋಡಿದ. ಒಲೆಯ ಮೇಲೆ ಕಾಫಿ ಕುದಿಸಿ, ಲೋಟಕ್ಕೆ ಬಗ್ಗಿಸಿಕೊಂಡು ಕುಡಿಯುತ್ತಾ ಮನೆಯನ್ನು ಹೇಗೆ ಫರ್ನಿಷ್ ಮಾಡಬೇಕೆಂದು ಆಲೋಚಿಸತೊಡಗಿದ. ಯಾವ ಪಿಕ್ಚರ್ಸ್ ಯಾವ ಗೋಡೆಗಳ ಮೇಲಿರಬೇಕು,

ತನ್ನದೇ ಆಗಿರುವ ಈ ಮನೆಯಲ್ಲಿ ಸಂತೋಷವಾಗಿ ಕಳೆಯಲು ಏನು ಮಾಡಬೇಕು – ಎಂದೆಲ್ಲ ಯೋಚಿಸಲು ತೊಡಗಿದ.

ಮಾರನೇದಿನ ಅವನ ಗೆಳೆಯ ಪಾಲ್ ಗಾಗಿನ್‌ನಿಂದ ಪತ್ರ ಬಂತು. ಅವನ ಸ್ಥಿತಿ ದಾರುಣವಾಗಿತ್ತು. ಬಡತನ, ಅಸಹಾಯಕತೆಗಳಲ್ಲಿ ನರಳುತ್ತಾ ಯಾವುದೋ ದರಿದ್ರ ಕೆಫೆಯಲ್ಲಿ ಬಂದಿಯಾಗುಳಿದಿದ್ದ. "ಈ ನರಕದ ಕೂಪದಿಂದ ನನಗೆ ಹೊರಗೆ ಬರಲು ಸಾಧ್ಯವಾಗುತ್ತಿಲ್ಲ. ಏಕೆಂದರೆ ಕೆಫೆಯ ಮಾಲಿಕನಿಗೆ ನಾನು ಹಣ ಬಾಕಿಯಿರಿಸಿಕೊಂಡಿದ್ದೇನೆ. ಅದನ್ನು ಕೊಡದೆ ನಾನು ಹೊರಗೆ ಬರುವಂತಿಲ್ಲ. ನನ್ನ ಕ್ಯಾನ್‌ವಾಸಗಳನ್ನೆಲ್ಲ ಕೋಣೆಯ ಒಂದು ಮೂಲೆಯಲ್ಲಿ ತುರುಕಿ ಬೀಗ ಜಡಿದು ಬಿಟ್ಟಿದ್ದಾನೆ. ಮನುಷ್ಯ ಅನುಭವಿಸುವ ಹಲವಾರು ಬಗೆಯ ನೋವಿನ ದುರಂತಗಳಲ್ಲಿ ಭಯಂಕರವಾದದ್ದು ಹಣವಿಲ್ಲದಿರುವುದು ಎಂಬುದನ್ನು ನೆನಪಿಸಿಕೊಂಡಾಗ ಹುಚ್ಚನಂತಾಗುತ್ತೇನೆ. ಶಾಶ್ವತವಾಗಿ ಇನ್ನುಮುಂದೆ ಭಿಕ್ಷೆ ಬೇಡುವುದೊಂದೇ ನನಗೆ ಉಳಿದಿರುವ ದಾರಿ."

ವಿನ್ಸೆಂಟ್ ಕಲಾವಿದರ ಗೋಳಿನ ಬಗ್ಗೆ ಯೋಚಿಸಿದ. ಪ್ರಪಂಚದಲ್ಲಿ ಎಲ್ಲ ಕಲಾವಿದರದು ಒಂದೇ ಸ್ಥಿತಿ, ಬಡತನ, ಅವಮಾನ, ಅವಹೇಳನ, ಉಪವಾಸ, ಹಿಂಸೆ– ಇವೇ ಇವರ ಪಾಲಿನ ಆಸ್ತಿ. ಇಂತಹ ಸ್ಥಿತಿಯೇ ಸಾಯುವವರೆಗೂ ಅವರನ್ನು ಕಾಡುತ್ತದೆ. ಯಾಕೆ? ಅವರು ಮಾಡಿದ ಅಪರಾಧವಾದರೂ ಏನು? ಅಸ್ಪೃಶ್ಯರಂತೆ, ಬಹಿಷ್ಕೃತರಂತೆ ಸಮಾಜದಿಂದ ಹೀಗಳಿಸಿಕೊಳ್ಳಲು ಅವರು ಮಾಡಿದ ಪಾಪವಾದರೂ ಏನು? ಇಂತಹ ಯಾತನೆಯಲ್ಲಿ ಕ್ಷಣಗಳನ್ನು ಕಳೆಯುವ ಅವರಿಗೆ ಒಳ್ಳೆಯದನ್ನು ಸಾಧಿಸಲು ಸಾಧ್ಯವಾಗುವುದಾದರೂ ಹೇಗೆ? ಭವಿಷ್ಯದಲ್ಲಿನ ಪೈಂಟರ್ ಅಥವಾ ಕಲಾವಿದನಿಗಾದರೂ ಇಂತಹ ದಾರುಣ ಸ್ಥಿತಿಯಲ್ಲಿ, ದರಿದ್ರ ಕೆಫೆಗಳಲ್ಲಿ ಬದುಕಬೇಕಾದ ಸನ್ನಿವೇಶಗಳು, ಸುಖ, ನೆಮ್ಮದಿಗಳನ್ನು ಅರಸಿ ಸೂಳೆಯರ ಮನೆಗಳಿಗೆ ಹೋಗುವ ಪರಿಸ್ಥಿತಿಯಾಗಲಿ ಬಹುಶಃ ಬರಲಾರದೇನೋ.

ಬಡಪಾಯಿ ಗಾಗಿನ್. ಬ್ರಿಟ್ಟಾನಿಯ ಕೊಳಚೆ ಕೆಫೆಯಲ್ಲಿ ಅನಾರೋಗ್ಯದಿಂದ, ಹಸಿವಿನಿಂದ ನರಳುತ್ತಾ ಬಿದ್ದಿದ್ದಾನೆ. ಅವನಿಗೆ ಸಾಂತ್ವನ ಹೇಳಲು ಹತ್ತಿರದಲ್ಲಿ ಗೆಳೆಯರೊಬ್ಬರೂ ಇಲ್ಲ. ಬಿಡಿಗಾಸಿಲ್ಲದೆ ಊಟವಿಲ್ಲ, ಚಿಕಿತ್ಸೆಯಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಒಂದು ವೇಲೆ ಗಾಗಿನ್‌ನಂಥವನು ಸತ್ತು ಹೋದರೆ?! ಅವನು ಪೈಂಟಿಂಗ್ ಮಾಡುವುದನ್ನೇ ನಿಲ್ಲಿಸಿಬಿಟ್ಟರೆ?!..... ವಿನ್ಸೆಂಟ್‌ನ ಅಭಿಪ್ರಾಯದಲ್ಲಿ ಗಾಗಿನ್ ಬಹಳ ದೊಡ್ಡ ಕಲಾವಿದ; ದೊಡ್ಡವ್ಯಕ್ತಿ. ಇಂಥವನು ಇಲ್ಲದಂತಾದರೆ ಕಲಾ ಜಗತ್ತಿಗೇ ತುಂಬಲಾರದ ನಷ್ಟ! ಎಂದುಕೊಂಡ.

ಬಂದಿದ್ದ ಲೆಟರನ್ನು ಜೇಬಿಗೆ ತುರುಕಿಕೊಂಡ ರ್‍ಹೋನ್ ನದಿ ದಂಡೆಗುಂಟ ನಡೆದ. ಅಲ್ಲಿ ಒಂದು ಸಣ್ಣ ಹಡಗು ಕಲ್ಲಿದ್ದಲನ್ನು ಸಾಗಿಸುವುದಕ್ಕೆ ಸಿದ್ಧವಾಗಿ ನಿಂತಿತ್ತು.

ದೋಣಿಗಳಿದ್ದ ಕೂಲಿಕಾರರು ನೀಲಿ ಮತ್ತು ಬಿಳಿ ಉಡುಪಿನಲ್ಲಿದ್ದವರು ಹತ್ತುತ್ತಾ ಇಳಿಯುತ್ತಾ ಇದ್ದರು.

ಇವನು ಹೊಕುಸಾಯ್ ಎಂಬ ದೋಣಿ ಹತ್ತಿ ಪ್ಯಾರಿಸ್ ತಲುಪಿದ. ಅವನಿಗೆ ಪೇರ್ ಟಾಂಗೆಯ ಬಳಿಗೆ ಮತ್ತು ಗಾಗಿನ್ ಬಳಿಗೆ ಹೋಗುವುದಿತ್ತು. ಗಾಗಿನ್‌ನನ್ನು ಬಹಳವಾಗಿ ಪ್ರೀತಿಸುತ್ತಿದ್ದ.

ಅವನಿಗೆ, ಏನು ಮಾಡಬೇಕೆಂದು ಆಲೋಚಿಸಿದ್ದ. ತಾನಿರುವ ಮನೆ ಹೇಗಿದ್ದರೂ ವಿಶಾಲವಾಗಿದೆ. ಎರಡು ಪ್ರತ್ಯೇಕ ಕೋಣೆಗಳಿವೆ. ಇಬ್ಬರು ಆರಾಮವಾಗಿ ಅದರಲ್ಲಿರಲು ಯಾವ ಅಡ್ಡಿಯೂ ಇರಲಿಲ್ಲ. ತಮ್ಮ ಅಡುಗೆ ತಾವೇ ಮಾಡಿಕೊಂಡು, ತಮ್ಮ ಬಣ್ಣಗಳನ್ನು ತಾವೇ ತಯಾರಿಸಿಕೊಂಡು ಜಾಗರೂಕತೆಯಿಂದ ಖರ್ಚು ಮಾಡಿದರೆ, ತನಗೆ ಬರುತ್ತಿದ್ದ ನೂರೈವತ್ತು ಫ್ರ್ಯಾಂಕುಗಳಲ್ಲಿ ಜೀವನ ನಡೆಸುವುದು ಕಷ್ಟವಾಗುವುದಿಲ್ಲ ಎಂದುಕೊಂಡ. ಹೆಚ್ಚಿನ ಬಾಡಿಗೆಯೇನೂ ಕೊಡಬೇಕಿಲ್ಲ. ಆಹಾರವೂ ಮಿತವಾಗಿರುತ್ತೆ. ಎಲ್ಲಕ್ಕಿಂತ ಹೆಚ್ಚಾಗಿ ತಾನು ಅತಿಯಾಗಿ ಪ್ರೀತಿಸುವ ಪೈಂಟರ್ ಫ್ರೆಂಡ್ ಜೊತೆಗೆ ಇದ್ದರೆ ಎಷ್ಟು ಅದ್ಭುತ! ಅವನಿಂದ ಪೈಂಟಿಂಗ್‌ಗೆ ಸಂಬಂಧಪಟ್ಟ ವಿಷಯಗಳನ್ನೆಲ್ಲ ಕಲಿಯಬಹುದು!

ಇಲ್ಲಿವರೆಗೆ, ಒಂಟಿಯಾಗಿ ಬದುಕುವುದು ಎಷ್ಟು ಹಿಂಸೆ ಎಂಬುದು ಅರಿವಿಗೆ ಬಂದಿರಲಿಲ್ಲ. ಒಂದು ವೇಳೆ ಥಿಯೋ ಕೊಡೋ ನೂರೈವತ್ತು ಫ್ರ್ಯಾಂಕ್ ಸಾಕಾಗಲಿಲ್ಲ ಎನಿಸಿದರೆ, ಗಾಗಿನ್ ತಿಂಗಳಿಗೊಂದರಂತೆ ಕಳಿಸುವ ಕ್ಯಾನ್‌ವಾಸ್‌ಗೆ ಬದಲಾಗಿ ಇನ್ನು ಐವತ್ತು ಫ್ರ್ಯಾಂಕ್ ಸೇರಿಸಿಕಳಿಸುತ್ತಾನೆ.

ಹೌದೌದು! ಗಾಗಿನ್, ತನ್ನ ಜೊತೆಯಲ್ಲಿ ಆರ್ಲೆನಲ್ಲಿ ಇರಬೇಕು. ಪ್ರಾವೆನ್ಸ್‌ನ ಖಾಯಿಲೆಗಳೆಲ್ಲ, ಆರ್ಲೆಯ ಪ್ರಖರ ಬಿಸಿಲಿನಿಂದ ಪೂರ್ತಿ ಹೊರಟು ಹೋಗುತ್ತೆ. (ವಿನ್ಸೆಂಟ್ ವಿಷಯದಲ್ಲಿ ಆದಂತೆ!) ಇಬ್ಬರೂ ಒಟ್ಟಿಗೆ ಸ್ಟುಡಿಯೋದಲ್ಲಿ ಕೆಲಸ ಮಾಡಬಹುದು; ಬಿಸಿಲಿನಲ್ಲಿ ಹೊರಗೆ ಓಡಾಡಬಹುದು. ಡೆಲಾಕ್ರ್ವಾ ಮತ್ತು ಮೊಂಟಿಸೆಲ್ಲಿಯರ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಬಹುದು. ಪೈಂಟಿಂಗ್ ಅನ್ನು ಬಿಸಿಲಿನಲ್ಲಿ ಚೆನ್ನಾಗಿ ಮೀಯಿಸಬಹುದು. ಪ್ರಪಂಚವನ್ನು ಕ್ರಾಂತಿಕಾರಕವಾದ ನಿಸರ್ಗದೆಡೆಗೆ ಎಚ್ಚರಿಸಬಹುದು.

ಗಾಗಿನ್‌ನನ್ನು ರಕ್ಷಿಸಿಕೊಳ್ಳಲೇಬೇಕು! ವಿನ್ಸೆಂಟ್ ತಿರುಗಿ ಹಳದಿಮನೆಗೆ ಓಡೋಡಿ ಬಂದ. ಕೋಣೆಗಳ ವ್ಯವಸ್ಥೆ ಹೇಗೆ ಆಗಬೇಕೆಂಬ ಆಲೋಚನೆಯಲ್ಲಿ, ಬಹಳವಾಗಿ ಭಾವೋದ್ರಿಕ್ತನಾಗಿದ್ದ.

"ಪಾಲ್ ಮತ್ತು ನಾನು ಒಬ್ಬೊಬ್ಬರೂ ಒಂದೊಂದು ರೂಮು ಹಿಡೀತೇವೆ. ಕೆಳಗಡೆಯಲ್ಲಿನ ಸ್ಟುಡಿಯೋದಲ್ಲಿ ಇಬ್ಬರೂ ಕೆಲಸ ಮಾಡ್ತೇವೆ. ಹಾಸಲು, ಹೊದೆಯಲು ಬೇಕಾದ ಹಾಸಿಗೆ, ಹೊದಿಕೆಗಳನ್ನು, ಟೇಬಲ್ ಕ್ಲಾತ್, ಟೇಬಲ್ಲುಗಳನ್ನು ಕೊಳ್ಳುತ್ತೇನೆ. ನಾವಿಬ್ಬರೂ ನಿಜವಾದ ಮನೆಯ ಸುಖ ಅನುಭವಿಸುತ್ತೇವೆ. ಮನೆಯನ್ನೆಲ್ಲ ಪೈಂಟಿಂಗ್ಸ್‌ನಿಂದ, ಹೂಗಳಿಂದ ಅಲಂಕರಿಸುತ್ತೇವೆ."

"ಓ ಪಾಲ್, ಮತ್ತೆ ನಿನ್ನನ್ನು ನನ್ನ ಜೊತೆ ಊಹಿಸಿಕೊಳ್ಳುವುದೇ ಒಂದು ರೋಮಾಂಚಕಾರಿ ಅನುಭವ!"

–೬–

ವಿಷಯ, ಪರಿಸ್ಥಿತಿ ಅವನು ಊಹಿಸಿಕೊಂಡಷ್ಟು ಸುಲಭವಾಗಿರಲಿಲ್ಲ. ಥಿಯೋ ಗಾಗಿನ್‌ನ ಕ್ಯಾನ್‌ವಾಸ್‌ಗೆಂದು ಐವತ್ತು ಫ್ರ್ಯಾಂಕ್ ಹೆಚ್ಚಿಗೆ ಕೊಡುವುದರಲ್ಲಿ ಅನುಮಾವಿರಲಿಲ್ಲ. ಆದರೆ ರೈಲ್ವೆ ಟಿಕೆಟ್ಟಿಗೆ ಕೊಡಲು ಯಾರಲ್ಲಿಯೂ ಹಣವಿರಲಿಲ್ಲ. ಅಲ್ಲದೆ ಪಾಂಟ್–ಆವೆನ್‌ನಿಂದ ಗಾಗಿನ್‌ನನ್ನು ಕರೆತರುವುದು ದೊಡ್ಡ ಸಮಸ್ಯೆಯಾಗಿತ್ತು. ಕದಲುವುದಕ್ಕೂ ಸಾಧ್ಯವಿಲ್ಲದಷ್ಟು ಅವನ ಆರೋಗ್ಯ ಕೆಟ್ಟಿತ್ತು. ಸಾಲವನ್ನು ತುಂಬುವುದೂ ಅವನಿಗೂ ಆಗುತ್ತಿರಲಿಲ್ಲ. ಅಲ್ಲದೆ ಹೊಸ ಹೊಸ ಕ್ಯಾನ್‌ವಾಸ್‌ಗಳನ್ನು ಮಾಡುವ ಚೈತನ್ಯವಾಗಲೀ, ಉತ್ಸಾಹವಾಗಲೀ, ಗಾಗಿನ್‌ನಲ್ಲಿ ಉಳಿದಿರಲಿಲ್ಲ. ಪ್ಯಾರಿಸ್, ಆರ್ಲೆ, ಪಾಂಟ್–ಆವೆನ್‌ಗಳ ನಡುವೆ ಕೇವಲ ಪತ್ರವ್ಯವಹಾರ ಮಾತ್ರವೇ ನಡೆದಿತ್ತು.

ವಿನ್ಸೆಂಟ್ ಆ ಹಳದಿ ಮನೆ ಜೊತೆಗೆ ತುಂಬಾ ಆಪ್ತವಾದ ನಂಟನ್ನು ಬೆಳೆಸಿಕೊಂಡು ಬಿಟ್ಟಿದ್ದ. ಒಂದು ಟೇಬಲ್, ಡ್ರಾಯರ್‌ಗಳಿದ್ದ ಬೀರುಗಳನ್ನು, ಥಿಯೋ ಕಳಿಸಿದ ಹಣದಿಂದಲೇ ಖರೀದಿಸಿದ.

"ವರ್ಷದ ಕೊನೆ ಹೊತ್ತಿಗೆ, ನಾನು ಬೇರೆಯೇ ವ್ಯಕ್ತಿಯಾಗಿರುತ್ತೇನೆ, ನೋಡುತ್ತಿರು. ಹೀಗೆಂದ ಮಾತ್ರಕ್ಕೆ, ಆರ್ಲೆಯಿಂದ ಬಂದು ಬಿಡುತ್ತೇನೆಂದಲ್ಲ ಈ ಜಾಗ ಬಿಟ್ಟು ಬರುವುದೇ ಇಲ್ಲ. ಆರ್ಲೆಯೇ ನನ್ನ ಖಾಯಂ ಜಾಗ. ಇಲ್ಲಿದ್ದುಕೊಂಡೇ, ದೊಡ್ಡ, ಮಹತ್ವದ ಪೈಂಟರ್ ಎಂದು ಗುರುತಿಸಿಕೊಳ್ಳುತ್ತೇನೆ. ಆರ್ಲೆಯಲ್ಲಿ ನಿನ್ನದೊಂದು ಹಳ್ಳಿಗಾಡಿನ ಮನೆಯಿದೆಯೆಂದೇ ಭಾವಿಸಿಕೋ. ನಿನ್ನ ರಜೆಯನ್ನು ಇಲ್ಲಿಯೇ ಕಳೆಯಲು ಬೇಕಾದ ವ್ಯವಸ್ಥೆ ಮಾಡಲು ಕಾತುರನಾಗಿದ್ದೇನೆ."

ಬದುಕೋದಕ್ಕೆ ಎಷ್ಟು ಕಡಿಮೆ ಖರ್ಚಿನಲ್ಲಿ ಆಗುತ್ತೋ ಅಷ್ಟು ಮಾತ್ರವೇ ಖರ್ಚು ಮಾಡುತ್ತಿದ್ದ. ಪ್ರತಿಸಲವೂ ತಾನು ಮತ್ತು ಮನೆ – ಇವೆರಡರಲ್ಲಿ ಯಾವುದು ಮುಖ್ಯ ಎಂದೆಲ್ಲಾ ಯೋಚಿಸಿ, 'ಮನೆ' ಗೇ ಪ್ರಾಮುಖ್ಯತೆ ಕೊಡುತ್ತಿದ್ದ. ತಿನ್ನುವ ಮಾಂಸಕ್ಕಿಂತ, 'ಮಜೋಲೊಕ ಮಗ್' ತನಗೆ ಬೇಕಾದ ಹೊಸ ಷೂಗಳಿಗೆ ಬದಲಾಗಿ ಗಾಗಿನ್‌ನ ಹಾಸಿಗೆಗೆ, ಹಸಿರು ಕ್ವಿಲ್ಟ್, ತನ್ನ ಕ್ಯಾನ್‌ವಾಸ್‌ಗೆ ಬೇಕಾದ ಪೈನ್ ಫ್ರೇಮ್‌ಗೆ ಬದಲಾಗಿ, ರಷ್ ಬಾಟಮ್ ಚೇರ್‌ಗಳು ಅವನಿಗೆ ತೀರಾ ಅಗತ್ಯವೆನಿಸಿತು.

ಅವನ ಆಯ್ಕೆಯಲ್ಲಿ ಮೊದಲು ನಿಲ್ಲುತ್ತಿದ್ದುದು ಅವನ 'ಮನೆ' ಹೊರತು ತಾನಾಗಿರಲಿಲ್ಲ.

ಹಳದಿಮನೆ ಅವನ ಮನಸ್ಸಿಗೆ ಪ್ರಶಾಂತತೆಯನ್ನು ನೀಡಿತ್ತು. ಭವಿಷ್ಯದ ಭದ್ರತೆಯ ಬಗ್ಗೆಯೇ ಯೋಚಿಸುತ್ತಿದ್ದ. ಕಾರಣವಿಲ್ಲದೆ, ಹುಚ್ಚುಚ್ಚಾದ ಆಲೋಚನೆಗಳಿಗೆ ಬಿದ್ದ. ಇಲ್ಲಿಂದ ಹೋಗೋದೇ ಇಲ್ಲ. ಅದಕ್ಕಾಗಿಯೇ ಇಲ್ಲೊಂದು ಶಾಶ್ವತವಾದ ಸ್ಟುಡಿಯೋ ನೆಲೆಗೊಳ್ಳಬೇಕು. ತಾನು ಹೊರಟು ಹೋದಮೇಲೆ ಇನ್ಯಾರೋ ಪೈಂಟರ್ ಒಬ್ಬ

ಬರುತ್ತಾನೆ. ಅವನ ನಂತರ ಮತ್ತೊಬ್ಬ. ಹೀಗೆ ಹಲವು ತಲೆಮಾರಿನ ಪೈಂಟರ್‌ಗಳು ಬರುತ್ತಾರೆ. ಸೌತ್‌ನ ಪರಂಪರೆಯನ್ನು ಪ್ರತಿನಿಧಿಸುತ್ತಾರೆ; ವ್ಯಾಖ್ಯಾನಿಸುತ್ತಾರೆ. ಆದ್ದರಿಂದ ಆ ಮನೆಗೆ ಖರ್ಚು ಮಾಡಲು ಹಿಂದೆ ಮುಂದೆ ನೋಡುತ್ತಿರಲಿಲ್ಲ. ತಾನು ಏನನ್ನೂ ಮಾಡದೆ ತನ್ನ ಮೇಲೆ ಖರ್ಚು ಮಾಡಿದ್ದಕ್ಕೆ ತಕ್ಕ ಬೆಲೆ ನೀಡುವ ಉದ್ದೇಶದಂತೆ, ಮನೆಯನ್ನು ಪೈಂಟಿಂಗ್ಸ್‌ನಿಂದ ಅಲಂಕರಿಸಬೇಕೆಂಬ ವಿಚಾರವನ್ನು ತಲೆ ತುಂಬಾ ತುಂಬಿಕೊಂಡ.

ಹೊಸ ಚೈತನ್ಯೋತ್ಸಾಹಗಳಿಂದ ಕೆಲಸಕ್ಕೆ ಇಳಿದ. ಈಗ ಅವನಿಗೆ ಅರ್ಥಮಾಡಿಕೊಳ್ಳುವಷ್ಟು ಪ್ರಬುದ್ಧತೆ ಲಭಿಸಿತ್ತು. ಮಾಂಟ್‌ಮಜೂರ್‌ಗೆ ಒಂದೈವತ್ತು ಬಾರಿ ಹೋಗಿ ಬಂದ. ಅಲ್ಲಿನ ಪರಿಸ್ಥಿತಿಯನ್ನು ಸರಿಯಾಗಿ ಗ್ರಹಿಸುವುದು ಅವನ ಉದ್ದೇಶವಾಗಿತ್ತು. ಬೀಸಿದ ಬಿರುಗಾಳಿಯಿಂದಾಗಿ, ಕ್ಯಾನ್‌ವಾಸ್ ಮತ್ತು ಬ್ರಷ್‌ಗಳೊಂದಿಗೆ ಕೆಲಸಮಾಡುವುದು ತೀರಾ ಪ್ರಯಾಸಕರವಾಗಿತ್ತು. ಆದರೂ ಪಟ್ಟು ಬಿಡದೆ, ಎದೆಗೆಡಿದೆ ದಿನಕ್ಕೊಂದು ಕ್ಯಾನ್‌ವಾಸ್‌ನಂತೆ ಕೆಲಸ ಮಾಡಿದ!

"ನಾಳೆದಿನ ಬಿಸಿಲು-ಬೆಂಕಿಯಾಗಿರುತ್ತೆ." ಒಂದು ಸಂಜೆ, ಕೆಫೆಯೊಂದರಲ್ಲಿ ಕುಳಿತು ಮಾತನಾಡುತ್ತಿದ್ದಾಗ, ರೌಲಿನ್ ಹೇಳಿದ. "ಆಮೇಲೆ, ಚಳಿಗಾಲ."

"ಆರ್ಲೆನಲ್ಲಿ ಚಳಿಗಾಲ ಹೇಗಿರುತ್ತೆ?"

"ಅಯ್ಯೊಬ್ಬ! ಸಹಿಸಿಕೊಳ್ಳೋಕೇ ಆಗೊಲ್ಲ. ಮಳೆ, ಗಾಳಿ, ಚಳಿ! – ಭಯಂಕರ!..... ಆದರೆ ಚಳಿಗಾಲ ಇಲ್ಲಿ ಬಹಳ ದಿನ ಇರೊಲ್ಲ....... ಅಬ್ಬಬ್ಬ ಅಂದ್ರೆ, ಎರಡು ತಿಂಗಳು!"

"ಹಾಗಾದರೆ, ನಾಳೆ ಒಂದೇ ದಿನ. ಇಷ್ಟು ಹಿತವಾಗಿರೋದು!..... ನಾನು ಯಾವ ಜಾಗದಲ್ಲಿ ಮುಂದೆ ಕೆಲಸ ಮಾಡಬೇಕು ಅನ್ನೋದು ನನಗೆ ಗೊತ್ತು ರೌಲಿನ್, ಸ್ವಲ್ಪ ಕಲ್ಪನೆ ಮಾಡಿಕೋ..... ಶರತ್ಕಾಲದ ಒಂದು ತೋಟ, ಎರಡು ಸೈಪ್ರಸ್ ಮರಗಳು, ಮೂರು ಚಿಕ್ಕಚಿಕ್ಕ ಚೆಸ್ಟ್‌ನಟ್ ಮರಗಳು, ಟೊಬ್ಯಾಕೋ, ಆರೆಂಜ್ ಬಣ್ಣದ ಅವುಗಳ ಎಲೆಗಳು, ನಿಂಬೆಹಣ್ಣಿನ, ತೆಳುಹಳದಿ ಬಣ್ಣದ ಎಲೆಗಳಿಂದ ಕೂಡಿದ 'ಯೂ' ಮರ, ಎರಡು ಪೊದೆಗಳು, ಅವುಗಳ ರಕ್ತಗೆಂಪು, ಸ್ಕಾರ್‌ಲೆಟ್ ಪರ್‌ಪಲ್ ಎಲೆಗಳು, ಮರಳು, ಹುಲ್ಲು, ನೀಲಿ ಆಕಾಶ!"

"ಮಿಸ್ಟರ್ ನೀನು ಹೇಳುವುದನ್ನು ಕೇಳುತ್ತಿದ್ದರೆ, ಇಷ್ಟು ದಿನ ನಾನು ಕುರುಡನಾಗಿದ್ದೆ ಎನಿಸುತ್ತದೆ!"

ಮಾರನೆದಿನ ಸೂರ್ಯೋದಯದಲ್ಲಿಯೇ ಎದ್ದ. ಉತ್ಸಾಹದ ಉತ್ತುಂಗದಲ್ಲಿದ್ದ. ಗಡ್ಡ ಮೀಸೆಗಳನ್ನು ನಯಗೊಳಿಸಿದ. ನೀಟಾಗಿ ತಲೆ ಬಾಚಿಕೊಂಡ. ಅವನಲ್ಲಿದ್ದ ಒಂದೇ ಒಂದು ಸೆಟ್ ಬಟ್ಟೆ ಧರಿಸಿದ. ಬಿಸಿಲಿಗೆ, ಸೂರ್ಯನಿಗೆ ವಿದಾಯ ಹೇಳಲು ಸಜ್ಜಾದಂತೆ, ಪ್ಯಾರಿಸ್‌ನಿಂದ ತಂದಿದ್ದ 'ರ್‍ಯಾಬಿಟ್ ಫರ್ ಬೊನೆಟ್' ಧರಿಸಿ ಹೊರಗೆ ಹೆಜ್ಜೆ ಹಾಕಿದ.

ರೌಲಿನ್ ಹೇಳಿದ್ದು ಸರಿಯಿತ್ತು. ಸೂರ್ಯ ನೆತ್ತಿಗೇರಿದ್ದ. ಬಿಸಿಲಿನ ಹಳದಿ ಚೆಂಡಿನಂತಿದ್ದ. ತಲೆಗೆ ಬೊನೆಟ್ ಇದ್ದರೂ ಬಿಸಿಲಿನ ಝಳ ಕಣ್ಣು ಚುಚ್ಚುತ್ತಿತ್ತು. 'ಆಟಮ್ ಗಾರ್ಡನ್' ಟಾರಸ್ಕಾನ್‌ಗೆ ಹೋಗುವ ದಿಕ್ಕಿನಲ್ಲಿ, ಎರಡು ಗಂಟೆಗಳ ನಡಿಗೆಯ ಅಂತರದಲ್ಲಿತ್ತು. ಗುಡ್ಡದ ಪಕ್ಕದಲ್ಲಿತ್ತು. ವಿನ್ಸೆಂಟ್, ನೇಗಿಲಗೆರೆಗಳಿದ್ದ ಮಣ್ಣಿನಲ್ಲಿ ತನ್ನ ಈಸಲ್ ಅನ್ನು ನೆಟ್ಟ. ಅದಕ್ಕೆ ಕ್ಯಾನ್‌ವಾಸನ್ನು ಏರಿಸಿದ. ಇನ್ನೂ ಅಷ್ಟಾಗಿ ಹೊತ್ತೇರದಿದ್ದರೂ ಸೂರ್ಯನ ಬಿಸಿಲು ಅವನ ಮಂಡೆ ಸುಡುತ್ತಿತ್ತು.

ತನ್ನ ಕಣ್ಣ ಮುಂದಿದ್ದ ದೃಶ್ಯವನ್ನು ಅವಲೋಕಿಸಿದ. ಅದಕ್ಕೆ ಬೇಕಾದ ಬಣ್ಣಗಳ ಸಂಯೋಜನೆಯ ಬಗ್ಗೆ ಯೋಚಿಸಿದ. ಅದರ ಡಿಸೈನನ್ನು ಮನಸ್ಸಿನಲ್ಲಿ ರೂಪಿಸಿಕೊಂಡ. ಆ ದೃಶ್ಯದ ಸಮಗ್ರ ರೂಪುರೇಷೆಗಳನ್ನು ಸರಿಯಾಗಿ ಗ್ರಹಿಸಿದ ನಂತರ ಬ್ರಷ್‌ಗಳನ್ನು ಮೃದುಗೊಳಿಸಿಕೊಂಡ. ಬಣ್ಣಗಳ ಟ್ಯೂಬುಗಳ ಮುಚ್ಚಳ ತೆಗೆದ. ಚಾಕುವನ್ನು ಸ್ವಚ್ಛಮಾಡಿಕೊಂಡ. ದಟ್ಟವಾದ ಬಣ್ಣದ ಮೇಲೆ ಪಿಗ್‌ಮೆಂಟ್ ಅನ್ನು ಹರಡಿದ. ಮತ್ತೊಮ್ಮೆ ಗಾರ್ಡನ್‌ನತ್ತ ನೋಡಿದ. ಕ್ಯಾನ್‌ವಾಸ್ ಮೇಲೆ, ಮನದಲ್ಲಿ ಮೂಡಿಸಿಕೊಂಡ ದೃಶ್ಯವನ್ನು ಬಗೆಬಗೆಯ ಬಣ್ಣಗಳ ಮಿಶ್ರಣದಲ್ಲಿ ಬ್ರಷ್‌ಗಳನ್ನು ಅದ್ದಿ ಅದ್ದಿ ಬಿಡಿಸತೊಡಗಿದ.

"ಇಷ್ಟು ಬೇಗ ಶುರು ಮಾಡಬೇಕೇ ವಿನ್ಸೆಂಟ್?" ಅವನ ಹಿಂದಿನಿಂದ ಬಂದ ಧ್ವನಿ ಕೇಳಿತು. ಸರ್ರನೆ ತಿರುಗಿದ.

"ತುಂಬಾ ಬೇಗಾಯಿತು. ಕೆಲಸ ಮಾಡೋಕೆ ದಿನಪೂರ್ತಿ ನಿನ್ನ ಮುಂದಿದೆ."

ವಿನ್ಸೆಂಟ್ ಆ ಹೆಣ್ಣಿನ ಕಡೆ ಒಂದೇ ಸಮನೆ ನೋಡಿದ. ವಯಸ್ಸಿನಲ್ಲಿ ಬಹಳ ಚಿಕ್ಕವಳು, ಹಾಗಂತ ಮಗುವೇನೂ ಅಲ್ಲ. ಕೋಬಾಲ್ಟ್ ಬ್ಲೂ ಆಕಾಶದ ಬಣ್ಣದ ಕಣ್ಣುಗಳು, ಬೆನ್ನು ಮೇಲೆ ಉದ್ದನೆಯ ಕೂದಲು ಇಳಿಬಿದ್ದಿತ್ತು. ಕೇ ಓಸ್‌ಗಿಂತ ತೆಳ್ಳನೆಯ ದೇಹ. ಚಿನ್ನದ ಬಣ್ಣದ ಮೈಯ್ಯಿ. ಕೆಂದುಟಿಗಳ ನಡುವೆ ಹೊಳೆ ಹೊಳೆವ ಬಿಳಿ ಹಲ್ಲು. ಮೈಗೆ ಅಂಟಿಕೊಂಡಂತಿದ್ದ ಬಿಳಿಯ ಗೌನು; ಕಾಲಿಗೆ ಸಾಧಾರಣವಾದ ಸ್ಯಾಂಡಲ್‌ಗಳು; ಸಾಕಷ್ಟು ಬಲಿಷ್ಠವಾದ ಆಕಾರ.

"ತುಂಬಾ ಸಮಯ ದೂರವಿದ್ದು ಬಿಟ್ಟೆ ವಿನ್ಸೆಂಟ್" ಅವಳು ಹೇಳಿದಳು.

ಅವನಿಗೆ ಮತ್ತು ಈಸಲ್‌ಗೆ ಮಧ್ಯೆ ಖಾಲಿ ಕ್ಯಾನ್‌ವಾಸ್‌ಗೆ ಒರಗಿಕೊಂಡು ನಿಂತಳು. ಗಾರ್ಡನ್ ನೋಟ ಮರೆಯಾಯಿತು. ಅವನನ್ನು ನೋಡಿ ಮುಗುಳ್ನಕ್ಕಳು. ಮುಗುಳ್ನಗೆಯ ಮೋಡಿಗೆ, ಬೆಕ್ಕಸ ಬೆರಗಾಗಿ ತನಗೇನೋ ಆಗಿಬಿಟ್ಟಿದೆ ಎಂಬ ಅನುಮಾನ ಕಾಡಿತು.

"ನಿನಗೆ ನಾನು ಯಾರೂಂತ ಗುರುತು ಸಿಗೊಲ್ಲ ಮೈ ಬಾಯ್. ಹೇಗೆ ತಾನೇ ಸಿಗುತ್ತೆ, – ಇಷ್ಟು ದಿನ ದೂರ ಇದ್ದು ಬಿಟ್ಟೆನಲ್ಲ!"

"ಯಾರು ನೀನು?"

"ನಾನು ನಿನ್ನ ಫ್ರೆಂಡ್. ಪ್ರಪಂಚದಲ್ಲೇ ಇರಲಾಗದಷ್ಟು ಬೆಸ್ಟ್ ಫ್ರೆಂಡ್."

"ನನ್ನ ಹೆಸರು ನಿನಗೆ ಹೇಗೆ ಗೊತ್ತು? ಯಾವತ್ತೂ ನಿನ್ನನ್ನು ನಾನು ನೋಡಿದಂತಿಲ್ಲ."

"ನೀನು ನೋಡಿಲ್ಲದಿರಬಹುದು. ನಾನು ನಿನ್ನನ್ನು ಎಷ್ಟೋ ಸಲ ನೋಡಿದ್ದೇನೆ."

"ನಿನ್ನ ಹೆಸರೇನು?"

"ಮಾಯಾ."

"ಅಷ್ಟೇನಾ? ಬರೀ ಮಾಯಾ?"

"ಹೌದು. ಬರೀ ಮಾಯಾ. ಅದೂ ನಿನಗೆ!"

"ಇಲ್ಲಿಗೆಲ್ಲ ನನ್ನನ್ನು ಹಿಂಬಾಲಿಸಿಕೊಂಡು ಯಾಕೆ ಬಂದೆ?"

"ಅದೇ ಕಾರಣಕ್ಕೆ. ಇಡೀ ಯೂರೋಪಿನಲ್ಲಿ ನಿನ್ನನ್ನು ಹಿಂಬಾಲಿಸುತ್ತ ಬರುವ ಕಾರಣ ಏನಿತ್ತೋ, ಈಗಲೂ ಅದೇ ಕಾರಣ....... ಕೇವಲ ನಿನಗೆ ಹತ್ತಿರವಾಗಿ ಇರಬೇಕು ಅನ್ನೋದು!"

ಆ ಹೆಂಗಸು ಅವನ ಬಿಸಿಯೇರಿದ್ದ ತಲೆಯ ಮೇಲೆ ಕೈಯಿರಿಸಿ ಮೃದುವಾಗಿ ಸವರಿದಳು. ಅವಳ ಮೃದು ಸ್ಪರ್ಶ, ಮೆಲುಮಾತು ಆಳವಾದ ಬಾವಿಯಿಂದ ತೆಗೆದು ಕುಡಿದ ನೀರಿನಿಂದ ತಂಪಾದಂತೆ ಮಾಡಿತು.

"ಒಬ್ಬನೇ ಒಬ್ಬ ವಿನ್ಸೆಂಟ್ ವಾನ್‌ಗೋ, ಗುರುತಿಸುವಲ್ಲಿ ತಪ್ಪಾಗುವುದು ಸಾಧ್ಯವೇ ಇಲ್ಲ."

"ಎಷ್ಟು ವರ್ಷದಿಂದ ನನ್ನನ್ನು ಬಲ್ಲೆ?"

"ಎಂಟು ವರ್ಷಗಳಿಂದ ವಿನ್ಸೆಂಟ್!"

"ಅದು ಹೇಗೆ? ಎಂಟು ವರ್ಷಗಳ ಹಿಂದೆ ನಾನು...."

"ಹೌದು ಮೈ ಡಿಯರ್, ಬೋರಿನೇಜ್‌ನಲ್ಲಿ."

"ಆಗಲೇ ನನ್ನ ಪರಿಚಯ ಇತ್ತಾ?"

"ಒಂದು ಶರತ್ಕಾಲದ ಮಧ್ಯಾಹ್ನ, ಕಬ್ಬಿಣದ ಚಕ್ರದ ಮೇಲೆ ನೀನು ಕೂತಿದ್ದೆ. ಮಾರ್ಕಾಸ್‌ನಲ್ಲಿ. ಅದೇ ಮೊದಲ ಬಾರಿ ನಿನ್ನನ್ನು ಕಂಡದ್ದು.

"....... ಗಣಿ ಕೆಲಸಗಾರರು ಮನೆಯ ಕಡೆ ಹೊರಡುತ್ತಿದ್ದಾಗ!"

"ಹೌದು. ಮೊದಲ ಸಲ ನಿನ್ನನ್ನು ನೋಡಿದಾಗ ಸುಮ್ಮನೆ ಕೂತಿದ್ದೆ. ಆಮೇಲೆ ಜೇಬಿಂದ ಹಳೆಯದಾಗಿದ್ದ ಎನ್‌ವಲಪ್ ಮತ್ತು ಪೆನ್ಸಿಲ್ ಹೊರತೆಗೆದು ಸ್ಕೆಚ್ ಮಾಡಲು ತೊಡಗಿದೆ ಎನ್ನುವುದನ್ನು ಇಣುಕಿ ನೋಡಿದೆ. ನಿನ್ನನ್ನು ನೋಡಿದೆ..... ಪ್ರೀತಿಗೆ ಬಿದ್ದೆ."

"ಪ್ರೀತಿಗೆ ಬಿದ್ದೆ! ಅದೂ ನನ್ನ ಪ್ರೀತಿಗೆ ಬಿದ್ದೆ!"

"ಹೌದು ವಿನ್ಸೆಂಟ್. ನಿಜವಾಗಿಯೂ ನಿನ್ನನ್ನು ಪ್ರೀತಿಸಲು ತೊಡಗಿದೆ."

"ಬಹುಶಃ ಆಗ, ಈಗಿರುವುದಕ್ಕಿಂತ ಚೆನ್ನಾಗಿದ್ದೆ ಅಂತ ಕಾಣುತ್ತೆ."

"ಈಗ ಇರುವುದಕ್ಕಿಂತ ಅರ್ಧದಷ್ಟೂ ಚೆನ್ನಾಗಿರಲಿಲ್ಲ."

"ನಿನ್ನ ಧ್ವನಿ...... ಮಾಯಾ ಒಂದು ಥರಾ ವಿಶೇಷವಾಗಿದೆ. ಈ ಧ್ವನಿ ಒಮ್ಮೆ ಎಂದೋ ಕೇಳಿದ ನೆನಪಾಗುತ್ತಿದೆ....."

".......ಮಾರ್ಗಾಟ್‌ಳ ಧ್ವನಿ...... ಅವಳು ನಿನ್ನನ್ನು ಪ್ರೀತಿಸಿದ್ದಳು...... ನಾನೂ ಪ್ರೀತಿಸಿದ್ದೆ."

"ಮಾರ್ಗಾಟ್‌ಳ ಪರಿಚಯವಿತ್ತೇ?"

"ನಾನು ಬ್ರಬಾಂಟ್‌ನಲ್ಲಿ ಎರಡು ವರ್ಷ ಇದ್ದೆ. ಪ್ರತಿದಿನಾ ನೀನು ಹೋಗುವಾಗಲೆಲ್ಲ, ಹೋಗುವ ಕಡೇಲೆಲ್ಲಾ ನಿನ್ನನ್ನು ಹಿಂಬಾಲಿಸುತ್ತಿದ್ದೆ. ಅಡಿಗೆ ಮನೆ ಹಿಂದೆ ನೀನು ಕೆಲಸ ಮಾಡುವುದನ್ನು ಗಮನಿಸುತ್ತಿದ್ದೆ. ಮಾರ್ಗಾಟ್ ನಿನ್ನ ಪ್ರೀತಿಸಿದ್ದು ನೋಡಿ, ನನಗೆ ಸಂತೋಷವಾಯ್ತು."

"ಅಂದಮೇಲೆ, ನೀನು ಮುಂದೆ ಪ್ರೀತಿಸಲಿಲ್ಲ?"

"ಇಲ್ಲ. ಇಲ್ಲ. ಹಾಗೇನಿಲ್ಲ. ಮೊದಲು ನೋಡಿದ ದಿನದಿಂದ ನಿನ್ನನ್ನು ಪ್ರೀತಿಸುವುದನ್ನು ಬಿಡಲೇ ಇಲ್ಲ."

"ಮಾರ್ಗಾಟ್ ಮೇಲೆ ಅಸೂಯೆ ಬರಲಿಲ್ಲ?"

ಆ ಹೆಂಗಸು ಮುಗುಳ್ನಕ್ಕಳು. ಥಟ್ಟನೆ ಅವಳ ಮುಖದ ಮೇಲೆ ವಿಷಾದ, ಕರುಣೆಯ ಛಾಯೆ ಕಾಣಿಸಿ ಮರೆಯಾಯಿತು. ವಿನ್ಸೆಂಟ್‌ಗೆ ಮೆಂಡೆಸ್ ಡ ಕೋಸ್ಟಾ ನೆನಪಾಯಿತು.

"ಅಸೂಯೆ ಯಾಕೆ? ಅವಳ ಪ್ರೀತಿ ನಿನಗೆ ಒಳ್ಳೆಯದಿತ್ತು. ಆದರೆ 'ಕೇ'ಳನ್ನು ನೀನು ಪ್ರೀತಿಸಿದ್ದು, ನನಗೆ ಹಿಡಿಸಲಿಲ್ಲ. ನಿನ್ನ ಮನಸ್ಸಿಗೆ ದೊಡ್ಡ ಆಘಾತವಾಯಿತಲ್ಲವೇ?"

"ಉರ್ಸುಲಾಳನ್ನು ಪ್ರೀತಿಸುತ್ತಿದ್ದಾಗ, ನನ್ನನ್ನು ನೋಡಿದ್ದೆಯೇನು?"

"ನಿನ್ನ ಪರಿಚಯಕ್ಕೆ ಮೊದಲು ನಡೆದಿರುವುದು."

"ಆಗಲೂ ನಾನು ಮಾಡಿದ್ದು ನಿನಗೆ ಬೇಸರವೆನಿಸುತ್ತಿತ್ತು."

"ಇರಬಹುದು."

"ನಾನೊಬ್ಬ ಮುಠ್ಠಾಳನಾಗಿದ್ದೆ."

"ಕೆಲವು ಸಲ, ಮೊದಮೊದಲು ಹೀಗೆ ಮೂರ್ಖರು ಆಗಲೇ ಬೇಕಾಗುತ್ತೆ. ಆಮೇಲೆ ತಾನೇ ಬುದ್ಧಿವಂತರಾಗೋದು."

"ಬ್ರಬಾಂಟ್‌ನಲ್ಲಿದ್ದಾಗ, ನೀನು ನನ್ನನ್ನು ಪ್ರೀತಿಸಿದ್ದೇ ಆದರೆ ನನ್ನ ಹತ್ತಿರ ಯಾಕೆ ಬರಲಿಲ್ಲ?"

"ಆಗ ನನ್ನನ್ನು ಒಪ್ಪಿಕೊಳ್ಳುವುದಕ್ಕೆ, ನೀನು ಸಿದ್ಧನಾಗಿರಲಿಲ್ಲ ವಿನ್ಸೆಂಟ್."

"ಈಗ?..... ನಾನು ರೆಡಿ?"

"ಹೌದು."

"ಇನ್ನೂ ನನ್ನನ್ನು ಪ್ರೀತಿಸುತ್ತಿದ್ದೀಯ?.....ಈಗಲೂ...... ಇಂದಿಗೂ...... ಈ ಕ್ಷಣವೂ?"

"ಇಂದಿಗೂ...... ಈ ಕ್ಷಣಕ್ಕೂ..... ಎಂದೆಂದಿಗೂ!"

"ಹೇಗೆ ನನ್ನನ್ನು ಪ್ರೀತಿಸಲು ಸಾಧ್ಯ? ನನ್ನ ವಸಡುಗಳು ಹಾಳಾಗಿ ಹೋಗಿವೆ. ನನ್ನ ಬಾಯಲ್ಲಿರುವ ಒಂದೊಂದೂ ಕೃತಕ ಹಲ್ಲು, ನನ್ನ ತಲೆ ಕೂದಲೆಲ್ಲ ಸುಟ್ಟು ಬೋಳಾಗಿದೆ. ನನ್ನ ಕಣ್ಣುಗಳೋ ಸಿಫಿಲಿಸ್ ರೋಗಿಯ ಕಣ್ಣುಗಳಂತೆ ಕೆಂಪಾಗಿವೆ. ನನ್ನ ಮುಖವೂ ವಿಕಾರವಾಗಿದೆ. ನಿಸ್ಸಾರವಾದ ಶರೀರ ನನ್ನದು. ಅಡಿಯಿಂದ ಮುಡಿವರೆಗೆ ಹಾಳಾಗಿ ಹೋಗಿದೆ. ಭಗ್ನದೇಹಿಯಾದ ಇವನನ್ನು ಹೇಗೆ ತಾನೇ ಪ್ರೀತಿಸುತ್ತೀ?"

"ಸ್ವಲ್ಪ ಕೂತ್ಕೋತೀಯ ವಿನ್ಸೆಂಟ್."

ವಿನ್ಸೆಂಟ್ ಸ್ಟೂಲ್ ಮೇಲೆ ಕುಳಿತ. ಆ ಹೆಂಗಸು ಆ ಫೀಲ್ಡ್‌ನಲ್ಲಿನ ಮೆದು ಮಣ್ಣಿನ ಮೇಲೆ ಮೊಣಕಾಲೂರಿ ಕುಳಿತಳು.

"ಬೇಡ. ನಿನ್ನ ಬಿಳಿಯ ಡ್ರೆಸ್ ಮಣ್ಣಾಗುತ್ತದೆ. ನನ್ನ ಕೋಟನ್ನು ಕೆಳಗೆ ಹಾಸುತ್ತೇನೆ."

"ನಿನ್ನನ್ನು ಹಿಂಬಾಲಿಸುವ ಭರದಲ್ಲಿ ಎಷ್ಟೋ ಸಲ ನನ್ನ ಡ್ರೆಸ್ ಹಾಳುಮಾಡಿಕೊಂಡಿದ್ದೀನಿ. ಆದರೆ ಆಮೇಲೆ ಅದೆಲ್ಲ ಚೆನ್ನಾಗಿ ಒಗೆದು ಮಾಮೂಲಿನಂತೆಯೇ ಮಾಡಿಕೊಂಡಿದ್ದೀನಿ."

ತನ್ನ ಕೈಗಳನ್ನು ಬಟ್ಟಲು ಮಾಡಿ, ಅವನ ಗಲ್ಲವನ್ನು ಹಿಡಿದುಕೊಂಡಳು. ಕಿವಿಯ ಹಿಂದಿನ ಕೂದಲನ್ನು ಸರಿಪಡಿಸಿದಳು.

"ನೀನು ಕುರೂಪಿಯಲ್ಲ ವಿನ್ಸೆಂಟ್. ಸುಂದರನಾಗಿದ್ದೀಯ. ನಿನ್ನ ಆತ್ಮವನ್ನು ಸುತ್ತಿಹಿಡಿದ ದೇಹವನ್ನು ನೀನಾಗಿ ಹಿಂಸಿಸಿದ್ದೀಯ, ದಣಿಸಿದ್ದೀಯ; ಘಾಸಿಗೊಳಿಸಿದ್ದೀಯ. ಆದರೆ ನಿನ್ನ ಆತ್ಮಕ್ಕೆ ಯಾವ ಚ್ಯುತಿಯೂ ಇಲ್ಲ. ಆದ್ದರಿಂದ ನಾನು ಪ್ರೀತಿಸುವುದು ನಿನ್ನ ಆ ಆತ್ಮವನ್ನು. ಎಡೆಬಿಡದೆ ದುಡಿದು ದಣಿಸಿದ ದೇಹವನ್ನು ಹಾಳು ಮಾಡಿದ್ದೀಯ, ಆದರೆ ಆತ್ಮ ಹಾಗೇ ಮುಂದುವರೆದಿದೆ. ಆ ಆತ್ಮವನ್ನೇ ನಾನು ಬಯಸುವುದು; ಪ್ರೀತಿಸುವುದು."

ಸೂರ್ಯ ಇನ್ನಷ್ಟು ಮೇಲೇರಿದ. ಇದರಿಂದಾಗಿ ಇಬ್ಬರಿಗೂ ವಿಪರೀತ ಬಿಸಿಲಿನ ತಾಪದ ಅನುಭವವಾಯಿತು.

"ಇಲ್ಲಿಂದ ಸ್ವಲ್ಪ ದೂರದಲ್ಲಿ ಸೈಪ್ರೆಸ್ ಮರಗಳಿವೆ. ಅಲ್ಲಿ ತಣ್ಣಗಿರುತ್ತೆ. ಬಾ ಅಲ್ಲಿಗೆ ಹೋಗೋಣ."

"ಇಲ್ಲಿಯೇ ನಿನ್ನ ಜೊತೆ, ಚೆನ್ನಾಗಿದೆ. ಬಿಸಿಲಿನ ಭಯ ಇಲ್ಲ. ಅಭ್ಯಾಸವಾಗಿ ಬಿಟ್ಟಿದೆ."

"ಅಂದ್ರೆ? ಆರ್ಲೆನಲ್ಲಿ ತುಂಬಾ ದಿನದಿಂದ ಇದ್ದೀಯೇನು?"

"ಪ್ಯಾರಿಸ್‌ನಿಂದ ನಿನ್ನ ಜೊತೆಗೇ ಇಲ್ಲಿಗೆ ಬಂದೆ."

ವಿನ್ಸೆಂಟ್ ಕೋಪದಿಂದ ಸಿಡಿದೆದ್ದು, ಸ್ಟೂಲನ್ನು ಕಾಲಿನಿಂದ ಒದ್ದು ಬೀಳಿಸಿದ.

"ನೀನೊಬ್ಬ ಮೋಸಗಾತಿ. ನನ್ನನ್ನು ಅವಮಾನ ಮಾಡಲೆಂದೇ ಯಾರೋ ನಿನಗೆ ನನ್ನ ವಿಚಾರವನ್ನೆಲ್ಲ ಹೇಳಿ ಕಳಿಸಿದ್ದಾರೆ. ಹೊರಟು ಹೋಗು. ಇನ್ನು ಮೇಲೆ ನಿನ್ನ ಜೊತೆ ಮಾತಾಡೋದು ನನಗಿಷ್ಟವಿಲ್ಲ."

ತನ್ನ ಮುಗುಳ್ನಗೆಯಿಂದ ಅವನ ಕೋಪವನ್ನು ನಿಯಂತ್ರಿಸಲು ನೋಡಿದಳು.

"ನಾನು ಮೋಸಗಾರಳಲ್ಲ ವಿನ್ಸೆಂಟ್. ನಾನು ಹೇಳುತ್ತಿರುವುದೆಲ್ಲ ಸತ್ಯ. ನಿನ್ನ ಬಗ್ಗೆ ಇರುವ ನನ್ನ ಪ್ರೀತಿಯನ್ನು ಕೊಲ್ಲಲು ನಿನ್ನಿಂದ ಸಾಧ್ಯವೇ ಇಲ್ಲ.

"ಅದು ಸುಳ್ಳು! ನೀನು ನನ್ನನ್ನು ಪ್ರೀತಿಸುತ್ತಿಲ್ಲ. ನನ್ನನ್ನು ತಮಾಶೆ ಮಾಡ್ತಿದ್ದಿ. ನಿನ್ನ ಕುತಂತ್ರಗಳು ನನ್ನ ಹತ್ತಿರ ನಡೆಯುವುದಿಲ್ಲ!"

ಅವಳನ್ನು ಗಟ್ಟಿಯಾಗಿ ಹಿಡಿದು ಅಲ್ಲಾಡಿಸಿದ. ಅವಳು ಅವನ ಕಡೆಗೆ ವಾಲಿದಳು.

"ನನ್ನನ್ನು ಹಿಂಸೆ ಮಾಡೋದು ನಿಲ್ಲಿಸಿ, ಇಲ್ಲಿಂದ ಹೋಗದಿದ್ದರೆ, ನಿನ್ನನ್ನು ಸುಮ್ಮನೆ ಬಿಡೊಲ್ಲ."

"ಏನು ಬೇಕಾದರೂ ಮಾಡು. ಇದಕ್ಕೆ ಮೊದಲೂ ನನಗೆ ನೋವುಂಟು ಮಾಡಿದ್ದೆ. ಪ್ರೀತಿಯಲ್ಲಿ ಇದೆಲ್ಲಾ ಮಾಮೂಲೇ?"

"ಹಾಗಾದರೆ ತಗೋ ಈ ಔಷಧಿಯನ್ನು!"

ಅವನು ಅವಳ ದೇಹವನ್ನು ತನ್ನತ್ತ ಎಳೆದು ಒತ್ತಿಹಿಡಿದುಕೊಂಡ. ತನ್ನ ಬಾಯನ್ನು ಅವಳ ಬಾಯೆಡೆಗೆ ಒಯ್ದು, ಹಲ್ಲಿನಿಂದ ಅವಳಿಗೆ ಗಾಯಮಾಡುತ್ತಲೇ ಮುತ್ತನ್ನು ಒತ್ತಿದ. ಅವಳು ಪ್ರತಿಯಾಗಿ, ತಾನೂ ಅವನಿಗೆ ಮುತ್ತುಕೊಟ್ಟಳು. ಅವಳ ದೇಹದ ನರನಾಡಿಗಳೆಲ್ಲ ಅವನ ದೇಹಸ್ಪರ್ಷಕ್ಕೆ ತುಡಿದವು. ಬಿಗಿಯಾಗಿ ಅವನನ್ನು ತಬ್ಬಿ ಹಿಡಿದುಕೊಂಡಳು. ಎರಡು ದೇಹಗಳೂ ಒಂದಾದವು. ಸಂಪೂರ್ಣವಾಗಿ ಅವನಿಗೆ ತನ್ನನ್ನು ಒಪ್ಪಿಸಿಕೊಂಡು ಬಿಟ್ಟಳು.

ವಿನ್ಸೆಂಟ್ ಎದ್ದು ಅವಳನ್ನು ದೂರಕ್ಕೆ ತಳ್ಳಿ ಸ್ಟೂಲ್ ಮೇಲೆ ಕುಕ್ಕರಿಸಿದ. ಆ ಹೆಂಗಸು ಎದ್ದು ನೆಲದ ಮೇಲೆ ಕುಳಿತಳು. ತನ್ನ ತೋಳುಗಳಿಂದ ಅವನ ಕಾಲುಗಳನ್ನು ಬಳಸಿ ಹಿಡಿದುಕೊಂಡಳು. ಮೊಣಕಾಲುಗಳ ನಡುವೆ ತಲೆಯಿರಿಸಿದಳು. ಅವನು ಹಳದಿ ಬಣ್ಣದ ಅವಳ ಉದ್ದನೆಯ ಕೂದಲ ಮೇಲೆ ಕೈಯಾಡಿಸಿದ.

"ಈಗಲಾದರೂ ನಂಬಿಕೆ ಬಂತಾ?"

ಹಲವು ಕ್ಷಣಗಳ ನಂತರ, "ನೀನು, ನಾನು ಬಂದಾಗಿನಿಂದ ಆರ್ಲೆಯಲ್ಲಿಯೇ ಇದ್ದೀಯ. ನಿನಗೆ 'ಲ ಪಿಜನ್' ಗೊತ್ತೇನು?" ಎಂದು ಕೇಳಿದ.

"ರ್‍ಯಾಷೆಲ್ ಮುದ್ದಾದ ಹುಡುಗಿ."

"ಅದಕ್ಕೆ ನಿನ್ನ ಅಭ್ಯಂತರ ಇಲ್ಲ ತಾನೇ?"

"ನೀನು ಗಂಡಸು ವಿನ್ಸೆಂಟ್. ಹೆಂಗಸಿನ ಅಗತ್ಯ ಬೀಳುತ್ತೆ. ನಾನು ನಿನ್ನ ಬಳಿಗೆ ಇನ್ನೂ ಬಂದಿರಲಿಲ್ಲವಾಗಿ, ಬೇರೆ ಹೆಂಗಸಿನ ಬಳಿಗೆ ಹೋಗಬೇಕಾಗಿ ಬಂತು. ಈಗ ನಾನು ಬಂದಿದ್ದೇನೆ......"

"ಈಗ...... ನೀನ?....."

"ಹೌದು. ನಿನಗೆ ನಾನು ಬಂದಿರುವುದರಿಂದ ನೀನು ಇನ್ನು ಮುಂದೆ...... ಎಂದೆಂದಿಗೂ ಹೋಗುವ ಅಗತ್ಯವಿಲ್ಲ."

"ಅಂದ್ರೆ?..... ನೀನು....?"

"ಹೌದು..... ನಾನೆ...... ವಿನ್ಸೆಂಟ್. ನಿನ್ನನ್ನು ತುಂಬ ಪ್ರೀತಿಸ್ತೀನಿ."

"ನನ್ನನ್ನು ನೀನ್ಯಾಕೆ ಪ್ರೀತಿಸಬೇಕು? ಹೆಂಗಸರು ಯಾವಾಗ್ಲೂ ನನ್ನನ್ನು ತಿರಸ್ಕರಿಸಿದರು. ಅಸಹ್ಯ ಪಟ್ಟುಕೊಂಡರು."

"ನಿನಗೆ ಪ್ರೀತಿಗಿಂತ ಬೇರೆ ಕೆಲಸ ಮುಖ್ಯವಾಗಿತ್ತು."

"ಬೇರೆ ಕೆಲಸ!?....... ಆಹಾ! ನಾನೊಬ್ಬ ಮೂರ್ಖನಾಗಿದ್ದೆ. ಈ ನೂರಾರು ಪೈಂಟಿಂಗ್ಸ್‌ಗಳಿಂದ ಆಗುವ ಪ್ರಯೋಜನವೇನು? ಯಾರಿಗೆ ಬೇಕಾಗಿದೆ ಇವು? ಯಾರು ಕೊಂಡ್ಕೊಳ್ತಾರೆ? ಒಂದು ಬಿಡಿಗಾಸಿನಷ್ಟಾದರೂ ಹೊಗಳಿದ್ದಾರಾ? ನಾನು ಪ್ರಕೃತಿಯನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದೀನಿ, ಪೈಂಟಿಂಗ್ಸ್ ಚೆನ್ನಾಗಿ ಮಾಡ್ತೀನೀಂತ–ಯಾರಾದರೂ ಹೇಳಿದ್ದಾರಾ?"

"ಒಂದಲ್ಲ ಒಂದು ದಿನ ಇಡೀ ಜಗತ್ತೇ ನಿನ್ನನ್ನು ಕೊಂಡಾಡುತ್ತೆ ವಿನ್ಸೆಂಟ್."

"ಒಂದಲ್ಲ ಒಂದು ದಿನ!...... ಆಹಾ ಎಂಥ ಕನಸು!! ನಾನೊಂದು ದಿನ ಬಹಳ ಆರೋಗ್ಯವಂತನಾಗಿರ್ತೀನಿ. ನನಗೂ ಹೆಂಡತಿ ಮಕ್ಕಳು ಇರ್ತಾರೆ...... ನನ್ನ ಪೈಂಟಿಂಗ್ಸ್‌ಗಳಿಂದ ಬದುಕುವುದಕ್ಕೆ ಸಾಕಷ್ಟು ಹಣ ಬರುತ್ತೆ...... ಅಂತ ಕನಸು ಕಾಣುವ ಹಾಗೆ, ಇದೂ ಒಂದು ಕನಸು! ಎಂಟು ವರ್ಷಗಳಿಂದ ನಾನು ಪೈಂಟ್ ಮಾಡ್ತಲೇ ಇದ್ದೀನಿ. ನಾನು ಮಾಡಿದ ಪೈಂಟಿಂಗ್ಸ್‌ಗಳಲ್ಲಿ ಒಂದನ್ನಾದರೂ ಯಾರಾದರೂ ಕೊಂಡುಕೊಳ್ಳಲು ಮುಂದೆ ಬಂದಿದ್ದಾರೆಯೇ? ನಾನೊಬ್ಬ ನಿಜವಾದ ಮೂರ್ಖ!"

"ಗೊತ್ತು. ನೀನೊಬ್ಬ ಅದ್ಭುತ ಮೂರ್ಖ! ನೀನಿಲ್ಲದೆ ಹೋದಾಗ, ನಿನ್ನನ್ನು, ನೀನು ಹೇಳಬೇಕೆಂದಿದ್ದುದನ್ನು ಅರ್ಥಮಾಡ್ಕೊಳ್ತಾರೆ. ನೂರು ಫ್ರ್ಯಾಂಕ್‌ಗಳಿಗೂ ಮಾರಾಟ ಮಾಡಲು ಸಾಧ್ಯವಾಗುತ್ತಿಲ್ಲವಾದ ಇವೇ ಪೈಂಟಿಂಗ್ಸ್ ಮುಂದೆ ಮಿಲಿಯ ಮಿಲಿಯ ಫ್ರ್ಯಾಂಕ್‌ಗಳಿಗೆ ಮಾರಾಟವಾಗುತ್ತೆ. ನೀನು ನಗಬೇಡ..... ನಾನು ಹೇಳುವ ಮಾತು ಸತ್ಯ! ನಿನ್ನ ಕಲಾಕೃತಿಗಳು, ಆ್ಯಮ್‌ಸ್ಟರ್ ಡ್ಯಾಮ್, ಪ್ಯಾರಿಸ್, ಹೇಗ್, ಮಾಸ್ಕೋ, ನ್ಯೂಯಾರ್ಕ್, ಮ್ಯುನಿಚ್, ಡ್ರೆಸ್‌ಡೆನ್, ಬರ್ಲಿನ್– ಎಲ್ಲಾ ಮ್ಯೂಸಿಯಂಗಳಲ್ಲಿ ಅಲಂಕೃತವಾಗಿರುತ್ತವೆ. ನಿನ್ನ ಕಲಾಕೃತಿಗಳು ಅಮೂಲ್ಯವಾದ್ದು. ಬೆಲೆ ಕಟ್ಟಲಾಗದ್ದು. ಬೆಲೆಗೆ ಮಾರಾಟಮಾಡುವುದಿಲ್ಲ. ನಿನ್ನ ಮೇಲೆ ಪುಸ್ತಕಗಳನ್ನು ಬರೆಯುತ್ತಾರೆ. ನಿನ್ನ ಕಲೆಯ ಬಗ್ಗೆ ಕೊಂಡಾಡಿ ಹೊಗಳುತ್ತಾರೆ. ನಿನ್ನ ಜೀವನವನ್ನು ಆಧರಿಸಿ, ಕತೆ,

ಕಾದಂಬರಿ, ನಾಟಕಗಳನ್ನು ಬರೆಯುತ್ತಾರೆ. ಕಲೆಯ ಬಗ್ಗೆ ಪ್ರೀತಿ ಇರುವ ಯಾರಾದರೂ ಇಬ್ಬರು ಸೇರಿದರೆ ಸಾಕು, ನಿನ್ನ ಹೆಸರು ಬಂದೇ ಬರುತ್ತೆ. ನಿನ್ನ ಹೆಸರು ಪವಿತ್ರವಾಗುತ್ತದೆ.

"ನಿನ್ನ ಸಿಹಿ ಮುತ್ತುಗಳ ಸವಿಯನ್ನು ಇನ್ನೊಮ್ಮೆ ಚಪ್ಪರಿಸದಿದ್ದರೆ, ನಾನು ಕನಸುಗಳಲ್ಲಿ ಕಳೆದು ಹೋಗುತ್ತೇನೆ. ಆ ಇಲ್ಲವೇ ಹುಚ್ಚನಂತಾಗುತ್ತೇನೆ."

"ಬಾ ವಿನ್ಸೆಂಟ್. ಇಲ್ಲಿ ಬಂದು ಕುಳಿತುಕೋ. ನಿನ್ನ ಕೈ ನನ್ನ ಕೈಯಲ್ಲಿರಿಸು."

ಸೂರ್ಯ ಸರಿಯಾಗಿ ನೆತ್ತಿ ಮೇಲಿದ್ದ. ಗುಡ್ಡ ಪ್ರದೇಶ, ಕಣಿವೆಗಳೆಲ್ಲವೂ ಗಂಧಕ ಹಳದಿ ಬಣ್ಣದಲ್ಲಿ ಮಿಂದಿದ್ದವು. ವಿನ್ಸೆಂಟ್ ಆ ಹೆಣ್ಣಿನ ಪಕ್ಕದಲ್ಲಿ, ಮಣ್ಣಿನ ಮೇಲೆಯೇ ಮಲಗಿದ. ಸುಮಾರು ಆರು ತಿಂಗಳಿಂದ ಅವನ ಜೊತೆ ಮಾತಾಡಲು, ರೌಲಿನ್ ಅಥವಾ ರ್‍ಯಾಷೆಲ್ ಬಿಟ್ಟು ಬೇರೆ ಯಾರೊಬ್ಬರೂ ಇರಲಿಲ್ಲ. ಮಾತಾಡೋಕೆ ಎದೆ ತುಂಬ ಶಬ್ದಗಳಿದ್ದವು. ಅವಳು ಅವನ ಕಣ್ಣುಗಳಲ್ಲಿ ಕಣ್ಣಿಟ್ಟು ನೋಡಿದಳು. ಅವನು ಮಾತಾಡಲು ಆರಂಭಿಸಿದ. ಉರ್ಸುಲಾ ಸ್ನೇಹ, ಗೂಪಿಲ್ಸ್‌ನಲ್ಲಿ ಕೆಲಸ, ತನ್ನ ಕಷ್ಟಗಳು, ಹೋರಾಟಗಳು, ಕೇ ಜೊತೆಗಿನ ಪ್ರೀತಿ, ಕ್ರಿಸ್ಟೀನ್‌ಳ ಜೊತೆಯ ಬದುಕು, ಪೈಂಟಿಂಗ್ ಬಗ್ಗೆ ತನ್ನಾಸೆ, ಕನಸುಗಳು, ಜನ ತನ್ನ ಬಗ್ಗೆ ಆಡಿದ ಮಾತುಗಳು, ಮಾಡಿದ ಅವಮಾನ, ಅನುಭವಿಸಿದ ಯಾತನೆ, ಮೇಲೆ ಎರಗಿದ ಆಘಾತಗಳು, ತನ್ನ ಪೈಂಟಿಂಗ್ಸ್ ಒರಟಾಗಿ, ಆದರೆ ಸಹಜವಾಗಿ, ಕಣ್ಣಿಗೆ ಒಡೆದಿದ್ದು ಕಾಣುವ ಬಣ್ಣಗಳಿಂದ ಇರಬೇಕೆಂದು ಬಯಸಲು ಕಾರಣಗಳು, ಪೈಂಟಿಂಗ್ಸ್ ಜಗತ್ತಿನಲ್ಲಿ ಏನನ್ನು ಸಾಧಿಸಬೇಕೆಂಬ ವಿಚಾರ, ದೇಹವನ್ನು ನುಚ್ಚುನೂರಾಗುವಂತೆ ದಣಿಸಿದ್ದು, ದುಡಿಸಿದ್ದು – ಎಲ್ಲವನ್ನೂ ವಿವರಿಸಿದ. ಮಾತಾಡುತ್ತಾ ಹೋದಂತೆ ಅವನಲ್ಲಿ ಭಾವೋದ್ರೇಕ ಹೆಚ್ಚಾಗ ತೊಡಗಿತು. ಟ್ಯೂಬುಗಳಿಂದ ಪಿಗ್‌ಮೆಂಟ್ಸ್ ಹೊರಬರುತ್ತಿದ್ದಂತೆ, ಮಾತುಗಳು ಅವನ ಬಾಯಿಂದ ಹೊರಬರುತ್ತಿದ್ದವು. ಮಾತಿಗೆ ಈಗ ಅಂಗಾಭಿನಯ, ಭಾವಾಭಿನಯವೂ ಜೊತೆಯಾದವು. ಕಾಲು, ಕೈಯಿ, ಬಾಯಿ, ಭುಜಗಳು, ಕಣ್ಣುಗಳು – ಎಲ್ಲವೂ ಮಾತಾಡ ತೊಡಗಿದವು. ಎದ್ದು ಆ ಕಡೆ ಈ ಕಡೆ ರಭಸದ ಹೆಜ್ಜೆಗಳನ್ನು ಹಾಕುತ್ತಾ ಮಾತಾಡಿದ. ಅವನ ನಾಡಿಮಿಡಿತ ವೇಗವಾಯಿತು. ಮುಖ ಕೆಂಪಾಗತೊಡಗಿತು. ಬಿಸಿಲು ಅವನೊಳಗಿನ ಭಾವೋಷ್ಣತೆಯನ್ನು ಹೆಚ್ಚಿಸಿತು.

ಆ ಹೆಣ್ಣು ಅವನು ಹೇಳುತ್ತಿದ್ದ ಪ್ರತಿಯೊಂದು ಮಾತನ್ನೂ ಗಮನವಿಟ್ಟು ಕೇಳಿಸಿಕೊಂಡಳು. ಅವಳ ಕಣ್ಣುಗಳಿಂದಲೇ, ಎಲ್ಲವನ್ನೂ ಅರ್ಥ ಮಾಡಿಕೊಂಡಿದ್ದಾಳೆಂಬುದು ಸ್ಪಷ್ಟವಾಗಿ ತಿಳಿಯಿತು. ಎಲ್ಲ ಮಾತನ್ನೂ ಜೀರ್ಣಿಸಿಕೊಂಡಿದ್ದಳು. ಅಲ್ಲದೆ ಇನ್ನೂ ಕೇಳಿಸಿಕೊಳ್ಳಲು ಸಿದ್ಧವಾಗಿದ್ದಳು! ಅರ್ಥಮಾಡಿಕೊಳ್ಳಲು ಅಣಿಯಾಗಿದ್ದಳು. ಅವನು ಏನೆಲ್ಲವನ್ನೂ ಕೊಡಲು ಮುಂದಾಗಿದ್ದನೋ ಅದೆಲ್ಲವನ್ನೂ ಸ್ವೀಕರಿಸುವುದಕ್ಕೆ ಸಜ್ಜಾಗಿದ್ದಳು.

ಇದ್ದಕ್ಕಿದ್ದಂತೆ ಮಾತನ್ನು ನಿಲ್ಲಿಸಿದ. ಭಾವೋದ್ವಿಗ್ನತೆಯಿಂದ ಕಂಪಿಸಿದ. ಕಣ್ಣುಗಳು ಕೆಂಪಾಗಿದ್ದವು. ಅವನನ್ನು ತನ್ನ ಪಕ್ಕಕ್ಕೆ ಸೆಳೆದುಕೊಂಡಳು.

"ನನಗೆ ಮುತ್ತಿಡು ವಿನ್ಸೆಂಟ್." ಅವಳು ಕೇಳಿದಳು.

ಅವನು ಮುತ್ತನ್ನು ಒತ್ತಿದ. ಈಗ ಅವಳ ತುಟಿಗಳಲ್ಲಿ ತಂಪಿರಲಿಲ್ಲ. ಅವರಿಬ್ಬರೂ ಪಕ್ಕಪಕ್ಕದಲ್ಲಿಯೇ ಆ ಜೇಡಿಮಣ್ಣಿನ ಮೇಲೆ ಮೈಚಾಚಿದರು. ಆ ಹೆಣ್ಣು ಅವನ ಅಂಗಾಂಗಗಳ ಮೇಲೆಲ್ಲಾ ಮುತ್ತುಗಳ ಮುದ್ರೆಯೊತ್ತಿದ್ದಳು. ಅವನ ದೇಹದ ಮೇಲೆಲ್ಲ ಕೈಯಾಡಿಸಿದಳು. ಮುಖ, ತುಟಿ, ಗಲ್ಲ, ತಲೆಗಳನ್ನು ಸವರಿದಳು.

ಅವಳ ಮುತ್ತುಗಳು ಅವನಲ್ಲಿ ಎಂದೆಂದಿಗೂ ಕಾಣದ ಒಂದು ಬಗೆಯ ಭಾವೋದ್ರೇಕವನ್ನು ಪ್ರಚೋದಿಸಿದವು. ದೇಹ ಮಾಂಸಗಳಿಂದ ತಣಿಯಲಾರದ ಒಂದು ಬಗೆಯ ನೋವು, ಅವನ ದೇಹದ ಅಂಗುಲಂಗುಲವನ್ನೂ ಕಾಡಿತು. ಪ್ರೀತಿಯಿಂದ ಕೂಡಿದ ಆ ಬಗೆಯಲ್ಲಿ ಇದಕ್ಕೆ ಮೊದಲು ಯಾವೊಬ್ಬ ಹೆಣ್ಣೂ ಚುಂಬಿಸಿರಲಿಲ್ಲ. ಅವನು ಅವಳ ದೇಹದ ಮತ್ತಷ್ಟು ಆಳದ ಮೃದು ಭಾಗಗಳಿಗೆಲ್ಲ ಲಗ್ಗೆಯಿಟ್ಟ.

"ನಿಲ್ಲು" ಅವಳು ಹೇಳಿದಳು.

ಬೆಳ್ಳಿ ಬಣ್ಣದ ಬಕಲ್ ಅನ್ನು ಸೊಂಟದಿಂದ ಕಿತ್ತೆಸೆದಳು. ಧರಿಸಿದ್ದ ಗೌನನ್ನು ಕಳಚಿ ದೂರಕ್ಕೆ ಎಸೆದಳು. ಅವಳ ಮುಖದಂತೆಯೇ ಅವಳ ದೇಹದ ಬಣ್ಣವೂ ಅಪರಂಜಿ ಚಿನ್ನದಂತಿತ್ತು. ಅವಳು ಕನ್ಯೆ. ಪರಿಶುದ್ಧ ದೇಹ. ಅಷ್ಟೊಂದು ಪರಿಶುದ್ಧಳಾಗಿ ಹೆಣ್ಣು ಇರಬಲ್ಲಳೇ ಎಂದು ಅಚ್ಚರಿಯಿಂದ ಪ್ರಶ್ನಿಸಿಕೊಂಡ.

"ಡಿಯರ್ ಕಂಪಿಸುತ್ತಿದ್ದೀಯೇಕೆ? ನನ್ನನ್ನು ಹಿಡಿದುಕೋ. ಗಟ್ಟಿಯಾಗಿ, ನಿನಗೆ ಬೇಕಾದ ರೀತಿಯಲ್ಲಿ ನನ್ನ ದೇಹವನ್ನು ಬಳಸಿಕೋ..... ನನ್ನ ಪ್ರಿಯ!"

ಸೂರ್ಯ ಮುಳುಗುತ್ತಿದ್ದ. ಭೂಮಿ ಬಿಸಿಲಿನ ಶಾಖದಿಂದ ಬೆಂದಂತಿತ್ತು. ಬಿತ್ತಿದ, ಬೆಳದ, ಕೊಯ್ದ.... ಫಸಲು.... ಸುವಾಸನೆ.... ಹುಟ್ಟಿದ..... ಮರಣ ಹೊಂದಿದ..... ಸೃಷ್ಟಿಯ..... ಸಚರಾಚರದ ಒಂದು ಬಗೆಯ ಹೊಗರು..... ವಿನ್ಸೆಂಟ್‌ನಲ್ಲಿ ಭಾವೋದ್ವಿಗ್ನತೆ ಏರುತ್ತಿತ್ತು. ಅದರೊಂದಿಗೆ ಒಂದು ರೀತಿಯ ಯಾತನೆ. ಇಬ್ಬರ ನಡುವೆ ಸ್ಫೋಟಕ ತುಡಿತ. ಅದಮ್ಯ ಕಾಮತೃಷೆ. ಒಬ್ಬರನ್ನೊಬ್ಬರು, ದೇಹದ ಮೂಳೆಗಳೆಲ್ಲ ಪುಡಿಪುಡಿಯಾಗುವಂತೆ ಬಿಗಿಯಾಗಿ ಅಪ್ಪಿದರು.

ತೀರಾ ದಣಿದು ಆಯಾಸಗೊಂಡು ಮೆಲ್ಲನೆ ನಿದ್ದೆಗೆ ಜಾರಿದ.

ಎಚ್ಚರವಾದಾಗ ಅವನೊಬ್ಬನೇ ಇದ್ದ. ಅವನ ಕೆನ್ನೆಗೆ ಮಣ್ಣು ಮೆತ್ತಿಕೊಂಡಿತ್ತು. ಮಣ್ಣಿನ ತಂಪು ಹಾಯೆನಿಸಿತ್ತು. ಎದ್ದು ಈಸಲ್ ಅನ್ನು ಬೆನ್ನಿಗೆ ಕಟ್ಟಿಕೊಂಡ. ಕ್ಯಾನ್‌ವಾಸನ್ನು ಸುತ್ತಿ ಕಂಕುಳಲ್ಲಿ ಇರಿಸಿಕೊಂಡ. ಮನೆಯ ಕಡೆ ಹೆಜ್ಜೆ ಹಾಕಿದ.

"ಮಾಯಾ" ತನ್ನಲ್ಲೇ ಹೇಳಿಕೊಂಡ. "ಮಾಯಾ! ಈ ಹೆಸರನ್ನು ಮೊದಲು ಎಲ್ಲೂ ಕೇಳಿದಂತಿಲ್ಲ. ಇದರ ಅರ್ಥ...... ಇದರ ಅರ್ಥ...... ಏನೆಂದು ತಿಳಿಯುತ್ತಿಲ್ಲ."

ಎರಡನೇ ಸಲ ಕಾಫಿ ಕುಡಿದ. ಲಾ ಮಾರ್ಟಿನ್ ದಾಟಿ ತನ್ನ ಹಳದಿ ಮನೆ ಸೇರಿದ. ಚಳಿಗಾಳಿ ಬೀಸಿತು. ಮಳೆಯ ವಾಸನೆ ಮೂಗಿಗೆ ಬಡಿಯಿತು.

ಈಸಲ್ ಕೆಳಗೆ ಬಿತ್ತು. ಆದರೂ ಸೀಮೆಯೆಣ್ಣೆ ದೀಪವನ್ನು ಹಚ್ಚಿರಲಿಲ್ಲ. ಈಗ ದೀಪಹಚ್ಚಿ ಮೇಜಿನ ಮೇಲೆ ಇರಿಸಿದ. ದೀಪದ ಜ್ವಾಲೆ ಕೋಣೆಯಲ್ಲಿ ಬೆಳಕನ್ನು

ತುಂಬಿತು. ಹಾಸಿಗೆ ಮೇಲೆ ಕಲೆಯಿದ್ದುದು ಕಣ್ಣಿಗೆ ಬಿತ್ತು ಗಾಭರಿಯಿಂದ ಹೆಜ್ಜೆಯಿಟ್ಟು ಕ್ಯಾನ್‌ವಾಸನ್ನು ಎತ್ತಿಕೊಂಡ. ಗಮನಿಸಿದ. ಗಾರ್ಡನ್‌ನಲ್ಲಿ ಭವ್ಯವಾದ ಬೆಳಕಿನ ನೋಟ ಕಣ್ಣಿಗೆ ಬಿತ್ತು. ಬಾಟಲಿಯಾಕಾರದ ಸೈಪ್ರೆಸ್ ಮರಗಳು; ಮೂರು ಪುಟ್ಟಪುಟ್ಟ ಚೆಸ್ಟ್‌ನಟ್ ಮರಗಳು; ಅವುಗಳಲ್ಲಿ ಟೊಬ್ಯಾಕೋ ಮತ್ತು ಆರೆಂಜ್ ಬಣ್ಣದ ಎಲೆಗಳು; ರಕ್ತ ಕೆಂಪಿನ ಬಣ್ಣದ ಎರಡು ಪೊದೆಗಳು; ಸ್ಕಾರಲೆಟ್ ಪರ್ಪಲ್ ಬಣ್ಣದ ಅವುಗಳಲ್ಲಿನ ಎಲೆಗಳು; ಕೆಳಗೆ ದಟ್ಟವಾಗಿ ಬೆಳೆದಿದ್ದ ಹುಲ್ಲು; ಆಕಾಶದ ನೀಲಿಯ ಛಾಯೆಯ ಹರಹು; ಸಲ್ಫರ್ ಹಳದಿ ಬೆಂಕಿನ ಚೆಂಡು ಆಕಾಶದಲ್ಲಿ!

ವಿನ್ಸೆಂಟ್ ಎಲ್ಲವನ್ನೂ ನೋಡುತ್ತಾ ನಿಂತ. ಕೆಲಕ್ಷಣಗಳ ನಂತರ ಅದನ್ನು ಗೋಡೆಯ ಮೇಲೆ ತೂಗು ಹಾಕಿದ. ಹೋಗಿ ಹಾಸಿಗೆ ಮೇಲೆ ಕುಳಿತು, ತನ್ನ ಪೈಂಟಿಂಗ್‌ನತ್ತಲೇ ದೃಷ್ಟಿ ನೆಟ್ಟ. ಮುಖ ಅರಳಿತು.

"ಚೆನ್ನಾಗಿದೆ. ಸರಿಯಾಗಿ ಹಿಡಿದಿದ್ದೇನೆ" ಎಂದು ಗಟ್ಟಿಯಾಗಿ ಹೇಳಿಕೊಂಡ.

–೭–

ಚಳಿಗಾಲ ಬಂತು. ವಿನ್ಸೆಂಟ್ ತನ್ನ ಸ್ಟುಡಿಯೋದಲ್ಲಿಯೇ ಉಳಿದು ಬೆಚ್ಚಗೆ ಕಾಲ ಕಳೆದ. ಥಿಯೋ ಪತ್ರ ಬರೆದ. 'ಗಾಗಿನ್ ಪ್ಯಾರಿಸಿಗೆ ಬಂದಿದ್ದ. ಅವನ ಸ್ಥಿತಿ ಅಷ್ಟಾಗಿ ಚೆನ್ನಾಗಿ ಇರಲಿಲ್ಲ. ಆರ್ಲೆಗೆ ಬರುವ ವಿಚಾರದಲ್ಲಿ, ಖಂಡಿತ ತನಗೆ ಹೋಗದಿರಲು ಸಾಧ್ಯವಿಲ್ಲ ಎಂದು ಹೇಳಿದ' ಎಂಬ ವಿಷಯವನ್ನು ತಿಳಿಸಿದ್ದ. ವಿನ್ಸೆಂಟ್ ಆ ಹಳದಿ ಮನೆ ಇಬ್ಬರ ವಾಸಕ್ಕೆ ಇರಬೇಕೆಂದೇನೂ ಆಲೋಚಿಸಿರಲಿಲ್ಲ. ಅವನ ಉದ್ದೇಶವೆಲ್ಲ ಅದನ್ನೊಂದು ಶಾಶ್ವತ ಸ್ಟುಡಿಯೋ ಆಗಿ ಪರಿವರ್ತಿಸಿ, ಸೌತ್‌ನ ಎಲ್ಲ ಕಲಾವಿದರ ಉಪಯೋಗಕ್ಕೆ ಇರಿಸಬೇಕೆಂದಿತ್ತು. ತಾನು ಮತ್ತು ಗಾಗಿನ್ ಮನೆಯನ್ನು ಒಂದು ಸ್ಥಿತಿಗೆ ತಂದಿರಿಸಿದರು. ವಿನ್ಸೆಂಟ್ ತನ್ನ ಮನೆಯನ್ನು ವಿಸ್ತರಿಸುವ ಹಲವಾರು ಯೋಜನೆಗಳ ಬಗ್ಗೆ ಚಿಂತಿಸಿದ. ಯಾವ ಕಲಾವಿದನೇ ಆದರೂ ಅಲ್ಲಿಗೆ ಬಂದು ಜೊತೆಗೆ ಇರಲು ಬಯಸಿದರೆ, ಸಂತೋಷವಾಗಿ ಸ್ವಾಗತಿಸಲಾಗುತ್ತದೆ ಎಂಬ ಸುದ್ದಿಯೊಂದಿಗೆ, ಇಲ್ಲಿ ಪಡೆಯುವ ಅತಿಥಿ ಸತ್ಕಾರಕ್ಕೆ ಪ್ರತಿಯಾಗಿ, ಕಲಾವಿದರು ಮಾಡುವ ಕ್ಯಾನ್‌ವಾಸ್‌ಗಳಲ್ಲಿ, ತಿಂಗಳಿಗೆ ಒಂದರಂತೆ ಥಿಯೋಗೆ ಕಳಿಸಬೇಕಾಗುತ್ತದೆ ಎಂಬ ಸೂಚನೆಯನ್ನೂ ಜೊತೆಯಲ್ಲಿ ನೀಡಲಾಗಿತ್ತು.

ಸಾಕಷ್ಟು ಕ್ಯಾನ್‌ವಾಸ್‌ಗಳು ಸಂಗ್ರಹವಾದ ಮೇಲೆ ಥಿಯೋ ಗೂಪಿಲ್ಸ್‌ನಿಂದ ಹೊರಗೆ ಬಂದು ತನ್ನದೇ ಆದ ಆರ್ಟ್ ಗ್ಯಾಲರಿಯನ್ನು ತೆರೆಯುವುದಾಗಿತ್ತು.

ವಿನ್ಸೆಂಟ್ ಇನ್ನೂ ಒಂದು ವಿಷಯವನ್ನು ಸ್ಪಷ್ಟವಾಗಿ ಪತ್ರಗಳಲ್ಲಿ ಸೂಚಿಸಿದ. ಸ್ಟುಡಿಯೋದ ನಿರ್ದೇಶಕನಾಗಿ, ಎಲ್ಲಾ ಕಲಾವಿದರ ಮುಖಂಡನಾಗಿ ಗಾಗಿನ್ ಜವಾಬ್ದಾರಿ ನಿರ್ವಹಿಸುತ್ತಾನೆ, ಎಂದು! ತನ್ನ ಬೆಡ್‌ರೂಮನ್ನು ಪೀಠೋಪಕರಣಗಳಿಂದ ಸಜ್ಜುಗೊಳಿಸಲು, ಒಂದೊಂದು ಫ್ರ್ಯಾಂಕನ್ನೂ ಜಾಗರೂಕತೆಯಿಂದ ಉಳಿಸಿದ. ಗೋಡೆಗಳಿಗೆ ತಿಳಿಯಾದ ವಾಯಲೆಟ್ ಬಣ್ಣ ಹಾಕಿದ. ನೆಲವಂತೂ ಕೆಂಪುಟೈಲ್ಸ್

ಹಾಸಿದ್ದಾಗಿತ್ತು. ಆ ಬಣ್ಣಗಳಿಗೆ ಹೊಂದುವಂತೆ ಹಾಸಿಗೆಯ ಮೇಲೆ ಹೊದಿಸಲು, ಹೊದ್ದುಕೊಳ್ಳಲು ಬೇಕಾದ ಚಾದರಗಳು, ದಿಂಬುಗಳು ಮೊದಲಾದವುಗಳನ್ನು ತಂದ. ಮರದ ಮಂಚ, ಕುರ್ಚಿಗಳನ್ನು ತಾಜಾ ಬೆಣ್ಣೆಯ ಬಣ್ಣಗಳಿಂದ ಪೈಂಟ್ ಮಾಡಿದ. ಟಾಯಲೆಟ್‌ನಲ್ಲಿದ್ದ ಮೇಜಿಗೆ ಆರೆಂಜ್ ಬಣ್ಣವನ್ನೂ, ಬೇಸಿನ್‌ಗೆ ನೀಲಿ ಬಣ್ಣವನ್ನೂ ಹಾಕಿದ, ಬಾಗಿಲುಗಳಿಗೆ ಲೈಲಾಕ್ ಬಣ್ಣ ಬಳಿದ. ಕಿಟಕಿ ಬಾಗಿಲುಗಳನ್ನು ಕಿತ್ತೆಸೆದ. ತನ್ನ ಪೈಂಟಿಂಗ್ಸ್‌ಗಳನ್ನೆಲ್ಲಾ ಗೋಡೆಗೆ ತಗುಲಿಸಿದ. ಥಿಯೋ ರೂಮಿಗೆ ಸುಂದರವಾದ ದೃಶ್ಯಗಳಿದ್ದುದನ್ನು ರವಾನಿಸಿದ. ಥಿಯೋ ಇದನ್ನೆಲ್ಲ ನೋಡಿ, ಎಷ್ಟು ಚೆನ್ನಾಗಿದೆ. ಪ್ರಶಾಂತವಾಗಿದೆ ಎಂದು ಕೊಳ್ಳಬೇಕೆಂಬುದು ಅವನ ಉದ್ದೇಶ.

ಗಾಗಿನ್ ರೂಮಿಗೆ ಬಂದಾಗ, ಅವನ ಆಲೋಚನೆಯೇ ಬೇರೆಯಾಗಿತ್ತು. ಅವನಿಗೆ ಈ ಥರದ ಅಗ್ಗದ ವಸ್ತುಗಳು ಸ್ಟುಡಿಯೋದ ನಿರ್ದೇಶಕನಿಗೆ ಸರಿಯಿರುವುದಿಲ್ಲ ಎನಿಸಿತು. ಗಾಗಿನ್‌ಗೆ ಬೇಕಾದ 'ವಾಲ್‌ನಟ್‌ಬೆಡ್' ಮುನ್ನೂರ ಐವತ್ತು ಫ್ರ್ಯಾಂಕ್‌ಗಳೊಳಗೇ ಸಿಗಬಹುದೆಂದು ಭರವಸೆ ನೀಡಿದಳು. ಆದರೆ ಇಷ್ಟು ಮೊತ್ತವನ್ನು ಹೊಂದಿಸುವುದು ಪ್ರಯಾಸದ ಕೆಲಸ. ಸಣ್ಣಪುಟ್ಟ ವಸ್ತುಗಳನ್ನು ಮಾತ್ರ ಕೊಳ್ಳುತ್ತಲೇ ಇದ್ದ. ಹಣ ಒದಗಿಸುವುದರಲ್ಲಿ ಸಾಕಷ್ಟು ಸೋತಿದ್ದ.

ಮಾಡೆಲ್‌ಗಳಿಗೆ ಕೊಡಲು ದುಡ್ಡಿಲ್ಲದೆ ಹೋದಾಗ, ತಾನೇ ಕನ್ನಡಿಯ ಮುಂದೆ ನಿಂತು, ತನ್ನದೇ ಭಾವಚಿತ್ರಗಳನ್ನು ಹಲವು ಬಾರಿ ಬಿಡಿಸಿದ. ರ್‍ಯಾಷೆಲ್, ತಾನು ಮೊದಲಿದ್ದ ಕೆಫೆಯ ಯಜಮಾನನ ಹೆಂಡತಿ ಜಿನೋಕ್ಸ್ ಬಂದು ಅವನಿಗಾಗಿ ಪೋಸುಕೊಡುತ್ತಿದ್ದರು. ಜಿನೋಕ್ಸ್ ಆರ್ಲೆಸಿಯನ್ ಉಡುಪಿನಲ್ಲಿದ್ದಳು. ಬಾಡಿಗೆಗೆ ತಂದಿದ್ದ ಕುರ್ಚಿಯಲ್ಲಿ ಕೂರಿಸಿ, ಪೈಂಟಿಂಗ್ ಮಾಡಿದ. ಒಂದೇ ಗಂಟೆಯಲ್ಲಿ ಭಾವಚಿತ್ರವನ್ನು ಮಾಡಿ ಮುಗಿಸಿಬಿಟ್ಟ. ಹಿಂಬದಿಗೆ ತಿಳಿ ಹಳದಿ, ಮುಖಕ್ಕೆ ಬೂದುಬಣ್ಣ, ಬಟ್ಟೆಗಳಿಗೆ ಕಪ್ಪು ಮತ್ತು ಪ್ರಷ್ಯಿಯನ್ ನೀಲಿಗಳನ್ನು ಬಳಸಿದ.

ಒಬ್ಬ ಸ್ಗೂ ಆವ್ ಹುಡುಗ. ಒಂದು ಸಣ್ಣ ಮೊತ್ತಕ್ಕಾಗಿ ಮಾಡೆಲ್ ಆಗಿ ಬರಲು ಒಪ್ಪಿದ. ಅವನನ್ನು ನೀಲಿ ಸಮವಸ್ತ್ರದಲ್ಲಿ, ಸೊಂಟದವರೆಗಿನ ಭಾಗವನ್ನು ಪೈಂಟ್ ಮಾಡಿದ. ಅವನ ವಕ್ಷಸ್ಥಳದ ಮೇಲಿನ ಎರಡು ಸ್ಟಾರ್‌ಗಳನ್ನೂ ಮರೆಯದೆ ತೋರಿಸಿದ. ಕೆಂಪುಟೋಪಿ, ಹಸಿರು ಹಿನ್ನೆಲೆ. ಹೀಗೆ ಏನೇನೋ ಬಣ್ಣಗಳ, ಬೇರೆಬೇರೆ ಛಾಯೆಗಳ, ಅಸಂಬದ್ಧ ಬೆರಕೆಗಳಲ್ಲಿ, ಒರಟೊರಟಾಗಿ, ಎದ್ದು ಕಾಣುವ ಬಣ್ಣಗಳಲ್ಲಿ ಆ ಕಲಾಕೃತಿಯಿದ್ದರೂ, ಅವೆಲ್ಲವೂ ಕಲಾಕೃತಿಯ ವಸ್ತುವಿಗೆ ಸಮುಚಿತವಾಗಿದೆಯೆಂದೇ ಭಾಸವಾಗುತ್ತಿತ್ತು.

ಕಿಟಕಿಯ ಬಳಿಯಲ್ಲಿ ಪೇಪರ್, ಪೆನ್ಸಿಲ್‌ಗಳನ್ನು ಹಿಡಿದು ಗಂಟೆಗಟ್ಟಲೆ ಕುಳಿತುಕೊಂಡ. ಅತಿ ಶೀಘ್ರವಾಗಿ, ಮನುಷ್ಯರನ್ನು, ಅದರಲ್ಲೂ ಯುವಕ, ಹುಡುಗ, ಮುದುಕ, ಹೆಣ್ಣು, ಕುದುರೆ, ನಾಯಿ ಮೊದಲಾದವುಗಳ ಪೂರ್ತಿ ಆಕಾರಗಳನ್ನು ಸಪ್ರಮಾಣವಾಗಿ ರೇಖೆಗಳಲ್ಲಿ ಹಿಡಿದಿಡುವ ತಂತ್ರವನ್ನು ಸಾಧಿಸಿಕೊಳ್ಳುವುದು ಅವನ ಉದ್ದೇಶವಾಗಿತ್ತು. ಬೇಸಿಗೆಯಲ್ಲಿ ಮಾಡಿದ್ದ ತನ್ನ ಪೈಂಟಿಂಗ್‌ಗಳ ಅನೇಕ ಪ್ರತಿಗಳನ್ನು

ಮಾಡಿದ. ಒಂದ್ಯೆವತ್ತು 'ಸ್ಟಡೀಸ್' (ಹೊರಾಂಗಣ ಚಿತ್ರಗಳು) ಗಳನ್ನು ಮಾಡಲು ಸಾಧ್ಯವಾದರೆ, ಒಂದೊಂದಕ್ಕೆ ಇನ್ನೂರು ಫ್ರಾಂಕ್‌ಗಳ ಲೆಕ್ಕಾಚಾರದಲ್ಲಿ, ಒಂದೇ ವರ್ಷದಲ್ಲಿ ಸಾಕಷ್ಟು ಹಣ ಮಾಡಿ, ಊಟಕ್ಕೆ, ವೈನ್‌ಗೆ ಮೋಸಮಾಡಿಕೊಳ್ಳಬೇಕಾದ ಅಗತ್ಯ ಬರುವುದಿಲ್ಲ ಎಂದುಕೊಂಡ.

ಈ ಬಾರಿಯ ಚಳಿಗಾಲದಲ್ಲಿ, ಅವನು ಅನೇಕ ಪಾಠಗಳನ್ನು ಕಲಿತ. ಯಾವ ನೀಲಿ ಹಾಕಬೇಕು, ಬಣ್ಣಗಳು ಅಳಿಸಿ ಹೋಗದಿರಲು ಏನು ಮಾಡಬೇಕು. ಸದರನ್ ಕಂಟ್ರಿಗೆ ಸಂಬಂಧಿಸಿದ ಪೈಂಟಿಂಗ್ಸ್ ಮಾಡುವಲ್ಲಿ ಎಂತಹ ಬಣ್ಣಗಳನ್ನು ಕಾಂಟ್ರಾಸ್ಟ್ ಆಗಿ ಬಳಸಬೇಕು. ಸಂಗೀತದ ಸುಖವನ್ನು, ಪೈಂಟಿಂಗ್ಸ್‌ನಲ್ಲಿ ತರಲು ಏನು ಮಾಡಬೇಕು, ಹೆಣ್ಣು ಗಂಡುಗಳ ಮುಖದಲ್ಲಿ ದೈವೀ ಕಳೆ ಮೂಡಿಸಲು, ಅವರ ಹಿಂಭಾಗದಲ್ಲಿ ಪ್ರಭಾವಳಿ ಹೇಗೆ ಮೂಡಿಸಬೇಕು ಎಂಬುದನ್ನೆಲ್ಲಾ ಪ್ರಯೋಗಗಳ ಮೂಲಕ ಗ್ರಹಿಸುತ್ತಿದ್ದ.

ವಾನ್‌ಗೋ ಕುಟುಂಬದಲ್ಲಿ, ವಾನ್‌ಗೋ ಸೋದರರಲ್ಲಿ ಒಬ್ಬ ತೀರಿಕೊಂಡದ್ದರಿಂದ, ಥಿಯೋಗೆ, ವಾನ್‌ಗೋ ಅಂಕಲ್‌ನ ಒಂದು ಸ್ವಲ್ಪ ಆಸ್ತಿ ಲಭಿಸಿತು. ಗಾಗಿನ್‌ನನ್ನು ಹೇಗಾದರೂ ತನ್ನ ಬಳಿ ಉಳಿಸಿಕೊಳ್ಳಲೇ ಬೇಕೆಂಬುದು ವಿನ್ಸೆಂಟ್‌ನ ದೃಢವಾದ ಆಲೋಚನೆಯಾಗಿದ್ದರಿಂದ ಥಿಯೋ ತನಗೆ ಬಂದಿದ್ದ ಆಸ್ತಿಯಲ್ಲಿನ ಅರ್ಧಭಾಗವನ್ನು ಗಾಗಿನ್‌ನ ಕೊಠಡಿಯನ್ನು ಫರ್ನಿಷ್ ಮಾಡಲು ಖರ್ಚುಮಾಡಿದ. ವಿನ್ಸೆಂಟ್‌ಗೆ ಇದರಿಂದ ಬಹಳ ಸಂತೋಷವಾಯಿತು. ಹಳದಿ ಮನೆಯನ್ನು ಹಲವು ರೀತಿಯಲ್ಲಿ ಅಲಂಕರಿಸುವ ಯೋಜನೆಗಳನ್ನು ಹಾಕಿಕೊಂಡ. ಆರ್ಲೆಯ ವಿಶಿಷ್ಟವಾದ ಸೂರ್ಯಕಾಂತಿ ಹೂಗಳ ಒಂದು ಹನ್ನೆರಡು ಪ್ಯಾನೆಲ್‌ಗಳು ಬೇಕೆಂದುಕೊಂಡ. ಹಳದಿ ಮತ್ತು ನೀಲಿ ಬಣ್ಣಗಳ ಸುಂದರ ಸಾಮರಸ್ಯವಿರುವಂತೆ ನೋಡಿಕೊಳ್ಳಬೇಕೆಂಬುದನ್ನು ಮರೆಯಲಿಲ್ಲ.

ರೈಲ್ವೆ ಪ್ರಯಾಣ ಉಚಿತವೆಂಬ ಸುದ್ದಿಯನ್ನು ಕೇಳಿಯೂ ಗಾಗಿನ್ ಉತ್ಸಾಹ ತೋರಲಿಲ್ಲ. ಇಷ್ಟೆಲ್ಲ ಆಗುತ್ತಿದ್ದರೂ ಗಾಗಿನ್ ಪಾಂಟ್ ಅವಾನ್‌ನಲ್ಲಿರಲು ಬಯಸಿದ್ದು ಯಾಕೆಂದು ಅರ್ಥವಾಗಲಿಲ್ಲ. ಗಾಗಿನ್ ಬರುವುದರೊಳಗೆ ಸ್ಟುಡಿಯೋ ಅಲಂಕರಣ ವ್ಯವಸ್ಥೆಯನ್ನು ಮುಗಿಸಬೇಕೆಂದು ಕಾತುರನಾಗಿದ್ದ.

ವಸಂತದ ಆಗಮನವಾಯಿತು. ಮನೆಯ ಹಿಂದೆ, ಸಾಲುಸಾಲಾಗಿ ಪೊದೆಗಳಲ್ಲಿ ಓಲಿಯಾಂಡರ್ ಹೂಗಳು ಯದ್ವಾತದ್ವಾ ಬೆಳೆದು ಕಣ್ಮನಗಳನ್ನು ಸೆಳೆಯುತ್ತಿದ್ದವು.

ವಿನ್ಸೆಂಟ್ ಈಸಲ್ ಅನ್ನು ಬೆನ್ನಿಗೇರಿಸಿದ. ಹನ್ನೆರಡು ಪ್ಯಾನೆಲ್‌ಗಳನ್ನೂ ಹೊತ್ತು, ಆ ಹಳ್ಳಿಗಾಡಿನ ಪ್ರದೇಶದಲ್ಲೆಲ್ಲ ಸೂರ್ಯಕಾಂತಿ ಹೂಗಳಿಗಾಗಿ ಹುಡುಕಾಡಿದ. ಉತ್ತಿದ್ದ ನೆಲದ ಮಣ್ಣು ಮೆದುವಾಗಿತ್ತು, ಆಕಾಶ ಬಿಳಿ ಮೋಡಗಳಿಂದ ಆಚ್ಛಾದಿತವಾಗಿತ್ತು. ಕ್ಷಣಾರ್ಧದಲ್ಲಿಯೇ ಕೆಲವು ಸೂರ್ಯಕಾಂತಿ ಹೂಗಳನ್ನು ಅವುಗಳ ಕಾಂಡದೊಂದಿಗೆ ಅಲ್ಲಿಯೇ ಪೈಂಟ್ ಮಾಡಿದ. ಮತ್ತೆ ಕೆಲವನ್ನು ಮನೆಯಲ್ಲಿ ಹೂದಾನಿಯಲ್ಲಿರಿಸಿ ಪೈಂಟ್ ಮಾಡಲೆಂದು, ಸಂಗ್ರಹಿಸಿ ಜೊತೆಗಿರಿಸಿಕೊಂಡ.

ಪ್ಲೇಸ್ ಲಾಮಾರ್ಟಿನ್‌ನ ನಿವಾಸಿಗಳಿಗೆ ಬೆರಗು ಹುಟ್ಟಿಸುವಂತೆ, ಮನೆಯ ಹೊರಭಾಗವನ್ನೆಲ್ಲ ಹಳದಿ ಬಣ್ಣದಿಂದ ಪೈಂಟ್ ಮಾಡಿದ.

ಮನೆಗೆ ಸಂಬಂಧಪಟ್ಟ ಕೆಲಸಗಳನ್ನೆಲ್ಲ ಪೂರ್ತಿ ಮಾಡುವಷ್ಟು ಹೊತ್ತಿಗೆ ಬೇಸಿಗೆ ಬಂತು. ಅದರ ಜೊತೆಗೇ ಸುಡುವ ಬಿಸಿಲೂ ಕೂಡಾ! ವಾಮೂಲಿಯಂತೆ ಬೇಸಿಗೆಯಲ್ಲಿನ ಬಿರುಗಾಳಿಯು ಆಗಮನವೂ ಆಯಿತು. ಇವುಗಳೊಂದಿಗೆ ವಾತಾವರಣದಲ್ಲಿನ ಏರುಪೇರಿನಿಂದಾಗಿ, ಬಿರುಗಾಳಿಯ ಸಂಕಟ, ಹಿಂಸೆಗಳೂ ಅನಿವಾರ್ಯವಾದವು.

ಪಾಲ್ ಗಾಗಿನ್ ಕೂಡಾ ಇದೇ ಸಮಯಕ್ಕೆ ಬಂದಿಳಿದ.

ಬೆಳಗಿನ ಜಾವಕ್ಕೆ ಮುಂಚೆಯೇ ಬಂದು ತಲುಪಿದ್ದರಿಂದ ಸೂರ್ಯೋದಯವಾಗುವವರೆಗೆ ರಾತ್ರಿಯೆಲ್ಲ ಕೆಫೆಯಲ್ಲಿ ಕಾದು ಕುಳಿತ. ಕೆಫೆಯ ಮಾಲಿಕ ಅವನನ್ನು ಗುರುತಿಸಿ ಸಂತೋಷ ವ್ಯಕ್ತಪಡಿಸಿ, "ನೀನು ಗೆಳೆಯ! ನನಗೆ ಗೊತ್ತು" ಎಂದು ಉದ್ಗರಿಸಿದ.

"ಏನು ನೀನು ಮಾತಾಡ್ತಿರೋದು?"

"ಮಿಸ್ಟರ್ ವಾನ್‌ಗೋ, ನೀನು ಕಳಿಸಿದ ಭಾವಚಿತ್ರ ತೋರಿಸಿದ. ಅದು ನಿನ್ನ ಹಾಗೆಯೇ ಇತ್ತು ಮಿಸ್ಟರ್."

ಗಾಗಿನ್ ಮನೆ ತಲುಪಿ ವಿನ್ಸೆಂಟ್‌ನನ್ನು ಎಬ್ಬಿಸಿದ. ಇಬ್ಬರ ನಡುವೆ ಹುಡುಗಾಟದ, ಸಂಭ್ರಮದ ನೆನಪುಗಳ ವಿನಿಮಯ ನಡೆಯಿತು. ಒಬ್ಬರನ್ನೊಬ್ಬರು ಸ್ನೇಹದಿಂದ ಅಪ್ಪಿಕೊಂಡರು. ವಿನ್ಸೆಂಟ್ ಗಾಗಿನ್‌ಗೆ ಮನೆಯೆಲ್ಲಾ ತೋರಿಸಿದ. ಅವನ ಲಗೇಜ್ ಅನ್ನು ತೆಗೆದಿರಿಸಲು ಸಹಾಯ ಮಾಡಿದ. ಪಾರಿಸಿನ ಸುದ್ದಿ ಸಮಾಚಾರ ವಿಚಾರಿಸಿದ. ಎಷ್ಟೋ ಹೊತ್ತು ಇಬ್ಬರು ಗೆಳೆಯರೂ ತುಂಬಾ ಉತ್ಸಾಹದೊಂದಿಗೆ ಮಾತಾಡುತ್ತಿದ್ದರು.

"ಇವತ್ತೇ ಕೆಲಸ ಶುರು ಮಾಡುವ ಯೋಚನೆಯಲ್ಲಿ ಇದ್ದೀಯ ಗಾಗಿನ್?"

"ಏನೆಂದುಕೊಂಡಿದ್ದೀಯ. ನಾನೇನು ಕರೋಲಸ್ ದ್ಯುರಾನ್ ಆಗಿದ್ದೀನೆಯೇ? ಬರುತ್ತಿದ್ದ ಹಾಗೆ ಪ್ಯಾಲೆಟ್ ಹಿಡ್ಕೊಂಡು, ಸೂರ್ಯನ ಬೆಳಕನ್ನು ಒಮ್ಮೆಲೇ ಹಿಡಿದಿಡೋಕೆ?"

"ಸುಮ್ಮನೆ ಹಾಗೇ ವಿಚಾರಿಸಿದೆ, ಅಷ್ಟೆ!"

"ಹಾಗಾದರೆ ಹುಚ್ಚು ಪ್ರಶ್ನೆಗಳನ್ನು ಕೇಳಬೇಡ."

"ನಾನೂ ಇವತ್ತು ರಜೆ ಹಾಕಿಬಿಡ್ತೀನಿ. ಬಾ ಹೋಗೋಣ. ನಿನಗೆ ಊರೆಲ್ಲಾ ತೋರಿಸಿಕೊಂಡು ಬರ್ತೀನಿ."

ಗಾಗಿನ್‌ನನ್ನು ಗುಡ್ಡದ ಮೇಲಕ್ಕೆ ಕರೆದೊಯ್ದ. ಹೋಗುವಾಗ, ಸೂರ್ಯನಿಂದ ಬೆಂದ ಪ್ಲಾಸ್ ದ ಲ ಮೈರೀ, ಮಾರ್ಕೆಟ್ ರಸ್ತೆಗಳನ್ನೂ ತೋರಿಸಿದ. ಬ್ಯಾರಾಕ್ಸ್‌ಗಳ ಹಿಂದೆ ಸ್ಗೂಆವ್‌ರು ನೆಲ ಕೊರೆಯುತ್ತಿದ್ದರು. ಅವರು ಧರಿಸಿದ್ದ ಫೆಜೆ (ಶಂಕು

ಆಕಾರದ ಕೆಂಪು ತುರ್ಕಿ ಟೋಪಿಗಳ)ಗಳು ಬಿಸಿಲಿಗೆ ಬೆಂದಿದ್ದವು. ರೋಮನ್ ಫೋರಮ್ ಮುಂದಿದ್ದ ಸಣ್ಣ ಪಾರ್ಕಿನ ಮೂಲಕ ಕರೆದೊಯ್ದು.

ಆರ್ಲೆ ಪ್ರಜೆಗಳು ಬೆಳಗಿನ ವಾಯುವಿಹಾರದಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಅಡ್ಡಾಡುತ್ತಿದ್ದರು. ಅವರೆಲ್ಲ ಎಷ್ಟು ಸುಂದರವಾಗಿದ್ದಾರೆಂಬುದನ್ನು ಗಾಗಿನ್‌ಗೆ ತಿಳಿಸಲು ಕಾಯುತ್ತಿದ್ದ.

"ಆರ್ಲೇಸಿಯನ್‌ರನ್ನು ನೋಡಿದರೆ ನಿನಗೆ ಹೇಗನಿಸುತ್ತೆ ಗಾಗಿನ್?"

"ಅದ್ಭುತ! ನಾನು ಸೈಲರ್ ಆಗಿದ್ದೆ."

"ಚೆನ್ನಾಗಿದೆ!..... ಇರಲಿ ಇನ್ನು ಮುಂದೆ ಅಡಿಗೆ ಜವಾಬ್ದಾರಿ ನಿಂದು. ನೀನು ಬಂದದ್ದಕ್ಕಾಗಿ, ನಿನ್ನ ಗೌರವಾರ್ಥ ಇವತ್ತು ಸೂಪನ್ನು ನಾನೇ ಮಾಡ್ತೀನಿ."

ರಾತ್ರಿ ಸೂಪ್ ಬಡಿಸಿದಾಗ ಗಾಗಿನ್‌ಗೆ ತಿನ್ನಲು ಸಾಧ್ಯವೇ ಆಗಲಿಲ್ಲ."

"ಏನೇನು ಬೆರೆಸಿದ್ದೀಯ ಮಹರಾಯ? ನನಗೆ ಊಹಿಸಲೂ ಆಗುತ್ತಿಲ್ಲ. ಅದೇ ನಿನ್ನ ಬಣ್ಣಗಳ ಅರ್ಥವಿಲ್ಲದ ಬೆರಕೆಯಂತೆ! ಕ್ಷಮಿಸು. ಹೇಳದೆ ವಿಧಿಯಿಲ್ಲ."

"ನನ್ನ ಪಿಕ್ಚರ್ಸ್‌ನಲ್ಲಿ, ಏನಾಗಿದೆ ಬಣ್ಣಗಳಿಗೆ?"

"ಗೆಳೆಯಾ ನೀನಿನ್ನೂ 'ನಿಯೋ ಇಂಪ್ರೆಷನಿಸಂ' ಜೊತೆಗೇ ಗುದ್ದಾಡ್ತಾ ಇದ್ದೀಯ. ದಯವಿಟ್ಟು ಆ ಶೈಲಿಯನ್ನು ಬಿಟ್ಟು ಬಿಡು. ನಿನ್ನ ಸ್ವಭಾವಕ್ಕೆ ಅದು ಹೊಂದುವುದಿಲ್ಲ."

ವಿನ್ಸೆಂಟ್ ತನ್ನ ಮುಂದಿದ್ದ ಸೂಪ್ ಬೌಲನ್ನು ಪಕ್ಕಕ್ಕೆ ತಳ್ಳಿಬಿಟ್ಟ.

"ನೋಡಿದ ತಕ್ಷಣವೇ ಅದನ್ನು ಹೇಳಿ ಬಿಡ್ತೀಯಲ್ಲ? ನೀನೊಬ್ಬ ಕಲಾವಿಮರ್ಶಕನೇ"

"ನಾನೇನು ಹೇಳೋದು. ನೀನೇ ಸರಿಯಾಗಿ ನೋಡು..... ಕಣ್ಣಿಗೆ ರಾಚುವ ಈ ಹಳದಿ ಬಣ್ಣ ಎಷ್ಟು ಅಸ್ತವ್ಯಸ್ತವಾಗಿದೆ."

ವಿನ್ಸೆಂಟ್ ಗೋಡೆ ಮೇಲಿದ್ದ ಪ್ಯಾನೆಲ್‌ಗಳಲ್ಲಿನ ಸೂರ್ಯಕಾಂತಿ ಹೂಗಳನ್ನು ನೋಡಿದ.

"ನನ್ನ ಸೂರ್ಯಕಾಂತಿ ಹೂಗಳ ಬಗ್ಗೆ ಹೇಳೋಕೆ ಇಷ್ಟೇನಾ ಉಳಿದಿರುವುದು?"

"ಇಲ್ಲಪ್ಪ, ಇನ್ನಷ್ಟು ದೋಷಗಳನ್ನು ತೋರಿಸಿ ಕೊಡಬಲ್ಲೆ."

"ಅವುಗಳಲ್ಲಿ?"

"ಅವುಗಳಲ್ಲಿ ಸಾಮರಸ್ಯ?.... ಯಾಂತ್ರಿಕ, ಅಪೂರ್ಣ ಎನಿಸುತ್ತೆ."

"ಸುಳ್ಳು! ಅದು ಬರೀ ಸುಳ್ಳು!

"ಕೂತ್ಕೋ ವಿನ್ಸೆಂಟ್, ನನ್ನನ್ನು ಕೊಲ್ಲುವ ಹಾಗೆ ನೋಡಬೇಡ. ನಿನಗಿಂತ ವಯಸ್ಸಿನಲ್ಲಿ, ಅನುಭವದಲ್ಲಿ ಸಾಕಷ್ಟು ದೊಡ್ಡವನು, ಇನ್ನೂ ನೀನು, ನಿನ್ನನ್ನು ಕಂಡುಕೊಳ್ಳುವುದರಲ್ಲಿಯೇ ಇದ್ದೀಯ. ದಯವಿಟ್ಟು ನಾನು ಹೇಳುವುದನ್ನು ಕೇಳಿಸಿಕೋ. ನಿನಗೆ ಉಪಯುಕ್ತವಾದ ಕೆಲವು ವಿಚಾರಗಳನ್ನು ವಿವರಿಸ್ತೀನಿ."

"ಕ್ಷಮಿಸು ಪಾಲ್. ನೀನು ನನಗೆ ಸಹಾಯ ಮಾಡಬೇಕು, ಅನ್ನೋದೇ ನನ್ನ ಬಯಕೆ."

"ಹಾಗಾದರೆ ಮೊದಲು, ನಿನ್ನ ತಲೆ ತುಂಬಿಸಿಕೊಂಡಿರುವ ಮಿಸ್ಸೊನಿಯೆರ್ ಮತ್ತು ಮಾಂಟಿಸೆಲ್ಲಿಯರೇ ಬೇರು ಬಿಟ್ಟಿದ್ದಾರೆ. ಅವರಿಬ್ಬರೂ ಪ್ರಯೋಜನವಿಲ್ಲದವರು. ಅವರನ್ನು ಮೆಚ್ಚುತ್ತಾ, ಆರಾಧಿಸುತ್ತ ಇರುವವರೆಗೆ, ನಿನ್ನಿಂದ ಒಂದೂ ಕೂಡಾ ಮಹತ್ವದ ಕಲಾಕೃತಿ ಸೃಷ್ಟಿಯಾಗಲಾರದು."

"ಮಾಂಟಿಸೆಲ್ಲಿ ಬಹುದೊಡ್ಡ ವರ್ಣಚಿತ್ರ ಕಲಾವಿದನಾಗಿದ್ದ. ಬಣ್ಣಗಳ ಬಗ್ಗೆ ಅವನಿಗೆ ತಿಳಿದಿದ್ದಷ್ಟು ಅವನ ಕಾಲದ ಬೇರೆ ಯಾರಿಗೂ ತಿಳಿದಿರಲಿಲ್ಲ."

"ಅವನೊಬ್ಬ ಕುಡುಕ ಈಡಿಯಟ್, ಅಷ್ಟೆ!"

ವಿನ್ಸೆಂಟ್ ಥಟ್ಟನೆ ಜಿಗಿದೆದ್ದು ನಿಂತ. ಗಾಗಿನ್‌ನನ್ನು ನೋಡಿದ. ಸೂಪ್ ಬೌಲ್ ಕೆಳಗೆ ಬಿದ್ದು ಕೆಂಪು ಟೈಲ್ಸ್ ಮೇಲೆಲ್ಲಾ ಚೆಲ್ಲಿತು.

"ಫಾದಾ'ನನ್ನು ಹಾಗೇ ಕರೀತೀಯ! ಅವನನ್ನು ನನ್ನ ಸೋದರನಿಗಿಂತ ಹೆಚ್ಚಾಗಿ ಪ್ರೀತಿಸ್ತೀನಿ. ಅವನು ಕುಡುಕ, ಅದೂ ಇದೂಂತ ಏನೇನೋ ಅವನ ಬಗ್ಗೆ ಮಾತಿದ್ದರೂ ಕೂಡಾ, ಯಾವ ಕುಡುಕನಿಂದಲೂ ಮಾಂಟಿಸೆಲ್ಲಿಯ ಚಿತ್ರಗಳನ್ನು ಮಾಡಲು ಸಾಧ್ಯವಿರುತ್ತಿರಲಿಲ್ಲ. ಆರು ಬಣ್ಣಗಳನ್ನು ಸರಿಯಾದ ಲೆಕ್ಕಾಚಾರಗಳಲ್ಲಿ ಸಮ ತೂಗಿಸಿಕೊಂಡು ಸಮನ್ವಯದೊಂದಿಗೆ, ಕ್ಯಾನ್‌ವಾಸ್‌ನಲ್ಲಿ ಇಳಿಸುವುದಕ್ಕೆ, ತಲೆ ಸರಿಯಾಗಿರಲೇ ಬೇಕು. ಫದಾ ಬಗ್ಗೆ ಇರುವ ಟೀಕೆಗಳನ್ನು ಮತ್ತೆ ನೀನು ಮುಂದುವರೆಸುವುದಾದರೆ, ಅವನ ಬಗ್ಗೆ ಅಪಪ್ರಚಾರ ಮಾಡಿದ ಆ ಕೆಟ್ಟ ಹೆಂಗಸಿಗಿಂತ ಮೇಲೆಂದು ನಾನು ಭಾವಿಸುವುದಿಲ್ಲ.

ತಣ್ಣೀರನ್ನು ಮುಖಕ್ಕೆ ಎರಚಿದಾಗ, ಥಟ್ಟನೆ ಹಿಮ್ಮೆಟ್ಟುವಂತೆ, ಹಿಮ್ಮೆಟ್ಟಿದ. ಒಳಗೆ ಭಾವನೆಗಳ ಒತ್ತಡದಿಂದ ಉಸಿರು ಕಟ್ಟಿದಂತಾಗುತ್ತಿತ್ತು. ಕೋಪವನ್ನು ತಡೆದಿಟ್ಟುಕೊಳ್ಳಲು ಪ್ರಯತ್ನಿಸಿದ. ಆದರೂ ಸಾಧ್ಯವಾಗಲಿಲ್ಲ. ತನ್ನ ಬೆಡ್‌ರೂಮ್‌ನತ್ತ ರಭಸದಿಂದ ಹೆಜ್ಜೆ ಹಾಕಿದ. ದಢಾರನೆ ಬಾಗಿಲು ಮುಚ್ಚಿಕೊಂಡ.

–೮–

ಮಾರನೆದಿನ ಬೆಳಿಗ್ಗೆ ಹೊತ್ತಿಗೆ ಜಗಳ ಮರೆತುಹೋಗಿತ್ತು. ಇಬ್ಬರೂ ಒಟ್ಟಿಗೆ ಕಾಫಿ ಕುಡಿದ ನಂತರ, ತಮತಮಗೆ ಬೇಕಾದ ವಸ್ತುಗಳನ್ನು ಹುಡುಕಿಕೊಂಡು ಬೇರೆ ಬೇರೆ ದಿಕ್ಕಿಗೆ ಹೊರಟರು. ವಿನ್ಸೆಂಟ್ ರಾತ್ರಿ ಮನೆಗೆ ಬರುವಷ್ಟು ಹೊತ್ತಿಗೆ ಪೂರ್ತಿ ಆಯಾಸಗೊಂಡಿದ್ದ. ಅಗತ್ಯವಾದ ಆರು ಬಣ್ಣಗಳ ಸಮನ್ವಯ ಸಾಧಿಸುವುದರಲ್ಲಿಯೇ ಅವನಿಗೆ ಸಾಕಾಗಿ ಹೋಗಿತ್ತು. ವಿನ್ಸೆಂಟ್ ಬರುವಷ್ಟರಲ್ಲಿ ಗಾಗಿನ್ ಆಗಲೇ ಬಂದು ಬಿಟ್ಟು, ಪುಟ್ಟ ಸ್ಟೋವ್ ಮೇಲೆ ರಾತ್ರಿ ಊಟದ ತಯಾರಿಯಲ್ಲಿ ತೊಡಗಿದ್ದ. ಸ್ವಲ್ಪ ಹೊತ್ತು ಇಬ್ಬರೂ ಮಾತಾಡಿಕೊಂಡರು. ವಿಷಯವಂತೂ ಮಾಮೂಲಿ..... ಪೈಂಟರ್ಸ್, ಪೈಂಟಿಂಗ್ಸ್,– ಇವೇ! ಇಬ್ಬರದೂ ಸಮಾನ ಆಸಕ್ತಿಗಳು.

ಯುದ್ಧ ಮುಂದುವರೆಯಿತು.

ಗಾಗಿನ್ ಮೆಚ್ಚಿದ್ದ ಕಲಾವಿದರು ವಿನ್ಸೆಂಟ್‌ಗೆ ಒಪ್ಪಿಗೆಯಾಗುತ್ತಿರಲಿಲ್ಲ. ಹಾಗೆಯೇ ವಿನ್ಸೆಂಟ್ ಮೆಚ್ಚಿ ಹೊಗಳಿದವರನ್ನು ಗಾಗಿನ್ ಖಂಡತುಂಡವಾಗಿ ಟೀಕಿಸಿ, ಮೂಲೆಗೆ ತಳ್ಳಿಬಿಡುತ್ತಿದ್ದ. ತಮ್ಮ ಕಲೆಗೆ ಸಂಬಂಧಿಸಿದ ಪ್ರತಿ ವಿಷಯದಲ್ಲಿಯೂ ಇಬ್ಬರ ಅಭಿಪ್ರಾಯಗಳೂ ವಿರುದ್ಧವಾಗಿರುತ್ತಿದ್ದವು. ಈ ವಿಷಯವೊಂದನ್ನು ಬಿಟ್ಟರೆ, ಬೇರೆ ವಿಷಯಗಳಲ್ಲಿ ಬಹಳ ಸಮಾಧಾನವಾಗಿ, ಸ್ನೇಹಚಿತ್ತದಿಂದ ಮಾತಾಡುತ್ತಿದ್ದರು. ಪೈಂಟಿಂಗ್ ವಿಷಯದಲ್ಲಿ ಯಾರೊಬ್ಬರೂ ಸೋಲನ್ನು ಒಪ್ಪಿಕೊಳ್ಳಲು ಸಿದ್ಧವಾಗಿರಲಿಲ್ಲ. ಸೋತು ಸುಸ್ತಾಗಿ ಹೋಗುವವರೆಗೂ ವಾಗ್ವಾದ ನಡೆಯುತ್ತಲೇ ಇರುತ್ತಿತ್ತು. ಒಂದೊಂದು ಸಲ ವಿನ್ಸೆಂಟ್‌ನ ಮಾತಿನ ಆಕ್ರಮಣ ಭಯಂಕರವೆನಿಸಿದರೂ, ಗಾಗಿನ್ ಕೂಡಾ ಸುಮ್ಮನೆ ಇರುತ್ತಿರಲಿಲ್ಲ. ಒಟ್ಟಿನಲ್ಲಿ ಇಬ್ಬರ ಬಲಾಬಲಗಳೂ ಸಮಾನವಾಗಿದ್ದವು.

ವಾಗ್ವಾದವಿಲ್ಲದ ವಿಷಯಗಳ ಬಗ್ಗೆ ಮಾತಾಡುವಾಗಲೂ ಅವರ ಮಾತಿನಲ್ಲಿ ಉದ್ರಿಕ್ತತೆ ಇದ್ದೇ ಇರುತ್ತಿತ್ತು. ವಿದ್ಯುತ್ ಹರಿದು, ಮಾತು ಉತ್ತೇಜಕವಾಗಿ ಮುಂದುವರೆದು, ಎಲ್ಲಾ ಮಾತು ಮುಗಿದ ಮೇಲೆ, ಬ್ಯಾಟರಿ ಡೌನ್ ಆದಂತೆ, ತಣ್ಣಗಾಗುತ್ತಿದ್ದರು.

"ನೀನೆಂದೂ, ಕಲಾವಿದನಾಗಲು ಸಾಧ್ಯವೇ ಇಲ್ಲ. ಎಲ್ಲಿಯವರೆಗೆ ಪ್ರಕೃತಿಯನ್ನು ಗಮನಿಸಿ, ನಿನ್ನ ಹಿಂದಿನ ಸ್ಟುಡಿಯೋಗೆ ಮರಳಿ ಸಮಾಧಾನದಿಂದ, ಕೃತಿ ರಚನೆ ಮಾಡುವುದಿಲ್ಲವೋ, ಅಲ್ಲೀವರೆಗೆ ಕಲಾವಿದನಾಗಲಾರೆ."

"ನಾನೆಂದೂ ಕೋಲ್ಡ್ ಬ್ಲಡ್ ಸ್ಥಿತಿಯಲ್ಲಿ ಪೈಂಟಿಂಗ್ ಮಾಡೋದಿಲ್ವೋ ಈಡಿಯಟ್! ಹಾಟ್ ಬ್ಲಡ್ ಸ್ಥಿತಿಯಲ್ಲಿಯೇ ನನಗೆ ಮಾಡೋಕೆ ಇಷ್ಟ. ಅದಕ್ಕೇ ನಾನು ಈ ಆರ್ಲೆಗೆ ಬಂದಿರೋದು?"

"ನೀನು ಮಾಡಿರುವ ಇದೆಲ್ಲ ಕೆಲಸ. ಕೇವಲ ಪ್ರಕೃತಿಯ, ಗುಲಾಮಿ ರೀತಿಯ ಅನುಕರಣೆ!"

"ನೀನು ಸಮಯ ಸ್ಫೂರ್ತಿಯಿಂದ ಕೆಲಸ ಮಾಡಬೇಕು."

"ಸಮಯ ಸ್ಫೂರ್ತಿ! ಭೇಷ್, ಚೆನ್ನಾಗಿದೆ!"

"ಇನ್ನೊಂದು ವಿಷಯ. ಸ್ಯುರಾತ್ ಹೇಳಿದ್ದನ್ನು ಕೇಳಿಸಿಕೊಂಡಿದ್ದರೆ, ಚೆನ್ನಾಗಿ ಮಾಡಬಹುದಿತ್ತು. ಪೈಂಟಿಂಗ್ ಅನ್ನೋದು ಅಮೂರ್ತ ಕಲ್ಪನೆ. ಕತೆ ಹೇಳಲು, ನೀತಿ ಬೋಧೆ ಮಾಡಲು ಇದರಲ್ಲಿ ಅವಕಾಶ ಇಲ್ಲ."

"ಏನು ನಾನು ನೀತಿ ಹೇಳುತ್ತಿದ್ದೇನೆಯೇ? ನಿನಗೆಲ್ಲೋ ತಲೆ ಕೆಟ್ಟಿರಬೇಕು."

"ನಿನಗೆ ನೀತಿ ಬೋಧನೆ ಮಾಡುವ ಉದ್ದೇಶವಿದ್ದರೆ ಕ್ರೈಸ್ತ ಮಠಗಳನ್ನು ಸೇರು. ಪೈಂಟಿಂಗ್ ಅಂದರೆ, ಬಣ್ಣ, ರೂಪ, ರೇಖೆ – ಅಷ್ಟೇ! ಅದಕ್ಕಿಂತ ಬೇರೇನೂ ಅಲ್ಲ. ಕಲಾವಿದ, ನಿಸರ್ಗವನ್ನು ಕಲಾತ್ಮಕವಾಗಿ ಅಲಂಕಾರಿಕವಾಗಿ ಪ್ರತಿಸೃಷ್ಟಿ ಮಾಡಬಲ್ಲ. ಅಷ್ಟೇ."

"ಏನು ಆಲಂಕಾರಿಕ ಕಲೆಯೇ? ನಿನ್ನ ದೃಷ್ಟೀಲಿ ಪ್ರಕೃತಿ ಅಷ್ಟಕ್ಕೆ ಮಾತ್ರವೇ ಎಂದಾದರೆ, ನೀನು ನಿನ್ನ ಸ್ಟಾಕ್ ಎಕ್ಸ್‌ಚೇಂಜ್‌ಗೆ ಹೊರಟು ಹೋಗು."

"ಸರಿ, ಹಾಗೇನಾದರೂ ನಾನು ಅಲ್ಲಿಗೆ ಹೋದರೆ, ಭಾನುವಾರಗಳಂದು ನಿನ್ನ ಉಪದೇಶ ಕೇಳಲು ಚರ್ಚಿಗೆ ಬರುತ್ತೇನೆ.... ಸರಿ. ಪ್ರಕೃತಿಯಿಂದ ಮತ್ತೇನನ್ನು ಪಡೆಯುತ್ತೀಯ ಬ್ರಿಗೇಡಿಯರ್?"

"ನನಗೆ, ಬದುಕಿನ ಲಯಗಳು, ಚಲನಶೀಲತೆಗಳು ದೊರೆಯುತ್ತವೆ, ಗಾಗಿನ್."

"ಸರಿ. ಹೊರಡೋಣ."

"ನಾನು ಸೂರ್ಯನನ್ನು ಚಿತ್ರಿಸಿದರೆ, ಜನಕ್ಕೆ ಆ ಸೂರ್ಯನು ತಿರುಗುತ್ತಿರುವ ಭಯಂಕರ ವೇಗವು ಅನುಭವಕ್ಕೆ ಬರಬೇಕು. ಬೆಳಕು, ಶಾಖದ ಅದ್ಭುತ ಶಕ್ತಿ ಅವರಿಗೆ ತಿಳಿಯಬೇಕು. ಧಾನ್ಯದ ಹೊಲ ಪೈಂಟ್ ಮಾಡಿದರೆ ಧಾನ್ಯದೊಳಗಿನ ಒಂದೊಂದು ಅಣುವೂ ಒತ್ತರಿಸುತ್ತಾ ಬೆಳೆಬೆಳೆದು ಒಡೆಯುವುದನ್ನು ಜನ ಅನುಭವಿಸಬೇಕು. ಒಂದು ಸೇಬನ್ನು ಪೈಂಟ್‌ಮಾಡಿದಾಗ ಅದರ ರಸವನ್ನು ಅನುಭವಿಸಬೇಕು. ಬೀಜಗಳು ಮೊಳಕೆಯೊಡೆದು ಕಾಯಾಗಿ ಹಣ್ಣಾಗುವುದನ್ನೆಲ್ಲ ಅನುಭವಿಸುವಂತಿರಬೇಕು!"

"ವಿನ್ಸೆಂಟ್, ನಾನು ಎಷ್ಟು ಸಲ ಹೇಳಲ್ಲ, ಪೈಂಟರ್ಸ್ ಸಿದ್ಧಾಂತಗಳನ್ನು ಇಟ್ಟುಕೊಳ್ಳಬಾರದು."

"ಈ ದ್ರಾಕ್ಷಿ ತೋಟವನ್ನೇ ನೋಡು ಗಾಗಿನ್! ಈ ದ್ರಾಕ್ಷಿ ಹಣ್ಣುಗಳು ಇನ್ನೇನು ಸಿಡಿದು ನಿನ್ನ ಕಣ್ಣಿಗೇ ಬಡಿಯುವಂತಹ ಸ್ಥಿತಿಯಲ್ಲಿವೆ. ಈ ರ್‍ಯಾವೈನ್‌ನನ್ನೇ ನೋಡು. ಮಿಲಿಮಿಲಿಯ ಟನ್‌ಗಳಷ್ಟು ನೀರು ಅದರೊಳಕ್ಕೆ ಸುರಿದು ಬೀಳುವುದನ್ನು ನಿಜವಾಗಿಯೂ ಫೀಲ್ ಮಾಡಬೇಕು. ಮನುಷ್ಯನನ್ನು ಪೈಂಟ್ ಮಾಡಿದರೆ, ಆ ಚಿತ್ರದಲ್ಲಿ ಅವನ ಸಮಗ್ರ ಬದುಕು, ನೋವು, ನಲಿವುಗಳೆಲ್ಲ ಸೇರಿದಂತೆ ಜನರ ಅನುಭವಕ್ಕೆ ಬರಬೇಕು!"

"ಏನು ಹೇಳಬೇಕೂಂತ ಹೊರಟಿದ್ದೀಯ, ಇಷ್ಟಕ್ಕೂ?"

"ಅದೇ, ಧಾನ್ಯಗಳನ್ನು ಮೇಲಕ್ಕೆ ತಳ್ಳುವ ಹೊಲ ರ್‍ಯಾವೈನ್‌ಗಳಲ್ಲಿ ಧುಮುಕುವ ನೀರು, ಸೇಬಿನ ರಸ, ಮನುಷ್ಯನ ಬದುಕು – ಎಲ್ಲವೂ ಒಂದೇ, ಬದುಕಿನಲ್ಲಿ ಐಕ್ಯತೆಯೆನ್ನುವುದು; ಲಯದಲ್ಲಿನ ಐಕ್ಯತೆ, ಆ ಲಯಕ್ಕೆ ನಾವೆಲ್ಲ ನರ್ತಿಸುತ್ತೇವೆ; ಮನುಷ್ಯರು, ರ್‍ಯಾವೈನ್, ಸೇಬು, ಉತ್ತ ಹೊಲಗಳು, ಗಾಡಿಗಳು, ಮನೆಗಳು, ಕುದುರೆಗಳು, ಸೂರ್ಯ – ಎಲ್ಲವೂ; ಎಲ್ಲವೂ ಲಯಕ್ಕೆ ನರ್ತಿಸುತ್ತವೆ. ಹೊಲದಲ್ಲಿ ದುಡಿಯುತ್ತಿರುವ ರೈತನನ್ನು ಪೈಂಟ್‌ಮಾಡಿದಾಗ ನನಗೆ ಅನಿಸುತ್ತೆ, ರೈತ ಮಣ್ಣಿನಲ್ಲಿ ಪ್ರವಹಿಸುತ್ತಾನೆ; ಹಾಗೆಯೇ ಮಣ್ಣು ರೈತನಲ್ಲಿ ಪ್ರವಹಿಸುತ್ತದೆ. ಇದೆಲ್ಲವೂ ಜನರ ಅನುಭವಕ್ಕೆ ಬರಬೇಕು. ಸೂರ್ಯ ರೈತನಲ್ಲಿ, ಹೊಲದಲ್ಲಿ ಧಾನ್ಯಗಳಲ್ಲಿ, ನೇಗಿಲಲ್ಲಿ ಪ್ರವಹಿಸಬೇಕು. ಹಾಗೆಯೇ ಅವೆಲ್ಲವೂ ಸೂರ್ಯನಲ್ಲಿ! ವಿಶ್ವವ್ಯಾಪಿ ಲಯವನ್ನು ಅನುಭವಿಸಬೇಕು. ಈ ಲಯಕ್ಕೆ

ಸರಿಯಾಗಿ ಇಡೀ ಜಗತ್ತು ಚಲನಶೀಲವಾಗುವುದನ್ನು ಗ್ರಹಿಸಿದಾಗ, ಬದುಕು ಅರ್ಥವಾಗತೊಡಗುತ್ತೆ. ಅದೇ ಅದೊಂದೇ ದೇವರು!"

"ಬ್ರಿಗೇಡಿಯರ್. ನೀನು ಹೇಳುವುದಕ್ಕೆ ಕಾರಣವಿದೆ!"

ವಿನ್ಸೆಂಟ್ ಭಾವೋದ್ರೇಕದ ಉತ್ತುಂಗದಲ್ಲಿದ್ದ. ಗಾಗಿನ್‌ನ ಮಾತು, ಅವನ ಮುಖಕ್ಕೆ ಹೊಡೆದಂತಾಯಿತು. ಕಣ್ಣುಬಾಯಿ ಬಿಟ್ಟುಕೊಂಡು ನೋಡುತ್ತಾ ನಿಂತ.

"ಹಾಗಾದರೆ, ಒಟ್ಟಾರೆ ನೀನು ಹೇಳುವುದೇನು? ನಿನ್ನದೇ ಸರಿ ಅಂತಲೋ, ಬ್ರಿಗೇಡಿಯರ್?"

"ನಾನು ಹೇಳೋದೇನೂಂತಲೇ?– ಈಗ ಸುಮ್ಮನೆ ಕೆಫೆಗೆ ಹೋಗಿ ಒಂದು ಅಬಿಸಿಂತ್ ಹಾಕೋಣ."

ಎರಡನೇ ವಾರದ ಕೊನೆಯಲ್ಲಿ ಗಾಗಿನ್, – "ಇವತ್ತು ರಾತ್ರಿಗೆ ನಿನಗೋಸ್ಕರ ಯಾವುದಾದರೂ ಮನೆ ಟ್ರೈ ಮಾಡೋಣ. ಬಹುಶಃ ನಿನಗೇಂತ ಒಬ್ಬ ದುಂಡನೆಯ ಹುಡುಗಿಯು ಸಿಗುವಳೇನೋ ನೋಡೋಣ."

"ರ್‍ಯಾಷೆಲ್ ತಂಟೆಗೆ ಮಾತ್ರ ಹೋಗಬೇಡ. ಅವಳು ನನಗೆ ಸೇರಿದ್ದು."

ಇಬ್ಬರೂ ಹೊರಟು, ಗಲ್ಲಿಗಳನ್ನು ದಾಟುತ್ತಾ 'ಮೆಸೋನ್ ದ ಟಾಲರೆನ್ಸ್' ಪ್ರವೇಶಿಸಿದರು. ರ್‍ಯಾಷೆಲ್ ವಿನ್ಸೆಂಟ್‌ನ ಧ್ವನಿ ಕೇಳಿಸಿದ್ದೇ, ಕೆಳಗಿಳಿದು ಬಂದು ಅವನನ್ನು ತಬ್ಬಿಕೊಂಡಳು. ವಿನ್ಸೆಂಟ್ ಗಾಗಿನ್‌ನನ್ನು ಪರಿಚಯಿಸಿದ.

"ಮಿಸ್ಟರ್ ಗಾಗಿನ್." "ನೀನೊಬ್ಬ ಆರ್ಟಿಸ್ಟ್, ಹೋದ ವರ್ಷ ಪ್ಯಾರಿಸ್‌ನಲ್ಲಿ ಒಂದೆರಡು ಪೈಂಟಿಂಗ್ಸ್ ಖರೀದಿಸಿದ್ದೆ. ಅವುಗಳನ್ನು ನೋಡಿ ನಿಮ್ಮ ಅಭಿಪ್ರಾಯ ಹೇಳೋಕೆ ಸಾಧ್ಯವೇ?" ಲೂಯಿ ಕೇಳಿದ.

"ಖಂಡಿತ. ಅದಕ್ಕೇನಂತೆ! ಎಲ್ಲಿಂದ ಅವುಗಳನ್ನು ಖರೀದಿಸಿದಿರಿ?"

ಗೂಪಿಲ್ಸ್‌ನಲ್ಲಿ, ಬನ್ನಿ ಈ ಮುಂದಿನ ಕೋಣೆಯಲ್ಲಿವೆ."

ರ್‍ಯಾಷೆಲ್, ವಿನ್ಸೆಂಟ್‌ನನ್ನು ಎಡಗಡೆಯಿದ್ದ ಕೋಣೆಗೆ ಕರೆದೊಯ್ದು, ಕುರ್ಚಿ ಮೇಲೆ ತಳ್ಳಿ, ಹೋಗಿ ಅವನ ತೊಡೆಮೇಲೆ ಕುಳಿತಳು.

"ನಾನು ಇಲ್ಲಿಗೆ ಬಂದು ಆರು ತಿಂಗಳಾಯ್ತು. ಒಂದು ದಿನವಾದರೂ ಅವಳು ನನ್ನನ್ನು ಅವನ ಪಿಕ್ಚರ್‌ಗಳ ಬಗ್ಗೆ ಅಭಿಪ್ರಾಯ ಏನೂಂತ ಕೇಳಲಿಲ್ಲ" ಗೊಣಗುತ್ತಾ ನುಡಿದ.

"ಫೊ–ರೋ ಅವನ ದೃಷ್ಟಿಯಲ್ಲಿ ನೀನು ಕಲಾವಿದ ಅಲ್ಲವೇ ಅಲ್ಲ."

"ಅವನ ದೃಷ್ಟಿಯಲ್ಲಿ ಅವನು ಹೇಳಿದ್ದು ಸರಿ ಇರಬಹುದು."

"ಇನ್ನು ಮುಂದೆ ನೀನು ನನ್ನ ಪ್ರೀತಿಸೋದಿಲ್ಲ ಅನ್ಸತ್ತೆ."

"ಹಾಗೆ ಅನ್ನಿಸೋದಕ್ಕೆ ಕಾರಣ?"

"ಎಷ್ಟೋ ವಾರಗಳಿಂದ ನೀನು ಬರಲೇ ಇಲ್ಲ. ಅದಕ್ಕೇ!"

"ನಾನು ನನ್ನ ಗೆಳೆಯನಿಗೆ ಮನೆಯ ವ್ಯವಸ್ಥೆ ಮಾಡುವುದರಲ್ಲಿ ತುಂಬ ಬಿಸಿಯಾಗಿ ಬಿಟ್ಟಿದ್ದೆ."

"ಹಾಗಾದರೆ, ನನ್ನಿಂದ ದೂರ ಇದ್ದರೂ ನನ್ನನ್ನು ಪ್ರೀತಿಸ್ತೀಯ ಹೌದಲ್ಲ?"

"ನಾನು ದೂರ ಇದ್ದರೂ."

ಅವಳು ಅವನ ಕಿವಿಗಳನ್ನು ಹಿಂಡಿ, ಅವುಗಳನ್ನು ಮುದ್ದಿಸಿದಳು.

"ನಿನ್ನ ಪ್ರೀತೀನ ತೋರಿಸೋಕೆ, ನೀನು ಹಿಂದೆ ಪ್ರಾಮಿಸ್ ಮಾಡಿದ ಹಾಗೆ, ನಿನ್ನ ಮುದ್ದಾದ ವಿಶೇಷವಾದ ಕಿವಿಗಳನ್ನು ಕೊಡ್ತೀ ಅಲ್ವೆ ಫೋ-ರೋ?"

"ನಿನಗೆ ತಗೊಳ್ಳೋಕೆ ಆದರೆ, ತಗೊಂಡು ಬಿಡು."

"ಓಹ್ ಫೋ-ರೋ, ನನ್ನ ಬೊಂಬೆಗೆ, ಹೊಲಿದು ಇರಿಸಿದ ಹಾಗೆ ನಿನ್ನ ಕಿವಿಗಳು ಇದ್ದಿದ್ದರೆ, ತೆಗೆದುಕೊಳ್ಳಬಹುದಾಗಿತ್ತು."

ಪಡಸಾಲೆಯ ಪಕ್ಕದಲ್ಲಿದ್ದ ಕೋಣೆಯೊಳಗಿಂದ ಯಾರೋ ಕಿರುಚಿದಂತಾಯಿತು. ವಿನ್ಸೆಂಟ್ ರ್‍ಯಾಷೆಲ್‌ಳನ್ನು ತೊಡೆ ಮೇಲಿಂದ ಪಕ್ಕಕ್ಕೆ ತಳ್ಳಿ ಹೊರಗೋಡಿ ಬಂದ.

ಗಾಗಿನ್ ನೆಲದ ಮೇಲೆ ಬಿದ್ದಿದ್ದ. ಏನೋ ಆಘಾತ ಆದ ಹಾಗಿತ್ತು. ಒಂದೇ ಸಮನೆ ಕಂಬನಿ ಸುರಿಯುತ್ತಿತ್ತು. ಲೂಯಿ ದೀಪ ಕೈಲಿ ಹಿಡಿದು ಬಗ್ಗಿ ನೋಡಿದ. ವಿನ್ಸೆಂಟ್ ಅವನನ್ನು ಹಿಡಿದು ಅಲುಗಾಡಿಸುತ್ತಾ "ಪಾಲ್, ಪಾಲ್.... ಹೇಳು ಏನಾಯಿತು?"

ಗಾಗಿನ್ ಮಾತಾಡಲು ಪ್ರಯತ್ನಿಸಿದ. ಆದರೆ ಆಗುತ್ತಿರಲಿಲ್ಲ. ಒಂದು ನಿಮಿಷದ ನಂತರ ಏದುಸಿರು ಬಿಡುತ್ತಾ.... "ವಿನ್ಸೆಂಟ್..... ಕಡೆಗೂ ನಾವು ಸಾಧಿಸಿದೆವು.... ಗೋಡೆ ಮೇಲೆ ನೋಡು. ಆ ಎರಡು ಪಿಕ್ಚರ್ಸ್..... ಗೂಪಿಲ್ಸ್‌ನಿಂದ ಲೂಯಿ ತನ್ನ ಬ್ರಾತೆಲ್‌ಗೆಂದು ತಂದಿದ್ದಾನೆ......ಅವೆರಡೂ ಬೊಗ್ಯೂರಿಯಾಸ್!"

ಏಳುತ್ತ ಬೀಳುತ್ತ ಬಾಗಿಲ ಕಡೆ ಓಡಿದ.

"ಏಯ್ ಸ್ವಲ್ಪ ನಿಂತ್ಕೋ."...... ವಿನ್ಸೆಂಟ್ ಅವನ ಹಿಂದೆಯೇ ಓಡುತ್ತಾ ಕೇಳಿದ "ಎಲ್ಲಿಗೆ ಹೋಗ್ತಿದ್ದೀ?"

"ಟೆಲಿಗ್ರಾಫ್ ಆಫೀಸಿಗೆ, ಬಾರಿನೋಲ್ ಕ್ಲಬ್‌ಗೆ ಕೂಡಲೇ ತಿಳಿಸಬೇಕಾಗಿದೆ."

ಸುಡುಬಿಸಿಲಿನ ಭಯಂಕರ ಬೇಸಿಗೆಯ ಆಗಮನವಾಯಿತು. ಹಳ್ಳಿಗಾಡಿನ ಪ್ರದೇಶವೆಲ್ಲ ಕಣ್ಣುಸೆಳೆವ ಅದ್ಭುತ ವರ್ಣ ವೈಭವದಿಂದ ಕಂಗೊಳಿಸಿತು. ಹಸಿರು, ಹಳದಿ, ನೀಲಿ ಬಣ್ಣಗಳ, ವರ್ಣಛಾಯೆಗಳ ವೈವಿಧ್ಯಮಯ ದೃಶ್ಯಗಳು! ಝಾಡಿಸುವ ಬಿಸಿಲು ಬೇಗೆಯ ಬೀಸು ಅಲೆಗಳು! ರ್‍ಹೋನ್ ನದಿಯಲ್ಲಿ ಬಿಸಿನೀರಿನ ಅಲೆಗಳು! ಸೂರ್ಯ ಸ್ಪರ್ಷವಾದದ್ದೆಲ್ಲವೂ ಸುಟ್ಟು ಹೋಗುತ್ತಿತ್ತು. ಈ ಇಬ್ಬರು ಕಲಾವಿದರೂ ಬಿಸಿಲಿನ ಪ್ರತಾಡನಕ್ಕೆ ಕಂಪಿಸಿದರು! ಬೆಂದು ಹೋದರು. ಅವರಲ್ಲಿದ್ದ ತರಲತೆ, ಚೈತನ್ಯಗಳನ್ನು ಸೂರ್ಯಶಾಖ ಹೀರಿಬಿಟ್ಟಿತ್ತು. ಜೊತೆಗಿದ್ದ ಬಿರುಗಾಳಿ ಇಬ್ಬರನ್ನೂ ಅಪ್ಪಳಿಸಿತು. ದೇಹ, ಮನಸ್ಸು, ನರನಾಡಿಗಳೆಲ್ಲ ಕಲಕಿಹೋದವು. ತಮ್ಮ ತಲೆಗಳು

ತಮಗಾಗಿ ಉಳಿಯುವುದೋ ಇಲ್ಲವೋ ಎಂದು ಆತಂಕಕ್ಕೆ ಒಳಗಾಗುವಷ್ಟು ರಭಸದಿಂದ ಬೀಸಿದ ಗಾಳಿಗೆ, ತೊನೆದಾಡಿದವು. ಇಷ್ಟೆಲ್ಲಾ ಆಗುತ್ತಿದ್ದರೂ ಇಬ್ಬರೂ ಬೆಳಗ್ಗೆ ಎದ್ದು ಹೊರಟು ರಾತ್ರಿಯವರೆಗೆ, ಆಕಾಶವನ್ನು ದಟ್ಟ ನೀಲಿ ಕವಿಯುವವರೆಗೆ ಕೆಲಸ ಮಾಡಿದರು.

ವಿನ್ಸೆಂಟ್‌ನ ಒಳಗೆ ಅಗ್ನಿಪರ್ವತ ಉರಿಯುತ್ತಿದ್ದರೆ, ಗಾಗಿನ್‌ನೊಳಗೆ ಭಯಂಕರ ಕುದಿ ಪ್ರಾರಂಭವಾಗಿತ್ತು. ಒಂದು ಮಹಾಯುದ್ಧವೇ ನಡೆಯುವುದರಲ್ಲಿತ್ತು. ರಾತ್ರಿಗಳಲ್ಲಿ ನಿದ್ದೆಯೂ ಬಾರದಷ್ಟು ದಣಿವು, ಸುಮ್ಮನೆ ಕೂರಲು ಆಗದಷ್ಟು ಆತಂಕಗಳಲ್ಲಿದ್ದಾಗ, ತಮ್ಮ ಶಕ್ತಿಯನ್ನೆಲ್ಲಾ ಜಗಳವಾಡುವುದಕ್ಕೆ ವ್ಯಯಿಸುತ್ತಿದ್ದರು. ಸಂತೋಷವಾಗಿ ಎಲ್ಲಾದರೂ ಹೋಗಿ ಸಮಯ ಕಳೆದು ಮನಸ್ಸು ಹಗುರ ಮಾಡಿಕೊಳ್ಳಲು ಇಬ್ಬರಲ್ಲಿಯೂ ಒಂದು ಚಿಕ್ಕಾಸೂ ಇರುತ್ತಿರಲಿಲ್ಲ. ಒಳಗಿದ್ದ ಬೇಸರವನ್ನೆಲ್ಲ ತೋಡಿಕೊಳ್ಳಲು ಅವರಿಗಿದ್ದ ಒಂದೇ ಒಂದು ದಾರಿಯೆಂದರೆ ಒಬ್ಬರ ಮೇಲೊಬ್ಬರು ಹರಿಹಾಯುವುದು. ಬೈಗಳ ಸುರಿಮಳೆ.... ಆರೋಪ.... ಪ್ರತ್ಯಾರೋಪ..... ಹೀಗೇ ಏನೇನೋ! ವಿನ್ಸೆಂಟ್‌ಗೆ ಸಿಟ್ಟು ಬರಿಸುವುದರಲ್ಲಿ ಗಾಗಿನ್ ಯಾವಾಗಲೂ ಹಿಂದೆ ಬೀಳುತ್ತಿರಲಿಲ್ಲ. ವಿನ್ಸೆಂಟ್ ಯಾವಾಗಲೂ ಉದ್ರೇಕದ ಉತ್ತುಂಗದಲಿದ್ದು "ಬ್ರಿಗೇಡಿಯರ್‌ವು ಅವೆ ರೆಸೋನ್!" ಎಂದು, ತಿರುಗಿ ಅಪ್ಪಳಿಸುತ್ತಿದ್ದ.

"ವಿನ್ಸೆಂಟ್ ನಿನಗೆ ಪೈಂಟ್ ಮಾಡಲು ಆಗುವುದಿಲ್ಲ ಎಂದದ್ದರಲ್ಲಿ ಅಚ್ಚರಿಯಿಲ್ಲ. ಈ ಸ್ಟುಡಿಯೋ ಗತಿ ನೋಡು. ಪೈಂಟ್ ಬಾಕ್ಸ್, ಬ್ರಷ್ಷು - ಎಷ್ಟು ಚೆಲ್ಲಾಪಿಲ್ಲಿ. ನಿನ್ನ ಡಚ್ ತಲೇಲಿ ಮಾಂಟಿಸೆಲ್ಲಿ, ಡಾಡೆಟ್‌ರು ತುಂಬಿ ಇಲ್ಲದಿದ್ದರೆ, ಬಹುಶಃ ಈ ಸ್ಟುಡಿಯೋದಲ್ಲಿ, ನಿನ್ನ ಜೀವನದಲ್ಲಿ ಒಂದಿಷ್ಟು ಶಿಸ್ತು ಸಾಧ್ಯವಾಗುತ್ತಿತ್ತು."

"ಅದರ ಬಗ್ಗೆ ನೀನು ತಲೆಕೆಡಿಸಿಕೊಳ್ಳುವ ಅವಶ್ಯಕತೆಯಿಲ್ಲ. ಇದು ನನ್ನ ಸ್ಟುಡಿಯೋ ನನಗೆ ಇಷ್ಟ ಬಂದ ಹಾಗೆ ಇರಿಸಿಕೊಳ್ಳುತ್ತೇನೆ. ನಿನ್ನ ಸ್ಟುಡಿಯೋ ಬಗ್ಗೆ ನೀನು ಯೋಚನೆ ಮಾಡು. ನಿನಗೆ ಇಷ್ಟಬಂದ ಹಾಗೆ ಇಟ್ಟುಕೋ."

"ಇನ್ನೂ ಒಂದು ವಿಷಯ ಅಂದರೆ, ನಮ್ಮ ಕಲಾಕೃತಿಗಳ ಸಬ್ಜೆಕ್ಟ್‌ಗೆ ಬಂದಾಗ, ನಿನ್ನ ಪೈಂಟ್ ಬಾಕ್ಸ್‌ನಷ್ಟೇ ನಿನ್ನ ತಲೆಯಲ್ಲೂ ಅಸ್ತವ್ಯಸ್ತ, ಅವ್ಯವಸ್ಥಿತ ಆಲೋಚನೆಗಳೇ! ಯೂರೋಪಿನ, ಪೋಸ್ಟೇಜ್ ಸ್ಟ್ಯಾಂಪ್ ಮೇಲಿನ ಪೈಂಟರ್‌ನನ್ನು ಮೆಚ್ಚಿಕೊಳ್ಳುತ್ತೀಯೇ ಹೊರತು, 'ಡೆಗಾಸ್'ನನ್ನು ಒಪ್ಪಿಕೊಳ್ಳುವುದಿಲ್ಲ......"

"ಡೆಗಾಸ್!......ಹೇಳು......ಅವನು ಮಾಡಿರುವ ಯಾವ ಪೈಂಟಿಂಗ್ ತಾನೇ, ಮಿಲ್ಲೆಟ್‌ನ ಹಾಗೆ ನಮಗೆ ಪ್ರಯೋಜನಕ್ಕೆ ಬರುತ್ತೆ? ಏನು ಕಲಿಯಲು ಆಗುತ್ತೆ?"

"ಮಿಲ್ಲೆಟ್! ಆ ಸೆಂಟಿಮೆಂಟಲಿಸ್ಟ್!....ಆ.....!"

ತನ್ನ ಗುರು, ತನ್ನ ಅಧ್ಯಾತ್ಮ ಗುರು.....ತನ್ನ ಆದರ್ಶವಾಗಿದ್ದ ಮಿಲ್ಲೆಟ್‌ನನ್ನು ನಿಂದಿಸಿದ್ದು, ಭಾವೋದ್ರೇಕದಿಂದ ಹುಚ್ಚು ಸ್ಥಿತಿಗೇರುವಂತೆ ಮಾಡಿತು. ಅವನನ್ನು ಹೊಡೆಯಲು ಎದ್ದು ನಿಂತದ್ದೇ ಗಾಗಿನ್ ಓಟಕಿತ್ತ. ವಿನ್ಸೆಂಟ್ ಕೋಣೆಯಿಂದ ಕೋಣೆಗೆ ಅವನನ್ನು ಅಟ್ಟಿಸಿಕೊಂಡು ಹಿಂಬಾಲಿಸಿದ. ಮನೆ ಚಿಕ್ಕದಾಗಿದ್ದುದರಿಂದ, ಗಾಗಿನ್‌ಗೆ

ತುಂಬಾ ಹೊತ್ತು ಅವನಿಂದ ತಪ್ಪಿಸಿಕೊಳ್ಳಲು ಆಗಲಿಲ್ಲ. ಗಾಗಿನ್‌ನ ಮುಖದ ಮೇಲೆ ಒಂದು ಗುದ್ದಿದ. ಇಡೀ ರಾತ್ರಿ ಹೀಗೇ ಜಗಳ, ಹೊಡೆತಗಳಲ್ಲೇ ಕಳೆದರು.

ಇಬ್ಬರೂ ಪ್ರಕೃತಿಯನ್ನು ಅದರ ಎಲ್ಲ ಸಹಜ ಸೌಂದರ್ಯ ಬಣ್ಣಗಳಲ್ಲೇ ಹಿಡಿಯುವ ಪ್ರಯತ್ನದಲ್ಲಿ ದೆವ್ವ ಬಡಿದವರಂತೆ ಯಾವುದರ ಪರಿವೆಯೂ ಇಲ್ಲದೆ ಕೆಲಸ ಮಾಡಿದರು. ದಿನ ದಿನವೂ ಅವರಲ್ಲಿ ಜಗಳ ಮುಂದುವರೆದೇ ಇತ್ತು. ಇಬ್ಬರ ಸ್ವಾಭಿಮಾನ, ಅಹಂಗಳು ಪರಸ್ಪರ ಘರ್ಷಣೆಗೆ ನಿಲ್ಲುತ್ತಿದ್ದವು. ಜಗಳ ತಣ್ಣಗಾಗಿ ಹೋದ ಮೇಲೆ, ಸ್ನೇಹಿತರಾಗಿ ಇಬ್ಬರೂ ಆತ್ಮೀಯತೆಯೊಂದಿಗೆ ಚರ್ಚೆ ಮಾಡುತ್ತ ನಿದ್ದೆ ಮಾಡುವುದನ್ನೇ ಮರೆಯುತ್ತಿದ್ದರು. ಥಿಯೋನಿಂದ ಹಣ ಬಂದ ಕೂಡಲೇ ಅಬಿಸಿಂತ್ ಮತ್ತು ಟೊಬ್ಯಾಕೋಗಾಗಿ ಖರ್ಚು ಮಾಡುತ್ತಿದ್ದರು. ಅತಿಯಾದ ಬಿಸಿಲಿನಿಂದಾಗಿ ಊಟ ಸಹಿಸುತ್ತಿರಲಿಲ್ಲ.

ಹೊರಗೆ ಹೆಜ್ಜೆಯಿಡಲೂ ಸಾಧ್ಯವಾಗದಷ್ಟು ರಭಸದ ಬಿರುಗಾಳಿಯಿಂದಾಗಿ, ಇಬ್ಬರೂ ಮನೆಯಲ್ಲಿಯೇ ಉಳಿದರು. ಗಾಗಿನ್, ವಿನ್ಸೆಂಟ್‌ನನ್ನು ರೇಗಿಸುತ್ತಿದ್ದನೇ ಹೊರತು ಕೆಲಸಕ್ಕೆ ಕೈ ಹಚ್ಚಲಿಲ್ಲ. ಕಲೆಗೆ ಸಂಬಂಧಿಸಿದಂತೆ ಇಷ್ಟು ಹಚ್ಚಿಕೊಳ್ಳುವುದನ್ನು, ಗಾಗಿನ್ ಬೇರೆ ಯಾರಲ್ಲಿಯೂ ನೋಡಿರಲಿಲ್ಲ.

ವಿನ್ಸೆಂಟ್‌ನನ್ನು ರೇಗಿಸುವುದು ಅವನಿಗೆ ತಮಾಶೆಯಾಗಿತ್ತು; ಒಂದು ರೀತಿಯ ಮನರಂಜನೆಯೂ ಆಗಿತ್ತು.

ಬಿರುಗಾಳಿಯ ಐದನೇ ದಿನ "ಸ್ವಲ್ಪ ಸಮಾಧಾನವಾಗಿರು ವಿನ್ಸೆಂಟ್" ಎಂದು ಸಮಾಧಾನ ಮಾಡಲು ಪ್ರಯತ್ನಿಸಿದ. ಮನೆಯಲ್ಲಿದ್ದ ಅಷ್ಟೂ ದಿನ ಅವನನ್ನು ಕೆಣಕಿ, ಕೀಟಲೆ ಮಾಡಿ, ರೇಗಿಸಿ ಉದ್ವಿಗ್ನಗೊಳಿಸುವುದರಲ್ಲೇ ಸಮಯ ಕಳೆದವನು ಈಗ ವಿನ್ಸೆಂಟ್‌ನನ್ನು ಶಾಂತವಾಗಿರಲು ಹೇಳುತ್ತಿದ್ದ.

"ನಿನ್ನ ವಿಚಾರ ಏನು, ಗಾಗಿನ್?"

"ನನ್ನ ಸಹವಾಸದಲ್ಲಿದ್ದ ನನ್ನ ಸ್ನೇಹಿತರೆಲ್ಲ ನನ್ನ ಜೊತೆ ಚರ್ಚೆ ಮಾಡುತ್ತಿದ್ದವರೆಲ್ಲ, ಹೀಗೇ ಹುಚ್ಚರಂತಾಗುತ್ತಿದ್ದರು."

"ನನ್ನನ್ನು ಹೆದರಿಸುತ್ತಿದ್ದೀಯ?"

"ಇಲ್ಲ ಎಚ್ಚರಿಸುತ್ತಿದ್ದೇನೆ."

"ಹಾಗಾದರೆ, ಎಚ್ಚರಿಕೇನ ನಿನ್ನಲ್ಲೇ ಇರಿಸಿಕೋ."

"ಆಯ್ತು. ಆದರೆ ಆಮೇಲೆ, ಏನಾದರೂ ಸಂಭವಿಸಿದರೆ, ನನ್ನನ್ನು ಮಾತ್ರ ದೂರಬೇಡ."

"ಓಹ್ ಪಾಲ್! ಪಾಲ್! ಹೀಗೆ ಜಗಳ ಆಡುವುದನ್ನು ನಿಲ್ಲಿಸೋಣ. ಸರಿ. ನೀನೇ ಶ್ರೇಷ್ಠ ಕಲಾವಿದ, ಪೈಂಟರ್ ಅಂತ ಒಪ್ಪಿಕೊಳ್ತೇನೆ. ನನಗೆ ಬೇಕಾದ ಹಾಗೆ ಕಲಿಸಬಲ್ಲೆ. ಆದರೆ ನನ್ನನ್ನು ಈ ರೀತಿ ಅಸಹ್ಯಪಟ್ಟುಕೊಂಡು ಮಾತಾಡುವುದನ್ನು ಮಾತ್ರ ನಿಲ್ಲಿಸು. ಅರ್ಥವಾಯ್ತಾ? ನಾನು ಒಂಬತ್ತು ವರ್ಷಗಳಿಂದ ಕಷ್ಟ ಪಡ್ತೀದ್ದೀನಿ. ದೇವರಾಣೆ!

ಈ ಪೈಂಟಿಂಗ್ ಮೂಲಕ ನಾನು ಏನನ್ನೋ ಹೇಳಬೇಕೆಂದಿದ್ದೇನೆ. ಹೌದು ತಾನೇ?...... ಮಾತಾಡು ಗಾಗಿನ್! ಮಾತಾಡು."

"ಬ್ರಿಗೇಡಿಯರ್ ವೂ ಅವೆ ರೈಸೋನೆ!"

ಬಿರುಗಾಳಿ ನಿಂತಿತು. ಆರ್ಲೆ ಜನ ಈಗ ಓಡಾಡಲು ಸಾಹಸ ಮಾಡಿದರು. ಮತ್ತೆ ಉರಿವ ಸೂರ್ಯನ ಉದಯವಾಯಿತು. ನಿಯಂತ್ರಿಸಲಾಗದ ಪರಿಸ್ಥಿತಿಯೊಂದು ಆರ್ಲೆಯಲ್ಲಿ ಏರ್ಪಟ್ಟಿತು. ಜನರ ಕಣ್ಣುಗಳಲ್ಲಿ ವಿಚಿತ್ರವಾದ ಉದ್ವಿಗ್ನತೆ ಕಾಣಿಸುತ್ತಿತ್ತು. ಯಾರೂ ಮಾತಾಡುತ್ತಿರಲಿಲ್ಲ; ನಗುತ್ತಿರಲಿಲ್ಲ. ತಲೇ ಮೇಲಿನ ಸೂರುಗಳು ಸುಡುತ್ತಿದ್ದವು. ಪ್ಲೇಸ್ ಲಿಮಾರ್ಟಿನ್‌ನಲ್ಲಿ ಕತ್ತಿ, ಚೂರಿ, ಚಾಕುಗಳ ಠಣತ್ಕಾರ ಕೇಳಿಸುತ್ತಿತ್ತು. ಭಯಂಕರ ದುರಂತ ಸಂಭವಿಸುವ ಸೂಚನೆಗಳು ಕಾಣಿಸುತ್ತಿದ್ದವು. ಆರ್ಲೆಯ ಮಂದಿಯ ಸಹನೆಯ ಕಟ್ಟೆಯೊಡೆಯುವುದರಲ್ಲಿತ್ತು. ರ್‍ಹೋನ್ ಕಣಿವೆ ನುಚ್ಚುನೂರಾಗುವುದರಲ್ಲಿತ್ತು.

ಪ್ಯಾರಿಸಿನ ಪತ್ರಕರ್ತನನ್ನು, ವಿನ್ಸೆಂಟ್ ನೆನಪಿಸಿಕೊಂಡ.

"ಏನಾಗಬಹುದು? ಭೂಕಂಪವೋ, ಅಗ್ನಿಪರ್ವತವೋ" ಎಂದು ತನ್ನನ್ನು ತಾನೇ ಕೇಳಿಕೊಂಡ.

ಇಷ್ಟೆಲ್ಲ ಆಗುತ್ತಿದ್ದರೂ ತಾನು ಪೈಂಟ್ ಮಾಡುವುದನ್ನು ನಿಲ್ಲಿಸಲಿಲ್ಲ. ತಲೆಮೇಲೆ ಹ್ಯಾಟೂ ಇಲ್ಲದೆ, ಫೀಲ್ಡ್‌ಗೆ ಹೋಗುತ್ತಿದ್ದ. ಆ ಬಿಸಿಲಿನಲ್ಲಿ ಬೆಂದು ತನ್ನ ಒಳಗಿನ ಚೈತನ್ಯವನ್ನು ಮತ್ತಷ್ಟು ಭಾವ ಸ್ಪಂದಿಯಾಗಿ ಮಾಡುವ ಹುನ್ನಾರದಲ್ಲಿದ್ದ. ತೀವ್ರವಾದ, ಅತಿಯಾದ ಭಾವೋದ್ರಿಕ್ತ ಸ್ಥಿತಿ ತಲುಪಿದ್ದ. ಅವನ ತಲೆ ಉರಿವ ಮೂಸೆಯಾಗಿತ್ತು. ಕೆಂಡಕೆಂಪಿನ ಕ್ಯಾನ್‌ವಾಸ್‌ಗಳನ್ನು, ಒಂದರ ಮೇಲೊಂದರಂತೆ ಮಾಡುತ್ತಲೇ ಇದ್ದ.

ಒಂಬತ್ತು ವರ್ಷಗಳ ನಿರಂತರ ಶ್ರಮದ ಫಲ ಈಗ ತನ್ನಲ್ಲಿ ತುಂಬಿದ ಹೊಸ ಚೈತನ್ಯದ ಫಲವಾಗಿ, ಒಮ್ಮೆಲೇ ಇವುಗಳ ರೂಪದಲ್ಲಿ ಒಂದೇ ಸಲಕ್ಕೆ ಸಾರ್ಥಕವಾಗಿ ಎದುರು ನಿಂತಿದೆ ಎಂಬ ಭಾವನೆ ಅವನಲ್ಲಿ ಮೂಡಿತು. ಕ್ಷಣಾರ್ಧದಲ್ಲಿಯೇ ಅವನಲ್ಲಿ ಪರಿಪೂರ್ಣ ಮತ್ತು ಸಮರ್ಥ ಕಲಾವಿದ ತಾನಾದೆನೆಂಬ ಭರವಸೆಯುಂಟಾಯಿತು. ಬಹುಶಃ ಇಷ್ಟು ಅದ್ಭುತವಾದ ಮತ್ತು ತಾನು ಏನೆಲ್ಲ ಹೇಳಬೇಕೆಂದುಕೊಂಡಿದ್ದನೋ ಅದೆಲ್ಲವನ್ನೂ, ಪ್ರಕೃತಿಯ ಮೂಲಕ ಮತ್ತು ಅದರ ಎಲ್ಲ ಸಮಗ್ರತೆಯೊಂದಿಗೆ, ಅಭಿವ್ಯಕ್ತಿಸಲು ಈಗ ಸಾಧ್ಯವಾಗಿರುವಂತೆ, ಎಂದೆಂದಿಗೂ ಸಾಧ್ಯವಾಗುತ್ತಿರಲಿಲ್ಲವೇನೋ, ಹೋದ ಬೇಸಿಗೆಯಲ್ಲಿ ಮಾಡಿದ್ದೆಲ್ಲವನ್ನೂ ಮೀರಿಸಿದಂತಹ ಕೆಲಸ ಇಂದಿನದಾಗಿತ್ತು.

ಬೆಳಗಿನ ಜಾವ ನಾಲ್ಕು ಗಂಟೆಗೆ ಶುರು ಮಾಡುತ್ತಿದ್ದ ಪೈಂಟಿಂಗ್ ಕೆಲಸ, ಕತ್ತಲಾವರಿಸಿ, ದೃಶ್ಯಗಳು ಕಾಣದಂತಾಗುವವರೆಗೂ ಅವಿರತವಾಗಿ ಮುಂದುವರಿದಿತ್ತು. ದಿನಕ್ಕೆ ಎರಡೆರಡು, ಕೆಲವೊಮ್ಮೆ ಮೂರನ್ನಾದರೂ ಕ್ಯಾನ್‌ವಾಸ್‌ಗಳನ್ನು ಮುಗಿಸುತ್ತಿದ್ದ. ಒಂದು ದಿನದ ಕೆಲಸ ಮುಗಿಸಲು, ಒಂದು ವರ್ಷದಷ್ಟು ತನ್ನ ಶಕ್ತಿ ಚೈತನ್ಯಗಳನ್ನು ಎರೆದು ಬಿಟ್ಟು, ಆವೇಶಕ್ಕೆ ಒಳಗಾದಂತೆ, ಕೆಲಸ ಪೂರೈಸುತ್ತಿದ್ದ. ತನ್ನ ಜೀವಸತ್ವವನ್ನೇ

ತನ್ನೊಳಗಿಂದ ಕಿತ್ತು ಧಾರೆಯೆರೆದು ಮಾಡುತ್ತಿದ್ದ. ಈ ಭೂಮಿ ಮೇಲೆ ಎಷ್ಟುದಿನ ಇರ್ತೀನಿ ಅನ್ನುವುದು ಅವನಿಗೆ ಮುಖ್ಯವೆನಿಸಲಿಲ್ಲ. ಇರುವಷ್ಟು ಕಾಲದಲ್ಲಿ ಎಷ್ಟೆಲ್ಲವನ್ನು ಸಾಧಿಸಿದ್ದೇನೆ ಎನ್ನುವುದು ಮುಖ್ಯವೆನಿಸಲಿಲ್ಲ. ಕ್ಯಾಲೆಂಡರ್ ಪುಟಗಳಿಂದ ಕಾಲ ಅಳೆಯುವುದು ಅವನಿಗೆ ಬೇಕಿರಲಿಲ್ಲ. ಎಷ್ಟು ಕ್ಯಾನ್‌ವಾಸ್‌ಗಳು ರಾಶಿಬಿದ್ದಿವೆ ಎಂಬುದರ ಮೂಲಕ ಕಾಲವನ್ನು ಅಳೆಯುತ್ತಿದ್ದ.

ತನ್ನ ಕಲೆ ಸಾಧನೆಯ ಉತ್ತುಂಗವನ್ನು ತಲುಪಿದೆ ಎನ್ನುವುದು ಮನದಟ್ಟಾಗ ತೊಡಗಿತು. ಇಷ್ಟು ವರ್ಷಗಳ ದೀರ್ಘ ಹೋರಾಟದ ನಂತರ ತನ್ನ ಬದುಕಿನ ಔನ್ನತ್ಯದ ಕ್ಷಣಗಳನ್ನು ತಲುಪಿದ್ದಾನೆ. ಆದರೆ ಹೀಗೆ ಎಷ್ಟು ದಿನ ಮುಂದುವರೆಯುತ್ತದೆ ಎನ್ನುವುದು ಖಾತರಿಯಿಲ್ಲ. ಅವನು ಬಯಸುತ್ತಿದ್ದುದೆಲ್ಲ 'ನಾನು ಪೈಂಟ್ ಮಾಡಬೇಕು. ಚಿತ್ರಗಳನ್ನು ಹೆಚ್ಚು ಹೆಚ್ಚು...... ಮತ್ತಷ್ಟು...... ಮತ್ತಷ್ಟು......ಮಗದಷ್ಟು....... ಪೈಂಟ್ ಮಾಡುತ್ತಲೇ ಇರಬೇಕು'– ಎಂಬುದೇ ನಿರಂತರ ತುಡಿತವಾಗಿತ್ತು. ಅವನು ತಲುಪಿರುವ ಅವನ ಬದುಕಿನ ಉತ್ತುಂಗಸ್ಥಿತಿ, ಅನಂತತೆಯ ಕ್ಷಣಗಳು..... ಹೀಗೇ ಉಳಿಯಬೇಕು..... ತನ್ನಾತ್ಮದ ಗರ್ಭಾಂತರ್ಗತ ಎಲ್ಲ ಭಾವನೆಗಳನ್ನು ಕಲಾಕೃತಿಗಳಾಗಿ ಹೊರಗೆ ಹಾಕುವವರೆಗೂ, ಇಂತಹ ಸ್ಥಿತಿ ಮುಂದುವರೆಯಬೇಕು.

ದಿನಪೂರ್ತಿ ಪೈಂಟಿಂಗ್ ಮಾಡುವುದಷ್ಟೇ ಅವರ ಕೆಲಸ. ನಿದ್ದೆಯಿಲ್ಲ; ಊಟವಿಲ್ಲ. ತಿಂದರೂ ಒಂದಿಷ್ಟು ಮಾತ್ರ, ಬಲವಂತದಿಂದ ಗಂಟಲಿಗೆ ಇಳಿಸಿಕೊಳ್ಳುತ್ತಿದ್ದರು. ಅವರ ಕಲಾಸೃಷ್ಟಿಗೆ ಪ್ರಚೋದನೆ ನೀಡುತ್ತಿದ್ದ. ಆರದ ಉತ್ಸಾಹವನ್ನು ಹೊತ್ತಿಸುತ್ತಿದ್ದ. ಅಬಿಸಿಂತ್ ಮತ್ತು ಟೊಬ್ಯಾಕೋಗಳೇ ಅವರನ್ನು ಸೃಷ್ಟಿಗೆ ದೂಡುತ್ತಿದ್ದ ಪ್ರಬಲ ಶಕ್ತಿಗಳಾಗಿದ್ದವು. ಸೂರ್ಯನ ಬಿಸಿಲು ಅವರನ್ನು ಸುಡುತ್ತಿತ್ತು. ಬಿರುಗಾಳಿ ಪ್ರತಾಡಿಸುತ್ತಿತ್ತು. ಬಣ್ಣಗಳು ಕಣ್ಣುಗಳನ್ನು ತಿವಿಯುತ್ತಿದ್ದವು. ಬರೀ ಅಬಿಸಿಂಥ್‌ನಿಂದಲೇ ಅವರ ಹೊಟ್ಟೆಗಳು ಉಬ್ಬರಿಸಿದವು. ಹಳದಿ ಮನೆಯೂ ಪ್ರಚಂಡ ಬಿರುಗಾಳಿಯ ಹೊಡೆತದ ಬಡಿತಕ್ಕೆ ಒಳಗಾಯಿತು.

ಗಾಗಿನ್, ವಿನ್ಸೆಂಟ್, ನೇಗಿಲುಗಳ 'ಸ್ಟಿಲ್‌ಲೈಫ್' ಮಾಡುತ್ತಿದ್ದಾಗ, ಅವನ ಭಾವಚಿತ್ರವನ್ನು ಮಾಡಿದ. ವಿನ್ಸೆಂಟ್ ಆ ಭಾವಚಿತ್ರವನ್ನು ದುರುಗುಟ್ಟಿ ನೋಡಿದ. ಮೊಟ್ಟಮೊದಲ ಬಾರಿಗೆ, ಗಾಗಿನ್ ತನ್ನ ಬಗ್ಗೆ ಏನು ತಿಳಿದುಕೊಂಡಿದ್ದಾನೆ ಎಂಬುದನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು.

"ಖಂಡಿತ ಇದು ನಾನೆ.... ಆದರೆ ನನಗೆ ಹುಚ್ಚು ಹಿಡಿದಿತ್ತು." – ಹೇಳಿದ.

ಆ ದಿನ ಸಂಜೆ ಇಬ್ಬರೂ ಒಟ್ಟಿಗೆ ಕೆಫೆಗೆ ಹೋದರು. ವಿನ್ಸೆಂಟ್ ಲೈಟ್ ಅಬಿಸಿಂತ್‌ಗೆ ಆರ್ಡರ್ ಮಾಡಿದ. ಮರುಕ್ಷಣದಲ್ಲಿಯೇ ಒಮ್ಮೆಲೇ ಗ್ಲಾಸನ್ನು ಗಾಗಿನ್‌ನ ತಲೆಮೇಲೆ, ಅದರಲ್ಲಿದ್ದ ಅಬಿಸಿಂಥ್‌ದೊಂದಿಗೆ ಒಗೆದ. ಗಾಗಿನ್ ಹೇಗೋ ತಲೆತಪ್ಪಿಸಿಕೊಂಡ. ವಿನ್ಸೆಂಟ್‌ನನ್ನು ಅನಾಮತ್ತಾಗಿ ಎತ್ತಿಕೊಂಡು ಲಾಪ್ಲಾಸ್ ಲಾಮಾರ್ಟಿನ್‌ನತ್ತ ಹೆಜ್ಜೆ ಹಾಕಿದ. ವಿನ್ಸೆಂಟ್ ತಾನು ಹಾಸಿಗೆ ಮೇಲೆ ಇದ್ದದನ್ನು ಗಮನಿಸಿದ. ಕೂಡಲೇ ಗಾಢವಾಗಿ ನಿದ್ರಿಸಿದ.

ಮರುದಿನ ಬೆಳಿಗ್ಗೆ ಎಚ್ಚರಗೊಂಡಾಗ, ವಿನ್ಸೆಂಟ್ ಪ್ರಶಾಂತವಾಗಿದ್ದ.

"ಗಾಗಿನ್ ಹೋದ ಸಂಜೆ ನಾನು ನಿನಗೆ ಏನೇನೋ ಬೈದದ್ದು ಮಸುಕು ಮಸುಕಾಗಿ ನೆನಪಾಗುತ್ತಿದೆ."

"ಮನಸ್ಫೂರ್ತಿಯಾಗಿ ನಾನು ನಿನ್ನನ್ನು ಕ್ಷಮಿಸುತ್ತೇನೆ..... ಆದರೆ ನಿನ್ನೆಯ ಥರ ಇವತ್ತೇನಾದರೂ ಅದೇ ಸೀನ್ ಕ್ರಿಯೇಟ್ ಮಾಡಿದರೆ ಮಾತ್ರ ಸುಮ್ಮನೆ ಬಿಡೊಲ್ಲ. ಸಾಯಿಸಿ ಬಿಡ್ತೀನಿ. ನನಗಂತೂ ಇನ್ನೂ ಸಹಿಸಿಕೊಳ್ಳೋದು ಸಾಧ್ಯವಾಗೋದಿಲ್ಲ ನಿನ್ನ ಅಣ್ಣನಿಗೆ, ನಾನು ವಾಪಸ್ ಬರ್ತಿದಿನೀಂತ ತಿಳಿಸಿ ಬರೆಯುವುದಕ್ಕೆ ಪರ್ಮಿಷನ್ ಕೊಡು ಸಾಕು."

"ಇಲ್ಲ! ಇಲ್ಲ! ಪಾಲ್. ನೀನು ಹಾಗೆ ಮಾಡಬೇಡ. ಈ ಮನೆ, ಇಲ್ಲಿ ನಿನಗಾಗಿ ಮಾಡಿದ ಎಲ್ಲವನ್ನೂ ಬಿಟ್ಟು ಹೋಗ್ತೀಯಾ?"

ದಿನವಿಡೀ ಇಬ್ಬರ ಮಧ್ಯೆಯೂ ಮಾತಿನ ಚಕಮಕಿ ನಡೆಯಿತು. ಗಾಗಿನ್‌ನನ್ನು ತನ್ನ ಜೊತೆಯೇ ಉಳಿಸಿಕೊಳ್ಳಲು ವಿನ್ಸೆಂಟ್ ಹೆಣಗಾಡುತ್ತಿದ್ದ; ವಿಶ್ವ ಪ್ರಯತ್ನ ಮಾಡುತ್ತಿದ್ದ. ಗಾಗಿನ್ ಯಾವುದಕ್ಕೂ ಸೊಪ್ಪುಹಾಕಲಿಲ್ಲ. ವಿನ್ಸೆಂಟ್ ತಮಾಶೆಯಾಗಿ, ವಿನಯವಾಗಿ, ಬೈಯುತ್ತಾ, ಹೆದರಿಸುತ್ತಾ – ಅನೇಕ ರೀತಿಗಳಲ್ಲಿ ಬೇಡಿಕೊಂಡ; ಕಡೆಗೆ ಕಣ್ಣೀರು ಸುರಿಸಿ ಕೇಳಿಕೊಂಡ. ಈ ವಾಕ್ಸಮರದಲ್ಲಿ ವಿನ್ಸೆಂಟ್ ಗೆಲ್ಲುವ ಹಾಗೆ ಕಾಣಿಸಿತು. ಆ ಹಳದಿ ಮನೇಲಿ ತನ್ನ ಗೆಳೆಯನನ್ನು ಉಳಿಸಿಕೊಂಡರೆ ಮಾತ್ರ ತಾನು ಜೀವಂತವಾಗಿ ಇರಬಲ್ಲೆ ಎಂದು ನಂಬಿದ್ದ. ರಾತ್ರಿ ಹೊತ್ತಿಗೆ, ಗಾಗಿನ್‌ಗೆ ಸಾಕುಸಾಕಾಗಿ, ವಿನ್ಸೆಂಟ್‌ಗೆ ಸೋತ. ಸದ್ಯಕ್ಕೆ ಅವನಿಗೆ ಸ್ವಲ್ಪ ವಿಶ್ರಾಂತಿ ಬೇಕಿತ್ತು.

ಹಳದಿ ಮನೆಯ ಪ್ರತಿಯೊಂದು ಕೋಣೆಯೂ ವಿದ್ಯುತ್ ಪ್ರವಾಹದಿಂದ ಸಂಚಲಿತವಾದಂತಹ ಅನುಭವ! ಎಷ್ಟೋ ಪ್ರಯತ್ನದ ನಂತರ, ಗಾಗಿನ್‌ಗೆ ನಿದ್ದೆ ಹತ್ತಿತು.

ಮಧ್ಯದಲ್ಲಿ ಅವನಿಗೆ ಏನೋ ವಿಚಿತ್ರ ಅನುಭವವಾದಂತಾಗಿ ಎಚ್ಚರಗೊಂಡು ಕಣ್ಣುಬಿಟ್ಟು ನೋಡಿದರೆ, ವಿನ್ಸೆಂಟ್ ತನ್ನ ಹಾಸಿಗೆಯ ಬಳಿ ನಿಂತು, ತನ್ನನ್ನೇ ಆ ಕತ್ತಲಲ್ಲಿಯೇ ದಿಟ್ಟಿಸುತ್ತಾ ನಿಂತಿದ್ದಾನೆ.

"ಏನ್ಸಮಾಚಾರ ವಿನ್ಸೆಂಟ್!" ಬಿಗುಮುಖದಿಂದ ವಿಚಾರಿಸಿದ. ವಿನ್ಸೆಂಟ್ ಉತ್ತರಿಸಲಿಲ್ಲ. ಸುಮ್ಮನೆ ಅಲ್ಲಿಂದ, ತನ್ನ ಕೋಣೆಗೆ ಹೋಗಿ ಮಲಗಿಬಿಟ್ಟ.

ಮರುದಿನ ರಾತ್ರಿಯೂ ಇದೇ ಬಗೆಯಲ್ಲಿ ಗಾಗಿನ್ ಕಣ್ಣುಬಿಟ್ಟು ನೋಡಿದರೆ ಮತ್ತೆ ವಿನ್ಸೆಂಟ್ ನೆನ್ನೆಯಂತೆಯೇ, ಕತ್ತಲಲ್ಲಿ ಗಾಗಿನ್‌ನನ್ನು ದಿಟ್ಟಿಸುತ್ತಾ ನಿಂತಿದ್ದ.

"ವಿನ್ಸೆಂಟ್! ಹೋಗು! ಮಲಕ್ಕೋ!" ವಿನ್ಸೆಂಟ್ ಹಿಂತಿರುಗಿದ.

ಮಾರನೆ ರಾತ್ರಿ ಊಟಕ್ಕೆ ಕುಳಿತಾಗ ಸೂಪ್ ವಿಷಯದಲ್ಲಿ ಇಬ್ಬರೂ ಜೋರಾಗಿ ಜಗಳಕ್ಕೆ ಇಳಿದರು.

"ನಾನು ಆ ಕಡೆ ಎಲ್ಲೋ ನೋಡ್ತಿದ್ದಾಗ, ನೀನು ಸೂಪ್‌ನಲ್ಲಿ ಪೈಂಟ್ ಬೆರೆಸಿದ್ದೀಯ!"

ವಿನ್ಸೆಂಟ್ ನಕ್ಕು, ಗೋಡೆಯ ಬಳಿಗೆ ಹೋಗಿ ಚಾಕ್‌ಪೀಸ್‌ನಿಂದ

"ಜೆ ಸ್ವಿ ಸೈಂಟ್ ಎಸ್ಪ್ರಿಟ್

ಜೆ ಸ್ವಿ ಸೇಂ ದೆ' ಸ್ಪ್ರಿಟ್"

ಕೆಲವು ದಿನಗಳ ವರೆಗೆ ಅವನು ಶಾಂತವಾಗಿಯೇ ಇದ್ದ. ಏನೋ ದುಃಖ ಖಿನ್ನತೆಯ ಸ್ಥಿತಿಯಲ್ಲಿದ್ದ. ಗಾಗಿನ್ ಹತ್ತಿರ ಮಾತೂ ಆಡುತ್ತಿರಲಿಲ್ಲ. ಪೈಂಟ್ ಬ್ರಷ್‌ಗೂ ಕೈ ಇಡಲಿಲ್ಲ; ಓದಲೂ ಇಲ್ಲ. ಒಂದು ಮೂಲೆಯಲ್ಲಿ, ಕುರ್ಚಿಯಲ್ಲಿ ಕುಳಿತು ಶೂನ್ಯದತ್ತ ನೋಡುತ್ತಾ ಸಮಯ ಕಳೆಯುತ್ತಿದ್ದ.

ನಾಲ್ಕನೆ ದಿನ, ರಭಸದ ಬಿರುಗಾಳಿ ಬೀಸುತ್ತಿದ್ದಾಗ, ಗಾಗಿನ್‌ನನ್ನು ಹಾಗೆಯೇ ಅಡ್ಡಾಡಿ ಬರಲು ಕರೆದ.

"ಆ ಪಾರ್ಕ್‌ವರೆಗೆ ಹೋಗಿ ಬರೋಣ. ನಿನಗೆ ಏನೋ ಹೇಳಬೇಕಾಗಿದೆ."

"ಇಲ್ಲಿಯೇ ಚೆನ್ನಾಗಿದೆ. ಯಾಕೆ ಇಲ್ಲಿ ಹೇಳಬಾರದೇನು?"

"ಇಲ್ಲ. ಕುಳಿತಿದ್ದಾಗ ನನಗೆ ಮಾತಾಡಲು ಆಗುವುದಿಲ್ಲ. ನಡೆಯುತ್ತಾ ಹೇಳೋಕೇ ನನಗಿಷ್ಟ."

"ಸರಿ. ನಿನ್ನ ಇಷ್ಟದಂತೆಯೇ ಆಗಲಿ."

ವಾಹನಗಳು ಹೋಗುತ್ತಿದ್ದ ರಸ್ತೆ ಹಿಡಿದು, ಬಿರುಗಾಳಿಯನ್ನೂ ಎದುರಿಸುತ್ತಾ, ಹೆಜ್ಜೆ ಹಾಕಿದರು. ಪಾರ್ಕ್‌ನಲ್ಲಿದ್ದ ಸೈಪ್ರೆಸ್ ಮರಗಳು ಬಿರುಗಾಳಿಗೆ ನೆಲ ಕಚ್ಚಿದ್ದವು.

"ನೀನು ನನಗೆ ಏನು ಹೇಳಬೇಕೂಂತ ಇದ್ದೀಯ, ಅದನ್ನಾದರೂ ತಿಳಿಸು" ಗಾಗಿನ್ ಕೇಳಿಕೊಂಡ.

ಗಾಳಿಯ ರಭಸದಿಂದಾಗಿ, ಗಟ್ಟಿಯಾಗಿ ಅವನಿಗೆ ಕೇಳಿಸುವಂತೆ, ಹೇಳಿದ. ಪೂರ್ತಿ ಕೇಳಿಸಿಕೊಳ್ಳುವುದಕ್ಕೆ ಮೊದಲೇ ಮಾತುಗಳು ಗಾಳಿಯಲ್ಲಿ ಕೊಚ್ಚಿ ಹೋಗುತ್ತಿದ್ದವು.

"ಪಾಲ್, ಕೆಲವು ದಿನಗಳಿಂದ ನನಗೊಂದು ಅದ್ಭುತವಾದ ಐಡಿಯಾ ಹೊಳೀತಿದೆ."

"ನಿನ್ನ ಈ ಅದ್ಭುತವಾದ ಐಡಿಯಾಗಳಿಂದ ನನಗೆ ಸಾಕಾಗಿ ಹೋಗಿದೆ ಅಂದ್ರೆ, ದಯವಿಟ್ಟು ನನ್ನನ್ನು ಕ್ಷಮಿಸು."

"ಪೈಂಟರ್ಸ್ ಆಗಿ ನಾವು ಯಾರೂ ಯಶಸ್ಸನ್ನು ಸಾಧಿಸಲಿಲ್ಲ. ಯಾಕೆ ಗೊತ್ತಾ?"

"ಏನು? ನನಗೇನೂ ಕೇಳಿಸ್ತಿಲ್ಲ. ನನ್ನ ಕಿವಿ ಹತ್ತಿರ ಬಂದು ಗಟ್ಟಿಯಾಗಿ ಹೇಳು."

"ಪೈಂಟರ್ಸ್ ಆಗಿ ನಾವು ಯಾಕೆ ಸೋತೆವು ಗೊತ್ತೇ?"

"ಇಲ್ಲ. ಗೊತ್ತಿಲ್ಲ."

"ನಾವು ಒಬ್ಬರೇ ಪೈಂಟ್ ಮಾಡ್ತೀವಿ!"

"ಏನು ಹೇಳ್ತಾ ಇದ್ದಿ, ಅರ್ಥವಿಲ್ಲದ್ದು?"

"ನಾವು ಕೆಲವನ್ನು ಚೆನ್ನಾಗಿ ಪೈಂಟ್ ಮಾಡ್ತೀವಿ. ಕೆಲವನ್ನು ಕೆಟ್ಟದ್ದಾಗಿ. ಒಳ್ಳೇದು, ಕೆಟ್ಟದ್ದು ಎಲ್ಲವನ್ನೂ ಒಂದೇ ಕ್ಯಾನ್‌ವಾಸ್‌ನಲ್ಲಿ ತರ್ತೀವಿ."

"ಬ್ರಿಗೇಡಿಯರ್, ನೀನು ಹೇಳೋದು ಅರ್ಥ ಆಗ್ತಿದೆ."

"ನಿನಗೆ ಡಚ್ ಸೋದರರ ನೆನಪಿದೆಯಾ. ಒಬ್ಬ ಲ್ಯಾಂಡ್‌ಸ್ಕೇಪ್ಸ್ ಚೆನ್ನಾಗಿ ಮಾಡ್ತಿದ್ದ. ಮತ್ತೊಬ್ಬ ಫಿಗರ್ಸ್ (ಆಕೃತಿಗಳು) ಮಾಡುವುದರಲ್ಲಿ ಸಿದ್ಧಹಸ್ತನಾಗಿದ್ದ. ಇಬ್ಬರೂ ಒಟ್ಟಿಗೆ ಕ್ಯಾನ್‌ವಾಸ್ ಮೇಲೆ ಕೆಲಸ ಮಾಡುತ್ತಿದ್ದರು. ಹಾಗೆ ಮಾಡಿದ್ದರಿಂದ ಇಬ್ಬರೂ ಒಳ್ಳೆ ಹೆಸರು ಮಾಡಿಕೊಂಡರು."

"ನೀನು ಹೇಳ್ತಿರೋ ಈ ಕತೆಯ ತಲೆಬುಡಾನೇ ಗೊತ್ತಾಗ್ತಿಲ್ಲ."

"ಏನು ಹೇಳಿದೆ. ಹತ್ತಿರ ಬಂದು ಕಿವಿಯಲ್ಲಿ ಜೋರಾಗಿ ಹೇಳು."

"ಏನಿಲ್ಲ ಮುಂದುವರೆಸು ಅಂದೆ!"

"ಪಾಲ್. ನಾವೂ ಹಾಗೆ ಮಾಡಬೇಕು. ನೀನು ಮತ್ತು ನಾನು, ಸೆಝಾನ್‌ನ್ನೆ, ಲಾಟ್ರೆಕ್, ರೂಸೋ – ಎಲ್ಲರೂ–ನಾವೆಲ್ಲರೂ ಒಟ್ಟಾಗಿ ಒಂದೇ ಕ್ಯಾನ್‌ವಾಸ್ ಮೇಲೆ ಪೈಂಟ್ ಮಾಡೋದು. ಆಗಲೇ ನಿಜವಾದ ಕಮ್ಯುನಿಸಂ ಸಾಧ್ಯವಾಗುತ್ತೆ. ನೀನು ಲ್ಯಾಂಡ್‌ಸ್ಕೇಪ್, ಸೆಝಾನ್‌ನ್ನೆ ಸರ್ಫೇಸ್, ಲಾಟ್ರೆಕ್ ಫಿಗರ್ಸ್, ನಾನು ಸೂರ್ಯ ಚಂದ್ರ ನಕ್ಷತ್ರ, ನಾವೆಲ್ಲ ಒಟ್ಟಾಗಿ, ಒಬ್ಬರೇ ಕಲಾವಿದ ಎನಿಸಿಕೊಳ್ಳಬಹುದು ಏನು ಹೇಳ್ತೀಯ?"

"ಟುರ್‌ಲುತುತು, ಮೋನ್ ಷಪೊ ಪಾಂಟು!"

ಅವನು ಬಿದ್ದು ಬಿದ್ದು ನಗತೊಡಗಿದ. ಅವನ ವಿಚಿತ್ರ ವ್ಯಂಗ್ಯ, ಕರ್ಕಶ ನಗು, ಗಾಳಿಯ ಜೊತೆಯಲ್ಲಿಯೇ ವಿನ್ಸೆಂಟ್‌ನ ಮುಖಕ್ಕೆ ಎರಚಿತು.

ಹೊಟ್ಟೆಹಿಡಿದುಕೊಂಡು ನಗುತ್ತಾ ಕಷ್ಟದಿಂದ ಉಸಿರು ಎಳೆದುಕೊಂಡು "ಬ್ರಿಗೇಡಿಯರ್, ಪ್ರಪಂಚದಲ್ಲಿಯೇ ಇದೊಂದು ಅದ್ಭುತವಾದ ಐಡಿಯಾ ಅಲ್ಲ ಅನ್ನೋದಾದ್ರೆ ಒಪ್ಪಿಕೊಳ್ತೀನಿ. ನಾನು ಈ ಥರ ಬೊಗಳ್ತೀನಿ ಅಂತ ಬೇಸರ ಬೇಡ."

ಅವನು ತಡೆಯಲಾಗದೆ ನಗುವಿನೊಂದಿಗೆ, ಹೊಟ್ಟೆ ಹಿಡಿದುಕೊಂಡೇ ಓಡಿದ.

ವಿನ್ಸೆಂಟ್ ಮಾತ್ರ ತಟಸ್ಥವಾಗಿ ನಿಂತ.

ಆಕಾಶದಲ್ಲಿ ಕಪ್ಪು ಹಕ್ಕಿಗಳ ಹಿಂಡು ಕಾಣಿಸಿತು. ಅವು ಹಾರುತ್ತಾ, ರೆಕ್ಕೆ ಫಡಫಡಿಸುತ್ತಾ, ಕೂಗುತ್ತಾ, ಅಡ್ಡಾಡುತ್ತಿದ್ದಂತಹವು ವಿನ್ಸೆಂಟ್‌ನನ್ನು ಮುತ್ತಿದವು. ರೆಕ್ಕೆಗಳನ್ನು ಹರಡಿ, ಅವನನ್ನು ಎಲ್ಲ ಕಡೆಯಿಂದಲೂ ಕವಿದವು.

ಗಾಗಿನ್ ಹಿಂತಿರುಗಿದ.

"ಬಾ ವಿನ್ಸೆಂಟ್, ಲೂಯಿ ಕಡೆಗೆ ಹೋಗೋಣ. ನಿನ್ನ ಅಮೂಲ್ಯವಾದ ಆಲೋಚನೆಯ ನಂತರ, ಸೆಲೆಬ್ರೇಷನ್ ಆಗಲೇಬೇಕು."

ವಿನ್ಸೆಂಟ್ ಮೌನವಾಗಿ ರೂ ದ ರಿಕೊಲೆಟ್ಸ್‌ಗೆ ಅವನನ್ನು ಹಿಂಬಾಲಿಸಿ ಹೊರಟ.

ಗಾಗಿನ್ ಯಾವುದೋ ಹುಡುಗಿಯನ್ನು ಜೊತೆ ಮಾಡಿಕೊಂಡು ಮಹಡಿ ಮೇಲೆ ಹೋದ.

ರ್‍ಯಾಷೆಲ್ ಕೆಫೆ ರೂಮಿನಲ್ಲಿಯೇ ವಿನ್ಸೆಂಟ್‌ನ ತೊಡೆ ಮೇಲೆ ಕುಳಿತಳು.

"ನನ್ನ ಜೊತೆ ಮೇಲೆ ಬರೋದಿಲ್ವೆ ಫೋ-ರೋ?" ಅವಳು ಕೇಳಿದಳು.

"ಇಲ್ಲ."

"ಯಾಕಿಲ್ಲ."

"ನನ್ನ ಹತ್ತಿರ ಐದು ಫ್ರ್ಯಾಂಕ್ ಇಲ್ಲ."

"ಹಾಗಾದರೆ ಬದಲಾಗಿ ನಿನ್ನ ಕಿವಿಯನ್ನು ಕೊಡ್ತೀಯ?"

"ಆಯ್ತು."

ಕೆಲಕ್ಷಣಗಳ ನಂತರ ಗಾಗಿನ್ ಹಿಂತಿರುಗಿದ. ಇಬ್ಬರೂ ಮನೆಗೆ ಬಂದರು. ಊಟ ಮಾಡಿದ ಮೇಲೆ ಗಾಗಿನ್ ಮಾತಾಡದೆ ಮುಂದಿನ ಬಾಗಿಲಿನಿಂದ ಹೊರಗೆ ಹೆಜ್ಜೆ ಹಾಕಿದ. ಅವನು ಪ್ಲಾಸ್ ದ ಲಾಮಾರ್ಟಿನ್ ದಾಟಿದ್ದನೋ ಇಲ್ಲವೋ, ಹಿಂದಿನಿಂದ, ಅವನಿಗೆ ಪರಿಚಿತ. ಎಡ್ಡಾದಿಡ್ಡಿ ಹೆಜ್ಜೆ ಸಪ್ಪಳ ಕೇಳಿಸಿದವು.

ಸರ್‍ರನೆ ತಿರುಗಿದ.

ಕೈಯಲ್ಲಿ [ಕ್ಷೌರದ ಕತ್ತಿ] ರೇಜರ್ ಇರಿಸಿಕೊಂಡು ಗಾಗಿನ್‌ನತ್ತ ನುಗ್ಗಿದ.

ಗಾಗಿನ್ ಕದಲದೆ ನಿಂತು ವಿನ್ಸೆಂಟ್‌ನತ್ತ ನೋಡಿದ.

ವಿನ್ಸೆಂಟ್ ಗಾಗಿನ್‌ನಿಂದ ಕೇವಲ ಎರಡು ಅಡಿಗಳಷ್ಟು ಅಂತರದಲ್ಲಿ ನಿಂತ. ಆ ಕತ್ತಲೆಯಲ್ಲಿಯೇ ಅವನನ್ನು ದಿಟ್ಟಿಸಿದ. ನಂತರ ತಲೆ ಇಳಿಸಿ ಮೆಲ್ಲಗೆ ಅಲ್ಲಿಂದ, ಅತ್ತಿತ್ತ ನೋಡದೆ, ನೇರವಾಗಿ ಮನೆಯತ್ತ ಓಡಿದ.

ಗಾಗಿನ್ ಹೋಟೆಲ್‌ಗೆ ಹೋದ. ಒಂದು ರೂಮು ತಗೊಂಡ. ಬಾಗಿಲು ಹಾಕಿಕೊಂಡು ಚೆನ್ನಾಗಿ ನಿದ್ದೆ ಮಾಡಿದ.

ವಿನ್ಸೆಂಟ್ ಹಳದಿ ಮನೆ ಸೇರಿ, ತನ್ನ ರೂಮು ಹೊಕ್ಕ. ಕನ್ನಡಿಯನ್ನು ತೆಗೆದುಕೊಂಡು ಅದರಲ್ಲಿ ತನ್ನ ಬಿಂಬವನ್ನು ಗಮನಿಸಿದ. ಇದೇ ಕನ್ನಡಿಯಿಂದ ತನ್ನದೇ ಹಲವು ಭಾವಚಿತ್ರಗಳನ್ನು ಬಿಡಿಸಿದ್ದ. ಟಾಯಲೆಟ್ ರೂಮಿನಲ್ಲಿ ಆ ಕನ್ನಡಿಯನ್ನು ಸಿಂಕ್‌ಮೇಲೆ ನಿಲ್ಲಿಸಿದ.

ಅದರಲ್ಲಿ ಕೆಂಪಾಗಿದ್ದ ಕಣ್ಣುಗಳನ್ನು ನೋಡಿಕೊಂಡ. ಅವನಿಗೆ, ತನ್ನ ಕೊನೆ ಸಮೀಪಿಸಿದೆ ಎಂದೆನಿಸಿತು. ಇನ್ನೇನು ಅವನ ಬದುಕು ಮುಗಿಯಲಿದೆ. ತನ್ನ ಮುಖದಲ್ಲಿ ಅದು ಪ್ರತಿಫಲಿಸುತ್ತಿದೆ.

ಆದಷ್ಟು ಬೇಗ ಎಲ್ಲದರಿಂದ ಬಿಡುಗಡೆ ಹೊಂದಬೇಕಿದೆ.

ರೇಝರ್ ಕೈಗೆತ್ತಿಕೊಂಡ. ಸ್ಟೀಲ್‌ನ ಸ್ಪರ್ಷದ ಅನುಭವ.

ಧ್ವನಿಗಳು ವಿಚಿತ್ರ ಕತೆಗಳನ್ನು ಅವನ ಕಿವಿಯಲ್ಲಿ ಉಸಿರುತ್ತಿದ್ದವು.

ಆರ್ಲೆಯ ಸೂರ್ಯನ ಬೆಳಕು ಅವನ ಮತ್ತು ಅವನ ಕನ್ನಡಿಯ ಮಧ್ಯೆ ಹೊಳೆದು ಕಣ್ಣು ಕುಕ್ಕಿತು.

ರೇಜರ್‌ನಿಂದ ಬಲಗಿವಿಯನ್ನು ಕತ್ತರಿಸಿದ.

ಕಿವಿಯ ಮೇಲಿನ ಒಂದಿಷ್ಟು ಗೋಲಾಕಾರದ ಭಾಗ ಮಾತ್ರವೇ ಉಳಿದಿತ್ತು.

ರೇಜರ್ ಬಿಸಾಡಿದ. ತನ್ನ ತಲೆಯನ್ನೆಲ್ಲಾ ಟವೆಲ್ಲುಗಳಿಂದ ಸುತ್ತಿಕೊಂಡ. ರಕ್ತ ನೆಲದ ಮೇಲೆ ತೊಟ್ಟಿಕ್ಕಿತು.

ಬೇಸಿನ್‌ನಲ್ಲಿ ಬಿದ್ದಿದ್ದ ಕಿವಿಯನ್ನು ಎತ್ತಿಕೊಂಡು, ಅದನ್ನು ತೊಳೆದು, ಡ್ರಾಯಿಂಗ್ ಪೇಪರ್‌ನಲ್ಲಿ ಸುತ್ತಿ ಮತ್ತೆ ಅದನ್ನು ನ್ಯೂಸ್‌ಪೇಪರಿನಲ್ಲಿ ಸುತ್ತಿ ಒಂದು ಬಂಡಲ್ ಮಾಡಿದ.

ಮೆಟ್ಟಿಲಿಳಿದು ಮನೆಯಿಂದ ಹೊರಕ್ಕೆ ಹೆಜ್ಜೆಹಾಕಿದ. ಪ್ಲಾಸ್ ದ ಲಾಮಾರ್ಟಿನ್ ದಾಟಿ, ಗುಡ್ಡ ಹತ್ತಿ, ಮೆಸೋನ್ ದ ಟಾಲರೆನ್ಸ್ ತಲುಪಿ, ಗಂಟೆ ಒತ್ತಿದ.

ಕೆಲಸದಾಕೆ ಬಾಗಿಲಲ್ಲಿ ಕಾಣಿಸಿಕೊಂಡಳು.

"ರ್‍ಯಾಷೆಲ್ ಅನ್ನು ನನ್ನ ಬಳಿಗೆ ಕಳಿಸು."

ಒಂದು ನಿಮಿಷದಲ್ಲಿ ರ್‍ಯಾಷೆಲ್ ಅಲ್ಲಿ ಪ್ರತ್ಯಕ್ಷಳಾದಳು.

"ಓಹ್ ನೀನಾ ಫೋ-ರೋ! ಹೇಳು ಏನಾಗಬೇಕಿದೆ?"

"ನಿನಗಾಗಿ ನಾನು ಏನೋ ತಂದಿದ್ದೀನಿ."

"ನನಗೆ? ಉಡುಗೊರೆ?"

"ಹೌದು."

"ನೀನೆಷ್ಟು ಒಳ್ಳೆಯವನು 'ಫೋ-ರೋ'."

"ತುಂಬಾ ಕೇರ್‌ಫುಲ್ ಆಗಿ ಇಟ್ಟುಕೋ. ಇದು ನನ್ನ ಜ್ಞಾಪಕಾರ್ಥ."

"ಏನದು?"

"ಬಿಚ್ಚಿನೋಡು. ಏನೂಂತ ನಿನಗೇ ಗೊತ್ತಾಗುತ್ತೆ."

ರ್‍ಯಾಷೆಲ್ ಪೇಪರ್‌ಗಳನ್ನು ಒಂದೊಂದಾಗಿ ಬಿಚ್ಚಿದಳು. ಬೆಚ್ಚಿ ಬಿದ್ದು ಕಿವಿಯನ್ನೇ ದಿಟ್ಟಿಸತೊಡಗಿದಳು. ಭಯದಿಂದ ಮೂರ್ಛೆಗೊಂಡಳು.

ವಿನ್ಸೆಂಟ್ ಹಿಂತಿರುಗಿದ. ಗುಡ್ಡ ಇಳಿದ ಪ್ಲಾಸ್ ಲಾಮಾರ್ಟಿನ್ ದಾಟಿ ಹಳದಿ ಮನೆ ಸೇರಿದ. ತನ್ನ ರೂಮಿನ ಬಾಗಿಲನ್ನು ಹಾಕಿಕೊಂಡು ನಿದ್ದೆ ಮಾಡಿದ.

ಗಾಗಿನ್ ಮಾರನೇ ದಿನ ಬೆಳಿಗ್ಗೆ ಏಳೂವರೆ ಗಂಟೆಗೆ ಮನೆಗೆ ಹಿಂತಿರುಗಿದಾಗ, ಮನೆಯ ಮುಂದೆ ಒಂದು ಗುಂಪು ನಿಂತಿತ್ತು. ರೌಲಿನ್ ಅಸಹಾಯಕತೆಯಿಂದ ಕೈಕೈ ಹಿಸುಕಿಕೊಳ್ಳುತ್ತಿದ್ದ.

"ಮಿಸ್ಟರ್ ನಿನ್ನ ಜೊತೆಗಾರನಿಗೆ ಏನು ಮಾಡ್ಬಿಟ್ಟೆ?" ಗುಂಪಿನಲ್ಲಿದ್ದ ಒಬ್ಬ ವ್ಯಕ್ತಿ ಕೇಳಿದ.

"ನನಗೇನೂ ಗೊತ್ತಿಲ್ಲ."

"ಇಲ್ಲ. ನಿನಗೆ ಎಲ್ಲಾ ಗೊತ್ತಿದೆ. ಅವನು ಸತ್ತು ಹೋಗಿದ್ದಾನೆ."

ಸುದ್ದಿಯನ್ನು ಜೀರ್ಣಿಸಿಕೊಳ್ಳಲು ಗಾಗಿನ್‌ಗೆ ಸಾಧ್ಯವಾಗಲಿಲ್ಲ. ನಿಂತಿದ್ದ ಜನ ಅವನನ್ನೇ ಅಪರಾಧಿ ಎಂಬಂತೆ ಚುಚ್ಚುಗಣ್ಣುಗಳಿಂದ ನೋಡುತ್ತಿದ್ದರು. ಈ ನೋಟ ಅವನನ್ನು ಉಸಿರುಗಟ್ಟಿಸುತ್ತಿತ್ತು.

"ಬನ್ನಿ ಮೇಲೆ ಹೋಗೋಣ. ವಿಷಯ ಏನೂಂತ ಅರ್ಥವಾಗುತ್ತೆ."

ಒದ್ದೆಯಾದ ಟವೆಲುಗಳು ಎರಡು ರೂಮುಗಳಲ್ಲಿಯೂ ಬಿದ್ದಿದ್ದವು. ಮೆಟ್ಟಿಲ ಮೇಲೆಲ್ಲ ರಕ್ತದ ಕಲೆಗಳು ಇದ್ದವು. ಈ ಕಲೆಗಳು ವಿನ್ಸೆಂಟ್ ರೂಮಿನ ತನಕವೂ ಇದ್ದವು.

ವಿನ್ಸೆಂಟ್‌ನನ್ನು ಹೊದಿಕೆಯಲ್ಲಿ ಸುತ್ತಿರಿಸಲಾಗಿತ್ತು. ದೇಹ ನಿಶ್ಚಲವಾಗಿತ್ತು. ಗಾಗಿನ್ ಅವನ ದೇಹವನ್ನು ಮುಟ್ಟಿ ನೋಡಿದ. ಇನ್ನೂ ಬೆಚ್ಚಗಿತ್ತು. ತಕ್ಷಣವೇ ಅವನಲ್ಲಿ ಶಕ್ತಿ ಸಂಚಾರವಾಯಿತು.

"ದಯವಿಟ್ಟು ಇವನನ್ನು ಎಬ್ಬಿಸುವಾಗ ಸ್ವಲ್ಪ ಎಚ್ಚರಿಕೆಯಿಂದ, ಕರುಣೆಯಿಂದ ನಡೆದುಕೊಳ್ಳಿ. ಅವನು ಎದ್ದು ನನ್ನ ಬಗ್ಗೆ ವಿಚಾರಿಸಿದರೆ, ನಾನು ಪ್ಯಾರಿಸಿಗೆ ಹೊರಟು ಹೋದೆ ಅಂತ ತಿಳಿಸಿ. ನನ್ನನ್ನು ನೋಡಿದರೆ ಇನ್ನೂ ಹೆಚ್ಚಿನ ಆಘಾತವಾಗಬಹುದು, ಅವನಿಗೆ" ಎಂದು ಅಲ್ಲಿಗೆ ಬಂದಿದ್ದ ಪೋಲೀಸ್ ಸೂಪರಿಡೆಂಟ್‌ಗೆ ಹೇಳಿದ.

ಪೋಲೀಸ್ ಸೂಪರಿಡೆಂಟ್ ಒಂದು ಕ್ಯಾಬ್ ಮತ್ತು ಡಾಕ್ಟರ್‌ಗೆ ಹೇಳಿಕಳಿಸಿದ. ವಿನ್ಸೆಂಟ್‌ನನ್ನು ಆಸ್ಪತ್ರೆಗೆ ಕರೆದೊಯ್ದರು. ರೌಲಿನ್ ಏದುಸಿರು ಬಿಡುತ್ತಾ ಗಾಡಿಯ ಹಿಂದೆ ಓಡಿದ.

–೯–

ಆರ್ಲೆಯ ಆಸ್ಪತ್ರೆಯಲ್ಲಿ ಡಾ॥ ಫೆಲಿಕ್ಸ್ ರೇ ಮೆಡಿಕಲ್ ಸ್ಟೂಡೆಂಟ್ ಆಗಿದ್ದ. ಕುಳ್ಳಗೆ ಇದ್ದ. ದಟ್ಟವಾದ ಕಪ್ಪು ಕೂದಲಿನ ಆತ ವಿನ್ಸೆಂಟ್‌ನ ಚಿಕಿತ್ಸೆ ನಡೆಸಿದ. ವಿನ್ಸೆಂಟ್‌ನ ಗಾಯಗಳಿಗೆ ಔಷಧಿ, ಪಟ್ಟಿ ಮಾಡಿದ. ಸೆಲ್‌ನಂತಿದ್ದ ಒಂದು ಕೋಣೆಯಲ್ಲಿ ಹಾಸಿಗೆ ಮೇಲೆ ಮಲಗಿಸಿದ. ಆ ಕೋಣೆಯಲ್ಲಿ ಯಾವುದೇ ವಸ್ತುಗಳು ಇಲ್ಲದಂತೆ ನೋಡಿಕೊಂಡ. ಅವನು ಹೊರಗೆ ಹೊರಟಾಗ, ಕೋಣೆಗೆ ಬೀಗ ಹಾಕುವುದನ್ನು ಮರೆಯಲಿಲ್ಲ.

ಸಂಜೆಗೆ, ರೋಗಿಯ ಪಲ್ಸ್ ಪರೀಕ್ಷಿಸುತ್ತಿದ್ದಾಗ, ವಿನ್ಸೆಂಟ್ ಕಣ್ಣುಬಿಟ್ಟ ಮೇಲೆ, ಕೆಳಗೆ, ಸುತ್ತಲೂ ಕಣ್ಣಾಡಿಸಿದ. ಕಿಟಕಿಯೊಳಗಿಂದ ಕಪ್ಪಾಗುತ್ತಿದ್ದ ನೀಲಿ ಆಕಾಶವನ್ನು ನೋಡಿದ. ಮೆಲ್ಲಗೆ ಕಣ್ಣುಗಳು ಡಾಕ್ಟರ್ ರೇ ಕಡೆ ಹೊರಳಿದವು.

"ಹಲೋ". ಮೆಲ್ಲಗೆ ಮೃದುವಾಗಿ ಹೇಳಿದ.

"ಹಲೋ" ಡಾಕ್ಟರ್ ರೇ ಉತ್ತರಿಸಿದ.

"ನಾನು ಎಲ್ಲಿದ್ದೀನಿ?"

"ಓಹ್! ನೀನು ಆರ್ಲೆಯ ಆಸ್ಪತ್ರೆಯಲ್ಲಿದ್ದಿ."

"ಓಹೋ!"

ಅವನ ಮುಖದ ಮೇಲೆ ಸಣ್ಣಗೆ ನೋವು ಕಾಣಿಸಿಕೊಂಡಿತು. ಕಿವಿ ಕತ್ತರಿಸಿಕೊಂಡಿದ್ದ ಜಾಗದತ್ತ, ಕೈಗಳು ಹರಿದವು. ಡಾಕ್ಟರ್ ರೇ ಕೈಗಳನ್ನು ತಡೆದ.

"ನೀನು ಮುಟ್ಟಬಾರದು."

".......ಹೌದು........ ನೆನಪಾಗ್ತಿದೆ.......ಈಗ."

"ಎಲ್ಲ ಸರಿ ಮಾಡಿಬಿಟ್ಟಿದ್ದೀನಿ ಕಣಯ್ಯಾ. ಕೆಲವೇ ದಿನಗಳಲ್ಲಿ ನೀನು ಮನೆಗೆ ಹೋಗಬಹುದು."

"ನನ್ನ ಫ್ರೆಂಡ್ ಎಲ್ಲಿ?"

"ಅವನು ಪ್ಯಾರಿಸಿಗೆ ಹೊರಟು ಹೋದ."

".........ಓ ಹಾಗೋ!..... ಪೈಪ್ ಸೇದೋಕೇನಾದರೂ ಸಿಗುತ್ತಾ?"

"ಈಗಲೇ ಸಾಧ್ಯವಿಲ್ಲ, ಓಲ್ಡ್ ಫೆಲೋ!"

ಡಾಕ್ಟರ್ ರೇ ಗಾಯ ತೊಳೆದು, ಬ್ಯಾಂಡೇಜ್ ಮಾಡಿದ.

"ನನಗೆ ಅಷ್ಟೊಂದು ಮುಖ್ಯ ಎನಿಸದಿರುವ ಒಂದು ಆಕಸ್ಮಿಕ ಅಷ್ಟೆ. ಇಷ್ಟಕ್ಕೂ ಇದರಿಂದ ಯಾವ ಪ್ರಯೋಜನವೂ ಇಲ್ಲ. ಇದೊಂದು ಥರ ಕೆಲಸಕ್ಕೆ ಬಾರದ ಕ್ಯಾಬೇಜ್. ಇದಿಲ್ಲದಿದ್ದರೂ ಏನೂ ತೊಂದರೆಯಾಗೊಲ್ಲ. ಯಾಕೇಂದ್ರೆ ಇದು ಕೇವಲ ಹೊರಗಡೆ ಭಾಗ ಮಾತ್ರ! ಅದಿಲ್ಲ ಅನ್ನುವ ಭಾವನೆ ಬರೋದಕ್ಕೂ ಸಾಧ್ಯವಿಲ್ಲ."

"ನೀನು ತುಂಬಾ ಒಳ್ಳೆ ಡಾಕ್ಟರ್......ಈ ರೂಮಲ್ಲಿ ಯಾಕೆ, ಏನೊಂದು ವಸ್ತುವೂ ಇಲ್ಲ. ಬಣಬಣಾಂತ ಇದೆ."

"ನಿನ್ನನ್ನು ಅಪಾಯದಿಂದ ತಪ್ಪಿಸಬೇಕೂಂತ ಹೀಗೆ ಮಾಡಿದ್ದಾಯಿತು."

"ಯಾಠನ್ನು ತಪ್ಪಿಸೋಕೆ?"

"ನಿನ್ನನ್ನು...... ನಿನ್ನನ್ನು ತಪ್ಪಿಸೋಕೆ."

"ಓ...... ಹೌದಾ?"

"ಸರಿ, ಈಗ ನಾನು ಹೋಗಬೇಕು. ಸೇವಕ ನಿನಗೆ ಊಟ ತಂದುಕೊಡ್ತಾನೆ. ಮಾತಾಡದೆ, ಸುಮ್ಮನೆ ನಿದ್ದೆ ಮಾಡು. ರಕ್ತ ಎಲ್ಲಾ ಹೋಗ್ಬಿಟ್ಟಿರುವುದರಿಂದ ತುಂಬಾ ವೀಕಾಗಿದ್ದೀಯ."

ವಿನ್ಸೆಂಟ್ ಬೆಳಿಗ್ಗೆ ಕಣ್ಣು ಬಿಟ್ಟಾಗ, ಹಾಸಿಗೆ ಪಕ್ಕದಲ್ಲಿ ಥಿಯೋ! ಮುಖ ಬಿಳುಚಿಕೊಂಡಿತ್ತು. ಕಣ್ಣು ಕೆಂಪಾಗಿದ್ದವು.

"ಥಿಯೋ" – ವಿನ್ಸೆಂಟ್ ಪ್ರೀತಿಯಿಂದ ಕರೆದ. ಥಿಯೋ ಕುರ್ಚಿಯಿಂದ ಎದ್ದು ಕೆಳಗೆ ಮೊಣಕಾಲೂರಿ ಕುಳಿತು, ವಿನ್ಸೆಂಟ್‌ನ ಕೈಗಳನ್ನು ತೆಗೆದು ಹಿಡಿದುಕೊಂಡು, ಒಂದೇ ಸಮನೆ ಅಳುವುದಕ್ಕೆ ಮೊದಲು ಮಾಡಿದ.

"ಥಿಯೋ..... ಯಾವಾಗಲೂ ನೀನು ನನ್ನ ಜೊತೆ ಇರಬೇಕು ಥಿಯೋ.... ನನ್ನ ಪಕ್ಕದಲ್ಲಿಯೇ....."

ಥಿಯೋಗೆ ಮಾತಾಡಲು ಆಗಲಿಲ್ಲ.

"ಅಷ್ಟು ದೂರದಿಂದ ಇಲ್ಲಿಗೆ ಬರುವ ಹಾಗೆ ಮಾಡಿದ್ದು ಸರಿ ಇಲ್ಲ...... ನನ್ನ ಈ ವಿಚಾರ ನಿನಗೆ ಹೇಳಿದ್ದಾದರೂ ಯಾರು?"

"ಗಾಗಿನ್ ನಿನ್ನೆ ಟೆಲಿಗ್ರಾಫ್ ಮಾಡಿ ತಿಳಿಸಿದ. ರಾತ್ರಿಯ ಟ್ರೈನ್‌ನಲ್ಲಿ ಹೊರಟುಬಂದೆ."

"ಗಾಗಿನ್ ಹಾಗೆ ಮಾಡಬಾರದಿತ್ತು. ಸುಮ್ಮನೆ ಅನವಶ್ಯಕವಾಗಿ ಹಣ, ವೇಳೆ ಎಲ್ಲಾ ವ್ಯರ್ಥ. ರಾತ್ರಿಯೆಲ್ಲಾ ಹೀಗೇ ಕೂತಿದ್ದೆಯಾ ಥಿಯೋ?"

"ಹೌದು ವಿನ್ಸೆಂಟ್."

ಇಬ್ಬರೂ ಸ್ವಲ್ಪ ಹೊತ್ತು ಮೌನವಾಗಿದ್ದರು.

"ನಾನು ಡಾಕ್ಟರ್ ರೇ ಜೊತೆ ಮಾತಾಡಿದ್ದೀನಿ. ಅವರು ಇದು ಸನ್‌ಸ್ಟ್ರೋಕ್ ಅಂದರು. ಚೆನ್ನಾಗಿ ಬಿಸಿಲಲ್ಲಿದ್ದು ಕೆಲಸ ಮಾಡ್ತಿದ್ದಿರಬೇಕು?"

"ಹೌದು."

"ನೋಡು ವಿನ್ಸೆಂಟ್, ಇನ್ನು ಮುಂದೆಯಾದರೂ ಹೀಗೆಲ್ಲ ಮಾಡಬೇಡ. ಹ್ಯಾಟೂ ಹಾಕ್ಕೊಂಡಿರಲಿಲ್ಲ ಅಂತ ತಿಳೀತು. ಹೋಗುವಾಗ ಮರೆಯದೆ ಹ್ಯಾಟ್ ಹಾಕ್ಕೋ. ಆರ್ಲೆನಲ್ಲಿ ಸುಮಾರು ಜನಕ್ಕೆ ಈ ಥರದ ಸನ್‌ಸ್ಟ್ರೋಕ್ ಆಗೋದು ಸಾಮಾನ್ಯ."

ವಿನ್ಸೆಂಟ್ ಅವನ ಕೈಯನ್ನು ಮೃದುವಾಗಿ ಒತ್ತಿದ. ಥಿಯೋಗೆ ಗಂಟಲು ತುಂಬಿ ಬಂತು.

"ವಿನ್ಸೆಂಟ್ ನಿನಗೊಂದು ಸುದ್ದಿ ಹೇಳಬೇಕಾಗಿದೆ. ಆದರೆ ನೀನು ಕೆಲವು ದಿನ ಕಾಯೋದು ಒಳ್ಳೇದು."

"ಒಳ್ಳೆ ಸುದ್ದೀನಾ ಥಿಯೋ?"

"ಅದು ನಿನಗೆ ತುಂಬ ಖುಷಿ ಕೊಡುತ್ತೆ."

ಡಾಕ್ಟರ್ ರೇ ಒಳಗೆ ಬಂದ.

"ಹೇಗಿದ್ದಾನೆ ಪೇಷಂಟ್?"

"ಡಾಕ್ಟರ್ ನನ್ನ ತಮ್ಮ ನನಗೊಂದು ಒಳ್ಳೆ ಸುದ್ದಿ ಹೇಳಬೇಕೆಂದಿದ್ದಾನೆ. ಹೇಳಬಹುದಾ ಹೇಗೆ?"

"ಹೇಳಬಹುದು ಅನಿಸುತ್ತೆ, ಆದರೆ ಒಂದ್ನಿಮಿಷ. ಮೊದಲು ನಿನ್ನ ಗಾಯ ಪರೀಕ್ಷಿಸಬೇಕು......ಹೂಂ! ಪರವಾಗಿಲ್ಲ. ವಾಸಿ ಆಗ್ತಿದೆ. ತುಂಬ ಬೇಗಾನೇ ಒಣಗಿ ಹೋಗ್ತಾ ಇದೆ."

ಡಾಕ್ಟರ್ ಹೊರಗೆ ಹೋದ ಮೇಲೆ, ವಿನ್ಸೆಂಟ್ ಥಿಯೋನನ್ನು ಸಂತೋಷದ ಸುದ್ದಿಯನ್ನು ಬೇಗ ತಿಳಿಸಬೇಕೆಂದು ಕಾಡಿದ.

"ವಿನ್ಸೆಂಟ್..... ನಾನು...... ನಾನು.... ಒಬ್ಬ ಹುಡುಗಿಯನ್ನು ನೋಡಿದೆ."

"ಥಿಯೋ!"

"ಹೌದು. ಅವಳು ಡಚ್ ಹುಡುಗಿ. ಜೊಹಾನ್ನ ಬಂಗರ್. ನೋಡೋಕೆ ಥೇಟ್ ಅಮ್ಮನ ಥರಾನೇ ಇದ್ದಾಳೆ."

"ಅವಳನ್ನು ನೀನು ಪ್ರೀತಿಸ್ತೀಯ ಥಿಯೋ?"

"ಹೌದು. ನೀನು ಹೊರಟು ಹೋದ ಮೇಲೆ ನನಗೆ ಒಬ್ಬನೇ ಇರೋದು ಬಹಳ ಬೇಸರ ಎನಿಸಿತು. ನೀನು ಬರುವುದಕ್ಕೆ ಮೊದಲು ಎಷ್ಟೋ ದಿನದಿಂದ ಒಬ್ಬನೇ ಇದ್ದಾಗ ಹಾಗೆ ಅನಿಸಿರಲಿಲ್ಲ. ಆದರೆ ಯಾವಾಗ ಒಂದು ವರ್ಷ ನಿನ್ನ ಜೊತೆಗೆ ಇದ್ದು ಅಭ್ಯಾಸ ಆಗೋಯ್ತೋ, ಅವತ್ತಿಂದ ಒಂಟಿಯಾಗಿರೋದು ಸಾಧ್ಯವಾಗೊಲ್ಲ ಅನಿಸೋಕೆ ಶುರು ಆಯ್ತು...."

"ಥಿಯೋ ನಾನು ನಿನಗೆ ತುಂಬ ತೊಂದರೆ ಕೊಟ್ಟೆ. ನಿನಗೆ ತೀರಾ ಕಷ್ಟ ಅಂತ ಅನಿಸಿರಬೇಕು."

"ನಿನಗೆ ಗೊತ್ತಿಲ್ಲ ವಿನ್ಸೆಂಟ್, ನೀನು ಹೊರಟು ಹೋದ ಮೇಲೆ ಎಷ್ಟು ಸಲ, ರೂ ಲೆಪಿಕ್‌ನ ಅಪಾರ್ಟ್‌ಮೆಂಟ್‌ಗೆ ಹೋಗಿ, ನಿನ್ನ ಶೂ, ಒದ್ದೆಯಾದ ಕ್ಯಾನ್‌ವಾಸ್‌ಗಳು, ನನ್ನ ಹಾಸಿಗೆ ಮೇಲೆಲ್ಲಾ ಚೆಲ್ಲಾಪಿಲ್ಲಿ ಬಿದ್ದಿರುವುದನ್ನು ನೋಡಿ ಬರಬೇಕೆಂದು ಹಂಬಲಿಸಿದ್ದೇನೆ. ಆದರೆ ಈಗ ಅದನ್ನೆಲ್ಲ ಮಾತಾಡಬಾರದು! ನೀನು ರೆಸ್ಟ್ ತಗೋ, ನಾವಿಬ್ಬರೂ, ಒಬ್ಬರಿಗೊಬ್ಬರು ಇಲ್ಲಿಯೇ ಇರೋಣ."

ಥಿಯೋ ಎರಡು ದಿನದ ನಂತರ ಹೊರಟು ನಿಂತ. ಅದೂ ಡಾಕ್ಟರ್, ವಿನ್ಸೆಂಟ್ ಬೇಗ ಬೇಗ ಸುಧಾರಿಸಿಕೊಳ್ಳುತ್ತಾನೆ, ಅಲ್ಲದೆ ಅವನ ಜವಾಬ್ದಾರಿಯನ್ನು, ರೋಗಿಯಾಗಿ ಅಲ್ಲ, ಒಬ್ಬ ಗೆಳೆಯನಾಗಿ ವಹಿಸಿಕೊಳ್ಳುತ್ತೇನೆ ಎಂದು ಪೂರ್ತಿ ಭರವಸೆ ನೀಡಿದ ಮೇಲೆ, ಹೋಗಲು ಮನಸ್ಸು ಮಾಡಿದ.

ರೌಲಿನ್ ಪ್ರತಿದಿನಾ ಸಂಜೆ ಬರುವಾಗ ಹೂವನ್ನು ತಂದುಕೊಡುತ್ತಿದ್ದ. ರಾತ್ರಿಗಳಲ್ಲಿ ಮಾತ್ರ ವಿನ್ಸೆಂಟ್ ಮನೋವಿಕಲ್ಪದಿಂದ ನರಳುತ್ತಿದ್ದ. ರಾತ್ರಿಗಳಲ್ಲಿ ನಿದ್ದೆ ಕೆಡದಿರಲೆಂದು ಡಾಕ್ಟರ್ ವಿನ್ಸೆಂಟ್‌ನ ಹಾಸಿಗೆ ಮತ್ತು ದಿಂಬಿನ ಅಡಿಯಲ್ಲಿ ಕರ್ಪೂರ ಇರಿಸಿದ.

ನಾಲ್ಕನೇ ದಿನ, ವಿನ್ಸೆಂಟ್‌ನ ಮನಃಸ್ಥಿತಿ ಸರಿಯಾಗಿದೆ ಎಂದು ಖಾತ್ರಿಯಾದ ಮೇಲೆ, ಅವನ ಕೋಣೆಗೆ ಬೀಗ ಹಾಕುವುದನ್ನು ಬಿಟ್ಟ. ಮತ್ತೆ ಕೋಣೆಯಲ್ಲಿನ ವಸ್ತುಗಳನ್ನು ಯಥಾಸ್ಥಿತಿಯಲ್ಲಿ ತಂದಿರಿಸಲಾಯಿತು.

"ನಾನೆದ್ದು ಡ್ರೆಸ್ ಮಾಡಿಕೊಳ್ಳಬಹುದೇ ಡಾಕ್ಟರ್?"

"ನಿನಗೆ ನಿಲ್ಲೋ ಶಕ್ತಿ ಇದೇಂತಾದರೆ, ಆಗಬಹುದು ಸ್ವಲ್ಪ ಫ್ರೆಷ್ಷಾದ ಗಾಳಿ ಸೇವನೆಯಾದ ಮೇಲೆ ನನ್ನ ಆಫೀಸಿಗೆ ಬಂದು ಹೋಗು."

ಆರ್ಲೆ ಆಸ್ಪತ್ರೆ, ಎರಡು ಅಂತಸ್ತುಗಳನ್ನು ಹೊಂದಿತ್ತು. ಚತುರಾಕಾರವಾಗಿದ್ದು, ಮಧ್ಯದಲ್ಲಿ ಹೂಗಳಿಗೆ ಒಂದಷ್ಟು ಜಾಗವನ್ನು ಬಿಡಲಾಗಿತ್ತು. ಜಲ್ಲಿಯಿಂದ ಹಾಸಿದ್ದ ನಡಿಗೆ ದಾರಿಯಿತ್ತು. ಕಣ್ಣು ಕುಕ್ಕುವ ಹಲವು ಬಣ್ಣಗಳಲ್ಲಿ ಪುಷ್ಪಗಳು ಅರಳಿ ನಿಂತಿದ್ದವು.

ವಿನ್ಸೆಂಟ್ ಸ್ವಲ್ಪಹೊತ್ತು ಅಲ್ಲಿಯೇ ಅಡ್ಡಾಡುತ್ತಿದ್ದು, ನಂತರ ಡಾಕ್ಟರನ ಆಫೀಸಿನೊಳಗೆ ಪ್ರವೇಶಿಸಿದ.

"ಈಗ ನಿನ್ನ ಕಾಲ ಮೇಲೆ ನೀನೇ ನಡಿಯೋಕೆ ಆದ ಮೇಲೆ ಹೇಗನ್ನಿಸುತ್ತಿದೆ?"

"ತುಂಬ ಸಂತೋಷವಾಗ್ತಿದೆ."

"ವೆರಿಗುಡ್..... ಅದ್ಸರಿ, ವಿನ್ಸೆಂಟ್ ನೀನ್ಯಾಕೆ ಹೀಗೆ ಮಾಡಿದೆ?"

"ನಂಗೊತ್ತಿಲ್ಲ."

"ಇದನ್ನು ಮಾಡುವಾಗ ನಿನ್ನ ಮನಸ್ಸಿನಲ್ಲಿ ಏನು ನಡೀತಾ ಇತ್ತು?"

"ನಾನು......ನಾನು..... ಏನೂ ಯೋಚಿಸ್ತಿರಲಿಲ್ಲ."

ವಿನ್ಸೆಂಟ್ ಇನ್ನೊಂದಷ್ಟು ದಿನ ವಿಶ್ರಾಂತಿ ತಗೊಂಡು, ಸುಧಾರಿಸಿಕೊಳ್ಳುತ್ತಿದ್ದ. ಒಂದು ದಿನ ಬೆಳಿಗ್ಗೆ, ಡಾಕ್ಟರ್ ರೇ ಅವನ ರೂಮಿನಲ್ಲಿ, ಹರಟೆ ಹೊಡೆಯುತ್ತಿದ್ದ. ವಾಷ್‌ಸ್ಟ್ಯಾಂಡಿನಲ್ಲಿದ್ದ ರೇಜರನ್ನು ತೆಗೆದುಕೊಂಡು ಅದನ್ನು ಬಿಡಿಸಿದ.

"ಡಾಕ್ಟರ್ ರೇ ನಿನಗೇನಾದರೂ ಶೇವಿಂಗ್ ಬೇಕೇನು? ನಾನು ಮಾಡ್ತೇನೆ."

ಡಾಕ್ಟರ್ ಒಂದು ಮೂಲೆಗೆ ಸರಿದು ಮುಖ ಮುಚ್ಚಿಕೊಂಡ.

"ಬೇಡ! ಬೇಡ! ಅದನ್ನು ಕೆಳಗೆ ಹಾಕು."

"ಇಲ್ಲ. ನಿಜವಾಗಿಯೂ ಹೇಳ್ತಿದ್ದೀನಿ, ನನಗೆ ಶೇವ್ ಮಾಡೋದು ಚೆನ್ನಾಗಿ ಗೊತ್ತು, ನಾನೊಬ್ಬ ಒಳ್ಳೆ ಹಜಾಮ."

"ವಿನ್ಸೆಂಟ್! ಕೆಳಗೆ ಬಿಸಾಡು ಅದನ್ನು!"

ವಿನ್ಸೆಂಟ್ ನಕ್ಕು ಬಿಟ್ಟು, ರೇಜರನ್ನು ಮಡಿಚಿ, ಮತ್ತೆ ವಾಷ್ ಸ್ಟ್ಯಾಂಡಿನಲ್ಲಿ ಇರಿಸಿದ.

"ಹೆದರಬೇಡ ಗೆಳೆಯ..... ಅಂಥಾದ್ದೆಲ್ಲ ಮುಗಿದಾಯಿತು."

ಎರಡನೇ ವಾರದ ಕಡೆಯಲ್ಲಿ, ಡಾಕ್ಟರ್, ವಿನ್ಸೆಂಟ್ ಪೈಂಟ್ ಮಾಡಲು ಅಪ್ಪಣೆ ಕೊಟ್ಟ. ಅವನ ಈಸಲ್. ಕ್ಯಾನ್‌ವಾಸ್‌ಗಳನ್ನು ಹೊರಲು ಒಬ್ಬ ಸೇವಕನನ್ನೂ ಕಳಿಸಿ ಕೊಡಲಾಯಿತು.

ವಿನ್ಸೆಂಟ್‌ನ ಮನಸ್ಸಿಗೆ ಸಂತೋಷವಾಗಲೆಂದು ಡಾಕ್ಟರ್ ಪೋಸ್ ನೀಡಿದ. ದಿನವೂ ಸ್ವಲ್ಪ ಸ್ವಲ್ಪವೇ ಪೈಂಟ್ ಮಾಡಿದ. ಭಾವಚಿತ್ರ ಪೂರ್ತಿಯಾದ ಮೇಲೆ ಅದನ್ನು ಡಾಕ್ಟರ್‌ಗೆ ಪ್ರೆಸೆಂಟ್ ಮಾಡಿದ.

"ಇದನ್ನು ನನ್ನ ನೆನಪಿಗಾಗಿ ಇರಿಸಿಕೊಳ್ಳಬೇಕು ಡಾಕ್ಟರ್. ನಿನ್ನ ಪ್ರೀತಿ, ಸಹಾಯಕ್ಕೆ ನನ್ನ ಕೃತಜ್ಞತೆಯನ್ನು ತೋರಿಸಲು ನನಗೆ ಇರುವುದು ಇದೊಂದೇ ದಾರಿ."

"ನಿನ್ನದು ತುಂಬ ಒಳ್ಳೆ ಮನಸ್ಸು ವಿನ್ಸೆಂಟ್. ನಿಜವಾಗಿಯೂ ಇದು ನನಗೆ ಸಂದ ಗೌರವವೆಂದೇ ಭಾವಿಸುತ್ತೇನೆ."

ಡಾಕ್ಟರ್ ಭಾವಚಿತ್ರವನ್ನು ಮನೆಗೆ ಕೊಂಡೊಯ್ದು, ಗೋಡೆಯಲ್ಲಿದ್ದ ಬಿರುಕನ್ನು ಮುಚ್ಚುವಂತೆ, ಅದರ ಮೇಲೆ ತೂಗು ಹಾಕಿದ.

ಇನ್ನೂ ಒಂದೆರಡು ವಾರ ಆಸ್ಪತ್ರೆಯಲ್ಲಿಯೇ ಉಳಿದ. ಬಿಸಿಲಲ್ಲಿಯೇ ನಿಂತು, ಆಸ್ಪತ್ರೆಯ ಮಧ್ಯಭಾಗದ ಹೂದೋಟವನ್ನು ಪೈಂಟ್ ಮಾಡಿದ. ಬಿಸಿಲಲ್ಲಿ ಕೆಲಸಮಾಡುವಾಗ ಮರೆಯದೆ ಸ್ಟ್ರಾ ಹ್ಯಾಟನ್ನು ಧರಿಸಿದ. ಹೂದೋಟದ ಪೈಂಟಿಂಗ್ ಮುಗಿಸಲು ಪೂರ್ತಿ ಎರಡು ವಾರ ಹಿಡಿಯಿತು.

ಆಸ್ಪತ್ರೆಯ ಗೇಟಿನಲ್ಲಿ ನಿಂತು, ಡಾಕ್ಟರ್ ವಿನ್ಸೆಂಟ್‌ನನ್ನು ಬೀಳ್ಕೊಡುವಾಗ "ವಿನ್ಸೆಂಟ್ ಪ್ರತಿದಿನಾ ಬಂದು ನನ್ನನ್ನು ಕಾಣುವುದನ್ನು ಮರೆಯಬೇಡ, ಅಲ್ಲದೆ ನಾನು ಹೇಳಿದ್ದು, ಅದೇ ಅಬಿಸಿಂತ್ ಅನ್ನು ಹೆಚ್ಚಿಗೆ ಕುಡೀಬೇಡ; ಬಿಸಿಲಲ್ಲಿ ಕೆಲಸ ಮಾಡಬೇಡ ಅನ್ನುವುದನ್ನು ನೆನಪಿನಲ್ಲಿರಿಸಿಕೋ" ಎಂದು ಎಚ್ಚರಿಕೆಯ ಬುದ್ಧಿವಾದದ ಮಾತುಗಳನ್ನು ತಿಳಿಸಿದ.

"ನಾನು, ನೀವು ಹೇಳಿದ ಯಾವುದನ್ನೂ ಮರೆಯುವುದಿಲ್ಲ ಅಂತ ಮಾತು ಕೊಡ್ತೇನೆ."

"ನೀನು ಪೂರ್ತಿಯಾಗಿ ಸುಧಾರಿಸಿದ್ದೀಯಾಂತ ನಿನ್ನ ತಮ್ಮನಿಗೆ ಬರೀತೀನಿ."

ಮನೆಮಾಲಿಕ, ತನ್ನನ್ನು ಬಿಡಿಸಿ, ಯಾರೋ ಒಬ್ಬ ಟೊಬ್ಯಾಕೋ ವ್ಯಾಪಾರಿಗೆ ಬಾಡಿಗೆಗೆ ಕೊಡಲು ಯೋಚಿಸಿದ್ದಾನೆಂಬುದು, ವಿನ್ಸೆಂಟ್‌ಗೆ ತಿಳಿದು ಬಂತು. ಆ ಹಳದಿ ಮನೆಯ ಜೊತೆ ತುಂಬಾ ಆತ್ಮೀಯವಾಗಿ ಹೆಣೆದುಕೊಂಡಿದ್ದ. ಪ್ರೊವೆನ್ಸ್‌ನಲ್ಲಿ ತನಗಿದ್ದ ಒಂದೇ ಒಂದು ಮೂಲ ಬೇರು, ಆ ಮನೆಯಾಗಿತ್ತು. ಅದರ ಜೊತೆಗೆ ಎಷ್ಟೊಂದು ಕನಸುಗಳನ್ನು ಬೆಸೆದುಕೊಂಡಿದ್ದ. ಆ ಮನೆಯ ಅಂಗುಲಂಗುಲ ಜಾಗವನ್ನೂ ಪೈಂಟ್ ಮಾಡಿದ್ದ. ಇರುವುದಕ್ಕೆ ಎಲ್ಲ ಬಗೆಯ ಅನುಕೂಲಗಳನ್ನು ಕಲ್ಪಿಸಿಕೊಂಡಿದ್ದ. ಆ್ಯಕ್ಸಿಡೆಂಟ್ ಆದ ಮೇಲೂ ಅದು ತನ್ನ ಸ್ವಂತ ಮನೆ ಎಂದೇ ನಂಬಿಕೆ ಇರಸಿಕೊಂಡಿದ್ದ. ಹಾಗಾಗಿ, ಮಾಲಿಕನ ಜೊತೆ ಸೆಣಸಾಡಿಯಾದರೊ ಮನೆಯನ್ನು ತನಗೇ ಉಳಿಸಿಕೊಳ್ಳಬೇಕೆಂದು ನಿರ್ಧರಿಸಿದ.

ಮೊದಮೊದಲಿಗೆ ತನ್ನನ್ನು ಕಾಡುತ್ತಿದ್ದ ಇನ್‌ಸೋಮ್ನಿಯಾದಿಂದಾಗಿ ಒಬ್ಬನೇ ಮಲಗಲು ಹೆದರುತ್ತಿದ್ದ. ಕರ್ಪೂರ ಇರಿಸಿಕೊಂಡು ಮಲಗಿದರೂ ಪ್ರಯೋಜನ ಕಾಣಲಿಲ್ಲ. ಅದು ಕರ್ಪೂರವನ್ನು ಮೀರಿಯೂ ಕಾಡುತ್ತಿತ್ತು. ಡಾಕ್ಟರ್ ರೇ, ರಾತ್ರಿಗಳಲ್ಲಿ ಅವನನ್ನು ಕಾಡುತ್ತಿದ್ದ ಮತಿವಿಕಲ್ಪಕ್ಕೆ 'ಪೊಟ್ಯಾಸಿಯಮ್ ಬ್ರೊಮೈಡ್'ಅನ್ನು ಪ್ರಿಸ್ಕ್ರೈಬ್ ಮಾಡಿದ್ದ. ಈ ಸ್ಥಿತಿಯಿಂದ ಅವನು ಭಯಂಕರವಾಗಿ ಭೀತಿಗೊಂಡಿದ್ದ. ಅವನ ಕಿವಿಯಲ್ಲಿ ಹತ್ತಾರು ದನಿಗಳು ಪಿಸುಗುಡುತ್ತಿದ್ದಂತೆ ಅನಿಸುತ್ತಿತ್ತು.

ಆದರೆ ಇತ್ತೀಚೆಗೆ ಅದರಿಂದ ಅವನಿಗೆ ಮುಕ್ತಿ ಸಿಕ್ಕಿತ್ತು. ಈಗ ಅವು ಮತ್ತೆ ರಾತ್ರಿಯ ಕತ್ತಲಲ್ಲಿ ಹೆದರಿಸುವಂತೆ ಬಿರಿದು ಆಕ್ರಮಿಸುತ್ತಿದ್ದವು.

ಹೊರಗಡೆ ಹೋಗಿ ಕೆಲಸಮಾಡುವಷ್ಟು ಶಕ್ತಿ ಇನ್ನೂ ಅವನಿಗೆ ಸಾಧ್ಯವಾಗಿರಲಿಲ್ಲ. ಸ್ವಲ್ಪ ಸಮಯದ ನಂತರ ಕ್ರಮೇಣ ಮಾನಸಿಕ ಪ್ರಶಾಂತತೆ ಮತ್ತು ಆರೋಗ್ಯಗಳು

ಹಿಂತಿರುಗಿದವು. ಊಟದಲ್ಲಿ ರುಚಿಕಾಣಿಸಿತು. ಹಸಿವೂ ಹೆಚ್ಚಿತು. ರೆಸ್ಟೊರೆಂಟ್‌ನಲ್ಲಿ ರೌಲಿನ್‌ನ ಜೊತೆ ಭರ್ಜರಿ ಭೋಜನ ಮಾಡಿದ. ಮುಖದಲ್ಲಿ ಗೆಲುವು ಕಾಣಿಸಿತು. ಅನಾರೋಗ್ಯ, ನೋವಿನ ಭೀತಿ ಅವನನ್ನು ಕಾಡಲಿಲ್ಲ. ಆ್ಯಕ್ಸಿಡೆಂಟ್ ಆದ ಸಮಯದಲ್ಲಿ ಮಾಡುತ್ತಿದ್ದ. ರೌಲಿನ್‌ನ ಹೆಂಡತಿಯ ಭಾವಚಿತ್ರ ಹಾಗೆಯೇ ಅಪೂರ್ಣವಾಗಿ ಉಳಿದಿತ್ತು. ಅದನ್ನು ಪೂರೈಸುವಲ್ಲಿ ಗಂಭೀರವಾಗಿ ತೊಡಗಿಸಿಕೊಂಡ.

ಕೆಲಸ ಮತ್ತು ಆರೋಗ್ಯ – ಎರಡೂ ಸುಧಾರಿಸಿದವು. ಕೈಕಾಲು ಮುರಿದುಕೊಂಡವರು ಗುಣ ಮುಖರಾಗುತ್ತಾರೆ ಎಂಬುದು ಅವನಿಗೆ ಗೊತ್ತಿತ್ತು. ಆದರೆ ಮಾನಸಿಕವಾಗಿ ಘಾಸಿಗೊಂಡವರೂ ಕೂಡಾ ಗುಣಮುಖರಾಗಬಲ್ಲರು ಎಂಬ ಸತ್ಯದ ಅರಿವು ಈಗ ಅವನಲ್ಲಿ ಮೂಡಿತು.

ಒಂದು ದಿನ ಬೆಳಿಗ್ಗೆ, ರ್‍ಯಾಷೆಲ್‌ಳ ಆರೋಗ್ಯ ಹೇಗಿದೆ ಎಂದು ವಿಚಾರಿಸಲು ಹೊರಟ.

'ಪಿಜನ್, ನನ್ನಿಂದ ನಿನಗೆ ತುಂಬಾ ತೊಂದರೆ ಆಯಿತು. ಕ್ಷಮಿಸುವೆಯಾ?"

"ಪರವಾಗಿಲ್ಲ ಫೋ–ರೋ. ಅದರ ಬಗ್ಗೆ ತಲೆ ಕಡಿಸಿಕೋ ಬೇಡ. ಈ ಊರಲ್ಲಿ ಅಂಥಾವೆಲ್ಲ ಮಾಮೂಲೇ."

ಅವನ ಗೆಳೆಯರೂ ಬಂದು, ಈ ಥರ ಮಾನಸಿಕ ರೋಗಕ್ಕೆ ಮತಿಸ್ಥಿಮಿತ ಕಳೆದುಕೊಳ್ಳುವ ಅವಸ್ಥೆಗೆ ಒಳಗಾಗುವುದು ಈ ಊರಲ್ಲಿ ನಡೀತಾನೇ ಇರುತ್ತೆ ಎಂಬುದನ್ನು ಸಮರ್ಥಿಸಿದರು.

"ಇದೆಲ್ಲ ಮಾಮೂಲೇ ವಿನ್ಸೆಂಟ್..... ಇಲ್ಲೇ ಹತ್ತಿರದ ಊರಲ್ಲಿ, ನಾವೆಲ್ಲ ಒಂದು ಥರಾ ಮನೋರೋಗಿಗಳೇ" ರೌಲಿನ್ ಹೇಳಿದ.

"ಸರಿ ಸರಿ. ಒಂದೇ ಕುಟುಂಬದವರಂತೆ ನಾವೆಲ್ಲ, ಎಲ್ಲವನ್ನೂ ಚೆನ್ನಾಗಿ ಅರ್ಥಮಾಡಿಕೊಂಡಿದ್ದೀವಿ.

ಇನ್ನೂ ಒಂದಷ್ಟು ವಾರ ಕಳೆದ ಮೇಲೆ ವಿನ್ಸೆಂಟ್ ಇಡೀ ದಿನ ಕೆಲಸ ಮಾಡುವಷ್ಟು ಸ್ವಸ್ಥನಾಗಿದ್ದ. ತನ್ನ ಸ್ಟುಡಿಯೋದೊಳಗೆ ಇದ್ದುಕೊಂಡೇ ಕೆಲಸದಲ್ಲಿ ಮಗ್ನನಾದ. ಸಾವು, ಬುದ್ಧಿ ಭ್ರಮಣೆಗಳ ಭೀತಿ ಅವನಿಂದ ದೂರವಾಗಿತ್ತು. ಯಾವಾಗಲೂ ಇದ್ದ ಹಾಗೆ ಇರುವಂತೆ ಅನಿಸಿತು.

ಕಡೆಗೆ ಔಟ್‌ಡೋರ್ ಪೈಂಟಿಂಗ್ ಮಾಡುವ ಸಾಹಸಕ್ಕೆ ಮುಂದಾದ. ಬಿಸಿಲು ಧಾನ್ಯದ ಹೊಲಗಳ ಹಳದಿಯನ್ನು ಕರಿಕಾಗಿಸುತ್ತಿತ್ತು. ಆದ್ದರಿಂದ ಅವನಿಗೆ ಆ ಹಳದಿಯನ್ನು ಸೆರೆಹಿಡಿಯುವುದು ಸಾಧ್ಯವಾಗಲಿಲ್ಲ. ಭಾವಾವೇಶಕ್ಕೆ, ಭಾವೋದ್ವಿಗ್ನತೆಗೆ ಎಡೆಮಾಡುವ ಸನ್ನಿವೇಶಗಳಿಂದ ದೂರವಿರುತ್ತಾ, ಊಟ, ತಿಂಡಿ, ನಿದ್ದೆಯನ್ನು ತಪ್ಪಿಸದೆ, ಚೆನ್ನಾಗಿಯೇ, ಕ್ರಮಬದ್ಧವಾಗಿಯೇ, ನೋಡಿಕೊಳ್ಳುತ್ತಿದ್ದ.

ಈಗ ಎಲ್ಲಾ ನಾರ್ಮಲ್ ಆದ ಮೇಲೆ, ಅವನಿಗೆ ಯಾಕೋ ಪೈಂಟ್ ಮಾಡುವುದಕ್ಕೇ ಆಗುತ್ತಿರಲಿಲ್ಲ.

"ನರಗಳ ದೌರ್ಬಲ್ಯ ನಿನ್ನನ್ನು ಬಿಟ್ಟಿಲ್ಲ ವಿನ್ಸೆಂಟ್. ಹಾಗೆ ನೋಡಿದರೆ, ನೀನೆಂದೂ ಇದರಿಂದ ತಪ್ಪಿಸಿಕೊಂಡೇ ಇಲ್ಲ. ಮೊದಲಿನಿಂದಲೂ ನೀನು ನಾರ್ಮಲ್ ಮನುಷ್ಯ ಅಲ್ಲವೇ ಅಲ್ಲ. ಹಾಗೆ ನೋಡಿದರೆ ಯಾವ ಕಲಾವಿದನೂ ನಾರ್ಮಲ್ ಆಗಿ ಇರುವುದೇ ಇಲ್ಲ. ಅಕಸ್ಮಾತ್ ಇದ್ದರೆ, ಅವನು ಕಲಾವಿದ ಆಗಿರೋದೇ ಇಲ್ಲ. ನಾರ್ಮಲ್ ಆಗಿ ಇರುವವರಿಂದ ಕಲೆಯ ಸೃಷ್ಟಿ ಸಾಧ್ಯವಾಗುವುದಿಲ್ಲ. ಅವರು ತಿಂತಾರೆ; ಮಲಗ್ತಾರೆ; ಯಾವುದಾದರೂ ಕೆಲಸ ಮಾಡ್ತಾರೆ; ಸಾಯ್ತಾರೆ – ಅಷ್ಟೇ! ನೀನಂತೂ ಬದುಕು ಮತ್ತು ಪ್ರಕೃತಿಗೆ ಅತ್ಯಂತ ಸೂಕ್ಷ್ಮ ಸಂವೇದಿಯಾಗಿದ್ದೀಯ. ಅದಕ್ಕೇ ನೀನು ನಮಗೆ ಇವುಗಳನ್ನು ಕುರಿತು ವಿವರಿಸಬಲ್ಲೆ; ಅರ್ಥೈಸಬಲ್ಲೆ ವ್ಯಾಖ್ಯಾನಿಸಬಲ್ಲೆ. ಆದರೆ ನೀನು ಬಹಳ ಜಾಗರೂಕತೆಯಿಂದ ಇರಬೇಕು. ಈ ಸಂವೇದನಾಶಕ್ತಿ ಅತಿಯಾದಾಗ ನಿನ್ನನ್ನು ವಿನಾಶದ ಅಂಚಿಗೂ ಕೊಂಡೊಯ್ಯಬಹುದು. ಸೂಕ್ಷ್ಮ ಸಂವೇದನಾಶಕ್ತಿಯ ಹೊರೆ ಹೆಚ್ಚುತ್ತಾ ಹೆಚ್ಚುತ್ತಾ ಕಡೆಗೆ ಯಾವುದೋ ಒಂದು ಸಮಯದಲ್ಲಿ ಕಲಾವಿದನನ್ನು ನುಚ್ಚುನೂರು ಮಾಡಿಬಿಡುತ್ತದೆ."

ಅವನಿಗೆ ಗೊತ್ತಿತ್ತು, ಆರ್ಲೆಯ ಕ್ಯಾನ್‌ವಾಸ್‌ಗಳಲ್ಲಿ ಹಳದಿಯೇ ಹೆಚ್ಚಾಗಿ ವ್ಯಾಪಿಸಿಬಿಟ್ಟಿತ್ತು. ಅದನ್ನು ಅದರ ಎಲ್ಲ ಛಾಯೆಗಳಲ್ಲಿ ಸಮರ್ಥವಾಗಿ ತನ್ನ ಕ್ಯಾನ್‌ವಾಸ್‌ಗಳಲ್ಲಿ ಹಿಡಿದಿಡಬೇಕೆಂಬ ಪ್ರಯತ್ನದಲ್ಲಿ, ತನ್ನ ಸಾಮರ್ಥ್ಯ, ಶಕ್ತಿಗಳಿಗಿಂತಲೂ ಹೆಚ್ಚಿಗೆ ತನ್ನನ್ನು ದುಡಿಸಿಕೊಳ್ಳುತ್ತಿದ್ದ. ತುಂಬಾ ಉದ್ವಿಗ್ನತೆಗೆ, ಒತ್ತಡಕ್ಕೆ ಒಳಗಾಗುತ್ತಿದ್ದ.

ಈಗ ಮತ್ತೆ ತನ್ನನ್ನು ಅದೇ ಸ್ಥಿತಿಗೆ ತಂದುಕೊಂಡರೆ ಮೊದಲಿನಷ್ಟೇ ಅದ್ಭುತವಾಗಿ ತಾನು ಬಯಸಿದ್ದೆಲ್ಲವನ್ನೂ ಕ್ಯಾನ್‌ವಾಸ್‌ನಲ್ಲಿ ಇಳಿಸಬಲ್ಲವನಾಗಿದ್ದ. ಆದರೆ ಆ ದಾರಿ ಕಡೆಗೆ ಕರೆದೊಯ್ಯುವುದು ವಿನಾಶದತ್ತ.

"ಕಲಾವಿದನೆಂದರೆ, ಕಲೆಯ ಕೆಲಸದಲ್ಲಿ ನಿರತ ಮನುಷ್ಯ" ತನ್ನಲ್ಲಿಯೇ ಗೊಣಗಿಕೊಂಡ. "ನಾನು ಬಯಸಿದ ರೀತಿಯಲ್ಲಿ ಪೈಂಟ್ ಮಾಡಲು ಆಗದಿದ್ದರೆ ನಾನು ಮನುಷ್ಯನೇ ಅಲ್ಲ; ಬದುಕಿ ಪ್ರಯೋಜನವೂ ಇಲ್ಲ."

ತಲೆಯನ್ನು ಬಿಸಿಲಿಗೆ ಒಡ್ಡಿ, ಹೊಲಗಳಲ್ಲೆಲ್ಲ ಅಡ್ಡಾಡಿದ. ಆಕಾಶದ ಹುಚ್ಚೆಬ್ಬಿಸುವ ಬಣ್ಣಗಳನ್ನು, ಉರಿವ ಬೆಂಕಿಚೆಂಡಿನ ಹಳದಿಯನ್ನು, ಹೊಲಗಳ ಹಸಿರನ್ನು, ಹೂಗಳ ವೈವಿಧ್ಯಮಯ ಬಣ್ಣಗಳನ್ನು ಹೀರಿಕೊಂಡ. ಬಿರುಗಾಳಿಯ ಪ್ರತಾಡನವನ್ನೂ ಲೆಕ್ಕಿಸಲಿಲ್ಲ. ಹಾಗೆಯೇ ಉಸಿರು ಗಟ್ಟಿಸುತ್ತಿದ್ದ ರಾತ್ರಿಯನ್ನು ಲೆಕ್ಕಿಸಲಿಲ್ಲ. ಸೂರ್ಯಕಾಂತಿ ಹೂಗಳು ಅವನನ್ನು ಪ್ರತಿಭೆಯ ಪರಾಕಾಷ್ಟೆಯಲ್ಲಿ ನಿಲ್ಲಿಸಿದವು. ಅವನ ಭಾವೋತ್ಸಾಹ ಹೆಚ್ಚುತ್ತಿದ್ದಂತೆ ಊಟದ ಚಿಂತೆ ಮರೆಯಾಯಿತು. ಕಾಫಿ, ಅಬಿಸಿಂತ್ ಮತ್ತು ಟೊಬ್ಯಾಕೋಗಳೇ ಅವನ ಪ್ರಾಣಾಧಾರಗಳಾದವು. ಇಡೀ ರಾತ್ರಿ ಅವನು ಜಾಗರಣೆ ಮಾಡುತ್ತಿದ್ದ, ಅವನ ಕಣ್ಮುಂದೆ ಹಳ್ಳಿಗಾಡಿನ ದಟ್ಟಬಣ್ಣಗಳೇ ಸುಳಿಯುತ್ತಿದ್ದವು. ಇರಲಾಗಲಿಲ್ಲ. ಈಸಲ್ ಬೆನ್ನಿಗೇರಿಸಿ ಹೊಲಗಳತ್ತ ಹೆಜ್ಜೆ ಹಾಕಿದ.

ಅವನ ಪ್ರತಿಭೆ, ಸಾಮರ್ಥ್ಯಗಳೆಲ್ಲ ಮತ್ತೆ ಅವನಲ್ಲಿ ಹಿಂತಿರುಗಿ ಬಂದು ನೆಲೆಗಂಡವು. ನಿಸರ್ಗದಲ್ಲಿನ ವಿಶ್ವವ್ಯಾಪಿ ಲಯದ ಅರಿವು, ಕೆಲವೇ ಗಂಟೆಗಳಲ್ಲಿ, ಬೃಹತ್

ಕ್ಯಾನ್‌ವಾಸ್‌ಗಳನ್ನು ಚಿತ್ರಿಸುವ ಅವನ ಪ್ರಚಂಡ ಶಕ್ತಿ –ಎಲ್ಲವೂ ಈಗ ಅವನಲ್ಲಿ ಮರಳಿಬಂದವು. ಪ್ರತಿದಿನವೂ ಒಂದೊಂದು ಕ್ಯಾನ್‌ವಾಸ್ ಸಿದ್ಧವಾಗುತ್ತಿತ್ತು. ಒಂದು ದಿನವೂ ಬಿಡುವುವಿಲ್ಲದಂತೆ, ಮೂವತ್ತೇಳು ಕ್ಯಾನ್‌ವಾಸ್‌ಗಳನ್ನು ಸೃಷ್ಟಿಮಾಡಿದ.

ಒಂದು ದಿನ ಬೆಳಿಗ್ಗೆ ಎದ್ದಾಗ, ಆಲಸ್ಯ ಎನಿಸಿತು. ಕೆಲಸ ಮಾಡಲು ಮನಸ್ಸು ಬರಲಿಲ್ಲ. ಕುರ್ಚಿಯಲ್ಲಿ ಕುಳಿತ. ಗೋಡೆಯನ್ನೇ ದಿಟ್ಟಿಸಿದ. ಇಡೀ ದಿನ ಹಾಗೆಯೇ ಕುಳಿತಿದ್ದ. ಮತ್ತೆ ಧ್ವನಿಗಳ ಅನುರಣನ, ಚಿತ್ರವಿಚಿತ್ರವಾದ ಸದ್ದುಗಳು, ಧ್ವನಿಗಳು; ನಂಬಲಾಗದ ಊಹಿಸಲಾಗದ ಕತೆಗಳು ಕೇಳಿ ಬಂದವು. ರಾತ್ರಿಯಾಗುತ್ತಿದ್ದ ಹಾಗೆ ಗ್ರೇ ರೆಸ್ಟೋರೆಂಟ್‌ಗೆ ಹೋಗಿ ಒಂದು ಪುಟ್ಟ ಮೇಜಿನ ಮುಂದೆ ಕುಳಿತ. ಸೂಪ್‌ಗೆ ಆರ್ಡರ್ ಮಾಡಿದ. ಕೆಲಸದಾಕೆ, ಸೂಪ್ ತಂದು ಅವನ ಮುಂದೆ ಇರಿಸಿದಳು. ಕಿವಿಯಲ್ಲಿ ಯಾರೋ ಎಚ್ಚರಿಕೆಯ ಮಾತು ಹೇಳುತ್ತಿದ್ದಂತೆನಿಸಿತು.

ಸೂಪ್ ಬೌಲ್ ಕೆಳಗೆ ಬಿದ್ದು, ಚೂರು ಚೂರಾಯಿತು. ನೆಲದ ಮೇಲೆಲ್ಲ ಸೂಪ್ ಚೆಲ್ಲಿತು.

"ನೀನು ನನ್ನನ್ನು ಸಾಯಿಸುವುದಕ್ಕೆ ನೋಡ್ತಿದ್ದೀಯ? ಸೂಪ್‌ನಲ್ಲಿ ವಿಷ ಹಾಕಿದ್ದೀಯ?"

ಥಟ್ಟನೆ ಎದ್ದು, ಸಿಟ್ಟಿನಿಂದ ಟೇಬಲ್‌ಗೆ ಒದ್ದ.

ಗಿರಾಕಿಗಳು ಕೆಲವರು ಹೆದರಿ ಓಡಿಹೋದರು. ಮತ್ತೆ ಕೆಲವರು ಅವನತ್ತ ವಿಚಿತ್ರವಾಗಿ ನೋಡಿದರು.

"ನೀವೆಲ್ಲ ನನಗೆ ವಿಷ ಹಾಕಿ ಸಾಯಿಸಲು ಪ್ರಯತ್ನ ಮಾಡ್ತಿದ್ದೀರ! ನನ್ನ ಕೊಲೆ ಮಾಡುವ ಹುನ್ನಾರ! ಸೂಪ್‌ನಲ್ಲಿ ವಿಷ ಹಾಕಿದ್ದನ್ನು ನಾನು ನೋಡಿದ್ದೀನಿ!"

ಇಬ್ಬರು ಪೋಲೀಸರು ಬಂದು ಅನಾಮತ್ತಾಗಿ ಅವನನ್ನೆತ್ತಿಕೊಂಡು ಆಸ್ಪತ್ರೆಗೆ ಒಯ್ದರು.

ಇಪ್ಪತ್ನಾಲ್ಕು ಗಂಟೆಗಳ ನಂತರ ಸ್ವಲ್ಪ ಶಾಂತನಾದ. ಡಾಕ್ಟರ್ ರೇ ಜೊತೆ ಆ ದಿನ ನಡೆದದ್ದನ್ನು ಚರ್ಚೆ ಮಾಡಿದ. ಪ್ರತಿದಿನ ಸ್ವಲ್ಪ ಹೊತ್ತು ಮಾತ್ರ ಕೆಲಸ ಮಾಡಿ, ಸ್ವಲ್ಪ ಹೊತ್ತು ಹಳ್ಳಿಗಾಡಿನ ಪ್ರದೇಶದಲ್ಲಿ ಸುತ್ತಾಡಿ, ರಾತ್ರಿ ಹೊತ್ತಿಗೆ ಆಸ್ಪತ್ರೆಗೆ ಬಂದು ಊಟ ಮಾಡಿ ಮಲಗುತ್ತಿದ್ದ. ಕೆಲವೊಮ್ಮೆ ಉದ್ವಿಗ್ನತೆಗೆ ಒಳಗಾಗುತ್ತಿದ್ದ. ಮತ್ತೆ ಕೆಲವೊಮ್ಮೆ ಕಾಲದ ಪರದೆಯೊಳಗಿಂದ, ಅಗಲುವ ಅನಿವಾರ್ಯತೆಯನ್ನು ಕಾಣುತ್ತಿದ್ದ.

ಡಾಕ್ಟರ್, ಮತ್ತೊಮ್ಮೆ ಅವನಿಗೆ ಪೈಂಟ್ ಮಾಡಲು ಅನುಮತಿ ಕೊಟ್ಟ. ಆಲ್ಪ್ಸ್ ಪರ್ವತಗಳ ಹಿನ್ನೆಲೆಗೆ, ರಸ್ತೆಬದಿಯಲ್ಲಿನ ಪೀಚ್‌ಮರಸಾಲನ್ನು ಪೈಂಟ್ ಮಾಡಿದ. ಆಲೀವ್ ತೋಪು, – ಆಲೀವ್ ಮರದ ಎಲೆಗಳು! ಹಸಿರು, ನೀಲಿಗಳಲ್ಲಿ ಕಿತ್ತಳೆ ಬಣ್ಣದಲ್ಲಿ ಉಳುಮೆ ಮಾಡಿದ ಭೂಮಿ ಹೀಗೆ ಎಷ್ಟೊಂದು ವರ್ಣಚಿತ್ರಗಳನ್ನು ಸೃಷ್ಟಿ ಮಾಡಿದ.

ಎರಡು ವಾರಗಳ ನಂತರ ತನ್ನ ಹಳದಿ ಮನೆಗೆ ಹಿಂತಿರುಗಿ ಬಂದ. ಇಷ್ಟು ಹೊತ್ತಿಗೆ, ಪ್ಲಾಸ್‌ಲಾವರ್ಮಾರ್ಟಿನ್ ಪಟ್ಟಣ ಅವನ ವಿರುದ್ಧ ಸಿಟ್ಟಿಗೆದ್ದಿತ್ತು. ಕಿವಿಕೊಯ್ದುಕೊಂಡದ್ದು, ಸೂಪ್ ಪ್ರಕರಣಗಳು. ಅಲ್ಲಿನ ಜನರಿಗೆ ಒಪ್ಪಿಕೊಳ್ಳಲಾಗದಂತಹ ಸಂಗತಿಗಳಾಗಿದ್ದವು. ಇದರಿಂದಾಗಿ, ಆರ್ಲೆಯ ಜನರಿಗೆ, ಪೈಂಟ್ ಮಾಡುವುದರಿಂದ ಮನುಷ್ಯರು ಹುಚ್ಚರಾಗುತ್ತಾರೆ ಎನ್ನುವ ಅಭಿಪ್ರಾಯಕ್ಕೆ ಪುಷ್ಟಿ ಸಿಕ್ಕಂತಾಯಿತು. ವಿನ್ಸೆಂಟ್ ಹೊರಗೆ ಬಂದರೆ, ಅವನನ್ನು ವಿಚಿತ್ರವಾಗಿ ನೋಡುತ್ತಿದ್ದರು. ಕೆಲವರು ಅವನ ಬಗ್ಗೆ ಗಟ್ಟಿಯಾಗಿ ಟೀಕೆ ಮಾಡುತ್ತಿದ್ದರು; ಮತ್ತೂ ಕೆಲವರು ಅವನು ಕಾಣಿಸುತ್ತಿದ್ದಂತೆ ಪಕ್ಕಕ್ಕೆ ಸರಿದು, ಅವನ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಳ್ಳುತ್ತಿದ್ದರು.

ಯಾವ ರೆಸ್ಟೊರೆಂಟಿನಲ್ಲಿಯೂ ಅವನಿಗೆ ಪ್ರವೇಶವಿರಲಿಲ್ಲ. ಹಳದಿ ಮನೆಯ ಮುಂದೆ ಮಕ್ಕಳೆಲ್ಲ ಸೇರಿ ಗಲಾಟೆ ಮಾಡುತ್ತಿದ್ದರು. ಅವನನ್ನು ಹಿಂಸಿಸುತ್ತಿದ್ದರು.

"ಫೋ-ರೋ! ಫೋ-ರೋ......... ಇನ್ನೊಂದು ಕಿವಿಯನ್ನೂ ಕತ್ತರಿಸಿಕೊಡು" – ಎಂದೆಲ್ಲಾ ಕೂಗಿ ಕೂಗಿ ಲೇವಡಿ ಮಾಡುತ್ತಿದ್ದರು.

ವಿನ್ಸೆಂಟ್ ಕಿಟಕಿಗಳನ್ನು ಮುಚ್ಚಿದ. ಆದರೂ ಮಕ್ಕಳ ನಗು,..... ಕೇಕೆ..... ಕೀಟಲೆ ಮಾತು, ಕಿಟಕಿ ಬಾಗಿಲುಗಳನ್ನೂ ದಾಟಿ ಕೇಳಿಬರುತ್ತಿದ್ದವು.

"ಫೋ-ರೋ! ಫೋ-ರೋ!"

"ಹುಚ್ಚ! ಹುಚ್ಚ!"

ಅವನ ಮೇಲೆ ಹಾಡು ಕಟ್ಟಿದರು.

ಫೋ-ರೋ ಒಬ್ಬ ಹುಚ್ಚ
ಕತ್ತರಿಸಿಕೊಟ್ಟ ಬಲ ಕಿವಿ ಬೆಪ್ಪ.
ಕಿರುಚು, ಕಿರುಚು, ಕೇಳ್ಸೋದಿಲ್ಲ
ಹುಚ್ಚ ನಮ್ಮನ್ನ ಬೈಯ್ಯೋದಿಲ್ಲ.

– ವಿನ್ಸೆಂಟ್ ಈ ಗದ್ದಲದಿಂದ ತಪ್ಪಿಸಿಕೊಳ್ಳೋಕೆ ಹೊರಗೆ ಹೋಗೋಣಾಂದ್ರೆ, ಅವರೆಲ್ಲ ಅವನನ್ನು ಹಿಂಬಾಲಿಸಿದರು. ರಸ್ತೇಲಿ, ಹೊಲದಲ್ಲಿ – ಎಲ್ಲೇ ಹೋದರೂ, ಎಲ್ಲೇ ಇದ್ದರೂ, ಮಕ್ಕಳ ಹಿಂಡು ಹಿಂದೇನೇ ಬರ್ತಿತ್ತು; ನಗುತ್ತಿತ್ತು: ಹಾಡುತ್ತಿತ್ತು.

ದಿನ ಕಳೆದಂತೆ ಬೀದಿ ಮಕ್ಕಳ ದೊಡ್ಡ ಸೈನ್ಯಾನೇ ಅವನ ಮನೆ ಮುಂದೆ ಜಮಾಯಿಸಿತು. ಗಲಾಟೆ ಸಹಿಸಲಾಗದೆ ವಿನ್ಸೆಂಟ್ ಕಿವಿಗೆ ಹತ್ತಿ ತುರುಕಿಕೊಂಡ. ಈಸಲ್ ಮುಂದೆ ಕುಳಿತು, ತಾನು ಮಾಡಿದ ಪಿಕ್ಚರ್‌ಗಳ ಪ್ರತಿಗಳನ್ನು ಮಾಡುತ್ತಿದ್ದ. ಮಕ್ಕಳ ಮಾತುಗಳು, ಗೋಡೆಯ ಬಿರುಕುಗಳ ಮೂಲಕ ಅವನ ಕಿವಿಗೆ ಅಪ್ಪಳಿಸುತ್ತಿದ್ದವು.

ಯುವಕರಂತೂ ಮತ್ತೂ ಧೈರ್ಯಮಾಡಿ, ಕೋತಿಗಳಂತೆ ಡ್ರೈನ್ ಪೈಪ್‌ಗಳೇರಿ ಕಿಟಕಿಗಳ ಮೇಲೆ ಕುಳಿತು ವಿನ್ಸೆಂಟ್‌ನ ಕೋಣೆಯೊಳಗೆ ಇಣುಕಿ ನೋಡುತ್ತಿದ್ದರು; ಅವನ ಬಗ್ಗೆ ಗದ್ದಲ ಮಾಡುತ್ತಿದ್ದರು.

"ಘೋ-ರೋ! ನಿನ್ನ ಇನ್ನೊಂದು ಕಿವಿಯನ್ನು ಕತ್ತರಿಸಿ ಬಿಡು. ನಮಗೆ ಕೊಟ್ಟು ಬಿಡು!"

ಪ್ಲಾಸ್‌ಲಾಮಾರ್ಟಿನ್‌ನಲ್ಲಿ, ದಿನೇ ದಿನೇ ಗದ್ದಲ ಮಿತಿಮೀರಿತು. ಎರಡನೇ ಅಂತಸ್ತಿಗೂ ಏರುವಂತಾದರು. ಕಿಟಕಿ ಗಾಜುಗಳನ್ನು ಒಡೆದು ಹಾಕಿದರು. ಕಿಟಕಿಗಳೊಳಗೆ ತಲೆತೂರಿಸಿದರು. ಕೈಗೆ ಸಿಕ್ಕಿದ ವಸ್ತುಗಳನ್ನು ವಿನ್ಸೆಂಟ್‌ನ ಮೇಲೆ ಎಸೆದರು. ಕೆಳಗೆ ಸೇರಿದ್ದ ಗುಂಪು, ಪುಂಡ ಮಕ್ಕಳಿಗೆ ಮತ್ತಷ್ಟು ಉತ್ತೇಜನ ಕೊಡುತ್ತಿದ್ದರು. ಅವರೊಂದಿಗೆ ಇವರೂ ಕೂಗುತ್ತಾ, ಹಾಡುತ್ತಾ ಜೊತೆಯಾಗುತ್ತಿದ್ದರು.

"ಇನ್ನೊಂದು ಕಿವಿ ಕೊಡು. ನಮಗೆ ಬೇಕು!"

"ಘೋ-ರೋ! ಕ್ಯಾಂಡಿ ಬೇಕಾ? ನೋಡು
ವಿಷ ಹಾಕಿದೆಯೇನೋ!"

"ಘೋ-ರೋ! ಸೂಪ್ ಬೇಕಾ? ನೋಡು
ವಿಷ ಹಾಕಿದೆಯೇನೋ!"

"ಘೋ-ರೋ! ಒಬ್ಬ ಹುಚ್ಚ!
ಕತ್ತರಿಸಿಕೊಟ್ಟ ಬಲಕಿವೀನ ಬೆಪ್ಪ!
ಕಿರುಚು! ಕಿರುಚು! ಕೇಳ್ಳೋದಿಲ್ಲ
ಹುಚ್ಚ! ನಮ್ಮನ್ನ ಬೈಯ್ಯೋದಿಲ್ಲ!"

ಕಿಟಕಿಗಳ ಮೇಲೆ ಕೂತಿದ್ದ ಹುಡುಗರು, ಕೆಳಗೆ ಇದ್ದವರಿಗೆ ಹಾಡಲು ಮಾರ್ಗದರ್ಶನ ನೀಡುತ್ತಿದ್ದರು.

"ಘೋ-ರೋ! ಕಿವೀನ ನಮತ್ತ ಎಸೆ!"

-ಎಂದು ಪದೇ ಪದೇ ಇದನ್ನೇ ಪಲ್ಲವಿಯಂತೆ ಹಾಡುತ್ತ, ನಗುತ್ತಾ ಇದ್ದರು.

ವಿನ್ಸೆಂಟ್ ಈಸಲ್ ಮುಂದಿಂದ ಎದ್ದ. ಕಿಟಕಿಗಳ ಮೇಲೆ ಕೂತಿದ್ದ ಮೂವರು ಬೀದಿ ಹುಡುಗರಿಗೆ ಎರಡೇಟು ಕೊಟ್ಟ, ಅವರು ಕೆಳಗೆ ಬಿದ್ದರು. ಕೆಳಗಿದ್ದ ಗುಂಪು ಗರ್ಜಿಸಿತು. ಕಿಟಕಿ ಬಳಿ ನಿಂತು, ಕೆಳಗೆ ಬಗ್ಗಿ ನೋಡಿದ.

ಕಪ್ಪು ಹಕ್ಕಿಗಳು ಆಕಾಶದಲ್ಲಿ ಗುಂಪು ಗುಂಪಾಗಿ ಕಾಣಿಸಿಕೊಂಡವು. ಎಲ್ಲ ಕಡೆಯಿಂದಲೂ ಅವು ವಿನ್ಸೆಂಟ್‌ನನ್ನು ಮುತ್ತಿದವು. ಅವುಗಳ ರೆಕ್ಕೆಗಳು ಅವನ ಕಣ್ಣು, ಬಾಯಿ, ಮೂಗು ಎಲ್ಲವನ್ನೂ ಆವರಿಸಿದವು.

ಕಿಟಕಿಯ ಮೇಲೆ ಜಿಗಿದು ಗದ್ದರಿಸಿದ. "ಪಿಶಾಚಿಗಳ ಹೋಗಿ ಇಲ್ಲಿಂದ! ನೆಮ್ಮದಿಯಿಂದ ಇರಲು ಬಿಡಿ!"

ಆದರೆ,

ಘೋ-ರೋ, ನಿನ್ನ ಕಿವಿಯನ್ನು ನಮ್ಮ ಕಡೆ ಎಸೆ! ನಿನ್ನ ಕಿವಿಯನ್ನ ನಮ್ಮ ಕಡೆ ಎಸೆ!!" - ಕೂಗು, ಘೋಷಣೆಗಳು ಮುಂದುವರೆದವು.

"ಹೊರಟು ಹೋಗಿ! ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡಿ! ಕೇಳಿಸ್ಕೋತಿದ್ದೀರಾ?...... ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡಿ!"

ಟೇಬಲ್ ಮೇಲಿದ್ದ ವಾಷ್‌ಬೇಸಿನ್ ಎತ್ತಿ ಕೆಳಗಿದ್ದವರ ಮೇಲೆ ಎಸೆದ. ಅದು ಕೆಳಗೆ ಬಿದ್ದು ಚೂರು ಚೂರಾಯಿತು, ಹುಚ್ಚನಂತೆ ಅಲ್ಲಿ ಇಲ್ಲಿ ಓಡಾಡುತ್ತಾ ಕೈಗೆ ಏನೇನು ಸಿಕ್ಕಿದರೆ, ಅದನ್ನೆಲ್ಲವನ್ನೂ ಕೆಳಗೆ ಇದ್ದವರ ಕಡೆಗೆ ಎಸೆಯತೊಡಗಿದ. ಬಿದ್ದ ವಸ್ತುಗಳೆಲ್ಲ ನೆಲಕ್ಕೆ ಅಪ್ಪಳಿಸಿ ಚೂರಾಗುತ್ತಿದ್ದವು. ಕುರ್ಚಿ, ಮೇಜು, ಈಸಲ್, ಕ್ಯಾನ್‌ವಾಸ್, ಹಾಸಿಗೆ ಮೇಲಿನ ಬಟ್ಟೆಗಳು, ಚಾದರಗಳು, ಕಷ್ಟಪಟ್ಟು ಮಾಡಿದ್ದ ಸೂರ್ಯಕಾಂತಿ ಹೂಗಳ ಕ್ಯಾನ್‌ವಾಸ್ – ಎಲ್ಲವನ್ನೂ ಎತ್ತಿ ಎತ್ತಿ ಕೆಳಕ್ಕೆ ಒಗೆದ. ಗೋಡೆಗಳ ಮೇಲಿದ್ದ ಪಿಕ್ಚರ್‌ಗಳನ್ನು ಕಿತ್ತೆಸೆದ. ಅವನು ಸಾಧಿಸಬಯಸಿದ್ದ, ಸಾಧಿಸಿದ್ದ. ಮನೆಯ ಅಲಂಕರಣಕ್ಕೆಂದು ತಂದಿದ್ದ. ಪ್ರೀತಿ, ಆತ್ಮೀಯತೆಗಳಿಂದ ಕಾಪಾಡಿಕೊಂಡಿದ್ದ, ಕಷ್ಟಪಟ್ಟು, ಕೊಂಡುಕೊಂಡಿದ್ದ, ಕನಸುಗಳನ್ನು ಸಾಕ್ಷಾತ್ಕರಿಸಕೊಳ್ಳಲೆಂದು ಕೊಂಡು ಇರಿಸಿದ್ದ ಎಲ್ಲ ವಸ್ತುಗಳನ್ನೂ ತನ್ನ ಕೋಪ, ಆಕ್ರೋಶಗಳಿಗೆ ಗುರಿಯಾಗಿಸಿದ್ದ.

ಕೋಣೆಯೆಲ್ಲ ಖಾಲಿ ಖಾಲಿಯಾದ ಮೇಲೆ ಕಿಟಕಿಯ ಮೇಲಿಂದ ಬಿದ್ದ; ನರನಾಡಿಗಳೆಲ್ಲ ಕಂಪಿಸುತ್ತಿದ್ದವು. ಕಿಟಕಿಯಿಂದ ಬೀಳುವಾಗ ತಲೆಕೆಳಗಾಗಿತ್ತು.

-೧೦-

ಪ್ಲಾಸ್ ಲಾಮಾರ್ಟಿನ್‌ನ ಪ್ರಜೆಗಳು ಒಂದು ಮನವಿಯನ್ನು, ತೊಂಬತ್ತು ಮಂದಿ ಹೆಂಗಸರು, ತೊಂಬತ್ತು ಮಂದಿ ಗಂಡಸರ ಸಹಿಗಳೊಂದಿಗೆ, ಸಲ್ಲಿಸಿದರು.

ಮೇಯರ್ ಟಾರ್ಡಯೋ ಮಹಾಶಯರಿಗೆ, ಕೆಳಗೆ ಸಹಿ ಮಾಡಿರುವ ಆರ್ಲೆಯ ಪ್ರಜೆಗಳಾದ ನಾವು ಮನವಿ ಮಾಡುವುದೇನೆಂದರೆ, ಪ್ಲಾಸ್ ಲಾಮಾರ್ಟಿನ್‌ನ, ೨ನೇ ನಂ. ಮನೆಯಲ್ಲಿ ವಾಸವಾಗಿರುವ ವಿನ್ಸೆಂಟ್ ವಾನ್‌ಗೋ ಎಂಬ ವ್ಯಕ್ತಿ, ಅಪಾಯಕಾರಿ ಹುಚ್ಚನಾಗಿದ್ದಾನೆಂದು ದೃಢವಾಗಿ ನಂಬಿರುವ ಕಾರಣ, ಪ್ರಜೆಗಳಿಗೆ ತೊಂದರೆಯಾಗಬಾರದೆಂಬ ಕಾರಣಕ್ಕಾಗಿ, ಆತನನ್ನು ಹೊರಗೆ ಒಬ್ಬನೇ ಓಡಾಡಲು ಬಿಡಬಾರದು. ಮತ್ತು ಆತನನ್ನು ಒಂದು ಕಡೆ ಬೀಗ ಹಾಕಿ ಇರಿಸಬೇಕೆಂದು ಪ್ರಾರ್ಥಿಸುತ್ತಿದ್ದೇವೆ.

ಆರ್ಲೆಯಲ್ಲಿ ಚುನಾವಣೆಯ ಸಮಯ ಹತ್ತಿರ ಬಂದಿತ್ತು. ಟಾರ್ಡಯೋ ಅಷ್ಟೊಂದು ಮಂದಿ ಮತದಾರರನ್ನು ಅಸಂತುಷ್ಟರನ್ನಾಗಿ ಮಾಡಲು ಸಿದ್ಧನಿರಲಿಲ್ಲ. ಕೂಡಲೇ ಪೋಲೀಸ್ ಸೂಪರಿಡೆಂಟನ್ನು ಕರೆದು, ವಿನ್ಸೆಂಟ್‌ನನ್ನು ಅರೆಸ್ಟು ಮಾಡಲು ಆದೇಶಿಸಿದ.

ವಿನ್ಸೆಂಟ್ ಕಿಟಕಿಯಿಂದ ಕೆಳಗೆ ನೆಲದ ಮೇಲೆ ಬಿದ್ದಿರುವುದನ್ನು ಪೋಲೀಸರು ಗಮನಿಸಿದರು. ಅವನನ್ನು ಹೊತ್ತುಕೊಂಡು, ಜೈಲಿಗೆ ನಡೆದರು. ಜೈಲಿನ ಸೆಲ್ಲಿನಲ್ಲಿ ಅವನನ್ನಿರಿಸಿ, ಬೀಗ ಹಾಕಿದರು. ಹೊರಗೆ ಒಬ್ಬ ಕಾವಲುಗಾರನನ್ನು ನೇಮಿಸಿದರು.

ವಿನ್ಸೆಂಟ್‌ಗೆ ಪ್ರಜ್ಞೆ ಬಂದಾಗ, ಡಾಕ್ಟರ್ ರೇನನ್ನು ನೋಡಿ ಬರಲು ಕೇಳಿಕೊಂಡ, ಆದರೆ ಅಧಿಕಾರಿಗಳು ಒಪ್ಪಲಿಲ್ಲ – ಥಿಯೋಗೆ ಬರೆದು ತಿಳಿಸಲು, ಪೇಪರ್, ಪೆನ್ಸಿಲ್ ಕೇಳಿದ. ಅದನ್ನೂ ಕೊಡಲಿಲ್ಲ.

ಕಡೆಗೆ ಹೇಗೋ, ಡಾಕ್ಟರ್ ರೇ ಜೈಲಿನ ಪ್ರವೇಶಕ್ಕೆ ಅನುಮತಿ ಪಡೆದ.

"ನಿನ್ನ ಅಸಮಾಧಾನ, ಕೋಪಗಳನ್ನು ಸ್ವಲ್ಪ ನಿಯಂತ್ರಿಸಿಕೋ. ಇಲ್ಲವಾದರೆ ನಿನ್ನನ್ನು ವಿಚಾರಣೆಗೆ ಗುರಿಪಡಿಸಿ ಅಪಾಯಕಾರಿ ಹುಚ್ಚನೆಂದು ತೀರ್ಮಾನಿಸಿ ಬಿಡುತ್ತಾರೆ. ಅಲ್ಲಿಗೆ ನಿನ್ನ ಕತೆ ಮುಗಿದ ಹಾಗೇ! ಅಲ್ಲದೆ, ನಿನ್ನ ಉದ್ರೇಕವನ್ನು ಹೆಚ್ಚಿಸಿಕೊಳ್ಳುತ್ತಾ ಹೋದರೆ, ನಿನ್ನ ಮೇಲಿನ ಆರೋಪಗಳಿಗೆ ಮತ್ತಷ್ಟು ಪುಷ್ಟಿ ಸಿಗುತ್ತೆ. ನಿನ್ನ ಥಿಯೋಗೆ ಬರೆದು ತಿಳಿಸುತ್ತೇನೆ. ನಾವಿಬ್ಬರೂ ಹೇಗಾದರೂ ನಿನ್ನನ್ನು ಇಲ್ಲಿಂದ ಬಿಡಿಸಿಕೊಂಡು ಹೋಗುತ್ತೇನೆ.

'ಡಾಕ್ಟರೇ, ದಯವಿಟ್ಟು ಥಿಯೋಗೆ ಬರೆಯಬೇಡಿ. ಗೊತ್ತಾದರೆ ಇಲ್ಲಿಗೆ ಬಂದು ಬಿಡುತ್ತಾನೆ. ಇಷ್ಟರಲ್ಲಿಯೇ ಅವನ ಮದುವೆಯಾಗಲಿದೆ. ಇದು ಗೊತ್ತಾದರೆ, ಪಾಪ! ಎಲ್ಲ ಕೆಟ್ಟು ಹೋಗುತ್ತೆ. ಅವನ ಭವಿಷ್ಯವೇ ಹಾಳಾಗುತ್ತೆ!"

"ನಾನು ತಿಳಿಸಿದರೂ, ಇಲ್ಲಿಗೆ ಬರಬೇಡಾಂಡ ಹೇಳ್ತೇನೆ. ನನ್ನ ಹತ್ತಿರ ಒಂದು ಉಪಾಯ ಇದೆ."

ಎರಡು ದಿನಗಳ ನಂತರ ರೇ ಮತ್ತೊಮ್ಮೆ ಬಂದ. ಸೆಲ್‌ನ ಕಾವಲುಗಾರ ಅಲ್ಲಿಯೇ ಇದ್ದ.

"ವಿನ್ಸೆಂಟ್, ನಿನ್ನ ಮನೆ ಮಾಲಿಕ ನಿನ್ನನ್ನು ಆ ಮನೆಯಿಂದ ಖಾಲಿ ಮಾಡಿಸುತ್ತಾನೆ ಅಂತ ಕೇಳಿದೆ. ನಿನ್ನ ಫರ್ನಿಚರ್ ಎಲ್ಲವನ್ನೂ ಬೇಸ್‌ಮೆಂಟ್‌ನಲ್ಲಿ ಒಂದು ಕಡೆ ಇರಿಸಿದ್ದಾನೆ. ನಿನ್ನ ಕ್ಯಾನ್‌ವಾಸ್‌ಗಳನ್ನು ಒಂದು ರೂಮಿನಲ್ಲಿರಿಸಿ ಬೀಗ ಹಾಕಿದ್ದಾನೆ. ಬಾಡಿಗೆಯ ಹಳೆ ಬಾಕಿಯೆಲ್ಲಾ ಕೊಟ್ಟ ಹೊರತು ಕ್ಯಾನ್‌ವಾಸ್‌ಗಳನ್ನು ಕೊಡುವುದಿಲ್ಲವಂತೆ."

ವಿನ್ಸೆಂಟ್ ಮಾತಾಡಲಿಲ್ಲ.

"ಅಲ್ಲಿಗೆ ನೀನು ಹೋಗೋಕೆ ಸಾಧ್ಯವಿಲ್ಲದಿರುವುದರಿಂದ, ನನ್ನ ಪ್ಲಾನ್‌ನಂತೆ ನೀನು ನಡೆದುಕೊಳ್ಳಬಹುದು. ಎಪಿಲೆಪ್ಟಿಕ್ ಫಿಟ್ಸ್ ನಿನಗೆ ಈ ರೀತಿ ಯಾವ ಯಾವ ಟೈಮಲ್ಲಿ ಬರುತ್ತೆ ಅಂತ ಹೇಳೋಕೆ ಆಗೊಲ್ಲ. ಅದಕ್ಕಾಗಿ ಎಲ್ಲಿಯಾದರೂ ಪ್ರಶಾಂತವಾದ ಸ್ಥಳಕ್ಕೆ, ನೆಮ್ಮದಿ ಶಾಂತಿ ಸಿಗುವ ಪರಿಸರಕ್ಕೆ ಹೋದರೆ, ಹೆಚ್ಚು ಭಾವಾವೇಶಕ್ಕೆ ಒಳಗಾಗದೆ ಇದ್ದರೆ, ಮತ್ತೆ ನಿನಗೆ ಆ ಥರದ ಪರಿಸ್ಥಿತಿ ಬರಲಾರದು, ಇಲ್ಲಿ ಬಂದರೆ ತಿಂಗಳಿಗೋ ಎರಡು ತಿಂಗಳಿಗೋ ಒಮ್ಮೆ ಬರಬಹುದು. ಇದರಿಂದ ದೂರವಾಗಿರಬೇಕಾದರೆ, ನಿನ್ನನ್ನೂ, ಜನರನ್ನೂ ರಕ್ಷಿಸಿಕೊಳ್ಳಬೇಕಾದರೆ ನೀನು....ನೀನು......"

"ಒಂದು ಆಸ್ಪತ್ರೆಗೆ ಹೋಗಬೇಕು. ಅಲ್ವೆ?"

"ಹೌದು."

"ಅಂದ್ರೆ, ನಿಮ್ಮ ದೃಷ್ಟಿಯಲ್ಲಿಯೂ ನಾನು.....?"

"ಇಲ್ಲ ವಿನ್ಸೆಂಟ್ ಖಂಡಿತ ಇಲ್ಲ. ನಾನೆಷ್ಟು ಮಾನಸಿಕವಾಗಿ ಆರೋಗ್ಯವಾಗಿರುವೆನೋ, ನೀನೂ ಅಷ್ಟೇ ಆರೋಗ್ಯವಾಗಿದ್ದೀಯ. ಈ ಬಗೆಯ ಎಪಿಲೆಪ್ಟಿಕ್ ಫಿಟ್ಸ್ ಕೂಡಾ ಆಗಾಗ ಬರುವ ಒಂದು ಜ್ವರದ ಹಾಗೇನೇ. ಅದು ಬಂದದ್ದೇ ಸ್ತಿಮಿತ ಕಳೆದುಕೊಳ್ಳುತ್ತಾನೆ. ನರಗಳು ಉದ್ರೇಕಗೊಳ್ಳುತ್ತವೆ. ಭಯಂಕರ ಅಸಹನೆಯ ಬಿಗಿ ಮುಷ್ಠಿಯಲ್ಲಿ ಸಿಲುಕಿ, ತಾನೇನು ಮಾಡುತ್ತಿದ್ದೇನೆಂಬ ವಿವೇಚನೆ, ವಿವೇಕವಿಲ್ಲದೆ, ಮಾಡಬಾರದ್ದನ್ನೆಲ್ಲ ಮಾಡಲು ತೊಡಗುತ್ತಾನೆ. ಅದಕ್ಕೆಂದೇ ನೀನು ಆಸ್ಪತ್ರೆಯಲ್ಲಿ ಇರುವುದೇ ಒಳ್ಳೆಯದು. ಅಲ್ಲಿ ನಿನ್ನನ್ನು ನೋಡಿಕೊಳ್ಳುವ ಮಂದಿ ಇರುತ್ತಾರೆ."

"ಓ ಹಾಗೋ."

"ಇಲ್ಲಿಂದ ಇಪ್ಪತ್ತೈದು ಕಿಲೋಮೀಟರ್ ದೂರದಲ್ಲಿ ಒಂದು ಒಳ್ಳೆ ಆಸ್ಪತ್ರೆಯಿದೆ. 'ಸೈಂಟ್ ರೆಮಿ' ಅಂತ. ಅಲ್ಲಿ ಫಸ್ಟ್, ಸೆಕೆಂಡ್, ಥರ್ಡ್ ಕ್ಲಾಸ್ ರೋಗಿಗಳಿಗೆ ಅವಕಾಶ ಇದೆ. 'ಥರ್ಡ್‌ಕ್ಲಾಸ್'ಗೆ ತಿಂಗಳಿಗೆ ನೂರು ಫ್ರ್ಯಾಂಕ್ ಚಾರ್ಜ್ ಮಾಡ್ತಾರೆ. ಬಹುಶಃ ಅದು ನಿನಗೆ ಸಾಧ್ಯವಾಗಬಹುದು. ಮೊದಲಿಗೆ ಅದೊಂದು ಆಶ್ರಯವಾಗಿತ್ತು. ಆ ಗುಡ್ಡಕ್ಕೆ ಎದುರಾಗಿ, ನೋಡಲು ತುಂಬಾ ಚೆನ್ನಾಗಿದೆ ಜಾಗ. ನಿನಗೆ ಸಲಹೆ ಕೊಡಲು ಡಾಕ್ಟರಿದ್ದಾರೆ. ಸೇವೆ ಮಾಡಲು ನರ್ಸ್‌ಗಳಿದ್ದಾರೆ. ಅವರೆಲ್ಲ ನಿನ್ನನ್ನು ತುಂಬಾ ಪ್ರೀತಿಯಿಂದ, ಜಾಗರೂಕತೆಯಿಂದ ನೋಡಿಕೊಳ್ತಾರೆ. ಊಟವೂ ಸರಳವಾಗಿ ಆದರೆ ರುಚಿಯಾಗಿರುತ್ತೆ. ಬೇಗ ನೀನು ಅಲ್ಲಿದ್ದು ಗುಣಮುಖನಾಗ್ತೀಯ."

"ಪೈಂಟ್ ಮಾಡೋದಿಕ್ಕೆ ಬಿಡ್ತಾರೇನು?"

"ಯಾಕೆ ಬಿಡೊಲ್ಲ! ಖಂಡಿತ ಬಿಡ್ತಾರೆ."

"ನೀನು ಏನು ಬೇಕಾದರೂ ಮಾಡಬಹುದು. ಆದರೆ ನಿನಗೆ ಅದರಿಂದ ತೊಂದರೆಯಾಗುವಂತಿರಬಾರದು. ಆಸ್ಪತ್ರೆಯಲ್ಲಿ ಇದ್ದ ಹಾಗೇ ಎಲ್ಲ! ಅಲ್ಲಿ ಒಂದು ವರ್ಷ ಅವರು ಹೇಳಿದ ಹಾಗೆ ಕೇಳಿಕೊಂಡು ಇದ್ದು ಬಿಡು. ಪೂರ್ತಿಯಾಗಿ ನಿನಗೆ ವಾಸಿಯಾಗುತ್ತೆ!"

"ಈ ಬಿಲದಿಂದ ಪಾರಾಗುವುದಾದರೂ ಹೇಗೆ?"

"ನಾನು ಪೋಲೀಸ್ ಸೂಪರಿಡೆಂಟ್ ಹತ್ತಿರ ಮಾತಾಡಿದ್ದೀನಿ. ಅವರು ಒಪ್ಪಿಕೊಂಡಿದ್ದಾರೆ. ಆದರೆ ನಾನೇ ಖುದ್ದಾಗಿ ನಿನ್ನನ್ನು ಸೈಂಟ್ ಪಾಲ್ ದ ಮೌಸೋಲ್‌ಗೆ ಕರೆದುಕೊಂಡು ಹೋಗಬೇಕೆಂದು ಷರತ್ತು ಹಾಕಿದ್ದಾರೆ.

"ನೀವು ಹೇಳುತ್ತಿರುವ ಹಾಗೆ ಆ ಜಾಗ ಚೆನ್ನಾಗಿದೆ ತಾನೇ?"

"ಓಹ್ ವಿನ್ಸೆಂಟ್ ತುಂಬಾನೇ ಚೆನ್ನಾಗಿದೆ. ರಾಶಿ ರಾಶಿ ಕ್ಯಾನ್‌ವಾಸ್‌ಗಳನ್ನು ಮಾಡಬಹುದು."

"ಹಾಗಿದ್ದರೆ ಸರಿ..... ತಿಂಗಳಿಗೆ ನೂರು ಫ್ರ್ಯಾಂಕ್ ಅಂಥಾ ಹೆಚ್ಚೇನೂ ಅಲ್ಲ. ನಾನು ಪೂರ್ತಿ ಗುಣಹೊಂದುವುದಕ್ಕೆ ಒಂದು ವರ್ಷಕಾಲ ಅಷ್ಟು ಹಣ ಬೇಕಾಗುತ್ತೆ."

"ಹೌದು. ನಾನು ಆಗಲೇ ನಿನ್ನ ತಮ್ಮನಿಗೆ, ಇಲ್ಲಿ ನಡೆದದ್ದೆಲ್ಲ ತಿಳಿಸಿ ಬರೆದಿದ್ದೇನೆ. ಅಲ್ಲದೆ ಇಂಥ ಪರಿಸ್ಥಿತೀಲಿ ದೂರದ ಪ್ಯಾರಿಸ್‌ಗೆ ನಿನ್ನನ್ನು ಕರೆದುಕೊಂಡು ಹೋಗುವುದು ಸರಿಯಲ್ಲ ಎಂದೂ ಹೇಳಿದ್ದೇನೆ. ಸೈಂಟ್ ಪಾಲ್‌ನಲ್ಲಿ ನೀನು ಸದ್ಯಕ್ಕೆ ಇರುವುದು ಒಳ್ಳೆಯದೆಂದು ನನ್ನ ಅಭಿಪ್ರಾಯವನ್ನೂ ಸೂಚಿಸಿದ್ದೇನೆ."

"ಥಿಯೋಗೆ ತೊಂದರೆಯಾಗದಂತೆ, ಯಾವುದನ್ನು ಮಾಡಿದರೂ ನನಗೆ ಒಪ್ಪಿಗೆಯೇ....."

"ಯಾವಾಗಲಾದರೂ ಅವನಿಂದ ಉತ್ತರ ಬರಬಹುದು. ಉತ್ತರ ಬಂದ ತಕ್ಷಣ ನಾನು ನಿನ್ನನ್ನು ಬಂದು ಕಾಣ್ತೀನಿ."

ಥಿಯೋಗೆ ಬೇರೆ ದಾರಿ ಇರಲಿಲ್ಲ. ಒಪ್ಪಿಗೆ ತಿಳಿಸಿದ. ಅಣ್ಣನ ಬಾಕಿ ತೀರಿಸಲು ಹಣವನ್ನೂ ಕಳಿಸಿಕೊಟ್ಟ. ಡಾಕ್ಟರ್ ರೇ ವಿನ್ಸೆಂಟ್‌ನನ್ನು ಗಾಡಿಯಲ್ಲಿ ಕೂರಿಸಿಕೊಂಡು ಸ್ಟೇಷನ್ ತಲುಪಿ, ತ್ರಾಸ್ಕಾನ್ ಟ್ರೈನ್ ಹಿಡಿದರು. ತ್ರಾಸ್ಕಾನ್ ತಲುಪುತ್ತಿದ್ದಂತೆ, ಸಮೃದ್ಧವಾದ ಹಸಿರಿನಿಂದ ಕಂಗೊಳಿಸುತ್ತಿದ್ದ ಕಣಿವೆ ಹಾದಿ ಹಿಡಿದು ಸೈಂಟ್‌ರೆಮಿಗೆ ಹೊರಟರು.

ಸೈಂಟ್‌ಪಾಲ್‌ನ ದ ಮೌಸೋಲ್ ನಗರದ ಮೂಲಕ ಹಾದು ಹೋದರೆ, ಎರಡು ಕಿಲೋಮೀಟರ್ ಎತ್ತರದಲ್ಲಿ ಗುಡ್ಡದ ಮೇಲೆ ರೆಮಿ ಇತ್ತು. ವಿನ್ಸೆಂಟ್ ಮತ್ತು ಡಾಕ್ಟರ್ ಗಾಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು, ಬೋಳಾದ ಬೆಟ್ಟಸಾಲುಗಳಿದ್ದ ರಸ್ತೆ ಹಿಡಿದು ಸಾಗಿದರು. ಸ್ವಲ್ಪ ದೂರದಲ್ಲಿಯೇ ಮೊನಾಸ್ಟರಿಯ ಕಂದು ಬಣ್ಣದ ಗೋಡೆಗಳು ಕಾಣಿಸಿದವು.

ಗಾಡಿ ನಿಂತಿತು. ಇಬ್ಬರೂ ಇಳಿದರು. ರಸ್ತೆಯ ಬಲಭಾಗದಲ್ಲಿ ವೃತ್ತಾಕಾರದ ಖಾಲಿ ಜಾಗದಲ್ಲಿ ವೆಸ್ತಾಗುಡಿ ಮತ್ತು ಟ್ರಿಯುಂಫಲ್ ಆರ್ಚ್‌ಗಳಿದ್ದವು.

"ಎಲ್ಲಾ ಬಿಟ್ಟು ಇವು ಈ ಜಾಗದಲ್ಲಿ ಹೇಗೆ ಬಂದವು?" – ವಿನ್ಸೆಂಟ್ ಕೇಳಿದ.

"ಇದು ಬಹಳ ಮುಖ್ಯವಾದ ರೋಮನ್ ಸೆಟಲ್‌ಮೆಂಟ್ (ನೆಲಸಿದ ಪ್ರದೇಶ) ಆಗಿತ್ತು. ಅಲ್ಲಿ ಕಾಣ್ತಾ ಇದೆಯಲ್ಲ ನದಿ – ಈ ಕಣಿವೆಯನ್ನು ತುಂಬಿತ್ತು. ನೀನು ನಿಂತಿದ್ದೀಯಲ್ಲ ಅಲ್ಲೀವರೆಗೆ ಆ ನದಿಯ ಹರಿವಿತ್ತು. ನದಿ ಹರಿವು ಇಳೀತಾ ಇಳೀತಾ ಊರೂ ಕೂಡಾ ಗುಡ್ಡದ ಬುಡಕ್ಕೆ ಸರಿದು ಬಿಟ್ಟಿತು. ಈಗ ಈ ಸ್ಮಾರಕಗಳ ಹೊರತಾಗಿ ಏನೂ ಉಳಿದಿಲ್ಲ. ಅದೇ ಈ 'ಮೊನಾಸ್ಟರಿ'."

"ಬಹಳ ಕುತೂಹಲ ಅನಿಸುತ್ತೆ!"

"ಬಾ ಹೋಗೋಣ ವಿನ್ಸೆಂಟ್, ಡಾಕ್ಟರ್ ಪೆರೋನ್ ನಮಗಾಗಿ ಕಾಯ್ತಿರ್ತಾರೆ."

ರಸ್ತೆದಾಟಿ, ಪೈನ್‌ಮರಗಳಿದ್ದ ಕಡೆಯಿಂದ ಹಾದು ಮೊನಾಸ್ಟರಿಯ ಗೇಟಿನ ಬಳಿ ಬಂದರು. ಡಾಕ್ಟರ್ ರೇ ಬಾಗಿಲ ಮೇಲಿನ ಕಬ್ಬಿಣದ ನಾಬ್ ಒತ್ತಿದಾಗ ದೊಡ್ಡದಾಗಿ ಗಂಟೆ ಸದ್ದು ಕೇಳಿ ಬಂತು. ಕೆಲ ನಿಮಿಷಗಳ ನಂತರ ಗೇಟ್ ಬಾಗಿಲು ತೆರೆದುಕೊಂಡು, ಡಾಕ್ಟರ್ ಪೆರೋನ್ ಕಾಣಿಸಿದರು.

"ಹೇಗಿದ್ದೀರಿ ಡಾಕ್ಟರ್ ಪೆರೋನ್?" – ಡಾಕ್ಟರ್ ರೇ ವಿಚಾರಿಸಿದರು. "ನನ್ನ ಗೆಳೆಯ ವಿನ್ಸೆಂಟ್ ವಾನ್‌ಗೋನನ್ನು, ಪತ್ರದಲ್ಲಿ ಹೇಳಿದಂತೆ ಕರೆದುಕೊಂಡು ಬಂದಿದ್ದೇನೆ. ಆತನನ್ನು ನಿಮ್ಮ ರಕ್ಷಣೆಗೆ ಬಿಡುತ್ತಿದ್ದೇನೆ. ಆತನ ಜವಾಬ್ದಾರಿ ನಿಮ್ಮದು."

"ಆಯ್ತು ಡಾಕ್ಟರ್ ರೇ. ನಿಮ್ಮ ಗೆಳೆಯನನ್ನು ಬಹಳ ಜಾಗರೂಕತೆಯಿಂದ ನೋಡಿಕೊಳ್ಳುತ್ತೇವೆ."

"ನಾನು ಕೂಡಲೇ ಹೊರಟು ಹೋದರೆ ತಾವು ತಪ್ಪಾಗಿ ತಿಳಿಯುವುದಿಲ್ಲ ತಾನೇ? ಈಗ ತಕ್ಷಣವೇ ತ್ರಾಸ್‌ಕಾನ್‌ಗೆ ಹೋಗಲು ಒಂದು ಟ್ರೈನಿದೆ."

"ನನಗೆ ಅರ್ಥ ಆಗುತ್ತೆ, ಡಾಕ್ಟರ್ ರೇ."

"ಗುಡ್‌ಬೈ ವಿನ್ಸೆಂಟ್...... ಸಂತೋಷವಾಗಿರು. ಬೇಗನೇ ಗುಣಮುಖವಾಗುತ್ತೀ. ಸಾಧ್ಯವಾದಾಗಲೆಲ್ಲ ನಾನು ಬಂದು ನೋಡ್ಕೊಂಡು ಹೋಗ್ತೀನೆ. ಒಂದು ವರ್ಷ ಮುಗಿಯುವುದರೊಳಗಾಗಿ ನೀನು ಪೂರ್ತಿಯಾಗಿ ಸುಧಾರಿಸಿಕೊಂಡಿರುತ್ತೀ ಎಂದು ನಂಬುತ್ತೇನೆ."

"ಥ್ಯಾಂಕ್ಯೂ ಡಾಕ್ಟರ್. ನೀವು ನಿಜವಾಗಿಯೂ ದಯಾಳುಗಳು. ಗುಡ್‌ಬೈ."

"ಗುಡ್‌ಬೈ ವಿನ್ಸೆಂಟ್."

ಪೈನ್‌ಮರಗಳ ದಾರಿಯಲ್ಲಿ ಡಾಕ್ಟರ್ ಹಿಂತಿರುಗಿದ.

"ವಿನ್ಸೆಂಟ್ ಒಳಗೆ ಬರುತ್ತೀಯ?" ಎಂದು ಪೆರೋನ್ ಪಕ್ಕಕ್ಕೆ ಸರಿದು, ಒಳಕ್ಕೆ ಹೋಗಲು ದಾರಿ ತೋರಿಸಿದ.

ಮತಿಭ್ರಮಿತರ ಆಶ್ರಮದ ಗೇಟಿನ ಬಾಗಿಲಿಗೆ ಬೀಗ ಬಿತ್ತು.

□□

## ಭಾಗ – ಏಳು

# ಕಲೆಯರಿತ ಕೊನೆಯುಸಿರಲ್ಲಿ

–೧–

ಮತಿಭ್ರಮಿತ ರೋಗಿಗಳು ಮಲಗುತ್ತಿದ್ದ ವಾರ್ಡ್ ಮೂರನೆ ದರ್ಜೆಯ ವೈಟಿಂಗ್ ರೂಮಿನಂತಿತ್ತು. ಇವರು ಯಾವಾಗಲೂ ಹ್ಯಾಟುಗಳನ್ನು, ಕನ್ನಡಕಗಳನ್ನು, ಕೈಯಲ್ಲಿ ಕೋಲುಗಳನ್ನು, ಪ್ರಯಾಣದ ಕೋಟುಗಳನ್ನು ಧರಿಸಿ ಎಲ್ಲಿಗೋ ಹೊರಡಲು ಸಿದ್ಧರಾಗಿದ್ದಂತೆ ಕಾಣಿಸುತ್ತಿದ್ದರು.

ಸಿಸ್ಟರ್ ಡೆಷಾನೆಲ್ ವಿನ್ಸೆಂಟ್‌ನನ್ನು ಉದ್ದನೆಯ ಕಾರಿಡಾರ್ ಮೂಲಕ ಒಂದು ಕೋಣೆಯೊಳಗೆ ಕರೆತಂದು, ಖಾಲಿಯಾಗಿದ್ದ ಹಾಸಿಗೆಯನ್ನು ತೋರಿದಳು.

"ಮಿಸ್ಟರ್ ವಿನ್ಸೆಂಟ್ ನೀವು ಇಲ್ಲಿ ಮಲಗ್ತೀರಿ. ಬೇಕಾದರೆ ಈ ಪರದೆಗಳನ್ನು ಎಳೆದುಕೊಳ್ಳಬಹುದು. ನೀವು ಎಲ್ಲಾ ಸೆಟಲ್ ಆದ ಮೇಲೆ ಡಾಕ್ಟರ್ ಪೆರೋನ್‌ರ ಆಫೀಸಿಗೆ ಹೋಗಿ ಬನ್ನಿ. ಅವರು ನಿಮ್ಮನ್ನು ಅಲ್ಲಿ ಕಾಣುತ್ತಾರೆ.

ಹತ್ತಿ ಉರಿಯದ ಸ್ಟೋವ್ ಸುತ್ತಲೂ ಕುಳಿತಿದ್ದ ಹನ್ನೊಂದು ಮಂದಿ ವಿನ್ಸೆಂಟ್ ಬಂದದ್ದನ್ನು ಗಮನಿಸಲೂ ಇಲ್ಲ, ಅವನ ಬಗ್ಗೆ ಮಾತಾಡಲೂ ಇಲ್ಲ. ಸಿಸ್ಟರ್ ಡೆಷಾನಲ್ ಗಂಜಿ ಹಾಕಿ ಗರಿಗರಿಯಾಗಿದ್ದ ಬಿಳಿ ಗೌನು ಕಪ್ಪು ಮೇಲಂಗಿ ಹಾಕಿದ್ದಳು. ಹಿಂದಕ್ಕೆ ಸ್ಲಿಫ್ ಆಗಿದ್ದ ಕಪ್ಪು ವೇಲನ್ನು ಇಳಿಬಿಟ್ಟಿದ್ದಳು.

ವಿನ್ಸೆಂಟ್ ತನ್ನ ಚೀಲವನ್ನು ಮಂಚದ ಮೇಲಿರಿಸಿ ಸುತ್ತಲೂ ನೋಡಿದ. ವಾರ್ಡಿನ ಎರಡೂ ಕಡೆಗಳಲ್ಲಿ ಹಾಸಿಗೆಗಳ ಸಾಲುಗಳಿದ್ದವು. ಅವುಗಳ ಸುತ್ತ ಫ್ರೇಮ್‌ಗಳನ್ನು ಇರಿಸಲಾಗಿದ್ದು, ಅವುಗಳ ಮೇಲೆ ಕೊಳಕಾದ ಕೆನೆ ಬಣ್ಣದ ಪರದೆಗಳನ್ನು ಇಳಿಬಿಡಲಾಗಿತ್ತು. ಮೇಲಿನ ತೊಲೆಗಳಿಗೆ, ಗೋಡೆಗಳಿಗೆ ಸುಣ್ಣ ಬಳಿಯಲಾಗಿತ್ತು. ಮಧ್ಯದಲ್ಲಿ ಒಂದು ಸ್ಟೋವ್ ಇತ್ತು. ಇದರ ಮೇಲಿಂದ ಒಂದು ದೀಪವನ್ನು ತೂಗುಹಾಕಲಾಗಿತ್ತು.

ಅಲ್ಲಿದ್ದವರು ಯಾರೂ ಮಾತಾಡುತ್ತಿರಲಿಲ್ಲ; ಆಟ ಆಡುತ್ತರಲಿಲ್ಲ. ತಮ್ಮ ತಮ್ಮ ವಾಕಿಂಗ್ ಸ್ಟಿಕ್‌ಗಳ ಮೇಲೆ ಬಾಗಿ ಸ್ಟೋವ್ ಕಡೆ ನೋಡುತ್ತಿದ್ದರು. ವಿನ್ಸೆಂಟ್‌ಗೆ ಆಶ್ಚರ್ಯವಾಯಿತು. ಇವರೇಕೆ ಹೀಗಿದ್ದಾರೆ ಎಂದು ಪ್ರಶ್ನಿಸಿಕೊಂಡ.

ವಿನ್ಸೆಂಟ್‌ನ ಹಾಸಿಗೆಯ ಮೇಲೆ, ತಲೆಯ ದಿಕ್ಕಿನಲ್ಲಿ, ಪೆಟ್ಟಿಗೆಯೊಂದಿತ್ತು. ವಿನ್ಸೆಂಟ್ ತನ್ನ ವಸ್ತುಗಳನ್ನು ಅಲ್ಲಿ ಇರಿಸುವುದಕ್ಕಿಂತಲೂ, ತನ್ನ ಚೀಲದಲ್ಲಿಯೇ ಇರಿಸುವುದು

ಒಳ್ಳೆಯದೆಂದು ತೀರ್ಮಾನಿಸಿದ. ಪೆಟ್ಟಿಗೆಯಲ್ಲಿ ಪೈಪ್, ಟೊಬ್ಯಾಕೋ, ಪುಸ್ತಕಗಳನ್ನು ಮಾತ್ರವೇ ಇರಿಸಿದ. ತಾನು ತಂದಿದ್ದ ಚೀಲವನ್ನು ಮಂಚದಡಿಗೆ ತಳ್ಳಿ ಗಾರ್ಡನ್ ಕಡೆ ಹೆಜ್ಜೆ ಹಾಕಿದ. ಹೋಗುವಾಗ ದಾರಿಯಲ್ಲಿ, ಕತ್ತಲ ಗೂಡುಗಳಂತಿದ್ದ ಕೆಲವು ಕೋಣೆಗಳನ್ನು ನೋಡಿದ. ಅವುಗಳಿಗೆ ಭದ್ರವಾದ ಬೀಗಗಳನ್ನು ಹಾಕಿದ್ದರು. ಜೊತೆಗೆ ಅವು ಪಾಳು ಬಿದ್ದಂತಿದ್ದವು.

ಮಧ್ಯಭಾಗದಲ್ಲಿನ ಖಾಲಿ ಜಾಗವಂತೂ ಪೂರ್ತಿಯಾಗಿ ಪಾಳುಬಿದ್ದಿತ್ತು. ಹುಚ್ಚುಚ್ಚಾಗಿ ಹುಲ್ಲು, ಕಳ್ಳಿ ಗಿಡಗಳು ಎಲ್ಲೆಂದರಲ್ಲಿ ದಟ್ಟವಾಗಿ ಬೆಳೆದು ಬಿಟ್ಟಿದ್ದವು. ವಿನ್ಸೆಂಟ್ ಎಡಕ್ಕೆ ತಿರುಗಿ, ಪೆರೋನ್ ವಾಸಿಸುತ್ತಿದ್ದ ಒಂಟಿಮನೆಯನ್ನು ಸಮೀಪಿಸಿ, ಕರೆ ಗಂಟೆ ಬಾರಿಸಿದ.

ಡಾಕ್ಟರ್ ಪೆರೋನ್ ಮರ್ಚೆಂಟ್ ನೇವಿಯಲ್ಲಿ ಡಾಕ್ಟರಾಗಿದ್ದ. ನಂತರ ನೇತ್ರ ವೈದ್ಯನಾದ. ಆದರೆ ಒಮ್ಮೆ ಸಂಧಿವಾತ ರೋಗಕ್ಕೆ ತುತ್ತಾಗಿ, ಪ್ರಶಾಂತ ಪ್ರದೇಶದಲ್ಲಿದ್ದ 'ಮೆಸೋನ್ ದ ಸಾಂತ್' ಗೆ ಬರಬೇಕಾಯಿತು.

"ವಿನ್ಸೆಂಟ್ ಮೊದಲಿಗೆ ನಾನು ಶರೀರಕ್ಕೆ ಸಂಬಂಧಿಸಿದ ಖಾಯಿಲೆಗಳನ್ನು ನೋಡಿಕೊಳ್ಳುತ್ತಿದ್ದೆ. ಆದರೆ ಈಗ ಆತ್ಮದ ಆರೋಗ್ಯ ಕಾಪಾಡುವ ಕೆಲಸದಲ್ಲಿ ತೊಡಗಿದ್ದೇನೆ. ಎರಡೂ ಒಂದೇ ತರದ ವೃತ್ತಿಗಳೇ."

"ನರಗಳ ಖಾಯಿಲೆಗಳ ಬಗ್ಗೆ ನಿಮಗೆ ಸಾಕಷ್ಟು ಅನುಭವ ಇದೆ. ದಯವಿಟ್ಟು ಹೇಳಿ...... ನಾನು ಕಿವಿಯನ್ನು ಕತ್ತರಿಸಿಕೊಳ್ಳಲು ಕಾರಣ ಏನಿರಬಹುದು?"

"ಎಪಿಲೆಪ್ಟಿಕ್ ರೋಗಿಗಳಲ್ಲಿ ಇಂಥದ್ದೆಲ್ಲಾ ಮಾಮೂಲೇ ಇದಕ್ಕೆ ಮೊದಲೂ ಇದೇ ಥರದ ಎರಡು ಕೇಸುಗಳು ಬಂದಿದ್ದವು. ಶ್ರವಣೇಂದ್ರಿಯ ನರಗಳು ತುಂಬಾ ಸೂಕ್ಷ್ಮವಾಗಿ ಬಿಡುತ್ತವೆ. ಏನೇನೋ ಕೇಳಿಬರುತ್ತವೆ. ಯಾರೋ ತಮ್ಮ ಕಿವಿಯಲ್ಲಿ ಪಿಸುಗುಡುತ್ತಿದ್ದಾರೆ ಎಂಬೆಲ್ಲಾ ಭ್ರಮೆಗಳಿಂದ ತತ್ತರಿಸಿ ಹೋಗುತ್ತಾರೆ. ಕಿವಿಯನ್ನು ಕತ್ತರಿಸಿಕೊಳ್ಳುವುದರಿಂದ, ಭ್ರಮೆಗಳಿಗೆ ತಡೆಯಾಗಬಹುದೆಂದು ಭಾವಿಸಿ, ಕತ್ತರಿಸಿಕೊಂಡು ಬಿಡುತ್ತಾರೆ."

"ಓ ಹಾಗೋ...... ನನಗೆ ಇದಕ್ಕೆ ಚಿಕಿತ್ಸೆ?"

"ಚಿಕಿತ್ಸೆ?..... ಹಾಂ......ಹೌದು..... ವಾರಕ್ಕೆ ಎರಡು ಬಾರಿ ತಪ್ಪದೆ ಬಿಸಿನೀರಿನ ಸ್ನಾನ ಮಾಡಬೇಕು. ಇದಂತು ಆಗಲೇ ಬೇಕು. ಸ್ನಾನದ ತೊಟ್ಟಿಯಲ್ಲಿ ಕಡಿಮೆಯೆಂದರೆ ಎರಡು ಗಂಟೆ ಕಾಲ ಕಳೆಯಬೇಕು. ಆಗ ಪ್ರಶಾಂತತೆ ಮೂಡುತ್ತದೆ.

"ಮತ್ತೇನು ಮಾಡಬೇಕು ಡಾಕ್ಟರ್?"

"ಮನಸ್ಸನ್ನು ಉದ್ರೇಕಕ್ಕೆ ಒಳಗಾಗಿಸದೆ, ಶಾಂತವಾಗಿ ಇರಬೇಕು. ಭಾವನೆಗಳನ್ನು ಪ್ರಚೋದಿಸುವ ಮೆದುಳಿಗೆ ಶ್ರಮಕೊಡುವ ಯಾವುದನ್ನೂ ಮಾಡಬಾರದು. ಕೆಲಸವಾಗಲೀ, ಓದುವುದಾಗಲೀ, ಮಾತು, ಹರಟೆ, ಚರ್ಚೆ – ಯಾವುದನ್ನಾಗಲೀ ಮಾಡಲೇಬಾರದು."

"ಕೆಲಸ ಮಾಡಲು ನನಗೆ ಆಗುವುದೂ ಇಲ್ಲ. ಇನ್ನೂ ನನ್ನಲ್ಲಿ ವೀಕ್‌ನೆಸ್ ಇದೆ."

"ಸೈಂಟ್ ಪಾಲ್‌ನ ಧಾರ್ಮಿಕ ವಿಚಾರಗಳಲ್ಲಿ ನಿನಗೆ ಆಸಕ್ತಿ ಇಲ್ಲವಾದಲ್ಲಿ, ನೀನು ಬರಬೇಕಾದ್ದಿಲ್ಲ. ನಿನ್ನನ್ನು ಬಲವಂತ ಪಡಿಸಬಾರದೆಂದು ಸಿಸ್ಟರ್‌ಗೆ ಹೇಳಿರುತ್ತೇನೆ. ನಿನಗೆ ಬೇರೆ ಏನಾದರೂ ಬೇಕೆನಿಸಿದಲ್ಲಿ ನನ್ನ ಬಳಿಗೆ ಬಾ."

"ಥ್ಯಾಂಕ್ಯೂ ಡಾಕ್ಟರ್."

"ಐದುಗಂಟೆಗೆ ಊಟ ಇರುತ್ತೆ. ಬೆಲ್ಲಾಗುತ್ತೆ. ಆಸ್ಪತ್ರೆಯ ಜೀವನಕ್ಕೆ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಹೊಂದಿಕೊಳ್ಳಲು ಪ್ರಯತ್ನಿಸು. ತುಂಬ ಬೇಗನೆ ಗುಣವಾಗುತ್ತೀ."

ವಿನ್ಸೆಂಟ್ ಮತ್ತೆ ಅದೇ ದಾರಿಯಲ್ಲಿ ಹಿಂತಿರುಗಿ ಬಂದು, ತನ್ನ ಹಾಸಿಗೆಯ ಮೇಲೆ ಕುಳಿತ, ಅವನ ಜೊತೆಗಾರರು ಇನ್ನೂ ಸ್ಟೋವ್ ಬಳಿ ಹಾಗೇ ಕುಳಿತಿದ್ದರು. ಸ್ವಲ್ಪ ಸಮಯದ ನಂತರ, ಮತ್ತೊಂದು ಕೋಣೆಯಿಂದ ಶಬ್ದ ಕೇಳಿಸಿತು. ಹನ್ನೊಂದು ಜನ ಅಲ್ಲಿ ಕುಳಿತಿದ್ದವರು ಥಟ್ಟನೆ ಎದ್ದು ವಾರ್ಡ್‌ನಿಂದ ಹೊರಗೆ ಹೋದರು. ವಿನ್ಸೆಂಟ್ ಅವರನ್ನು ಹಿಂಬಾಲಿಸಿದ.

ಅವರು ಊಟಮಾಡುತ್ತಿದ್ದ ಕೋಣೆಯಲ್ಲಿ ಉದ್ದನೆಯ ಬೆಂಚುಗಳಿದ್ದವು. ಅವುಗಳ ಸುತ್ತಲೂ ಕುರ್ಚಿಗಳನ್ನಿರಿಸಲಾಗಿತ್ತು. ನೆಲ ಮಣ್ಣಿನದಾಗಿತ್ತು. ಸಿಸ್ಟರುಗಳು ಊಟ ಬಡಿಸಿದರು. ಊಟ ಅಷ್ಟೇನೂ ಚೆನ್ನಾಗಿರಲಿಲ್ಲ. ಸೂಪು, ಬ್ಲಾಕ್ ಬ್ರೆಡ್, ಕಡಲೆ, ಅವರೆ ಬೀನ್ಸ್ ಇತ್ಯಾದಿಗಳನ್ನು ನೋಡಿದಾಗ ವಿನ್ಸೆಂಟ್‌ಗೆ ವಾಕರಿಕೆ ಬಂದ ಹಾಗಾಯಿತು. ಅವನಿಗೆ ಪ್ಯಾರಿಸಿನ ರೆಸ್ಟೋರೆಂಟ್‌ಗಳು ನೆನಪಾದವು. ಅವನ ಜೊತೆಗಾರರು, ಒಂದನ್ನೂ ಬಿಡದೆ ತಿಂದು ಮುಗಿಸಿದರಲ್ಲದೆ, ಕೈಗೆ ಮೆತ್ತಿದ ಅಲ್ಪಸ್ವಲ್ಪವನ್ನೂ ಬಿಡದೆ ನಾಲಿಗೆಯಿಂದ ನೆಕ್ಕಿ ನೆಕ್ಕಿ ಸವಿದರು.

ಊಟ ಮುಗಿಯಿತು. ಅವನ ಜೊತೆಗಾರರು ಮತ್ತೆ ತಾವು ಮೊದಲು ಕುಳಿತಿದ್ದ ಜಾಗಗಳಿಗೆ ಹೋಗಿ ಅವರವರ ಕುರ್ಚಿಗಳಲ್ಲಿ, ಸ್ಟೋವ್ ಸುತ್ತಲೂ ಕುಳಿತರು. ತಿಂದದ್ದೆಲ್ಲ ಜೀರ್ಣವಾದ ಮೇಲೆ ಎದ್ದು ಹೋಗಿ, ಬಟ್ಟೆ ಬದಲಾಯಿಸಿ, ಅವರವರ ಹಾಸಿಗೆಗಳಿಗೆ ತೆರಳಿ, ಪರದೆಗಳನ್ನು ಇಳಿಸಿ ನಿದ್ದೆ ಮಾಡಿದರು. ಈಗಲೂ ಒಬ್ಬರಾದರೂ ಮಾತಾಡಿದ ಸದ್ದು ಕೇಳಿಸಲೇ ಇಲ್ಲ.

ಸೂರ್ಯಾಸ್ತವಾಗಲಿತ್ತು. ವಿನ್ಸೆಂಟ್ ಕಿಟಕಿಯ ಬಳಿಗೆ ಹೋಗಿ ಹಸಿರು ಕಣಿವೆಯನ್ನು ನೋಡಿದ. ತಿಳಿನಿಂಬೆ ಬಣ್ಣದ ಆಕಾಶ, ಇದರ ಹಿನ್ನೆಲೆಯಲ್ಲಿ ಪೈನ್‌ಮರಗಳು ಒಂದಕ್ಕೊಂದು ಹೆಣೆದುಕೊಂಡಂತೆ ಕಾಣಿಸಿದವು. ಇದನ್ನು ನೋಡುತ್ತಿದ್ದರೂ ವಿನ್ಸೆಂಟ್ ಮನಸ್ಸಿನಲ್ಲಿ ಭಾವನೆಗಳು ಜಾಗೃತವಾಗಲಿಲ್ಲ. ಪೈಂಟ್ ಮಾಡಬೇಕೆನ್ನುವ ಆಸೆಯೂ ಮೂಡಲಿಲ್ಲ.

ಪೂರ್ತಿ ಕತ್ತಲಾಗಿ, ನಿಂಬೆ ಬಣ್ಣದ ಆಕಾಶ, ಕಪ್ಪಾಗುವವರೆಗೂ ಕಿಟಕಿಯ ಬಳಿಯೇ ನಿಂತಿದ್ದ. ದೀಪ ಹಚ್ಚಲು ಯಾರೊಬ್ಬರೂ ವಾರ್ಡ್‌ಗೆ ಬರಲಿಲ್ಲ. ಕತ್ತಲೆಯಲ್ಲಿ

ತಮ್ಮ ತಮ್ಮ ಬದುಕಿನ ಬಗ್ಗೆ ಯೋಚಿಸುವುದರ ಹೊರತು ಮತ್ತೇನು? ಮಾಡುವಂತಿರಲಿಲ್ಲ.

ವಿನ್ಸೆಂಟ್ ಬಟ್ಟೆ ಬದಲಿಸಿ, ಮಲಗಲು ಹೋದ. ಕತ್ತಲಲ್ಲೇ ಕಣ್ಣು ಬಿಟ್ಟುಕೊಂಡು ಸೀಲಿಂಗ್‌ನ ಬೀಮ್‌ಗಳನ್ನು ದಿಟ್ಟಿಸುತ್ತಿದ್ದ. ಮಂಚ ಓರೆಯಾಗಿ, ಕಾಲಿನ ಕಡೆಗೆ ತಗ್ಗಾಗಿತ್ತು. ಡೆಕ್ವಾಸ್ಸ್‌ನ ಪುಸ್ತಕವನ್ನು ಜೊತೆಗೆ ತಂದಿದ್ದ. ಚೀಲದಲ್ಲಿ ಕೈಯಾಡಿಸಿ, ಚರ್ಮದ ಹೊದಿಕೆಯಿದ್ದ ಪುಸ್ತಕವನ್ನು ಹುಡುಕಿ ತೆಗೆದು, ಎದೆಯ ಮೇಲಿರಿಸಿಕೊಂಡ. ಅದರ ಸ್ಪರ್ಶವೇ ಅವನಿಗೆ ನೆಮ್ಮದಿ ಅನಿಸಿತು. ಇಲ್ಲಿದ್ದ ಹುಚ್ಚರ ಗುಂಪಿಗೆ ತಾನು ಸೇರಿದವನಲ್ಲ. ಮಹಾನ್ ಲೇಖಕರೂ, ದಾರ್ಶನಿಕರೂ ಆದವರು ಹೇಳಿದ್ದ ಅನೇಕ ಮಹತ್ವದ ಚಿಂತನೆಗಳು, ಆ ಪುಸ್ತಕದ ಹೊದಿಕೆಯ ಮೂಲಕವೇ ಅವನೊಳಗೆ ಹರಿದು ಸಾಂತ್ವನ, ನೆಮ್ಮದಿಗಳನ್ನು ಅನುಭವಿಸುತ್ತಿದ್ದೇನೆ ಎನ್ನುವ ಭಾವನೆಗೆ ಒಳಗಾದ.

ಸ್ವಲ್ಪ ಹೊತ್ತಿನ ನಂತರ ನಿದ್ದೆ ಮಾಡಿದ. ತನ್ನ ಪಕ್ಕದ ಹಾಸಿಗೆಯ ಕಡೆಯಿಂದ ಬರುತ್ತಿದ್ದ ಅಳುವಿನ ದನಿಯಿಂದ ಎಚ್ಚರಗೊಂಡ. ಸಣ್ಣಗೆ ಕೇಳಿಸುತ್ತಿದ್ದ ದುಃಖದ ಬಿಕ್ಕುಗಳು ಬರಬರುತ್ತಾ ಗಟ್ಟಿಯಾದ ಅಳು, ಚೀತ್ಕಾರಗಳ ಹಂತವನ್ನು ತಲುಪಿತು. ಅಳುತ್ತಾ ಹೊಮ್ಮಿಸುತ್ತಿದ್ದ ಮಾತುಗಳು ಸ್ಪಷ್ಟವಾಗಿ ಕೇಳಿಸುತ್ತಿತ್ತು.

"ಹೊರಟು ಹೋಗು! ನನ್ನನ್ನು ಹಿಂಬಾಲಿಸಿ ಬರಬೇಡ! ಯಾಕೆ ಹಿಂದೆ ಬರುತ್ತಿದ್ದೀಯ? ನಾನು ಅವನನ್ನು ಕೊಂದಿಲ್ಲ! ನನಗೆ ಮೋಸಮಾಡಬೇಡ. ನೀನು ಯಾರೂಂತ ಗೊತ್ತು ನನಗೆ. ನೀನೊಬ್ಬ ಗುಪ್ತಚರ ಪೋಲೀಸ್! ಬೇಕಾದರೆ ನನ್ನನ್ನು ಸರ್ಚ್‌ಮಾಡು! ನಾನು ಹಣ ಕದ್ದಿಲ್ಲ! ತನ್ನನ್ನು ತಾನೇ ಕೊಲೆ ಮಾಡಿಕೊಂಡ! ಹೊರಟು ಹೋಗು? ದಮ್ಮಯ್ಯ ಅಂತೀನಿ! ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡು!"

ವಿನ್ಸೆಂಟ್ ಎದ್ದು ಕುಳಿತು, ಪರದೆ ಸರಿಸಿದ. ಇಪ್ಪತ್ಮೂರು ವರ್ಷದ ಕಂದುಕೂದಲಿನ ಹುಡುಗ ತನ್ನ ವೈಟ್‌ಗೌನನ್ನು ಹಲ್ಲಿನಿಂದ ಕಚ್ಚಿ ಕಚ್ಚಿ ಹರಿದು ಹಾಕುತ್ತಿದ್ದ. ಆ ಹುಡುಗ ವಿನ್ಸೆಂಟ್‌ನನ್ನು ನೋಡಿದ್ದೇ ಎದ್ದು ಬಂದು ಅವನ ಕಾಲ ಬಳಿಬಂದು, ಗಟ್ಟಿಯಾಗಿ ಅವನ ಕೈಗಳನ್ನು ಹಿಡಿದುಕೊಂಡ.

"ಮಿಸ್ಟರ್ ಮೌನೆತ್-ಸಲ್ಲಿ, ನನ್ನನ್ನು ಎಳ್ಕೊಂಡು ಹೋಗಬೇಡ. ನಾನು ಮಾಡಿಲ್ಲ, ನಿಜ ಹೇಳ್ತಿದ್ದೀನಿ! ನಾನ್ ಲಾಯರ್! ನಿನ್ನ ಕೇಸುಗಳನ್ನೆಲ್ಲಾ ನಾನೇ ನೋಡಿಕೊಳ್ತೇನೆ ಮೌನೆತ್-ಸಲ್ಲೀ, ನನ್ನ ಕೈಗೆ ಕೋಳ ಹಾಕಬೇಡ! ಹೋದ ಬುಧವಾರ ನಾನು ಅವನನ್ನು ಕೊಂದೇ ಇಲ್ಲ! ನನ್ನ ಹತ್ತಿರ ದುಡ್ಡೇ ಇಲ್ಲ! ಬೇಕಾದರೆ ನೋಡಿಲ್ಲಿ!"

ಮೈಮೇಲೆ ಬಂದವನಂತೆ, ತೀವ್ರವಾದ ಉದ್ವೇಗಕ್ಕೆ ಒಳಗಾಗಿ ಹಾಸಿದ್ದ ಚಾದರಗಳನ್ನು, ಹಾಸಿಗೆಯನ್ನೂ ಹರಿದು ಹರಿದು ಬಿಸಾಡುತ್ತಿದ್ದ, ಅವನ ಕೂಗಾಟವೆಲ್ಲಾ ಗುಪ್ತಚರ ಪೋಲೀಸಿನ ವಿರುದ್ಧವೇ ಇತ್ತು. ವಿನ್ಸೆಂಟ್‌ಗೆ ಏನು ಮಾಡಬೇಕೆಂದು ತೋಚಲಿಲ್ಲ. ಬೇರೆಯವರೆಲ್ಲ ತಮ್ಮ ಪಾಡಿಗೆ ತಾವು ನಿದ್ದೆ ಮಾಡುತ್ತಿದ್ದರು.

ವಿನ್ಸೆಂಟ್ ಮತ್ತೊಂದು ಹಾಸಿಗೆಯ ಬಳಿ ಹೋಗಿ, ಪರದೆ ಸರಿಸಿ, ಮಲಗಿದ್ದವನನ್ನು ಎಬ್ಬಿಸಿದ. ಆ ಮನುಷ್ಯ ಕಣ್ಣು ಬಿಟ್ಟನಾದರೂ, ವಿನ್ಸೆಂಟ್‌ನನ್ನು ಪೆದ್ದುಪೆದ್ದಾಗಿ ನೋಡಿದ.

"ಎದ್ದೇಳು. ನನಗೆ ಸ್ವಲ್ಪ ಸಹಾಯಮಾಡು. ನಾವು ಅವನನ್ನು ಸಮಾಧಾನ ಮಾಡದಿದ್ದರೆ, ಏನಾದರೂ ಮಾಡಿಕೊಂಡು ಬಿಡ್ತಾನೆ."

ಹಾಸಿಗೆಯಲ್ಲಿದ್ದ ಆ ಮನುಷ್ಯ ಬಾಯಿಂದ ಜೊಲ್ಲು ಸುರಿಸುತ್ತ, ಹುಚ್ಚುಚ್ಚಾಗಿ ಮಾತಾಡುತ್ತಾ ಕಿರುಚತೊಡಗಿದ.

"ಬೇಗ. ಅವನನ್ನು ಹಿಡಿದುಕೊಳ್ಳಬೇಕಾದರೆ ಇಬ್ಬರು ಬೇಕಾಗುತ್ತೆ."

ವಿನ್ಸೆಂಟ್‌ಗೆ ತನ್ನ ಭುಜದ ಮೇಲೆ ಯಾರೋ ಕೈಯಿಟ್ಟಂತಾಯಿತು. ತಿರುಗಿ ನೋಡಿದ. ತನ್ನ ಹಿಂದೆ ವಯಸ್ಸಾದವರೊಬ್ಬರು ನಿಂತಿದ್ದರು.

"ಇವನ ಬಗ್ಗೆ ತಲೆಕೆಡಿಸಿಕೊಳ್ಳುವುದರಿಂದ ಪ್ರಯೋಜನವಿಲ್ಲ. ಅವನೊಬ್ಬ ಈಡಿಯಟ್. ಇಲ್ಲಿಗೆ ಬಂದಾಗಿನಿಂದ ಒಂದು ಶಬ್ದ ಅವನಿಂದ ಬಂದಿಲ್ಲ. ಬಾ ನಾವಿಬ್ಬರೂ ಹುಡುಗನನ್ನು ಸಮಾಧಾನ ಮಾಡೋಣ" ಎಂದು ಹೇಳಿದ.

ಆ ಯುವಕ ತನ್ನ ಹಾಸಿಗೆಯಲ್ಲಿ ಒಂದು ತೂತು ಮಾಡಿದ್ದ. ಅದರ ಮೇಲೆ ಮೊಣಕಾಲೂರಿ ಕುಳಿತು, ಒಳಗಿದ್ದ ಹುಲ್ಲು ಮತ್ತು ಇತರೆ ವಸ್ತುಗಳನ್ನು ಎಳೆದೆಳೆದು ಚೆಲ್ಲುತ್ತಿದ್ದ. ವಿನ್ಸೆಂಟ್‌ನನ್ನು ನೋಡಿದ ಕೂಡಲೇ, ಕಾನೂನಿಗೆ ಸಂಬಂಧಪಟ್ಟ ಕೊಟೇಷನ್‌ಗಳನ್ನು ಗಟ್ಟಿಯಾಗಿ ಹೇಳತೊಡಗಿದ. ವಿನ್ಸೆಂಟ್‌ನ ಎದೆಗೆ ಗುದ್ದಿದ.

"ಹೌದೌದು. ನಾನು ಅವನನ್ನು ಕೊಂದೆ! ಆದರೆ ಅವನನ್ನು ಅದಕ್ಕಾಗಿ ಕೊಲ್ಲಲಿಲ್ಲ ಮಿಸ್ಟರ್ ಮೌನೆತ್-ಸಲ್ಲಿ. ಹೋದ ಬುಧವಾರ ಅಲ್ಲ. ಅವನ ದುಡ್ಡಿಗಾಗಿ! ನೋಡು ಇಲ್ಲಿದೆ! ನನ್ನ ಹತ್ತಿರವೇ ಇದೆ! ಈ ಹಾಸಿಗೇಲಿ ಬಚ್ಚಿಟ್ಟಿದ್ದೀನಿ. ನಿಮಗೆ ಹುಡುಕಿ ಕೊಡ್ತೀನಿ. ಗುಪ್ತಚರ ಪೋಲೀಸ್ ನನ್ನ ಹಿಂದೆ ಬರೋದನ್ನ ತಡೆಯಿರಿ. ಅವನನ್ನು ಕೊಂದಿದ್ದರೂ ನಾನು ಫ್ರೀಯಾಗಿ ಓಡಾಡಬಲ್ಲೆ......ಕೇಸ್ ಪ್ರೂವ್ ಮಾಡಲು ಹೇಳ್ತಿದ್ದೆ!..... ಹಾಸಿಗೆಯೊಳಗಿಂದ ಹೊರಗೆ ತೆಗೀತೇನೆ!"

"ಅವನ ಇನ್ನೊಂದು ತೋಳನ್ನು ಹಿಡಿದುಕೋ" – ಹಿರಿಯ ಹೇಳಿದ.

ಇಬ್ಬರೂ ಅವನನ್ನು ಹಾಸಿಗೆ ಮೇಲೆ, ಹಿಡಿದು ಮಲಗಿಸಿದರು. ಅವನ ಬಡಬಡಿಕೆ, ಕಿರುಚಾಟಗಳು ಮುಂದುವರೆದು, ದಣಿದು ಸುಸ್ತಾದ ಬಳಿಕ ನಿದ್ದೆ ಮಾಡಿದ.

ವಯಸ್ಸಾದ ಆ ಮನುಷ್ಯ ವಿನ್ಸೆಂಟ್‌ನ ಪಕ್ಕಕ್ಕೆ ಬಂದು ಕುಳಿತ.

"ಆ ಹುಡುಗ ಲಾ ಓದುತ್ತಿದ್ದ. ಅಗತ್ಯಕ್ಕಿಂತ ಹೆಚ್ಚಾಗಿ ಮಿದುಳಿಗೆ ಕೆಲಸ ಕೊಟ್ಟ. ಈ ಬಗೆಯ ಉದ್ವಿಗ್ನತೆ, ಹತ್ತು ದಿನಕ್ಕೊಮ್ಮೆ ಬರುತ್ತೆ, ಆದರೆ ಯಾರಿಗೂ ತೊಂದರೆ ಮಾಡೊಲ್ಲ. ಗುಡ್‌ನೈಟ್ ಮಿಸ್ಟರ್" ಎಂದು ಹೇಳಿ ತನ್ನ ಹಾಸಿಗೆಗೆ ಹೋಗಿ ಮಲಗಿದ.

ವಿನ್ಸೆಂಟ್ ಮತ್ತೆ ಕಿಟಕಿಯ ಬಳಿಗೆ ನಡೆದು, ಕಣಿವೆಯ ಕಡೆ ನೋಡಿದ. ಸೂರ್ಯೋದಯಕ್ಕೆ ಇನ್ನೂ ಬಹಳ ಸಮಯವಿತ್ತು. ಏನೂ ಕಾಣಿಸುತ್ತಿರಲಿಲ್ಲ. ಕೇವಲ ಬೆಳಗಿನ ನಕ್ಷತ್ರವೊಂದು ಮಾತ್ರ ಮಿಣುಕು ಮಿಣುಕೆಂದು ಹೊಳೆಯುತ್ತಿತ್ತು. ತಾನು ಪೈಂಟ್ ಮಾಡಿದ್ದ. ಬೆಳಗಿನ ನಕ್ಷತ್ರದ ನೆನಪಾಯಿತು. ಇಡೀ ವಿಶ್ವದ ಭೂಮತೆ, ವ್ಯಾಪಕ ಪ್ರಶಾಂತತೆಯನ್ನು ಸೂಚಿಸುತ್ತಿತ್ತು..... ಅದರ ಜೊತೆಗೆ ಮನುಷ್ಯನ ಅಲ್ಪತೆಯೂ ಧ್ವನಿತವಾಗುತ್ತಿತ್ತು.

-೨-

ಮಾರನೇ ದಿನ ಬೆಳಿಗ್ಗೆ ಉಪಾಹಾರ ಆದ ಮೇಲೆ, ಆ ವ್ಯಕ್ತಿಗಳೆಲ್ಲ ಗಾರ್ಡನ್‌ಗೆ ಹೋದರು. ಹಿಂಬದಿಯ ಗೋಡೆ ಕಡೆಯಿಂದ ನೋಡಿದರೆ ಬೋಳು ಬೋಳಾದ ಗುಡ್ಡಗಳು, ರೋಮನರು ಅಲ್ಲಿಂದ ಹೋದ ಮೇಲೆ ಪಾಳು ಬಿದ್ದ ಪ್ರದೇಶಗಳು ಕಾಣಿಸುತ್ತಿದ್ದವು. ಒಳರೋಗಿಗಳು ಯಾವುದೇ ಭಾವ ಪ್ರದರ್ಶನವಿಲ್ಲದೆ, ಯಾಂತ್ರಿಕವಾಗಿ ಆಡುತ್ತಿದ್ದುದನ್ನು ವಿನ್ಸೆಂಟ್ ಗಮನಿಸಿದ. ಕಲ್ಲಿನ ಬೆಂಚಿನ ಮೇಲೆ ಕುಳಿತು, ಐವೀ ಬಳ್ಳಿಯಿಂದ ಸುತ್ತಿಕೊಂಡ ಮರಗಳನ್ನು ಮತ್ತು ಕೆಳಗೆ ಬೆಳೆದಿದ್ದ ತಿಳಿನೀಲಿಯ ಹೂಗಳ ಪುಟ್ಟ ಪುಟ್ಟ ಗಿಡಗಳನ್ನು ಒಂದೇ ಸಮನೆ ವೀಕ್ಷಿಸುತ್ತಿದ್ದ. ಸಿಸ್ಟರ್ಸ್ ಅದೇ ದಾರಿಯಿಂದ, ರೋಮನ್ ಚಾಪೆಲ್ ಕಡೆ ಹೊರಟರು. ಬೆಳಗಿನ ಪ್ರಾರ್ಥನೆ ಹೇಳುತ್ತಾ ಜಪಸರದ ಮಣಿಗಳನ್ನು ಎಣಿಸುತ್ತಿದ್ದರು.

ಸ್ವಲ್ಪ ಹೊತ್ತು ಆಡಿದ ನಂತರ, ದಣಿವಾರಿಸಿಕೊಳ್ಳಲೆಂದು ಆ ರೋಗಿಗಳು ತಮ್ಮ ವಾರ್ಡಿಗೆ ಹೊರಟರು. ಮತ್ತೆ ಹೊತ್ತಿಸಿರದ ಸ್ಟೋವ್ ಸುತ್ತಲೂ ಕುಳಿತರು. ಅವರ ಸೋಮಾರಿತನದ ನಡವಳಿಕೆ ವಿನ್ಸೆಂಟ್‌ಗೆ ಅಚ್ಚರಿ ಮೂಡಿಸಿತು. ಯಾಕೆ ಅವರು ಒಂದು ನ್ಯೂಸ್ ಪೇಪರನ್ನಾದರೂ ಓದುವುದಿಲ್ಲ ಎಂದು ಪ್ರಶ್ನಿಸಿಕೊಂಡ. ಮತ್ತೆ ಅವನು ಗಾರ್ಡನ್‌ಗೆ ಹೋಗಿ ಸ್ವಲ್ಪ ಹೊತ್ತು ಅಡ್ಡಾಡಿದ. ಸೈಂಟ್ ಪಾಲ್‌ನ ಸೂರ್ಯನೂ ಮೃತಜೀವಿಯಾಗಿ ಕಾಣಿಸಿದ.

ಹಳೆಯ ಮೊನಾಸ್ಟರಿಯನ್ನು ಸಾಂಪ್ರದಾಯಿಕ ಚೌಕಾಕಾರದಲ್ಲಿ ನಿರ್ಮಿಸಲಾಗಿತ್ತು. ಉತ್ತರಕ್ಕೆ ಮೂರನೇ ದರ್ಜೆಯ ರೋಗಿಗಳ ವಾರ್ಡ್ ಇತ್ತು. ಪೂರ್ವಕ್ಕೆ ಡಾಕ್ಟರ್ ಪೆರೋನ್‌ನ ಕ್ವಾರ್ಟರ್ಸ್, ಚಾಪೆಲ್, ಹತ್ತನೇ ಶತಮಾನದ ಮಠವಿತ್ತು. ದಕ್ಷಿಣಕ್ಕೆ ಎರಡನೇ ದರ್ಜೆಯ ರೋಗಿಗಳ ವಾರ್ಡಿತ್ತು. ಪಶ್ಚಿಮಕ್ಕೆ ಅಪಾಯಕಾರಿ ರೋಗಿಗಳು ಇರುತ್ತಿದ್ದ ಅಂಗಳವಿದ್ದು, ಅದರ ಸುತ್ತಲೂ ವತ್ತರದ ಗಟ್ಟಿಮಣ್ಣಿನ ಪ್ರಾಕಾರವನ್ನು ನಿರ್ಮಿಸಲಾಗಿತ್ತು ಹೊರಗೆ ಹೋಗಲು ಮಾತ್ರವೇ ಬಳಸುತ್ತಿದ್ದ ಗೇಟ್ ಬಾಗಿಲಿದ್ದು ಅದಕ್ಕೆ ದಪ್ಪ ಬೀಗವನ್ನು ಹಾಕಿತ್ತು. ಹನ್ನೆರಡು ಅಡಿಗಳ ಎತ್ತರವಿದ್ದ ಗೋಡೆಯನ್ನು ಹತ್ತುವುದು ಯಾರಿಗೂ ಸಾಧ್ಯವಿರಲಿಲ್ಲ.

ವಿನ್ಸೆಂಟ್ ಕಾಡುಪೊದೆಯಂತೆ ಬೆಳೆದಿದ್ದ ಗುಲಾಬಿಗಿಡಗಳ ಬಳಿಯಿದ್ದ ಕಲ್ಲುಬೆಂಚಿಗೆ ಹಿಂತಿರುಗಿ ಕುಳಿತುಕೊಂಡ. ಸೈಂಟ್‌ಪಾಲ್‌ಗೆ ತಾನು ಬರಲು ಕಾರಣವೇನೆಂಬುದನ್ನು ಸ್ಪಷ್ಟವಾಗಿ ತಿಳಿಯಲು ಪ್ರಯತ್ನಿಸುತ್ತಿದ್ದ. ಥಟ್ಟನೆ ಅವನಲ್ಲಿ ಭಯಂಕರ ಭೀತಿಯೊಂದು ಮೂಡಿ, ಯೋಚಿಸುವುದನ್ನು ತಡೆಯಿತು. ಅವನ ಮನಸ್ಸಿಗೆ, ಭರವಸೆಯಾಗಲೀ, ಬಯಕೆಯಾಗಲಿ ಇಲ್ಲವೆಂಬ ಅರಿವು ಮೂಡಿತು.

ಕ್ವಾರ್ಟರ್ಸ್ ಕಡೆ ಹೆಜ್ಜೆ ಹಾಕಿದ. ಕಟ್ಟಡದ ಪೋರ್ಟಿಕೋದಲ್ಲಿ ಹೆಜ್ಜೆ ಇಡುತ್ತಿದ್ದಂತೆ ನಾಯಿ ಬೊಗಳುವುದು ಕೇಳಿಸಿತು. ವಿಚಿತ್ರವಾಗಿ ಕೇಳಿಸುತ್ತಿದ್ದುದು ಈಗ ತೋಳದ ಊಳಿನಂತೆ ಕೇಳಿಸಿತು.

ವಿನ್ಸೆಂಟ್ ವಾರ್ಡಿನ ಉದ್ದಕ್ಕೂ ಹೆಜ್ಜೆ ಹಾಕಿದ. ದೂರದಲ್ಲಿ ಮೂಲೆಯೊಂದರಲ್ಲಿ, ಗೋಡೆಗೆ ಮುಖಮಾಡಿಕೊಂಡು ಮೊನ್ನೆರಾತ್ರಿ ನೋಡಿದ್ದ ಮುದುಕ ಕುಳಿತಿದ್ದ. ಮೇಲೆ ಛಾವಣಿ ನೋಡುತ್ತಾ, ತನ್ನ ಶಕ್ತಿ ಮೀರಿದ ಧ್ವನಿಯಲ್ಲಿ ಗಟ್ಟಿಯಾಗಿ ಕೂಗುತ್ತಿದ್ದ. ಅದು ಮನುಷ್ಯರ ಕೂಗಿನಂತೆ ಇರದೆ, ತೋಳ ಊಳಿಡುತ್ತಿದ್ದಂತೆನಿಸಿತು. ಗೋಳಾಟದ ಈ ಧ್ವನಿ ಕೋಣೆಯನ್ನೆಲ್ಲ ಆವರಿಸಿತು.

"ನಾನೇಂಥಾ ಪ್ರಾಣಿ? ಇಲ್ಲಿ ಬಂದಿಯಾಗಿದ್ದೇನೆಯೇ?" ತನ್ನನ್ನು ತಾನೇ ಪ್ರಶ್ನಿಸಿಕೊಂಡ.

ಸ್ಟೋವ್ ಬಳಿಯಿದ್ದವರ್ಯಾರೂ ಇವನ ಕಡೆ ಕಣ್ಣೆತ್ತಿಯೂ ನೋಡಲಿಲ್ಲ. ಮೂಲೆಯಲ್ಲಿದ್ದ ಪ್ರಾಣಿಯ ಆರ್ತಕೂಗು ಮುಂದುವರೆದಿತ್ತು.

"ಈತನಿಗೆ ಏನಾದರೂ ಸಹಾಯ ಮಾಡಬೇಕು" ಎಂದು ಗಟ್ಟಿಯಾಗಿ ಹೇಳಿಕೊಂಡ.

ಕಂದು ಕೂದಲಿನ ಹುಡುಗ ಅವನನ್ನು ತಡೆದ.

"ಅವನನ್ನು ಅವನ ಪಾಡಿಗೆ ಬಿಟ್ಟರೆ ಒಳ್ಳೇದು...... ಮಾತಾಡಿಸೋಕೆ ಹೋದರೆ ನಿಮ್ಮ ಮೇಲೇ ಎಗರಿ ಬೀಳ್ತಾನೆ. ಇನ್ನೊಂದೆರಡು ಗಂಟೆಗಳಲ್ಲಿ ಸರಿ ಹೋಗ್ತಾನೆ.

ಮೊನಾಸ್ಟರಿಯ ಗೋಡೆಗಳು ಸಾಕಷ್ಟು ದಪ್ಪವಾಗಿದ್ದವು. ಆದರೂ ಕೂಡಾ ರೋಗಿಗಳ ನರಳಾಟ, ಚೀರಾಟ, ಕೂಗುಗಳು ಕೇಳಿ ಬರುತ್ತಿದ್ದವು. ಪ್ರಶಾಂತ ಮೌನದ ಎದೆ ಸೀಳಿಕೊಂಡು ಬರುತ್ತಿದ್ದವು! ಇಡೀ ದಿನ, ಮಧ್ಯಾಹ್ನ ಗಾರ್ಡನ್‌ನ ಮೂಲೆಯೊಂದರಲ್ಲಿ ಕುಳಿತು, ಎದೆ ಹಿಂಡುವ ಈ ಚಿತ್ಕಾರಗಳಿಂದ ದೂರವಿರಲು ಪ್ರಯತ್ನಿಸುತ್ತಿದ್ದ.

ರಾತ್ರಿ ಊಟದ ಸಮಯದಲ್ಲಿ, ಚಿಕ್ಕ ಹುಡುಗನೊಬ್ಬ ಚಾಕುವನ್ನು ಕೈಲಿ ಹಿಡಿದು ಚಂಗನೆ ಎದ್ದು ನಿಂತ. ಚಾಕುವನ್ನು ಎದೆಯ ಬಳಿಗೆ ಹಿಡಿದು,

"ಈಗ ಸಮಯ ಬಂದಿದೆ. ನಾನು ಸಾಯುತ್ತೇನೆ!" ಕಿರುಚುತ್ತಾ ಹೇಳಿದ.

ಅವನ ಬಲಗಡೆಯಿದ್ದೊಬ್ಬ ವ್ಯಕ್ತಿ ಎದ್ದು ಅವನ ತೋಳನ್ನು ಹಿಡಿದುಕೊಂಡ.

"ಇವತ್ತು ಬೇಡ ರೇಮಂಡ್! ಇವತ್ತು ಭಾನುವಾರ!" ಎಂದು ಹೇಳಿದ.

"ಹೌದೌದು ಇವತ್ತು ಭಾನುವಾರ! ನಾನು ಬದುಕೊಲ್ಲ! ನನಗೆ ಬದುಕೋದು ಬೇಡ! ಬಿಡು ನನ್ನ ತೋಳನ್ನು! ನಾನು ಸಾಯಲೇ ಬೇಕು!"

"ನಾಳೆ ಸಾಯುವಿಯಂತೆ, ರೇಮಂಡ್! ಇವತ್ತು ದಿನ ಚೆನ್ನಾಗಿಲ್ಲ."

"ಬಿಡು, ಕೈನ! ಈ ಚಾಕುವಿನಿಂದ ತಿವಿದುಕೊಳ್ಳುತ್ತೇನೆ! ನಾನು ಸಾಯಲೇಬೇಕು!"

"ಸರಿ, ಸರಿ! ಹಾಗೇ ಮಾಡು! ಆದರೆ ಈಗಲ್ಲ!"

ಅವನು ರೇಮಂಡ್ ಕೈಯ್ಯಿಂದ ಚಾಕು ಕಸಿದುಕೊಂಡ. ಅಳುತ್ತ, ಬಿಕ್ಕುತ್ತಿದ್ದ ಅವನನ್ನು ವಾರ್ಡ್‌ಗೆ ಕರೆದೊಯ್ದ.

ವಿನ್ಸೆಂಟ್ ತನ್ನ ಪಕ್ಕದ ಹಾಸಿಗೆಯಲ್ಲಿ. ಕೆಂಪು ರಿಮ್‌ನ ಕನ್ನಡಕದ ವ್ಯಕ್ತಿಯ ಕಡೆ ತಿರುಗಿದ. ಸೂಪನ್ನು ಬಾಯಿ ಹತ್ತಿರ ಕೊಂಡೊಯ್ಯಲು ಪ್ರಯತ್ನಿಸುತ್ತಿದ್ದ ಅವನ ಬೆರಳುಗಳು ನಡುಗುತ್ತಿದ್ದುದನ್ನು ಗಮನಿಸಿದ.

"ಏನಾಗಿದೆ ಅವನಿಗೆ?" ಕೇಳಿದ.

ಸೂಪ್‌ನ ಸ್ಪೂನನ್ನು ಕೆಳಗಿಳಿಸಿ, ಹೇಳಿದ.

"ನಾನು ಸಾಯ್ತೀನಿ, ನಾನು ಸಾಯ್ತೀನಿ ಅಂತ ಹೇಳದೆ ಇರೋ ದಿನವೇ ಇಲ್ಲ."

"ಸಾಯಬೇಕೂಂತ ಇಲ್ಲಿ ಯಾಕೆ ಪ್ರಯತ್ನಿಸ್ತಾನೆ? ಯಾರೂ ಇಲ್ಲದಿರೋ ಹೊತ್ತಲ್ಲಿ ಅಥವಾ ಎಲ್ಲರೂ ಮಲಗಿರುವಾಗಲೇ, ಯಾರಿಗೂ ಗೊತ್ತಾಗದ ಹಾಗೆ ಚಾಕುವನ್ನು ಕದ್ದು, ಇರಿದುಕೊಳ್ಳುವುದಿಲ್ಲವೇಕೆ?"

"ಅವನಿಗೆ ಸಾಯುವ ಇಚ್ಛೆ ಇರಲಾರದು. ಮಿಸ್ಟರ್."

ಮಾರನೆದಿನ, ಅವರೆಲ್ಲ ಆಟ ಆಡತ್ತಿರುವಾಗ, ಒಬ್ಬ ಇದ್ದಕ್ಕಿದ್ದಂತೆ ಕೆಳಗೆ ಬಿದ್ದು ಕಂಪಿಸಲು ತೊಡಗಿದ.

"ಬೇಗ ಬೇಗ. ಇದು ಎಪಿಲೆಪ್ಟಿಕ್ ಫಿಟ್ಸ್" ಯಾರೋ ಗಟ್ಟಿಯಾಗಿ ಹೇಳಿದರು.

"ಅವನ ಕೈಕಾಲುಗಳನ್ನು ಹಿಡಿದುಕೊಳ್ಳಿ."

ನಾಲ್ಕು ಜನ ಬೇಕಾಯಿತು, ಈ ಕೆಲಸಕ್ಕೆ! ಆದರೆ ಮೂರ್ಛೆಗೆ ಒಳಗಾದ ವ್ಯಕ್ತಿಗೆ ಒಂದು ಡಜನ್ ಮಂದಿಯ ಶಕ್ತಿಯ ಆವಾಹನೆಯಾಗಿತ್ತು. ಯುವಕನೊಬ್ಬ ತನ್ನ ಬಳಿಯಿದ್ದ ಸ್ಪೂನ್ ತೆಗೆದು, ಹಲ್ಲುಗಳ ಮಧ್ಯೆ ಇರಿಸಿದ.

"ಅವನ ತಲೆ ಹಿಡಿದುಕೊಳ್ಳಿ." ವಿನ್ಸೆಂಟ್ ಕೂಗಿ ಹೇಳಿದ.

ಮೂರ್ಛೆ ಬಿದ್ದ ವ್ಯಕ್ತಿ ಮೇಲೆ ಕೆಳಗೆ ಎದ್ದು ಬಿದ್ದು ಮಾಡುತ್ತಿದ್ದ. ಮೂರ್ಛೆ ಅತಿರೇಕದ ಸ್ಥಿತಿಯನ್ನು ತಲುಪಿತು. ತೇಲುಗಣ್ಣು ಮೇಲುಗಣ್ಣು ಹಾಕುತ್ತಿದ್ದ. ಬಾಯಿಂದ, ಎರಡೂ ಕಡೆಗಳಲ್ಲಿ ನೊರೆ ಕಾಣಿಸಿಕೊಂಡಿತು.

"ಬಾಯಿಗೆ ಸ್ಪೂನ್ ಯಾಕಿಟ್ಟೆ?" ವಿನ್ಸೆಂಟ್ ಕೇಳಿದ.

"ನಾಲಿಗೆ ಕಚ್ಚಿಕೊಳ್ಳದಿರಲು."

ಒಂದು ಗಂಟೆಯ ನಂತರ, ಕಂಪಿಸುತ್ತಿದ್ದ ವ್ಯಕ್ತಿ, ಪ್ರಜ್ಞಾಹೀನ ಸ್ಥಿತಿಗೆ ತಲುಪಿದ. ವಿನ್ಸೆಂಟ್ ಮತ್ತು ಇನ್ನಿಬ್ಬರು ಸೇರಿ ಅವನನ್ನು ಹಾಸಿಗೆಗೆ ಎತ್ತಿ ಮಲಗಿಸಿದರು. ಅಲ್ಲಿಗೆ ಈ ಪ್ರಸಂಗ ಮುಗಿಯಿತು. ಯಾರೂ ಅದರ ಬಗ್ಗೆ ಮಾತಾಡಲಿಲ್ಲ.

ಹದಿನೈದು ದಿನ ಕಳೆಯುವುದರೊಳಗೆ, ವಿನ್ಸೆಂಟ್ ತನ್ನ ಜೊತೆಗಾರರ, ಒಬ್ಬೊಬ್ಬರ ವಿಶಿಷ್ಟವಾದ ಖಾಯಿಲೆಗಳನ್ನು ಪರಿಚಯ ಮಾಡಿಕೊಂಡಿದ್ದ. ಒಬ್ಬ ಹುಚ್ಚ ಬಟ್ಟೆ ಹರಿದು, ಕೈಗೆ ಸಿಕ್ಕಿದ್ದನ್ನೆಲ್ಲ, ಎಸೆಯುತ್ತಿದ್ದ; ಇನ್ನೊಬ್ಬ, ತೋಳದ ರೀತಿಯಲ್ಲಿ ಊಳಿಡುತ್ತಿದ್ದ. ಇನ್ನೂ ಒಬ್ಬ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನ ಮಾಡುತ್ತಿದ್ದ. ಮಗದೊಬ್ಬ ಅತಿ

ಭಾವುಕತೆ – ಉದ್ರೇಕಗಳಿಗೆ ಒಳಗಾಗುತ್ತಿದ್ದ. ಮಗದೊಬ್ಬ ಮೂರ್ಛೆ ರೋಗಕ್ಕೆ ಗುರಿಯಾಗುತ್ತಿದ್ದ. ಕಂದು ಬಣ್ಣದ ಕೂದಲಿನ ಹುಡುಗನಂತೂ ಗುಪ್ತ ಪೋಲಿಸರ ಭ್ರಮೆಯಿಂದ ನರಳುತ್ತಿದ್ದ.

ದಿನವೊಂದಾದರೂ ಇಂತಹ ಪ್ರಸಂಗಗಳಿಲ್ಲದೆ ಇರುತ್ತಿರಲಿಲ್ಲ. ಪ್ರತಿದಿನವೂ ಯಾರಾದರೂ ಒಬ್ಬರು ಈ ಬಗೆಯ ಉದ್ರೇಕಕ್ಕೆ ಒಳಗಾಗುತ್ತಿದ್ದರು. ಅವರನ್ನು ಶಾಂತಗೊಳಿಸಲು, ವಿನ್ಸೆಂಟ್ ತಪ್ಪದೆ ಹೋಗುತ್ತಿದ್ದ, ಮೂರನೇ ದರ್ಜೆಯ ವಾರ್ಡಿನಲ್ಲಿ ರೋಗಿಗಳಿಗೆ ಪರಸ್ಪರ ಸಹಾಯ ಮಾಡಿಕೊಳ್ಳುವುದು ಡಾಕ್ಟರು, ನರ್ಸುಗಳಾಗಿ ವರ್ತಿಸುವುದು ಅನಿವಾರ್ಯವಾಗಿತ್ತು.

ಡಾಕ್ಟರ್ ಪೆರೋನ್ ವಾರಕ್ಕೊಂದು ಸಲ ಮಾತ್ರವೇ ಬಂದು ವಿಚಾರಿಸುತ್ತಿದ್ದರು. ಇನ್ನು ನರ್ಸುಗಳು, ಸೇವಕರು ಮೊದಲಾದವರ ಗಮನವೆಲ್ಲಾ ಮೊದಲ ಮತ್ತು ಎರಡನೇ ದರ್ಜೆಯ ವಾರ್ಡುಗಳ ಕಡೆಗೇ ಇರುತ್ತಿತ್ತು. ಮೂರನೇ ದರ್ಜೆ ವಾರ್ಡಿನಲ್ಲಿದ್ದವರೆಲ್ಲರೂ ಕಷ್ಟಬಂದಾಗ, ತೊಂದರೆಯಾದಾಗ, ತುಂಬ ಸಮಾಧಾನದಿಂದ ಬಂದು ಒಬ್ಬರಿಗೊಬ್ಬರು ನೆರವಾಗುತ್ತಿದ್ದರು. ಹೀಗೆ ನೆರವಾಗುವುದು ಅನಿವಾರ್ಯವೂ ಆಗಿತ್ತು. ಯಾಕೆಂದರೆ ಪ್ರತಿಯೊಬ್ಬರಿಗೂ ಒಂದಲ್ಲ ಒಂದು ದಿನ ಇಂಥ ಸಂಕಷ್ಟ ಅನಿವಾರ್ಯವಾಗಿ ಎದುರಾಗುತ್ತಿತ್ತು.

ಹುಚ್ಚರಲ್ಲಿಯೂ ಭ್ರಾತೃತ್ವ ಭಾವನೆಯಿತ್ತು.

ವಿನ್ಸೆಂಟ್‌ಗೆ ತಾನು ಇಲ್ಲಿ ಬಂದದ್ದು ಒಳ್ಳೆಯದೆನಿಸಿತು. ತಾನೂ ಕೂಡಾ ಇಂತಹ ಮತಿಭ್ರಮಣೆಗೆ ಒಳಗಾಗುವ ಸಾಧ್ಯತೆಯ ಭೀತಿ ದೂರವಾಯಿತು. ಕ್ರಮೇಣ, ಮತಿವಿಕಲ್ಪವೆನ್ನುವುದು ಎಲ್ಲ ರೋಗಗಳಂತೆ ಇದೂ ಒಂದು ರೋಗ ಮಾತ್ರ ಎಂದು ಅರ್ಥಮಾಡಿಕೊಂಡ. ಮೂರನೇ ವಾರದಷ್ಟು ಹೊತ್ತಿಗೆ ತನ್ನ ಜೊತೆಗಾರರು ಕ್ಯಾನ್ಸರ್ ರೋಗಕ್ಕೆ ಬಲಿಯಾದವರಿಗಿಂತ, ಭಯಾನಕವಲ್ಲ ಎಂದು ಒಪ್ಪಿಕೊಂಡ.

ಎಷ್ಟೋ ಸಲ ಈಡಿಯಟ್ ಜೊತೆ ಕೂತು ಹರಟೆ ಹೊಡೆದ. ಅವನ ಮಾತುಗಳು ಅಸ್ಪಷ್ಟವಾಗಿರುತ್ತಿದ್ದವು. ಆದರೂ ತನ್ನನ್ನು ಅರ್ಥಮಾಡಿಕೊಂಡಿದ್ದಾನೆ ಎಂದು ತಿಳಿದು ಸಂತೋಷಪಟ್ಟ, ಸಿಸ್ಟರ್ಸ್, ಅಗತ್ಯವಾಗಿದ್ದರೆ ಮಾತ್ರವೇ ಗಂಡಸರ ಜೊತೆ ಮಾತಾಡುತ್ತಿದ್ದರು. ವಾರಕ್ಕೊಮ್ಮೆ, ಡಾಕ್ಟರ್ ಪೆರೋನ್ ಜೊತೆ ಮಾತಾಡುವುದಕ್ಕೆ, ಅದೂ ಐದು ನಿಮಿಷ ಮಾತ್ರ!...... ಅವಕಾಶ ಸಿಗುತ್ತಿದ್ದುದನ್ನು ಬಿಟ್ಟರೆ, ಬೇರೆಂದೂ ಮಾತುಕತೆ ಇರಲಿಲ್ಲ.

"ಡಾಕ್ಟರ್, ನನ್ನ ವಾರ್ಡಿನ ನನ್ನ ಜೊತೆಗಾರರು ಯಾಕೆ ಮಾತಾಡುವುದಿಲ್ಲ ಹೇಳಿ. ಅವರು ಚೆನ್ನಾಗಿ ಇದ್ದಾಗ, ಅವರಲ್ಲಿ ಕೆಲವರಾದರೂ ಬುದ್ಧಿವಂತರ ಹಾಗೆ ಕಾಣಿಸುತ್ತಾರೆ. ಆದರೆ ಅವರೇಕೆ, ಮಾತೇ ಆಡುವುದಿಲ್ಲ?"

"ಅವರಿಗೆ ಮಾತಾಡೋಕೆ ಆಗೊಲ್ಲ. ಮಾತಾಡಲು ಶುರುಮಾಡಿದ ಕ್ಷಣದಲ್ಲಿಯೇ ಉದ್ವಿಗ್ನತೆಗೆ, ಭಾವಾವೇಶಕ್ಕೆ ಒಳಗಾಗಿ ಬಿಡುತ್ತಾರೆ, ಮತ್ತು ಕೂಡಲೇ ಮೂರ್ಛಾವಸ್ಥೆಗೆ ಹೋಗಿ ಬಿಡುತ್ತಾರೆ. ಅದಕ್ಕಾಗಿ, ತಮ್ಮ ಸಮಸ್ಯೆಗೆ ಪರಿಹಾರವನ್ನು, ಮಾತಾಡದೆ ಮೌನವಾಗಿರುವುದರಲ್ಲಿ ಕಂಡುಕೊಂಡಿದ್ದಾರೆ."

"ಹಾಗಿದ್ದ ಮೇಲೆ, ಸಾಯುವುದೇ ವಾಸಿಯಲ್ಲವೇ?"

"ಪೆರೋನ್, ಭುಜ ಕುಣಿಸಿ, "ಅದು ಅವರವರ ವೈಯಕ್ತಿಕ ಅಭಿಪ್ರಾಯ."

"ಹೋಗಲಿ, ಕಡೇ ಪಕ್ಷ ಓದುವುದನ್ನಾದರೂ ಮಾಡಬಹುದಲ್ಲ?..... ಪುಸ್ತಕಗಳು ಅವರಿಗೆ....."

"ಓದುವುದರಿಂದ ಪ್ರಚೋದನೆಗೆ ಒಳಗಾಗುತ್ತಾರೆ. ಅಲ್ಲದೆ ಅವರೆಲ್ಲರೂ ಭಯಂಕರ ಮತಿವಿಕಲ್ಪ ಸ್ಥಿತಿಯನ್ನು ತಲುಪಿದವರು. ಇಲ್ಲ ಗೆಳೆಯ ಅವರು ಅವರದೇ ಜಗತ್ತನ್ನು ಸೃಷ್ಟಿಸಿಕೊಂಡು ಅದಕ್ಕೇ ಸೀಮಿತಗೊಂಡು ಉಳಿಯಬೇಕು. ಅವರಿಗಾಗಿ ಸಹಾನುಭೂತಿಯ ಅಗತ್ಯವಿಲ್ಲ. ಡ್ರೈಡನ್ ಏನು ಹೇಳಿದ್ದಾನೆ, ಗೊತ್ತಾ? ಹುಚ್ಚನಾಗುವುದರಲ್ಲಿ ಸಂತೋಷವಿದೆ. ಹುಚ್ಚರು ಮಾತ್ರ ಇದನ್ನು ಅರ್ಥಮಾಡಿಕೊಂಡಿದ್ದಾರೆ ಅಂತ"

ತಿಂಗಳು ಕಳೆಯಿತು. ಬೇರೆ ಎಲ್ಲಿಗಾದರೂ ಹೋಗಬೇಕೆನ್ನುವ ಆಸೆಯೂ ವಿನ್ಸೆಂಟ್‌ನಲ್ಲಿ ಮೊಳೆಯಲಿಲ್ಲ. ಬೇರೆಯವರ ವಿಷಯವೂ ಹಾಗೆಯೇ ಇತ್ತು. ಇಲ್ಲಿಂದ ಹೊರಗೆ ಹೋಗಬೇಕೆನ್ನುವ ಇಚ್ಛೆಯೇ ಎಲ್ಲರಲ್ಲಿ ಸತ್ತುಹೋದ ಹಾಗೆ ಇತ್ತು. ಬಹುಶಃ ಅವರು ಇದರಾಚೆಗಿನ ಜಗತ್ತು ಅವರ ಪಾಲಿಗೆ ಮುಗಿದು ಹೋಗಿದೆ ಎಂದು ಭಾವಿಸಿರಬೇಕು.

ಅಲ್ಲಿಯೇ ಕೊಳೆತು ನಾರುವ ಮನುಷ್ಯರ ವಾಸನೆ ಆ ವಾರ್ಡ್‌ನ್ನು ತುಂಬಿತ್ತು.

ವಿನ್ಸೆಂಟ್, ಮತ್ತೊಮ್ಮೆ ತನ್ನಲ್ಲಿ ಪೈಂಟ್ ಮಾಡುವ ಅದಮ್ಯ ಹಂಬಲ ಪುಟಿದೇಳುವ ಮತ್ತು ಅದಕ್ಕೆ ಬೇಕಾದ ಶಕ್ತಿ ಮೂಡುವ ಕ್ಷಣಗಳಿಗಾಗಿ ಎದುರು ನೋಡುತ್ತಿದ್ದ. ಅವನ ಜೊತೆಗಾರರು ಅಥವಾ ಒಳರೋಗಿಗಳು, ದಿನಕ್ಕೆ ಮೂರು ಹೊತ್ತು ತಿನ್ನುವುದನ್ನು ಬಿಟ್ಟರೆ, ಪೂರ್ತಿ ಸೋಮಾರಿಗಳಾಗಿ ಕೊಳೆಯುತ್ತಿದ್ದರು. ಇದಕ್ಕೆ ವಿರುದ್ಧವಾಗಿ ತಾನಿರಬೇಕೆಂಬ ಯೋಚನೆಯಿಂದ ಊಟ ತಿಂಡಿ ಸರಿಯಾಗಿಲ್ಲದಿದ್ದರೆ, ಸ್ವಲ್ಪವಾದರೂ ಕೆಟ್ಟಿದ್ದರೆ, ತಿನ್ನಲು ನಿರಾಕರಿಸುತ್ತಿದ್ದ. ಬರೀ ಒಂದಿಷ್ಟು ಬ್ಲ್ಯಾಕ್ ಬ್ರೆಡ್ ಮತ್ತು ಸೂಪ್‌ಗಳಿಂದಲೇ ಕಾಲ ತಳ್ಳುತ್ತಿದ್ದ. ಥಿಯೋ ಅವನಿಗೆ ಷೇಕ್ಸ್‌ಪಿಯರ್‌ನ 'ರಿಚರ್ಡ್ ದಿ ಸೆಕೆಂಡ್' ಪುಸ್ತಕವನ್ನು ಕಳಿಸಿಕೊಟ್ಟ. ನಂತರ 'ಹೆನ್ರಿ ದಿ ಫೋರ್ತ್, ಹೆನ್ರಿ ದಿ ಫಿಫ್ತ್' ಕೃತಿಗಳನ್ನೂ ಓದಿದ. ತನ್ನ ಮನಸ್ಸನ್ನು ಬೇರೆಡೆಗೆ ತಿರುಗಿಸಲು ಓದುವುದೊಂದು ಅವನಿಗೆ ದಾರಿಯಾಗಿತ್ತು.

ತನ್ನ ಮನಸ್ಸಿನಲ್ಲಿ ದುಃಖ, ವಿಷಾದಗಳು ಮನೆ ಮಾಡದಂತೆ ಎಚ್ಚರಿಕೆ ವಹಿಸಿದ.

ಥಿಯೋಗೆ ಮದುವೆಯಾಯಿತು. ಅವನ ಹೆಂಡತಿ ಜೊಹಾನ್ನ ಆಗಾಗ ಅವನಿಗೆ ಪತ್ರ ಬರೆಯುತ್ತಿದ್ದಳು. ಥಿಯೋನ ಆರೋಗ್ಯವೂ ಸರಿ ಇರಲಿಲ್ಲ. ವಿನ್ಸೆಂಟ್ ಜೊಹಾನ್ನಾಗೆ, ಥಿಯೋನ ಆಹಾರದ ವಿಷಯದಲ್ಲಿ ಜಾಗರೂಕತೆ ವಹಿಸುವಂತೆಯೂ, ಹತ್ತು ವರುಷಗಳು ಹೋಟೆಲ್ ಊಟ ತಿಂದಿರುವುದರಿಂದ ಇನ್ನು ಮುಂದಾದರೂ ಅವನಿಗೆ ಪರಿಪೂರ್ಣವಾದ ಡಚ್ ಆಹಾರವನ್ನು ತಪ್ಪದೆ ಕೊಡಬೇಕೆಂದು ಸಲಹೆ ನೀಡಿ ಬರೆದ ಅವನಿಗೆ ತನ್ನ ಆರೋಗ್ಯದ ಬಗೆಗಿನ ಚಿಂತೆಗಿಂತ ಥಿಯೋನ ಆರೋಗ್ಯ ಅವನನ್ನು ಕಾಡಿತ್ತು.

ಕೆಲಸದಲ್ಲಿ ಮಗ್ನನಾಗುವುದು ತನ್ನ ಸಮಸ್ಯೆಗಳಿಗೆ ಪರಿಹಾರವಾಗುವುದೆಂದು ಅವನಿಗೆ ತಿಳಿದಿತ್ತು. ತನ್ನೆಲ್ಲ ಶಕ್ತಿ ಸಾಮರ್ಥ್ಯಗಳನ್ನು ನಿರಂತರ ಕೆಲಸದಲ್ಲಿ ತೊಡಗಿಸಬೇಕೆಂದುಕೊಂಡ.

ವಾರ್ಡ್‌ನಲ್ಲಿದ್ದ ಮಂದಿಗೆ ಅಲ್ಲಿಯೇ ಕೊಳೆತು ಸಾಯುವುದಲ್ಲದೆ ಬೇರೆ ಮಾರ್ಗವಿರಲಿಲ್ಲ. ಆದರೆ ತನಗೆ ಪೈಂಟಿಂಗ್ ಮಾಡುವ ಶಕ್ತಿಯಿದೆ. ಇದು ತನ್ನನ್ನು ಇಲ್ಲಿಂದ ಹೊರಗೆ ಕೊಂಡೊಯ್ಯಲು, ಒಬ್ಬ ಸಮಚಿತ್ತದ ಆರೋಗ್ಯವಂತ, ಮನುಷ್ಯನಾಗಿ, ಸಂತೋಷದಿಂದ ಬದುಕಲು ಸಹಕರಿಸುತ್ತದೆ.

ಆರನೇವಾರದ ಕಡೆಗೆ ಡಾಕ್ಟರ್ ಪೆರೋನ್ ವಿನ್ಸೆಂಟ್‌ಗೆ, ಸ್ಟುಡಿಯೋ ಆಗಿ ಬಳಸಲು ಒಂದು ಪುಟ್ಟ ಕೋಣೆಯನ್ನು ತೆರವು ಮಾಡಿಕೊಟ್ಟ. ಹಸಿರು–ಬೂದುಬಣ್ಣದ ಪೇಪರ್‌ನಿಂದ ಮಾಡಲಾಗಿತ್ತು. ತಿಳಿಯಾದ ಬಣ್ಣಗಳಿಂದ ಮಾಡಿದ ಗುಲಾಬಿ ಡಿಸೈನ್ ಇದ್ದ ಪರದೆಗಳು, ಸಮುದ್ರ ಹಸಿರು ಬಣ್ಣಗಳಿಂದಾಗಿದ್ದವು. ಯಾರೋ ಶ್ರೀಮಂತ ರೋಗಿಯೊಬ್ಬರು, ತೀರಿಕೊಂಡಿದ್ದರಿಂದ, ಇದೆಲ್ಲವನ್ನೂ ಇಲ್ಲಿಯೇ ಉಳಿಸಿಹೋಗಿದ್ದರು. ಅಲ್ಲೊಂದು ಕಿಟಕಿಯಿದ್ದು ಕಪ್ಪು ಕಂಬಿಗಳಿಂದ ಕೂಡಿತ್ತು. ಆ ಕಿಟಕಿಯಿಂದ ಸ್ವಲ್ಪ ದೂರದಲ್ಲಿ ಧಾನ್ಯದ ಹೊಲ ಇತ್ತು.

ಕಿಟಕಿಯಿಂದ ಕಾಣಿಸುವ ದೃಶ್ಯಗಳನ್ನು ಪೈಂಟ್ ಮಾಡಿದ. ಧಾನ್ಯದ ಹೊಲದಲ್ಲಿ, ಧಾನ್ಯದ ತೆನೆಗಳು, ಭೀಕರ ಬಿರುಗಾಳಿಯಿಂದಾಗಿ ನೆಲದೆಡೆಗೆ ಪೂರ್ತಿಯಾಗಿ ಬಾಗಿದಂತಿದ್ದವು. ಆಲೀವ್ ಮರಗಳ ಬೂದು ಬಣ್ಣದ ಎಲೆಗಳ ಹಿನ್ನೆಲೆಗೆ, ತಗ್ಗು ಪ್ರದೇಶದ ಕಡೆಗೆ ಬೌಂಡ್ರಿ ಗೋಡೆಯಿತ್ತು. ಅಲ್ಲಲ್ಲಿ ಕೆಲವು ಗುಡಿಸಲು, ಗುಡ್ಡಗಳೂ ಕೂಡಾ ಅವನ ಲ್ಯಾಂಡ್‌ಸ್ಕೇಪ್ ಪೈಂಟಿಂಗ್‌ನ ಭಾಗವಾಗಿತ್ತು.

ಉತ್ಸಾಹದಿಂದಲೇ ವಾರ್ಡ್‌ಗೆ ಮರಳಿದ. ಅವನ ಸೃಜನ ಶಕ್ತಿ ಅವನಿಗೆ ಮೋಸ ಮಾಡಿರಲಿಲ್ಲ. ಅದು ಇನ್ನೂ ಅವನಲ್ಲಿ ಉಳಿದಿತ್ತು. ಮತ್ತೊಮ್ಮೆ ನಿಸರ್ಗಕ್ಕೆ ಮುಖಾಮುಖಿಯಾದ. ಕೆಲಸ ಮಾಡಲೇ ಬೇಕೆನ್ನುವ ಅವನ ನಿರ್ಧಾರ, ಮತ್ತೊಮ್ಮೆ ಕಲಾಸೃಷ್ಟಿಯ ಕಡೆಗೆ ಅವನನ್ನು ದೂಡಿತ್ತು.

ಹುಚ್ಚಾಸ್ಪತ್ರೆ ಈಗ ಅವನನ್ನು ಏನೂ ಮಾಡಲಾರದು. ಈಗ ಅವನು ಸುಧಾರಿಸಿಕೊಳ್ಳುವ ಹಾದಿಯಲ್ಲಿದ್ದ. ಕೆಲವೇ ತಿಂಗಳಲ್ಲಿ ಇಲ್ಲಿಂದ ಹೊರಟು ಹೋಗಬಹುದು. ಮತ್ತೆ ಮರಳಿ ಪ್ಯಾರಿಸಿಗೆ ಹೋಗಿ ತನ್ನ ಹಳೆಯ ಗೆಳೆಯರನ್ನೆಲ್ಲಾ ಕಾಣಬಹುದು. ಮತ್ತೊಮ್ಮೆ ಅವನ ಪಾಲಿಗೆ ಬದುಕು ಚಿಗುರೊಡೆಯುತ್ತಿತ್ತು. ಥಿಯೋಗೆ, ಬಣ್ಣ, ಕ್ಯಾನ್‌ವಾಸ್, ಬ್ರಷ್, ಓದಲು ಚೆನ್ನಾಗಿರುವ ಪುಸ್ತಕಗಳು ಮೊದಲಾದವುಗಳನ್ನು ಕಳಿಸಿಕೊಡಲು ಬೇಡಿ, ಒಂದು ಸುದೀರ್ಘ ಪತ್ರ ಬರೆದ.

ಮರುದಿನ ಸೂರ್ಯ, ಹಳದಿಯಾಗಿ, ಬೆಂಕಿಯಾಗಿ ಕಾಣಿಸಿಕೊಂಡ. ಸಿಕಾಡಾಗಳ ಕರ್ಕಶಧ್ವನಿ ಆ ಗಾರ್ಡನ್ ತುಂಬಾ ಆವರಿಸಿಕೊಂಡಿತು. ಅವುಗಳ ಆ ಧ್ವನಿ ಕ್ರಿಕೆಟ್‌ಗಳ ಧ್ವನಿಗಿಂತ ದೊಡ್ಡದಾಗಿತ್ತು. ವಿನ್ಸೆಂಟ್ ಈಸಲ್ ಅನ್ನು ಏರಿಸಿಕೊಂಡು ಹೊರಟ. ಪೈನ್ ಮರಗಳ, ಪೊದೆಗಳ ಮತ್ತು ಇತರೆ ನಿಸರ್ಗ ದೃಶ್ಯಗಳನ್ನೆಲ್ಲ ಕ್ಯಾನ್‌ವಾಸ್‌ಗೆ

ಇಳಿಸಿದ. ಅವನ ವಾರ್ಡ್‌ನ ಜೊತೆಗಾರರೂ ಹೊರಗೆ ಬಂದು, ಅವನ ಹೆಗಲ ಹಿಂಭಾಗಗಳಲ್ಲಿ ನಿಂತು ಇಣುಕಿ ನೋಡುತ್ತಿದ್ದರು. ಅವರು ಯಾವುದೇ ಗದ್ದಲವಿಲ್ಲದೆ, ಪ್ರಶಾಂತರಾಗಿದ್ದು, ಗಮನಿಸುತ್ತಿದ್ದರು.

"ಆರ್ಲೆಯ ಬೇರೆ ಜನಕ್ಕಿಂತ, ಇವರು ಒಳ್ಳೆಯ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದಾರೆ" ಎಂದು ತನ್ನಲ್ಲೇ ಗೊಣಗಿಕೊಂಡ.

ಮಧ್ಯಾಹ್ನ ಸ್ವಲ್ಪ ಹೊತ್ತಿನ ನಂತರ ಡಾಕ್ಟರ್ ಪೆರೋನ್‌ರನ್ನು ಕಾಣಲು ಹೋದ.

"ಡಾಕ್ಟರ್ ಈಗ ನಾನು ಸಂಪೂರ್ಣವಾಗಿ ಸುಧಾರಿಸಿದ್ದೇನೆ. ಈ ಪ್ರದೇಶದಿಂದ ಹೊರಗೆ ಹೋಗಿ ಪೈಂಟ್ ಮಾಡಲು ತಾವು ನನಗೆ ಅನುಮತಿ ನೀಡಬೇಕು" ಎಂದ.

"ಖಂಡಿತ. ನಿನ್ನ ಮುಖ ನೋಡಿದರೆ ಗುಣವಾಗಿದ್ದೀಯ ಅನ್ನೋದು ತಿಳಿಯುತ್ತೆ, ನಿನಗೆ ನೀಡುತ್ತಿರುವ ಸ್ನಾನ ಚಿಕಿತ್ಸೆ, ಇಲ್ಲಿನ ಪ್ರಶಾಂತತೆ ಸಾಕಷ್ಟು ನಿನ್ನ ಮೇಲೆ ಪರಿಣಾಮಕಾರಿಯಾಗಿ ಕೆಲಸ ಮಾಡಿವೆ. ಆದರೆ ಇಷ್ಟು ಬೇಗ ಹೊರಗೆ ಹೋಗುವುದು, ನಿನಗೆ ಅಪಾಯಕಾರಿ ಎನಿಸುವುದಿಲ್ಲವೇ?"

"ಅಪಾಯಕಾರಿ? ಯಾಕೆ? ಹೇಗೆ?"

"ಒಂದು ವೇಳೆ ನಿನಗೆ ಅಟ್ಯಾಕ್ಸ್....... ಬಂದರೆ?" ವಿನ್ಸೆಂಟ್ ಗಟ್ಟಿಯಾಗಿ ನಕ್ಕ.

"ನನಗೆ ಇನ್ನು ಮುಂದೆ ಯಾವ ರೀತಿಯಲ್ಲೂ ಅಟ್ಯಾಕ್ಸ್ ಬರೋದಿಲ್ಲ. ಅದೆಲ್ಲ ಮುಗಿದಿದೆ. ಹಾಗೆ ನೋಡಿದರೆ ಅವುಗಳು ಬರುವುದಕ್ಕೆ ಮೊದಲಿದ್ದುದಕ್ಕಿಂತ ಸಂತೋಷವಾಗಿದ್ದೇನೆ; ಆರೋಗ್ಯವಾಗಿದ್ದೇನೆ."

"ಇಲ್ಲ ವಿನ್ಸೆಂಟ್....... ನಿನ್ನನ್ನು ಹೊರಗೆ ಕಳಿಸಲು ನನಗೆ ಭಯವಾಗುತ್ತೆ....."

"ದಯವಿಟ್ಟು ಡಾಕ್ಟರ್ ನನಗೆ ಇಷ್ಟವಾದ ಕಡೇಲೆಲ್ಲ ಓಡಾಡಿ ನನಗೆ ಮೆಚ್ಚುಗೆಯಾದ ವಸ್ತುಗಳನ್ನು ಪೈಂಟ್ ಮಾಡೋಕೆ ಸಾಧ್ಯವಾದರೆ ನಾನು ಎಷ್ಟು ಖುಷಿಯಾಗಿರ್ತೇನೆ ಅನ್ನೋದು ನಿಮಗೇ ಗೊತ್ತಾಗುತ್ತೆ."

"ಸರಿ ಕೆಲಸ ಮಾಡೋದೇ ನಿನಗೆ ಬೇಕೆನಿಸಿದರೆ......"

ವಿನ್ಸೆಂಟ್‌ಗಾಗಿ ಗೇಟಿನ ಬೀಗ ತೆಗೆಯಲಾಯಿತು. ಈಸಲ್ ಹೊತ್ತು, ಪೈಂಟ್ ಮಾಡಲು ಸರಿಯಾದ ದೃಶ್ಯಗಳ ಶೋಧಕ್ಕೆ ಹೊರಟ. ಆಶ್ರಮದ ಹಿಂದಿದ್ದ ಗುಡ್ಡಗಳನ್ನು ಪೈಂಟ್ ಮಾಡುವುದರಲ್ಲೇ ಇಡೀ ದಿನ ಕಳೆದ. ಸೈಂಟ್ ರೆಮಿಯ ಸೈಪ್ರಸ್ ಮರಗಳು ಅವನ ತಲೆ ತುಂಬಿಕೊಂಡಿದ್ದವು. ಸೂರ್ಯಕಾಂತಿಯ ಕ್ಯಾನ್‌ವಾಸ್‌ಗಳ ಮಾದರಿಯಲ್ಲಿಯೇ ಸೈಪ್ರಸ್‌ಗಳ ಕ್ಯಾನ್‌ವಾಸ್ ಮಾಡಬೇಕೆಂದು ಬಯಸಿದ. ತನ್ನ ಮುಂದೆ ಕಾಣುತ್ತಿರುವ ಇವುಗಳನ್ನು ಈ ಮೊದಲೇ ಪೈಂಟ್ ಮಾಡದೆ ಇದ್ದುದು ಅವನಿಗೆ ಅಚ್ಚರಿಯೆನಿಸಿತು. ಅವನಿಗೆ ಆ ಸೈಪ್ರಸ್ ಮರಗಳು ಸುಂದರವಾಗಿಯೂ ಪ್ರಮಾಣಬದ್ಧವಾಗಿಯೂ ಕಾಣಿಸಿದವು. ಈಜಿಪ್ಟಿನ ಪಿರಮಿಡ್‌ಗಳನ್ನು ನೆನಪಿಸಿದವು. ಬಿಸಿಲಿನ ಆ ಪರಿಸರದಲ್ಲಿ ಅವುಗಳು ಸಿಡಿದು ಚೆಲ್ಲಿದ ಕಪ್ಪುಬಣ್ಣದಂತೆ ಕಾಣುತ್ತಿದ್ದವು.

ಆರ್ಲೆಯ ಹಳೆಯ ಅಭ್ಯಾಸಗಳು ಮರಳಿದವು. ಪ್ರತಿ ದಿನ ಬೆಳಿಗ್ಗೆ ಹೊರಟರೆ, ಸಂಜೆ ಸೂರ್ಯಾಸ್ತದ ನಂತರವೇ ಹಿಂತಿರುಗುತ್ತಿದ್ದ. ನಿಸರ್ಗದ ದೃಶ್ಯಗಳೆಲ್ಲವೂ ಕ್ಯಾನ್‌ವಾಸಗೆ ಸ್ಥಳಾಂತರಗೊಳ್ಳುತ್ತಿದ್ದವು. ತನ್ನಲ್ಲಿನ ಶಕ್ತಿ, ಸಾಮರ್ಥ್ಯಗಳು ಸವೆಯುತ್ತಿದ್ದುದರ ಪರಿವೆಯೂ ಇರಲಿಲ್ಲ; ಗೊಡವೆಯೂ ಇರಲಿಲ್ಲ. ಮೊದಲಿಗಿಂತ ತಾನು ಬಲಿಷ್ಠನಾಗುತ್ತಿದ್ದೇನೆಂದೇ ಭಾವಿಸಿದ.

ಈಗ ಅವನ ಮುಂದೆ ಇದ್ದುದು, ತಾನು ಬಯಸಿದ ಗುರಿ ಮುಟ್ಟುವುದು. ಅದು ಬಿಟ್ಟರೆ, ತಾನು ಎಲ್ಲಿದ್ದೇನೆ, ಏನು ಊಟ ಮಾಡುತ್ತಿದ್ದೇನೆ ಎನ್ನುವುದರ ಬಗ್ಗೆ ಯೋಚಿಸುತ್ತಿರಲಿಲ್ಲ. ಆಶ್ರಮದಲ್ಲಿ ಎಂತಹ ಆಹಾರ ಕೊಟ್ಟರೂ ಬಕಾಸುರನಂತೆ ಹೊಟ್ಟೆಗೆ ಇಳಿಸುತ್ತಿದ್ದ. ಸೂಪ್‌ನಲ್ಲಿ ಜಿರಲೆ ಬಿದ್ದರೂ ಪರವಾಗಿರಲಿಲ್ಲ. ಕೆಲಸ ಮಾಡಲು ಬೇಕಾದ ಶಕ್ತಿ ಗಳಿಸಿಕೊಳ್ಳಲು, ಹೊಟ್ಟೆ ತುಂಬ ಆಹಾರಬೇಕು, ಅಷ್ಟೇ! ಅವನಿಗೆ ಈಗ ಯಾವ ಹೆದರಿಕೆಯೂ ಇರಲಿಲ್ಲ. ಸಂಪೂರ್ಣವಾಗಿ ತನ್ನ ಮೇಲೆ ತನ್ನ ಹತೋಟಿಯನ್ನು ಇರಿಸಿಕೊಳ್ಳಲು ಸಾಧ್ಯವಾಯಿತು.

ಮೂರುತಿಂಗಳು ಆಶ್ರಮದಲ್ಲಿದ್ದಾಗ, ಸೈಪ್ರಸ್‌ಗಳು ಅವನ ಗುರಿಯಾದವು. ಎಲ್ಲ ನೋವು ತೊಂದರೆಗಳನ್ನೂ ಮೀರಿ ಅವುಗಳೊಂದನ್ನೇ ಯೋಚಿಸ ತೊಡಗಿದ. ಅಗಾಧ ಪ್ರಮಾಣದಲ್ಲಿ ಆ ಮರಗಳಿದ್ದವು. ಅವುಗಳ ಹಿನ್ನೆಲೆಗೆ ಮುಳ್ಳುಪೊದೆಗಳು, ಕುರುಚಲು ಗಿಡಗಳು ಗುಂಪು ಗುಂಪಾಗಿ ಇದ್ದವು., ಅವುಗಳಿಗೂ ಹಿಂದೆ ಒಂದು ಬಗೆಯ ನೀಲಿ ಗುಡ್ಡಗಳು, ಹಸಿರು ಗುಲಾಬಿ ಮಿಶ್ರಿತ ಆಕಾಶ, ಕರಗುತ್ತಿದ್ದ ಚಂದ್ರ– ಇವೆಲ್ಲವನ್ನೂ ಕ್ಯಾನ್‌ವಾಸ್‌ಗೆ ಇಳಿಸಿದ. ರಾತ್ರಿ, ತಾನು ಆ ದಿನ ಮಾಡಿದ್ದ ಕ್ಯಾನ್‌ವಾಸ್‌ನ ಎದುರು ನಿಂತು ನೋಡಿದಾಗ, ತಾನು ಹಳ್ಳದಿಂದ ಎದ್ದು, ಮತ್ತೊಮ್ಮೆ ಗಟ್ಟಿ ನೆಲದ ಮೇಲೆ ನಿಂತಿದ್ದೇನೆ ಎನಿಸಿತು.

ಉಕ್ಕಿ ಬರುತ್ತಿದ್ದ ಸಂತಸದ ಆ ಕ್ಷಣಗಳಲ್ಲಿ ತಾನೀಗ ಸ್ವತಂತ್ರ ಮನುಷ್ಯನಾಗಿದ್ದೇನೆ ಎಂದುಕೊಂಡ. ಥಿಯೋ ಸ್ವಲ್ಪ ಹೆಚ್ಚಿನ ಹಣವನ್ನು ಕಳುಹಿಸಿದ. ಇದರಿಂದ ಆರ್ಲೆಗೆ ಹೋಗಿ, ಮಾಲಿಕನ ವಶದಲ್ಲಿ ಇರುವ ಪಿಕ್ಚರ್‌ಗಳನ್ನು ದುಡ್ಡುಕೊಟ್ಟು ಬಿಡಿಸಿಕೊಂಡು ಬರುವುದಕ್ಕೆ ಅನುಕೂಲವಾಯಿತು. ಈಗ ಆರ್ಲೆಯ ಜನ ಅವನ ವಿಚಾರದಲ್ಲಿ ಮೆದುವಾಗಿದ್ದರು. ಸೌಜನ್ಯದಿಂದ ವರ್ತಿಸಿದರು. ಆದರೆ ಹಳದಿ ಮನೆ ನೋಡುತ್ತಿದ್ದಂತೆ ಮತ್ತೆ ಮೂರ್ಛೆ ಹೋಗುವೆನೇನೋ ಎಂದು ಹೆದರಿದ. ಹಳದಿ ಮನೆಯ ನೆನಪು ಅವನನ್ನು ಬಹಳವಾಗಿ ಕಾಡಿ, ಮತ್ತೆ ಖಾಯಿಲೆ ಬೀಳುವಂತಾಯಿತು. ಮೂರ್ಛೆ ಹೋದರೆ ಏನಾಗುವುದೋ ಎಂದು ಹೆದರಿದ. ಆದರೂ ರೌಲಿನ್‌ನನ್ನು, ಡಾಕ್ಟರ್ ರೇರನ್ನು ಕಾಣದೆ ಮಾಲಿಕನನ್ನು ಭೇಟಿಯಾಗಲು ಹೋದ. ತನ್ನ ಕೃತಿಗಳೆಲ್ಲ ಅವನ ವಶದಲ್ಲಿದ್ದವು.

ವಿನ್ಸೆಂಟ್ ಡಾಕ್ಟರ್ ಪೆರೋನ್‌ಗೆ ಮಾತು ಕೊಟ್ಟಂತೆ ಆ ರಾತ್ರಿಯೇ ಆಶ್ರಮಕ್ಕೆ ಮರಳಲಿಲ್ಲ. ಮಾರನೆ ದಿನ ಅವನು ಟ್ರಾಸ್‌ಕಾನ್ ಮತ್ತು ಸೈಂಟ್‌ರೆಮಿಯ ಮಧ್ಯೆ ಇದ್ದ ಒಂದು ಹಳ್ಳದಲ್ಲಿ ಬಿದ್ದಿದ್ದ.

-೩-

ಮೂರು ವಾರ ಕಾಡಿದ ಜ್ವರ, ಮಾನಸಿಕವಾಗಿ ಅವನನ್ನು ನಿಷ್ಕ್ರಿಯಗೊಳಿಸಿತು. ವಾರ್ಡ್‌ನಲ್ಲಿದ್ದ ಅವನ ಸಹಚರರು, ಅವನಿಂದ ಪಡೆದಿದ್ದ ಸಹಾಯದ ನೆನಪಿನಿಂದ, ಅವನ ಜೊತೆ ಶಾಂತಿ ಸಮಾಧಾನಗಳಿಂದ ನಡೆದುಕೊಂಡರು. ಪೂರ್ತಿವಾಸಿಯಾದ ಮೇಲೆ ತನಗೆ ಏನಾಯಿತೆಂಬುದು ತಿಳಿದು ತನ್ನ ಮೇಲೆ ತಾನೇ ಅಸಹ್ಯ ಪಟ್ಟುಕೊಂಡ.

ಮೂರನೆ ವಾರದ ಕೊನೆಯಷ್ಟು ಹೊತ್ತಿಗೆ, ಅವನಿಗೆ ನಡೆಯಲು ಚೈತನ್ಯ ಬಂದು, ಕಾರಿಡಾರ್‌ನಲ್ಲಿ ಸುಮ್ಮನೆ ಓಡಾಡುತ್ತಿದ್ದಾಗ ಹೊಸರೋಗಿಯೊಬ್ಬನನ್ನು, ಸಿಸ್ಟರ್‌ಗಳು ಕರೆತಂದರು. ಸಿಸ್ಟರ್ಸ್ ಹಾಸಿಗೆಗೆ ಅವನನ್ನು ರವಾನಿಸುವವರೆಗೂ ಸುಮ್ಮನಿದ್ದು, ಅವರು ಆ ಕಡೆ ಹೋಗುತ್ತಿದ್ದಂತೆ, ಭಯಂಕರವಾಗಿ ಸಿಟ್ಟಿಗೆದ್ದ. ಬಟ್ಟೆಯನ್ನೆಲ್ಲ ಕಿತ್ತು ಚಿಂದಿ ಚಿಂದಿ ಮಾಡಿ ಬಿಸಾಡುತ್ತಾ, ಛಾವಣಿಯೇ ಹಾರಿ ಹೋಗುವ ಹಾಗೆ ಗಟ್ಟಿಯಾಗಿ ಕಿರುಚಿಕೊಳ್ಳುತ್ತಿದ್ದ. ಮಲಗಿದ್ದ ಹಾಸಿಗೆಯನ್ನು ಕೈಯುಗುರುಗಳಿಂದ ಪರಚಿ ಹರಿದು ಎಸೆಯುತ್ತಿದ್ದ. ಹಾಸಿಗೆ ಬಳಿ ಗೋಡೆಗೆ ತಗುಲಿಸಿದ್ದ. ಪೆಟ್ಟಿಗೆಯನ್ನು ಒಡೆದು ಹಾಕಿದ. ಪರದೆಗಳನ್ನೆಲ್ಲ ಎಳೆದು ಹರಿದ. ಹಾಸಿಗೆಗಳ ನಡುವೆ ಇದ್ದ ಪರದೆ ಸ್ಟ್ಯಾಂಡ್‌ಗಳನ್ನು ಅಪ್ಪಳಿಸಿ ಒಗೆದು ಕುಟ್ಟಿ, ಅವುಗಳ ಆಕಾರವನ್ನೇ ಬದಲಾಯಿಸಿ ಬಿಟ್ಟ. ತನ್ನ ಚೀಲವನ್ನು ಮುದ್ದೆ ಮಾಡಿ ಎಸೆದ.

ಮೊದಲಿದ್ದ ಒಳರೋಗಿಗಳು ಯಾರೂ, ಹೊಸ ರೋಗಿಯ ತಂಟೆಗೆ ಹೋಗುತ್ತಿರಲಿಲ್ಲ. ಅಷ್ಟರಲ್ಲಿ ಇಬ್ಬರು ವ್ಯಕ್ತಿಗಳು ಬಂದು ಆ ಹುಚ್ಚನನ್ನು ಎಳೆದೊಯ್ದರು. ಕಾರಿಡಾರ್‌ನಲ್ಲಿದ್ದ ಒಂದು ಕೋಣೆಯಲ್ಲಿ ಅವನನ್ನು ಇರಿಸಿ ಬೀಗ ಹಾಕಿದರು. ಎರಡು ವಾರಗಳು ಒಂದೇ ಸಮನೆ ಕಾಡುಪ್ರಾಣಿಯಂತೆ ಕೂಗುತ್ತಲೇ ಇದ್ದ. ಹಗಲೂ ರಾತ್ರಿ, ಈ ಕೂಗು ವಿನ್ಸೆಂಟ್‌ನ ಕಿವಿಗೆ ಮುಟ್ಟುತ್ತಿತ್ತು. ನಂತರ, ಕ್ರಮೇಣ ಕೂಗುವುದು ನಿಂತಿತು. ಇಬ್ಬರು ಕಾವಲುಗಾರರು ಚಾಪೆಲ್‌ನ ಹಿಂದಿನ ಸಮಾಧಿ ಭೂಮಿಯಲ್ಲಿ ಆ ಮನುಷ್ಯನ ಶವವನ್ನು ಹೂಳುತ್ತಿದ್ದುದನ್ನು ನೋಡಿದ.

ಭಯಂಕರ ಖಿನ್ನತೆ ಅವನನ್ನು ಕಾಡಿತು. ಆರೋಗ್ಯ ಸುಧಾರಿಸುತ್ತಾ ಹೋದ ಹಾಗೆಲ್ಲ ಅವನ ಯೋಚನೆಗಳು ಚುರುಕುಗೊಂಡವು. ಏನೇನೋ ತರ್ಕಬದ್ಧ ಆಲೋಚನೆ ಮಾಡತೊಡಗಿದ. ಈಗ ಅವನಿಗೆ, ಇಷ್ಟೆಲ್ಲ ಪೈಂಟ್ ಮಾಡಿಯೂ ಯಾವ ಪ್ರಯೋಜನವೂ ಇಲ್ಲವೆಂದಾದ ಮೇಲೆ ಪೈಂಟಿಂಗ್ ಮಾಡುವುದಾದರೂ ಏಕೆಂದು ತನ್ನನ್ನೇ ಪ್ರಶ್ನಿಸಿಕೊಳ್ಳತೊಡಗಿದ. ಆದರೆ ಅದೇ ಸಮಯದಲ್ಲಿ, ಕೆಲಸ ಮಾಡದೆ ಜೀವಿಸುವುದೂ ತನ್ನಿಂದ ಸಾಧ್ಯವಿಲ್ಲ ಎಂದುಕೊಂಡ.

ಡಾಕ್ಟರ್ ಪೆರೋನ್ ತಮ್ಮ ಪಾಲಿನ ಒಂದಿಷ್ಟು ಮಾಂಸ, ಒಂದಿಷ್ಟು (ಹೆಂಡ) ವೈನ್ ನೀಡಿದ. ಆದರೆ ಸ್ಟುಡಿಯೋಗೆ ಹೋಗಲು ಅನುಮತಿ ನೀಡಲಿಲ್ಲ. ತಾನು ಸುಧಾರಿಸುವವರೆಗೂ ಪರವಾಗಿಲ್ಲ ಎನಿಸಿತಾದರೂ, ಮತ್ತೊಮ್ಮೆ ಚೇತರಿಸಿಕೊಂಡ ನಂತರ ಮಾತ್ರ, ತನ್ನ ಸಹಚರರ ಸೋಮಾರಿತನಕ್ಕೆ ಛೀಮಾರಿ ಹಾಕಿದ್ದು ನೆನಪಾಗಿ, ತನ್ನನ್ನೇ ತಾನು ನಿಂದಿಸಿಕೊಳ್ಳುವಂತಾಯಿತು.

"ಡಾಕ್ಟರ್ ಪೆರೋನ್, ನೀವು ನನಗೆ ಕೆಲಸ ಮಾಡಲು ಬಿಡಬೇಕು. ಆಗ ಮಾತ್ರ ನನ್ನ ಆರೋಗ್ಯ ಸರಿಯಾಗಿರಬಲ್ಲುದು. ಹೀಗೆ ಸೋಮಾರಿಯಾಗಿ ಉಳಿದುಬಿಟ್ಟರೆ, ಆ ಹುಚ್ಚರ ಗುಂಪಿನಲ್ಲಿ ನಾನೂ ಒಬ್ಬನಾಗುತ್ತೇನೆ."

"ನನಗೆ ಗೊತ್ತಿದೆ ವಿನ್ಸೆಂಟ್. ಆದರೆ ನಿನಗೆ ಅಟ್ಯಾಕ್ ಬಂದದ್ದು, ಶಕ್ತಿ ಮೀರಿ ಕೆಲಸ ಮಾಡಿದ್ದಕ್ಕೆ. ನಿನ್ನನ್ನು ಆದಷ್ಟು ನಿನ್ನ ಆ ಅತಿರೇಕದ ಉತ್ಸಾಹದಿಂದ ದೂರವಿಡಬೇಕಾಗಿದೆ."

"ಇಲ್ಲ ಡಾಕ್ಟರ್, ಇಲ್ಲ. ನನ್ನ ಉತ್ಸಾಹವಾಗಲೀ, ಹೆಚ್ಚಿನ ಕೆಲಸವಾಗಲಿ ನನ್ನ ಅಟ್ಯಾಕ್‌ಗೆ ಕಾರಣವಲ್ಲ. ಆರ್ಲೆಗೆ ಹೋಗಿದ್ದು, ಪ್ಲಾಸ್ ಲಮಾರ್ಟಿನ್‌ನಲ್ಲಿನ ನನ್ನ ಆ ಹಳದಿ ಮನೆ ನೋಡಿದ್ದು ನನ್ನಲ್ಲಿ ಭಾವೋದ್ರೇಕಕ್ಕೆ ಕಾರಣವಾಗಿ ನಾನು ಮೂರ್ಛೆ ಹೋದೆ. ಮುಂದೆಂದೂ ಅಲ್ಲಿಗೆ ಹೋಗದಿದ್ದರೆ, ನನಗೇನೂ ಆಗೊಲ್ಲ. ದಯವಿಟ್ಟು ಸ್ಟುಡಿಯೋಗೆ ಹೋಗಲು ಬಿಡಿ."

"ನೋಡು ವಿನ್ಸೆಂಟ್, ಈ ಜವಾಬ್ದಾರಿಯನ್ನು ನಾನು ತೆಗೆದುಕೊಳ್ಳಲು ಇಚ್ಚಿಸುವುದಿಲ್ಲ. ನಿನ್ನ ತಮ್ಮನಿಗೆ ಕಾಗದ ಬರೆದು ಹೇಗೆ ಹೇಳಿದರೆ ಹಾಗೆ ಮಾಡುತ್ತೇನೆ."

ಥಿಯೋನಿಂದ, ಉತ್ತರ ಬಂತು. ವಿನ್ಸೆಂಟ್‌ಗೆ ಪೈಂಟ್ ಮಾಡಲು ಅನುಮತಿ ಕೊಡಬೇಕೆಂದು ಸೂಚಿಸಿದ್ದ. ಇದರ ಜೊತೆಗೆ ಇನ್ನೂ ಒಂದು ಸಂತೋಷದ ಸುದ್ದಿ ಇತ್ತು. ಥಿಯೋ ತಂದೆಯಾಗಲಿದ್ದ. ಈ ಸುದ್ದಿ ವಿನ್ಸೆಂಟ್‌ನಲ್ಲಿ ಹೊಸ ಚೈತನ್ಯ, ಉತ್ಸಾಹಗಳನ್ನು ತುಂಬಿದವು. ಕೂತು ಥಿಯೋಗೆ ಅದ್ಭುತವಾದ ಪತ್ರ ಬರೆದ.

"ನಾನು ಏನೆಂದು ಭಾವಿಸಿದ್ದೀನಿ, ನಿನಗೆ ಗೊತ್ತಿದೆಯೇ ಥಿಯೋ? ನನಗೆ ಪ್ರಕೃತಿ, ಮೋಡ, ಭೂಮಿ, ಹುಲ್ಲು, ಹೊಲ, ಗದ್ದೆ, ಚಂದ್ರ, ಸೂರ್ಯ ರೈತರು ಹೇಗೋ ಹಾಗೆ ನಿನಗೆ ಕುಟುಂಬ. ಜೊಹಾನ್ನಳ ಬಸಿರಲ್ಲಿ ರೂಪು ಪಡೆಯುತ್ತಿರುವ ನಿನ್ನ ಮಗು, ನಿನಗೆ ವಾಸ್ತವಗಳ ಮೇಲೆ ಒಂದು ಹಿಡಿತವನ್ನು ಒದಗಿಸುತ್ತದೆ. ಇಲ್ಲವಾದಲ್ಲಿ ಆ ದೊಡ್ಡ ನಗರದಲ್ಲಿ, ಅದು ಅಸಾಧ್ಯ. ಈಗ ನಿಜವಾಗಿಯೂ ನೀನು ಪ್ರಕೃತಿಯ ಜೊತೆ ಆಳವಾಗಿ ಮುಳುಗಿದ್ದೀಯ."

ಮತ್ತೆ ಸ್ಟುಡಿಯೋಗೆ ಹೋಗಲು ಆರಂಭಿಸಿದ. ಸರಳುಗಳಿದ್ದ ಕಿಟಕಿಯ ಹೊರಗಿನ ದೃಶ್ಯಗಳನ್ನು ತೆನೆಗಳಿಂದ ತುಂಬಿದ ಹೊಲಗಳು, ಬಳ್ಳಿಗಳು, ಸೂರ್ಯ. ಸೈಪ್ರಸ್ ಮರಗಳು ಹಳದಿ ಸೂರ್ಯ ಆಲೀವ್‌ಗಳನ್ನು ಆರಿಸುತ್ತಿರುವ ಹೆಂಗಸು; ನೀಲಿ ಮಣ್ಣಿನ ಭೂಮಿ; ಹಳದಿ ಕಾವಿ ಮಣ್ಣು; ಹಿತ್ತಾಳೆ ಬಣ್ಣದ ಕಾಂಡಗಳು; ಹಸಿರು ಮತ್ತು ಬೂದುಬಣ್ಣ ಮಿಶ್ರಿತ ಎಲೆಗಳು; ವಿಶಾಲ ಬಾನು, ಅದರಡಿಯಲ್ಲಿ ಗುಲಾಬಿ ಬಣ್ಣದ ಮೂರು ಸ್ತ್ರೀ ಆಕೃತಿಗಳು ನೀಲಿ ಛಾಯೆಯ ಗುಡ್ಡಗಳು – ಹೀಗೆ ಹತ್ತಾರು, ಅವನ ಕ್ಯಾನ್‌ವಾಸ್‌ಗಳನ್ನು ತುಂಬಿದವು.

ಸ್ಟುಡಿಯೋದಿಂದ ಹೊರಗೂ ಹೋಗಿ ಪೈಂಟ್ ಮಾಡಲು, ಡಾಕ್ಟರ್ ಪೆರೋನ್ ಅನುಮತಿ ನೀಡಿದ್ದರಿಂದ ಅಷ್ಟೆಲ್ಲವನ್ನೂ ಮಾಡಿದ. ಹೊರಗೆ ಹೊರಟಾಗ, ದಾರಿಯಲ್ಲಿ

ಎದುರಾದವರನ್ನು, ಹೊಲಗಳಲ್ಲಿ ಕೆಲಸ ಮಾಡುವವರನ್ನು ಮಾತಾಡಿಸುತ್ತಿದ್ದ. ಅವನಿಗೆ ರೈತರಿಗಿಂತಲೂ ಕಡಿಮೆ ಎನಿಸಿತು.

ಒಮ್ಮೆ ಹೊಲದಲ್ಲಿ ಕೆಲಸ ಮಾಡುತ್ತಿದ್ದ ಒಬ್ಬನನ್ನು ಮಾತಾಡಿಸಿದ. "ನೋಡಿ, ನೀವು ಹೊಲ ಉಳುವ ಕೆಲಸ ಮಾಡುತ್ತೀರ. ನಾನೂ ಕೂಡಾ ನನ್ನ ಕ್ಯಾನ್‌ವಾಸ್‌ಗಳಲ್ಲಿ ಉಳುಮೆ ಮಾಡುತ್ತೇನೆ" ಎಂದು ಹೇಳಿದ.

ಪ್ರೊವೆನ್ಸ್ ಪ್ರದೇಶಕ್ಕೆ ಶರದೃತುವಿನ ಆಗಮನವಾಯಿತು. ಶರದದ ಸೌಂದರ್ಯ ಎಲ್ಲೆಲ್ಲೂ ಮನೆ ಮಾಡಿತು. ನೆಲದ ತುಂಬೆಲ್ಲ ವಯಾಲೆಟ್ ಹೂಗಳ ಸಂಭ್ರಮ. ಒಣಗಿದ್ದ ಹುಲ್ಲಿನಲ್ಲಿ ಹೊಸ ಚೈತನ್ಯ; ಹಸಿರು ಆಗಸ ಮೇಲೆ, ಕೆಳಗೆ ಹಳದಿಯ ವಿಭಿನ್ನ ಛಾಯೆಗಳಲ್ಲಿ ಅರಳಿದ ಹೂಗಳ ರಾಶಿ ರಾಶಿ!

ಶಕ್ತಿ ಉತ್ಸಾಹಗಳು, ವಿನ್ಸೆಂಟ್‌ನ ದೇಹ ಮನಸ್ಸುಗಳನ್ನು ತುಂಬಿದವು. ತನ್ನ ಕೆಲಸದ ಬಗ್ಗೆ ತೃಪ್ತಿಯೆನಿಸಿತು. ಅವನ ತಲೆಯಲ್ಲಿ ಹೊಸ ಹೊಸ ವಿಚಾರಗಳು ಮೊಳೆತವು. ಅವುಗಳಿಗೆ ರೂಪ ಕೊಡುವ ಕ್ರಿಯೆಯಲ್ಲಿ ಇನ್ನಿಲ್ಲದ ಸಂತಸವನ್ನು ಅನುಭವಿಸಿದ. ದೀರ್ಘಕಾಲದ ವಾಸ, ಆ ಪ್ರದೇಶವನ್ನು ಸಮರ್ಥವಾಗಿ, ಸಮಗ್ರವಾಗಿ ಅರ್ಥಮಾಡಿಕೊಳ್ಳುವಂತೆ ಮಾಡಿತ್ತು. ಆರ್ಲೆಯ ವಿಚಾರ ಬೇರೆಯಾಗಿತ್ತು. ಅಲ್ಲಿ ಕಾಡುತ್ತಿದ್ದ, ವಿಧ್ವಂಸಕ ಬಿರುಗಾಳಿ, ಇಲ್ಲಿಯವರೆಗೆ ಬರುವ ಸಾಧ್ಯತೆಯೇ ಇರಲಿಲ್ಲ. ಸ್ವಲ್ಪದೂರದಲ್ಲಿದ್ದ ಬೆಟ್ಟ ಗುಡ್ಡಗಳು ಆ ಬಿರುಗಾಳಿಯ ತಡೆಗೋಡೆಗಳಾಗಿದ್ದವು. ಸೂರ್ಯನ ಬಿಸಿಲೂ ಕೂಡಾ ಅಷ್ಟಾಗಿ ಇರಲಿಲ್ಲ. ಅವನಿಗೆ ಸೈಂಟ್ ರೆಮಿ, ಅದು ಇದ್ದ ಊರು ಪ್ರಿಯವಾಗತೊಡಗಿತ್ತು. ಆದ್ದರಿಂದಲೇ ಆಶ್ರಮವನ್ನು ಬಿಡುವ ಇಚ್ಛೆಯಾಗಲಿಲ್ಲ. ಮೊದಲ ದಿನಗಳಲ್ಲಿ, ತನಗೆ ಏನೂ ಆಗದೆ, ಒಂದು ವರ್ಷ ಕಳೆದು ಹೋದರೆ ಸಾಕಪ್ಪ ಎಂದುಕೊಳ್ಳುತ್ತಿದ್ದ. ಈಗ ಸಂಪೂರ್ಣವಾಗಿ ಕೆಲಸದಲ್ಲಿ ಮುಳುಗಿ ಹೋಗುತ್ತಿದ್ದುದರಿಂದ ತಾನು ಆಶ್ರಮದಲ್ಲಿಯೋ ಅಥವಾ ಹೋಟೆಲಿನಲ್ಲಿ ಇದ್ದೇನೆಯೋ ಎಂಬ ಪರಿವೆಯೂ ಅವನಿಗಿರುತ್ತಿರಲಿಲ್ಲ. ಜೊತೆಗೆ, ಇನ್ನು ಯಾವುದೋ ಅಜ್ಞಾತ ಸ್ಥಳಕ್ಕೆ ಹೋಗಿ, ಅದಕ್ಕೆ ಹೊಂದಿಕೊಳ್ಳುವುದಕ್ಕಾಗಿ ಇನ್ನೊಂದು ಆರು ತಿಂಗಳು ಕಳೆಯಯುವುದು ಮೂರ್ಖತನವಾದೀತೆಂದೂ ಭಾವಿಸಿದ.

ಪ್ಯಾರಿಸಿನಿಂದ ಬರುತ್ತಿದ್ದ ಕಾಗದಗಳು ಅವನ ಉತ್ಸಾಹ, ಹುಮ್ಮಸ್ಸುಗಳನ್ನು ಜೀವಂತವಾಗಿ ಇರಿಸಿದ್ದವು. ಥಿಯೋನ ಹೆಂಡತಿ, ಸ್ವತಃ ತಾನೇ ಅಡಿಗೆ ಮಾಡುತ್ತಿದ್ದುದರಿಂದ, ಥಿಯೋನ ಆರೋಗ್ಯ ಸುಧಾರಿಸಿತ್ತು. ಬಸುರಿತನದ ಕಷ್ಟಗಳೂ ಜೊಹಾನ್ನಳನ್ನು ಹೆಚ್ಚಾಗಿ ಕಾಡಿರಲಿಲ್ಲ. ಪ್ರತಿವಾರ ಥಿಯೋ, ವಿನ್ಸೆಂಟ್‌ಗಾಗಿ ಚಾಕೊಲೆಟ್ಸ್, ಪೈಂಟ್ಸ್, ಬುಕ್ಸ್ ಮತ್ತು ಇಪ್ಪತ್ತು ಫ್ರ್ಯಾಂಕುಗಳನ್ನು ಕಳಿಸುತ್ತಿದ್ದ.

ಆರ್ಲೆಯ ಘಟನೆ ಸಂಪೂರ್ಣವಾಗಿ ಮರೆತು ಹೋಯಿತು. ಆದರೆ, ತಾನಲ್ಲಿಗೆ ಹೋಗಿರದೆ ಇದ್ದರೆ, ಆರು ತಿಂಗಳ ಆರೋಗ್ಯ ತನ್ನ ಖಾತೆಯಲ್ಲಿ ಇರುತ್ತಿತ್ತು, ಎಂದು ಒಮ್ಮೊಮ್ಮೆ ಪಶ್ಚಾತ್ತಾಪ ಪಡುತ್ತಿದ್ದ. ಹೊರಾಂಗಣ ದೃಶ್ಯಗಳ ಪೈಂಟಿಂಗ್ ಮುಗಿದ

ಮೇಲೆ, ಬೀರು ಮತ್ತು ನೀರಿನಿಂದ ತೊಳೆದು ಅಲ್ಪಸ್ವಲ್ಪ ಉಳಿದಿರಬಹುದಾಗಿದ್ದ ಆಯಿಲ್‌ನ್ನು ತೆಗದು ಬಿಟ್ಟ. ನಂತರ ಸಿದ್ಧವಾದ ಕ್ಯಾನ್‌ವಾಸ್‌ಗಳನ್ನು ಥಿಯೋಗೆ ಕಳಿಸಿಕೊಟ್ಟ.

ಥಿಯೋನಿಂದ ಕಾಗದ ಬಂತು. ತಾನು ವಿನ್ಸೆಂಟ್‌ನ ಕ್ಯಾನ್‌ವಾಸ್‌ಗಳನ್ನು ಪ್ರದರ್ಶನಕ್ಕೆ ಇಡಬೇಕೆಂದುಕೊಂಡಿದ್ದನಾದರೂ, ಅವು ಇನ್ನೂ ಅಷ್ಟು ತೃಪ್ತಿಕರವಾಗಿ ಕಾಣಿಸಲಿಲ್ಲವಾದ್ದರಿಂದ, ಇನ್ನೂ ಸುಧಾರಣೆ ಆಗಬೇಕೆನಿಸಿದ್ದರಿಂದ ಅವುಗಳನ್ನು ಪ್ರದರ್ಶನಕ್ಕೆ ಇಡುವ ವಿಚಾರವನ್ನು ಕೈಬಿಟ್ಟಿರುವೆನೆಂದೂ, ತಿಳಿಸಿ, ವಿಷಾದವನ್ನು ಸೂಚಿಸಿದ್ದ.

ಆದರೆ ಥಿಯೋ ಬರೆಯುತ್ತಿದ್ದ ಪತ್ರಗಳಲ್ಲಿ, ವಿನ್ಸೆಂಟ್ ಬಹಳಷ್ಟು ಸಾಧನೆ ಮಾಡುತ್ತಿದ್ದಾನೆಂದು, ಸಾಕಷ್ಟು ಪ್ರಗತಿ ಕಾಣುತ್ತಿದೆಯೆಂದೂ, ಹೀಗೆಯೇ ಸಾಧನೆ ಮುಂದುವರೆಯಲೆಂದು, ಬಹಳ ಭರವಸೆಯ ಪ್ರೋತ್ಸಾಹದ ಮಾತುಗಳು ತುಂಬಿರುತ್ತಿದ್ದವು.

ವಿನ್ಸೆಂಟ್, ತನ್ನ ಒಂದು ವರ್ಷದ ಅವಧಿ, ಆಶ್ರಮದಲ್ಲಿ ಮುಗಿಯುತ್ತಿದ್ದಂತೆ, ಸೈಂಟ್‌ರೆಮಿಯಲ್ಲಿ ಒಂದು ಮನೆ ಮಾಡಿ, ಪೈಂಟಿಂಗ್ ಕೆಲಸವನ್ನು ಇಲ್ಲಿಯೇ ಮುಂದುವರೆಸಲು ನಿರ್ಧರಿಸಿದ. ಗಾಗಿನ್ ಆರ್ಲೆಗೆ ಬರುವುದಕ್ಕೆ ಮೊದಲು, ಆರ್ಲೆಯಲ್ಲಿ ಎಂತಹ ಉತ್ಸಾಹದ ಭಾವದೊಂದಿಗೆ ಕೆಲಸ ಮಾಡುತ್ತಿದ್ದನೋ, ಅದೇ ರೀತಿಯ ಉತ್ಸಾಹ ಅವನಲ್ಲಿ ಕಾಣಿಸತೊಡಗಿತು.

ಒಂದು ದಿನ ಮಧ್ಯಾಹ್ನ ಪ್ರಶಾಂತ ಮನಸ್ಸಿನಿಂದ ಹೊಲಗಳಲ್ಲಿ, ತನ್ನ ಕೆಲಸದಲ್ಲಿ ತೊಡಗಿದ್ದಾಗಲೇ ಅವನ ಆಲೋಚನೆಗಳು ಎತ್ತೆತ್ತಲೋ ಸಾಗಿದವು. ಆಶ್ರಮದ ಕಾವಲುಗಾರರು, ವಿನ್ಸೆಂಟ್, ರಾತ್ರಿಯ ಸಮಯದಲ್ಲಿ ತನ್ನ ಈಸಲ್‌ನಿಂದ ಹಲವು ಕಿಲೋಮೀಟರ್‌ಗಳ ದೂರದಲ್ಲಿ ಸೈಪ್ರಸ್ ಮರದ ಕಾಂಡದಡಿಯಲ್ಲಿ ಬಿದ್ದಿರುವುದನ್ನು ಪತ್ತೆ ಹಚ್ಚಿದರು.

–೪–

ಐದನೇ ದಿನದ ಹೊತ್ತಿಗೆ ಅವನು ಮಾಮೂಲಿ ಸ್ಥಿತಿಗೆ ಬಂದ. ಅವನ ಮನಸ್ಸಿನ ಆಘಾತಕ್ಕೆ ಕಾರಣ, ತನ್ನ ಜೊತೆಗಾರರು ತಮ್ಮ ಮೂರ್ಛೆ ಖಾಯಿಲೆಯನ್ನು ಅನಿವಾರ್ಯ ಮತ್ತು ಬದುಕಿನ ಭಾಗವಾಗಿ ಒಪ್ಪಿಕೊಂಡದ್ದಾಗಿತ್ತು!

ಚಳಿಗಾಲ ಬಂತು. ವಿನ್ಸೆಂಟ್‌ಗೆ ಹೊರಗೆ ಹೋಗಲು ಮನಸ್ಸಾಗಲಿಲ್ಲ. ವಾರ್ಡ್‌ನ ಮಧ್ಯದಲ್ಲಿದ್ದ ಸ್ಟೋವ್‌ನಲ್ಲಿ ಈಗ ನಿರಂತರವಾಗಿ ಬೆಂಕಿ ಉರಿಯುತ್ತಿತ್ತು. ಆ ಹನ್ನೊಂದು ಜನ ಅದರ ಸುತ್ತಲೂ ಎಂದಿನಂತೆಯೇ ಬೆಳಿಗ್ಗೆಯಿಂದ ರಾತ್ರಿವರೆಗೆ ಕುಳಿತೇ ಇರುತ್ತಿದ್ದರು. ವಾರ್ಡ್‌ನ ಕಿಟಕಿಗಳು ಚಿಕ್ಕದಾಗಿದ್ದವು ಮತ್ತು ಎತ್ತರದಲ್ಲಿದ್ದವು. ಆದ್ದರಿಂದ ಬೆಳಕು ಅಷ್ಟಾಗಿ ಬರುತ್ತಿರಲಿಲ್ಲ. ಉರಿಯುತ್ತಿದ್ದ ಸ್ಟೋವ್‌ನ ಹಳದಿ ಬೆಳಕಷ್ಟೇ ಆ

ವಾರ್ಡನ್ನು ತುಂಬಿತ್ತು. ಸಿಸ್ಟರುಗಳು, ತಮ್ಮ ಕ್ಯಾಪ್‌ಗಳಿಂದ ಮುಖವನ್ನು ಇನ್ನಷ್ಟು ಮುಚ್ಚಿಕೊಂಡು, ಪ್ರಾರ್ಥನೆಗಳನ್ನು ಮಣಮಣಿಸುತ್ತಾ ಮಣಿ ಎಣಿಸುತ್ತಾ, ಧರಿಸಿದ್ದ ಕ್ರಾಸ್ ಅನ್ನು ಸ್ಪರ್ಶಿಸುತ್ತಾ ಓಡಾಡುತ್ತಿದ್ದರು. ದೂರದಲ್ಲಿ ಕಾಣಿಸುತ್ತಿದ್ದ ಬೋಳುಗುಡ್ಡಗಳು ಮೃತರ ತಲೆಗಳಂತಿದ್ದವು.

ಇಳಿಜಾರಾದ ತನ್ನ ಮಂಚದಲ್ಲಿ ಮಲಗಿದ್ದ ವಿನ್ಸೆಂಟ್ ಎಚ್ಚರವಾಗಿಯೇ ಇದ್ದ. ಷವನೆಂಜಿನ್‌ನ ಕಲಾಕೃತಿ ಅವನಿಗೆ ಕಲಿಸಿದ್ದೇನು? ನೋವು, ಕಷ್ಟ, ದುಃಖಗಳನ್ನು ಗೊಣಗಾಟವಿಲ್ಲದೆ ಅನುಭವಿಸುವುದನ್ನು ಕಲಿಯಬೇಕು. ವಿರೋಧವಿಲ್ಲದೆ ನೋವನ್ನು ಸ್ವೀಕರಿಸಬೇಕು. – ಇದೆಲ್ಲ ಸರಿ, ನಿಜ. ಆದರೆ ಇದರಂತೆ ನಡೆದುಕೊಂಡರೆ, ಅವನಿಗೆ ತಲೆಸುತ್ತಿ ಬೀಳುವ ಅಪಾಯವಿದೆ. ನೋವು–ಖಿನ್ನತೆಗಳಿಗೆ ಅವಕಾಶಕೊಟ್ಟುಕೊಂಡಾಗ, ಅವನು ಪೂರ್ತಿ ಮೃತಾವಸ್ಥೆಗೆ ತಲುಪುತ್ತಾನೆ. ಆದರೆ ಪ್ರತಿಯೊಬ್ಬರ ಬದುಕಿನಲ್ಲಿಯೂ, ಎಂಥದೇ ಗಂಭೀರವಾದ ನೋವು, ದುಃಖ, ಸಂಕಟವಿರಲಿ – ಅವುಗಳನ್ನು ಉಟ್ಟ ಹಳೆಯ ಬಟ್ಟೆಯನ್ನು ಬಿಚ್ಚಿ ಎಸೆಯುವಂತಹ ಸಮಯ ಬಂದೇ ಬರುವುದು.

ದಿನಗಳು ಸರಿದವು. ಒಂದೊಂದು ದಿನವೂ ಹಿಂದಿನ ದಿನದ ಮುಂದುವರಿಕೆಯೇ ಆಗಿತ್ತು. ಅವನ ತಲೆ ಈಗ ಪೂರ್ತಿ ಖಾಲಿಯಾಗಿತ್ತು. ಆಸೆ, ನಿರಾಸೆ – ಯಾವುದೂ ಇರಲಿಲ್ಲ. ಸಿಸ್ಟರುಗಳು ಅವನ ಪೈಂಟಿಂಗ್ ಬಗ್ಗೆ ಮಾತಾಡಿಕೊಳ್ಳುತ್ತಿದ್ದರು. ಅಚ್ಚರಿ ಪಡುತ್ತಿದ್ದರು. ಅವನು ಹುಚ್ಚನಾದ್ದರಿಂದ ಪೈಂಟಿಂಗ್ ಮಾಡುತ್ತಾನೆಯೋ, ಪೈಂಟಿಂಗ್ ಮಾಡುತ್ತಿದ್ದುದರಿಂದ ಹುಚ್ಚನಾಗಿದ್ದಾನೆಯೋ ಎಂದು ವಿಸ್ಮಯದಿಂದ ತಮ್ಮತಮ್ಮಲ್ಲಿಯೇ ಪ್ರಶ್ನಿಸಿಕೊಂಡರು.

ಈಡಿಯಟ್ (ಪೆದ್ದ!) ಅವನ ಪಕ್ಕದಲ್ಲಿ ಹಾಸಿಗೆ ಮೇಲೆ ಕುಳಿತು ಏನೇನೋ ಬಡಬಡಿಸಿದ. ಆದರೂ ವಿನ್ಸೆಂಟ್ ಅವನ ಬಗ್ಗೆ ಸ್ನೇಹ, ಕರುಣೆಯ ಭಾವ ಹೊಂದಿದ್ದರಿಂದ, ಅಲ್ಲಿಂದ ಎಬ್ಬಿಸಿ ಓಡಿಸಬಲ್ಲ, ಮಾತಾಡಲು ಜೊತೆಗೆ ಯಾರೂ ಇರಲಿಲ್ಲವಾದ್ದರಿಂದ, ಇವನ ಜೊತೆಗೇ ಎಷ್ಟೋ ಸಲ ಮಾತಾಡುತ್ತಿದ್ದ.

ಒಂದು ದಿನ ಸಿಸ್ಟರುಗಳು ಆ ಕಡೆ ಹಾದು ಹೋದಾಗ, ವಿನ್ಸೆಂಟ್ ಈಡಿಯಟ್‌ಗೆ – "ನೋಡು ಅವರೆಲ್ಲ ನನ್ನ ಕೆಲಸ ನನ್ನನ್ನು ಹುಚ್ಚನನ್ನಾಗಿ ಮಾಡಿದೆ ಅಂತ ಭಾವಿಸಿದ್ದಾರೆ. ಒಂದು ರೀತಿಯಿಂದ ಸ್ವಲ್ಪ ಮಟ್ಟಿಗೆ ನಿಜವಿರಬಹುದು. ಪೈಂಟರ್ ಆದವನು ತನ್ನ ಪೈಂಟಿಂಗ್ ಕೆಲಸದಲ್ಲಿ ಎಷ್ಟು ಮಗ್ನನಾಗಿ ಬಿಡುತ್ತಾನೆಂದರೆ, ಅವನಿಗೆ ಹೊರಗಿನ ಜಗತ್ತೇ ಬೇಡವೆನಿಸಿಬಿಡುತ್ತದೆ. ಆದರೆ ಅಷ್ಟು ಮಾತ್ರಕ್ಕೇ, ನಮಗೆ ಈ ಪ್ರಪಂಚದಲ್ಲಿ ಬದುಕಲು ಹಕ್ಕಿಲ್ಲವೇ?"

ಈಡಿಯಟ್ ಸುಮ್ಮನೆ ತಲೆಯಾಡಿಸಿದ.

ಕಡೆಗೆ ಡೆಲಾಕ್ರ್ವಾಸ್‌ನ ಪುಸ್ತಕದ ಸಾಲುಗಳು ಅವನಿಗೆ, ಹಾಸಿಗೆಯಿಂದ ಏಳಲು ಶಕ್ತಿ ನೀಡಿದವು. "ನನ್ನಲ್ಲಿ ಹಲ್ಲುಗಳೇ ಇಲ್ಲದೇ ಹೋದಾಗ ಅಥವಾ ಉಸಿರೇ ಇಲ್ಲದಾದಾಗ, ನಾನು ಪೈಂಟಿಂಗ್ ಏನೆಂದು ಅರ್ಥಮಾಡಿಕೊಂಡೆ" ಎಂದು ಡೆಕ್ರ್ವಾಸ್ ಹೇಳಿದ ಮಾತುಗಳು ಅವನ ಮನಕ್ಕೆ ನಾಟಿದವು.

ಎಷ್ಟೋ ವಾರಗಳ ಕಾಲ ಹೊರಗೆ ಹೋಗುವುದಕ್ಕೆ ಮನಸ್ಸಿಲ್ಲದೆ, ಒಳಗೇ ಉಳಿದುಕೊಂಡ. ಅವನೂ ಕೂಡ ಈಗ ಸ್ಟೋವ್ ಮುಂದೆ ಕುಳಿತು, ಪ್ಯಾರಿಸಿನಿಂದ ಥಿಯೋ ಕಳಿಸಿದ್ದ ಪುಸ್ತಕಗಳನ್ನು ಓದುತ್ತಿದ್ದ. ಒಮ್ಮೆ ತನ್ನ ಪಕ್ಕದ ರೋಗಿಗೆ ಅಟ್ಯಾಕ್ ಬಂದಾಗ, ಓದುವುದರಲ್ಲಿ ಮಗ್ನನಾಗಿದ್ದವನು, ತಲೆ ಎತ್ತಿಯೂ ನೋಡಲಿಲ್ಲ; ಕುರ್ಚಿ ಬಿಟ್ಟು ಏಳಲಿಲ್ಲ. ಈಗ ಮತಿಭ್ರಮಣವೆನ್ನುವುದು ಅವನಿಗೆ ವಿಶೇಷವೆನಿಸಲಿಲ್ಲ. ಅದನ್ನು ಸಾಮಾನ್ಯ ನಡವಳಿಕೆಯೆಂದೇ ಭಾವಿಸಿದ. ಎಷ್ಟೋದಿನದಿಂದ ಇಲ್ಲಿದ್ದುದರಿಂದ ಅವನಿಗೆ ಒಳಗಿನ ಈ ಜನರು, ಹೊರಗಿನ ಜನರಿಗಿಂತ ಬೇರೆಯಾಗೇನೂ ಕಾಣಲಿಲ್ಲ.

"ಕ್ಷಮಿಸು ವಿನ್ಸೆಂಟ್. ಇನ್ನು ಮುಂದೆ ನೀನು ಹೊರಗೆ ಹೋಗಲು ಸಾಧ್ಯವಿಲ್ಲ. ಈ ಗೋಡೆಗಳ ಮಧ್ಯೆಯೇ ಇರುವುದು, ಇರಬೇಕಾದ್ದು ಅನಿವಾರ್ಯ." ಎಂದು ಡಾಕ್ಟರ್ ಪೆರೋನ್ ಹೇಳಿದರು.

"ಸ್ಟುಡಿಯೋದಲ್ಲಿ ಇದ್ದುಕೊಂಡೇ ಮಾಡಬಹುದಲ್ಲ?"

"ಅದೂ ಸಾಧ್ಯವಿಲ್ಲ."

"ಹಾಗಾದರೆ, ನಾನು ಆತ್ಮಹತ್ಯೆ ಮಾಡಿಕೊಳ್ಳುವುದು ಸರಿ ಎನಿಸಬಹುದಲ್ಲ?"

"ಹಾಗಾದರೆ ಒಂದು ಕೆಲಸ ಮಾಡು, ಸ್ಟುಡಿಯೋದಲ್ಲಿದ್ದು, ಕೇವಲ ಕೆಲವೇ ಗಂಟೆಗಳು ಮಾತ್ರ ಕೆಲಸ ಮಾಡಿ ನಿಲ್ಲಿಸಿಬಿಡು."

ಯಾಕೋ ವಿನ್ಸೆಂಟ್‌ನಲ್ಲಿ ಉತ್ಸಾಹವೇ ಮೂಡಲಿಲ್ಲ. ಈಸಲ್ಲು, ಬ್ರಷ್ಷುಗಳು, ಪೈಂಟ್ – ಯಾವುದೂ ಅವನಿಗೆ ಪ್ರಚೋದನೆ ನೀಡಲಿಲ್ಲ. ಮಾಂಟಿಸೆಲ್ಲಿ ಕುರ್ಚಿಯಲ್ಲಿ ಕುಳಿತು ಸರಳಿನ ಕಿಟಕಿಯ ಮೂಲಕ ಬರಡು ಬಿದ್ದಿದ್ದ ಹೊಲಗಳನ್ನೇ ದಿಟ್ಟಿಸಿ ನೋಡುತ್ತಿದ್ದ.

ಕೆಲ ದಿನಗಳ ನಂತರ, ಯಾವುದೋ ರಿಜಿಸ್ಟರ್ಡ್ ಪೋಸ್ಟ್‌ಗೆ ಸಹಿ ಮಾಡಲು, ಡಾಕ್ಟರ್ ಪೆರೋನ್‌ರ ಆಫೀಸಿನಿಂದ ಕರೆ ಬಂತು. ಅವನು ಕವರ್ ಒಡೆದು ನೋಡಿದಾಗ, ನಾನೂರು ಫ್ರ್ಯಾಂಕ್ ಮೊತ್ತದ ಚೆಕ್ ನೇರವಾಗಿ ಅವನ ಹೆಸರಿಗೆ ಬಂದಿತ್ತು. ಇಡೀ ಜೀವನದಲ್ಲಿ, ಮೊಟ್ಟಮೊದಲ ಬಾರಿಗೆ, ಇಷ್ಟು ದೊಡ್ಡ ಮೊತ್ತವನ್ನು ಒಂದೇ ಸಲಕ್ಕೆ ನೋಡುವ ಅವಕಾಶ ಬಂದಿತ್ತು. ಥಿಯೋ ಯಾವ ಕಾರಣಕ್ಕಾಗಿ ಇಷ್ಟೊಂದು ಹಣ ಕಳಿಸಿದ್ದಾನೆ ಎಂದು ಆಲೋಚಿಸುತ್ತಿದ್ದ.

ನನ್ನ ಪ್ರೀತಿಯ ವಿನ್ಸೆಂಟ್,

ಅಂತೂ ಕಡೆಗೆ, ನಿನ್ನ ಕ್ಯಾನ್‌ವಾಸೊಂದು ನಾಲ್ಕು ನೂರು ಫ್ರ್ಯಾಂಕ್‌ಗಳಿಗೆ ಮಾರಾಟವಾಯಿತು! ಹೋದ ವಸಂತ ಮಾಸದಲ್ಲಿ, ಆರ್ಲೆಯಲ್ಲಿದ್ದಾಗ ಮಾಡಿದ ಕ್ಯಾನ್‌ವಾಸ್ 'ಕೆಂಪು ವಿನ್ಯರ್ಡ್ (ರೆಡ್ ವಿನ್ಯರ್ಡ್), ಡಚ್ ಪೈಂಟರ್‌ನ ತಂಗಿ ಅನ್ನಾ ಬಾಕ್ ಎಂಬಾಕೆ ಇದನ್ನು ಕೊಂಡಿದ್ದಾಳೆ. ಕಂಗ್ರಾಚ್ಯುಲೇಷನ್ಸ್ ಓಲ್ಡ್ ಬಾಯ್! ಇಷ್ಟರಲ್ಲಿಯೇ ನಿನ್ನೆಲ್ಲ ಕಲಾಕೃತಿಗಳು ಯೂರೋಪಿನಾದ್ಯಂತ ಮಾರಾಟವಾಗುತ್ತವೆ. ಡಾಕ್ಟರ್ ಪೆರೋನ್ ಒಪ್ಪಿಗೆ ನೀಡಿದರೆ, ಈ ಹಣದಿಂದ ಪ್ಯಾರಿಸಿಗೆ ಬಂದುಬಿಡು.

ಇತ್ತೀಚೆಗೆ ನನಗೊಬ್ಬ ಒಳ್ಳೆಯ ಸ್ನೇಹಿತ ಸಿಕ್ಕಿದ್ದಾನೆ. ಡಾಕ್ಟರ್ ಗಾಷೆ ಅಂತ. ಉವೆರ್ಸ್ ಸೂರ್ ಲ ಆಯ್ಸ್‌ನಲ್ಲಿ ಅವನ ಮನೆಯಿದೆ. ಡಾಬಿನಿ ಕಾಲದಿಂದಲೂ ಪ್ರತಿಯೊಬ್ಬ ಪೈಂಟರ್ ತನ್ನ ಮನೆಯಲ್ಲಿದ್ದುಕೊಂಡೇ, ಅದ್ಭುತವಾದ ಪೈಂಟಿಂಗ್‌ಗಳನ್ನು ಮಾಡಿದ್ದಾನೆ. ನಿನ್ನ ವಿಷಯ ಹೇಳಿದ್ದಕ್ಕೆ. ತನಗೆ ಅದೆಲ್ಲ ಚೆನ್ನಾಗಿ ಅರ್ಥವಾಗಿದೆ ಎನ್ನುತ್ತಾನೆ. ಎಂದಾದರೂ ನೀನು ಉವೆರ್ಸ್‌ಗೆ ಬರುವುದೇ ಆದರೆ, ಆತ ನಿನ್ನನ್ನು ನೋಡಿಕೊಳ್ಳುತ್ತಾನೆ.

ನಾಳೆ ಮತ್ತೆ ಬರೆಯುತ್ತೇನೆ.

ಥಿಯೊ.

ವಿನ್ಸೆಂಟ್ ಡಾಕ್ಟರ್ ಪೆರೋನ್ ಮತ್ತು ಆತನ ಹೆಂಡತಿಗೆ ಕಾಗದ ತೋರಿಸಿದ. ಪೆರೋನ್ ಕಾಗದವನ್ನು ಬಹಳ ಗಂಭೀರವಾಗಿ ಓದಿದ. ನಂತರ ಚೆಕ್ ಮೇಲೆ ಮೆಲ್ಲನೆ ಬೆರಳಾಡಿಸಿದ. ಇಷ್ಟು ದೊಡ್ಡ ಮೊತ್ತದ ಅದೃಷ್ಟಕ್ಕಾಗಿ ಅಭಿನಂದಿಸಿ. ಅವನಲ್ಲಿ ಈಗ, ಉತ್ಸಾಹ ಕ್ರಿಯಾಶೀಲವಾಗುವ ಕಡೆಗೆ ಹೊರಳಿತು. ಅರ್ಧದಾರಿಗೆ ಬಂದಾಗ, ಅವನಿಗೆ, ತಾನು ಚೆಕ್ ಮಾತ್ರ ತೆಗೆದುಕೊಂಡು, ಕಾಗದ ಅಲ್ಲಿಯೇ ಬಿಟ್ಟು ಬಂದದ್ದು ಗಮನಕ್ಕೆ ಬಂತು. ತಕ್ಷಣವೇ ಬೇಗೆ ಬೇಗ ಹೆಜ್ಜೆ ಹಾಕುತ್ತಾ ಪೆರೋನ್‌ರ ಆಫೀಸಿನ ಕಡೆಗೆ ಮರಳಿದ.

ಅವನು ಇನ್ನೇನು ಬಾಗಿಲು ತಟ್ಟುವುದರಲ್ಲಿದ್ದ.

ಅಷ್ಟರಲ್ಲಿ ತನ್ನ ಹೆಸರಿನ ಪ್ರಸ್ತಾಪ ಕೇಳಿ ಬಂತು. ಒಂದು ಕ್ಷಣ ಸಂಕೋಚದಿಂದ ಅಲ್ಲಿಯೇ ನಿಂತ.

"ಹಾಗಾದರೆ ಆತ ಹಾಗೇಕೆ ಮಾಡಿದ?" ಮೇಡಮ್ ಪೆರೋನ್ ಕೇಳಿದಳು.

"ಯಾಕೆಂದರೆ, ಇದರಿಂದ ಅಣ್ಣನಿಗೆ ಒಳ್ಳೆಯದಾಗಬಹುದೆಂದು ಭಾವಿಸಿದ."

"ಆದರೆ ಪಾಪ ಅವನಿಗೆ ಇಷ್ಟೊಂದು ಹಣ ಕಷ್ಟವಾಗಿದ್ದರೆ?....."

'ವಿನ್ಸೆಂಟ್ ಮಾಮೂಲಿನಂತಾದರೆ, ಹಣದ ಬೆಲೆ ಏನೇನೂ ಅಲ್ಲ ಅನಿಸಿರಬೇಕು."

"ಹಾಗಾದರೆ, ಇದರಲ್ಲಿ ಸ್ವಲ್ಪಾನೂ ಸತ್ಯ ಇದೇಂತ ಅನಿಸುವುದಿಲ್ಲವೇ?"

"ಅಯ್ಯೋ ನನ್ನ ಪ್ರೀತಿಯ ಮೇರಿ, ಈ ಹೆಂಗಸು ಮೊದಲೇ, ಒಬ್ಬ ಕಲಾವಿದನ ಸೋದರಿ. ಕಲೆಯ ಬಗ್ಗೆ ಒಂದಿಷ್ಟಾದರೂ ಕಲ್ಪನೆಯಿದ್ದವರ್‍ಯಾರೂ......?"

ವಿನ್ಸೆಂಟ್ ನಿಂತಲ್ಲಿಂದ ಹಿಂತಿರುಗಿದ.

ರಾತ್ರಿ ಊಟದ ಹೊತ್ತಿಗೆ ಥಿಯೋನಿಂದ ತಂತಿ ಸುದ್ದಿ ಬಂತು.

'ಹುಡುಗನಿಗೆ ನಿನ್ನ ಹೆಸರೇ ಇರಿಸಿದೆ. ಜೊಹಾನ್ನ ಮತ್ತು ವಿನ್ಸೆಂಟ್ ಕ್ಷೇಮವಾಗಿದ್ದಾರೆ.'

ತನ್ನ ಕೃತಿಯ ಮಾರಾಟ, ಥಿಯೋನಿಂದ ಬಂದ ಸುದ್ದಿ ರಾತ್ರೋರಾತ್ರಿ ಅವನನ್ನು ಹೊಸ ಮನುಷ್ಯನನ್ನಾಗಿ ಮಾಡಿತ್ತು. ಬೆಳಿಗ್ಗೆ ಬೇಗನೆ ಎದ್ದು ಸ್ಟುಡಿಯೋಗೆ ಹೊರಟ. ಅಲ್ಲಿ ಬ್ರಷ್‌ಗಳನ್ನು ಕ್ಲೀನ್ ಮಾಡಿದ. ಕ್ಯಾನ್‌ವಾಸ್‌ಗಳನ್ನು ಆರಿಸಿ ಜೋಡಿಸಿದ.

"ಡೆಲಾಕ್ರ್ವಾಕ್ಸ್, ಹಲ್ಲು, ಉಸಿರು ಇಲ್ಲದಿದ್ದಾಗ ಪೈಂಟಿಂಗ್‌ನ ಅರ್ಥಮಾಡಿಕೊಂಡರೆ, ನಾನು ಹಲ್ಲು, ಬುದ್ಧಿ ಇಲ್ಲವಾದಾಗ ಅರ್ಥಮಾಡಿಕೊಳ್ಳುತ್ತೇನೆ."

ರಭಸದೊಂದಿಗೆ ಕೆಲಸಕ್ಕೆ ಇಳಿದ. ಡೆಲಾಕ್ರ್ವಾಕ್ಸ್‌ನ 'ದಿ ಗುಡ್ ಸಮಾರಿಟನ್' ಮಿಲ್ಲೆಟ್‌ನ 'ದಿ ಸೋಯರ್, ದಿ ಡಿಗ್ಗರ್' ಮೊದಲಾದವುಗಳನ್ನು ಪ್ರತಿ ಮಾಡಿದ. ಕಲೆಯ ಬದುಕು ಕುಸಿಯುತ್ತಿತ್ತು. ಆರಂಭಿಸುವಾಗಲೇ ಹೀಗಾಗುವುದೆಂದು ಅವನಿಗೆ ತಿಳಿದಿತ್ತು. ಹಾಗಿದ್ದರೂ ಈ ಕಡೆಯ ದಿನಗಳಲ್ಲಿ ಕೊರಗುವುದೇಕೆ?'

ನಾಲ್ಕು ನೂರು ಫ್ರ್ಯಾಂಕ್‌ಗಳು ತಲುಪಿದ ಎರಡು ವಾರಗಳ ನಂತರ, "ಮರ್‌ಕ್ಯೂರ್ ದ ಫ್ರಾನ್ಸ್" ಪತ್ರಿಕೆಯ ಜನವರಿ ಸಂಚಿಕೆ ಪೋಸ್ಟ್ ಮೂಲಕ ಬಂದಿತು. ಅದರಲ್ಲಿ ಒಂದು ಲೇಖನವನ್ನು ಥಿಯೋ ಗುರುತು ಹಾಕಿದ್ದ. ಲೇಖನದ ಶೀರ್ಷಿಕೆ 'ಲೆ ಐಸೋಲೀಸ್'.

ವಿನ್ಸೆಂಟ್ ವಾನ್‌ಗೋನಲ್ಲಿ ಪ್ರಮುಖವಾಗಿ ಕಾಣುವ ಗುಣವೆಂದರೆ ಅಭಿವ್ಯಕ್ತಿಯ ಶಕ್ತಿ; ಅಭಿವ್ಯಕ್ತಿಸುವಲ್ಲಿನ ರಭಸ. ವಸ್ತುಗಳ ಸಹಜ ಸ್ವಭಾವ, ಸ್ವರೂಪಗಳನ್ನು ಸ್ಥಾಪಿಸುವಲ್ಲಿ, ವಿವೇಚನೆಯಿಲ್ಲದೆ, ಆಕಾರಗಳನ್ನು ಸರಳೀಕರಿಸುವ ಗುಣ. ಸೂರ್ಯನನ್ನು ಮುಖಾಮುಖಿ ನೋಡುವ ಹಠ. ಬಣ್ಣಗಳ ಬಗ್ಗೆ ತೋರುವ ಅದಮ್ಯ ಭಾವ ತೀವ್ರತೆ – ಇಂಥವುಗಳ ನಡುವೆಯೇ ಒಬ್ಬ ಅನ್ವೇಷಕನ ಅನಾವರಣ, ಕೆಲವೊಮ್ಮೆ ಒರಟಾಗಿ, ಕ್ರೂರವಾಗಿ, ಮತ್ತೆ ಕೆಲವೊಮ್ಮೆ ಮೃದುವಾಗಿ, ಸೂಕ್ಷ್ಮವಾಗಿ.

ಫ್ರಾನ್ಸ್ ಹಾಲ್ಸ್‌ನ ಮಹತ್ವದ ಪರಂಪರೆಯ ಮುಂದುವರಿಕೆಯ ಕೊಂಡಿಯಾಗಿದ್ದಾನೆ, ವಿನ್ಸೆಂಟ್ ವಾನ್‌ಗೋ. ಅವನ ವಾಸ್ತವವಾದ, ಹಿಂದಿನವರಿಗಿಂತ ಮುಂದುವರೆದದ್ದಾಗಿದೆ. ತನ್ನ ಹಿಂದಿನವರಲ್ಲಿದ್ದ ದೈಹಿಕ, ಮಾನಸಿಕ ಸ್ವಸ್ಥತೆ, ಸಮತೋಲನಗಳು ಕಾಣಬರುತ್ತವೆ. ಅವನ ಕ್ಯಾನ್‌ವಾಸ್‌ಗಳು, ವಸ್ತುಗಳಲ್ಲಿ ಕಾಣ ಬಯಸುವ ಶುದ್ಧ ಸತ್ವದ ಶೋಧಕ ಮನಸ್ಸು, ಪ್ರಕೃತಿಯ ಅಣು ಅಣುವಿನಲ್ಲೂ ಅವನು ತೋರುವ ಹಸುಗೂಸಿನಂತಹ ಮುಗ್ಧ ಪ್ರೀತಿ.

ಆಲೋಕಿತ ಆತ್ಮದ ಸಮರ್ಥ, ಶಕ್ತಿಯುತ, ನಿಜವಾದ ಅರ್ಥದಲ್ಲಿ ಕಲಾವಿದನಾಗಿರುವ ಈತನನ್ನು, ಗುರುತಿಸುವ, ಸಂತಸ ನೀಡುವ ಕೆಲಸ ಜಗತ್ತು ಎಂದಾದರೂ ಮಾಡುವುದೇ? ಖಂಡಿತ ಮಾಡುವುದಿಲ್ಲ. ನನಗೆ ಗೊತ್ತು. ಈತ ಬಹಳ ಸರಳವ್ಯಕ್ತಿ, ಜೊತೆಗೆ ನಮ್ಮ ಸಮಕಾಲೀನ ಬೂರ್ಜ್ವಾ ಮನಸ್ಸಿಗೆ ಅರ್ಥವಾಗದಷ್ಟು ಸೂಕ್ಷ್ಮ ಸಂವೇದನಾಶೀಲ. ಈತನ ಸೋದರ ಕಲಾವಿದರಿಗಲ್ಲದೆ, ಬೇರೆ ಯಾರಿಗೂ ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ.

ಜಿ. ಆಲ್ಬರ್ಟ್ ಆರಿಯರ್.

ಲೇಖನವನ್ನು ವಿನ್ಸೆಂಟ್, ಡಾಕ್ಟರ್ ಪೆರೋನ್‌ಗೆ ತೋರಿಸಲಿಲ್ಲ.

ಶಕ್ತಿ, ಉತ್ಸಾಹಗಳೆಲ್ಲ ಮತ್ತೊಮ್ಮೆ ಅವನಲ್ಲಿ ನೆಲೆಗೊಂಡವು. ತಾನಿದ್ದ ವಾರ್ಡ್, ವಾರ್ಡಿನ ಸೂಪರಿಡೆಂಟ್, ಆತನ ಹೆಂಡತಿ ಮೊದಲಾದವರ ಪಿಕ್ಚರ್‌ಗಳನ್ನು ಬಿಡಿಸಿದ.

ಮಿಲ್ಲೆಟ್ ಮತ್ತು ಡೆಲಾಕ್ರ್ಯಾಕ್ಸ್‌ರ ಚಿತ್ರಗಳ ಪ್ರತಿಮಾಡಿದ. ಹಗಲೂ ರಾತ್ರಿಗಳ ಪರಿವೆಯಿಲ್ಲದೆ ಒಂದೇ ಸಮನೆ ಕೆಲಸಮಾಡಿದ.

ತನ್ನ ಖಾಯಿಲೆಯ ಇತಿಹಾಸವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ತನಗೆ ಬರುತ್ತಿರುವ ಮೂರ್ಛೆ ನಿಯತಕಾಲಿಕವೆಂಬುದು ಅರಿವಿಗೆ ಬಂತು. ಮೂರು ತಿಂಗಳಿಗೊಮ್ಮೆ ಅದು ಬರುತ್ತಿದೆಯೆಂದು ಗೊತ್ತಾದ ಬಳಿಕ, ಸ್ವಲ್ಪ ಎಚ್ಚರಿಕೆ ತೆಗೆದುಕೊಳ್ಳುವುದು ಸಾಧ್ಯ. ಮೊದಲೇ ಹೀಗೆ ಆಲೋಚಿಸಿದ್ದರೆ ಅನೇಕ ಸಲ, ಗುರಿಯಾಗುತ್ತಿದ್ದ ಅಟ್ಯಾಕ್‌ಗಳಿಂದ ತನ್ನನ್ನು ಕಾಪಾಡಿಕೊಳ್ಳಬಹುದಾಗಿತ್ತು. ಈಗ ಮುಂದೆ ಯಾವಾಗ ಬರಬಹುದೆಂದು ತಿಳಿದು, ಹೆಚ್ಚು ಕೆಲಸ ಮಾಡದೆ ವಿಶ್ರಾಂತಿ ತೆಗೆದುಕೊಂಡರೆ ಎಲ್ಲವೂ ಸರಿಯಾಗುವುದೆಂದು ಯೋಚಿಸಿದ. ಅಕಸ್ಮಾತ್ ಇಷ್ಟೆಲ್ಲ ಎಚ್ಚರಿಕೆಯ ನಡುವೆಯೂ ಬಂದರೆ, ಅಷ್ಟೊಂದು ಗಂಭೀರವಾಗಿರುವುದಿಲ್ಲ. ಅಲ್ಪಸ್ವಲ್ಪ ಬಲ ಹೀನತೆ, ನೆಗಡಿ, ಚಳಿ ಇತ್ಯಾದಿಗಳಷ್ಟೇ ಇದ್ದೀತು.

ಈಗ ಅವನನ್ನು ಕಾಡುತ್ತಿದ್ದ ಒಂದೇ ಒಂದು ಚಿಂತೆಯೆಂದರೆ, ಆಶ್ರಮದಲ್ಲಿನ ಧಾರ್ಮಿಕ ಪರಿಸರ. ಒಂದೊಂದು ಸಲ ಸಿಸ್ಟರುಗಳ ನಡವಳಿಕೆ ನೋಡಿದರೆ ಅವನಿಗೇ ಅನುಮಾನ ಬರುತ್ತಿತ್ತು. ಹುಚ್ಚರು ರೋಗಿಗಳೋ ಅಥವಾ ಇವರೇ ಹುಚ್ಚು ರೋಗಿಗಳೋ ಎಂದು! ಚಳಿಗಾಲ ಬಂದರೆ, ತಲೆಮೇಲಿನ ಮುಸುಕನ್ನು ಮತ್ತಷ್ಟು ಮುಖಕ್ಕೆ ಎಳೆದುಕೊಂಡು, ಮಂತ್ರವನ್ನು ಮಣಮಣಿಸುತ್ತಾ, ಕ್ರಾಸ್‌ಗಳ ಮೇಲೆ ಬೆರಳಾಡಿಸುತ್ತ ಹೋಗುವುದೇ ಒಂದು ವಿಚಿತ್ರವೆನಿಸುತ್ತಿತ್ತು. ಬೋರಿನೇಜ್‌ನಲ್ಲಿ ಅವನಿಗಾಗಿದ್ದ ಭಯಂಕರ ಅನುಭವದಿಂದ ಯಾವುದೇ ಧಾರ್ಮಿಕ ವಿಧಿ, ಆಚರಣೆ, ಪರಿಸರವೆಂದರೆ ಅವನನ್ನು ಹುಚ್ಚನಂತಾಗಿಸುತ್ತಿತ್ತು. ಆಗ ಅವನು ಗಂಭೀರವಾಗಿ ಕೆಲಸದಲ್ಲಿ ತೊಡಗಿಸಿಕೊಳ್ಳುತ್ತಿದ್ದ. ಅವರನ್ನು ಕೆಲಸದ ಮಗ್ನತೆಯಲ್ಲಿ ಮರೆಯಲು ಪ್ರಯತ್ನಿಸುತ್ತಿದ್ದ.

ಮೂರು ತಿಂಗಳು ಮುಗಿಯಲು ಬರುತ್ತಿದ್ದಂತೆ, ನಲವತ್ತೆಂಟು ಗಂಟೆಗಳ ವಿರಾಮಕೊಡಲು ಆಲೋಚಿಸಿ, ನಿದ್ದೆ, ಊಟ, ವಿಶ್ರಾಂತಿಗಳಿಗೆ ನಿಯಮಿತ ಸಮಯವನ್ನು ಮೀಸಲಿರಿಸಿದ. ಸಿಸ್ಟರುಗಳು ಓಡಾಡುವುದು ಕಣ್ಣಿಗೆ ಬೀಳಬಾರದೆಂದು ಪರದೆಯನ್ನು ಎಳೆದು ಮುಚ್ಚಿದ.

ಸ್ವಾಧೀನ ತಪ್ಪಿ ಬೀಳುವ ದಿನ ಬರುವುದರಲ್ಲಿತ್ತು. ಪ್ರೀತಿಯಿಂದ ಕುತೂಹಲದಿಂದ ಅದಕ್ಕಾಗಿ ಎದುರುಕಾದ. ದಿನ, ಗಂಟೆಗಳು ಮುಂದೆ ಸಾಗಿದವು. ಏನೂ ಆಗಲೇ ಇಲ್ಲ. ಅವನಿಗೆ ಆಶ್ಚರ್ಯವಾಯಿತು; ಜೊತೆಗೆ ನಿರಾಶೆಯೂ ಆಯಿತು. ಎರಡನೇ ದಿನವೂ ಕಳೆಯಿತು. ಅವನು ಮಾಮೂಲಿನಂತೆಯೇ ಇದ್ದ. ಯಾವುದೇ ಅನಾಹುತ ಸಂಭವಿಸದೆ ಮೂರನೇ ದಿನವೂ ಕಳೆಯಲು, ತನಗೆ ತಾನೇ ನಕ್ಕ.

"ನಾನೆಲ್ಲೋ ಹುಚ್ಚ. ಅಂತ ಅಟ್ಯಾಕ್ಸ್‌ಗಳನ್ನು ಅನುಭವಿಸಿ ಮುಗಿಸಿದ್ದಾಗಿದೆ. ಡಾಕ್ಟರ್ ಪೆರೋನ್‌ರ ಅಭಿಪ್ರಾಯ ಸರಿಯಿಲ್ಲ. ಇನ್ನು ಮುಂದೆ ನನಗೇನೂ ಆಗುವುದಿಲ್ಲ. ಯಾವುದಕ್ಕೂ ಇನ್ನು ಹೆದರಬೇಕಾಗಿಲ್ಲ. ಸುಮ್ಮನೆ ಹಾಸಿಗೇಲಿ ಬಿದ್ದುಕೊಂಡು ಸಮಯ

ಹಾಳು ಮಾಡಿದ್ದಾಯಿತು. ನಾಳೆ ಬೆಳಿಗ್ಗೆ ಏಳುತ್ತಿದ್ದಂತೆಯೇ ಕೆಲಸಕ್ಕೆ ಹೊರಟು ಬಿಡಬೇಕು.

ನಟ್ಟನಡುರಾತ್ರಿಯಲ್ಲಿ, ಎಲ್ಲರೂ ಗಾಢ ನಿದ್ರೆಯಲ್ಲಿರುವಾಗ, ಮೆಲ್ಲನೆ ಮಂಚದಿಂದ ಇಳಿದು, ಬರಿಗಾಲಲ್ಲೇ, ವಾರ್ಡಿನ ಕಲ್ಲು ನೆಲದ ಮೇಲೆ ನಡೆಯುತ್ತ ಹೊರಟ. ಆ ಕತ್ತಲಲ್ಲೇ ಇದ್ದಿಲನ್ನು ಇರಿಸಿದ್ದ ಸೆಲ್ಲಾರ್ ಒಳಗೆ ಪ್ರವೇಶಿಸಿದ. ಮೊಣಕಾಲೂರಿ ಕುಳಿತು, ಒಂದಷ್ಟು ಇದ್ದಿಲು ಪುಡಿಯನ್ನು ಎತ್ತಿಕೊಂಡು ಮುಖಕ್ಕೆಲ್ಲಾ ಬಳಿದುಕೊಂಡ.

"ಮೇಡಂ ಡೆನಿಸ್, ಈಗ ನೋಡಿ. ಅವರು ನನ್ನನ್ನು ಒಪ್ಪಿಕೊಳ್ಳುತ್ತಾರೆ. ಅವರಲ್ಲಿ ನಾನೂ ಒಬ್ಬನೆಂದು ಕರೆದುಕೊಳ್ಳುತ್ತಾರೆ, ಯಾಕೆಂದರೆ ನನ್ನ ಮುಖವೆಲ್ಲಾ ಕಪ್ಪಾಗಿದೆ. ನಾನು ಹೇಳುವ ದೇವರ ಮಾತನ್ನು ಕೇಳಿಸಿಕೊಳ್ಳುತ್ತಾರೆ."

ಬೆಳಗಾಗುತ್ತಿದ್ದಂತೆ, ಕಾವಲುಗಾರರು ಅವನನ್ನು ಅಲ್ಲಿ ಪತ್ತೆ ಹಚ್ಚಿದರು. ಅವನು ಏನೇನೋ ಪ್ರಾರ್ಥನೆಗಳನ್ನು, ಅಸಂಬದ್ಧವಾಗಿ ಉಚ್ಚರಿಸುತ್ತಿದ್ದ. ದೇವರ ಸಂದೇಶಗಳನ್ನು ಬಡಬಡಿಸುತ್ತಿದ್ದ. ಅವನ ಕಿವಿಯಲ್ಲಿ ಅನುರಣಿಸುತ್ತಿದ್ದ ವಿಚಿತ್ರ ಧ್ವನಿಗಳಿಗೆ ಉತ್ತರಿಸುತ್ತಿದ್ದ.

ಅವನ 'ಧಾರ್ಮಿಕ ಮನೋ ವಿಕಲ್ಪಗಳು' ಹಲವು ದಿನಗಳ ವರೆಗೂ ಮುಂದುವರೆದಿತ್ತು. ನಂತರ ಅದರಿಂದ ಬಿಡುಗಡೆ ಹೊಂದಿದ. ಸಿಸ್ಟರೊಬ್ಬರ ಮೂಲಕ ಡಾಕ್ಟರ್ ಪೆರೋನ್‌ಗೆ ಹೇಳಿ ಕಳಿಸಿದ.

"ಡಾಕ್ಟರ್, ಇಲ್ಲಿನ ಧಾರ್ಮಿಕ ಪರಿಸರದಿಂದ ದೂರ ಇದ್ದಿದ್ದರೆ, ಬಹುಶಃ ಈ ಬಾರಿಯ ಅಟ್ಯಾಕ್‌ನಿಂದ ತಪ್ಪಿಸಿಕೊಳ್ಳಬಹುದಾಗಿತ್ತು."

ಡಾಕ್ಟರ್ ಪೆರೋನ್ ಇದನ್ನು ಗಂಭೀರವಾಗಿ ತೆಗೆದುಕೊಂಡಂತೆ ಕಾಣಲಿಲ್ಲ. ಮಂಚಕ್ಕೆ ಒರಗಿಕೊಂಡ. ವಿನ್ಸೆಂಟ್‌ನ ಪರದೆಯನ್ನು ತನ್ನ ಬೆನ್ನಿಗೆ ಎಳೆದುಕೊಂಡ.

"ನಾನೇನು ಮಾಡಲಿ ವಿನ್ಸೆಂಟ್? ಪ್ರತಿ ಚಳಿಗಾಲದಲ್ಲೂ ಇದೇ ರೀತಿ. ನನಗೂ ಇದು ಒಪ್ಪಿಗೆಯಿಲ್ಲ. ಆದರೂ ಮಧ್ಯೆ ಪ್ರವೇಶಿಸುವುದೂ ಸಾಧ್ಯವಿಲ್ಲ. ಇಷ್ಟೆಲ್ಲ ಆದರೂ ಸಿಸ್ಟರುಗಳು ತುಂಬಾ ಒಳ್ಳೆ ಕೆಲಸ ಮಾಡುತ್ತಿದ್ದಾರೆ."

"ಇರಬಹುದು. ಮತಿಸ್ಥಿಮಿತರಾದವರನ್ನು, ಹುಚ್ಚರ ನಡುವೆ, ಧಾರ್ಮಿಕ ಹುಚ್ಚುತನಕ್ಕೆ ಒಳಗಾಗಿಸದೆ ಇರಿಸುವುದು ಕಷ್ಟದ ಕೆಲಸವೇ. ಅವರ ಆ ಧಾರ್ಮಿಕ ಮನೋವಿಕಲ್ಪದ ನಡವಳಿಕೆಯಿಂದಲೇ ನನಗೆ ಅಟ್ಯಾಕ್ ಬಂದದ್ದು."

"ವಿನ್ಸೆಂಟ್ ಅದು ನಿನ್ನ ಭ್ರಮೆ. ನಿನಗೆ ಈ ಅಟ್ಯಾಕ್ ನಿಯಮದಂತೆ ಬರಲೇಬೇಕಿತ್ತು. ನಿನ್ನ ನರಮಂಡಲ ಮೂರು ತಿಂಗಳಿಗೊಮ್ಮೆ ಹೀಗೆ ನೀನು ಉದ್ರೇಕಕ್ಕೆ ಒಳಗಾಗಿ ಮತಿ ಸ್ತಿಮಿತತೆ ತಪ್ಪುತ್ತದೆ. ನಿನ್ನ ಭ್ರಮೆಗಳು ಧಾರ್ಮಿಕವಲ್ಲದಿದ್ದರೆ, ಬೇರೆ ಯಾವ ಯಾವ ಭ್ರಮೆಗಳೋ ಆಗಿದ್ದಿರುತ್ತಿದ್ದವು."

"ಈಗೇನಾದರೂ, ಮತ್ತೊಂದು ಅಟ್ಯಾಕ್ ಬಂದರೆ, ನನ್ನನ್ನು ಕರೆದುಕೊಂಡು ಹೋಗಲು ನನ್ನ ತಮ್ಮನಿಗೆ ಹೇಳಬಹುದೇ?"

'ನಿನಗೆ ಹೇಗೆ ಇಷ್ಟವಾದರೆ ಹಾಗೆ ಮಾಡು."

ವಸಂತಾಗಮನದ ಮೊದಲ ದಿನವೇ, ಸ್ಟುಡಿಯೋದಲ್ಲಿ ತನ್ನ ಕೆಲಸ ಆರಂಭಿಸಿದ,. ಕಿಟಕಿಯಾಚೆಗಿನ ಹೊಲದ ದೃಶ್ಯವನ್ನು ಕ್ಯಾನ್‌ವಾಸ್‌ಗೆ ಇಳಿಸಿದ. ಕೊಯ್ಲಿನ ನಂತರ ಉಳಿದ ಮೋಟು ಭಾಗಗಳನ್ನು ಉಳುತ್ತಿರುವ ದೃಶ್ಯ ಅದಾಗಿತ್ತು. ಗುಡ್ಡಗಳ ಹಿನ್ನೆಲೆಗೆ, ನೀಲಿ ಛಾಯೆಯ ಉತ್ತ ನೆಲದಲ್ಲಿ ಹಳದಿ ಬಣ್ಣದಲ್ಲಿ ಮೋಟು ಗಿಡಗಳ ಸಾಲುಗಳು. ಎಲ್ಲೆಲ್ಲೂ ಬಾದಾಮಿ ಗಿಡಗಳು ಹೂ ಮುಡಿದು ನಿಂತಿದ್ದವು. ಸೂರ್ಯ ಮುಳುಗುವ ಸಮಯದಲ್ಲಿ ಮತ್ತೊಮ್ಮೆ ಆಕಾಶ ತಿಳಿ ಹಳದಿ ಬಣ್ಣವನ್ನು ಉಟ್ಟಿತ್ತು.

ನಿಸರ್ಗದ ನಿರಂತರ ಮರುಸೃಷ್ಟಿ ವಿನ್ಸೆಂಟ್‌ನಲ್ಲಿ ಹೊಸ ಹುರುಪನ್ನೇನೂ ತುಂಬಲಿಲ್ಲ. ತನ್ನ ವಾರ್ಡಿನ ಹುಚ್ಚರ ಜೊತೆಗೆ ಹೊಂದಿಕೊಂಡು ಹೋಗುತ್ತಿದ್ದವನಿಗೆ, ಮೊಟ್ಟ ಮೊದಲಬಾರಿಗೆ ಅವರ ಅವಾಚ್ಯ ಶಬ್ದಗಳು, ಅಸಂಬದ್ಧ ಮಾತುಗಳು, ಮೂರ್ಛೆ ಬೀಳುತ್ತಿದ್ದ ದೃಶ್ಯಗಳು ಅವನಿಗೆ ಅಸಹನೀಯವೆನಿಸತೊಡಗಿತು. ತಲೆಚಿಟ್ಟು ಹಿಡಿದು ಹೋಗುತ್ತಿತ್ತು. ನರನಾಡಿಗಳಲ್ಲಿ ಸ್ಫೋಟಿಸಿದಂತೆ ಭಾಸವಾಗತೊಡಗಿತು. ಆದರೂ ಇವುಗಳಿಂದ, ಸಿಸ್ಟರುಗಳ ಕಪ್ಪು-ಬಿಳಿ ಗೌನುಗಳಲ್ಲಿ ಹುದುಗಿ ಮಣಮಣಿಸುವ ಮಂತ್ರಗಳಿಂದ ಬಿಡುಗಡೆ ಸಾಧ್ಯವೇ ಇರಲಿಲ್ಲ. ಅವರನ್ನು ನೋಡುತ್ತಿದ್ದಂತೆಯೇ ಇವನಲ್ಲಿ ಭೀತಿಯ ಅಲೆಗಳು ಏಳುತ್ತಿದ್ದವು.

ಥಿಯೋಗೆ ಕೂಡಲೇ ಪತ್ರ ಬರೆದ:-

"ಥಿಯೋ, ಸೈಂಟ್ ರೆಮಿ ಬಿಡುವುದೆಂದರೆ ನನಗೆ ದುಃಖವಾಗುತ್ತದೆ. ಇಲ್ಲಿ ಇನ್ನೂ ಬೇಕಾದಷ್ಟು ಕೆಲಸ ಮಾಡುವುದಿದೆ. ಆದರೆ ಇಲ್ಲಿನ ಧಾರ್ಮಿಕ ಪರಿಸರ, ಸಿಸ್ಟರುಗಳ ನಡವಳಿಕೆಯಿಂದ ಮತ್ತೊಮ್ಮೆ ಅಟ್ಯಾಕೇನಾದರೂ ಆದರೆ ಅದಕ್ಕೆ ಹೊಣೆ ನನ್ನ ನರಗಳ ದೌರ್ಬಲ್ಯವಲ್ಲ ಎನ್ನುವುದು ತಿಳಿದಿರಲಿ. ಹೀಗೇ ಇನ್ನೊಂದೆರಡು ಮೂರು ಅಟ್ಯಾಕ್‌ಗಳಾದಲ್ಲಿ, ನನ್ನ ಸಾವು ಖಚಿತ.

ಧಾರ್ಮಿಕ ಮನೋವಿಕಲ್ಪಗಳಿಂದಾಗಿ ನಾನೇನಾದರೂ ಸೀಜ಼ರ್ (ಮೂರ್ಛೆ)ಗೆ ಒಳಗಾದರೆ, ಆ ಸುದ್ದಿಯನ್ನು ಕೇಳಿಸಿಕೊಳ್ಳಲು ಸಿದ್ಧವಾಗಿರು. ಸ್ವಲ್ಪ ಆರೋಗ್ಯ ಸುಧಾರಿಸುತ್ತಿದ್ದಂತೆ, ನಾನು ಕೂಡಲೇ ಪ್ಯಾರಿಸಿಗೆ ಬಂದು ಬಿಡುತ್ತೇನೆ. ಮತ್ತೆ ಉತ್ತರದ ಕಡೆಗೆ ಬರುವುದರಲ್ಲಿಯೇ ನನಗೆ ಒಳ್ಳೆಯದೆನಿಸುತ್ತದೆ. ನಾನು ನಾನಾಗಿ ಮನಸ್ಸಿನ ಸ್ತಿಮಿತತೆಯನ್ನು ಕಳೆದುಕೊಳ್ಳದೆ, ನನ್ನ ಕೆಲಸದೊಂದಿಗೆ ಬದುಕಬಲ್ಲೆ ಎನಿಸುತ್ತದೆ.

"ನೀನು ಹೇಳಿದ ಡಾಕ್ಟರ್ ಗಾಷೆಟ್ ವಿಷಯ ಏನಾಯಿತು? ನನ್ನ ವಿಚಾರದಲ್ಲಿ ಆಸಕ್ತಿ ತೆಗೆದುಕೊಳ್ಳುವ ಸಾಧ್ಯತೆ ಇದೆಯೇ?" ಎಂದೆಲ್ಲ ವಿಚಾರಗಳನ್ನು ಸ್ಪಷ್ಟವಾಗಿ ವಿವರಿಸಿದ.

ಥಿಯೋ ಕೂಡಾ, ಡಾಕ್ಟರ್ ಗಾಷೆಟ್ ಜೊತೆ ತಾನು ಮಾತಾಡಿರುವುದಾಗಿಯೂ, ಅವನ ಕ್ಯಾನ್‌ವಾಸ್‌ಗಳನ್ನು ತೋರಿಸಿರುವುದಾಗಿಯೂ, ಅವನನ್ನು ಉವರ್ಸ್‌ನ ತಮ್ಮ ಮನೆಗೆ ಆಹ್ವಾನಿಸಿರುವುದಾಗಿಯೂ ತಿಳಿಸಿ ಬರೆದ. ಅವರ ಮನೆಯಲ್ಲಿದ್ದುಕೊಂಡೇ

ಪೈಂಟಿಂಗ್ ಮಾಡಲು ಕುತೂಹಲವನ್ನೂ ವ್ಯಕ್ತಪಡಿಸಿದ ವಿಷಯವನ್ನೂ ಮರೆಯದೆ ತಿಳಿಸಿದ.

"ಆತ ನರಗಳ ಖಾಯಿಲೆಯ ತಜ್ಞ, ಅದರಲ್ಲಿಯೂ ಪೈಂಟರ್ಸ್‌ಗೆ ಸಂಬಂಧಿಸಿದಂತೆ, ವಿಶೇಷವಾಗಿ ಪರಿಣತ. ನನಗಂತೂ ನೀನು ಅವರ ವಶಕ್ಕೆ ಬಿದ್ದರೆ, ಅದಕ್ಕಿಂತ ಸುರಕ್ಷಿತ ಸ್ಥಳ ಮತ್ತೊಂದು ಇರಲಾರದು ಎಂಬುದು ನನ್ನ ಬಲವಾದ ನಂಬಿಕೆ. ನೀನು ಯಾವಾಗ ಬೇಕಾದರೂ ಬರಬಹುದು. ಬರುವುದಕ್ಕೆ ಮೊದಲು ತಂತಿ ಸಂದೇಶವೊಂದನ್ನು ಕಳಿಸು. ಕೂಡಲೇ ನಾನು ಮೊದಲ ಟ್ರೈನಿಗೇ ಹೊರಟು ಸೈಂಟ್‌ರೆಮಿಗೆ ಬರುತ್ತೇನೆ." ಎಂದು ಭರವಸೆಯ ಮಾತುಗಳನ್ನು ಹೇಳಿದ್ದ.

ವಸಂತದ ಬೇಸಿಗೆ ಆರಂಭವಾಯಿತು. ಗಾರ್ಡನ್‌ನಲ್ಲಿ ಸಿಕಾಡಾಗಳ ಸಂಗೀತ ಶುರುವಾಯಿತು. ವಿನ್ಸೆಂಟ್ ಮೂರನೇ ದರ್ಜೆಯ ವಾರ್ಡಿನ ಪೋರ್ಟಿಕೋವನ್ನು ಪೈಂಟ್ ಮಾಡಿದ. ಗಾರ್ಡನ್‌ಗಳ ನಡೆ ಹಾದಿಗಳನ್ನು, ಮರಗಳನ್ನು ಮತ್ತು ಕನ್ನಡಿಯಲ್ಲಿನ ತನ್ನ ಪ್ರತಿಬಿಂಬವನ್ನು ಪೈಂಟ್ ಮಾಡಿದ. ಕ್ಯಾಲೆಂಡರ್ ಮೇಲೆ ಒಂದು ಕಣ್ಣು, ಕ್ಯಾನ್‌ವಾಸ್ ಮೇಲೆ ಒಂದು ಕಣ್ಣಿಟ್ಟು ಕೆಲಸ ಮಾಡುತ್ತಿದ್ದ.

ಮುಂದಿನ ಅಟ್ಯಾಕ್ ಮೇ ತಿಂಗಳಲ್ಲಿ ಬರುವುದಿತ್ತು. ನಿಸ್ತಬ್ಧ ಕಾರಿಡಾರ್‌ಗಳಿಂದ, ಏನೇನೋ ಧ್ವನಿಗಳು ಕೇಳಿಬಂದವು. ಅವುಗಳಿಗೆ ಅವನು ಉತ್ತರಿಸುತ್ತಿದ್ದ. ಅವನದೇ ಧ್ವನಿ ಪ್ರತಿಧ್ವನಿಸಿ ಹಿಂದಕ್ಕೆ ಬರುತ್ತಿತ್ತು. ವಿಧಿಯ ಕರೆಯಂತೆ ಅದು ಕೇಳಿ ಬಂತು. ಈ ಬಾರಿ ಚಾಪೆಲ್‌ನಲ್ಲಿ ಅವನು ಬಿದ್ದು ಬಿಟ್ಟಿದ್ದನ್ನು ಗುರುತಿಸಿದರು. ಪೂರ್ತಿಯಾಗಿ ಪ್ರಜ್ಞಾಶೂನ್ಯ ಸ್ಥಿತಿಯಲ್ಲಿದ್ದ. ಈ ಧಾರ್ಮಿಕ ವಿಕಲ್ಪದ ಪರಿಣಾಮದಿಂದ ಚೇತರಿಸಿಕೊಳ್ಳುವುದಕ್ಕೆ ಸ್ವಲ್ಪ ದಿನ ಬೇಕಾಯಿತು. ಮೇ ತಿಂಗಳ ಮಧ್ಯದಷ್ಟು ಹೊತ್ತಿಗೆ ಸುಧಾರಿಸಿದ. ಥಿಯೋ ತಾನೇ ಬಂದು ಕರೆದೊಯ್ಯುವುದಾಗಿ ಸ್ದಿದನಾದರೂ, ವಿನ್ಸೆಂಟ್ ತಾನೊಬ್ಬನೇ ಬರುತ್ತೇನೆಂದು ಹಟ ಹಿಡಿದ. ಒಬ್ಬ ಸಹಾಯಕ ಜೊತೆಗೆ ಬಂದು ಅವನನ್ನು ಟ್ರಾಸ್‌ಕಾನ್‌ನಲ್ಲಿ ಟ್ರೈನ್ ಹತ್ತಿಸಿದ. ಹೊರಡುವ ಮೊದಲು ಥಿಯೋಗೆ ಅವನು ಬರೆದ:-

"ಥಿಯೋ, ನಾನೇನೂ ಕೈಲಾಗದವನಲ್ಲ; ಅಥವಾ ಕ್ರೂರ ಪ್ರಾಣಿಯೂ ಅಲ್ಲ. ನಾನು ಎಲ್ಲರಂತೆ ಇರುವ ಮನುಷ್ಯ ಎಂಬುದನ್ನು ನಿನಗೆ ಮತ್ತು ನನಗೂ ಕೂಡಾ ತೋರಿಸಿ ಕೊಡಬೇಕಾಗಿದೆ. ಹುಚ್ಚರಿರುವ ಆಶ್ರಮದಿಂದ ನಾನಾಗಿ ಬಿಡಿಸಿಕೊಂಡು ಹೊರಬಂದು, ಉವರ್ಸ್‌ನಲ್ಲಿ ಹೊಸದಾಗಿ ಜೀವನವನ್ನು ಆರಂಭಿಸಲು ಹೊರಟಿದ್ದೇನೆ ಎಂದರೆ, ಬಹುಶಃ ಈ ಖಾಯಿಲೆಯನ್ನೂ ಕೂಡಾ ಗೆಲ್ಲಬಲ್ಲೆ ಎಂಬ ಭರವಸೆ ಮೂಡುತ್ತಿದೆ.

ನನಗೆ ನಾನೇ ಇನ್ನೊಂದು ಅವಕಾಶ ಕೊಟ್ಟುಕೊಂಡು ನೋಡುತ್ತೇನೆ. ಹುಚ್ಚರ ನೆಲೆಯಿಂದ ದೂರವಾಗಿ, ನಾನು ಮಾಮೂಲಿ ಮನುಷ್ಯನಾಗಿರುತ್ತೇನೆ ಎಂದು ನನಗೆ ಪೂರ್ಣ ನಂಬಿಕೆಯಿದೆ. ನೀನು ಹೇಳುವ ರೀತಿಯಿಂದ ಉವರ್ಸ್ ಪ್ರಶಾಂತವೂ

ಸುಂದರವೂ ಆಗಿರುತ್ತದೆ ಎಂದು ನನಗನಿಸುತ್ತದೆ. ಡಾಕ್ಟರ್ ಗಾಷೆಟ್‌ರ ಕಣ್ಣಿನ ರಕ್ಷಣೆಯಲ್ಲಿ ಜಾಗರೂಕನಾಗಿದ್ದರೆ, ನನ್ನ ಖಾಯಿಲೆಯನ್ನು ಗೆದ್ದೇ ಗೆಲ್ಲುತ್ತೇನೆ. ಇದು ಸತ್ಯ.

ನನ್ನ ಟ್ರೈನ್ ಟ್ರಾಸ್‌ಕಾನ್ ಸ್ಟೇಷನ್ ಬಿಟ್ಟಕೂಡಲೇ ನಿನಗೆ ತಂತಿ ಕಳಿಸುತ್ತೇನೆ. ಬಹುಶಃ ನಾನು ಶನಿವಾರ ಇಲ್ಲಿಂದ ಹೊರಡುತ್ತೇನೆ. ಇದರಿಂದ ಭಾನುವಾರ ಇಡೀ ದಿನ ನಿನ್ನ, ಜೊಹಾನ್ನ ಮತ್ತು ಮಗುವಿನ ಜೊತೆ ಕಳೆಯುವ ಸಂತಸದ ಅವಕಾಶ ಸಿಗುತ್ತದೆ.

□□

## ಭಾಗ – ಎಂಟು

# ಸಾವಿನಲ್ಲೂ ಸಂಗ ಬಿಡಲಿಲ್ಲ

–೧–

ನಿರೀಕ್ಷೆಯ ಉತ್ಸುಕತೆಯಲ್ಲಿ ಥಿಯೋ ರಾತ್ರಿಯೆಲ್ಲ ಎದ್ದೇ ಇದ್ದ. ವಿನ್ಸೆಂಟ್‌ನ ಟ್ರೈನ್ ತಲುಪುವುದಕ್ಕೆ ಎರಡು ಗಂಟೆ ಮೊದಲೇ ಗೇರ್ ದ ಲಿಯೋನ್ ಗೆ ಹೊರಟ. ಜೋಹಾನ್ನ ಮಗುವಿನೊಂದಿಗೆ ಮನೆಯಲ್ಲಿಯೇ ಉಳಿದಳು. ಅವಳು ನಾಲ್ಕನೆಯ ಮಹಡಿಯಲ್ಲಿದ್ದ ಅಪಾರ್ಟ್‌ಮೆಂಟಿನ ಬಾಲ್ಕನಿಯಿಂದ, ಮನೆಯ ಮುಂದೆ ಎತ್ತರವಾಗಿ ಬೆಳೆದಿದ್ದ ಕಪ್ಪು ಮರವೊಂದರ ಎಲೆಗಳ ನಡುವಿನಿಂದಲೇ ಅವರು ಬರುವುದನ್ನು ನಿರೀಕ್ಷಿಸುತ್ತಾ, ಬಗ್ಗಿ ಬಗ್ಗಿ ನೋಡುತ್ತಿದ್ದಳು. ರೂ ಪಿಗಾಲ್ಲ್‌ನಿಂದ ಬರುವ ಗಾಡಿ ಸಿಟಿಪಿಗಾಲ್‌ನ ಪ್ರವೇಶದ್ವಾರದ ಬಳಿಗೆ ಬರುವುದನ್ನೇ ಕಾಯುತ್ತಿದ್ದಳು.

ಗೇರ್ ದ ಲಿಯೋನ್‌ನಿಂದ ಥಿಯೋ ಮನೆ ಸ್ವಲ್ಪ ದೂರವೇ ಇತ್ತು. ಆದರೂ ಜೊಹಾನ್ನಳ ಕಾತರ ಕ್ಷಣಕ್ಷಣಕ್ಕೂ ಹೆಚ್ಚುತ್ತಿತ್ತು. ವಿನ್ಸೆಂಟ್‌ಗೆ ಟ್ರೈನ್‌ನಲ್ಲಿ ಏನಾದರೂ ಆಗಿಬಿಟ್ಟಿದ್ದರೆ? – ಎಂಬ ಹೆದರಿಕೆಯೇ ಅವಳ ಕಾತರಕ್ಕೆ ಕಾರಣವಾಗಿತ್ತು. ಅಂತೂ ಕೊನೆಗೆ ಗಾಡಿ ಬಂತು. ಒಳಗಿನಿಂದಲೇ ಅರಳಿದ ಮುಖಗಳೆರಡು ಕೈಬೀಸಿ, ತಾವು ಬಂದದ್ದನ್ನು ಸೂಚಿಸಿದರು. ವಿನ್ಸೆಂಟ್‌ನನ್ನು ಒಮ್ಮೆ ನೋಡಬೇಕೆಂದು ತಿಣುಕುತ್ತಿದ್ದಳು.

ಥಿಯೋ ವಿನ್ಸೆಂಟ್ ಜೊತೆಗೆ ವೇಗದ ಹೆಜ್ಜೆ ಹಾಕಿ ಮೆಟ್ಟಿಲೇರಿದ. ಜೊಹಾನ್ನ ವಿನ್ಸೆಂಟ್‌ನನ್ನು ಒಬ್ಬ ಅನಾರೋಗ್ಯದಿಂದ ಬಳಲುವ ದುರ್ಬಲ ವ್ಯಕ್ತಿಯೆಂದು ಚಿತ್ರಿಸಿಕೊಂಡಿದ್ದಳು. ಆದರೆ ಜೋಹಾನ್ನಳನ್ನು ಕಾಣುತ್ತಿದ್ದಂತೆ ತನ್ನೆರಡು ಕೈಗಳನ್ನು ಚಾಚಿ ಬರಮಾಡಿಕೊಂಡು ಆಲಂಗಿಸಿದ ವಿನ್ಸೆಂಟ್ ಆರೋಗ್ಯವಂತನಾಗಿದ್ದ. ಜೊತೆಗೆ ಅವನ ಮುಖದ ಮೇಲೆ ಮುಗುಳ್ನಗೆಯಿತ್ತು; ಒಂದು ದೃಢ ಸಂಕಲ್ಪದ ಮನೋಭಾವ ಬಿಂಬಿತವಾಗಿತ್ತು.

"ಥಿಯೋಗಿಂತ ಪರಿಪೂರ್ಣವಾಗಿ ಸ್ವಸ್ಥ ಮನುಷ್ಯನಾಗಿದ್ದಾನೆ" ಎಂಬುದೇ ಅವಳ ಮೊದಲ ಅಭಿಪ್ರಾಯವಾಯಿತು."

ಆದರೆ ಅವನ ಕಿವಿಯತ್ತ ನೋಡುವ ಅವಕಾಶ ಸಿಗಲಿಲ್ಲ.

"ಪರವಾಗಿಲ್ಲ ಥಿಯೋ, ತುಂಬ ಒಳ್ಳೆಯ ಹೆಂಡತಿಯನ್ನೇ ಆರಿಸಿದ್ದೀಯ" ಎಂದು ಜೊಹಾನ್ನಳ ಕೈ ಹಿಡಿದುಕೊಂಡೇ ಹೇಳಿದ.

"ಥ್ಯಾಂಕ್ಸ್ ವಿನ್ಸೆಂಟ್" ಎಂದು ಹೇಳಿ, ಥಿಯೋ ನಕ್ಕ.

ತಾಯಿಯ ಹೋಲಿಕೆಗಳುಳ್ಳ ಹುಡುಗಿಯನ್ನೇ ಥಿಯೋ ಆರಿಸಿಕೊಂಡಿದ್ದ. ತಾಯಿ ಅನ್ನಾ ಕಾರ್ನೇಲಿಯಾಳಂತೆಯೇ ಮೃದು ಭಾಷಿ; ಕರುಣೆ ತುಂಬಿದ ಕಂದುಬಣ್ಣದ ಕಣ್ಣುಗಳು.; ದಯೆ, ಸಹಾನುಭೂತಿಗಳ ಆಗರವಾಗಿದ್ದಳು. ಕೆಲವೇ ತಿಂಗಳ ಮಗುವಿನ ತಾಯಿದ್ದರೂ ಮಾತೃತ್ವದ ಪೂರ್ಣ ಛಾಯೆ ಅವಳನ್ನು ಆವರಿಸಿತ್ತು. ಲಕ್ಷಣವಾದ ಮುಖ, ಕಣ್ಣು, ಮೂಗು, ಬಾಯಿ ಎಲ್ಲವೂ ಸಪ್ರಮಾಣವೂ ಆಕರ್ಷಕವೂ ಆಗಿದ್ದವು. ತಿಳಿಕಂದು ಬಣ್ಣದ ಕೂದಲನ್ನು ಡಚ್ ಮಾದರಿಯಲ್ಲಿ ಹಿಂದಕ್ಕೆ ಬಾಚಿದ್ದಳು. ಥಿಯೋನ ಪ್ರೀತಿಯಲ್ಲಿ ವಿನ್ಸೆಂಟನೂ ಸೇರಿದ್ದ.

ಥಿಯೋ, ವಿನ್ಸೆಂಟ್‌ನನ್ನು ಬೆಡ್‌ರೂಮಿಗೆ ಕರೆದೊಯ್ದ. ಅಲ್ಲಿ ಮಗು ತೊಟ್ಟಿಲಲ್ಲಿ ನಿದ್ದೆಮಾಡುತ್ತಿತ್ತು. ಇಬ್ಬರೂ ಮಗುವನ್ನು ಬಗ್ಗಿ ನೋಡಿದರು. ಅವರ ಕಣ್ಣು ತುಂಬಿ ಬಂದಿತ್ತು. ಜೊಹಾನ್ನಗೆ ಅವರಿಬ್ಬರೂ ಏಕಾಂತವನ್ನು ಬಯಸುತ್ತಿದ್ದಾರೆಂದು ಭಾವಿಸಿ ಮೆಲ್ಲನೆ ಅಲ್ಲಿಂದ ಜಾರಿದಳು. ಇನ್ನೇನು ಬಾಗಿಲು ತೆಗೆಯಬೇಕೆಂದು ಚಿಲಕದ ಮೇಲೆ ಕೈಯಿಟ್ಟದ್ದೇ, ವಿನ್ಸೆಂಟ್ ಥಟ್ಟನೆ ತಿರುಗಿ, ಅವಳಿಗೆ ಕ್ರೋಷೆಯಿಂದ ಮಾಡಿದ ಹೊದಿಕೆ ಹೊದ್ದು ಮಲಗಿದ್ದ ಮಗುವಿನತ್ತ ಬೆರಳು ತೋರಿಸಿದ.

"ಪ್ರಿಯ ಸೋದರಿ, ಲೇಸಿನ ಹೊದಿಕೆಯಿಂದ ಮಗುವನ್ನು ಪೂರ್ತಿಯಾಗಿ ಮುಚ್ಚಬೇಡ."

ಜೊಹಾನ್ನ ಸದ್ದಿಲ್ಲದೆ ಬಾಗಿಲನ್ನು ಎಳೆದುಕೊಂಡು ಅಲ್ಲಿಂದ ಹೊರಟಳು. ವಿನ್ಸೆಂಟ್ ಮತ್ತೊಮ್ಮೆ ಮಗುವಿನತ್ತ ನೋಡಿದ. ಮಕ್ಕಳಿಲ್ಲದ ಪುರುಷನ ಬದುಕಿನ ಬರಡುತನದ ಬಗ್ಗೆ ಯೋಚಿಸಿದ. ಅವನು, ಅವನ ರಕ್ತಮಾಂಸಗಳನ್ನು ಉಳಿಸಿ ಹೋಗಲು ಸಾಧ್ಯವಿಲ್ಲ. ಅವನ ಸಾವೂ ಕೂಡಾ ಶಾಶ್ವತವಾಗಿ ಸಾವಾಗಿಯೇ ಹೋಗುತ್ತೆ, ಎಂದು ನಿಟ್ಟುಸಿರಿಟ್ಟ.

ಥಿಯೋಗೆ ಅವನ ಮನಸ್ಸಿನ ಆಲೋಚನೆಗಳು ಅರ್ಥವಾದವು.

"ವಿನ್ಸೆಂಟ್ ಈಗಲೂ ತಡವಾಗಿಲ್ಲ. ನಿನಗೂ ಯಾರಾದರೂ ಹೆಂಡತಿಯಾಗಿ ಬರುತ್ತಾಳೆ. ನಿನ್ನ ನೋವು ನಲಿವುಗಳನ್ನು ನಿನ್ನೊಂದಿಗೆ ಹಂಚಿಕೊಳ್ಳುತ್ತಾಳೆ."

"ಇಲ್ಲ ಥಿಯೋ. ಸಾಧ್ಯವಿಲ್ಲ. ಬಹಳ ತಡವಾಗಿ ಬಿಟ್ಟಿದೆ."

"ನಾನು ಮೊನ್ನೆ ತಾನೇ ಒಬ್ಬ ಹುಡುಗಿಯನ್ನು ನೋಡಿದೆ. ಅವಳು ನಿನಗೆ ಸರಿಯಾದ ಜೋಡಿ ಎನಿಸಿದೆ."

"ತಮಾಶೆ ಅಲ್ಲ ತಾನೇ?...... ಯಾಕೆ?"

"ಟರ್ಗನೆವ್‌ನ, 'ಟೆರ್‌ವಿಯೆರ್ಜ್'ನಲ್ಲಿ ಹುಡುಗಿ ಪಾತ್ರದಲ್ಲಿದ್ದಳು. ನಿನಗೂ ನೆನಪಿರಬೇಕು."

"ಅಂದ್ರೆ? ಅದೇ ನಿಹಿಲಿಸ್ಟರ (ಶೂನ್ಯವಾದಿಗಳು) ಜೊತೆ ಕೆಲಸಮಾಡ್ತಾಳೆ ಮತ್ತು ಒಪ್ಪಂದದ ಕಾಗದ ಪತ್ರಗಳನ್ನು ತರುತ್ತಾಳೆ?"

"ಹೌದು! ಅವಳೇ ನಿನಗೆ ಸರಿಯಾದ ಹೆಂಡತಿ. ಜೀವನದ ಕಷ್ಟಗಳ ಬಗ್ಗೆ ತಿಳಿದಿದ್ದಾಳೆ."

"ನನ್ನಿಂದ ಅವಳಿಗೇನು ಸಿಗುತ್ತೆ? ಒಂದೇ ಕಿವಿ ಇರುವ ಮನುಷ್ಯನ ಜೊತೆ ಅವಳೇನು ಮಾಡಬೇಕು?"

ಪುಟ್ಟ ವಿನ್ಸೆಂಟ್ ಎದ್ದು ಬಿಟ್ಟ. ಇವರನ್ನು ನೋಡಿ ಕಿಲಕಿಲನೆ ನಕ್ಕ. ಥಿಯೋ ತೊಟ್ಟಿಲಿನಿಂದ ಮಗುವನ್ನೆತ್ತಿ ವಿನ್ಸೆಂಟ್ ಕೈಯಲ್ಲಿರಿಸಿದ.

"ಅಬ್ಬ ಎಷ್ಟು ಮುದ್ದಾಗಿ, ಮೆದುವಾಗಿ, ಬೆಚ್ಚಗೆ, ಒಳ್ಳೆ ನಾಯಿಮರಿ ಥರ ಇದೆ!" ಎಂದು ಮಗುವನ್ನು ಎದೆಗಪ್ಪಿಕೊಳ್ಳುತ್ತಾ ಹೇಳಿದ.

"ಲೋ ವಡ್ಡ, ಮಗುವನ್ನು ಇರಿಸಿಕೊಳ್ಳೋದು ಹಾಗಲ್ಲ."

"ನನಗೆ ಪೈಂಟ್ ಬ್ರಷ್ ಹಿಡಿದು ಗೊತ್ತಿದೆಯೇ ಹೊರತು ಇದೆಲ್ಲ ಗೊತ್ತಿಲ್ಲ."

ಥಿಯೋ ಮಗುವನ್ನು ಎತ್ತಿಕೊಂಡು, ಮಗುವಿನ ತಲೆ ಹೆಗಲ ಮೇಲಿರುವಂತೆ ಇರಿಸಿಕೊಂಡ. ಮಗುವಿನ ಗುಂಗುರು ಗುಂಗುರಾದ ಕೂದಲು ಅವನ ತಲೆಗೆ ತಗುಲುತ್ತಿದ್ದವು.

ವಿನ್ಸೆಂಟ್‌ಗೆ ಈ ದೃಶ್ಯವನ್ನು ನೋಡಿದಾಗ, ಒಂದೇ ಕಲ್ಲಿನಿಂದಾದ ಪ್ರತಿಮೆಗಳಂತೆ ಕಾಣಿಸಿತು.

"ಥಿಯೋ, ಪ್ರತಿಯೊಬ್ಬ ಮನುಷ್ಯನಿಗೂ, ಅವನದೇ ಆದ ಮಾಧ್ಯಮವಿರುತ್ತದೆ. ನೀನು ನಿನ್ನ ದೇಹದ ಮೂಲಕ ಜೀವಂತ ದೇಹವನ್ನು ಸೃಷ್ಟಿಸುತ್ತೀ..... ನಾನು...... ಬಣ್ಣಗಳ ಮೂಲಕ ಸೃಷ್ಟಿಸುತ್ತೇನೆ."

"ಅದು ಸರಿ ವಿನ್ಸೆಂಟ್. ಅದು ಸರಿಯೆ."

ಅವನನ್ನು ಸ್ವಾಗತಿಸಲು, ಅವನ ಹಲವಾರು ಗೆಳೆಯರು ಥಿಯೋನ ಮನೆಗೆ ಬಂದರು. ಮೊದಲಿಗೆ ಬಂದವನು ಒಬ್ಬ ಸುಂದರ ತರುಣ, ಆರಿಯರ್, ಉದ್ದನೆಯ ಇಳಿಬಿಟ್ಟ ಗುಂಗುರು ಕೂದಲು. ಗಲ್ಲದ ಎರಡು ಕಡೆಯಿಂದಲೂ ಬೆಳೆದ ಗಡ್ಡ. ಮಧ್ಯದಲ್ಲಿ ಮಾತ್ರ ಕೂದಲಿರಲಿಲ್ಲ. ವಿನ್ಸೆಂಟ್ ಅವನನ್ನು ಬೆಡ್‌ರೂಮಿಗೆ ಕರೆದೊಯ್ದ. ಅಲ್ಲಿ, ಥಿಯೋ ಮಾಂಟಿಸೆಲ್ಲಿಯ 'ಹೂಗುಚ್ಛ'ವನ್ನು ನೇತು ಹಾಕಿದ್ದ.

"ಮಿಸ್ಟರ್ ಆರಿಯರ್, ತಮ್ಮ ಲೇಖನದಲ್ಲಿ, ಉಜ್ವಲವಾದ, ಪ್ರಖರವಾದ. ಬಣ್ಣಗಳನ್ನು ಬಳಸುವ ಒಬ್ಬನೇ ಒಬ್ಬ ಕಲಾವಿದ ಎಂದು ನನ್ನ ಬಗ್ಗೆ ಬರೆದಿದ್ದೀರಿ. ಈಗ ಈ ಮಾಂಟಿಸೆಲ್ಲಿಯನ್ನು ನೋಡಿ ಫದಾ ನನಗಿಂತ ಎಷ್ಟೋ ಮೊದಲೇ ಬಣ್ಣಗಳನ್ನು ಈ ರೀತಿಯಲ್ಲಿ ಬಳಸಿದ್ದಾನೆ."

ಒಂದು ಗಂಟೆಯವರೆಗೂ, ತನ್ನ ಅಭಿಪ್ರಾಯವನ್ನು ಒಪ್ಪುವಂತೆ ಮಾಡುವ ಪ್ರಯತ್ನದಿಂದ ಸೋತು ಸುಮ್ಮನಾದ. 'ಸೈಂಟ್‌ರೆಮಿ'ಯಲ್ಲಿ ಮಾಡಿದ್ದ 'ಸೈಪ್ರೆಸ್' ಕ್ಯಾನ್‌ವಾಸನ್ನು, ಅವನು ಬರೆದ ಲೇಖನಕ್ಕೆ ಮೆಚ್ಚುಗೆಯಾಗಿ, ನೀಡಿದ.

ತುಲೋಸ್-ಲಾಟ್ರೆಕ್ ಆರು ಮಹಡಿಗಳನ್ನು ಹತ್ತಿ ಬಂದಿದ್ದರೂ ಇನ್ನೂ ಉತ್ಸಾಹದಿಂದಲೇ ಇದ್ದ.

"ವಿನ್ಸೆಂಟ್", ಉತ್ಸಾಹದಿಂದ ಕೈಕುಲುಕಿ ಕರೆದ. "ಯಾರಾದರೂ ನಿನ್ನನ್ನು ಅಥವಾ ನನ್ನನ್ನು ಹುಡುಕಿಕೊಂಡು ಬಂದರೇನು?"

"ಲಾಟ್ರೆಕ್, ನನ್ನ, ನಿನ್ನ ಅನ್ನುವುದು ಬೇಡ. ನನ್ನನ್ನು ಯಾರೂ ವಿಚಾರಿಸುವುದಿಲ್ಲ; ಯಾರೂ ನನ್ನದನ್ನು ಕೊಳ್ಳುವುದೂ ಇಲ್ಲ."

"ವಿನ್ಸೆಂಟ್ ನೀನು ಹೇಳೋದು ತಪ್ಪು. ಬೇಕಾದರೆ ಪಣ ಕಟ್ಟೋಣ. ನಮ್ಮಿಬ್ಬರಲ್ಲಿ ಮೊದಲಿಗೆ ನಿನ್ನ ಹೆಸರೇ ಬರೋದು."

"ಸರಿ ಹಾಗಾದರೆ ಪಣ ಏನು?"

"ಕೆಫೆ ಅಥೆನ್ಸ್‌ನಲ್ಲಿ ಊಟ ಮತ್ತು ಸಂಜೆಗೆ ಅಪೆರಾ."

"ನೀವಿಬ್ಬರೂ ಸ್ನೇಹಿತರು ಇದ್ದೀರಲ್ಲಾ, ಜೋಕುಗಳನ್ನೇ ಇಷ್ಟು ದೊಡ್ಡದಾಗಿ ಮಾಡಿಬಿಡ್ತೀರಿ!" ಎಂದು ಮೃದುವಾಗಿ ನಕ್ಕ.

ಒಬ್ಬ ಅಪರಿಚಿತ ವ್ಯಕ್ತಿ ಒಳಗೆ ಬಂದ. ಲಾಟ್ರೆಕ್‌ನತ್ತ ನೋಡಿ, ಅಲ್ಲಿಯೇ ಇದ್ದ ಕುರ್ಚಿಯಲ್ಲಿ ಕುಳಿತುಕೊಂಡ. ಲಾಟ್ರೆಕ್ ಈತನನ್ನು ಪರಿಚಯ ಮಾಡಿಕೊಡುವುದನ್ನೇ, ಎಲ್ಲರೂ ಎದುರು ನೋಡುತ್ತಿದ್ದರೂ, ಅವನು ಮಾತಿನಲ್ಲಿ ಮೈಮರೆತುಹೋಗಿದ್ದ.

"ನಿನ್ನ ಗೆಳೆಯನ ಪರಿಚಯ ಮಾಡಿಸಿಕೊಡುವುದಿಲ್ಲವೇ ಲಾಟ್ರೆಕ್?" ವಿನ್ಸೆಂಟ್ ಲಾಟ್ರೆಕ್‌ನ ಗಮನಸೆಳೆದ.

"ಆತ ನನ್ನ ಸ್ನೇಹಿತ ಅಲ್ಲ" ಲಾಟ್ರೆಕ್ ನಗುತ್ತಾ ಹೇಳಿದ "ಅವನು ನನ್ನ ಬೆಂಗಾವಲಿಗ!"

ಒಂದೆರಡು ಕ್ಷಣ ವಿಷಾದ ಮೌನ.

"ನೀನು ಕೇಳಿಲ್ಲವೇ ವಿನ್ಸೆಂಟ್? ನಾನೊಂದೆರಡು ತಿಂಗಳು ನನಗೆ ಬಹಳ ಹುಷಾರಿರಲಿಲ್ಲ. ಕುಡಿತದ ಪರಿಣಾಮವಾಗಿ ತುಂಬಾ ಖಾಯಿಲೆ ಬಿದ್ದೆ. ಈಗ ಬರೀ ಹಾಲು ಕುಡೀತಿದ್ದೇನೆ. ನನ್ನ ಮುಂದಿನ ಪಾರ್ಟಿಗೆ, ಇನ್ವಿಟೇಷನ್ ಕಳಿಸ್ತೀನಿ. ಅದರ ಮೇಲೆ, ಹಾಲು ಕರೆಯುತ್ತಿರುವ ನನ್ನ ಚಿತ್ರವಿರುತ್ತೆ. ಆದರೆ ಹಾಲುಕರೆಯುವ ರೀತೀನೇ ಬೇರೆ ಇರುತ್ತೆ!"

ಜೊಹಾನ್ನಾ ಆಹಾರ, ಪಾನೀಯಗಳನ್ನು ಎಲ್ಲರಿಗೂ ನೀಡಿದಳು. ಎಲ್ಲರೂ ಇವುಗಳನ್ನು ಸೇವಿಸುತ್ತಾ ಮಾತಾಡುತ್ತಿದ್ದರು. ಸಮಯ ಕಳೆದಂತೆ, ಆ ಕೋಣೆಯಲ್ಲಿ, ಟೊಬ್ಯಾಕೋ ಹೊಗೆ ದಟ್ಟವಾಗಿ ತುಂಬಿಕೊಂಡಿತು. ವಿನ್ಸೆಂಟ್‌ಗೆ ಪ್ಯಾರಿಸಿನಲ್ಲಿನ ಹಳೆಯ ದಿನಗಳು ನೆನಪಾದವು.

"ಸ್ಯುರಾತ್ ಹೇಗಿದ್ದಾನೆ? ಏನ್ಮಾಡ್ತಿದ್ದಾನೆ?" ವಿನ್ಸೆಂಟ್ ಲಾಟ್ರೆಕ್‌ನನ್ನು ವಿಚಾರಿಸಿದ.

"ಜಾರ್ಜ್!........ ಯಾಕೆ ನಿನಗೆ ಗೊತ್ತಿಲ್ವ? ನಾನು ಹೇಳ್ಬೇಕೇನು ಅವನ ವಿಷಯಾನ?"

"ಥಿಯೋ, ಅವನ ಬಗ್ಗೆ ಏನೂ ಬರೆಯುತ್ತಿರಲಿಲ್ಲ, ಏನಾಯಿತು?"

"ಜಾರ್ಜ್‌ಗೆ ಕ್ಷಯರೋಗ! ಅವನು ಸಾಯುವ ಸ್ಥಿತಿಯಲ್ಲಿದ್ದಾನೆ. ಹೆಚ್ಚು ದಿನ ಬದುಕುವುದಿಲ್ಲ ಅಂತಾರೆ. ಅವನ ಮೂವತ್ತೊಂದನೇ ಹುಟ್ಟುಹಬ್ಬವನ್ನೂ ಬಹುಶಃ ಕಾಣಲಾರನೇನೋ?"

"ಏನು ಕ್ಷಯವೇ? ಅವನು ಸಾಕಷ್ಟು ಸದೃಢತೆಯಿಂದ, ಆರೋಗ್ಯದಿಂದಲೇ ಇದ್ದನಲ್ಲವೇ?"

"ಶಕ್ತಿ ಮೀರಿ ಕೆಲಸ ಮಾಡಿದರ ಪರಿಣಾಮ ವಿನ್ಸೆಂಟ್...... ನೀನು ಅವನನ್ನು ನೋಡಿ ಎರಡು ವರ್ಷಗಳೇ ಆಗಿರಬೇಕು. ದೆವ್ವದಂತೆ, ಬಿಡುವಿಲ್ಲದೆ ಕೆಲಸ ಮಾಡಿದ. ದಿನಕ್ಕೆ ಒಂದೆರಡು ಮೂರು ಗಂಟೆ ನಿದ್ದೆ ಮಾಡಿದ್ದು ಬಿಟ್ಟರೆ, ಬೇರೆಲ್ಲ ಸಮಯವನ್ನೂ ಕೆಲಸ! ಕೆಲಸ!! – ಅಂತಲೇ ಮುಳುಗಿಸಿ ಬಿಟ್ಟ. ಅವನ ಬಡಪಾಯಿ ತಾಯಿಯಿಂದಲೂ ಅವನನ್ನು ಉಳಿಸಲು ಸಾಧ್ಯವಾಗಲಿಲ್ಲ" ಥಿಯೋ ವಿವರಿಸಿದ.

"ಹಾಗಾದರೆ ಜಾರ್ಜ್ ಮೊದಲಿಗೆ ಗೇಟ್ ಪಾಸ್ ತಗೊಂಡು ಬಿಡ್ತಾನೆ." ಸ್ವಲ್ಪ ವಿನೋದವಾಗಿ ಹೇಳಿದ.

ರೂಸೋನ ಆಗಮನವಾಯಿತು. ವಿನ್ಸೆಂಟ್‌ಗೆ ಕೊಡಲೆಂದು ಒಂದು ಚೀಲದ ತುಂಬ ಮನೆಯಲ್ಲಿಯೇ ಮಾಡಿದ್ದ ಬನ್ನುಗಳನ್ನು ತಂದ. ಪೇರ್‌ಟಾಂಗೆ, ಜಪಾನಿ ಪ್ರಿಂಟನ್ನು ವಿನ್ಸೆಂಟ್‌ಗೆ ನೀಡಿದ. ಜೊತೆಗೆ, ಅವನು ಹಿಂತಿರುಗಿ ಬಂದದ್ದು ತಮಗೆಲ್ಲ ಎಷ್ಟು ಸಂತೋಷವಾಗಿದೆ ಎಂಬುದನ್ನು ಪುಟ್ಟ ಭಾಷಣದಲ್ಲಿ ತಿಳಿಸಿದ.

ಹತ್ತುಗಂಟೆ ಹೊತ್ತಿಗೆ ವಿನ್ಸೆಂಟ್ ಕೆಳಗಿಳಿದು ಹೋಗಿ ಒಂದು ಲೀಟರ್ ಆಲೀವ್‌ಗಳನ್ನು ತಂದ. ಎಲ್ಲರಿಗೂ ಅವುಗಳನ್ನು ತಿನ್ನಲು ಒತ್ತಾಯಿಸಿದ. ಲಾಟ್ರೆಕ್‌ನ ಅಂಗರಕ್ಷಕನನ್ನೂ ಬಿಡಲಿಲ್ಲ!

"ಒಂದು ಸಲ ನೀವು ಪ್ರೊವೆನ್ಸ್‌ನಲ್ಲಿನ 'ಸಿಲ್ವರ್‌ಗ್ರೀನ್' ಆಲಿವ್‌ಮರಗಳನ್ನು ನೋಡಿದರೆ ಸಾಕು! ಆಲಿವ್‌ಗಳನ್ನು ಬಿಟ್ಟರೆ, ಜೀವನದಲ್ಲಿ ಮತ್ತೇನನ್ನೂ ತಿನ್ನಲು ನಿಮಗೆ ಮನಸ್ಸು ಬರೋದಿಲ್ಲ."

"ಆಲಿವ್‌ಗಳ ಮಾತು ಹಾಗಿರಲಿ, ಅಂದ ಹಾಗೆ ಆರ್ಲೆ ಜನ ನಿನಗೆ ಹೇಗನಿಸಿದರು?" ಲಾಟ್ರೆಕ್ ಪ್ರಶ್ನಿಸಿದ.

ಮಾರನೆ ದಿನ ಬೆಳಗ್ಗೆ ವಿನ್ಸೆಂಟ್ ಮಗುವನ್ನು ಪೆರಾಂಬ್ಯುಲೇಟರಲ್ಲಿ ಕೂರಿಸಿಕೊಂಡು, ಅಪಾರ್ಟ್‌ಮೆಂಟ್‌ಗಳಿದ್ದ, ಆ ವಿಶಾಲ ಪ್ರದೇಶದಲ್ಲಿ ಸುತ್ತಾಡಿಕೊಂಡು ಬರಲು, ಹೊರಟ. ಮಗುವಿಗೆ ಬೆಳಗಿನ ಎಳೆಯ ಬಿಸಿಲಿನ ಸುಖ ಸಿಗಲೆಂದು ಕರೆದುಕೊಂಡು ಬಂದಿದ್ದ. ಒಂದು ಗಂಟೆ ಸುತ್ತಾಡಿಸಿದ ನಂತರ, ತಮ್ಮ ಫ್ಲ್ಯಾಟ್‌ಗೆ ಹಿಂತಿರುಗಿದ. ಗೋಡೆಗಳ ಮೇಲಿದ್ದ ಕ್ಯಾನ್‌ವಾಸ್‌ಗಳನ್ನು ಗಮನಿಸುತ್ತಾ ನಿಂತ, ಜೊಹಾನ್ನಳಿಗೆ ಸಾಕಾಗಿ ಹೋಗುವಷ್ಟು, ಎಲ್ಲೆಲ್ಲಿ ನೋಡಿದರೂ ಕ್ಯಾನ್‌ವಾಸಗಳೇ ತುಂಬಿದ್ದವು. ಮಂಚದ ಕೆಳಗೆ, ಮೇಜಿನ ಮೇಲೆ ಕಿಟಕಿಗಳ ಮೇಲೆ, ಎಲ್ಲಿಯೂ

ಜಾಗವಿಲ್ಲದಂತೆ ಒತ್ತೊತ್ತಾಗಿ ಗೋಡೆಗಳ ಮೇಲೆಲ್ಲಾ ಅವು ರಾಶಿರಾಶಿಯಾಗಿ ತುಂಬಿ ಹೋಗಿದ್ದವು. ಪಡಸಾಲೆ, ರೂಮು, ಊಟದ ಮನೆ ಎಲ್ಲಿಯೂ ಬಿಡದಂತೆ, ಅವನ ಪ್ರಮುಖವಾದ ಕಲಾಕೃತಿಗಳು ತೂಗುತ್ತಿದ್ದವು. 'ಪೊಟ್ಯಾಟೋ ಈಟರ್ಸ್' 'ನೈಟ್ ವ್ಯೂ ಆಫ್ ದಿ ರ್‍ಹೋನ್' ಲ್ಯಾಂಡ್‌ಸ್ಕೇಪ್ ಫ್ರಮ್ ಆರ್ಲೆ' – ಹೀಗೆ ಎಷ್ಟೋ ಕಲಾಕೃತಿಗಳು, ಥಿಯೋನ ಅಪಾರ್ಟ್‌ಮೆಂಟಿನ ಗೋಡೆಗಳನ್ನು ಅಲಂಕರಿಸಿದ್ದವು.

ಥಿಯೋನ ಡೆಸ್ಕ್ ಮೇಲಿನ ವಸ್ತುಗಳಲ್ಲಿ ಕೈಯಾಡಿಸಿದಾಗ, ಅವನೇ ಬರೆದಿದ್ದ ಕಾಗದಗಳ ಕಟ್ಟು ಕೈಗೆ ಸಿಕ್ಕಿತು. ಇಪ್ಪತ್ತು ವರ್ಷಗಳ ಹಿಂದಿನ ಕಾಗದಗಳೂ ಸುರಕ್ಷಿತವಾಗಿದ್ದವು. ಜುಂಡರ್ಟ್ ಬಿಟ್ಟು ಒಂದೆರಡು ಸಾಲಿನ ಪತ್ರಗಳೂ ಸೇರಿದಂತೆ, ಎಲ್ಲವನ್ನೂ ಅಚ್ಚುಕಟ್ಟಾಗಿ ಒಂದೆಡೆ ಸೇರಿಸಿ ಭದ್ರವಾಗಿ ಇರಿಸಿದ್ದ. ವಿನ್ಸೆಂಟ್‌ಗೆ, ಥಿಯೋ ಯಾಕೆ ಇಷ್ಟೊಂದು ಸುರಕ್ಷಿತವಾಗಿ ತನ್ನ ಕಾಗದಗಳನ್ನು ಇರಿಸಿದ್ದಾನೆಂದು ಅಚ್ಚರಿಪಟ್ಟ.

ಡೆಸ್ಕ್‌ನ ಮತ್ತೊಂದು ಕಡೆ, ತಾನು ಹತ್ತು ವರ್ಷಗಳಲ್ಲಿ ಮಾಡಿದ್ದ ಕಲಾಕೃತಿಗಳೆಲ್ಲವನ್ನೂ ಕಾಲಾನುಕ್ರಮದಲ್ಲಿ ಜೋಡಿಸಿ ಇರಿಸಿದ್ದ. ಅವುಗಳಲ್ಲಿ ಗಣಿ ಕಾರ್ಮಿಕರು, ಅವರ ಮಡದಿಯರು, ಇದ್ದಿಲ ಗುಡ್ಡಕ್ಕೆ ಒರಗಿ ನಿಂತಿರುವ ಹುಡುಗಿ; ನೆಲ ಅಗೆಯುವವರು, ಬೀಜ ಬಿತ್ತುವವರು, ಎಲ್ಲರೂ, ಎಲ್ಲವೂ ಇದ್ದವು. ಬೋರಿನೇಜ್, ಎಟ್ಟೆನ್, ಹೇಗ್, ನ್ಯೂನೆನ್, ಪ್ಯಾರಿಸ್, ಸೈಂಟ್‌ರೆಮಿ – ಹೀಗೆ ಎಷ್ಟೋ ಪ್ರದೇಶಗಳಲ್ಲಿ ಇದ್ದಾಗ ಮಾಡಿದ್ದ ಹಲವಾರು ಕಲಾಕೃತಿಗಳು ಅಲ್ಲಿದ್ದವು.

"ನನ್ನದೇ ಆದ ಒಂದು ಪ್ರದರ್ಶನವನ್ನು ಏರ್ಪಡಿಸುತ್ತೇನೆ" ಉತ್ಸಾಹೋದ್ರೇಕದಲ್ಲಿ ಹೇಳಿಕೊಂಡ.

ಗೋಡೆಯ ಮೇಲಿಂದ ಚಿತ್ರಗಳನ್ನು ಕಳಚಿದ. ಸ್ಕೆಚ್‌ಗಳ ಪ್ಯಾಕೇಜ್ ಕೆಳಗೆಸೆದ. ಫ್ರೇಮುಗಳಿಲ್ಲದ ಕ್ಯಾನ್‌ವಾಸ್‌ಗಳನ್ನು ಎಲ್ಲ ಮೂಲೆಗಳಿಂದ ಹುಡುಕಿ ತೆಗೆದು ರಾಶಿ ಹಾಕಿದ. ಮಂಚ, ಕುರ್ಚಿ, ಮೇಜು, ಅಲಮಾರಿ – ಯಾವೊಂದನ್ನೂ ಬಿಡದೆ ಹುಡುಕಿ ಹುಡುಕಿ ತೆಗೆದುಕೊಂಡ. ಎಲ್ಲವನ್ನೂ ಮುಂದೆ ರಾಶಿ ಹಾಕಿಕೊಂಡು ಕುಳಿತು, ಜಾಗರೂಕತೆಯಿಂದ ದಿನಾಂಕ, ಸ್ಥಳ ಇತ್ಯಾದಿಗಳಿಗೆ ಅನುಗುಣವಾಗಿ ಆಯ್ಕೆ ಮಾಡಿ, ಪ್ರತ್ಯೇಕ ಪ್ರತ್ಯೇಕವಾಗಿ ಇರಿಸಿದ.

ಮನೆ ಪ್ರವೇಶಭಾಗದ ಮುಂದಿದ್ದ ಕೋಣೆಯಲ್ಲಿ ಸುಮಾರು ಮೂವತ್ತು ಸ್ಕೆಚ್‌ಗಳನ್ನು, ಬೋರಿನೇಜ್‌ನ ಗಣಿ ಕಾರ್ಮಿಕರ ಬದುಕಿಗೆ ಸಂಬಂಧಿಸಿದನ್ನು, ಗೋಡೆಗಳ ಮೇಲೆಲ್ಲ ಹಾಕಿದ.

"ಇದು ಕಲ್ಲಿದ್ದಲ ಕೋಣೆ" ಎಂದು ತನ್ನಲ್ಲೇ ಹೇಳಿಕೊಂಡ.

ನಂತರ ಇಡೀ ಮನೆಯತ್ತ ದೃಷ್ಟಿ ಹಾಯಿಸಿದ. ಮನೆಯಲ್ಲಿ ಅಷ್ಟು ಮುಖ್ಯವೆನಿಸದ ಮತ್ತೊಂದು ಜಾಗ ಬಾತ್‌ರೂಮ್. ಕುರ್ಚಿ ಮೇಲೆ ಹತ್ತಿ ನಿಂತು, ಎಟ್ಟೆನ್‌ನಲ್ಲಿ ಇದ್ದಾಗ ಮಾಡಿದ ಹೊರಾಂಗಣ ದೃಶ್ಯಗಳನ್ನು, ನಾಲ್ಕೂ ಗೋಡೆಗಳ ಮೇಲೆ ತೂಗು ಹಾಕಿದ. ಅವುಗಳಲ್ಲಿ ಬ್ರಬಾಂಟ್‌ನ ರೈತರೂ ಸೇರಿದ್ದರು. ಮುಂದಿನ ಆಯ್ಕೆ ಅಡಿಗೆ

ಮನೆ. ಹೇಗ್‌ನಲ್ಲಿ ಮಾಡಿದ್ದ ಷೆವೆನಿಂಜೆನ್ ಸ್ಕೆಚ್‌ಗಳನ್ನು ತೂಗು ಹಾಕಿದ. ಕಿಟಕಿಯಿಂದ ಕಾಣುತ್ತಿದ್ದ, ಮರಳಿನ ದಿಬ್ಬಗಳು, (ಬೀಚ್) ಸಮುದ್ರ ದಂಡೆಗಳು, ಮೀನು ಹಿಡಿವ ಹಡಗುಗಳು ಇತ್ಯಾದಿ ದೃಶ್ಯಗಳಿದ್ದವು.

"ಮೂರನೇ ಚೇಂಬರ್....... ವಾಟರ್‌ಕಲರ್ ರೂಮ್" ಎಂದು ಹೇಳಿಕೊಂಡ.

ಇನ್ನೊಂದು ಸಣ್ಣ ಕೋಣೆಯಿತ್ತು. ಅಲ್ಲಿ ತನ್ನ ಗೆಳೆಯರ ಕುರಿತ ಕೃತಿಗಳನ್ನು ಹಾಕಲು ಮುಂದಾದ. ಗೆಳೆಯರಾಗಿದ್ದ 'ದೆ ಗ್ರೂಟ್ಸ್' ರ 'ಪೊಟ್ಯಾಟೋ ಈಟರ್ಸ್" ಅನ್ನು ಗೋಡೆಗೆ ಹಾಕಿದ. ಇದು ಅವನ ಮೊಟ್ಟ ಮೊದಲನೆಯ ಆಯಿಲ್ ಪೈಂಟಿಂಗ್ ಆಗಿತ್ತು. ತನ್ನೆಲ್ಲ ಸಾಮರ್ಥ್ಯಕ್ಕೆ ಇದರಲ್ಲಿ ಅಭಿವ್ಯಕ್ತಿ ನೀಡಲು ಪ್ರಯತ್ನಿಸಿದ್ದ. ನಂತರ ನ್ಯೂನೆನ್‌ನ ವೀವರ್ಸ್, ಶೋಕತಪ್ತರಾಗಿದ್ದ ರೈತರು, ತನ್ನ ತಂದೆಯ ಚರ್ಚ್‌ನ ಹಿಂಭಾಗದ ಸಮಾಧಿ, ಮೊನಚಾದ ಚರ್ಚ್ ಗೋಪುರ – ಹೀಗೆ ಹಲವಾರು 'ಸ್ಟಡೀಸ್'ಗಳಿಂದ ಆ ಕೋಣೆಯನ್ನು ತುಂಬಿಸಿದ.

ತನ್ನ ಸ್ವಂತ ಬೆಡ್‌ರೂಮ್‌ನಲ್ಲಿ, ಪ್ಯಾರಿಸಿನಲ್ಲಿದ್ದಾಗ ಮಾಡಿದ್ದ ಆಯಿಲ್ ಪೈಂಟಿಂಗ್ಸ್ ಹಾಕಿದ. ತಾನು ಆರ್ಲೆಗೆ ಹೋಗುವ ಮೊದಲು 'ರೂಲೆಪಿಕ್'ನ ಅಪಾರ್ಟ್‌ಮೆಂಟಿನಲ್ಲಿದ್ದಾಗ, ಥಿಯೋನ ರೂಮಿನಲ್ಲಿ ಹಾಕಿದ್ದ. ಲಿವಿಂಗ್ ರೂಮನ್ನಂತೂ ಆರ್ಲೆಯ ಎಲ್ಲಾ ಕ್ಯಾನ್‌ವಾಸ್‌ಗಳನ್ನೂ ಮತ್ತು ಸೈಂಟ್‌ರೆಮಿಯಲ್ಲಿನ ಕ್ಯಾನ್‌ವಾಸಗಳನ್ನೂ ಗೋಡೆಯ ಮೇಲೆ ಒಂದಿಷ್ಟೂ ಜಾಗವಿಲ್ಲದಂತೆ ತುಂಬಿಸಿಬಿಟ್ಟಿದ್ದ.

ಅವನ ಕೆಲಸ ಮುಗಿದಿತ್ತು. ನೆಲದ ಮೇಲಿದ್ದುದನ್ನೆಲ್ಲ ತೆಗೆದು ಬಿಟ್ಟು, ಈಗ ನೆಲವನ್ನು ಖಾಲಿಯಾಗಿರಿಸಿದ್ದ. ಅವನು ತನ್ನ ಕೋಟು, ಹ್ಯಾಟನ್ನು ಧರಿಸಿ, ಜೋಹಾನ್ನಳೊಂದಿಗೆ ಮೆಟ್ಟಿಲಿಳಿದು ಸಿಟೆ ಪಿಗಾಲ್ಲ್‌ನ ಬಿಸಿಲಿನ ಸುಖವನ್ನು ಅನುಭವಿಸಲು ಹೊರಟ. ಜೊಹಾನ್ನ ಅವನ ತೋಳು ಹಿಡಿದಿದ್ದಳು. ಇಬ್ಬರೂ ಡಚ್‌ಭಾಷೆಯಲ್ಲಿ ಹರಟೆ ಹೊಡೆದರು.

ಥಿಯೋ, ಹನ್ನೆರಡು ಗಂಟೆ ದಾಟಿದ ಸ್ವಲ್ಪ ಹೊತ್ತಿಗೆ ಬಂದ. ಇಬ್ಬರತ್ತ ಖುಷಿಯಿಂದ ಕೈ ಬೀಸಿದ ಓಡಿಬಂದು ಪೆರಾಂಬ್ಯುಲೇಟರ್‌ನಲ್ಲಿದ್ದ ಮಗುವನ್ನು ಬಾಚಿ ಎತ್ತಿಕೊಂಡ. ಪೆರಾಂಬ್ಯುಲೇಟರನ್ನು ಕೆಲಸದವಳ ಬಳಿ ಬಿಟ್ಟು ಅವರು ಮೂವರೂ ಮೆಟ್ಟಿಲೇರಿ ಹೋದರು. ಅವರು ಮುಂಬಾಗಿಲಿಗೆ ಬಂದಾಗ, ಹರ್ಷೋಲ್ಲಾಸದಿಂದ ಹರಟೆ ಹೊಡೆಯುತ್ತಿದ್ದವನು. ಥಟ್ಟನೆ, ಥಿಯೋ ಮತ್ತು ಜೊಹಾನ್ನಳನ್ನು ತಡೆದು ನಿಲ್ಲಿಸಿದ.

"ಸ್ವಲ್ಪ ನಿಲ್ಲಿ ಥಿಯೋ, ಜೋ, ನಾನು ನಿಮ್ಮನ್ನು ವಾನ್‌ಗೋನ ಏಕವ್ಯಕ್ತಿ ಕಲಾಪ್ರದರ್ಶನಕ್ಕೆ ಕರೆದುಕೊಂಡು ಹೋಗಲಿದ್ದೇನೆ. ದಯವಿಟ್ಟು ನಿಮ್ಮೆದೆ ಗಟ್ಟಿ ಮಾಡಿಕೊಳ್ಳಿ."

"ಪ್ರದರ್ಶನವೇ ವಿನ್ಸೆಂಟ್? ಎಲ್ಲಿ?" ಥಿಯೋ ವಿಚಾರಿಸಿದ.

"ಸುಮ್ಮನೆ ಕಣ್ಣು ಮುಚ್ಚಿಕೊಳ್ಳಿ."

ಬಾಗಿಲು ತೆಗೆದು ಮೂವರು ವಾನ್‌ಗೋಗಳು ಒಳಗೆ ಹೆಜ್ಜೆ ಇರಿಸಿದರು. ಥಿಯೋ ಮತ್ತು ಜೊಹಾನ್ನ ಒಂದು ಸಲ ಸುತ್ತಲೂ ಕಣ್ಣಾಡಿಸಿ ಅಚ್ಚರಿ ಪಟ್ಟರು.

"ನಾನು ಎಟ್ಟೆನ್‌ನಲ್ಲಿ ಇದ್ದಾಗ ತಂದೆ ಹೇಳಿದ್ದರು, ಕೆಟ್ಟದರೊಳಗಿಂದ ಒಳ್ಳೆಯದು ಎಂದೂ ಮೊಳೆಯಲಾರದು" ಅಂತ, ನಾನು, ಕೆಟ್ಟದ್ದರಿಂದಲೂ ಒಳ್ಳೇದು ಹುಟ್ಟಬಲ್ಲುದು ಮತ್ತು ಹುಟ್ಟುತ್ತದೆ, ಅದೂ ಕಲೆಯ ಜಗತ್ತಿನಲ್ಲಿ!- ಎಂದು ವಾದಿಸಿದ್ದೆ. ನನ್ನ ಹಿಂದೆ ಬರುವಿರಾದರೆ, ನಿಮಗೆ ನಾನೊಬ್ಬ ವ್ಯಕ್ತಿಯನ್ನು ಪರಿಚಯಿಸುತ್ತೇನೆ. ಮಗುವಿನ ರೀತಿಯಲ್ಲಿ ಎಡ್ಡಾದಿಡ್ಡಿಯಾಗಿ, ಒರಟಾಗಿ ನಯ ನಾಜೂಕಿಲ್ಲದೆ, ಮೊದ್ದಾಗಿ ಚಿತ್ರಗಳನ್ನು ಬಿಡಿಸುತ್ತಿದ್ದವನು, ಹತ್ತು ವರ್ಷಗಳ ನಿರಂತರ ಶ್ರಮದಿಂದ...... ಯಾವ ಮಟ್ಟ ತಲುಪಿದ್ದಾನೆ...... ಎನ್ನುವುದನ್ನು ನೀವೇ ನೋಡಿ ನಿರ್ಧರಿಸುವಿರಂತೆ!"

ಕಾಲಾನುಕ್ರಮದಂತೆ ಜೋಡಿಸಿದ್ದ ಚಿತ್ರಗಳನ್ನು ಒಂದೊಂದೇ ಕೋಣೆಯ ಮೂಲಕ ಕರೆದೊಯ್ದು ತೋರಿಸುತ್ತಿದ್ದ. ಆ ಮೂವರೂ ಯಾವುದೋ ಆರ್ಟ್‌ಗ್ಯಾಲರಿಗೆ ಬಂದ ವೀಕ್ಷಕರಂತೆ ಕಂಡರು. ಒಬ್ಬ ಮನುಷ್ಯನ ಬದುಕಿನ ಸಾಧನೆಯನ್ನು ಗಂಭೀರವಾಗಿ ಪರಿಶೀಲಿಸಿದರು. ಕಲಾವಿದನ ಯಾತನೆಯ ಹಾದಿಯಲ್ಲಿನ ಬೆಳವಣಿಗೆಯನ್ನು ಪರಿಪೂರ್ಣತೆಯತ್ತ ಸಾಗಬೇಕೆನ್ನುವ ಛಲವನ್ನು ಪ್ರಬುದ್ಧ ಅಭಿವ್ಯಕ್ತಿಯನ್ನು, ಶಕ್ತಿಯುತವಾದ ಭಾವ ಪ್ರದರ್ಶನವನ್ನು, ಉತ್ಕಟವಾದ ನಿಸರ್ಗ ಪ್ರೀತಿಯನ್ನು, ಉಜ್ವಲವಾದ ವರ್ಣ ವಿನ್ಯಾಸಗಳನ್ನು, ಪ್ಯಾರಿಸಿನ, ಆರ್ಲೆಯ, ಸೈಂಟ್‌ರೆಮಿಯ ಕೃತಿಗಳಲ್ಲಿ ಗುರುತಿಸಿದರು.

ಪ್ರದರ್ಶನದ ಕಲಾಕೃತಿಗಳನ್ನು ಸಾಮಾನ್ಯ ಕಲಾಪ್ರೇಮಿ ಗ್ರಾಹಕರ ಕಣ್ಣಿಂದ ನೋಡಿದರು. ಭೂಮಿಯ ಮೇಲೆ ಬಂದ ಮನುಷ್ಯ ಸಾಧಿಸಬೇಕೆಂದು ಕೊಂಡದ್ದನ್ನೆಲ್ಲ ಸಾಧಿಸಿದಂತೆ ಕಾಣಿಸಿತು.

ಜೊಹಾನ್ನ ಬ್ರಬಾಂಟ್ ಶೈಲಿಯ ಊಟವನ್ನು ಸಿದ್ಧಮಾಡಿದ್ದಳು. ಡಚ್ ಊಟದ ಅವಕಾಶಕ್ಕಾಗಿ ಖುಷಿಪಟ್ಟು, ಊಟ ಮುಗಿದ ನಂತರ ಇಬ್ಬರೂ ಪೈಪ್ ಸೇದುತ್ತಾ ಕುಳಿತು ಹರಟೆ ಹೊಡೆದರು.

"ವಿನ್ಸೆಂಟ್ ಡಾಕ್ಟರ್ ಗಾಷೆಟ್ ಹೇಳುವುದನ್ನೆಲ್ಲ ಲಕ್ಷ್ಯವಿಟ್ಟು ಕೇಳಿಸಿಕೋ, ಅವರು ಹೇಳಿದ ಹಾಗೆ ನಡೆದುಕೋ."

"ಖಂಡಿತವಾಗಿಯೂ ಹಾಗೆ ನಡೆದುಕೊಳ್ಳುತ್ತೇನೆಂದು ನಿನಗೆ ಮಾತುಕೊಡುತ್ತೇನೆ."

"ನೋಡು ಅವರು 'ನರಖಾಯಿಲೆ'ಗಳಲ್ಲಿ ತಜ್ಞರು. ಸಾಕಷ್ಟು ಅನುಭವ ಇರುವವರು. ಅವರು ಹೇಳಿದ ಹಾಗೆ ಕೇಳಿದರೆ, ನಿನ್ನ ಖಾಯಿಲೆ ಬೇಗ ವಾಸಿಯಾಗುತ್ತೆ."

"ಹೇಳಿದೆನಲ್ಲ. ಮಾತಿಗೆ ತಪ್ಪುವುದಿಲ್ಲ."

"ಡಾಕ್ಟರ್ ಗಾಷೆಟ್ ಪೈಂಟಿಂಗ್ ಕೂಡಾ ಮಾಡ್ತಾರೆ. ವರ್ಷಕ್ಕೊಂದು ಸಲ ಇಂಡೆಪೆಂಡೆಂಟ್ಸ್ ಜೊತೆಗೆ ತಮ್ಮ ಕಲಾಕೃತಿಗಳನ್ನೂ ಪ್ರದರ್ಶನಕ್ಕಿಡುತ್ತಾರೆ."

"ಅವರು ಚೆನ್ನಾಗಿ ಪೈಂಟಿಂಗ್ಸ್ ಮಾಡ್ತಾರಾ ಥಿಯೋ?"

"ಹಾಗೇನೂ ಹೇಳೋಕಾಗೊಲ್ಲ. ಆದರೆ ಪ್ರತಿಭಾವಂತ ಕಲಾವಿದರನ್ನು ಗುರುತಿಸುವ ಪ್ರಚಂಡ ಪ್ರತಿಭೆಯಿದೆ. ಇಪ್ಪತ್ನಾಲ್ಕನೇ ವಯಸ್ಸಿಗೇ, ಮೆಡಿಸನ್ ಓದಲೆಂದು ಪ್ಯಾರಿಸಿಗೆ

ಬಂದರು. ಕೋರ್‌ಬೆಟ್, ಮರ್ಗೆರ್, ಚ್ಯಾಂಪ್‌ಫ್ಲೂರಿ ಮತ್ತು ಪ್ರೊಧೋನ್ ಮುಂತಾದವರೊಂದಿಗೆ ಗೆಳೆತನ ಮಾಡಿದರು. ಆಗಾಗ ಕೆಫೆ ಲಾ ನೊವೆಲ್ಲ್ ಅಥೇನೀಸ್‌ಗೆ ಬರುತ್ತಿದ್ದುದರಿಂದ, ಮಾನೆಟ್, ರೆನ್ವಾರ್, ಡೆಗಾಸ್, ಡ್ಯುರಾಂಟ್ ಕ್ಲಾಡ್ ಮೊನೆಟ್ ಜೊತೆ ಆತ್ಮೀಯತೆ ಬೆಳೆಸಿಕೊಂಡರು. ಡಾಬಿನಿ ಮತ್ತು ಡೌಮಿಯರ್ ಆತನ ಮನೆಯಲ್ಲಿ, 'ಇಂಪ್ರೆಷನಿಸಂ' ಅನ್ನುವುದು ಕೇಳಿ ಬರುವ ಮೊದಲೇ, ಅಂತಹ ಪೈಂಟಿಂಗ್ಸ್ ಮಾಡಿದ್ದರು.

"ನೀನು ಹಾಗೆ ಹೇಳಬೇಡ!"

"ಆತನ ಮನೆಯಲ್ಲಿರುವ ಎಲ್ಲ ಪೈಂಟಿಂಗ್ಸ್, ಗಾರ್ಡನ್‌ನಲ್ಲಿ ಮಾಡಿದ್ದು, ಇಲ್ಲವೇ ಲಿವಿಂಗ್ ರೂಮ್‌ನಲ್ಲಿ ಮಾಡಿದ್ದು, ಪಿಸಾರೋ, ಗಿಲೊಮಿನ್, ಡೆಲಾಕ್ರ್ವಾಕ್ಸ್, ಸಿಸ್ಲಿ – ಎಲ್ಲರೂ ಉವರ್ಸ್‌ಗೆ ಹೋದಾಗ, ಗಾಷೆಟ್ ಜೊತೆಗಿದ್ದೇ ಕೆಲಸ ಮಾಡಿದ್ದರು. ನಿಜವಾಗಿಯೂ ಹೇಳುವುದಾದರೆ ವಿನ್ಸೆಂಟ್, ದೇಶದಲ್ಲಿ, ಈ ಶತಮಾನದ ಮಧ್ಯಭಾಗದಲ್ಲಿದ್ದ ಪ್ರತಿಯೊಬ್ಬ ಕಲಾವಿದನೂ ಗಾಷೆಟ್‌ನ ಸ್ನೇಹಿತನೇ ಆಗಿದ್ದಾನೆ."

"ಓಹ್ ಥಿಯೋ! ನನಗೆ ಹೆದರಿಕೆಯಾಗುತ್ತಿದೆ. ನಾನೇನು ಅಂಥ ದೊಡ್ಡ ದೊಡ್ಡ ಕಲಾವಿದರ ಗುಂಪಿಗೆ ಸೇರಿದವನೇ ಅಲ್ಲ! ಆತ ನನ್ನ ಕೆಲಸವನ್ನು ಇನ್ನೂ ನೋಡಿಲ್ಲವೇನು?"

"ಈಡಿಯಟ್! ನಿನ್ನನ್ನು ಬರಮಾಡಿಕೊಳ್ಳಲು ಯಾಕೆ ಇಷ್ಟು ಕಾತರನಾಗಿದ್ದಾನೆ ಅನ್ನುವುದರಿಂದಲೇ ಅರ್ಥವಾಗೊಲ್ಲವೇ?"

"ಅರ್ಥವಾಗಿದ್ದರೆ ಚೆನ್ನಾಗಿತ್ತು."

"ಹೋದ ಸಲದ ಇಂಡೆಪೆಂಡೆಂಟ್ಸ್‌ಗಳ ಪ್ರದರ್ಶನದಲ್ಲಿ, 'ಆರ್ಲೇಸಿಯನ್ ನೈಟ್ ಸೀನ್ಸ್' ಎನ್ನುವುದನ್ನು ಇಡೀ ಪ್ರದರ್ಶನದಲ್ಲಿಯೇ ತುಂಬಾ ಅದ್ಭುತವಾದ ಕಲಾಕೃತಿಯೆಂದು ಅಭಿಪ್ರಾಯ ಪಟ್ಟಿದ್ದಾರೆ. ಪ್ರಮಾಣ ಮಾಡಿ ಹೇಳ್ತಿದ್ದೀನಿ– ನೀನು ಮಾಡಿದ 'ಸನ್‌ಫ್ಲವರ್' ಪ್ಯಾನೆಲ್ಸ್, 'ಯೆಲ್ಲೋಹೌಸ್' – ನೋಡುತ್ತಿದ್ದಂತೆ, ಅವರ ಕಣ್ಣು ಹನಿಯಿತು. ನನ್ನತ್ತ ತಿರುಗಿ, "ಮಿಸ್ಟರ್ ವಾನ್‌ಗೋ, ನಿನ್ನ ಬ್ರದರ್ ಒಬ್ಬ ಮಹಾನ್ ಕಲಾವಿದ. ಕಲೆಯ ಇತಿಹಾಸದಲ್ಲಿ, ಈ ಸನ್‌ಫ್ಲವರ್‌ಗಳ ಹಳದಿ ಬಣ್ಣ, ಎಂದೂ ಕಂಡದ್ದಿಲ್ಲ. ಈ ಕ್ಯಾನ್‌ವಾಸ್‌ಗಳಷ್ಟೇ ಸಾಕು, ನಿನ್ನ ಸೋದರ ಎಂದೆಂದಿಗೂ ಮರೆಯಲಾಗದ ಮಹಾನ್ ಕಲಾವಿದನಾಗಿ, ಜಗತ್‌ಪ್ರಸಿದ್ಧನಾಗಿ, ಶಾಶ್ವತವಾದ ನೆಲೆಯಲ್ಲಿ ಉಳಿಯುತ್ತಾನೆ.

ವಿನ್ಸೆಂಟ್ ತಲೆಕೆರೆದುಕೊಳ್ಳುತ್ತಾ, ವಿಚಿತ್ರವಾಗಿ ಥಿಯೋನತ್ತ ನೋಡಿದ.

"ಆಯ್ತು ನನ್ನ 'ಸನ್‌ಫ್ಲವರ್ಸ್' ವಿಚಾರದಲ್ಲಿ ಅವರ ಈ ಅಭಿಪ್ರಾಯಗಳು ನಿಜವೇ ಆದಲ್ಲಿ, ನಮ್ಮಿಬ್ಬರ ಸ್ನೇಹಕ್ಕೆ, ಜೊತೆಯಾಗಿರುವುದಕ್ಕೆ ಯಾವುದೇ ತೊಂದರೆಯಾಗುವುದಿಲ್ಲ. ನಾವಿಬ್ಬರೂ ಚೆನ್ನಾಗಿ ಹೊಂದಿಕೊಳ್ಳಬಲ್ಲೆವು."

-೨-

ಡಾಕ್ಟರ್ ಗಾಷೆಟ್ ಥಿಯೋ ಮತ್ತು ವಿನ್ಸೆಂಟ್‌ನನ್ನು ಎದುರುಗೊಳ್ಳಲು ಆಗಲೇ ಸ್ಟೇಷನ್ ತಲುಪಿದ್ದ. ಯಾಕೋ ಸ್ವಲ್ಪ ಹೆದರಿದಂತೆ ಇದ್ದ. ಭಯ, ಕಾತರ, ಉದ್ವೇಗಗಳನ್ನು ತುಂಬಿಕೊಂಡಿದ್ದ. ಪುಟ್ಟ ಆಕಾರದ ವ್ಯಕ್ತಿಯಾಗಿದ್ದ. ಪ್ರೀತಿಯಿಂದ ವಿನ್ಸೆಂಟ್‌ನ ಕೈ ಚಾಚಿ ಹಿಡಿದುಕೊಂಡು ಒತ್ತಿದ.

"ಹೂಂ! ಹೂಂ! ನಿನಗೇ ತಿಳಿಯುತ್ತೆ, ಇದು ನಿಜವಾದ ಕಲಾವಿದರ ತಾಣವೆಂದು! ನಿನಗೆ ಈ ಪ್ರದೇಶ ತುಂಬ ಇಷ್ಟವಾಗುತ್ತೆ, ಹಾಂ! ನಿನ್ನ ಈಸಲ್ ತಂದಿದ್ದೀ ಅಲ್ಲವೇ? ಸಾಕಷ್ಟು ಪೈಂಟ್ಸ್ ಇವೇ ತಾನೇ? ತಕ್ಷಣ ನೀನು ಕೆಲಸ ಶುರುಮಾಡಿಕೊಳ್ಳಬೇಕು. ಈ ದಿನ ಮಧ್ಯಾಹ್ನ ನೀವು ನಮ್ಮ ಮನೆಗೇ ಊಟಕ್ಕೆ ಬರಬೇಕು. ತಿಳೀತಾ? ನಿನ್ನ ಹೊಸ ಕ್ಯಾನ್‌ವಾಸ್‌ಗಳನ್ನು ತಂದಿರುವೀ ತಾನೇ? ನೀನು ಬಯಸುವ ಆರ್ಲೆಯ ಹಳದಿ ಇಲ್ಲಿ ಸಿಗುವುದಿಲ್ಲ. ಆದರೆ ಬೇರೆ ಇನ್ನೆಲ್ಲ ವಸ್ತುಗಳೂ ಸಿಗುತ್ತವೆ. ನೀನು ಪೈಂಟ್ ಮಾಡಲು ನಮ್ಮ ಮನೆಗೇ ಬರಬೇಕು. ನಿನಗೆ ಬೇಕಾಗುವ ಹೂದಾನಿಗಳು, ಟೇಬಲ್ಲುಗಳು ಇನ್ನೂ ಏನೇನೋ ಕೊಡಬಲ್ಲೆ. ಡಾಬಿನಿಯಿಂದ ಹಿಡಿದು ಲಾಟ್ರೆಕ್‌ವರೆಗೂ ಎಲ್ಲರೂ ಇಲ್ಲಿನ ವಸ್ತುಗಳನ್ನು ಪೈಂಟ್ ಮಾಡಿದ್ದಾರೆ. ಹೇಗಿದ್ದೀಯ? ಪರವಾಗಿಲ್ಲ, ಆರೋಗ್ಯವಾಗಿಯೇ ಕಾಣುತ್ತಿರುವೆ. ಈ ಜಾಗ ನಿನಗೆ ಹಿಡಿಸುತ್ತೆ ಅಂತ ಅನಿಸಿದೆಯೇ? ನಾವು ನಿನಗೆ ಬೇಕಾದ ಸಹಾಯ ಮಾಡ್ತೇವೆ. ಮತ್ತಷ್ಟು ಆರೋಗ್ಯವಂತನನ್ನಾಗಿ ಮಾಡುತ್ತೇವೆ!"

ಸ್ಟೇಷನ್ ಪ್ಲಾಟ್‌ಫಾರಮ್‌ನಿಂದ, ವಿನ್ಸೆಂಟ್ ಗುಂಪು ಗುಂಪಾದ ಮರಗಳು ಗುಡ್ಡವನ್ನು ಬಳಸಿ ಬೆಳೆದಿರುವುದನ್ನು ನೋಡಿದ. ಸರಿಯಾದ ನೋಟ ಪಡೆಯಲು ಒಂದು ಕಡೆ ಓಡಿದ. ಥಿಯೋ ಮೆಲುದನಿಯಲ್ಲಿ ಡಾಕ್ಟರ್ ಜೊತೆ ಮಾತಾಡಿದ.

"ಡಾಕ್ಟರ್, ನನ್ನ ಅಣ್ಣನನ್ನು ಜಾಗರೂಕತೆಯಿಂದ ನೋಡಿಕೊಳ್ಳಿ ಎಂದು ಪ್ರಾರ್ಥಿಸುತ್ತೇನೆ. ಅವನಿಂದ ಏನಾದರೂ ತೊಂದರೆಯಾಗುವ ಸೂಚನೆ ಕಂಡು ಬಂದಲ್ಲಿ ನನಗೆ ತಂತಿ ಕಳಿಸಿ ಅವನಿಗೇನಾದರೂ ಆದಾಗ ನಾನು ಅವನ ಜೊತೆಗೆ..... ಅವನನ್ನು ಒಬ್ಬನೇ ಇರಲು ಬಿಡಬಾರದು..... ಕೆಲವರು ಹೇಳ್ತಾರೆ.....ಏನೆಂದರೆ......"

"ತುಥ್! ತುಥ್!" ಎನ್ನುತ್ತಾ ಡಾಕ್ಟರ್ ಗಾಷೆಟ್ ತನ್ನ ಹೋತನ ಗಡ್ಡವನ್ನು ತೋರುಬೆರಳಿನಿಂದ ನೀವಿಕೊಂಡ. "ಇರಬಹುದು, ಅವನು ವಿಚಿತ್ರವಾಗಿಯೇ ನಡೆದುಕೊಳ್ಳುತ್ತಿರಬಹುದು. ಎಲ್ಲ ಕಲಾವಿದರೂ ಇದೇ ರೀತಿ ವಿಚಿತ್ರ! ಆದರೆ ಅವರು ಹಾಗಿದ್ದರೇನೇ ನನಗೆ ಇಷ್ಟ. ಎಷ್ಟೋ ಸಲ ನಾನೂ ಯಾಕೆ ಅವರ ಹಾಗಿಲ್ಲ ಎಂದು ಪರಿತಪಿಸಿದ್ದೇನೆ. ಯಾವೊಂದು ಶ್ರೇಷ್ಠ, ಮಹೋನ್ನತ ಆತ್ಮವೂ ಹುಚ್ಚುತನದಿಂದ ಮುಕ್ತವಾಗಿಲ್ಲ!" ಎನ್ನುವುದು ಗೊತ್ತಿರಬೇಕಲ್ಲ. ಯಾರು ಇದನ್ನು ಹೇಳಿದ್ದು? ಬಹುಶಃ ಅರಿಸ್ಟಾಟಲ್ ಅಂತ ಕಾಣುತ್ತೆ."

"ನನಗೆ ಗೊತ್ತಿದೆ ಡಾಕ್ಟರ್...... ಆದರೆ ಅವನಿಗಿನ್ನೂ ಮೂವತ್ತೇಳು ವರ್ಷ. ಬಾಳುವುದಕ್ಕೆ ಸುದೀರ್ಘ ಅವಕಾಶವಿದೆ ಅವನ ಮುಂದೆ."

ಡಾಕ್ಟರ್ ಗಾಷೆಟ್. ತಲೆ ಮೇಲಿನ ವಿಚಿತ್ರವಾದ ಕ್ಯಾಪನ್ನು ತೆಗೆದು ತಲೆ ಕೆರೆದುಕೊಳ್ಳ ತೊಡಗಿದ.

"ಅವನ ವಿಷಯ ನನಗೆ ಬಿಟ್ಟು ಬಿಡು. ಪೈಂಟರ್ಸ್‌ಗಳನ್ನು ಹೇಗೆ ನಡೆಸಿಕೊಳ್ಳಬೇಕು ಅನ್ನೋದು ನನಗೆ ಗೊತ್ತು. ಒಂದು ತಿಂಗಳು ಟೈಂಕೊಡು. ಅವನನ್ನು ಹೇಗೆ ಬದಲಾಯಿಸಿ ಬಿಡ್ತೀನಿ, ನೋಡ್ತಿರು. ತಕ್ಷಣದಲ್ಲೇ ಕೆಲಸದಲ್ಲಿ ತೊಡಗಿಸುತ್ತೇನೆ. ಅದೇ ಅರ್ಧ, ಅವನ ಸಮಸ್ಯೆಯನ್ನು ನಿವಾರಿಸುತ್ತೆ. ನನ್ನ 'ಪೋರ್ಟ್‌ರೈಟ್'ನ್ನೇ ಪೈಂಟ್ ಮಾಡಲು ಹೇಳ್ತೀನಿ. ಈಗಿಂದೀಗಲೇ ಕೆಲಸಕ್ಕೆ ಹಚ್ಚುತ್ತೇನೆ. ಇವತ್ತು ಮಧ್ಯಾಹ್ನದಿಂದಲೇ, ತನ್ನ ಖಾಯಿಲೆಯ ಚಿಂತೆಯಿಂದ ಮುಕ್ತನಾಗುವ ಹಾಗೆ ಮಾಡ್ತೀನಿ. ಸರೀನಾ?"

ವಿನ್ಸೆಂಟ್ ಹಳ್ಳಿಗಾಡಿನ ತಾಜಾ ಗಾಳಿ ಸೇವಿಸುತ್ತಾ ಹಿಂತಿರುಗಿ ಬಂದ.

"ಥಿಯೋ, ಜೋ ಮತ್ತು ಮಗುವನ್ನು ಕರೆತರಬೇಕಿತ್ತು. ನಗರಗಳಲ್ಲಿ ಮಕ್ಕಳನ್ನು ಬೆಳೆಸುವುದೇ ಒಂದು ಅಪರಾಧ."

"ಹೌದೌದು. ನೀವು ಭಾನುವಾರಗಳಂದು ಬಂದು ಇಡೀ ದಿನ ನಮ್ಮ ಜೊತೆ ಕಳೀಬೇಕು" ಎಂದು ಗಾಷೆಟ್ ಮಧ್ಯೆ ಪ್ರವೇಶಿಸಿ ಹೇಳಿದ.

"ಥ್ಯಾಂಕ್ಯು. ನನಗೂ ಬರೋಕೆ ಇಷ್ಟ. ಇನ್ನು ಟ್ರೈನ್ ಬರಲಿದೆ. ಗುಡ್‌ಬೈ ಡಾಕ್ಟರ್ ಗಾಷೆಟ್. ನನ್ನಣ್ಣನ ಜವಾಬ್ದಾರಿ ವಹಿಸಿಕೊಂಡದ್ದಕ್ಕೆ, ಮತ್ತೊಮ್ಮೆ ಥ್ಯಾಂಕ್ಸ್, ವಿನ್ಸೆಂಟ್ ಪ್ರತಿದಿನಾ ಕಾಗದ ಬರೀಬೇಕು."

ಡಾಕ್ಟರ್ ಗಾಷೆಟ್‌ಗೆ ಒಂದು ಅಭ್ಯಾಸ ಇತ್ತು. ಯಾರಾದರೂ ಜೊತೆಗಿದ್ದಾಗ ಅವರ ಮೊಣಕೈ ಹಿಡಿದುಕೊಂಡು, ತನಗೆ ಇಷ್ಟ ಬಂದ ದಿಕ್ಕಿಗೆ ಅವರನ್ನು ತಳ್ಳಿಕೊಂಡು ಹೋಗುವುದು. ವಿನ್ಸೆಂಟ್‌ನನ್ನು ತನಗಿಂತ ಮುಂದೆ ಹೋಗಲು ಬಿಟ್ಟ. ಎತ್ತರದ ಧ್ವನಿಯಲ್ಲಿ ನರಸೀಳುವ ರೀತಿಯಲ್ಲಿ ಮಾತಾಡುತ್ತಲೇ ನಡೆದ. ತಾನೇ ಪ್ರಶ್ನಿಸುತ್ತಾ, ಪ್ರಶ್ನೆಗೆ ತಾನೇ ಉತ್ತರವನ್ನು ಕೊಟ್ಟುಕೊಳ್ಳುತ್ತಾ ಒಂದು ರೀತಿಯ ಸ್ವಗತ ಸಂಭಾಷಣೆಯನ್ನು ಮುಂದುವರೆಸಿದ್ದ.

"ಅದೇ ಹಳ್ಳಿಗೆ ಹೋಗುವ ದಾರಿ..... ಮುಂದೆ ನೇರವಾಗಿ ಕಾಣುತ್ತಿದೆಯಲ್ಲ. ಬಾ ನಾನು ನಿನ್ನನ್ನು ಆ ಗುಡ್ಡದ ಮೇಲಕ್ಕೆ ಕರೆದೊಯ್ಯುತ್ತೇನೆ. ನಿನಗೆ 'ವ್ಯೂ' ಚೆನ್ನಾಗಿ ಕಾಣುತ್ತೆ. ಬೆನ್ನ ಮೇಲೆ ಈಸಲ್ ಇರಿಸಿಕೊಂಡು ನಡೆಯುವುದು ಕಷ್ಟವಾಗೊಲ್ಲ ತಾನೇ? ಎಡಗಡೆ ಇರುವುದೇ ಕ್ಯಾಥೊಲಿಕ್ ಚರ್ಚ್. ನೀನೊಂದು ವಿಷಯ ಗಮನಿಸಿದ್ದೀಯ? ಕ್ಯಾಥೊಲಿಕ್‌ರು ಯಾವಾಗಲೂ ತಮ್ಮ ಚರ್ಚ್‌ಗಳನ್ನು ಗುಡ್ಡದ ಮೇಲೇ ಕಟ್ಟುತ್ತಾರೆ. ಯಾಕೆಂದರೆ, ಜನ ತಲೆ ಎತ್ತಿ ನೋಡುತ್ತಾರೆ, ಎಂಬ ಅಭಿಪ್ರಾಯದಿಂದ. ಓಹೋ! ಓಹೋ! ಎಲ್ಲೋ ನನಗೆ ವಯಸ್ಸಾಗ್ತಾ ಇರಬೇಕು ಈ ಗುಡ್ಡ ಬಹಳ ಇಳಿಜಾರಾಗಿದೆ. ಅವೆಲ್ಲ ಧಾನ್ಯದ ಹೊಲಗಳು.

ಎಷ್ಟು ಚೆನ್ನಾಗಿ ಕಾಣ್ತಿವೆಯಲ್ಲ? ಉವರ್ಸ್‌ನ ಸುತ್ತಲೂ ಇಂಥ ಹೊಲಗಳೇ ಕಾಣಿಸುತ್ತವೆ. ನೀನು ಒಂದು ಸಲ ಇಲ್ಲಿಗೆ ಬಂದು, ಇಲ್ಲಿನ ಈ ದೃಶ್ಯಗಳನ್ನು ಪೈಂಟ್

ಮಾಡಬೇಕು. ಪ್ರೊವೆನ್ಷಲ್‌ನಲ್ಲಿ ಇರುವ ಹಾಗೆ ಇವಕ್ಕೆ ಹಳದಿ ಬಣ್ಣವಿಲ್ಲ, ಅಷ್ಟೆ! ಆ ಕಡೆ ಬಲಕ್ಕೆ ಇರೋದೇ ಸಮಾಧಿ..... ಗುಡ್ಡದ ತಲೆಭಾಗಕ್ಕೆ ಇರುವ ಹಾಗೆ ಮಾಡಿದ್ದೇವೆ. ಸಮಾಧಿಗೆ ಎದುರಾಗಿ, ನದಿ, ಕಣಿವೆಗಳಿವೆ. ಸತ್ತವರಿಗೆ ಇದೆಲ್ಲ ವ್ಯತ್ಯಾಸ ಗೊತ್ತಾಗುತ್ತೆ ಅಂತ ಅನ್ಸತ್ತಾ? ಅವರು ಎಲ್ಲಿದ್ದರೆ ಏನು? ಆದರೂ ನಾವು ಆ ಆತ್ಮಗಳಿಗೆ ಓಯ್ಸ್ ಕಣಿವೆಯಲ್ಲಿಯೇ ಅತ್ಯಂತ ಸುಂದರವಾದ ಜಾಗವನ್ನು ಕೊಟ್ಟಿದ್ದೇವೆ...... ಒಳಗೆ ಹೋಗೋಣವೇ? ..... ನದಿಯ ಸ್ಪಷ್ಟ ನೋಟ ಸಿಗುತ್ತೆ..... ಗೇಟ್ ತೆಗೆದಿದೆ, ಸ್ವಲ್ಪ ತಳ್ಳು..... ಹಾಂ! ಈಗ ಸರಿ...... ಇದು ಒಂದು ಥರಾ ಹಿತವಾಗಿದೆ ಅನ್ನೊಲ್ವಾ! ಗಾಳಿಯಿಂದ ರಕ್ಷಿಸಲು ನಾವು ಎತ್ತರವಾದ ಗೋಡೆಗಳನ್ನು ನಿರ್ಮಿಸಿದ್ದೀವಿ. ಇಲ್ಲಿ ನಾವು ಕ್ಯಾಥೊಲಿಕ್‌ರನ್ನೂ, ಪ್ರಾಟೆಸ್ಟೆಂಟ್‌ರನ್ನೂ ಯಾವುದೇ ವ್ಯತ್ಯಾಸವಿಲ್ಲದೆ, ಒಂದೆ ರೀತಿಯಲ್ಲಿ ಸಮಾಧಿಮಾಡುತ್ತೇವೆ....."

ವಿನ್ಸೆಂಟ್ ಬೆನ್ನ ಮೇಲಿಂದ ಈಸಲ್ ಇಳಿಸಿ, ಮಾತಿನ ಪ್ರವಾಹದಿಂದ ತಪ್ಪಿಸಿಕೊಳ್ಳಲು ಮುಂದೆ ಹೋದ. ಗುಡ್ಡದ ತಲೆಭಾಗದಲ್ಲಿದ್ದ ಸಮಾಧಿಸ್ಥಳ ಚೌಕಾಕಾರವಾಗಿತ್ತು; ಅಚ್ಚುಕಟ್ಟಾಗಿತ್ತು. ಅದರ ಒಂದು ಕಡೆ ಭಾಗ, ಗುಡ್ಡದ ಇಳಿಜಾರಿನ ಕಡೆಗಿತ್ತು. ವಿನ್ಸೆಂಟ್ ಹಿಂಬದಿಯ ಗೋಡೆ ಕಡೆ ನಡೆದ. ಅಲ್ಲಿಂದ ಓಯ್ಸ್ ಕಣಿವೆಯ ಸಮಗ್ರನೋಟ ಸಿಗುತ್ತಿತ್ತು. ತಣ್ಣನೆಯ ಹಸಿರು ನೀರಿನ ಗುಡ್ಡ ಬಳಸಿ ಹರಿಯುತ್ತಿತ್ತು. ತಾನು ನಿಂತಿದ್ದ ಬಲ ಭಾಗಕ್ಕೆ, ಕೆಳಗೆ ಹುಲ್ಲು ಛಾವಣಿಗಳ ಹಳ್ಳಿ ಕಾಣಿಸಿತು. ಅದರಿಂದ ಸ್ವಲ್ಪ ದೂರಕ್ಕೆ, ಸ್ವಲ್ಪ ಇಳಿಜಾರು ಪ್ರದೇಶದಲ್ಲಿ ಎತ್ತರಕ್ಕೆ ಒಂದು ಹಳ್ಳಿಮನೆ ಕಾಣಿಸಿತು. ಸಮಾಧಿಯ ಮೇಲೆ ಶುಭ್ರವಾದ ಮೇ ತಿಂಗಳ ಸೂರ್ಯನ ಬಿಸಿಲು ಬಿದ್ದಿತ್ತು. ವಸಂತದ ಮೊದಲ ದಿನಗಳಲ್ಲಿ ಕಾಣಿಸಿಕೊಳ್ಳುವ ಹೂಗಳು ರಾಶಿರಾಶಿಯಾಗಿ ಸಮಾಧಿಯ ಮೇಲೆಲ್ಲ ಅರಳಿ ನಿಂತಿದ್ದವು. ನೀಲಿಯಾಗಸದ ಛಾವಣಿಯಿಂದ ಆಚ್ಛಾದಿತವಾದ ಸಮಾಧಿ ಸ್ಥಳ ಸುಂದರವೂ ಪ್ರಶಾಂತವೂ ಆದ ಪರಿಸರದಿಂದ ಮನಸ್ಸೆಳೆಯುತ್ತಿತ್ತು.

"ಡಾಕ್ಟರ್, ಗಾಷೆಟ್, ನಾನು ಸೌತ್‌ಗೆ ಹೋಗಿದ್ದು ಒಳ್ಳೆಯದಾಯಿತು. ಈಗ ನಾರ್ತ್‌ಗೆ ಬಂದಿರುವುದರಿಂದ ಇನ್ನೂ ಒಳ್ಳೇದಾಗುತ್ತೆ. ನೋಡಿ ಅಲ್ಲಿ, ಇನ್ನೂ ಸೂರ್ಯನ ಕಿರಣಗಳು ಹಸಿರನ್ನು ಸ್ಪರ್ಷಿಸದಿರುವುದರಿಂದ, ಎಷ್ಟೊಂದು ನೀಲವರ್ಣ ಕಾಣಿಸುತ್ತಿದೆ!"

"ಹೌದೌದು..... ನೀಲವರ್ಣ..... ನೀಲವರ್ಣ....."

"ಎಷ್ಟು ಪ್ರಶಾಂತ, ಪರಿಶುದ್ಧ!" ವಿನ್ಸೆಂಟ್ ತನ್ನಲ್ಲೇ ಹೇಳಿಕೊಂಡ.

ಅವರು ಗುಡ್ಡ ಇಳಿದು, ಧಾನ್ಯದ ಹೊಲಗಳನ್ನು ಮತ್ತು ಚರ್ಚ್‌ನ್ನು ಹಾದು, ನೇರ ರಸ್ತೆ ಹಿಡಿದು ಸಾಗಿ, ಹಳ್ಳಿಯ ಮಧ್ಯಭಾಗಕ್ಕೆ ಬಂದರು.

"ನನ್ನ ಮನೆಯಲ್ಲಿ ನಿನ್ನನ್ನು ಇರಿಸಿಕೊಳ್ಳಲು ಸಾಧ್ಯವಾಗದಿರುವುದಕ್ಕೆ ನನಗೆ ದುಃಖವಾಗುತ್ತೆ. ಮನೆಯಲ್ಲಿ ಪ್ರತ್ಯೇಕವಾದ ರೂಮೊಂದಿಲ್ಲ..... ಆದರೆ ನಾನು ನಿನಗೆ ಒಂದು ಒಳ್ಳೆ ಹೋಟೆಲನ್ನು ತೋರಿಸುತ್ತೇನೆ. ನೀನು ಎಲ್ಲೇ ಇದ್ದರೂ ಪೈಂಟಿಂಗ್

ಮಾಡಲು ಮಾತ್ರ ನಮ್ಮ ಮನೆಗೇ ಬರಬೇಕು. ನಿನ್ನ ಮನೆಯಂತೆಯೇ ಭಾವಿಸು. ಸಂಕೋಚ ಬೇಡವೇಬೇಡ."

ಡಾಕ್ಟರ್ ಗಾಷೆಟ್ ವಿನ್ಸೆಂಟ್‌ನ ಮೊಣಕೈ ಹಿಡಿದುಕೊಂಡು, ನದಿ ದಂಡೆಯ ಸಮೀಪದಲ್ಲಿನ ಒಂದು ಹೋಟೆಲಿಗೆ ಕರೆದೊಯ್ದ. ಗಾಷೆಟ್ ಹೋಟೆಲ್ ಮಾಲಿಕನ ಜೊತೆ ಮಾತಾಡಿದ. ದಿನಕ್ಕೆ ಆರು ಫ್ರ್ಯಾಂಕಗಳಿಗೆ ಊಟ, ವಸತಿ ಕೊಡಲು ಒಪ್ಪಿದ.

"ಈಗ ನೀನು ಇರುವ ವ್ಯವಸ್ಥೆ ಮಾಡಿಕೋ. ಮಧ್ಯಾಹ್ನ ಒಂದು ಗಂಟೆಗೆ ಸರಿಯಾಗಿ, ಊಟಕ್ಕೆ ಮಾತ್ರ ನಮ್ಮ ಮನೆಗೆ ಬಂದು ಬಿಡು. ಬರುವಾಗ ಈಸಲ್ ತರೋದು ಮರೀಬೇಡ. ನನ್ನ ಪೋರ್ಟ್‌ರೈಟ್ ಮಾಡಬೇಕು. ನಿನ್ನ ಕ್ಯಾನ್‌ವಾಸ್‌ಗಳನ್ನೂ ತಗೊಂಡ್ಬಾ. ನೋಡೋಣ...... ಸ್ವಲ್ಪ ಹೊತ್ತು ಹಾಗೇ ಹರಟೆ ಹೊಡೆಯೋಣ, ತಿಳೀತಾ?"

ಡಾಕ್ಟರ್ ಅಲ್ಲಿಂದ ಮರೆಯಾಗುತ್ತಿದ್ದಂತೆ, ವಿನ್ಸೆಂಟ್ ತನ್ನ ಸಾಮಾನನ್ನೆಲ್ಲ ತಗೊಂಡು ಹೊರಬಾಗಿಲಿನತ್ತ ಹೆಜ್ಜೆಹಾಕಿದ.

"ಏಯ್. ಒಂದು ನಿಮಿಷ ನಿಲ್ಲು. ಎಲ್ಲಿಗೆ ಹೊರಟಿದ್ದೀಯ?"

"ನಾನೊಬ್ಬ ಕೂಲಿಕಾರ, ಬಂಡವಾಳಗಾರ ಅಲ್ಲ. ದಿನಕ್ಕೆ ಆರು ಫ್ರ್ಯಾಂಕ್ ಕೊಡೋಕೆ ನನ್ನಿಂದ ಸಾಧ್ಯವಿಲ್ಲ."

ವಿನ್ಸೆಂಟ್ ಅಲ್ಲಿಂದ ಹಿಂತಿರುಗಿದ. ಆದರೆ 'ಮೈರೀ' ಇದ್ದ ಜಾಗದಿಂದ ಸ್ವಲ್ಪ ದೂರದಲ್ಲಿ ಒಂದು ಸಣ್ಣ ಕೆಫೆ ಇತ್ತು. ಅದರ ಹೆಸರು 'ರವೋ', ಅಲ್ಲಿ ದಿನಕ್ಕೆ ಮೂರು ಫ್ರ್ಯಾಂಕ್‌ಗಳು ಮಾತ್ರವೇ ಕೊಡಬೇಕಿತ್ತು. ರವೋ ಕೆಫೆ, ಸಾಧಾರಣವಾದ ಹೋಟೆಲು. ಸಾಮಾನ್ಯವಾಗಿ ಇಲ್ಲಿಗೆ ಬರುತ್ತಿದ್ದವರು ರೈತರು, ಕಾರ್ಮಿಕರು, ಅವರೆಲ್ಲ ಉವರ್ಸ್‌ನ ಸುತ್ತಮುತ್ತಲ ಸ್ಥಳಗಳಲ್ಲಿ ಕೆಲಸ ಮಾಡುತ್ತಿದ್ದರು. ವಿನ್ಸೆಂಟ್ ಒಳಗೆ ಪ್ರವೇಶಿಸಿದ. ಕೆಫೆಯ ಒಳಗೆ ಬಲಗಡೆ ಒಂದು ಬಾರ್ ಇತ್ತು. ಕತ್ತಲಾಗಿದ್ದ ಭಾಗದಲ್ಲಿ, ಸ್ವಲ್ಪ ಕೆಳಗೆ, ಹಳೆದಾದ ಒಂದು ರೂಮು ಇದ್ದು, ಅದರಲ್ಲಿ ಒರಟಾದ, ಮೊದ್ದುಮೊದ್ದಾದ ಕುರ್ಚಿ ಮೇಜುಗಳು ಇದ್ದವು. ಕೆಫೆಯ ಹಿಂಭಾಗದಲ್ಲಿ ಬಾರ್‌ನ ಬೆನ್ನಿಗೇ ಒಂದು ಬಿಲ್ಲಿಯರ್ಡ್ ಟೇಬಲ್ ಇತ್ತು. ಅದರ ಮೇಲೆ ಹಳೆಯದಾದ, ಕೊಳಕಾದ ಹಸಿರು ಬಟ್ಟೆಯನ್ನು ಹೊದಿಸಿದ್ದರು. ಈ ಬಿಲ್ಲಿಯರ್ಡ್ ಟೇಬಲ್ಲು ಕೆಫೆಯ ಪ್ರತಿಷ್ಠೆಗೆ ಕಾರಣವಾಗಿತ್ತು. ಹಿಂದಕ್ಕೆ ಇದ್ದ ಬಾಗಿಲು ನೇರವಾಗಿ ಅಡಿಗೆ ಮನೆ ಕಡೆಗೆ ತೆರೆದುಕೊಂಡಿತ್ತು. ಈ ಬಾಗಿಲಿನಿಂದ ಹೊರಗಡೆ ಮೆಟ್ಟಿಲುಗಳಿದ್ದು, ಅವುಗಳನ್ನು ಹತ್ತಿ ಹೋದರೆ ಮೂರು ಮಲಗುವ ಕೋಣೆಗಳಿದ್ದವು. ತನ್ನ ಕೋಣೆಯ ಕಿಟಕಿಯಿಂದ ನೋಡಿದರೆ, ಅವನಿಗೆ ಕ್ಯಾಥೊಲಿಕ್ ಚರ್ಚ್‌ನ ಗೋಪುರ, ಸಮಾಧಿಯ ಗೋಡೆಯ ಸ್ವಲ್ಪ ಭಾಗ, ಹಿತವಾದ, ಪರಿಶುದ್ಧವಾದ ಉವರ್ಸ್‌ನ ಸೂರ್ಯನ ಬಿಸಿಲು ಕಾಣುತ್ತಿತ್ತು.

ಈಸಲ್ ಹೆಗಲಿಗೇರಿಸಿ, ಆರ್ಲೆಯ ಒಂದಷ್ಟು ಕ್ಯಾನ್‌ವಾಸ್‌ಗಳನ್ನು ಸುತ್ತಿಕೊಂಡು, ಗಾಷೆಟ್‌ರ ಮನೆ ಹುಡುಕಲು ಹೊರಟ. ಸ್ಟೇಷನ್‌ನಿಂದ ಹೊರಟ ಹಾದಿ ಹಿಡಿದು ನಡೆದು ಒಂದು ಕಡೆ ಆ ದಾರಿ ಮೂರು ಕವಲಾಗಿ ಒಡೆದಿದ್ದ ಪಾಯಿಂಟಿಗೆ ಬಂದು

ನಿಂತ. ತನ್ನ ಬಲಗಡೆಗಿದ್ದ ರಸ್ತೆ, ಹಳ್ಳಿ ಮನೆದಾಟಿ ಗುಡ್ಡದವರೆಗೆ ಸಾಗಿತ್ತು; ತನ್ನ ಎಡಗಡೆಗಿದ್ದ ರಸ್ತೆ, ಹೊಲಗಳನ್ನು ದಾಟಿ ನದಿದಂಡೆಯ ಕಡೆಗೆ ಹೊರಟಿತ್ತು. ಗಾಷೆಟ್ ಮಧ್ಯದ ರಸ್ತೆ ಹಿಡಿದು ಬರಲು ಹೇಳಿದ್ದು ನೆನಪಾಗಿ, ಆ ದಾರಿಯಲ್ಲಿಯೇ ಮುಂದೆ ಸಾಗಿದ. ದಾರಿ ಉದ್ದಕ್ಕೂ ತನ್ನ ಜವಾಬ್ದಾರಿ ವಹಿಸಿಕೊಂಡಿದ್ದ ಡಾಕ್ಟರ್ ಬಗ್ಗೆಯೇ ಯೋಚಿಸುತ್ತಿದ್ದ. ಹುಲ್ಲು ಛಾವಣಿ ಹೊದ್ದಿದ್ದ ಹಳ್ಳಿಮನೆಗಳ ಜಾಗದಲ್ಲಿ ವೈಭವಯುತ ವಿಲ್ಲಾಗಳು ಮೆರೆಯುತ್ತಿದ್ದವು. ಹಳ್ಳಿ ವಾತಾವರಣವೇ ಬದಲಾಗುತ್ತಿದ್ದಂತೆ ಅವನಿಗೆ ಕಾಣಿಸಿತು.

ಎತ್ತರದ ಕಲ್ಲುಗೋಡೆಗಿದ್ದ ಹಿತ್ತಾಳೆಯ ನಾಬ್ ಎಳೆದ. ಗಾಷೆಟ್ ಕೂಡಲೇ ಓಡೋಡುತ್ತಾ ಬಂದು ಬಾಗಿಲು ತೆಗೆದ. ವಿನ್ಸೆಂಟ್‌ನನ್ನು ಮೂರು ಮಹಡಿ ಹತ್ತಿಸಿ ಮೇಲೆ ಟೆರ್ರೇಸ್ ಗಾರ್ಡನ್‌ಗೆ ಕರೆದೊಯ್ದ. ಮೂರು ಅಂತಸ್ತಿನ ಮನೆ ಚೆನ್ನಾಗಿ ಕಟ್ಟಲಾಗಿತ್ತು. ಗಾಷೆಟ್, ಮಾಮೂಲಿ ರೀತೀಲಿ ವಿನ್ಸೆಂಟ್‌ನ ಮೊಣಕೈ ಹಿಡಿದೆಳೆದುಕೊಂಡು, ಹಿತ್ತಿಲಿನ ಪ್ರದೇಶಕ್ಕೆ ಕರೆದೊಯ್ದ. ಅಲ್ಲಿ ಬಾತುಗಳು, ಕೋಳಿಗಳು, ಟರ್ಕಿಗಳು, ನವಿಲುಗಳು, ಒಂದು ಹಿಂಡು ಬೆಕ್ಕುಗಳು ತಮಗೆ ತಾವೇ ಚೆಲ್ಲಾಟವಾಡಿಕೊಳ್ಳುತ್ತಾ, ಅತ್ತಿಂದಿತ್ತ, ಇತ್ತಿಂದತ್ತ ಓಡಾಡಿಕೊಂಡಿದ್ದವು.

ಒಂದೊಂದು ಹಕ್ಕಿ, ಪ್ರಾಣಿಯ ಪ್ರವರವನ್ನೆಲ್ಲ ವಿವರಿಸಿ ತಿಳಿಸಿದ ನಂತರ "ಬಾ ವಿನ್ಸೆಂಟ್, ಲಿವಿಂಗ್ ರೂಮಿನ ಕಡೆಗೆ ಹೋಗೋಣ" ಎಂದು ಕರೆದ.

ಲಿವಿಂಗ್ ರೂಮು ಎತ್ತರದ ಸೀಲಿಂಗ್ ಹೊಂದಿದ್ದು ಸಾಕಷ್ಟು ವಿಶಾಲವಾಗಿತ್ತು. ಆದರೆ ಚಿಕ್ಕದಾದ ಎರಡು ಕಿಟಕಿಗಳು ಮಾತ್ರವೇ ಇದ್ದವು. ರೂಮು ದೊಡ್ಡದಾಗಿದ್ದರೂ ಫರ್ನಿಚರು, ಅದೂ ಇದೂ ವಸ್ತುಗಳಿಂದ ತುಂಬಿ ಹೋಗಿದ್ದು. ಎರಡು ಕುರ್ಚಿ, ಮೇಜು ಹಾಕಿದರೆ ಒಂದಿಬ್ಬರು ಓಡಾಡಲೂ ಜಾಗವಿರಲಿಲ್ಲ. ಕಿಟಕಿಗಳ ಕೊರತೆಯಿಂದ, ಗಾಳಿ ಬೆಳಕು ಸಾಧ್ಯವಿರಲಿಲ್ಲ. ಅದರಿಂದಾಗಿ ಕೋಣೆಯೆಲ್ಲ ಕತ್ತಲು! ಕತ್ತಲು.

ಗಾಷೆಟ್ ಅಲ್ಲಿ ಇಲ್ಲಿ ಓಡಾಡುತ್ತಾ, ಕೈಗೆ ಸಿಕ್ಕಿದ ವಸ್ತುಗಳನ್ನೆತ್ತಿ, ವಿನ್ಸೆಂಟ್ ಕೈಗೆ ಕೊಡುತ್ತಾ, ಮತ್ತೆ ವಿನ್ಸೆಂಟ್ ಅದೇನೆಂದು ನೋಡುವ ಮೊದಲೇ ಅವನಿಂದ ಕಸಿದುಕೊಳ್ಳುತ್ತಾ, ಬಿರಬಿರನೆ ಹೆಜ್ಜೆ ಇಡುತ್ತಿದ್ದ.

"ಆ ಗೋಡೆ ಮೇಲೆ ನೋಡು. ಡೆಲಾಕ್ರ್ಯಾಕ್ಸ್‌ನ 'ಹೂಗುಚ್ಛ' ಅವನು ಹೂಗುಚ್ಛ ಇಡಲು ಇದೇ ಹೂದಾನಿಯನ್ನು ಬಳಸಿದ್ದ. ಮುಟ್ಟಿ ನೋಡು ಅವನು ಪೈಂಟ್ ಮಾಡಿರುವುದರ ಹಾಗೇ ಇದೆಯಲ್ಲ! ಆ ಕುರ್ಚಿ!..... ಅದರ ಮೇಲೆ ಕೋರ್‌ಬೆಟ್ ಕೂತಿದ್ದ. ಅದರಲ್ಲಿ ಕುಳಿತು, ಕಿಟಕಿಯಿಂದ ನೋಡುತ್ತಾ 'ಗಾರ್ಡನ್' ದೃಶ್ಯವನ್ನು ಪೈಂಟ್ ಮಾಡಿದ. ಇಲ್ಲಿರುವ 'ಡಿಷಸ್' ನೋಡು. ಇವನ್ನು ಕ್ಲಾಡ್ ಮೊನೆಟ್, 'ಸ್ಟಿಲ್‌ಲೈಫ್'ಗಳಿಗೆ ಬಳಸಿಕೊಂಡ ಇವೆಲ್ಲ ಮೇಲೆ ಇವೆ. ಬಾ ಹೋಗೋಣ. ತೋರಿಸ್ತೇನೆ.

ಊಟದ ಮೇಜಿನ ಬಳಿ ವಿನ್ಸೆಂಟ್ ಗಾಷೆಟ್‌ನ ಮಗನನ್ನು ನೋಡಿದ. ಹದಿನೈದು ವರುಷದ ಸುಂದರವಾದ ಹುಡುಗ. ಉತ್ಸಾಹಶೀಲನಾಗಿ ತೋರುತ್ತಿದ್ದ. ಗಾಷೆಟ್‌ನ ಆರೋಗ್ಯ ಅಷ್ಟು ಸರಿ ಇರಲಿಲ್ಲ. ಸ್ವಲ್ಪ ಸ್ವಲ್ಪವೇ ಒಂದೈದು ಸಲ ಬಡಿಸಿಕೊಳ್ಳುತ್ತಿದ್ದ.

ವಿನ್ಸೆಂಟ್‌ಗೆ ಊಟ ಅಷ್ಟಾಗಿ ಹಿಡಿಸಲಿಲ್ಲ. ಬ್ಲಾಕ್ ಬ್ರೆಡ್, ಲೆಂಟಿಲ್ಸ್‌ಗೆ ಅಭ್ಯಾಸವಾಗಿ ಬಿಟ್ಟಿದ್ದ. ಮೂರನೇ ಸಲ ಬಡಿಸುವಷ್ಟು ಹೊತ್ತಿಗೆ, ಅವನಿಗೆ ಸಾಕೆನಿಸಿಬಿಟ್ಟಿತ್ತು.

"ಈಗ ನಮ್ಮ ಕೆಲಸಕ್ಕೆ ನಾವು ಹೊರಡಬೇಕು..... ನನ್ನ ಪೋರ್ಟ್‌ರೈಟ್ ಮಾಡಲಿದ್ದೀಯ, ತಿಳಿಯಿತೇ? ನಾನು ಈಗ ಹೇಗಿರುವೆನೋ ಹಾಗೇ ನಿನ್ನ ಮುಂದೆ ಕೂತುಬಿಡುತ್ತೇನೆ. ಸರೀನಾ?"

"ಡಾಕ್ಟರ್ ಗಾಷೆಟ್, ತಕ್ಷಣ ಮಾಡೋದು ಸರಿಯಲ್ಲವೇನೋ ಎನಿಸುತ್ತೆ. ಮೊದಲು ನಿಮ್ಮನ್ನು ಅರ್ಥಮಾಡಿಕೊಳ್ಳಬೇಕು. ಅರ್ಥಮಾಡಿಕೊಳ್ಳದೆ, ಸರಿಯಾದ ಪೋರ್ಟ್‌ರೈಟ್ ಬರುವುದಿಲ್ಲ."

"ಹೌದೌದು! ನೀನು ಹೇಳಿದ್ದು ಸರಿ. ಆದರೆ ನೀನು ಖಂಡಿತವಾಗಿಯೂ ನನ್ನ ಪೋರ್ಟ್‌ರೈಟ್ ಮಾಡ್ತೀಯಲ್ಲ? ನೀನು ಕೆಲಸ ಹೇಗೆ ಮಾಡ್ತೀಯಾನ್ನೋದು ನನಗೆ ನೋಡಬೇಕಿದೆ. ನೀನು ಮಾಡುವುದನ್ನು ನೋಡಲು ನಾನು ತುಂಬ ಉತ್ಸುಕನಾಗಿದ್ದೇನೆ."

"ಗಾರ್ಡನ್‌ನಲ್ಲಿ ಒಂದು ದೃಶ್ಯ ನೋಡಿದೆ. ಅದನ್ನು ಮಾಡಬೇಕಂತಿದ್ದೀನಿ."

"ಗುಡ್! ಗುಡ್! ಈಸಲ್ ಸೆಟ್ ಮಾಡಿಕೊಡ್ತೇನೆ. ಪಾಲ್, ವಿನ್ಸೆಂಟ್‌ನ ಈಸಲ್ ತಗೊಂಡು ಬಂದು ಗಾರ್ಡನ್‌ನಲ್ಲಿಡು. ಹೇಳು, ಅದನ್ನು ಎಲ್ಲಿಡಬೇಕೂಂತ. ನಾನು ಆ ಮೇಲೆ ಆ ಸ್ಪಾಟ್ ನೋಡಿದ ಮೇಲೆ, ಬೇರೆ ಯಾರಾದರೂ ಪೈಂಟರ್ ಆ ಜಾಗದಿಂದ ಮಾಡಿದ್ದರೆ ಇಲ್ಲವೇ ಅನ್ನೋದನ್ನ ತಿಳಿಸ್ತೀನಿ."

ವಿನ್ಸೆಂಟ್ ಕ್ಯಾನ್‌ವಾಸ್ ಮೇಲೆ ಕೆಲಸ ಶುರುಮಾಡಿದಾಗ, ಡಾಕ್ಟರ್ ಗಾಷೆಟ್, ಕುತೂಹಲದಿಂದ, ಅಚ್ಚರಿಯಿಂದ, ಸಂತೋಷಾತಿರೇಕದಿಂದ. ಅಂಗಾಭಿನಯದಿಂದ, ನೋಡುತ್ತಿದ್ದ. ಜೊತೆಗೆ ಅವನ ಬೆನ್ನ ಹಿಂದೆ ನಿಂತು, ಸಲಹೆಗಳನ್ನು ನೀಡುತ್ತಿದ್ದ. ಮಧ್ಯೆ ಮಧ್ಯೆ ಭಾವೋದ್ಗಾರಗಳು ಬೇರೆ!

"ಹೌದು! ಹೌದು. ಆವಾಗ ಸರಿಯಾಗಿತ್ತು. ಇದು ಕ್ರಿಮಸನ್ ಲೇಕ್..... ಅರೆರೆ.... ಮರ ಕೆಟ್ಟುಹೋಯಿತು..... ಹಾಂ! ಹಾಂ! ಸರಿಯಾಗಿ ಬಂತು! ಬೇಡ! ಬೇಡ! ಇನ್ನು ಹೆಚ್ಚಿಗೆ ಕೋಬಾಲ್ಟ್ ಹಾಕಬೇಡ. ಹುಷಾರಾಗಿರು. ಇದು ಪ್ರೊವೆನ್ಸ್‌ನಂತೆ ಕಾಣ್ತಿಲ್ಲ. ಹೌದು ಈಗ ಅದು ಅದ್ಭುತವಾಗಿದೆ! ವಿನ್ಸೆಂಟ್ ಆ ಹೂವಿಗೆ ಒಂದು ಸ್ವಲ್ಪ ಹಳದಿ ಹಾಕು. ಸರಿ....... ಸರಿ...... ಈಗ ಸರಿಹೋಯ್ತು. ಅಬ್ಬ! ಅದು ಹೇಗೆ ಬ್ರಷ್‌ಗಳಿಂದ ಜೀವ ತುಂಬುತ್ತೀ? ನಿನ್ನ ಪೈಂಟಿಂಗ್ಸ್‌ನಲ್ಲಿ, ಜೀವವಿಲ್ಲದೆ ಇರುವ ಒಂದು ವಸ್ತುವೂ ಕಾಣುವುದಿಲ್ಲ.... ಬೇಡ! ಬೇಡ! ತೀರಾ ಹೆಚ್ಚು ಹಾಕಬೇಡ. ದಯವಿಟ್ಟು ಕೇಳಿಸಿಕೋ..... ಹಾಂ! ಈಗ ನೋಡು ಅದ್ಭುತ!"

ವಿನ್ಸೆಂಟ್ ಡಾಕ್ಟರ್ ಗಾಷೆಟ್‌ರ ದೇಹದ ವಿಚಿತ್ರ ಭಂಗಿಗಳನ್ನು, ಸ್ವಗತ ಸಂಭಾಷಣೆಗಳನ್ನು ಸಹಿಸಿಕೊಳ್ಳುವಷ್ಟು ಸಹಿಸಿಕೊಂಡ, ನಂತರ, ಕುಣಿಯುತ್ತಿದ್ದ ಗಾಷೆಟ್‌ರ ಕಡೆ ತಿರುಗಿ, "ಗೆಳೆಯರೇ ಇಷ್ಟೊಂದು ಭಾವುಕನಾಗುವುದು. ಹೀಗೆ ಮಾತಾಡುತ್ತಲೇ ಹೋಗುವುದು ನಿಮ್ಮ ಆರೋಗ್ಯಕ್ಕೆ ಒಳ್ಳೆಯದಲ್ಲವೆಂದು ತಿಳಿದಿಲ್ಲವೇನು? ಮೆಡಿಕಲ್ ಫೀಲ್ಡ್‌ನಲ್ಲಿದ್ದೂ, ಪ್ರಶಾಂತವಾಗಿರಬೇಕಾದ್ದು ಎಷ್ಟು ಮುಖ್ಯ ಅನ್ನೋದು ಗೊತ್ತಿಲ್ಲವೇನು?"

ಆದರೆ, ಗಾಷೆಟ್‌ಗೆ, ಯಾರಾದರೂ ಪೈಂಟಿಂಗ್ ಮಾಡುವಾಗ ಸುಮ್ಮನೆ ಇರಲು ಸಾಧ್ಯವೇ ಆಗುತ್ತಿರಲಿಲ್ಲ.

ಸ್ಕೆಚ್ ಮುಗಿದ ಮೇಲೆ, ವಿನ್ಸೆಂಟ್, ಗಾಷೆಟ್ ಜೊತೆ ಒಳಗೆ ಹೋದ, ತನ್ನ ಜೊತೆಗೆ ತಂದಿದ್ದ ಆರ್ಲೇಸಿಯನ್ (ಆರ್ಲೆ ಪ್ರದೇಶದ ವ್ಯಕ್ತಿ)ನ ಪೋರ್ಟ್‌ರೈಟ್ ಅನ್ನು ತೋರಿಸಿದ. ಡಾಕ್ಟರ್ ಗಾಷೆಟ್, ಒಂದು ಕಣ್ಣು ಮುಚ್ಚಿಕೊಂಡು, ಪ್ರಶ್ನಾರ್ಥಕವಾಗಿ ಗಮನಿಸುತ್ತಿದ್ದ ಸುಮಾರು ಹೊತ್ತು, ಅದನ್ನು ನೋಡಿ, ತನ್ನೊಳಗೇ ಅದರ ಗುಣ-ದೋಷಗಳ ಬಗ್ಗೆ ಚಿಂತನೆ ಮಾಡಿ-

"ಇಲ್ಲ! ಇಲ್ಲ! ಅದನ್ನು ನಾನು ಪೂರ್ತಿಯಾಗಿ ಒಪ್ಪುವುದಿಲ್ಲ. ನೀನು ಹೇಳಬೇಕೆಂದಿರುವುದನ್ನು ಸರಿಯಾಗಿ ವ್ಯಕ್ತಪಡಿಸಿಲ್ಲ."

"ನಾನು ಏನೂ ಹೇಳಬೇಕೆಂದು ಹೊರಟಿಲ್ಲ. ಆರ್ಲೆಯ ಜನರ ಸಮಗ್ರ ವ್ಯಕ್ತಿತ್ವವನ್ನು ಇದರಲ್ಲಿ ಬಿಂಬಿಸಲು ಪ್ರಯತ್ನಿಸಿದ್ದೀನಿ. ಬಣ್ಣಗಳಲ್ಲಿ ಅವಳ ಸ್ವಭಾವ, ವ್ಯಕ್ತಿತ್ವವನ್ನು ವಿಶ್ಲೇಷಿಸಲು ಹೊರಟಿದ್ದೀನಿ, ಅಷ್ಟೆ!"

"ಸಾರಿ, ನಾನು ಇದನ್ನು ಒಪ್ಪಿಕೊಳ್ಳಲಾರೆ."

"ನಾನು ಒಂದು ಸಲ ನಿಮ್ಮ ಮನೇನೆಲ್ಲ ನೋಡಿ ಬರಲೇ? ಇದಕ್ಕೆ ನಿಮ್ಮ ಆಕ್ಷೇಪಣೆಯೇನಾದರೂ?"

"ಇಲ್ಲ. ಇಲ್ಲ ಖಂಡಿತ ಇಲ್ಲ. ಹೋಗಿ ಬಾ ವಿನ್ಸೆಂಟ್ ಅಷ್ಟರಲ್ಲಿ ನಾನು ಈ ಹೆಣ್ಣಿನ ಚಿತ್ರವನ್ನು ನೋಡುತ್ತಾ ಒಪ್ಪಿಕೊಳ್ಳಲು ಸಾಧ್ಯವಾಗುವುದೇನೋ,-ಪ್ರಯತ್ನಿಸುತ್ತೇನೆ."

ವಿನ್ಸೆಂಟ್ ಮನೆಯೆಲ್ಲಾ ಸುತ್ತಾಡಿ, ಎಲ್ಲ ವಸ್ತುಗಳ ಮೇಲೂ ಕಣ್ಣಾಡಿಸಿದ. ಪಾಪ! ಪಾಲ್ ಜೊತೆಗೇ ಇದ್ದು ಸಹಕರಿಸಿದ. ನೋಡುತ್ತಾ ಇರುವಾಗ, ಮೂಲೆಯೊಂದರಲ್ಲಿ, ಗಿಲೌಮಿನ್‌ನ ಮಂಚದ ಮೇಲೆ ಮಲಗಿರುವ ನಗ್ನ ಹೆಣ್ಣಿನ ಚಿತ್ರ ಕಣ್ಣಿಗೆ ಬಿತ್ತು. ಬೇಕಾಬಿಟ್ಟಿ ಅದನ್ನು ಎಸೆಯಲಾಗಿತ್ತು. ಆಗಲೇ ಅದರಲ್ಲಿ ಸೀಳುಗಳು ಕಾಣಿಸಿದವು. ಅದನ್ನು ಗಂಭೀರವಾಗಿ ಪರಿಶೀಲಿಸುತ್ತಿದ್ದಾಗ, ಗಾಷೆಟ್ ತುಂಬಾ ಭಾವುಕರಾಗಿ ಬಂದು, ನೂರೆಂಟು ಪ್ರಶ್ನೆಗಳನ್ನು ಹಾಕಿದರು.

"ಅಂದ್ರೆ? ಇಷ್ಟು ಹೊತ್ತೂ ಆ ಆರ್ಲೆ ಹೆಣ್ಣಿನ ಚಿತ್ರವನ್ನೇ ನೋಡುತ್ತಿದ್ದೀರಾ?"

"ಹೌದೌದು, ಈಗ..... ಈಗ ಅರ್ಥ ಹೊಳೀತಾ ಇದೆ.. ಹೊಳೀತಾ ಇದೆ.... ಅವಳನ್ನು ಅರ್ಥಮಾಡಿಕೊಳ್ಳಲು ಹೊರಟಿದ್ದೇನೆ."

"ಡಾಕ್ಟರ್ ಗಾಷೆಟ್ ನಾನೊಂದು ಮಾತು ಹೇಳಿದರೆ ತಪ್ಪಾಗಿ ಭಾವಿಸಬೇಡಿ.... ಇದು ಗಿಲೌಮಿನ್‌ನ ಅದ್ಭುತವಾದ ಕಲಾಕೃತಿ. ಇದಕ್ಕೆ ಸರಿಯಾಗಿ ಕಟ್ಟು ಹಾಕಿಸಿ, ಕಾಪಾಡದಿದ್ದರೆ, ಪೂರ್ತಿ ಹಾಳಾಗಿ ಹೋಗುತ್ತೆ ಮತ್ತು ಅಮೂಲ್ಯವಾದ್ದು ಕಳೆದು ಹೋಗುತ್ತೆ."

ಗಾಷೆಟ್ ಅವನನ್ನು ಕೇಳಿಸಿಕೊಳ್ಳಲೇ ಇಲ್ಲ.

"ನೀನು ಡ್ರಾಯಿಂಗ್ ಮಾಡೋದಕ್ಕೆ ಗಾಗಿನ್‌ನ ಅನುಸರಿಸಿದೆ ಎಂದು ಹೇಳಿದೆ..... ಬಣ್ಣಗಳ ವೈರುಧ್ಯ ನನಗೆ ಒಪ್ಪಿಗೆಯಾಗುತ್ತಿಲ್ಲ.... ಅವು ಅವಳ ಹೆಣ್ಣುತನವನ್ನು ನಾಶಮಾಡುತ್ತವೆ, ......ನಾಶ ಮಾಡೋದಲ್ಲ..... ಆದರೆ..... ಸರಿ ಸರಿ.... ಮತ್ತೆ ಹೋಗಿ ಸರಿಯಾಗಿ ಗಮನಿಸುತ್ತೇನೆ.... ಹಾಂ.... ಬರುತ್ತಿದ್ದಾಳೆ.... ಬರುತ್ತಿದ್ದಾಳೆ..... ನಿಧಾನವಾಗಿ.... ನಿಧಾನವಾಗಿ..... ಕ್ಯಾನ್‌ವಾಸ್‌ನಿಂದ ಜಿಗಿದು ನನ್ನತ್ತ ಬರುತ್ತಿದ್ದಾಳೆ."

ಗಾಷೆಟ್ ದಿನವಿಡೀ ಆರ್ಲೇಸಿಯನ್ ಹೆಣ್ಣನ್ನು ಗಮನಿಸುತ್ತಾ, ಅಲ್ಲಿ ಇಲ್ಲಿ ಓಡಾಡುತ್ತ - ತರ್ಕ ಮಾಡುತ್ತಾ.... ಪ್ರಶ್ನಿಸುತ್ತಾ ತಾನೇ ಉತ್ತರಿಸುತ್ತಾ ವಿವಿಧ ಭಂಗಿಗಳನ್ನು ಪ್ರದರ್ಶಿಸುತ್ತಾ, ಇದ್ದಂತೇ ರಾತ್ರಿಯಾಗಿ ಹೋಯಿತು. ಗಾಷೆಟ್‌ರ ಹೃದಯವನ್ನೇ ಆ ಹೆಣ್ಣು ಸೆರೆಹಿಡಿದು ಬಿಟ್ಟಿದ್ದಳು. ಆತ ವಿಜಯೋನ್ಮಾದದಲ್ಲಿ ಸಂಪೂರ್ಣವಾಗಿ ಮುಳುಗಿ ಹೋಗಿದ್ದ.

"ಈ ಸರಳತೆಯನ್ನು ಸಾಧಿಸುವುದು ಎಷ್ಟೊಂದು ಕಷ್ಟ!" ಎಂದು ಪೋರ್ಟ್‌ರೈಟ್‌ನಿಂದ ಸ್ವಲ್ಪ ದೂರ, ಪ್ರಶಾಂತವಾಗಿ ನಿಂತು, ತನ್ನಲ್ಲೇ ಹೇಳಿಕೊಂಡ.

"ಬ್ಯೂಟಿಫುಲ್, ಬ್ಯೂಟಿಫುಲ್! ಕ್ಯಾರೆಕ್ಟರ್‌ನ ಡೆಪ್ತ್! ಹಿಂದೆಂದೂ ನನ್ನ ಅನುಭವಕ್ಕೆ ಬಂದಿರಲಿಲ್ಲ."

"ನಿಮಗೆ ಅವಳು ಅಷ್ಟೊಂದು ಇಷ್ಟವಾದರೆ, ಅವಳನ್ನು ನೀವೇ ಇರಿಸಿಕೊಳ್ಳಿ. ಅವಳು ನಿಮ್ಮವಳು. ಜೊತೆಗೆ 'ಗಾರ್ಡನ್ ಸೀನ್' ಕೂಡಾ ನಿಮ್ಮದೇ."

"ಅಯ್ಯೋ ವಿನ್ಸೆಂಟ್, ಈ ಕೃತಿಗಳನ್ನು ನಮಗ್ಯಾಕೆ ಕೊಡ್ತೀಯ? ಅವು ಅಮೂಲ್ಯವಾದ ಕಲಾಕೃತಿಗಳು."

"ಮುಂದೆ ನೀವು ನನ್ನನ್ನು ನೋಡಿಕೊಳ್ಳಬೇಕು. ನಿಮಗೆ ಕೊಡಲು ನನ್ನ ಬಳಿ ಹಣ ಇರುವುದಿಲ್ಲ. ಅದಕ್ಕಾಗಿ, ಹಣಕ್ಕೆ ಬದಲು ಈ ಕ್ಯಾನ್‌ವಾಸ್‌ಗಳನ್ನು ಕೊಡುತ್ತಿದ್ದೇನೆ."

"ವಿನ್ಸೆಂಟ್, ಹಣಕ್ಕಾಗಿ ನಾನು ನಿನ್ನನ್ನು ನೋಡಿಕೊಳ್ಳುತ್ತಿಲ್ಲ; ಬರೀ ಸ್ನೇಹಕ್ಕಾಗಿ."

"ಹಾಗಾದರೆ, ನಾನೂ ಇವನ್ನು ಸ್ನೇಹಕ್ಕಾಗಿ ನೀಡುತ್ತಿದ್ದೇನೆ."

-೩-

ವಿನ್ಸೆಂಟ್ ಮತ್ತೊಮ್ಮೆ ಪೈಂಟರ್ ಆಗಿ ಸ್ಥಿರಗೊಂಡ. ಒಂಬತ್ತು ಗಂಟೆಗೆ ಮಲಗುತ್ತಿದ್ದ. ಅಲ್ಲಿಯವರೆಗೆ ಮಂದಬೆಳಕಿನಲ್ಲಿ ಕಾರ್ಮಿಕರು ಬಿಲ್ಲಿಯರ್ಡ್ಸ್ ಆಡುವುದನ್ನು ನೋಡುತ್ತಿದ್ದ. ಬೆಳಿಗ್ಗೆ ಐದು ಗಂಟೆಗೇ ಎದ್ದ. ಹವಾಗುಣ ಚೆನ್ನಾಗಿತ್ತು. ಸೂರ್ಯನ ಎಳೆಬಿಸಿಲು, ಕಣಿವೆಯ ಮೋಹಕ ನೋಟ- ಎಲ್ಲವೂ ಹಿತವೆನಿಸಿತು.

ಸೈಂಟ್ ಪಾಲ್‌ನಲ್ಲಿದ್ದಾಗ ಪದೇ ಪದೇ ಖಾಯಿಲೆ ಬೀಳುತ್ತಿದ್ದುದರಿಂದ, ಅವನ ಪ್ರಾಣವನ್ನು ಸಾಕಷ್ಟು ಹೀರಿಬಿಟ್ಟಿತ್ತು. ಬ್ರಷ್‌ಗಳು ಹಿಡಿತಕ್ಕೆ ಬಂದಿರಲಿಲ್ಲ.

ಬಾರ್ಗ್‌ನ ಅರವತ್ತು 'ಚಾರ್‌ಕೋಲ್ ಸ್ಟಡೀಸ್'ಗಳನ್ನು ಕಳಿಸಿಕೊಡುವಂತೆ ಥಿಯೋಗೆ ಕಾಗದ ಬರೆದ. ಪ್ರಮಾಣ ಬದ್ಧತೆಯನ್ನು ಇನ್ನೂ ಕಲಿಯಬೇಕಾಗಿದೆ ಎಂದುಕೊಂಡ.

ಉವರ್ಸ್‌ನಲ್ಲಿ ಯಾವುದಾದರೂ ಒಂದು ಪುಟ್ಟ ಮನೆ ಸಿಕ್ಕಲ್ಲಿ, ಇಲ್ಲಿಯೇ ನೆಲೆಸಿಬಿಡಬೇಕೆಂದುಕೊಂಡ. ತನಗೊಂದು ಹೆಣ್ಣು ಹುಡುಕಿ, ತಾನೂ ಮದುವೆಯಾಗಿ, ತನ್ನ ಬದುಕನ್ನು ಹಂಚಿಕೊಳ್ಳುವ ಜೊತೆಗಾತಿ ಇರಬೇಕೆಂದು. ಆಶಿಸುವ ಥಿಯೋನ ವಿಚಾರ ಎಷ್ಟು ಸರಿ ಎಂದೆಲ್ಲಾ ಯೋಚಿಸಿದ. ಸೈಂಟ್‌ರೆಮಿಯಲ್ಲಿರುವಾಗ ಮಾಡಿದ ಕ್ಯಾನ್‌ವಾಸ್‌ಗಳನ್ನು ಹರಡಿಕೊಂಡು. ಅವುಗಳನ್ನು ಕೆಲವು ಸುಧಾರಣೆಗಳನ್ನು ತರಲು ಸಾಧ್ಯವೇನೋ ಎಂದು ನೋಡಿದ.

ಇದ್ದಕ್ಕಿದ್ದಂತೆ ಚುರುಕುಗೊಂಡ ಚಟುವಟಿಕೆಗಳು ಏನಿದ್ದರೂ ತಾತ್ಕಾಲಿಕ. ಅವನನ್ನೂ ಒಳಗಿಂದಲೇ ಸಾಯಿಸಲು ಹವಣಿಸುತ್ತಿದ್ದ ಶಕ್ತಿಯನ್ನು ಹತ್ತಿಕ್ಕುವುದು ಸುಲಭವಾಗಿರಲಿಲ್ಲ.

ಆಶ್ರಮದಲ್ಲಿನ ದೀರ್ಘವಾದ ಏಕಾಂತದ ಬದುಕಿನ ನಂತರ, ಅವನಿಗೆ ದಿನಗಳು, ವಾರಗಳಷ್ಟು ದೀರ್ಘವೆನಿಸುತ್ತಿದ್ದವು. ಖಾಲಿ ಖಾಲಿಯಾದ ಸಮಯವನ್ನು ತುಂಬುವುದಾದರೂ ಹೇಗೆಂಬ ಆಲೋಚನೆ ಅವನನ್ನು ಕಾಡುತ್ತಿತ್ತು. ದಿನವಿಡೀ ಪೈಂಟ್ ಮಾಡಲು, ಅವನಲ್ಲಿ ಶಕ್ತಿಯಿರಲಿಲ್ಲ. ಜೊತೆಗೆ ಮಾಡಬೇಕೆನ್ನುವ ಮನಸ್ಸೂ ಇರಲಿಲ್ಲ. ಆರ್ಲೆಯಲ್ಲಿ ಆಕಸ್ಮಿಕ ಸಂಭವಿಸುವುದಕ್ಕೆ ಮೊದಲು, ಅವನಿಗೆ ದಿನಗಳು ಕಳೆಯುವುದೇ ಗೊತ್ತಾಗುತ್ತಿರಲಿಲ್ಲ. ಆದರೆ ಈಗ ಹೇಗೆ ಕಳೆಯಬೇಕೆಂದೇ ತೋಚುತ್ತಿರಲಿಲ್ಲ.

ನಿಸರ್ಗದ ಕೆಲವು ದೃಶ್ಯಗಳು ಅವನನ್ನು ಆಕರ್ಷಿಸಿದವು. ಅವನು ಅವುಗಳ ಮೇಲೆ ಕೆಲಸ ಆರಂಭಿಸಿದಾಗ, ಏನೋ ಒಂದು ಬಗೆಯ ವಿಚಿತ್ರವಾದ ಪ್ರಶಾಂತತೆಯ ಅನುಭವ! ಒಂದು ಬಗೆಯ ನಿರ್ಲಿಪ್ತತೆಯ ಭಾವ. ಬಿಸಿರಕ್ತದ ಉತ್ಸಾಹದೊಂದಿಗೆ ಕೆಲಸ ಮಾಡಬೇಕೆನ್ನುವ ತುಡಿತವೇ ಸಂಪೂರ್ಣವಾಗಿ ನಿಂತುಹೋಗಿತ್ತು. ಹೊತ್ತು ಕಳೆಯುವುದಕ್ಕಾಗಿ, ಕಾಟಾಚಾರಕ್ಕಾಗಿ ಒಂದಿಷ್ಟು ಪೈಂಟ್ ಮಾಡುತ್ತಿದ್ದ. ಮಾಡುವುದರಲ್ಲಿ ಯಾವುದೇ ಆತುರತೆಯಿರಲಿಲ್ಲ. ರಾತ್ರಿಯವರೆಗೆ ಮುಗಿಯದಿದ್ದರೂ, ಅವನಿಗೇನೂ ಅನಿಸುತ್ತಿರಲಿಲ್ಲ.

ಉವರ್ಸ್‌ನಲ್ಲಿ, ಡಾಕ್ಟರ್ ಗಾಷೆಟ್ ಬಿಟ್ಟರೆ, ವಿನ್ಸೆಂಟ್‌ಗೆ ಬೇರೆ ಯಾರೂ ಫ್ರೆಂಡ್ಸ್ ಇರಲಿಲ್ಲ. ಗಾಷೆಟ್‌ರೂ ಕೂಡಾ ಹೆಚ್ಚು ಸಮಯವನ್ನು ಪ್ಯಾರಿಸಿನಲ್ಲಿ, ತಮ್ಮ ಕನ್‌ಸಲ್‌ಟೇಷನ್ ವೃತ್ತಿಯಲ್ಲಿ ಕಳೆಯುತ್ತಿದ್ದರು. ಆಗಾಗ 'ಕೆಫೆ ರೆವೊ'ಗೆ ಬರುತ್ತಿದ್ದರು. ವಿನ್ಸೆಂಟ್‌ನ ಗಾಷೆಟ್‌ರ ಕಣ್ಣುಗಳಲ್ಲಿ ಒಂದು ಬಗೆಯ ನೋವು, ಅಸಂತೋಷಗಳನ್ನು ಗಮನಿಸಿದ.

"ಡಾಕ್ಟರ್ ಗಾಷೆಟ್, ಯಾಕೆ ಒಂಥರಾ, ಏನೋ ದುಃಖದಲ್ಲಿ ಇರುವ ಹಾಗಿದ್ದೀರ?"

"ಆಹ್, ವಿನ್ಸೆಂಟ್! ಎಷ್ಟೋ ವರ್ಷಕಾಲ ದುಡಿದಿದ್ದೀನಿ...... ಆದರೆ ಒಳ್ಳೆಯದೇನನ್ನೂ ಸಾಧಿಸಿಲ್ಲ. ಡಾಕ್ಟರುಗಳಿಗೆ ಗೊತ್ತಿರುವುದು ಒಂದೇ. ನೋವು.... ನೋವು..... ಯಾತನೆ."

"ನಿಮ್ಮದು ನನ್ನದಾಗಿದ್ದರೆ, ನಾನೆಷ್ಟೋ ಸಂತೋಷ ಪಡ್ತಿದ್ದೆ."

ಗ್ಯಾಷೆಟ್‌ರ ಕಣ್ಣುಗಳಲ್ಲಿ ವಿಷಾದದ ಛಾಯೆ ಇಣುಕಿತು.

"ಇಲ್ಲ ವಿನ್ಸೆಂಟ್, ಪೈಂಟರ್ ಆಗುವುದು, ಜಗತ್ತಿನಲ್ಲಿಯೇ ಒಂದು ಅದ್ಭುತ ಸಾಧನೆ; ಒಂದು ಅದ್ಭುತ ಅನುಭವ. ಜೀವನವಿಡೀ, ಪೈಂಟರ್ ಆಗಬೇಕೆಂದೇ ಹಂಬಲಿಸಿದೆ. ಆದರೆ ಎಲ್ಲೋ ಒಂದೆರಡು ಗಂಟೆ ಮಾತ್ರ ಅದರ ಕಡೆ ಗಮನಕೊಡಲು ಸಾಧ್ಯವಾಗಿದೆ ಅಷ್ಟೆ. ...... ಎಷ್ಟೊಂದು ಮಂದಿ ರೋಗಿಗಳಿಗೆ ನನ್ನ ಅಗತ್ಯ ಇದೆ."

ಡಾಕ್ಟರ್ ಗ್ಯಾಷೆಟ್ ವಿನ್ಸೆಂಟ್ ಕುಳಿತಿದ್ದ ಮಂಚದ ಕೆಳಗಿಂದ ಒಂದಷ್ಟು ಕ್ಯಾನ್‌ವಾಸ್‌ಗಳನ್ನು ಹೊರಗೆಳೆದ. ಅವುಗಳಲ್ಲಿ ಪ್ರಕಾಶಮಾನವಾದ, ಉಜ್ವಲವಾದ 'ಸೂರ್ಯಕಾಂತಿ' ಹೂಗಳ ಕ್ಯಾನ್‌ವಾಸನ್ನು ಅವನ ಮುಂದಿರಿಸಿ,

"ಇಂಥ! ಒಂದೇ ಒಂದು ಕ್ಯಾನ್‌ವಾಸನ್ನು ಮಾಡಿದ್ದರೂ ನನ್ನ ಜೀವನ ಸಾರ್ಥಕ! ಎಂದುಕೊಳ್ಳುತ್ತಿದ್ದೆ. ಜನರ ನೋವನ್ನು ನಿವಾರಿಸುವುದರಲ್ಲಿಯೇ ವರ್ಷಗಳೆಷ್ಟೋ ಸವೆದು ಹೋದವು.... ಆದರೆ ಕಡೆಗೆ ಅವರೆಲ್ಲಾ ಸತ್ತು ಹೋದರು..... ಇದರಿಂದ ಏನಾದ ಹಾಗಾಯಿತು? ನಿನ್ನ ಈ ಸೂರ್ಯಕಾಂತಿಗಳು.... ಜನರ ನೋವನ್ನು ನಿವಾರಿಸುತ್ತವೆ..... ಅವರಿಗೆ ಸಂತಸ ನೀಡುತ್ತವೆ..... ಅದೂ ಆ ಕ್ಷಣಕ್ಕಷ್ಟೇ ಅಲ್ಲ..... ಶತಶತಮಾನಗಳ ವರೆಗೆ.... ಅದಕ್ಕೇ ನಿನ್ನ ಬದುಕು ಅರ್ಥಪೂರ್ಣ.... ನೀನು ಎಲ್ಲರಿಗಿಂತ ಈ ಕಾರಣಕ್ಕೇ ಸದಾ ಸಂತೋಷವಾಗಿರಬೇಕು."

ಕೆಲದಿನಗಳ ನಂತರ ವಿನ್ಸೆಂಟ್ ಡಾಕ್ಟರ್ ಗ್ಯಾಷೆಟ್‌ರ ಪೋರ್ಟ್ರೈಟ್ ಮಾಡಿದ. ಬಿಳಿಟೋಪಿ, ನೀಲಿಬಣ್ಣದ ಫ್ರಾಕ್ ಕೋಟ್ ಧರಿಸಿದ್ದ ಡಾಕ್ಟರ್‌ರ ಭಾವಚಿತ್ರಕ್ಕೆ ಕೋಬಾಲ್ಟ್ ಬ್ಲೂ ಹಿನ್ನೆಲೆಯಿತ್ತು. ತಲೆಗೆ ತೆಳುವಾದ ಹೊಂಬಣ್ಣದ ಛಾಯೆ ಕೊಟ್ಟರೆ, ಕೈಗಳಿಗೆ ಫ್ಲೆಷ್‌ಟಿಂಟ್ ನೀಡಿದ. ಡಾಕ್ಟರ್, ರೆಡ್ ಟೇಬಲ್‌ಗೆ ಒರಗಿ ನಿಂತಿದ್ದರು. ಅವರ ಹಿಂದೆ ಹಳದಿ ಪುಸ್ತಕ ಮತ್ತು ಊದಾ ಬಣ್ಣದ ಹೂಗಳಿದ್ದ ಫಾಕ್ಸ್ ಗ್ಲೋವ್‌ಗಿಡಗಳಿದ್ದವು. ಚಿತ್ರ ಮುಗಿದ ಮೇಲೆ ಅವನಿಗೆ ತಮಾಶೆ ಎನಿಸಿತು. ಗಾಗಿನ್ ಬರುವುದಕ್ಕೆ ಮೊದಲು ಆರ್ಲೆಯಲ್ಲಿ ಮಾಡಿದ್ದ ತನ್ನದೇ ಭಾವಚಿತ್ರದ ಹಾಗೆ ಕಾಣುತ್ತಿತ್ತು.

ಡಾಕ್ಟರ್ ಅಂತೂ ತನ್ನ ಭಾವಚಿತ್ರಕ್ಕೆ ತಾನೇ ಮೋಹಿತ ನಾದ. ಪುಂಖಾನುಪುಂಖವಾಗಿ, ವಿನ್ಸೆಂಟ್‌ನನ್ನು, ಹೊಗಳಿಕೆಯ ಮಾತುಗಳ ಮಹಾಪ್ರವಾಹದಲ್ಲಿ ಮುಳುಗಿಸಿ ಬಿಟ್ಟ. ತನ್ನ ಈ ಭಾವಚಿತ್ರದ ಒಂದು ಪ್ರತಿಯನ್ನೂ ಮಾಡಿ ಕೊಡಲು ಕೇಳಿಕೊಂಡ. ವಿನ್ಸೆಂಟ್ ಒಪ್ಪಿದ್ದೇ, ಅವನ ಸಂತೋಷಕ್ಕೆ ಪಾರವೇ ಇರಲಿಲ್ಲ.

"ವಿನ್ಸೆಂಟ್ ನೀನು ನನ್ನ ಪ್ರಿಂಟಿಂಗ್ ಮೆಷಿನ್ ಉಪಯೋಗಿಸಿಕೋ. ಅದು ಅಟ್ಟದ ಮೇಲಿದೆ.... ಪ್ಯಾರಿಸ್‌ಗೆ ಹೋಗೋಣ. ನಿನ್ನ ಎಲ್ಲಾ ಕ್ಯಾನ್‌ವಾಸ್‌ಗಳನ್ನು ತೆಗೆದು ಕೊಂಡು ಬಾ. ಅವುಗಳ ಲಿಥೋಗ್ರಾಫ್‌ಗಳನ್ನು ತೆಗೆಯೋಣ. ನಿನಗೆ ಒಂದು ಸೆಂಟೀಮ್‌ನಷ್ಟೂ ಖರ್ಚಾಗುವುದಿಲ್ಲ...... ಬಾ ನನ್ನ ವರ್ಕ್‌ಷಾಪ್ ತೋರಿಸ್ತೇನೆ."

ಇಬ್ಬರೂ ಏಣಿ ಹತ್ತಿ, ಅಟ್ಟ ತಲುಪಿದರು. ಗ್ಯಾಷೆಟ್‌ರ ಸ್ಟುಡಿಯೋ ಬಹಳ ಮೇಲೆ ಇದ್ದುದೇ ಅಲ್ಲದೆ, ಅಲ್ಲಿದ್ದ ಉಪಕರಣಗಳ್ನು ನೋಡಿದ ಮೇಲೆ ತಾನು

ಎಲ್ಲೋ ಮಧ್ಯಯುಗದಲ್ಲಿನ ಆಲ್‌ಕೆಮಿಸ್ಟನ ವರ್ಕ್‌ಷಾಪ್‌ಗೆ ಬಂದಿರಬೇಕೆಂದೆನಿಸಿತು. ಕೆಳಗೆ ಇಳಿಯುವಾಗ ಮತ್ತೊಮ್ಮೆ ಗಿಲೌಮಿನ್‌ನ 'ನ್ಯೂಡ್' ಚಿತ್ರ ಇನ್ನೂ ಅಲ್ಲಿಯೇ, ನಿರ್ಲಕ್ಷ್ಯಕ್ಕೆ ಒಳಗಾಗಿ ಬಿದ್ದಿರುವುದನ್ನು ಗಮನಿಸಿದ.

"ಡಾಕ್ಟರ್ ಗಾಷೆಟ್, ಇದಕ್ಕೆ ನೀವು ಕಟ್ಟು ಹಾಕಿಸಲೇಬೇಕೆಂದು ಒತ್ತಾಯ ಮಾಡುತ್ತೇನೆ. ಒಂದು ಅದ್ಭುತವಾದ, ಮಾಸ್ಟರ್ ಪೀಸ್ ಆಗಿರುವ ಕಲಾಕೃತಿಯನ್ನು ಹಾಳು ಮಾಡುತ್ತಿದ್ದೀರಿ."

"ಹೌದೌದು. ಅದಕ್ಕೆ ಫ್ರೇಮ್ ಹಾಕಿಸಬೇಕಂತ ನಾನೂ ಯೋಚನೆ ಮಾಡ್ತಿದ್ದೇನೆ. ನಿನಗೆ ಎಷ್ಟು ಬೇಕೋ ಅಷ್ಟೂ ಪ್ರತಿಗಳನ್ನು ಮಾಡಿಕೋ. ಅದಕ್ಕೆ ಬೇಕಾದ ವಸ್ತುಗಳನ್ನು ನಾನು ಕೊಡ್ತೇನೆ."

ಮೇ ಕಳೆದು ಜೂನ್ ಬಂತು. ವಿನ್ಸೆಂಟ್, ಗುಡ್ಡದ ಮೇಲಿನ ಕ್ಯಾಥೋಲಿಕ್ ಚರ್ಚ್‌ನ ಕ್ಯಾನ್‌ವಾಸ್ ಮಾಡಿದ. ಅವನಿಗೆ ತುಂಬಾ ಸುಸ್ತಾಗಿದ್ದರಿಂದ. ಅದನ್ನು ಪೂರೈಸಲು ಹೋಗಲಿಲ್ಲ. ಯಾವುದೋ ಒಂದು ಅಂತಃ ಪ್ರಚೋದನೆ, ನಿರ್ಧಾರದಿಂದ ಅಂಗಾತ ಮಲಗಿ ಧಾನ್ಯದ ಹೊಲಗಳನ್ನು ಮಾಡಿದ. ಹಾಗೆಯೇ ಮೇಡಮ್ ಡೌಬಿನಿಯ ಮನೆ, ಮರಗಳ ನಡುವೆ ಇರುವ ಮತ್ತೊಂದು ಮನೆ – ಇವುಗಳಿಗೆ ಹಿನ್ನೆಲೆಯಾಗಿ ರಾತ್ರಿಯಾಕಾಶ ಕಿಟಕಿಯಲ್ಲಿ ಕಿತ್ತಳೆ ಬಣ್ಣದ ಬೆಳಕು – ಕಡೆಯಲ್ಲಿ ಸಂಜೆಯ ಪರಿಸರ, ಹಳದಿ ಬಣ್ಣಕ್ಕೆ ತಿರುಗುತ್ತಿರುವ ಆಕಾಶ, ಎರಡು ಪೇರ್ ಮರಗಳು – ಇವೆಲ್ಲವನ್ನೂ ಒಳಗೊಂಡ ದೊಡ್ಡ ಕ್ಯಾನ್‌ವಾಸನ್ನು ಮಾಡಿದ.

ಪೈಂಟಿಂಗ್ ಮಾಡುವುದರಲ್ಲಿದ್ದ ಸಂತೋಷ ಮರೆಯಾಗಿತ್ತಾದರೂ, ಮಾಡಲು ಬೇರೆ ಕೆಲಸ ಇಲ್ಲದ ಕಾರಣ, ಕೇವಲ ಅಭ್ಯಾಸ ಬಲದಿಂದಷ್ಟೇ ಮಾಡುತ್ತಿದ್ದ ಹತ್ತು ವರ್ಷಗಳ ನಿರಂತರ ಶ್ರಮ, ಭಯಂಕರ ವೇಗ ಅವನನ್ನು ಮುಂದಕ್ಕೆ ನಡೆಸಿದ್ದವು. ಆದರೆ ಒಂದು ಕಾಲದಲ್ಲಿ ಯಾವ ನಿಸರ್ಗದ ದೃಶ್ಯಗಳು ಅವನ ಭಾವೋದ್ವೇಗ, ಉತ್ಸಾಹಗಳಿಗೆ ಕಾರಣವಾಗಿದ್ದವೋ, ಅಂಥವುಗಳ ಬಗ್ಗೆ ಈಗ ನಿರುತ್ಸಾಹಿಯಾಗಿದ್ದ.

ಏನಾದರೂ ವಿಶೇಷವಾದದ್ದು ಸಿಗುವುದೇನೋ ಎಂದು ಹುಡುಕುತ್ತಾ ಹೊರಟಾಗ, ದಾರಿಯಲ್ಲಿ ಕಂಡದ್ದೆಲ್ಲವನ್ನೂ, 'ಅಯ್ಯೋ ಇದನ್ನು ಆಗಲೇ ಮಾಡಿದ್ದೇನೆ. ಹೇಳಬೇಕಾದ್ದನ್ನು ಹೇಳಿದ್ದೇನೆ, ಹೇಳುವುದಕ್ಕೆ ಮತ್ತೇನೂ ಉಳಿದಿಲ್ಲ, ನಾನ್ಯಾಕೆ ಸುಮ್ಮನೆ ಮಾಡಿದ್ದನ್ನೇ ಮಾಡುತ್ತಿರಲಿ" ಎಂದೆಲ್ಲಾ ತನ್ನಲ್ಲಿ ಗೊಣಗಿಕೊಳ್ಳುತ್ತಿದ್ದ.

ನಿಸರ್ಗದ ಬಗೆಗಿನ ಅವನ ಪ್ರೀತಿಗೆ ಕೊರತೆಯಿರಲಿಲ್ಲ. ಆದರೆ, ಮಾಡಿದ ದೃಶ್ಯಗಳನ್ನೇ ಮಾಡುವ ಒತ್ತಾಯಕ್ಕೆ ಬೀಳಲಿಲ್ಲ. ಒಂದು ರೀತಿಯಿಂದ ಅವನೊಳಗಿನ ಸಾಮರ್ಥ್ಯವೆಲ್ಲ ಖರ್ಚಾಗಿ ಬಿಟ್ಟಿತ್ತು. ಜೂನ್ ತಿಂಗಳು ಪೂರ್ತಿ, ಅವನು ಮಾಡಿದ್ದು ಕೇವಲ ಐದೇ ಐದು ಕ್ಯಾನ್‌ವಾಸ್. ತುಂಬಾ ಆಯಾಸಗೊಂಡಿದ್ದ. ಹೇಳಿಕೊಳ್ಳಲೂ ಆಗದಷ್ಟು ದಣಿದು ಹೋಗಿದ್ದ. ಪೂರ್ತಿಯಾಗಿ ಸೋರಿಹೋಗಿದ್ದ; ಬತ್ತಿ ಹೋಗಿದ್ದ. ಹತ್ತು ವರ್ಷಗಳಲ್ಲಿ ಅವನು ಮಾಡಿದ್ದ ನೂರಾರು ಡ್ರಾಯಿಂಗ್‌ಗಳು, ಪೈಂಟಿಂಗ್‌ಗಳು – ಒಂದೊಂದು ಮಾಡುವಾಗಲೂ ಬದುಕಿನ ಒಂದೊಂದು ಕಿಡಿ, ತಣ್ಣಗಾಗಿ ಹೋಗಿತ್ತು.

ಕಡೆಗೂ ಅವನು ಪ್ರಯತ್ನ ಪೂರ್ವಕವಾಗಿ ಕೆಲಸ ಮಾಡುತ್ತಿದ್ದ. ಥಿಯೋ ತನ್ನ ಮೇಲೆ ಹೂಡಿದ ಬಂಡವಾಳವನ್ನು ಹಿಂತಿರುಗಿಸಬೇಕಿತ್ತು. ಅದಕ್ಕಾಗಿ ತಾನು ಪೈಂಟಿಂಗ್ ಮಾಡಲೇಬೇಕೆಂದುಕೊಂಡು ಮಾಡುತ್ತಿದ್ದವನಿಗೆ, ಥಟ್ಟನೆ ಥಿಯೋನ ಮನೆಯ ಸ್ಥಿತಿ ನೆನಪಿಗೆ ಬಂತು. ಮನೆ ತುಂಬ ಚಿಕ್ಕದು. ಈಗಾಗಲೇ ಎಷ್ಟೊಂದು ಕ್ಯಾನ್‌ವಾಸ್‌ಗಳು ಮನೆಯಲ್ಲಿ ತುಂಬಿದ್ದು, ಅವುಗಳಿಗೆ ಸರಿಯಾದ ಜಾಗವೇ ಇಲ್ಲದೆ, ಇಕ್ಕಟ್ಟಾಗಿರುವಾಗ, ಮತ್ತೆ ಕ್ಯಾನ್‌ವಾಸ್‌ಗಳನ್ನು ಮಾಡುವುದರಲ್ಲಿ ಅರ್ಥವಿಲ್ಲ ಎನಿಸಿ, ಬೇಸರದಿಂದ, ಈಸಲ್ ಅನ್ನು ಪಕ್ಕಕ್ಕೆ ತಳ್ಳಿಬಿಡುತ್ತಿದ್ದ.

ಮೂರು ತಿಂಗಳ ನಂತರ, ಜುಲೈನಲ್ಲಿ ತನಗೆ ಅಟ್ಯಾಕ್ ಬರುವುದೆಂದು ಅರಿತಿದ್ದ. ಅಟ್ಯಾಕ್ ಬರುತ್ತೆ ಎನ್ನುವ ಭಯಕ್ಕಿಂತ ಅವನಿಗೆ, ಅದು ಬಂದಾಗ ಏನಾದರೂ ತನ್ನಿಂದ ಅವಘಡ ಸಂಭವಿಸಿದರೆ, ಈ ಊರಿಂದ ಬಹಿಷ್ಕೃತನಾಗಬೇಕಾಗಿ ಬರುವುದೋ, ಎಂಬುದೇ ಹೆಚ್ಚು ಕಾಡಿತ್ತು. ದುಡ್ಡಿನ ವಿಚಾರ, ಥಿಯೋ ಜೊತೆ ಚರ್ಚೆ ಮಾಡಿರಲಿಲ್ಲ. ಆದ್ದರಿಂದ ಅವನು ಎಷ್ಟು ಕಳಿಸಬಹುದೆಂಬ ಕಲ್ಪನೆ ಇರಲಿಲ್ಲ. ಜೊತೆಗೆ ಗಾಷೆಯವರ ಎದೆಯೊಡೆಯುವ ಮತ್ತು ಭಾವಾವೇಶದ ಮಾತುಗಳು ಅವನಿಗೆ ಒಂದು ರೀತಿಯಲ್ಲಿ ಬೇಸರ ಉಂಟು ಮಾಡುತ್ತಿದ್ದವು.

ಈ ಎಲ್ಲ ಕಷ್ಟಗಳ ಜೊತೆಗೆ, ಥಿಯೋನ ಮಗು ಕಾಯಿಲೆ ಬಿತ್ತು.

ತನ್ನದೇ ಹೆಸರಿನಲ್ಲಿದ್ದ ಮಗುವಿನ ಕಾಯಿಲೆ ಸುದ್ದಿ ಅವನನ್ನು ಭೀತಗೊಳಿಸಿತು. ಅವನಿಗೆ ಒಂದು ಕ್ಷಣವೂ ತಡೆಯಲಾಗಲಿಲ್ಲ. ಕೂಡಲೇ ಪ್ಯಾರಿಸಿನ ಟ್ರೈನ್ ಹಿಡಿದು ಹೊರಟು ಬಿಟ್ಟ. ಇದ್ದಕ್ಕಿದ್ದಂತೆ ಪ್ರತ್ಯಕ್ಷನಾದ ವಿನ್ಸೆಂಟ್‌ನನ್ನು ನೋಡಿ ಥಿಯೋ ಗಲಿಬಿಲಿಗೊಂಡ. ಥಿಯೋ ದುಃಖ, ಹತಾಶೆಯಿಂದಾಗಿ ತೀರಾ ಸಪ್ಪೆಯಾಗಿ ಹೋಗಿದ್ದ. ವಿನ್ಸೆಂಟ್ ಥಿಯೋನನ್ನು ಸಮಾಧಾನ ಪಡಿಸಿದ.

"ವಿನ್ಸೆಂಟ್, ನನಗೆ ಮಗುವಿನ ಯೋಚನೆಯೇನೂ ಇಲ್ಲ."

"ಹಾಗಾದರೆ, ಮತ್ತೇನು ಯೋಚನೆ?"

"ಅದು 'ವಾಲ್‌ಡನ್'ನಿಂದ. ರಾಜೀನಾಮೆ ಕೊಡಬೇಕಾಗುತ್ತೆ ಅಂತ ಹೆದರಿಸುತ್ತಿದ್ದಾನೆ."

"ಯಾಕೆ ಥಿಯೋ? ಅವನು ಹಾಗೆ ಮಾಡೋಕೆ ಸಾಧ್ಯ ಇಲ್ಲ. ಗೂಪಿಲ್ಸ್ ಜೊತೆ ಹದಿನಾರು ವರ್ಷ ಕೆಲಸ ಮಾಡಿದ್ದೀಯ!"

"ನನಗೂ ಗೊತ್ತಿದೆ. ಅವನ ದೃಷ್ಟೀಲಿ, ನಾನು ವ್ಯಾಪಾರದ ಕಡೆ ಗಮನಕೊಡದೆ, ಇಂಪ್ರೆಷನಿಸ್ಟರ್ ಜೊತೆ ಸೇರಿ ಕೆಲಸ ಮಾಡ್ತಿದ್ದೀನಿ. ಇಲ್ಲಿ ಸರಿಯಾಗಿ ಸೇಲ್ಸ್ ಮಾಡ್ತಿಲ್ಲ. ಮಾಡಿದರೂ ಕಡಿಮೆ ಬೆಲೆಗೆ ಕೊಡ್ತಿದ್ದೀನೀಂತಲೂ, ಅದರಿಂದ ಕಂಪೆನಿಗೆ ತುಂಬ ನಷ್ಟ ಆಗ್ತಿದೆ ಎಂತಲೂ ಆಕ್ಷೇಪ ಮಾಡ್ತಿದ್ದಾನೆ."

"ನಿಜವಾಗಿಯೂ ನಿನ್ನನ್ನು ಕಳಿಸಿಬಿಡ್ತಾನೇನು?"

"ಯಾಕೆ ಕಳಿಸೊಲ್ಲ? ವಾನ್‌ಗೋರಿಗಿದ್ದ ಆಸಕ್ತಿಯೆಲ್ಲ ಹರಾಜಾಗಿ ಹೋಗಿದೆ."

"ಏನ್ಮಾಡ್ತೀಯ ಥಿಯೋ? ನಿನ್ನದೇ ಸ್ವಂತ ಮಳಿಗೆ ತೆರೆಯೋದರ ಬಗ್ಗೆ ಯೋಚನೆಯೇನಾದರೂ ಮಾಡಿದ್ದೀಯ?"

"ಹೇಗೆ ಮಾಡೋದು ವಿನ್ಸೆಂಟ್. ಇದ್ದ ಬದ್ದ ಸ್ವಲ್ಪ ಸೇವಿಂಗ್ಸ್, ಮದುವೆಗೆ ಖರ್ಚಾಗಿ ಹೋಯಿತು."

"ನನ್ನ ಮೇಲೆ ಸಾವಿರಾರು ಫ್ರ್ಯಾಂಕ್‌ಗಳನ್ನು ಖರ್ಚು ಮಾಡದೆ ಇದ್ದಿದ್ದರೆ, ಇವತ್ತು....."

"ವಿನ್ಸೆಂಟ್, ಪ್ಲೀಸ್..... ಅದಕ್ಕೂ ಇದಕ್ಕೂ ಸಂಬಂಧ ಇಲ್ಲ. ನಿನಗೆ ಗೊತ್ತು, ನಾನು....."

"ಹಾಗಾದರೆ ಏನ್ಮಾಡ್ತೀಯ ಥಿಯೋ? ಈಗ ನೀನೊಬ್ಬನೇ ಅಲ್ಲ. ಜೋ ಮತ್ತು ಮಗು ಇದ್ದಾರೆ."

ವಿನ್ಸೆಂಟ್ ಪ್ಯಾರಿಸ್‌ನಲ್ಲಿ ಹಲವು ದಿನಗಳಿದ್ದ. ಮಗುವಿಗೆ ಹುಷಾರಿಲ್ಲದ ಕಾರಣ, ಅದಕ್ಕೆ ತೊಂದರೆ ಕೊಡಬಾರದೆಂದು, ಆದಷ್ಟೂ ಮನೆಯಿಂದ ಹೊರಗೇ ಇರುತ್ತಿದ್ದ. ಯಾಕೋ ಅವನಿಗೂ ಜ್ವರದ ಕಾವು ಏರುತ್ತಿದ್ದಂತೆನಿಸಿತು. ಪುಟ್ಟ ವಿನ್ಸೆಂಟ್‌ನ ಆರೋಗ್ಯ ಸುಧಾರಿಸಿದ ಕೂಡಲೇ ಮತ್ತೆ ಉವರ್ಸ್‌ನ ಪ್ರಶಾಂತತೆಯ ಮಡಿಲಿಗೆ ಹೊರಟ.

ಆದರೆ ಅಲ್ಲಿಗೆ ಹೋದರೂ ಅವನಿಗೆ, ಒಳ್ಳೆಯದಾಯಿತು ಎಂದೇನೂ ಅನಿಸಲಿಲ್ಲ. ಚಿಂತೆಗಳಿಂದ ಮುಕ್ತಿ ಸಾಧ್ಯವಾಗಲಿಲ್ಲ. ಥಿಯೋಗೆ ಕೆಲಸ ಹೋದರೆ ಮುಂದೇನು? – ಎಂಬುದೇ ಭೂತಾಕಾರವಾಗಿ ಕಾಡ ತೊಡಗಿತು. ತನ್ನ ಗತಿಯೇನು? ಭಿಕ್ಷೆ ಬೇಡಲು ಬೀದಿಗಿಳಿಯಬೇಕಾಗಬಹುದು. ಒಂದು ವೇಳೆ ಮಗುವಿಗೆ ಏನಾದರೂ ಆಗಿ ಸತ್ತುಹೋದರೆ? ಮೊದಲೇ ಥಿಯೋನದು ಸೂಕ್ಷ್ಮ ಪ್ರಕೃತಿ. ಆಘಾತವನ್ನು ಸಹಿಸಿಕೊಂಡಾನು ಹೇಗೆ? ಅವನಿಗೆ ಹೊಸದಾಗಿ ಕೆಲಸ ಸಿಗುವವರೆಗೆ, ಜೀವನ ನಡೆಸುವುದು ಹೇಗೆ? ಹೊಸ ಕೆಲಸವನ್ನು ಹುಡುಕಿಕೊಂಡು ಹೋಗುವ ಶಕ್ತಿ ಥಿಯೋಗೆ ಇದೆಯೇ? ಹೀಗೆ ನೂರಾರು ಪ್ರಶ್ನೆಗಳು, ಚಿಂತೆಗಳು ಅವನನ್ನು ಅಧೀರಗೊಳಿಸುತ್ತಿದ್ದವು.

ಕೆಫೆ ರಾವೋನ ಕತ್ತಲೆ ಕೋಣೆಯಲ್ಲಿ ಕುಳಿತು ಬಿಲಿಯರ್ಡ್ ಬಾಲ್‌ಗಳ ಜೊತೆ ಆಟವಾಡುತ್ತಾ ಯಾವುದೋ ಚಿಂತೆಯಲ್ಲಿ ಮಗ್ನನಾಗಿದ್ದ. ಡ್ರಿಂಕ್‌ಗೆ ಕಾಸಿಲ್ಲ. ಬಣ್ಣ ಕ್ಯಾನ್‌ವಾಸ್‌ಗಳಿಗೆ ಕಾಸಿಲ್ಲ. ಇಂಥ ಸ್ಥಿತಿಯಲ್ಲಿ ಥಿಯೋ ಹತ್ತಿರ ಕೇಳುವುದೂ ಸಾಧ್ಯವಿರಲಿಲ್ಲ. ಇದೆಲ್ಲದರ ಜೊತೆಗೆ ತನಗೆ ಬರಲಿದ್ದ ಅಟ್ಯಾಕ್‌ನ ಹೆದರಿಕೆ ಬೇರೆ. ಆ ಸಮಯದಲ್ಲಿ ತನ್ನಿಂದೇನಾದರೂ ಆದರೆ ಥಿಯೋಗೆ ಇನ್ನಷ್ಟು ತೊಂದರೆ ಮತ್ತು ಖರ್ಚುಗಳು.

ಕೆಲಸ ಮಾಡಬೇಕೆಂದುಕೊಂಡರೂ ಮಾಡಲಾಗುತ್ತಿರಲಿಲ್ಲ. ಪೈಂಟ್ ಮಾಡಬೇಕೆಂದು ಬಯಸಿದ್ದೆಲ್ಲವನ್ನೂ ಮಾಡಿ ಮುಗಿಸಿದ್ದ. ಹೇಳಬೇಕೆಂದುಕೊಂಡದ್ದೆಲ್ಲವನ್ನೂ ಹೇಳಿ ಮುಗಿಸಿದ್ದ.

ಪ್ರಕೃತಿಯೂ ಈಗ ಅವನನ್ನು ಪ್ರಚೋದಿಸಲಿಲ್ಲ; ಅದಮ್ಯ ಸೃಜನ ಕ್ರಿಯೆಗೆ ಒತ್ತಾಯಿಸಲಿಲ್ಲ. ತನ್ನ ಪಾಲಿನ ಸೃಷ್ಟಿ ಸಾಮರ್ಥ್ಯಗಳಿಗೆ ಜಡತೆ ಮತ್ತು ಸಾವುಗಳು ಸಂಭವಿಸಿವೆ ಎಂಬುದನ್ನು ಅರಿತುಕೊಂಡ.

ದಿನಗಳು ಕಳೆದವು. ಜುಲೈ ತಿಂಗಳ ಮಧ್ಯದಲ್ಲಿಯೇ ಬಿಸಿಲು ಶುರುವಾಯಿತು. ಥಿಯೋನ ತಾಪತ್ರಯಗಳಿಗೆ ಲೆಕ್ಕವೇ ಇರಲಿಲ್ಲ. ಕೆಲಸ ಹೋಗುವ ಭಯ; ಮಗುವಿನ ಚಿಂತೆ, ಡಾಕ್ಟರ್ ಬಿಲ್ಲುಗಳು – ಇಷ್ಟೆಲ್ಲ ಇದ್ದರೂ ಹೇಗೋ ಕಷ್ಟಪಟ್ಟುಕೊಂಡು, ವಿನ್ಸೆಂಟ್‌ಗೆ ಐವತ್ತು ಫ್ರ್ಯಾಂಕ್‌ಗಳನ್ನು ಕಳಿಸಿದ. ವಿನ್ಸೆಂಟ್ ಅದನ್ನೆಲ್ಲ ಕೆಫೆ ರಾವೋಗೆ–ಪೇ ಮಾಡಿಬಿಟ್ಟ. ಆದರೆ ಮುಂದೆ?.... ಹಣವನ್ನು ಯಾರಿಂದ ನಿರೀಕ್ಷಿಸುವುದು? ಪುಟ್ಟ ಸಮಾಧಿಯ ಬಳಿ ಇರುವ ಧಾನ್ಯದ ಹೊಲದಲ್ಲಿ ಒಂದು ಕಡೆ, ಸೂರ್ಯನ ಬಿಸಿಲಿಗೆ ಮುಖಕೊಟ್ಟು ಮಲಗಿದ. ಓಯ್ಸ್ ದಂಡೆಗುಂಟ ಹೆಜ್ಜೆ ಹಾಕಿದ. ತಣ್ಣನೆಯ ಗಾಳಿಯ ಹಿತ; ದಡಗಳ ಉದ್ದಕ್ಕೂ ಬೆಳೆದಿದ್ದ ಮರಗಳ ಎಲೆಗಳ ಗಂಧದ ಹಿತ ಅನುಭವಿಸುತ್ತಾ ನಡೆದ. ಗಾಷೆಟ್ ಅವರಲ್ಲಿಗೆ ಊಟಕ್ಕೆ ಹೋದ. ರುಚಿ ಪಚಿಯ ಅರಿವಿಲ್ಲದೆ ಹೊಟ್ಟೆಗೆ ತುಂಬಿಸಿಕೊಂಡ. ಡಾಕ್ಟರ್ ಗಾಷೆಟ್ ವಿನ್ಸೆಂಟ್ನ ಪೈಂಟಿಂಗ್ಸ್ ಬಗ್ಗೆ ಭಾವುಕನಾಗಿ ಮಾತಾಡುತ್ತಿದ್ದಾಗ, ವಿನ್ಸೆಂಟ್ ತನ್ನಲ್ಲಿಯೇ ಹೇಳಿಕೊಂಡ:–

"ಆತ ನನ್ನ ಬಗ್ಗೆ ಮಾತಾಡುತ್ತಿಲ್ಲ. ಅವು ನಾನು ಮಾಡಿದ ಚಿತ್ರಗಳೂ ಅಲ್ಲ. ನಾನು ಏನನ್ನೂ ಪೈಂಟ್ ಮಾಡಲಿಲ್ಲ. ಕ್ಯಾನ್‌ವಾಸ್‌ಗಳಲ್ಲಿ ಇರುವ ಸಹಿಯೂ ನನ್ನದಲ್ಲ. ಒಂದು ಸಲವೂ ನಾನು ಬ್ರಷ್ ಉಪಯೋಗಿಸಿದ್ದು ನೆನಪಾಗುತ್ತಿಲ್ಲ. ಅವೆಲ್ಲವನ್ನೂ ಬೇರೆ ಯಾರೋ ಮಾಡಿದ್ದಿರಬೇಕು!"

ತನ್ನ ಕೋಣೆಯ ಕತ್ತಲಲ್ಲಿ ಕಣ್ಣು ಬಿಟ್ಟುಕೊಂಡು ತನಗೇ ತಾನೇ ಹೇಳಿಕೊಳ್ಳಲು ಆರಂಭಿಸಿದ. "ಒಂದು ವೇಳೆ ಥಿಯೋ ಕೆಲಸ ಕಳೆದುಕೊಳ್ಳದೆ ಹೋದರೆ ಮಾಮೂಲಿಯಂತೆ, ಅವನು ನನಗೆ ತಿಂಗಳಿಗೆ ನೂರೈವತ್ತು ಫ್ರ್ಯಾಂಕ್ ಕಳಿಸಿದ್ದೇ ಆದರೆ, ನಾನು ನನ್ನ ಬದುಕನ್ನು ಏನು ಮಾಡಲಿ? ಇಲ್ಲೀವರೆಗೆ ಸಂಕಟಗಳ ನಡುವೆಯೂ ನಾನು ಬದುಕ ಬೇಕಾಗಿ ಬಂದದ್ದು, ನನಗೆ ಪೈಂಟ್ ಮಾಡುವ ಅಗತ್ಯವಿತ್ತು. ನನ್ನೊಳಗೆ ಹೇಳಲು ಎಷ್ಟೊಂದು ವಿಚಾರಗಳಿದ್ದವು. ಅವುಗಳನ್ನು ಹೇಳಲೇಬೇಕೆಂಬ ತುಡಿತವಿತ್ತು. ಆದರೆ ಈಗ, ಹೇಳುವುದಕ್ಕಾಗಲೀ, ಮಾಡುವುದಕ್ಕಾಗಲೀ ಏನೂ ಉಳಿದಿಲ್ಲ. ಒಳಗೆಲ್ಲ ಖಾಲಿ. ಹೊರಗಿರುವುದು ಬರೀ ಚಿಪ್ಪು. ಹೀಗಿರುವಾಗ ಸೈಂಟ್ ಪಾಲ್‌ನಲ್ಲಿನ ರೋಗಿಗಳಂತೆ ಕೊಳೆಯುತ್ತಾ, ಏನಾದರೂ ಆಗಬಾರದ್ದು ಆಗಿ ಸಾಯಯುವುದಕ್ಕಾಗಿ ಕಾಯುತ್ತಾ ಇರಬೇಕೇ?"

ಕೆಲವೊಮ್ಮೆ ತನ್ನದೆಲ್ಲ ಮರೆತು, ಥಿಯೋ, ಜೊಹಾನ್ನ ಮತ್ತು ಮಗುವಿನ ಬಗ್ಗೆಯೇ ಚಿಂತಿಸುತ್ತಿದ್ದ.

"ಒಂದು ವೇಳೆ ನನ್ನ ಆರೋಗ್ಯ ಸುಧಾರಿಸಿ, ಮೊದಲಿನಂತೆ ಆದರೆ, ಮತ್ತೆ ಪೈಂಟ್ ಮಾಡಬೇಕೆಂದೆನಿಸಿದರೆ, ಇನ್ನೂ ಥಿಯೋನಿಂದ ದುಡ್ಡು ತೆಗೆದುಕೊಳ್ಳುವುದು

ಸರಿಯೇ? ಅವನಿಗೂ ಹೆಂಡತಿ, ಮಗು ಇದೆ. ಅವರ ಅಗತ್ಯಕ್ಕೆ ಹಣ ಬೇಕಾಗುತ್ತದೆ. ಇನ್ನೂ ನನಗಾಗಿ ಖರ್ಚು ಮಾಡುವುದು ಯಾವ ನ್ಯಾಯ? ಹೆಂಡತಿ ಮಗುವನ್ನು ಹಳ್ಳಿಗೆ ಕಳಿಸಲು ಹಣಬೇಕು. ಅಲ್ಲಿ ಅವರು ಸ್ವಸ್ಥವಾಗಿ, ಶಕ್ತಿವಂತರಾಗಿ ಬೆಳೆಯಬಲ್ಲರು. ಹತ್ತು ವರ್ಷಗಳ ಕಾಲ ನಿರಂತರವಾಗಿ ನನ್ನ ಹೊರೆ ಹೊತ್ತಿದ್ದಾನೆ. ಅವಕಾಶಕೊಡಬೇಕು. ನನ್ನದು ಸಾಕಾಯಿತು. ಇನ್ನು ಮುಂದೆ ಅದು ಅವನ ಹಕ್ಕು. ಅದು ಅವನಿಗೆ ಸಿಗಲೇ ಬೇಕು."

ಎಲ್ಲ ಯೋಚನೆ, ಚಿಂತೆಗಳ ಆಳದಲ್ಲಿ, ಅವನಿಗೆ ಕಾದಿರುವ ಎಪಿಲೆಪ್ಸಿಯಿಂದಾಗಬಹುದಾದ ಪರಿಣಾಮಗಳ ಭಯ ಕಾಡುತ್ತಿತ್ತು. ಈಗ ಅವನು ಸ್ತಿಮಿತದಲ್ಲಿ ಇದ್ದಾನೆ. ಮಾಮೂಲಿ ಮನುಷ್ಯರಂತೆಯೇ ಇದ್ದಾನೆ. ಆದರೆ ಮುಂದೆ ಬರಲಿರುವ ಅಟ್ಯಾಕ್ ಅವನನ್ನು ಹುಚ್ಚನನ್ನಾಗಿಸಬಹುದು. ಮತಿವಿಕಲ್ಪತೆ ಪರಾಕಾಷ್ಠೆಯನ್ನು ತಲುಪಬಹುದು. ಇನ್ನು ವಾಸಿಯಾಗುವುದು ಸಾಧ್ಯವೇ ಇಲ್ಲವೆನ್ನುವ ಸ್ಥಿತಿಗೆ ಹೋಗಬಹುದು. ಆಗ ಥಿಯೋಗೆ ಏನು ಮಾಡಲು ಸಾಧ್ಯ? ಹೇಗೆ ತನ್ನನ್ನು ನಿಭಾಯಿಸಬಲ್ಲ? ಹುಚ್ಚರ ಆಸ್ಪತ್ರೆಯ ಕತ್ತಲ ಕೋಣೆಯಲ್ಲಿ, ಬಂದಿಯಾಗಿ ಇಡುವರೇ?

ಡಾಕ್ಟರ್ ಗಾಷೆಟ್‌ಗೆ ಮತ್ತೆರಡು ಕ್ಯಾನ್‌ವಾಸ್‌ಗಳನ್ನು ಉಡುಗೊರೆಯಾಗಿ ನೀಡಿದ,. ಮೆಲ್ಲಗೆ ತನ್ನ ಸಮಸ್ಯೆ ತನ್ನ ಭಯವನ್ನ ಮುಂದಿಟ್ಟ.

"ಇಲ್ಲ ವಿನ್ಸೆಂಟ್, ಅಟ್ಯಾಕ್ಸ್ ಬರುವ ಕಾಲ ಮುಗಿಯಿತು. ನಿನ್ನ ಆರೋಗ್ಯಕ್ಕೇನೂ ಇನ್ನು ಮುಂದೆ ತೊಂದರೆಯಾಗುವುದಿಲ್ಲ. ಆದರೆ ಎಲ್ಲರಿಗೂ ಈ ಅದೃಷ್ಟ ಸಿಗೊಲ್ಲ."

"ಅಂಥವರಿಗೆ, ಕಡೆಗೆ ಏನಾಗುತ್ತೆ ಡಾಕ್ಟರ್?"

"ಕೆಲವು ಸಲ ಮೇಲಿಂದ ಮೇಲೆ ಹಲವಾರು ಬಾರಿ, ಅಟ್ಯಾಕ್ಸ್‌ಗೆ ಒಳಗಾದವರು, ಪೂರ್ತಿಯಾಗಿ ನಿಷ್ಪ್ರಯೋಜಕರಾಗ್ತಾರೆ. ಅವರು ಒಂದು ರೀತಿಯಿಂದ ಬ್ರೈನ್ ಡೆಡ್ ಅನ್ನೋ ಹಾಗೆ ಆಗಿಬಿಡ್ತಾರೆ."

"ಅಂದ್ರೆ, ಮತ್ತೆ ಅವರಿಗೆ ಗುಣಮುಖರಾಗುವ ಅವಕಾಶವೇ ಇರುವುದಿಲ್ಲವೇನು?"

"ಇಲ್ಲ. ಅವರ ಕತೆ ಮುಗಿದ ಹಾಗೇ, ಅವರು ಜೀವಂತವಾಗಿರ್ತಾರೆ. ಕೆಲ ವರ್ಷಗಳಾದರೂ ಉಸಿರಾಡುತ್ತಿರುತ್ತಾರೆ. ಎಲ್ಲೋ, ಹುಚ್ಚಾಸ್ಪತ್ರೇಲೋ, ಹುಚ್ಚರ ಆಶ್ರಮದಲ್ಲೋ ಕೊಳೀತಾ ಬಿದ್ದಿದ್ದು, ಕಡೆಗೆ ಸಾಯ್ತಾರೆ. ಅಷ್ಟರ ಹೊರತು, ಮತ್ತೆ ಮಾಮೂಲಿ ಸ್ಥಿತಿಗೆ ಬರೋದಂತೂ ದೂರದ ಮಾತೇ!"

"ಮುಂದೆ ಆಗುವ ಅಟ್ಯಾಕ್‌ಗಳಿಂದ ರಿಕವರ್ ಆಗ್ತಾರೆ ಅಥವಾ ಇಲ್ಲ ಅನ್ನೋದು ಹೇಳೋಕೆ ಸಾಧ್ಯವಾಗುವುದೇ ಡಾಕ್ಟರ್?"

"ಸರಿಯಾಗಿ ಹೇಳೋಕಂತೂ ಆಗುವುದಿಲ್ಲ...... ಸರಿ.... ಸರಿ ಬಿಡು. ಈಗ್ಯಾಕೆ ಆ ಬೇಡದ ಚರ್ಚೆ. ನಡಿ, ಮೇಲೆ, ವರ್ಕ್‌ಷಾಪ್‌ಗೆ ಹೋಗಿ ಕೆಲವು ಎಚ್ಚಿಂಗ್ಸ್ ಮಾಡೋಣ."

ಮುಂದೆ ನಾಲ್ಕು ದಿನ, ವಿನ್ಸೆಂಟ್ ರಾವೋ ನ ರೂಮಿನಿಂದ ಹೊರಗೆ ಹೋಗಲೇ ಇಲ್ಲ. ಮೇಡಂ ರಾವೋ ಪ್ರತಿದಿನ ಸಂಜೆ ಅವನಿಗೆ ಊಟವನ್ನು ತಂದುಕೊಡುತ್ತಿದ್ದಳು.

"ನಾನೀಗ ಚೆನ್ನಾಗಿದ್ದೇನೆ. ನನ್ನ ಬುದ್ಧಿ ನೆಟ್ಟಗಿದೆ..... ನನ್ನ ಗುರಿ ನನ್ನ ಕೈಲೇ ಇದೆ..... ಆದರೆ ಇನ್ನೊಂದು ಅಟ್ಯಾಕ್ ಆದರೆ ಏನು ಮಾಡುವುದು? ನನ್ನ ತಲೆ ಚೂರುಚೂರಾಗುತ್ತೆ. ಹೇಗೆ ಸಾಯಬೇಕೆನ್ನುವುದೂ ನನಗೆ ಗೊತ್ತಿಲ್ಲ. ದಿಕ್ಕೇ ತೋಚುತ್ತಿಲ್ಲ. ಥಿಯೋ..... ಥಿಯೋ ನಾನೇನು ಮಾಡಲಿ ಥಿಯೋ?"

ನಾಲ್ಕನೆ ದಿನ ಮಧ್ಯಾಹ್ನ ಡಾಕ್ಟರ್ ಗಾಷೆಟ್‌ರ ಮನೆಗೆ ಹೋದ. ಡಾಕ್ಟರ್ ಲಿವಿಂಗ್ ರೂಮಿನಲ್ಲಿದ್ದರು. ವಿನ್ಸೆಂಟ್ ಗಿಲೌಮ್‌ನ 'ನ್ಯೂಡ್' ಕ್ಯಾನ್‌ವಾಸ್ ಇಟ್ಟಿದ್ದ ಕ್ಯಾಬಿನೆಟ್ ಬಳಿಗೆ ಹೋದ. ಆ ಕ್ಯಾನ್‌ವಾಸನ್ನು ಎತ್ತಿಕೊಂಡ.

"ಇದಕ್ಕೆ ಫ್ರೇಮ್ ಹಾಕಿಸಿ ಅಂತ ಹೇಳಿದ್ದೆ."

"ಗೊತ್ತು ವಿನ್ಸೆಂಟ್. ಮುಂದಿನವಾರ ಆ ಕೆಲಸ ಮಾಡ್ತೀನಿ."

"ಇಲ್ಲ. ಈಗಲೇ ಇದಕ್ಕೆ ಫ್ರೇಮ್ ಹಾಕಿಸಬೇಕು. ಇವತ್ತೇ! ಈ ಕ್ಷಣವೇ!"

"ಯಾಕೆ ವಿನ್ಸೆಂಟ್? ಏನೇನೋ ಹುಚ್ಚುಚ್ಚಾಗಿ ಮಾತಾಡ್ತಿದ್ದೀಯ!"

ವಿನ್ಸೆಂಟ್ ಡಾಕ್ಟರ್ ಕಡೆ ದುರುಗುಟ್ಟಿ ನೋಡಿದ. ಎರಡು ಹೆಜ್ಜೆ ಹತ್ತಿರ ಬಂದ. ಗಾಷೆಟ್‌ರ ಪಾಕೆಟ್ಟಿಗೆ ಕೈ ಹಾಕಿದ. ತನ್ನ ಜೇಬಿನಿಂದ ರಿವಾಲ್ವರ್ ತೆಗೆದು ತನ್ನನ್ನು ಹೊಡೆಯಲಿದ್ದಾನೆಂದು ಭಾವಿಸಿ ಗಾಷೆಟ್ ಹೆದರಿದರು.

"ವಿನ್ಸೆಂಟ್!" – ಅಬ್ಬರಿಸಿದರು.

ವಿನ್ಸೆಂಟ್ ಕಂಪಿಸಿದ. ಮುಖ ಕೆಳಗೆ ಹಾಕಿದ. ಜೇಬಿನಿಂದ ಕೈಯನ್ನು ಹೊರತೆಗೆದ. ಮನೆಯಿಂದ ಆಚೆ ಓಡಿದ.

ಮಾರನೆದಿನ, ಈಸಲ್ ಹೆಗಲಿಗೇರಿಸಿ, ಕ್ಯಾನ್‌ವಾಸನ್ನು ಸುತ್ತಿಕೊಂಡು, ಸ್ಟೇಷನ್ ಕಡೆಯ ರಸ್ತೆ ಹಿಡಿದು, ಕ್ಯಾಥೋಲಿಕ್ ಚರ್ಚ್ ದಾಟಿ, ಗುಡ್ಡ ಏರಿ, ಹಳದಿ ಹೊಲದಲ್ಲಿ, ಪುಟ್ಟ ಸಮಾಧಿಗೆ ಎದುರಾಗಿ ಕುಳಿತ.

ಮಧ್ಯಾಹ್ನದ ಹೊತ್ತಿಗೆ ವಿಪರೀತ ಬಿಸಿಲಿನಿಂದಾಗಿ ಅವನ ತಲೆ ಸುಡತೊಡಗಿತು. ಆಕಾಶದಲ್ಲಿ ಥಟ್ಟನೆ ಕಪ್ಪುಹಕ್ಕಿಗಳು ಕಾಣಿಸಿಕೊಂಡವು. ಆಕಾಶದ ತುಂಬೆಲ್ಲ ತುಂಬಿ, ಸೂರ್ಯನನ್ನೂ ಕವಿದು ಮುಚ್ಚಿದವು. ಮಧ್ಯಾಹ್ನದ ಸಮಯವೂ ರಾತ್ರಿಯಂತಾಗಿತ್ತು. ಅವನ ಮೈಮೇಲೆ, ಕೂದಲಿನಲ್ಲಿ, ಕಣ್ಣು, ಮೂಗು, ಬಾಯಿ ಎಲ್ಲೆಲ್ಲೂ ಹಕ್ಕಿ ರೆಕ್ಕೆಗಳು ಫಡಫಡಿಸಿದವು. ಅವುಗಳ ರೆಕ್ಕೆಗಳಿಂದಾದ ಮೋಡದಲ್ಲಿ ವಿನ್ಸೆಂಟ್ ಹುದುಗಿ ಹೋದ. ಕಾಣಿಸಲೇ ಇಲ್ಲ. ಗಾಳಿ ಸಂಚಾರಕ್ಕೂ, ಉಸಿರಾಟಕ್ಕೂ ಅವಕಾಶವಿಲ್ಲದಂತೆ, ದಟ್ಟವಾಗಿ ಕವಿದು, ಅವನನ್ನು ಕತ್ತಲಲ್ಲಿ ಬಂಧಿಸಿದವು.

ಮರುದಿನ ಮಧ್ಯಾಹ್ನವೂ ಅಲ್ಲಿಗೆ ಹೋದ. ಆದರೆ ಬೇರೆ ದಾರಿಯಿಂದ! ಹಳ್ಳಿ ಮನೆ ದಾಟಿ, ಗುಡ್ಡವೇರಿದ. ಒಬ್ಬ ರೈತನ ಕಣ್ಣಿಗೆ ಅವನು ಮರವೇರಿ ಕುಳಿತಿದ್ದುದ್ದು ಕಾಣಿಸಿತು.

"ಸಾಧ್ಯವೇ ಇಲ್ಲ! ಸಾಧ್ಯವೇ ಇಲ್ಲ!" ಎಂದು ವಿನ್ಸೆಂಟ್ ಹೇಳಿಕೊಂಡದ್ದನ್ನು ಆ ರೈತ ಕೇಳಿಸಿಕೊಂಡ.

ಸ್ವಲ್ಪ ಹೊತ್ತಾದ ಮೇಲೆ, ಮರದಿಂದ ಇಳಿದು, ಹಳ್ಳಿಮನೆ ಹಿಂದಿದ್ದ. ಉತ್ತ ಹೊಲದಲ್ಲಿ ಹೆಜ್ಜೆ ಹಾಕುತ್ತಿದ್ದ. ಇದೇ ಕೊನೆ; ಆರ್ಲೆಯಲ್ಲಿ ಇದ್ದಾಗ ಒಮ್ಮೆ ಹೀಗೇ ಅನಿಸಿತ್ತು. ಆದರೆ ಅದೇನೋ, ......ಕೊನೆಯಾಗಲಿಲ್ಲ.

ಎಲ್ಲರಿಗೂ ಗುಡ್‌ಬೈ ಹೇಳಬೇಕೆಂದು ಬಯಸಿದ. ಏನೇ ಆದರೂ ತಾನು ಬದುಕಿದ್ದ ಜಗತ್ತು ಚೆನ್ನಾಗಿಯೇ ಇತ್ತು. ಗಾಗಿನ್ ಒಮ್ಮೆ ಹೇಳಿದ್ದ – 'ವಿಷ ಇರುವ ಕಡೆ ವಿಷಪರಿಹಾರಕವೂ ಇರುವುದೆಂದು!' ಈಗ ಈ ಪ್ರಪಂಚವನ್ನು ತೊರೆಯುವ ಸಿದ್ಧತೆಯಲ್ಲಿರುವಾಗ, ಗುಡ್‌ಬೈ ಹೇಳಬೇಕೆಂದುಕೊಂಡ. ತನ್ನವರಿಗೆ, ತನ್ನ ಗೆಳೆಯರಿಗೆ, ತನ್ನ ಬದುಕನ್ನು ರೂಪಿಸಿದವರಿಗೆ, ತನಗೆ ಸಹಾಯ ಮಾಡಿದವರಿಗೆ, ಎಲ್ಲರಿಗೂ! ತನ್ನ ಎದೆಯೊಡೆಯಲು ಕಾರಣಳಾದ ಉರ್ಸುಲಾಗೆ; ತನಗೆ ಪ್ರೋತ್ಸಾಹ ನೀಡಿ, ಒಂದಲ್ಲ ಒಂದು ದಿನ ತಾನು ಹೇಳಬೇಕೆಂದು ಬಯಸಿದ್ದೆಲ್ಲವನ್ನೂ ಹೇಳಲು ಸಾಧ್ಯವಾಗುತ್ತದೆ ಎಂದು ಬೆನ್ನು ತಟ್ಟಿದ ಮೆಂಡೆಸ್ ಡ ಕೋಸ್ಟಾರಿಗೆ; ತನ್ನನ್ನು ನಿರಾಕರಿಸಿ, ತನ್ನ ಪ್ರೀತಿಗೇ ಅವಮಾನ ಮಾಡಿ, ತನ್ನೆದೆ ಉರಿಸಿದ ಕೇ ಓಸ್‌ಗೆ; ಪ್ರಪಂಚದಲ್ಲಿ ಯಾರಿಗೂ ಬೇಡವಾದ ಜನರನ್ನು ಪ್ರೀತಿಸುವುದನ್ನು ಕಲಿಸಿದ ಮೇಡಂ ಡೆನಿಸ್, ಜಾಕ್ವೆಸ್‌ವರ್ನಿ ಮತ್ತು ಹೆನ್ರಿ ಡೆಕ್ರೂಕ್‌ರಿಗೆ, ತನ್ನನ್ನು ನಾಜೂಕಿನ ಮನುಷ್ಯನನ್ನಾಗಿ ತಿದ್ದಿದ ರೆವರೆಂಡ್ ಪೀಟರ್‌ಸನ್‌ರಿಗೆ; ತಮಗೆಷ್ಟು ಸಾಧ್ಯವೋ ಅಷ್ಟು ಪ್ರೀತಿಯನ್ನು ತನ್ನ ಮೇಲೆ ಧಾರೆಯೆರೆದ ತಂದೆತಾಯಿಯರಿಗೆ; ಜೀವನದಲ್ಲಿ ಒಮ್ಮೆಯಾದರೂ ಹೆಂಡತಿ ಎನ್ನುವ ಅದೃಷ್ಟಕ್ಕೆ ದಾರಿ ಮಾಡಿಕೊಟ್ಟ ಕ್ರಿಸ್ಟೀನ್‌ಳಿಗೆ; ಕೆಲವು ವಾರಗಳಾದರೂ ಪ್ರೀತಿಯ ಗುರುವಾಗಿ ಮಾರ್ಗದರ್ಶನ ನೀಡಿದ ಮಾವ್‌ಗೆ; ಮೊದಲ ಪೈಂಟರ್ ಗೆಳೆಯರಾದ ದ ಬಾಕ್, ವೀಸೆನ್‌ಬ್ರೂಕ್‌ರಿಗೆ; ತನ್ನ ಚಿಕ್ಕಪ್ಪ, ದೊಡ್ಡಪ್ಪಂದಿರಾದ ವಿನ್ಸೆಂಟ್, ಜ್ಯಾನ್, ಕಾರ್ನೆಲಿಯಸ್ ಮಾರಿನಸ್‌ಗೆ ತನ್ನ ವಂಶದ ಅಂದರೆ ವಾನ್‌ಗೋ ಕುಟುಂಬದ ಕಪ್ಪುಕುರಿ ಎಂದು ಕರೆದ ಸ್ಟ್ರಿಕರ್‌ಗೆ; ತನ್ನನ್ನು ಬಹುವಾಗಿ ಪ್ರೀತಿಸಿ, ಪ್ರೀತಿಗಾಗಿ ತನ್ನನ್ನೇ ಕೊಂದುಕೊಳ್ಳಲು ಮುಂದಾದ ಮಾರ್ಗ್ರಾಟ್‌ಗೆ; ಪ್ಯಾರಿಸಿನಲ್ಲಿ ತನಗೆ ಹತ್ತಿರದ ಗೆಳೆಯರಾಗಿದ್ದ, ಲಾಟ್ರೆಕ್, ಜಾರ್ಜ್ ಸ್ಯುರಾತ್, ಪಾಲ್‌ಗಾಗಿನ್, ರೂಸೋ, ಸೆಜ಼ಾನ್ನೆ, ಪೇರ್ ಟಾಂಗೆ, ರೌಲಿನ್, ರ್‍ಯಾಷೆಲ್, ಡಾಕ್ಟರ್ ರೇ, ಆರಿಯರ್, ಡಾಕ್ಟರ್ ಗಾಷೆಟ್ – ಹೀಗೆ ಹತ್ತಾರು ಮಂದಿಗೆ ಗುಡ್‌ಬೈ ಹೇಳಬೇಕೆಂದುಕೊಂಡ. ಆದರೆ ಎಲ್ಲರಿಗಿಂತ ತನ್ನ ಪ್ರೀತಿಯ ಸೋದರ ಥಿಯೋಗೆ. ತನಗಾಗಿ ಅತ್ತವನು, ತನ್ನ ಶ್ರೇಯಸ್ಸನ್ನೇ ಬಯಸಿದವನು, ತನ್ನ ಕಷ್ಟಗಳನ್ನು ಮರೆತು, ಕಲಾವಿದನಾಗಿ ಜೀವಂತವಾಗಿ ಉಳಿಯಲು ಅವನಿಗೆ ನೆರವಾಗಿ ನಿಂತವನು – ಪ್ರಪಂಚದಲ್ಲಿ ಅವನೇ ಸೋದರ, ಗೆಳೆಯ:–

ಆದರೆ ಎಂದೂ, ಮಾತುಗಳಲ್ಲಿ ತನ್ನ ಭಾವನೆಗಳನ್ನು ಹೇಳಿದವನಲ್ಲ. ಮಾತುಗಳು ಅವನ ಮಾಧ್ಯಮವಾಗಿರಲಿಲ್ಲ.

'ಗುಡ್ ಬೈ' ಅನ್ನುವುದನ್ನು ಪೈಂಟ್ ಮಾಡಲು ಆಗುವುದಿಲ್ಲ.

ಸೂರ್ಯನ ಕಡೆಗೆ ಮುಖ ತಿರುಗಿಸಿದ. ರಿವಾಲ್ವರ್ ತೆಗೆದುಕೊಂಡು, ಪಕ್ಕಕ್ಕೆ ಒತ್ತಿ ಹಿಡಿದ. ಟ್ರಿಗ್ಗರ್ ಒತ್ತಿದ. ಹೊರಳಿದ. ಅವನ ಮುಖ ಹೊಲದ ಮಣ್ಣಿನಲ್ಲಿ ಹುದುಗಿತು. ಭೂಮಿತಾಯಿಯ ಮಡಿಲಿಗೆ ಮರಳಿದ.

–೪–

ನಾಲ್ಕು ಗಂಟೆಗಳ ನಂತರ ಹೇಗೋ ಸಾವರಿಸಿಕೊಂಡು ಕೆಫೆಯ ಕತ್ತಲಲ್ಲಿ ಪ್ರವೇಶಿಸಿದ. ಮೇಡಂ ರಾವೋ ಅವನನ್ನು ಹಿಂಬಾಲಿಸಿದಳು. ಅವನ ಬಟ್ಟೆಯೆಲ್ಲ ರಕ್ತದಿಂದ ತೊಯ್ದಿತ್ತು. ನೋಡಿದವಳೇ ಡಾಕ್ಟರ್ ಗಾಷೆಟ್‌ರ ಮನೆಯ ಕಡೆ ಓಡಿ ಸುದ್ದಿ ಮುಟ್ಟಿಸಿದಳು.

"ಓಹ್ ವಿನ್ಸೆಂಟ್! ವಿನ್ಸೆಂಟ್! ಇದೇನು ಮಾಡಿಕೊಂಡೆ? – ಅಳುತ್ತಾ ಗಾಷೆಟ್ ಪ್ರಶ್ನಿಸಿದರು.

"ನಾನು ತಪ್ಪುಮಾಡಿಬಿಟ್ಟೆ ಅನಿಸುತ್ತೆ. ಏನಂತೀರಿ?" ಗಾಷೆಟ್ ಗಾಯವನ್ನು ಪರಿಶೀಲಿಸಿದರು.

"ಓ ವಿನ್ಸೆಂಟ್, ಮೈ ಪೂರ್ ಓಲ್ಡ್ ಫ್ರೆಂಡ್! – ಹೀಗೆ ಮಾಡಿಕೊಳ್ಳುವುದಕ್ಕೆ ಮನಸ್ಸು ತುಂಬಾ ನೊಂದಿರಬೇಕು! ನನಗ್ಯಾಕೆ ಗೊತ್ತಾಗಲಿಲ್ಲ? ನಾವು ಇಷ್ಟೊಂದು ಜನ, ನಿನ್ನನ್ನು ಪ್ರೀತಿಸುವವರು ಇರುವಾಗ, ನಿನಗ್ಯಾಕೆ ಸಾಯುವ ಆಲೋಚನೆ ಬಂತು? ಪ್ರಪಂಚದಲ್ಲಿ ಇನ್ನೂ ನೀನು ಪೈಂಟ್ ಮಾಡೋಕೆ ಎಷ್ಟೊಂದು ಸುಂದರ ವಸ್ತುಗಳಿವೆ!"

"ನನ್ನ ವೇಸ್ಟ್‌ಕೋಟ್ ಪಾಕೆಟ್‌ನಲ್ಲಿ ನನ್ನ ಪೈಪ್ ಇದೆ. ದಯವಿಟ್ಟು ತೆಗೆದುಕೊಡುತ್ತೀರಾ?"

"ಖಂಡಿತ."

ಆತ ಪೈಪಿಗೆ ಟೊಬ್ಯಾಕೋ ತುಂಬಿಸಿ ವಿನ್ಸೆಂಟ್‌ನ ತುಟಿಗಳ ಮಧ್ಯೆ ಇರಿಸಿದರು.

"ಹಚ್ಚಿಕೊಡುತ್ತೀರಾ?"

"ಆಗಬಹುದು ಗೆಳೆಯ."

ವಿನ್ಸೆಂಟ್ ಸದ್ದಿಲ್ಲದೆ ಪೈಪ್ ಸೇದಲು ಮೊದಲು ಮಾಡಿದ.

"ವಿನ್ಸೆಂಟ್, ಇವತ್ತು ಭಾನುವಾರ ನಿನ್ನ ಬ್ರದರ್ ಷಾಪಲ್ಲಿ ಸಿಗೊಲ್ಲ. ಮನೆ ಅಡ್ರೆಸ್ ಕೊಡ್ತೀಯ?"

"ಅದನ್ನು ಮಾತ್ರ ಕೊಡೊಲ್ಲ."

"ವಿನ್ಸೆಂಟ್ ನೀನು ಕೊಡಲೇ ಬೇಕು. ತುಂಬ ಅರ್ಜೆಂಟ್ ಇದೆ. ಅವನ ಜೊತೆ ಮಾತಾಡಲೇ ಬೇಕು."

"ಥಿಯೋನ ಭಾನುವಾರಕ್ಕೆ ತೊಂದರೆಯಾಗಬಾರದು. ಅವನು ಪಾಪ, ಆಯಾಸ, ದುಃಖದಿಂದಿರುತ್ತಾನೆ. ಅವನಿಗೂ ವಿಶ್ರಾಂತಿ ಬೇಕಾಗುತ್ತೆ."

ಎಷ್ಟೇ ಪ್ರಯತ್ನ ಮಾಡಿದರೂ ಥಿಯೋನ ಸಿಟಿ ಪಿಗಾಲ್ಲ್ ಅಡ್ರೆಸ್ಸು ಕೊಡಲು ವಿನ್ಸೆಂಟ್ ಒಪ್ಪಲಿಲ್ಲ. ಡಾಕ್ಟರ್ ಗಾಷೆಟ್ ರಾತ್ರಿ ತುಂಬಾ ಹೊತ್ತಿನವರೆಗೂ ಅವನ ಜೊತೆಗಿದ್ದರು. ಹಾಗೇ ಅವನ ಗಾಯಗಳಿಗೆ ಚಿಕಿತ್ಸೆ ಮಾಡಿದರು. ನಂತರ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲು ಮನೆಯ ಕಡೆ ಹೊರಟರು. ಆದರೆ ತಮ್ಮ ಮಗನನ್ನು ವಿನ್ಸೆಂಟ್ ಜೊತೆಗೆ ಇರಿಸಿದರು.

ವಿನ್ಸೆಂಟ್ ಕಣ್ಣು ಬಿಟ್ಟುಕೊಂಡೇ ರಾತ್ರಿಯೆಲ್ಲಾ ಕಳೆದ. ಪೈಪ್ ಸೇದುವುದು ಹೊರತಾಗಿ ಮತ್ತೇನೂ ಮಾಡಲಿಲ್ಲ; ಮಾತೊಂದೂ ಆಡಲಿಲ್ಲ.

ಮರುದಿನ ಬೆಳಿಗ್ಗೆ ಥಿಯೋ ಗೂಪಿಲ್ಸ್‌ಗೆ ಬಂದಾಗ ಗಾಷೆಟ್‌ರ ಟೆಲಿಗ್ರಾಂ ಬಿದ್ದಿತ್ತು. ಪಾಂಟ್ವಾಗೆ ಹೋಗುತ್ತಿದ್ದ ಟ್ರೈನ್ ಹಿಡಿದು, ನಂತರ ಅಲ್ಲಿಂದ ಗಾಡಿಯಲ್ಲಿ ಉವರ್ಸ್‌ಗೆ ಹೊರಟ.

"ಥಿಯೋ" ವಿನ್ಸೆಂಟ್ ಹೆಸರಿಡಿದು ಕರೆದ.

ಥಿಯೋ ವಿನ್ಸೆಂಟ್‌ಗೆ ಮಂಚದ ಪಕ್ಕದಲ್ಲಿ ಮೊಣಕಾಲ ಮೇಲೆ ಕುಳಿತು, ವಿನ್ಸೆಂಟ್‌ನ ಎರಡೂ ಕೈಗಳನ್ನು ಹಿಡಿದುಕೊಂಡ. ಅವನಿಂದ ಮಾತೇ ಹೊರಡಲಿಲ್ಲ.

ಡಾಕ್ಟರ್ ಬಂದಾಗ, ಥಿಯೋ ಅವರನ್ನು ಹೊರಗೆ ಕಾರಿಡಾರ್‌ಗೆ ಕರೆದುಕೊಂಡು ಹೋದ. ಗಾಷೆಟ್‌ರು ನೋವಿನಿಂದ ತಲೆಯಾಡಿಸಿದರು.

"ಫ್ರೆಂಡ್, ಏನೂ ಹೇಳಲು ಸಾಧ್ಯವಿಲ್ಲ; ಭರವಸೆಯೂ ಇಲ್ಲ. ಅವನು ಬಹಳ ವೀಕಾಗಿ ಇರುವುದರಿಂದ, ಆಪರೇಷನ್ ಮಾಡಿ ಬುಲ್ಲೆಟ್ ತೆಗೆಯಲೂ ಆಗುವುದಿಲ್ಲ. ಅವನದು ಐರನ್ ಬಾಡಿ ಆಗಿದ್ದುದಕ್ಕೆ ಇಲ್ಲೀವರೆಗೆ ಬದುಕಿ ಬಂದಿದ್ದಾನೆ. ಇಲ್ಲವಾದಲ್ಲಿ, ಅವನು ಬಿದ್ದಿದ್ದ ಹೊಲದ ಮಣ್ಣಿನಲ್ಲಿಯೇ ಪ್ರಾಣ ಬಿಟ್ಟಿರುತ್ತಿದ್ದ."

ಥಿಯೋ ದಿನವಿಡೀ ವಿನ್ಸೆಂಟ್‌ನ ಮಂಚದ ಬಳಿಯೇ ಕುಳಿತಿದ್ದ. ರಾತ್ರಿಯಾಗಿ, ಎಲ್ಲರೂ ಹೊರಟು ಹೋಗಿ ಇಬ್ಬರೇ ಉಳಿದಿದ್ದರು. ಅವರಿಬ್ಬರೂ ತಮ್ಮ ಬಾಲ್ಯದ ದಿನಗಳನ್ನು ನೆನಪಿಸಿಕೊಳ್ಳತೊಡಗಿದರು.

"ರಿಸ್‌ವಿಕ್ ಬಳಿಯಿದ್ದ ಮಿಲ್ ನೆನಪಾಗ್ತಿದೆಯಾ ವಿನ್ಸೆಂಟ್?"

"ಹೌದು. ಬಹಳ ಹಳೆಯದು. ಆದರೆ ತುಂಬಾ ಚೆನ್ನಾಗಿತ್ತು ಅಲ್ಲವೆ ಥಿಯೋ?"

"ಆ ಹೊಳೆ ದಂಡೆಗುಂಟಾ ನಡೆಯುತ್ತಾ, ನಮ್ಮ ಬದುಕುಗಳ ಬಗ್ಗೆ ಆಲೋಚನೆ ಮಾಡ್ತಾ ಇದ್ದೆವು."

"ನಾವು ಆಟ ಆಡ್ತಾ ಇದ್ದಾಗ, ಬೇಸಿಗೆಯ ದಿನಗಳಲ್ಲಿ..... ನೀನು, ಈಗ ಹೇಗೆ ನನ್ನ ಕೈಗಳನ್ನು ಹಿಡಿದುಕೊಂಡಿದ್ದೀಯ, ಹಾಗೇ ಹಿಡ್ಕೊಳ್ತಿದ್ದೆ. ನೆನಪಿದೆಯಾ ಥಿಯೋ?"

"ಹೂಂ. ನೆನಪಿದೆ."

"ಆರ್ಲೆಯಲ್ಲಿ, ಆಸ್ಪತ್ರೆಯಲ್ಲಿದ್ದಾಗ, ಎಷ್ಟೋ ಸಲ ಜುಂಡರ್ಟ್ ಬಗ್ಗೇನೇ ಯೋಚ್ನೆ ಮಾಡಿದ್ದೆ. ನಮ್ಮ ಬಾಲ್ಯದ ದಿನಗಳು, ಎಷ್ಟೋ ಚೆನ್ನಾಗಿತ್ತು. ಕಿಚನ್ ಹಿಂದಿನ

ಗಾರ್ಡನ್‌ನಲ್ಲಿ, ಅಕೇಸಿಯಾ ಮರಗಳ ನೆರಳಿನಲ್ಲಿ ಆಟ ಆಡ್ತಿದ್ದೆವು. ಅಮ್ಮ ಊಟಕ್ಕಾಗಿ ಚೀಸ್‌ಕೇಕ್‌ಗಳನ್ನು ಮಾಡಿಕೊಡ್ತಿದ್ದಳು."

"ಅದೆಲ್ಲ..... ಬಹಳ ಬಹಳ ಹಿಂದಿನ ದಿನಗಳು!"

"ಹೌದೌದು..... ಬದುಕು ಬಹಳ ದೀರ್ಘವಾದ್ದು. ಥಿಯೋ ನನಗಾಗಿ, ನೀನು ನಿನ್ನ ಬಗ್ಗೆ ಜಾಗ್ರತೆವಹಿಸು. ನಿನ್ನನ್ನು ಚೆನ್ನಾಗಿ ನೋಡಿಕೋ. ನೀನು ಚೆನ್ನಾಗಿರಬೇಕು. ಆಗ ಜೋ ಮತ್ತು ಪುಟ್ಟ ವಿನ್ಸೆಂಟ್‌ನನ್ನು ನೋಡಿಕೊಳ್ಳಬಲ್ಲೆ. ಯಾವುದಾದರೂ ಹಳ್ಳಿಗೆ ಅವರನ್ನು ಕರೆದುಕೊಂಡು ಹೋಗು. ಅಲ್ಲಿ ಅವರು ಆರೋಗ್ಯವಂತರಾಗಿ ಬೆಳೆಯುತ್ತಾರೆ. ಸಂತೋಷದಿಂದ ಜೀವಿಸುತ್ತಾರೆ. ಗೂಪಿಲ್ಸ್ ಜೊತೆ ಇರಬೇಡ, ಥಿಯೋ. ನಿನ್ನ ಜೀವಾನೇ ಹಿಂಡಿಬಿಟ್ಟಿದ್ದಾರೆ. ಆದರೆ ಅದಕ್ಕೆ ಪ್ರತಿಯಾಗಿ ನಿನಗೇನನ್ನೂ ಕೊಡಲಿಲ್ಲ."

"ವಿನ್ಸೆಂಟ್, ನಾನೇ ನನ್ನ ಸ್ವಂತದ ಪುಟ್ಟ ಗ್ಯಾಲರಿಯೊಂದನ್ನು ಆರಂಭಿಸುತ್ತೇನೆ. ನನ್ನ ಮೊದಲ ಪ್ರದರ್ಶನ ಏಕವ್ಯಕ್ತಿ ಪ್ರದರ್ಶನವಾಗಿರುತ್ತೆ. ಯಾರದು ಗೊತ್ತೆ? ವಿನ್ಸೆಂಟ್ ವಾನ್‌ಗೋನದು.... ನೀನು ಫ್ಲಾಟ್‌ನಲ್ಲಿ ನೀನೇ ನಿನ್ನ ಕೈಯಾರೆ ಹೇಗೆ ಜೋಡಿಸಿ ಇರಿಸಿದ್ದೀಯೋ, ಹಾಗೆಯೇ......"

"ಆಹಾ! ನನ್ನದೇ ಕೃತಿಗಳು!.... ಅದಕ್ಕಾಗಿ ಪ್ರಾಣವನ್ನೇ ಪಣವಾಗಿರಿಸಿದ್ದೀನಿ..... ನನ್ನ ಉದ್ದೇಶವೆಲ್ಲ, ಹೆಚ್ಚು ಕಡಿಮೆ ಪೂರ್ತಿಯಾಗಿದೆ."

ರಾತ್ರಿಯ ಗಂಭೀರ ಮೌನ ವಿನ್ಸೆಂಟ್‌ನ ಕೋಣೆಯೆಲ್ಲವನ್ನು ತುಂಬಿತು.

ಮರುದಿನ ಬೆಳಿಗ್ಗೆ ಒಂದು ಗಂಟೆಯ ಸುಮಾರಿಗೆ ವಿನ್ಸೆಂಟ್ ಥಿಯೋ ಕಡೆಗೆ ತಿರುಗಿದ. ಮೆಲ್ಲಗೆ ಪಿಸುದನಿಯಲ್ಲಿ ಹೇಳಿದ–

"ಥಿಯೋ, ಈಗ ಸಾಯಬೇಕೆನಿಸುತ್ತಿದೆ."

ಕೆಲಕ್ಷಣಗಳಲ್ಲೇ ಕಣ್ಣುಮುಚ್ಚಿದ.

ಅಣ್ಣ ಶಾಶ್ವತವಾಗಿ ತನ್ನಿಂದ ದೂರವಾದನೆಂಬ ಅರಿವು ಮೂಡಿತು.

–೫–

ರೂಸೋ, ಪೇರ್ಟಾಂಗೆ, ಆರಿಯರ್, ಎಮಿಲಿ ಬರ್ನಾಡ್ ಮೊದಲಾದವರಲ್ಲಿ ವಿನ್ಸಂಟ್‌ನ ಅಂತ್ಯಸಂಸ್ಕಾರಕ್ಕೆ ಆಗಮಿಸಿದರು.

ಕೆಫೆ ರವೋದ ಬಾಗಿಲು ಮುಚ್ಚಿದರು. ಪರದೆಗಳು ಇಳಿದ್ದಿದ್ದವು. ಕಪ್ಪು ಶವದಗಾಡಿ, ಕೆಫೆಯ ಮುಂದೆ ನಿಂತಿತ್ತು.

ಬಿಲ್ಲಿಯರ್ಡ ಟೇಬಲ್ ಮೇಲೆ ವಿನ್ಸಂಟ್‌ನ ಮೃತದೇಹವನ್ನು ಇರಿಸಿದ್ದರು.

ಥಿಯೋ, ಡಾಕ್ಟರ್ ಗಾಷೆಟ್, ರೂಸೋ, ಪೇರ್‌ಟಾಂಗೆ, ಆರಿಯರ್, ಬರ್ನಾಡ್ ಮತ್ತು ರಾವೋ, ಎಲ್ಲರೂ ಸೇರಿದರು. ಯಾರೋಬ್ಬರೂ ಮಾತಾಡುತ್ತಿರಲ್ಲಿಲ್ಲ. ಒಬ್ಬರನ್ನೊಬ್ಬರು ನೋಡಲೂ ಇಲ್ಲ.

ಕ್ರೈಸ್ತ ಪೂಜಾರಿಯನ್ನು ಕರೆಯಬೇಕೆಂದು ಯಾರಿಗೂ ಹೊಳೆಯಲ್ಲಿಲ್ಲ.

ಶವಗಾಡಿಯ ಡ್ರೈವರ್ ಬಾಗಿಲ ಮೇಲೆ ಸದ್ದು ಮಾಡಿ,

'ಜಂಟಲ್‌ಮನ್, ಹೊತ್ತಾಗುತ್ತದೆ.' ಎಂದ.

"ನಿನ್ನ ದಮ್ಮಯ್ಯ, ಈ ರೀತಿಯಲ್ಲಿ ಅವನನ್ನು ಕಳಿಸಿಕೊಡುವದು ನಮ್ಮಿಂದ ಆಗುವದಿಲ್ಲ."

ಡಾಕ್ಟರ್ ಗಾಷೆಟ್ ದು:ಖದಿಂದ ಹೇಳಿದರು.

ಆತ ಮೇಲೆ ಹೋಗಿ ವಿನ್ಸಂಟ್‌ನ ರೂಮಿನಲ್ಲಿದ್ದ ಪೈಂಟಿಂಗ್ಸ ಎಲ್ಲವನ್ನೂ ಕೆಳಕ್ಕೆ ತಂದ. ಮಗ ಪಾಲನನ್ನು ಮನೆಗೆ ಕಳಿಸಿ, ಮನೆಯಲ್ಲಿದ್ದ ಇನ್ನೊಂದಷ್ಟು ಕ್ಯಾನ್‌ವಾಸ್‌ಗಳನ್ನು ತರಿಸಿದ. ಎಲ್ಲ ಪೈಂಟಿಂಗ್ಸನ್ನೂ ಗೋಡೆಗಳ ಮೇಲೆ ಹಾಕಿದ. ಥಿಯೋ ಶವದ ಬಳಿ ಒಬ್ಬನೇ ನಿಂತಿದ್ದ. ಮತ್ತೊಮ್ಮೆ ಅಲ್ಲಿದ್ದವರೆಲ್ಲರೂ ಬಿಲಿಯರ್ಡ್ ಟೇಬಲ್ ಸುತ್ತ ನೆರೆದರು. ಡಾಕ್ಟರ್ ಗಾಷೆಟ್ ಒಬ್ಬರಿಗೆ ಮಾತ್ರ ಮಾತಾಡಲು ಸಾಧ್ಯವಾಯಿತು.

"ವಿನ್ಸೆಂಟ್‌ನ ಗೆಳೆಯರಾದ ನಾವು ಯಾರೂ ದುಃಖಿಸುವುದು ಬೇಡ. ವಿನ್ಸೆಂಟ್‌ಗೆ ಸಾವಿಲ್ಲ. ಸಾಯಲು ಸಾಧ್ಯವೂ ಇಲ್ಲ. ಅವನ ಪ್ರೀತಿ, ಅವನ ಮೇಧಾಶಕ್ತಿ, ಜಗತ್ತಿನಲ್ಲಿ ಎಂದೆಂದಿಗೂ ಅವಿಸ್ಮರಣೀಯವಾಗಿ ಉಳಿದಿರುತ್ತವೆ. ಅವನ ಪೈಂಟಿಂಗ್ಸ್ ಅನ್ನು ನೋಡಿದ ಪ್ರತಿಸಲವೂ ಏನೋ ಹೊಸತನ, ಹೊಸ ಭರವಸೆ, ಹೊಸ ಅರ್ಥಗಳು ಕಾಣಿಸುತ್ತವೆ. ಅವನೊಬ್ಬ ಅದ್ಭುತ ಚೇತನ.... ಮಹಾನ್ ಕಲಾವಿದ..... ಅನನ್ಯ ದಾರ್ಶನಿಕ.... ತತ್ವಜ್ಞಾನಿ. ತಾನು ನಂಬಿದ್ದ ಕಲೆಗಾಗಿ ಜೀವತೆತ್ತು ಹುತಾತ್ಮನಾದ."

ಥಿಯೋ ಡಾಕ್ಟರ್‌ಗೆ ಧನ್ಯವಾದ ಹೇಳಲು ಪ್ರಯತ್ನಿಸಿದ.

"ನಾನು...... ನಾನು......"

ಗಂಟಲು ತುಂಬಿ ಬಂತು. ಒತ್ತರಿಸಿ ಬರುತ್ತಿದ್ದ ದುಃಖ ಮಾತುಗಳನ್ನು ಹಿಡಿದು ನಿಲ್ಲಿಸಿತು.

ಅವನ ಆರುಜನ ಸ್ನೇಹಿತರು ಅವನ ದೇಹವನ್ನು ಟೇಬಲ್‌ನಿಂದ ಮೇಲೆತ್ತಿದರು. ಕೆಫೆಯಿಂದ ಹೊರಗೆ ತಂದು, ಶವದ ಗಾಡಿಯಲ್ಲಿ ಮೆದುವಾಗಿ ಇರಿಸಿದರು. ಸೂರ್ಯನ ಬೆಳಕಿನಿಂದ ಆಲೋಕಿತವಾದ ರಸ್ತೆಯಲ್ಲಿ ಎಲ್ಲರೂ ಗಾಡಿಯನ್ನು ಹಿಂಬಾಲಿಸಿ ನಡೆದರು. ಹುಲ್ಲಿನ ಛಾವಣಿ ಮನೆಗಳು, ವಿಲ್ಲಾಗಳು– ಎಲ್ಲಾವನ್ನೂ ಹಾದು ನಡೆದರು. ಸ್ಟೇಷನ್ ಬಳಿ ಬಂದು ಎಡಕ್ಕೆ ತಿರುಗಿ, ನಿಧಾನವಾಗಿ ಗುಡ್ಡವೇರಿದರು. ಕ್ಯಾಥೋಲಿಕ್ ಚರ್ಚ ದಾಟಿ, ಹಳದಿ ಹೊಲದ ಮೂಲಕ ಸ್ವಲ್ಪ ದೂರ ಹೋಗಿ, ಸಮಾಧಿ ಗೇಟಿನ ಮುಂದೆ ನಿಂತರು. ಗಾಡಿಯೂ ನಿಂತಿತು.

ಥಿಯೋ ಹಿಂದೆ ಬಂದ. ಆರು ಜನ ಮೃತದೇಹವನ್ನು ಹೊತ್ತುಕೊಂಡು, ಸಮಾಧಿಯ ಬಳಿ ತಂದಿರಿಸಿದರು.

ವಿನ್ಸೆಂಟ್ ಉವರ್ಸಗೆ ಮೊಟ್ಟಮೊದಲು ಬಂದ ದಿನ ಡಾಕ್ಟರ್ ಗಾಷೆಟ್ ಮತ್ತು ವಿನ್ಸೆಂಟ್ ರು ಬಂದು ನಿಂತಿದ್ದ, ಮತ್ತು ವಿನ್ಸೆಂಟ್‌ಗೆ ತುಂಬ ಪ್ರಿಯವಾಗಿದ್ದ ಜಾಗವನ್ನೆ ಗಾಷೆಟ್‌ರು ಅವನ ಸಮಾಧಿಗೆ ಆರಿಸಿದ್ದರು.

ಮತ್ತೊಮ್ಮೆ ಥಿಯೋ ಮಾತಾಡಲು ಪ್ರಯತ್ನಿಸಿದ. ಆದರೆ ಸಾಧ್ಯವಾಗಲಿಲ್ಲ.

ಅಲ್ಲಿದ್ದ ಸೇವಕರು, ವಿನ್ಸೆಂಟ್‌ನ ದೇಹವನ್ನು ಗೋರಿಯೊಳಕ್ಕೆ ಇಳಿಸಿದರು. ನಂತರ ಅದನ್ನು ಮಣ್ಣಿಂದ ಮುಚ್ಚಿದರು; ಅದನ್ನು ಸಮಮಾಡಿದರು.

ಏಳು ಮಂದಿ ಅಲ್ಲಿಂದ ಹೊರಟು ಬಂದರು.

ಡಾಕ್ಟರ್ ಗಾಷೆಟ್, ಒಂದೆರಡು ದಿವಸ ಬಿಟ್ಟು, ಅಲ್ಲಿಗೆ ಬಂದು, ವಿನ್ಸೆಂಟ್‌ನ ಪ್ರಾಣವಾಗಿದ್ದ ಸೂರ್ಯಕಾಂತಿ ಹೂಗಿಡಗಳನ್ನು ನೆಟ್ಟರು. ಸಿಟಿ ಪಿಗಾಲ್ಲ್ ಮನೆಗೆ ತೆರಳಿದರು. ತುಂಬಲಾರದ ನಷ್ಟ. ಸಹಿಸಲಾಗದ ದುಃಖ; ಕ್ಷಣ ಕ್ಷಣವೂ, ಪ್ರತಿ ರಾತ್ರಿಯೂ ಅವನ ನೆನಪುಗಳಿಲ್ಲದೇ ಕಳೆಯುವದು ಸಾಧ್ಯವಾಗಲಿಲ್ಲ.

ದುಃಖದ ಒತ್ತಡ ಅಸಹನೀಯುವಾಯಿತು. ಜೋಹಾನ್ನ ಥಿಯೋನ್ನನ್ನು ಉಟ್ರೆಕ್‌ನಲ್ಲಿರುವ ಆರೋಗ್ಯ ಕೇಂದ್ರಕ್ಕೆ ಕರೆದುಕೊಂಡು ಹೋದಳು.

ವಿನ್ಸೆಂಟ್ ತೀರಿಕೊಂಡ ಆರುತಿಂಗಳಿಗೆ ಸರಿಯಾಗಿ, ಅದೇ ದಿನದಂದು ಥಿಯೋ ಕೂಡ ಕಣ್ಣು ಮುಚ್ಚಿದ. ಉಟ್ರೆಕ್‌ನಲ್ಲಿಯೇ ಅವನನ್ನು ಸಮಾಧಿ ಮಾಡಲಾಯಿತು.

ಕೆಲಕಾಲದ ಮೇಲೆ ಜೊಹಾನ್ನ ಮನಸ್ಸಿನ ಸಮಾಧಾನಕ್ಕಾಗಿ ಬೈಬಲ್ ಓದುತ್ತಿದ್ದಾಗ, ಅವಳ ಕಣ್ಣಿಗೆ ಕೆಳಗಿನ ಸಾಲು ಕಾಣಿಸಿತು.

'ಅವರ ಸಾವಿನಲ್ಲಿ ಅವರೆಂದೂ ಬೇರೆಯಾಗಲಿಲ್ಲ!

ಕೂಡಲೇ ಜೊಹಾನ್ನ ಥಿಯೋನ ದೇಹವನ್ನು ಉವರ್ಸಗೆ ತೆಗೆದುಕೊಂಡು ಹೋಗಿ ವಿನ್ಸೆಂಟ್‌ನ ಸಮಾಧಿಯ ಪಕ್ಕದಲ್ಲಿಯೇ ಅವನ ಸಮಾಧಿ ಮಾಡಿದಳು.

ಉವರ್ಸನ ಬಿರುಬಿಸಿಲು, ಧಾನ್ಯದ ಹೊಲಗಳ ಬಳಿಯ ಪುಟ್ಟ ಸಮಾಧಿಯ ಮೇಲೆ ಬಿದ್ದಾಗ ಥಿಯೋ ದಟ್ಟವಾಗಿ, ಗುಂಪಾಗಿ, ಸಮೃದ್ಧವಾಗಿ ಬೆಳೆದ ವಿನ್ಸೆಂಟ್‌ನ ಸೂರ್ಯಕಾಂತಿ ಹೂಗಳ ನೆರಳಲ್ಲಿ ತಂಪಾಗಿ ಮಲಗಿದ.

□□

# ಇದೇ ಲೇಖಕಿಯ ಇತರ ಕೃತಿಗಳು

## ಕವನ ಸಂಕಲನಗಳು

೧) ತ್ರಿಶಂಕು
೨) ಏನು ಹೇಳಲಿ ಗೆಳೆಯಾ
೩) ಹಾಡೇನ ಪಾಡೇನ
೪) ಈ ತೆರದ ನಿರೀಕ್ಷೆಯಲ್ಲಿ
೫) ವಸುಂಧರೆಯ ಪ್ರಾಯ
೬) ಸಖ ಬಾ ಸಂಚಾರಕೆ
೭) ಅಕ್ಕನ ವಚನಗಳು (ಇಂಗ್ಲಿಷಿಗೆ ಅನುವಾದ)
೮) ಅಂಬಿಗರ ಚೌಡಯ್ಯ (ಇಂಗ್ಲಿಷಿಗೆ ಅನುವಾದ)
೯) ಪರ್ಷಿಯನ್ ಕವಿತೆಗಳು (ಅಚ್ಚಿನಲ್ಲಿ)

## ಕಾದಂಬರಿಗಳು

೧) ಸೌರಭಸೇತು/ಬುವಿಯಿಂದ ಬಾನಿಗೆ
೨) ಹರಿದತ್ತ ಹರಿವ ಚಿತ್ತ
೩) ತಪ್ಪಿದ ಹೆಜ್ಜೆಗಳು
೪) ನಡುವಯಸ್ಸಿನಲ್ಲಿ (ಚೀನೀ ಭಾಷೆಯಿಂದ ಕನ್ನಡಕ್ಕೆ)
೫) ಶಾಲ್ಮಲಿ (ಹಿಂದಿಯಿಂದ ಕನ್ನಡಕ್ಕೆ)

## ಕಥಾ ಸಂಕಲನಗಳು

೧) ಮಾ ನಿಷಾದ
೨) ಅದೇ ಮುಖ
೩) ಕಾಣದ ದಿಕ್ಕಿನತ್ತ
೪) ಲುಷುನ್‌ರ ಎರಡು ನೀಳ್ಗತೆಗಳು (ಚೀನೀ ಭಾಷೆಯಿಂದ ಕನ್ನಡಕ್ಕೆ)
೫) ಹುಚ್ಚನ ದಿನಚರಿ ಮತ್ತು ಇತರ ಕತೆಗಳು (ಚೀನೀ ಭಾಷೆಯಿಂದ ಕನ್ನಡಕ್ಕೆ)
೬) ಕನ್ನಡ ಕಾವ್ಯ ಪರಂಪರೆಯಲ್ಲಿ ಪ್ರೀತಿಯ ನೆಲೆಗಳು
(ಕನ್ನಡ ಕಾವ್ಯಗಳಲ್ಲಿನ ಪ್ರೀತಿ ಸಂದರ್ಭಗಳ ಕಥಾರೂಪಗಳು)

## ಜೀವನ ಚರಿತ್ರೆ

೧) ಮಹಾದೇವಿ ವರ್ಮಾ
೨) ಅಕ್ಕಮಹಾದೇವಿ (ಕನ್ನಡದಿಂದ ಇಂಗ್ಲಿಷ್‌ಗೆ)
೩) ಹರಿಹರನ ಕಾವ್ಯದಲ್ಲಿ ಬಸವಣ್ಣ

೪) ರಾಘವಾಂಕನ ಚಿತ್ರಿಸಿದ ಸಿದ್ಧರಾಮ
೫) ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ ಅಲ್ಲಮಪ್ರಭು
೬) ನಿಜಗುಣ ಶಿವಯೋಗಿ
೭) ಬಾಲಲೀಲಾ ಮಹಾಂತ ಶಿವಯೋಗಿ
೮) ಮಿನುಗಿ ನಲುಗಿದ ಕಲ್ಪನಾ
೯) ಪೊಟ್ಟಿ ಶ್ರೀರಾಮುಲು (ಇಂಗ್ಲಿಷಿನಲ್ಲಿ)

**ನಾಟಕಗಳು**

೧) ಪಾಂಚಾಲಿ
೨) ಪಾದ್ರಿಯೊಬ್ಬನ ಕತೆ
೩) ನಗರ ವಧು ಸಾಲವತಿ
೪) ಮತ್ತೊಂದು ಮಹಾಭಾರತ
೫) ಮಿಲನ
೬) ದಂಗೆಯೆದ್ದವಳು
೭) ಪ್ರೇಮ ಸಮಾಧಿ
೮) ಕಟಕಟೆಯಲ್ಲಿ ನಿಂತು (ಅನುವಾದ)

**ಪ್ರವಾಸ ಕಥನ**

೧) ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ

**ಸಂಶೋಧನೆ – ವಿಮರ್ಶೆ**

೧) ಕನ್ನಡದಲ್ಲಿ ಗೀತನಾಟಕಗಳ ಅಧ್ಯಯನ (ಸಂಶೋಧನೆ)
೨) ಸ್ಪಂದನ
೩) ಸಮಾಲೋಚನ
೪) ಅಕ್ಕನ ವಚನಗಳಲ್ಲಿ ಪ್ರತಿಭಟನೆ ಮತ್ತು ಅನುಭಾವ
೫) ಪು.ತಿ.ನ. ಗೀತನಾಟಕಗಳಲ್ಲಿ ತಾತ್ವಿಕ ಚಿಂತನೆಗಳು
೬) ಮಂಥನ
೭) ಸಂಸ್ಕೃತಿ ದನಿಗಳು (ಅಂಕಣ ವಿಮರ್ಶೆ)

**ಮಕ್ಕಳ ಸಾಹಿತ್ಯ**

೧) ರಾಮಾಯಣ – ಕನ್ನಡ
೨) ರಾಮಾಯಣ – ಕನ್ನಡದಿಂದ ಇಂಗ್ಲಿಷಿಗೆ
೩) ಮಹಾಭಾರತ – ಕನ್ನಡ
೪) ಮಹಾಭಾರತ – ಕನ್ನಡದಿಂದ ಇಂಗ್ಲಿಷಿಗೆ
೫) ಹನುಮಾನ್ (ಅಚ್ಚಿನಲ್ಲಿ)
೬) ಶ್ರೀಕೃಷ್ಣ (ಅಚ್ಚಿನಲ್ಲಿ)

೭) ಪೌರಾಣಿಕ ಏಕಾಂಕಗಳು (ಅಚ್ಚಿನಲ್ಲಿ)
೮) ಬಸವಣ್ಣ
೯) ಪಂಚತಂತ್ರ (ನಾಟಕ ರೂಪಾಂತರ) (ಕನ್ನಡದಲ್ಲಿ)
೧೦) ಪಂಚತಂತ್ರ (ನಾಟಕ ರೂಪಾಂತರ) (ಇಂಗ್ಲಿಷಿನಲ್ಲಿ)
೧೧) ಪುಣ್ಯಕೋಟಿ (ನಾಟಕ)
೧೨) ಕಿಂದರಿಜೋಗಿ (ನಾಟಕ)
೧೩) ಕಾಗಾಯಣ (ನಾಟಕ)



ಧರ್ಮಬೋಧಕನಾಗ ಹೊರಟು ಅದ್ಭುತ ಕಲಾವಿದನಾಗಿ ರೂಪುಗೊಂಡ ವಿನ್ಸೆಂಟ್ ವಾನ್‌ಗೋ ಜೀವನಾಧಾರಿತವಾದ ಈ ಕಾದಂಬರಿಯು ವ್ಯಕ್ತಿ ಜೀವನ ಮತ್ತು ಸಮುದಾಯ ಜೀವನಗಳನ್ನು ಒಟ್ಟಿಗೇ ಒಳಗೊಳ್ಳುವ ಮೂಲಕ ಮಹತ್ತನ್ನು ಪಡೆದಿದೆ. ಸರಳ ಅಥವಾ ಏಕರೇಖಾತ್ಮಕ ಚಿತ್ರಣವಾಗದೆ ವಿವಿಧ ಸ್ಥಳಗಳ, ವಿವಿಧ ವ್ಯಕ್ತಿತ್ವಗಳ, ಸಮುದಾಯದ ಬದುಕನ್ನು ಭಿತ್ತಿಯಾಗಿಟ್ಟುಕೊಂಡು, ವಿನ್ಸೆಂಟ್ ವಾನ್‌ಗೋ ಬದುಕಿನ ಚಿತ್ರ ಬಿಡಿಸುವ ಕಲಾಕೃತಿಯಾಗಿ ಈ ಕಾದಂಬರಿಯು ಮೂಡಿಬಂದಿದೆ.

ಡಾ.ವಿಜಯಾ ಸುಬ್ಬರಾಜ್ ಅವರು ಇದನ್ನು ಪರಕೀಯವೆನಿಸದ ಹಾಗೆ, ವಿನ್ಸೆಂಟ್ ವಾನ್‌ಗೋನನ್ನು ಕನ್ನಡಕ್ಕೆ ತಂದು ಒಂದು ಉತ್ತಮ ಕೆಲಸ ಮಾಡಿದ್ದಾರೆ; ಕಷ್ಟಪಡದೆ ಓದಿಸಿಕೊಳ್ಳುವ ಅನುವಾದವನ್ನು ಕೊಟ್ಟಿದ್ದಾರೆ. ಇದೊಂದು ವಿಶಿಷ್ಟ ಕಾದಂಬರಿಯೆಂಬ ಮಾತು ಅನುವಾದಕ್ಕೂ ಸಲ್ಲುತ್ತದೆ. ಮುಖ್ಯವಾದ ಕಾದಂಬರಿಯೊಂದನ್ನು ಕನ್ನಡ ಓದುಗರಿಗೆ ನಿಲುಕುವಂತೆ ಮಾಡಿದ ಡಾ.ವಿಜಯಾ ಸುಬ್ಬರಾಜ್ ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಇನ್ನೊಂದು ಮಾತು: ವಿಜಯಾ ಸುಬ್ಬರಾಜ್ ಅವರು 'ಲಸ್ಟ್ ಫಾರ್ ಲೈಫ್' ಎಂಬ ಶೀರ್ಷಿಕೆಯ ಯಥಾವತ್ತಾದ ಅನುವಾದಕ್ಕೆ ಹೋಗದೆ 'ಸೂರ್ಯಕಾಂತಿಗಳ ಮಡಿಲಲ್ಲಿ' ಎಂಬ ಅರ್ಥಪೂರ್ಣವಾದ ಹೆಸರನ್ನು ಕೊಟ್ಟಿದ್ದಾರೆ. ನಿತ್ಯ ಅರಳುವ ಮುದುಡುವ ಸೂರ್ಯಕಾಂತಿಗಳ ಮಡಿಲಲ್ಲಿ, ಮಾಯಾ ಹೇಳಿದ ವಿನ್ಸೆಂಟ್ ವಾನ್‌ಗೋನ 'ಆತ್ಮ' ಅಡಗಿದೆ. ನನ್ನನ್ನು ಕಾಡುತ್ತಿದೆ. ಇನ್ನೇನು ಹೇಳಲಿ?

— ಬರಗೂರು ರಾಮಚಂದ್ರಪ್ಪ.